# ಸೂ ಚ ನೆ

**ಶ್ರೀಮಾನ್ ಸಿ. ಯಂ. ವಿಜಯರಾಘವಾಚಾರ್ಯರು** ಕನ್ನಡ ಭಾಷಾಭಿಮಾನಿಗಳೆಲ್ಲರಿಗೂ ತಿಳಿದವರೇ ಆಗಿರುತ್ತಾರೆ. ಅವರು ಭಗವದ್ಗೀತೆ, ರಹಸ್ಯತ್ರಯಸಾರ ಮತ್ತು ಇತರ ಗ್ರಂಥಗಳನ್ನು ಪರಿಶೀಲಿಸಿ, ಪೂರ್ವಾಚಾರ್ಯರವರುಗಳ ಅಭಿಪ್ರಾಯಗಳನ್ನು ಸಮನ್ವಯಿಸಿ ಕನ್ನಡ ಟೀಕೆಯೊಡನೆ ಪ್ರಚುರ ಪಡಿಸಿರುತ್ತಾರೆ.

ಈಗ ಅದೇ ರೀತಿಯಲ್ಲಿ ವಿಶಿಷ್ಟಾದ್ವೈತ ತತ್ವಗಳನ್ನೊಳಗೊಂಡ ಶ್ರೀ ಯಾಮುನ ಮುನಿಗಳ "**ಸ್ತೋತ್ರರತ್ನ**" ವೆಂಬ ಗ್ರಂಥವನ್ನು ಶ್ರೀ ನಿಗಮಾಂತ ದೇಶಿಕರವರ ವ್ಯಾಖ್ಯಾನವನ್ನು ಅನುಸರಿಸಿ, ಕನ್ನಡ ಟೀಕಾ ಸಹಿತವಾಗಿ ಬರೆದಿರುತ್ತಾರೆ. ಅದು ನಮ್ಮಿಂದ ಮುದ್ರಣ ಮಾಡಲ್ಪಟ್ಟು ಪ್ರಕಟನವಾಗಿರುತ್ತೆ

ಕನ್ನಡ ಭಾಷೆಯಲ್ಲಿ ಮಾತ್ರ ಪರಿಜ್ಞಾನವುಳ್ಳ ಆಸ್ತಿಕ ಮಹಾಶಯರು ಅದರಲ್ಲಿಯೂ ಶ್ರೀವೈಷ್ಣವರು ಈ ಪುಸ್ತಕವನ್ನು ಪಠಿಸಿ ಸಂತೋಷವನ್ನು ಹೊಂದುವರೆಂದು ನಂಬಿರುತ್ತೇವೆ.

ಈ ಪುಸ್ತಕದ ವಿಶಿಷ್ಟ ಹಕ್ಕುಗಳನ್ನು ಹೆಬ್ಬಾರು ಶ್ರೀ ವೈಷ್ಣವ ಸಭೆಗೆ ಕೊಟ್ಟಿರುವದಕ್ಕೆ ನಾವು ಕೃತಜ್ಞರಾಗಿರುತ್ತೇವೆ.

೩೩, ಶೇಷಾದ್ರಿ ರಸ್ತೆ
ಬೆಂಗಳೂರು-೯.

**ಹೆಬ್ಬಾರು ಶ್ರೀವೈಷ್ಣವ ಸಭಾ**

# ವಿಜ್ಞಾಪನಾ

ನಮ್ಮ ಸಂಪ್ರದಾಯ ಗ್ರಂಥಗಳೆಲ್ಲಾ ಸಂಸ್ಕೃತ ಮತ್ತು ತಮಿಳ್ ಭಾಷೆಗಳಲ್ಲಿ ರುವದರಿಂದ ಕನ್ನಡ ನಾಡಿನಲ್ಲಿರುವವರಿಗೆ ವೇದ್ಯವಿಲ್ಲವೇ ಎಂಬ ಪರಿತಾಪದಿಂದ ಪೂರ್ವಾಚಾರ್ಯರಾದ ನಮ್ಮ ಸಿದ್ಧಾನ್ತ ಸ್ಥಾಪಕರಾದ ಶ್ರೀ ಯಾಮುನ ಮುನಿ, ಶ್ರೀ ರಾಮಾನುಜ ಮುನಿ, ಶ್ರೀ ಆಳ್ವಾರ್, ಶ್ರೀ ಪರಾಶರಭಟ್ಟರ್, ಶ್ರೀ ನಂಜೀಯರ್, ಶ್ರೀ ನಿಗಮಾನ್ತ ದೇಶಿಕರ್ ಇವರುಗಳ ಮುಖ್ಯವಾದ ದಿವ್ಯ ಸೂಕ್ತಿಗಳನು, ಕನ್ನಡಕ್ಕೆ ಪ್ರತಿಪದಾರ್ಥ ತಾತ್ಪರ್ಯಗಳೊಂದಿಗೆ **"ಆಚಾರ್ಯ ಹೃದಯಾನ್ವೇಷಿಣೀ"** ಎಂಬ ಹೆಸರಿನಿಂದ ಪರಿವರ್ತನೆ ಮಾಡಿ ಗುರುಗಳ ಆಜ್ಞೆಯನ್ನು ನೆರವೇರಿಸಿ ಜನ್ಮಸಾರ್ಥಕ್ಯವನ್ನುಂಟುಮಾಡಿಕೊಂಡೆನು. ಇದರಿಂದ ಸ್ವಾಮಿ ಶ್ರೀನಿವಾಸನೂ ಪ್ರೀತನಾಗಿರಬಹುದೆಂದು ನಂಬಿರುತ್ತೇನೆ.

ಹಾಗೆ ಪರಿವರ್ತಿಸಿರುವ ಗ್ರಂಥಗಳೆಲ್ಲಾ ತುಂಬಾ ಮುಖ್ಯವಾದವು. ಇವು ಗಳನ್ನು ಹಿಂದೆ ಯಾರೂ ಪರಿವರ್ತಿಸಿಲ್ಲವು. ಶ್ರೀ ಯತಿವರ್ಯರ ಗೀತಾಭಾಷ್ಯವು ಶ್ರೀ ನಿಗಮಾನ್ತ ದೇಶಿಕರವರ ತಾತ್ಪರ್ಯ ಚಂದ್ರಿಕಾ, ಶ್ರೀ ಯಾಮುನ ಮುನಿಗಳ ಗೀತಾರ್ಥ ಸಙ್ಗ್ರಹಾದಿಗಳೊಡನೆ ನಾಲ್ಕು ಸಂಪುಟಗಳಲ್ಲಿ ಮುದ್ರಿಸಲ್ಪಟ್ಟಿರುತ್ತದೆ. ಶ್ರೀ ನಿಗಮಾನ್ತ ದೇಶಿಕರವರ ಮುಖ್ಯ ಗ್ರಂಥವಾದ ಶ್ರೀಮದ್ರಹಸ್ಯತ್ರಯಸಾರವು 19 ಸಂಪುಟಗಳಲ್ಲಿ ಮುದ್ರಿಸಲ್ಪಟ್ಟಿವೆ. ಶ್ರೀ ವಿಷ್ಣುಸಹಸ್ರನಾಮಕ್ಕೆ ಶ್ರೀ ಪರಾಶರ ಭಟ್ಟರ ವ್ಯಾಖ್ಯಾನವು ಮುಖ್ಯವು. ಶ್ರೀ ಸೂಕ್ತಕ್ಕೆ ನಂಜೀಯರ ವ್ಯಾಖ್ಯಾನವು ಮುಖ್ಯವು. ಹಾಗೆಯೇ ಶ್ರೀ ತತ್ವಸ್ಥಾಪನೆಗೆ ಯಾಮುನ ಮುನಿಗಳ ಚತುಶ್ಶ್ಲೋಕೀ ನಿಗಮಾನ್ತ ದೇಶಿಕರವರ ಶ್ರೀ ಸ್ತುತಿಗಳು ಮುಖ್ಯವು ಇವುಗಳೆಲ್ಲಾ ಪ್ರಕಟಿಸಲ್ಪಟ್ಟಿವೆ.

ಹೀಗೆ ಮುಖ್ಯ ರತ್ನಗಳನ್ನಾರಿಸಿ ತೆಗೆದು ಅನುಕೂಲಪಡಿಸಿಕೊಟ್ಟಿದ್ದರೂ ಉಪಪತ್ತಿಯಿರುವ ಮಹನೀಯರಾದರೂ ಉತ್ತೇಜನ ಕೊಟ್ಟಿದ್ದ ಪಕ್ಷದಲ್ಲಿ ಈ ಅದ್ಭುತ·ಗ್ರಂಥವಾದ ಸ್ತೋತ್ರರತ್ನವನ್ನು ಈಗ ಆರುವರ್ಷಗಳ ಹಿಂದೆಯೇ ದಾಸನು ಮುದ್ರಿಸಬಹುದಾಗಿತ್ತು. ದ್ರವ್ಯಾನುಕೂಲ ಸಾಲದೆ ನಮ್ಮ ಶ್ರೀ ಹೆಬ್ಬಾರ್ ಶ್ರೀ ವೈಷ್ಣವ ಸಭೆಯನ್ನು ಆಶ್ರಯಿಸಿ, ಪ್ರಾರ್ಥಿಸಿದುದಕ್ಕೆ ಉದಾರಮತಿಯಿಂದ ಇದನ್ನು ಪ್ರಕಟಿಸಲು ಒಪ್ಪಿಗೆ ಕೊಟ್ಟಿದುದಕ್ಕಾಗಿ ಸಭೆಗೆ ದಾಸನ ವಿಶೇಷ ವಂದನೆ ಗಳು. ಇಷ್ಟೇ ಅಲ್ಲದೆ ದಾಸನು ಬರೆದಿರುವ ಶ್ರೀ ಯತಿಸಾರ್ವಭೌಮರ ವೇದಾನ್ತ ದೀಪವನ್ನೂ ಪ್ರಕಟಿಸಲು ಸಭೆಯವರು ಒಪ್ಪಿ ಪ್ರಥಮಾಧ್ಯಾಯವು ಅಚ್ಚಾಗಿರು ವದರಿಂದ ಸಭಿಕರಿಗೆ ಇನ್ನೊಂದು ಸಲ ದಾಸನ ಕೃತಜ್ಞತಾ ಪೂರ್ವಕ ವಂದನೆಗಳು.

**–ಚುಂ. ನೋ. ವಿಜಯರಾಘವ ಶರ್ಮಾ.**

# ಶ್ರೀ ಆಳವಂದಾರ್‌ಸ್ತೋತ್ರದ ಶುದ್ಧಾಶುದ್ಧಪತ್ರಿಕೆ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧ | ಕೊನೆಯದು | ವೇದ್ಯಾನ್ತಾಚಾರ್ಯವರೋ | ವೇದಾನ್ತಾಚಾರ್ಯವರ್ಯ |
| ೧೯ | ೫ | ಯುಕ್ತತೆವೋ | ಯುಕ್ತತಮೋ |
| ೧೯ | ೨೨ | ಸರಿಯಯಾಗಿ | ಸರಿಯಾಗಿ |
| ೨೨ | ೬ | ಅಚೇತನವರ್ಗವು | ಚೇತನವರ್ಗವು |
| ೨೪ | ೨೧ | ವಿಲಕ್ಷಣ | ವೈಲಕ್ಷಣ್ಯ |
| ೨೫ | ೪ | ಜ್ಞಾನ. ಸಂಕೋಚ | ಜ್ಞಾನಸಂಕೋಚ |
| ೨೬ | ೫ | ಎಂಬ ಹಾಗೆ | ಹಾಗೆ ಎಂಬ |
| ೨೮ | ೨೮ | ತಧ್ಯಾನಂ | ತದ್ಧ್ಯಾನಂ |
| ೩೨ | ಕೊನೆ | ತತ್ರ್ಹಿತ | ತತ್ಪಹಿತ |
| ೩೫ | ೧೪ | ಗಹಿಸತಕ್ಕ | ಗ್ರಹಿಸತಕ್ಕ |
| ೩೬ | ೨ | ತಿರುವಾರ್ಯುವೊಳಿ | ತಿರುವಾಯ್ ವೊಳಿ |
| ೩೬ | ೨೪ | ಕಾಯಕನ | ಕಾಯಿಕ |
| ೩೭ | ೨ | ಪಥ | ಪಥಿ |
| ,, | ೧೮ | ನಡೆಸ್ರಿ | ನಡೆಸಿ |
| ,, | ೧೯ | ಪಣಾಮ | ಪ್ರಣಾಮ |
| ,, | ೨೩ | ಶಾಸ | ಶಾಸ್ತ್ರ |
| ೩೮ | ೯ | ಕುಲಕ್ಟೆ | ಕುಲಕ್ಕೆ |
| ೩೯ | ೧೮ | ಸೌಲಬ್ಯಾದಿ | ಸೌಲಭ್ಯಾದಿ |
| ೪೧ | ೧೫ರಿಂದ ೨೦ | | ಎರಡು ಸಲ ಪ್ರಿಂಟಾಗಿದೆ |
| ೪೩ | ೨೭ | ಷಬ್ದಕ್ಕೆ | ಶಬ್ದಕ್ಕೆ |
| ೪೮ | ೨೦ | ತನ ಮಹಿಮೆ | ತನ್ನ ಮಹಿಮೆ |
| ೫೦ | ೩ | ಅಶಕ್ತತಾ ಭಾವ | ಅಶಕ್ತತಾ |
| ,, | ೧೫ | ಕರುಣಾನಿಧಿಯನ್ನು | ಕುರುಣಾನಿಧಿಯನ್ನು |
| ೫೧ | ೨೨ | ಪ್ರಯೇಗವು | ಪ್ರಯೋಗವು |
| ೫೨ | ೬ | ಭಗದನುಗ್ರಹ | ಭಗವದನುಗ್ರಹ |
| ,, | ೨೮ | ಅತಿಶಯ ಯುಕ್ತಿ | ಅತಿಶಯ ಶಕ್ತಿ |
| ೬೧ | ೨೦ | ಅಲ್ಲವು | ಇಲ್ಲವು |
| ,, | ೨೨ | ಕಶಿತ್ | ಕಶ್ಚಿತ್ |
| ೬೨ | ೨೦ | ಸ್ವಾವಿತ್ವವು | ಸ್ವಾಮಿತ್ವವು |
| ೬೩ | ೧೩ | ಚಿದಚಿತ್ತೂಗಳಿಗೆ | ಚಿದಚಿತ್ತುಗಳಿಗೆ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೬೩ | ೧೬ | ಇಲ್ಲದಿದ್ದರೂ | ಇಲ್ಲದಿದ್ದರೆ |
| ೬೪ | ಕೊನೆಯದು | ಉಪಾಯನುಷ್ಠಾನ | ಉಪಾಯಾನುಷ್ಠಾನ |
| ೬೭ | ೨ | ಈಶಿತೃತ್ವಯನ್ನು | ಈಶಿತೃತ್ವವನ್ನು |
| ೬೮ | ಕೊನೆಯದು | ವದರಿಂದಾಗಲ್ಲಿ | ವದರಿಂದಾಗಲಿ |
| ೭೦ | ೨ | ವೇದಶಕ್ಷುಃ | ವೇದಶ್ಚಕ್ಷುಃ |
| ೭೦ | ೧೬ | ಸುಂಶ್ರೇಷ್ಠಂ | ಸುರಶ್ರೇಷ್ಠಂ |
| ,, | ೨೫ | ಆಶೇಷಸ್ಯ | ಅಶೇಷಸ್ಯ |
| ೭೬ | ೨೮ | ಆತ ಏವ | ಅತಏವ |
| ೭೯ | ೨೭ | ವಸ್ತುಗವೆಂದು | ವಸ್ತುಗಳೆಂದು |
| ೮೩ | ೧೩ | ತನಸ | ತಪಸ |
| ೮೪ | ೨೨ | ತೌನಕೀಯ | ಶೌನಕೀಯ |
| ೮೭ | ,, | ಪ್ರೋಕ್ತ | ಪ್ರೋಕ್ತ |
| ೯೦ | ೫ | ಭರಣಾತ್ವಾವ್ಯಾತ್ | ಭರಣಾತ್ಸಾವ್ಯಾತ್ |
| ,, | ೧೮ | ಜೀವಾತ್ಮರು ಪರಮಾತ್ಮನು | ಜೀವಾತ್ಮರೂ ಪರಮಾತ್ಮನೂ |
| ೯೧ | ೧೬ | ವಿವರಿಸಿದ್ದ | ವಿವರಿಸಿದ |
| ,, | ೨೧ | ಆಧ್ಯಾದಲ್ಲಿ | ಅಧ್ಯಾಯದಲ್ಲಿ |
| ೯೩ | ೫ | ಅಲ್ಲವು | ಇಲ್ಲವು |
| ೯೪ | ೧೦ | ಶ್ರೀಯಃಪತಿ | ಶ್ರಿಯಃಪತಿ |
| ೧೦೦ | ೨೨ | ಪ್ರಾತ್ರ | ಪಾತ್ರ |
| ೧೦೪ | ೨೧ | ಪ್ರತಿತಂತ್ರಾದಿಕಾರ | ಪ್ರತಿತಂತ್ರಾಧಿಕಾರ |
| ,, | ೨೫ | ಶ್ರೀಯಃಪತಿ | ಶ್ರಿಯಃಪತಿ |
| ೧೧೨ | ೨ | ವಿಷ್ಣುವತಾರಿ | ವಿಷ್ಣ್ವವತಾರಿ |
| ,, | ೧೭ | ಶರೀರ ಶರೀರ | ಶರೀರಿ ಶರೀರ |
| ,, | ೨೫ | ಪರರವಾಶ್ಚರ್ಯ | ಪರವಾಶ್ಚರ್ಯ |
| ,, | ೨೬ | ವ್ಯಾಪಾರವು | ವ್ಯಾಪಾರವು. |
| ೧೧೪ | ೧ | ಇದರರ್ಥಕ್ಕೆ | ಇದರರ್ಥ ರ. ತ್ರ. ಸಾ. |
| ೧೧೪ | ೫ | ತಕ್ಕದ್ದು | ತಕ್ಕದ್ದು. |
| ,, | ೨೦ | ಅನುಭವಾ | ಅನುಭವ |
| ,, | ೨೯ | ಸ್ವರೂರೂಪ | ಸ್ವರೂಪ ರೂಪ |
| ೧೧೫ | ೧೩ | ಅವಸಿದ್ಧಾನ್ತ | ಅಪಸಿದ್ಧಾನ್ತ |
| ೧೧೭ | ೨೯ | ಕಾಮಸ | ತಾಮಸ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೧೮ | ೫ | ಸೂಚಿಸುತ್ತದೆ | ಸೂಚಿಸುತ್ತವೆ |
| ,, | ೬ | ವಿಧಾಂ | ವಿದಾಂ |
| ,, | ೧೨ | ನಿರ್ಭಾಗರು | ನಿರ್ಭಾಗ್ಯರು |
| ೧೨೦ | ೨೬ | ನಸಂತೇಷೆ | ನಸಂತೀಶೇ |
| ೧೨೧ | ೧೦ | ಅತ್ಪಾರುಷೇಯು | ಅಪೌರಷೇಯು |
| ೧೨೪ | ೨೭ | ಸುಪರ್ಣ | ಸುವರ್ಣ |
| ೧೩೧ | ೨೮ | ಭವತಾಪಿಃ | ಭವತಾಪಿ |
| ೧೩೫ | ೨೯ | ಸ್ತ್ರಿಯೇ | ಸ್ತ್ರಿಯೋ |
| ೧೩೬ | ೧೪ | ಮಧ್ಯೆಯು | ಮಿಧ್ಯೆಯು |
| ,, | ೨೮ | ಮುಂದಿನ | ಮುಂದಿನ (೨) |
| ೧೩೭ | ೬ | ಅಪ್ಸು | ಅಪ್ಪು |
| ೧೩೯ | ೨೪ | ಇದ | ಇದು |
| ೧೪೦ | ೧೭ | ಕರಿದುಕೊಂಡು | ಕರೆದುಕೊಂಡು |
| ,, | ೨೧ | ನರವುಂಟೋ | ನರನುಂಟೋ |
| ೧೪೧ | ೨೦ | ಅತ್ಯರ್ಕ್ಕಾನಲ | ಅತ್ಯರ್ಕ್ಕಾನಲ |
| ೧೪೨ | ೪ | ಯುಧಿಷಿರ | ಯುಧಿಷ್ಟಿರ |
| ,, | ೧೫ | ತನ್ಮಯೇ | ತನ್ಮಯೋ |
| ,, | ೧೭ | ರಥನಂ | ರಥಿನಂ |
| ೧೪೩ | ೧೫ | ಅವರುಗಳು | ಅವರುಗಳ |
| ೧೪೬ | ೮ | ನಮುಭಾವ | ಸಮುಭಾವ |
| ೧೫೦ | | Lines 9 to 12 repeated | |
| ೧೬೪ | ೧೦ | ಬ್ರಹ್ಮನ | ಬೃಹಸ್ಪತಿ |
| ೧೬೫ | ೨೭ | ಅದಾಪ್ತ | ಆಪ್ತ |
| ೧೭೭ | ೨೩ | ನಡೆಯುವದ | ನಡೆಯುವ |
| ,, | ೨೯ | ಅಂಹತ | ಅಂತಹ |
| ೧೭೮ | ೧೬ | ದಾಸ್ಯವೃತ್ತಿಯುವನ್ನು | ದಾಸವೃತ್ತಿಯನ್ನು |
| ೧೭೯ | ೨೦ | ನಮೆುಶ್ಚಕ್ರುಃ | ನಮುಶ್ಚಕ್ರುಃ |
| ,, | ೨೪ | ಅದುಲ್ಲದೆ | ಅದಲ್ಲದೆ |
| ,, | ೨೮ | ಮಮೇತೆ | ಮಮೇತಿ |
| ೧೮೦ | ೧೧ | ಮುಂಡನಾತ | ಮುಂಡನಾತ್ |
| ,, | ೧೭ | ಭೆಗವದುತ್ಸವ | ಭಗವದುತ್ಸವ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೮೦ | ೨೩ | ಆಗುವದರಿಂದ | ಆಗುವುದರಿಂದ. |
| ೧೮೧ | ೧೦ | ಶತ್ರೈರವಿ | ಶತ್ರೈರಪಿ |
| ,, | ೨೭ | ತಕ್ಕದ್ದು | ತಕ್ಕದ್ದಲ್ಲವು |
| ೧೮೩ | ೪ | ಸರ್ಕ್ಷೆ | ಸರ್ವ್ವೆ |
| ,, | ೨೧ | ಸಿಂಧವೇ | ಸಿಂಧವೇ |
| ,, | ೨೬ | ,, | ,, |
| ೧೮೪ | ೧೧ | ಪ್ರಾಪ್ತಾರಾದ | ಪ್ರಾಪ್ತಾವಾದ |
| ೧೮೫ | ೧ | ನಿಷ್ಕ್ರೋನಿ | ನಿಷ್ಕ್ರೋಸ್ಮಿ |
| ,, | ೧೫ | ಭಾವನ | ಭಾವನಿಂದೆ |
| ,, | ೨೧ | ನಿಲ್ಲದೆ | ನಲ್ಲದೆ |
| ೧೮೬ | ೨೧ | ಧರ್ಮಶಬ್ದಕ್ಕೆ | ಧರಶಬ್ದಕ್ಕೆ ಅರ್ಥವು |
| ೧೮೯ | ೫ | ಅಂಗಾಂಗ | ಅಂಗಾಂಗಿ |
| ,, | ೮ | ನಿಷೇದ | ನಿಷೇಧ |
| ೧೯೦ | ೧ | ಎಂನಾಕ್ಷೇಪಿಸಿ | ಎಂದಾಕ್ಷೇಪಿಸಿ |
| ,, | ೧೩ | ಯೋಗಶ್ಚಲಿತ | ಯೋಗಶ್ಚಲಿತ |
| ೧೯೧ | ೧೭ | ತನುಗೆ | ತಮಗೆ |
| ೧೯೪ | ೬ | ತದ್ನ | ತನ್ನ |
| ೧೯೫ | ೨ | ಯಸ್ಸಕೃಚ್ಛ | ಯಸ್ಸಕೃಚ್ಛ |
| ,, | ೧೦ | ಪೂರ್ವಕರ್ಮ | ಪೂರ್ವಕರ್ಮ |
| ೧೯೬ | ೮ | ತ್ಯಯಾ | ತ್ವಯಾ |
| ೨೦೦ | ಕೊನೆಯ ಪಂಕ್ತಿ | ಚಿಸ್ತಿಸುತ್ತಿರುವ | ಚಿನ್ತಿಸುತ್ತಿರುವ |
| ೨೦೧ | ೪ | ಹೇಳಿದನು | ಹೇಳಿದರು. |
| ೨೧೬ | ೨೮ | ದುಖಃ | ದುಃಖ |
| ೨೧೭ | ೮ | ದುರ್ಮಾಗ್ರಿ | ದುರ್ಮಾರ್ಗಿ |
| ೨೧೭ | ೨೭ | ವೊದಲಾದ | ವೊದಲಾದ |
| ೨೨೦ | ೨೬ | ಯಧಿಷ್ಠಿರ | ಯುಧಿಷ್ಠಿರ |
| ೨೨೨ | ೨೭ | ನಿರವದ | ನಿರವದ್ಯ |
| ೨೨೪ | ೨೩ | ರಾಹಿತ್ಸವು | ರಾಹಿತ್ಯವೂ |
| ೨೨೫ | ೮ | ಹೀಗ | ಹೀಗೆ |
| ,, | ೨೦ | ಸ್ವಾಮಿತ | ಸ್ವಾಮಿತ್ವ |
| ೨೩೦ | ೨೭ | ಅಲವೆಂಬು | ಅಲ್ಲವೆಂಬ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೨೩೧ | ೨೭ | ಲೋಕದು | ಲೋಕದ |
| ,, | ೨೯ | ಎಂಬಲ್ಲಿರಿ | ಎಂಬಲ್ಲಿ |
| ೨೩೩ | ೨೭ | ಧ್ಯಾನಯೋಗ | ಧ್ಯಾನಯೋಗ್ಯ |
| ೨೩೭ | ೨೪ | ಮಾಡುವ | ಮಾಡುವದು |
| ೨೪೦ | ೨೧ | ಎಂದು | ಎಂದೂ. |
| ,, | ೨೭ | ವಿಪುಷ್ಪಾ ಪುಷ್ಪಶಾಲಿನ | ವಿಪುಷ್ಪಾಃ ಪುಷ್ಪಶಾಲಿನಃ |
| ೨೫೪ | ೩ | ಅವ್ರಾಪ್ತಃ | ಅಪ್ರಾಪ್ಯಃ |
| ೨೫೮ | ೮ | ಚತುರ್ಬುಜತ್ವ | ಚತುರ್ಭುಜತ್ವ |
| ೨೫೯ | ೨೯ | ಸದ್ವಶಂ | ಸದೃಶಂ |
| ೨೬೨ | ೧೨ | ಮುಷ್ಟಭುಜಂ | ಮಷ್ಟ ಭುಜಂ |
| ೨೬೫ | ೧೨ | ಭವನ್ತಂ | ಭವನ್ತಂ (೪೬ನೆಯ ಶ್ಲೋಕ) |
| ,, | ೨೯ | ಸಮ್ಮೃಷ್ಟವಾಳ | ಸಮ್ಮೃಷ್ಟನಾಳ |
| ೨೬೭ | ೧೮ | ಶಾರ್ಙ್ಗದ್ಯ | ಶಾರ್ಙ್ಗಾದ್ಯ |
| ೨೬೮ | ೧ | ವಿಲಕ್ಷಣಗಳಿಂದ | ವಿಲಕ್ಷಣಗಳಾದ |
| ,, | ೯ | ಅಸಿ | ಅಪಿ |
| ,, | ೧೨ | ತ್ತುಳಸ್ಯಿ | ತುಳಸೀ |
| ,, | ೨೫ | ಅಲ್ಲವು | ಅಲ್ಲವು. |
| ೨೭೩ | ೨ | ಕರುಣಕಾರ್ಯಂಪೂರ್ಯೈಣ | ಕರುಣಂಕಾರ್ಯಪೂರ್ಯೇಣ |
| ,, | ೨೬ | ಬರೆದಿರುವನು | ಬರೆದಿರುವೆನು. |
| ೨೭೪ | ೧೬ | ಜಗನ್ಮತಾ | ಜಗನ್ಮಾತಾ |
| ೨೭೫ | ೧೩ | ಯುಕ್ತಗಳಿಂದ | ಯುಕ್ತಗಳಾದ |
| ೨೭೭ | ೧ | ಗುಣಶ್ಲೋಕ | ಗುಣರತ್ನಕೋಶ |
| ,, | ೯ | ವಿಭವೈಶ್ಚರ್ಯ | ವಿಭವೈಶ್ವರ್ಯ |
| ,, | ೨೯ | ದೈವತ್ವೆ | ದೇವತ್ವೇ |
| ೨೮೦ | ೫ | ಶ್ರೀಯಾ | ಶ್ರಿಯಾ |
| ,, | ೨೫ | ಪರಮ ಪುರುನಿ | ಪರಮ ಪುರುಷನಿ |
| ೨೮೧ | ೨೩ | ಶ್ರೀಯಃಪತಿ | ಶ್ರಿಯಃಪತಿ |
| ೨೮೨ | ೨೭ | ಶೇಶಿ | ಶೇಷ |
| ೨೮೪ | ೫ | ತಯಾ | ತ್ವಯಾ |
| ೨೯೧ | ೨೩ | ತ್ವದಾನುಕೂ | ತ್ವದಾನುಕೂ |
| ೨೯೨ | ೧೩ | ಪೂರ್ವಪಕ್ಷವು | ಈ ಪೂರ್ವಪಕ್ಷವು |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೨೯೪ | ೧೮ | ಯುದ್ದವು | ಯುದ್ಧವು |
| ೩೦೫ | ೧೫ | ಎಂಬ | ಎಂದು |
| ೩೦೭ | ೨೦ | ನಾಥ ಪಾತ್ರ | ನಾಥಪೌತ್ರ |
| ೩೦೮ | ೩ | ತನ್ನ | ತಮ್ಮ |
| ೩೧೩ | ೧೭ | ಪಾತ್ರವು; ನನ್ನನ್ನು | ಪಾತ್ರವು ನನ್ನನ್ನು |
| ೩೧೪ | ೮ | ಘೋರಂ | ಘೋರಂ ಎಂದಿದೆ |
| ೩೧೫ | ೨೮ | ಸ್ಮರ್ತ್ರ್ಯೋ | ಸ್ಮರ್ತ್ರ್ಯೋ |
| ೩೧೬ | ೨೦ | ಉತೃಷ್ಟ | ಉತ್ಕೃಷ್ಟ |
| ೩೨೨ | ೨೦ | ಪರಂಪರಯೂ | ಪರಂಪರಯಾ |
| ೩೩೦ | ೭ | ವಿರುವದರಿಂದ | ವಿರುವದರಿಂದ. |
| ೩೩೭ | ೨೬ | ಶಾಙ್ಗ ಣಃ | ಶಾರ್ಙ್ಗಣಃ |
| ೩೪೨ | ೨ | ಸಮರ್ಪಿಸಿದನಲ್ಲವು | ಸಮರ್ಪಿಸಿದವನಲ್ಲವು. |
| ೩೪೬ | ೭ | ಕೃತಕೃತರಾದ | ಕೃತಕೃತ್ಯರಾದ |
| ೩೪೭ | ೧೦ | ಅವಿವೇಕನಾಂ | ಅವಿವೇಕಾನಾಂ |
| ೩೫೩ | ೪ | ಚರಣಾವತಿಷ್ಠತೇ | ಚರಣಾವವತಿಷ್ಠತೇ |
| ೩೫೬ | ೨೧ | ವರೆಹಾರ | ವರಾಹ |
| ೩೫೭ | ೮ | ಪಾಶುಪಾತ | ಪಾಶುಪತ |
| ೩೫೮ | ೫ | ಆದ್ಯ | ಆದ್ಯ |
| ,, | ೧೩ | ಮಾಜಿನಷ್ಟ | ಮಾಜನಿಷ್ಟ |
| ೩೬೩ | ೧ | ಹೀಗ | ಹೇಗೆ |
| ೩೬೫ | ೨೮ | ನೀನು | ನಾನು. |
| ೩೬೯ | ೯ | ಎಂದು | ಎಂದು. |
| ೩೭೪ | ೨೪ | ಆಶ್ರಿತದಲ್ಲಿ | ಆಶ್ರಿತರಲ್ಲಿ |
| ,, | ,, | ಅವಧಿಯಲ್ಲಿ | ಅವದಿಯಿಲ್ಲದೆ |
| ೩೭೫ | ೧ | ಗತಿಭೀ | ಗತಭೀಃ |
| ೩೭೬ | ೧ | ಖಲ | ಖಲು |
| ೩೭೭ | ೨೩ | ಗೃಹಮೇದಿ | ಗೃಹಮೇಧಿ |
| ೩೭೯ | ೨೪ | ಸುಚಿತವು | ಸೂಚಿತವು. |
| ೩೮೫ | ೨೮ | ತಿಳಿಯಲು, ತಿಳಿದು ನನ್ನನ್ನು | ತಿಳಿದು ನಿನ್ನನ್ನು |
| ,, | ೩೨ | ತತ್ತ್ವಣಾತ್ | ತತ್ಕ್ಷಣಾತ್ |
| ೩೮೯ | ೧೩ | ಅಧಿಕಾರನುಗುಣ | ಅಧಿಕಾರಾನುಗುಣ |
| ,, | ೧೪ | ಮಮೇಕಂ | ಮಾಮೇತಂ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩೯೦ | ೩ | ಸಾಮರ್ಥ | ಸಾಮರ್ಥ್ಯ |
| ,, | ೩೩ | ಲೋಕಕ್ಕೆ | ಲೋಕಕ್ಕೆ |
| ೩೯೧ | ೧೧ | ವಾಸುದೇವಸ್ಸರಂ | ವಾಸುದೇವಸ್ಸರ್ವಂ |
| ,, | ೧೨ | ಮೂಲಕನಾಗಿ | ಮೂಲಕವಾಗಿ |
| ೩೯೨ | ೧೦ | ಋಷೀಜಿ | ಋಷೀಚ |
| ೩೯೩ | ೬ | ಪ್ರಾಪ್ಯಾ | ಪ್ರಾಪ್ಯ |
| ,, | ೧೩ | ಕಸ್ಮಿನ್ಲೋಕೇ | ಅಸ್ಮಿನ್ಲೋಕೇ |
| ೪೦೧ | ೩ | ಬದಿರೋಪಿನಾ | ಬಧಿರೋಪಿವಾ |
| ,, | ೬ | ಘಾತ.ವಲ್ಲವೇ | ಘಾತುಕನಲ್ಲವೇ |
| ೪೦೩ | ಕೊನೆಯದು | ಭಕ್ತ್ಯವಾಯದಾರಿದ್ರ್ಯ | ಭಕ್ತ್ಯಪಾಯದಾರಿದ್ರ್ಯ |
| ೪೦೪ | ೧ | ಚಲಮತಿ | ಚಲಮತಿಃ |
| ೪೦೫ | ೨೨ | ಸರಿಯಾ | ಸರಿಯಾದ |
| ,, | ೨೮ | ಭೋಗ್ಯಗಿರುವ | ಭೋಗ್ಯವಾಗಿರುವ |
| ೪೦೭ | ೧೭ | ಪಾಪಿಷ್ಠನು | ಪಾಪಿಷ್ಠನೋ ಅವನು |
| ,, | ೨೯ | ವ್ಯತಾನದಿ | ವ್ಯತಾನಪಿ |
| ,, | ೩೩ | ಭಜಿಸುವದಿಲ್ಲವು | ಭುಜಿಸುವದಿಲ್ಲವು. |
| ೪೦೮ | ೨೦ | ಆರಾಜ್ಞೋ | ಅರಾಜ್ಞೋ |
| ೪೦೮ | ೩೨ | ಕೃಂತಂ | ಕೃತಂ |
| ೪೧೫ | ೨೬ | ಜಸ್ತ್ರಂ | ಜನ್ತ್ರಂ |
| ೪೧೭ | ೨೨ | ತರ್ಯಥ ವತ್ಸೋಪಾ | ತದ್ಯಥಾ ವತ್ಸೋವಾ |
| ೪೧೮ | ೪ | ವರದ | ವದ |
| ೪೧೯ | ೧೭ | ಹೆಮುಗ್ಧ | ಹೇಮುಗ್ಧ |
| ೪೨೩ | ೫ | ಲೋಕಾನ್ಯಪರಿಕ್ರಮ್ಯ | ಲೋಕಾನ್ ಸಂಪರಿಕ್ರಮ್ಯ |
| ೪೨೫ | ೪ | ಭೂತ್ | ಅಭೂತ |
| ೪೨೭ | ೧೬ | ತಾದೈಗೇವ | ತಾದೃಗೇವ |
| ೪೩೩ | ೨೩ | ಎಂಕೂ | ಎಂದೂ |
| ೪೩೮ | ಕೊನೆಯದು | ಪರಪ್ರೀತಿ | ಪರಮ ಪ್ರೀತಿ |
| ೪೪೦ | ೨೬ | ಕೂರುಷ್ವ | ಕುರುಷ್ವ |
| ೪೪೫ | ಕೊನೆಯ ಪಂಕ್ತಿ | ಪ್ರಪತ್ಯನುಷ್ಠಾನ | ಪ್ರಪತ್ತ್ಯನುಷ್ಠಾನ |
| ೪೪೭ | ೨೫ | ಶ್ಲೋಕಗಳಿಂದ | ಐದುಶ್ಲೋಕಗಳಿಂದ |
| ೪೫೩ | ೧೫ | ಇರುತ್ತದೆ | ಇರುತ್ತದೆಯೋ |
| ೪೫೮ | ೧೫ | ನಯಸಾರ್ಯ | ನಯನಾರ್ಯ |

ಶ್ರಿಯೈ ನಮಃ
ಶ್ರೀನಿವಾಸಾಯ ನಮಃ
ಶ್ರೀ ಯಾಮುನಮುನಯೇ ನಮಃ
ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇನಿಗಮಾನ್ತಮಹಾದೇಶಿಕಾಯನಮಃ







**ಶ್ರೀ ಸ್ತೋತ್ರ ರತ್ನವಾದ**

# ಆಳವಂದಾರ್ ಸ್ತೋತ್ರವು

**ಆಚಾರ್ಯ ಹೃದಯಾನ್ವೇಷಿಣೀ**

ಎಂಬ ಶ್ರೀ ನಿಗಮಾನ್ತದೇಶಿಕರವರ ಸ್ತೋತ್ರ ಭಾಷ್ಯವನ್ನನುಸರಿಸಿದ

**ಉಪಪಾದನೆಯೂ**

---

ಶ್ರೀಮದ್ಯಾಮುನಮುನಿನಾ ನಾಥಸಹಾಯೇನ ನಾಥವಾನಸ್ಮಿ ।
ಯದ್ವಚನಚಂದ್ರಜನಿತಾ ಸ್ತೋತ್ರಸುಧಾ ಭವತಿ ಸುಮನಸಾಂ ಭೋಗ್ಯಾ ॥
ಪ್ರಾಪ್ಯಪ್ರಾಪಕಭೂತೇ ಭಗವತಿ ಯಾಮುನಮುನೇರಯಂ ಪ್ರಸೃತಃ ।
ದುರಿತಾನಿ ಹರತಿ ಜಗತಾಂ ದ್ವಯಾನುಸಂಧಾನಸಿಂಧುಪರಿವಾಹಃ ॥೨॥
ವಿಮಲಮಮೃತೋಲ್ಬಣರಸಂ ವಿಗಾಹ್ಯ ನಿರ್ವಿಶತಿ ವೇಙ್ಕಟೇಶಕವಿಃ ।
ಯದುಪತಿಚರಣಾರ್ಹಮಿದಂಯಮುನಾತೀರ್ಥಮಿವಯಾಮುನಸ್ತೋತ್ರಮ್

---

**ಮೂ. — ನಮೋಽಚಿನ್ತ್ಯಾದ್ಭುತಾಕ್ಲಿಷ್ಟಜ್ಞಾನವೈರಾಗ್ಯರಾಶಯೇ ।**

---

ಶ್ರೀಮಾನ್ವೇಙ್ಕಟನಾಥಾರ್ಯಃ ಕವಿತಾರ್ಕಿಕಕೇಸರೀ ।
ವೇದಾನ್ತಾಚಾರ್ಯವರೋ ಮೇ ಸನ್ನಿಧತ್ತಾಂ ಸದಾ ಹೃದಿ ॥

**ನಾಥಾಯ ಮುನಯೇಽಗಾಧಭಗವದ್ಭಕ್ತಿಸಿಂಧವೇ ॥ ೧ ॥**

---

ಶ್ರೀ ನಾರಾಯಣಯೋಗೀನ್ದ್ರವರದಾರ್ಯಕೃಪಾಶ್ರಯಮ್ ।
ರಜತಗಿರೀಶಪಾದವಿನತಂ ಶ್ರೀನಿವಾಸಮುನಿಂ ಭಜೇ ॥

**ಅವತಾರಿಕೆಯು —** ಶ್ರೀನಾಥಯಾಮುನ ಮುನಿಗಳ ಸಙ್ಗ್ರಹ ಚರಿತ್ರೆಯನ್ನು ದಾಸನು ಬರೆದಿರುವ **ಶ್ರೀಮದ್ರಹಸ್ಯತ್ರಯಸಾರದ** ಕನ್ನಡ ಪರಿವರ್ತನೆಯಲ್ಲಿ ಗುರುಪರಂಪರಾಸಾರದ ೬೮ ರಿಂದ ೯೨ ನೆಯ ಪುಟಗಳಲ್ಲಿ ಕಾಣಬಹುದು. ಶ್ರೀಯಾಮುನ ಮುನಿಗಳು ರಚಿಸಿದ ಗ್ರಂಥಗಳು ಎಂಟು. ಅವುಗಳಲ್ಲಿ ಎಲ್ಲರಿಗೂ ವೇದ್ಯವಾಗುವ ಹಾಗೆ ಅನುಗ್ರಹಿಸಿದವು ಎರಡು ಗ್ರಂಥಗಳು:—

(೧) ಚತುಶ್ಶ್ಲೋಕೀ ಎಂಬುದು ಲಕ್ಷ್ಮೀ ಸಿದ್ಧಾನ್ತ ಸ್ಥಾಪಕವಾಗಿ, ಸರ್ವಶ್ರೇಯಸ್ಸಿಗೂ ಸಾಧನ ಭೂತವಾದುದು. ಇದು ಹಿಂದೆಯೇ ಕನ್ನಡಕ್ಕೆ ಪರಿವರ್ತನೆಮಾಡಲ್ಪಟ್ಟಿರುತ್ತದೆ.

(೨) ಸ್ತೋತ್ರರತ್ನವು. ತತ್ವಹಿತ ಪುರುಷಾರ್ಥಗಳನ್ನು ನಿಪುಣತರವಾಗಿ ಉಪಪಾದಿಸಿ, ಲಘೂಪಾಯವಾದ ಶರಣಾಗತಿ ಧರ್ಮವನ್ನು ತಿಳಿಸುವ ಗ್ರಂಥವಾಗಿರುತ್ತದೆ.

**ಅರ್ಥವು**—ನಾಥಾಯ ಮುನಯೇ— ತಮಗೆ ಪ್ರಾಚಾರ್ಯರಾದ ನಾಥಮುನಿಗಳಿಗೆ, **ನಮಃ** — ದಂಡವತ್ಪ್ರಣಾಮಪೂರ್ವಕವಾದ ನಮಸ್ಕಾರವು. ನಮಸ್ಕಾರವು ಪ್ರದಕ್ಷಿಣಗಳನ್ನೂ ಒಳಗೊಂಡಿರುವದರಿಂದ, ಆಚಾರ್ಯ ಪ್ರಾಚಾರ್ಯರ ವಿಷಯದಲ್ಲಿ ಪ್ರದಕ್ಷಿಣಗಳಿಗೂ ಉಪಲಕ್ಷಣವು. ಹಾಗೆಯೇ, ನಾಥಮುನಿಗಳು ದಾಂಪತ್ಯ ಭಾವದಲ್ಲಿ ಇದ್ದುದರಿಂದ ಅಭಿವಾದನಕ್ಕೂ ಸಹ ಉಪಲಕ್ಷಣವು. ನಮಶ್ಶಬ್ದದಿಂದ ಇನ್ನೊಂದು ಅರ್ಥವು ಸೂಚಿತವು. **ಮಃ ನ** ಎಂಬ ಸಖಂಡ ನಮಸ್ಸಾಗಿ ಭಾವಿಸಿದರೆ, ಈ ಅಮೋಘವಾದ ಸ್ತೋತ್ರ ರತ್ನವನ್ನು ಆರಂಭಿಸುವಾಗಲೇ ಅದರ ಸಾತ್ವಿಕ ತ್ಯಾಗವನ್ನು ಹೇಳಿ, ಅಂತಹ ಪ್ರಾಚಾರ್ಯ ದಯೆಯೇ ಗ್ರಂಥಾರಂಭ ಸಮಾಪ್ತಿಗಳಿಗೂ, ಅದಕ್ಕೆ ಬೇಕಾದ ಜ್ಞಾನ ದೀಪ್ತಿಗೂ ಕಾರಣವಾದುದರಿಂದ ಆ ಗ್ರಂಥದಲ್ಲಿ ತಮಗೆ ಕರ್ತೃತ್ವ ಫಲಾದಿಗಳ ಸಂಬಂಧವ್ಯಾವುದೂ ಇಲ್ಲವೆಂದು **ಮಃ ನ** ಎಂದು ಹೇಳಿದರೆಂದೂ ಭಾವಿಸಬಹುದು.

ತಮ್ಮ ಪ್ರಾಚಾರ್ಯರನ್ನು ಎರಡು ವಿಶೇಷಣಗಳಿಂದ ಸ್ತುತಿಸುತ್ತಾರೆ.

(೧) **ಅಚಿನ್ತ್ಯಾದ್ಭುತಾಕ್ಲಿಷ್ಟಜ್ಞಾನವೈರಾಗ್ಯರಾಶಯೇ,** ಅಚಿನ್ತ್ಯ — ಸ್ವರೂಪದಿಂದಲೂ ಕಾರಣದಿಂದಲೂ ವಿಷಯದಿಂದಲೂ ಇಷ್ಟೆಂದು ನಿರೂಪಿಸಲು ಅಸಾಧ್ಯವಾದ, ಅಥವಾ ಯಾವ ಕುತರ್ಕಗಳಿಂದಲೂ ನಿರಾಕರಿಸಲು ಸಾಧ್ಯ

ವಿಲ್ಲದ ಹಾಗೆ ಇರುವುದರಿಂದ ಅಚಿನ್ತ್ಯವಾದ, **ಅದ್ಭುತ**—ಇಂತಹ ಜ್ಞಾನವನ್ನು ಇತರರಲ್ಲಿ ಕಾಣುವದು ದುಸ್ತರವಾದುದರಿಂದ ಅತ್ಯಾಶ್ಚರ್ಯ ಕರವಾದ, **ಅಕ್ಲಿಷ್ಟ** — ಕ್ಲೇಶ ಪಡದೆ ಉಪದೇಶಾದಿ ಶ್ರಮಗಳು ಯಾವುವೂ ಇಲ್ಲದೆ ತಾನಾಗಿಯೇ ಸಂಸ್ಕಾರಬಲ ದೈವಬಲ ಇವುಗಳಿಂದುಂಟಾದ, **ಜ್ಞಾನ**—ಪರಾವರತತ್ವಜ್ಞಾನ, ಮತ್ತು **ವೈರಾಗ್ಯ—ಪರಮಾತ್ಮನಿ ಯೋ ರಕ್ತೋ ವಿರಕ್ತೋಽಪರಮಾತ್ಮನಿ** " ಎಂದು ಹೇಳಿರುವ ಹಾಗೆ ಪರಮಾತ್ಮನಲ್ಲೇ ಸಕ್ತವಾದ ಮನಸ್ಸನ್ನುಳ್ಳವರಾದುದರಿಂದ ಐಹಿಕದಲ್ಲಿ ಜಿಹಾಸೆಯುಳ್ಳ ಇವುಗಳ ಸಮೂಹವನ್ನುಳ್ಳ ಎಂದರೆ ಆಧಿಕ್ಯವುಳ್ಳ ಮಹಾನುಭಾವರಿಗೆ, ಇನ್ನು ಎಂತವರಿಗೆ ಎಂದರೆ **ಅಗಾಧಭಗವದ್ಭಕ್ತಿಸಿಂಧವೇ** — ಆಳವು ಇಷ್ಟೇ ಎಂದು ಹೇಳಲು ಅಸಾಧ್ಯವಾದ ಭಗವಂತನಲ್ಲಿರುವ ಭಕ್ತಿ ಎಂಬ ಸಮುದ್ರವನ್ನುಳ್ಳ ( ಬಹುವ್ರೀಹಿ ) ಅಥವಾ ಆಳವು ಇಷ್ಟೆಂದು ತಿಳಿಯಲಸಾಧ್ಯವಾದ ಭಕ್ತಿ ಎಂಬ ಸಮುದ್ರಕ್ಕೆ ಆಶ್ರಯಭೂತರಾದ ( ತತ್ಪುರುಷ ) ಇಂತಹ ನಾಥಮುನಿಗಳಿಗೆ ನಮಸ್ಕಾರವು. ಶ್ರೀನಾಥಮುನಿಗಳು ತತ್ವಜ್ಞಾನಕ್ಕೂ, ವೈರಾಗ್ಯಕ್ಕೂ ಮಹಾನಿಧಿಗಳು. ಈ ಜ್ಞಾನವೈರಾಗ್ಯಗಳೆಂತಾದ್ದು ಎಂದರೆ ಅಚಿನ್ತ್ಯ, ಅದ್ಭುತ, ಅಕ್ಲಿಷ್ಟವಾದುವೆಂದೂ ಹೇಳಲ್ಪಟ್ಟಿತು. ಅವು ಅವಧಿಯಿಲ್ಲದವು, ಅಚಾಲ್ಯವಾದುವು, ಪರಮಾಶ್ಚರ್ಯಭೂತವಾದುವು, ಮತ್ತು ಪೂರ್ವಾರ್ಜಿತ ಸುಕೃತ ಮೂಲಕ ಈಶ್ವರ ಗುರು ಇವರುಗಳ ಅನುಗ್ರಹದಿಂದ ಅಯತ್ನವಾಗಿ ಲಭಿಸಿದಂತಾಗುವುಗಳು. ಆಪರಿ ಭಗವಂತನಲ್ಲಿರುವ ಭಕ್ತಿಯು ಅಗಾಧವಾದ ಸಮುದ್ರರೂಪವಾದುದು. ಇಂತಹ ಪ್ರಾಚಾರ್ಯರನ್ನು ನಮಸ್ಕರಿಸುತ್ತೇನೆಂಬ ತಾತ್ಪರ್ಯವು.

**ಉಪಪಾದನೆಯು** — ಈ ಮೇಲಿನ ಶ್ಲೋಕವು ಮಂಗಳಾಚರಣೆಯ ರೂಪದಲ್ಲಿ ಅವರ ಪ್ರಾಚಾರ್ಯರ ಪ್ರಣಾಮ ಪೂರ್ವಕವಾದುದು. ಸ್ತೋತ್ರ ರಚನೆಯ ಮೂಲಕ ತಮಗೂ, ತತ್ಪಠನ ಪೂರ್ವಕ ವಾಚಕರಿಗೂ, ಜ್ಞಾನ, ವೈರಾಗ್ಯ, ಭಗವದ್ಭಕ್ತಿಗಳು ಉಂಟಾಗುವುದೇ ಪರಮೋದ್ದೇಶ್ಯವೆಂದು ಭಾವಿಸತಕ್ಕದ್ದು. ತಮ್ಮ ಆಚಾರ್ಯರಿಗೆ ನಮಸ್ಕಾರವು ಆವಶ್ಯಕವಾಗಿರುವುದನ್ನು ಬಿಟ್ಟು ತಮ್ಮ ಪ್ರಾಚಾರ್ಯರೂ, ಪಿತಾಮಹರೂ ಆದ ನಾಥಮುನಿಗಳಿಗೆ ಪ್ರಣಾಮವು ಹೇಗೆ ? ಎಂಬ ಪ್ರಶ್ನೆಯು ಉಂಟಾಗಬಹುದು. ಇದಕ್ಕೆ ಸಮಾಧಾನವು ಹೇಗೆ ಎಂದರೆ — (೧) ತಮ್ಮ ಪ್ರಾಚಾರ್ಯರ ವಂದನೆಯು ಆಚಾರ್ಯರಿಗೂ, ತುಂಬ ಪ್ರಿಯವಾಗುವುದರಿಂದ ಹಾಗೆ ಪ್ರವರ್ತಿಸಿದ್ದಾರೆಂದು ಭಾವಿಸಬಹುದು. ಈ ಪದ್ಧತಿಯನ್ನೇ ಶ್ರೀಯತಿವರ್ಯರೂ, ತಮ್ಮ ಆಚಾರ್ಯರುಗಳನ್ನು ಬಿಟ್ಟು ಪ್ರಾಚಾರ್ಯರಾದ ಈ ಯಾಮುನ ಮುನಿಗಳನ್ನೇ ಶ್ರೀಗೀತಾಭಾಷ್ಯದ ಮಂಗಳ ಶ್ಲೋಕವಾದ —

**" ಯತ್ಪದಾಂಭೋರುಹಧ್ಯಾನ ವಿಧ್ವಸ್ತಾಶೇಷಕಲ್ಮಷಃ ।**
**ವಸ್ತುತಾಮುಪಯಾತೋಽಹಂ ಯಾಮುನೇಯಂ ನಮಾಮ್ಯಹಮ್ "**

ಎಂಬಲ್ಲಿ ವಂದಿಸಿಉತ್ತಾರೆ. ಯಾವಾಗ ಪ್ರಾಚಾರ್ಯರು ನಮಸ್ಕರಿಸಲ್ಪಟ್ಟರೋ ಆಚಾರ್ಯನಮಸ್ಕಾರವು ಅನಾವಶ್ಯಕವೆಂದು ಭಾವಿಸಿ ಶ್ರೀ ಯಾಮುನಮುನಿಗಳೂ, ಶ್ರೀಯತಿವರ್ಯರೂ ಸಹ, ತಮ್ಮ ತಮ್ಮ ಆಚಾರ್ಯರುಗಳಿಗೆ ಪ್ರಣಾಮವನ್ನೆಸಗಲಿಲ್ಲವು.

ಅಥವಾ ನಾಥಮುನಿಗಳೇ ಪಿತಾಮಹರಾಗಿ ಆಚಾರ್ಯರಾದುದರಿಂದಲೂ, ಅವರೇ ತಮ್ಮ ಶಿಷ್ಯರಾದ ಮಣಕ್ಕಾಲ್ ನಂಬಿಯವರಿಗೆ ಆಜ್ಞಾಪಿಸಿ, ತಮ್ಮ ಪೌತ್ರರಿಗೆ ರಹಸ್ಯಾರ್ಥಗಳೆಲ್ಲನ್ನೂ ಉಪದೇಶಿಸುವ ಹಾಗೆ ಮಾಡಿದರಿಂದಲಾಗಲಿ ಅವರ ವಂದನೆಗೆ ಪ್ರಾಮುಖ್ಯತೆಯನ್ನು ಕೊಟ್ಟಿರಬಹುದು. **"ನಾಥೋಪಜ್ಞಂ ಪ್ರವೃತ್ತಮ್ "** ಎಂಬಲ್ಲಿ ಹೇಳಿರುವ ಹಾಗೆ ಈ ವಿಶಿಷ್ಟಾದ್ವೈತಸಿದ್ಧಾನ್ತವು ನಾಥಮುನಿಗಳ ಪ್ರಥಮ ಜ್ಞಾನದಿಂದ ಬೆಳೆದುದಾದುದರಿಂದಲಾಗಲಿ, ಪ್ರಾಧಾನ್ಯವು. ಈ ಪ್ರಣಾಮವು ಈ ಒಂದು ಶ್ಲೋಕದಲ್ಲಿ ಮಾತ್ರವೇ ಅಲ್ಲದೆ, ಒಟ್ಟು ಮೂರು ಶ್ಲೋಕಗಳಿಂದ ಮಾಡಲ್ಪಟ್ಟಿರುತ್ತದೆ. ಹಾಗೆ ಮೂರು ಸಲ ಪ್ರಣಾಮವನ್ನು ಎಸಗುವದರ ಮೂಲಕ, ನಾಥಮುನಿಗಳನ್ನು ಕೊಂಡಾಡಲು ಕಾರಣಗಳನ್ನು ತಾವೇ ಹೇಳುವ ಹಾಗೆ ತೋರುತ್ತದೆ. ಮೂರು ಸಲ ಕೊಂಡಾಡುವುದಕ್ಕೆ ಕಾರಣವನ್ನು ಶ್ರೀ ನಿಗಮಾನ್ತ ದೇಶಿಕರವರು ಈ ಮುಂದಿನ ಕಾರಿಕೆಗಳ ಮೂಲಕ ತಿಳಿಸುತ್ತಾರೆ:—

**" ಭಗವದ್ಭಕ್ತಿತತ್ಸ್ನೇಹೌ ಲೋಕಾನುಗ್ರಹ ಇತ್ಯಮೀ ।**
**ಪ್ರಾಧಾನ್ಯೇನ ಪ್ರಕಾಶ್ಯನ್ತೇ ತತ್ಸ್ವಭಾವಾಸ್ತ್ರಿಷುಕ್ರಮಾತ್ ॥**
**ವೈರಾಗ್ಯಪರಭಕ್ತ್ಯಾದೇಸ್ತತ್ತ್ವಜ್ಞಾನಂ ಪ್ರಸಾಧಕಮ್ ।**
**ಇತಿ ಜ್ಞಾಪಯಿತುಂ ತಸ್ಯ ತ್ರಿಷು ಪದ್ಯೇಷು ಸಙ್ಗ್ರಹಃ ॥**
**ತತ್ರಾಪಿ ಪರ್ವಭೇದೇನ ಜ್ಞಾನಭಕ್ತ್ಯೋಃ ಪರಸ್ಪರಮ್ ।**
**ಹೇತುಕಾರ್ಯತ್ವಯೋರ್ಜ್ಞಪ್ತ್ಯೈ ದ್ವಿಧಾತ್ರಸ್ಥಾಪಿತಃ ಕ್ರಮಃ ॥**
**ಗುರೋರ್ಜ್ಞಾನಾದಿಸಂಪತ್ತಿಸ್ತಸ್ಯಾಸ್ಸರ್ವಾತಿಶಾಯಿತಾ ।**
**ಲೋಕೋಪಕಾರಿತಾಪ್ಯುಕ್ತೇತ್ಯತೋ ನ ಪುನರುಕ್ತತಾ ॥**
**ಕರಣತ್ರಯಸಂಬಂಧಪ್ರತಿಬಂಧಪ್ರಶಾಂತಯೇ ।**
**ತ್ರಿವಾರಂ ಮಙ್ಗಳಾಚಾರ ಇತಿ ಕೇಚಿತ್ಪ್ರಚಕ್ಷತೇ ॥**
**ಅನ್ಯೇ ಮಙ್ಗಳಭೂಯಸ್ತ್ವಸಿದ್ಧ್ಯೈ ಮಙ್ಗಳಕರ್ಮಣಾಮ್ ।**
**ಕ್ರಿಯಾಸಮಭಿಹಾರೋಽಯಮಿತಿ ಸಾಫಲ್ಯಮಭ್ಯಧುಃ ॥**
**ಇತ್ಥಮೇವ ವಿಭಾವ್ಯನ್ತದುಭಯಂಭವ್ಯಸಿದ್ಧಯೇ ।**

**ಪರಾಶರನಮಸ್ಕಾರೋ ವಕುಳಾಭರಣಾನತಿಃ ||**

ಗ್ರಂಥ ವಿಸ್ತರ ಭಯದಿಂದ ಇವುಗಳಿಗೆ ಅರ್ಥವನ್ನು ಬರೆಯಲಿಲ್ಲವು. ಮುಖ್ಯ ತಾತ್ಪರ್ಯವು ಇಷ್ಟೇ. — ಭಗವದ್ಭಕ್ತಿ, ತತ್ಸ್ನೇಹ ಲೋಕಾನುಗ್ರಹಗಳು ಉಂಟಾಗುವದಕ್ಕಾಗಿಯೂ, ಮತ್ತು ವೈರಾಗ್ಯ, ಪರಭಕ್ತಿ ತತ್ವಜ್ಞಾನಗಳ ಪ್ರಾಪ್ತಿ ರೂಪವಾದ ಅನುಗ್ರಹ ಉಂಟಾಗುವದಕ್ಕಾಗಿಯೂ ಎಂದು ಭಾವಿಸಬಹುದು; ಮತ್ತು ಮನಸ್ಸು, ವಾಕ್ಕು, ಕಾಯ ಇವುಗಳಿಗೆ ಸಂಬಂಧಿಸಿದ ಪ್ರತಿಬಂಧಕಗಳು ತೊಲಗುವದಕ್ಕಾಗಿ ಮೂರುಸಲ ಮಂಗಳಾಚರಣೆ ಯೆಂದೂ ಭಾವಿಸ ಬಹುದು.

೪ ನೆಯ ಶ್ಲೋಕದಲ್ಲಿ ಶ್ರೀ ಪರಾಶರರಿಗೂ, ೫ ನೆಯದರಲ್ಲಿ ಪರಾಂಕುಶ ಮುನಿಗಳಿಗೂ, ಪ್ರಣಾಮಗಳನ್ನೆಸಗುತ್ತಾರೆ. ಇದಷ್ಟನ್ನೂ ಮಾಡಿರುವದು ತಮ್ಮ ಅಮೋಘ ಗ್ರಂಥ ನಿರ್ಮ್ಮಾಣಕ್ಕೆ ಶ್ರಿಯಃ ಪತಿಯ ಅನುಗ್ರಹ ಸಂಪಾದಕವೆಂದು ಭಾವಿಸಿ ಇವರೆನ್ನೆಲ್ಲಾ ನಮಿಸಿರುತ್ತಾರೆ.

ಇಂತಹ ನಿರತಿಶಯೋಪದೇಶಗರ್ಭಿತವಾದ ಗ್ರಂಥನಿರ್ಮ್ಮಾಣಕ್ಕೆ ಆಚಾರ್ಯ ವಂದನೆಯು ಪರಮ ಪ್ರಾಧಾನ್ಯವಾದುದೆಂಬುದಕ್ಕೆ ಅನೇಕ ಪ್ರಮಾಣಗಳನ್ನು ಶ್ರೀ ದೇಶಿಕವರ್ಯರು ಉದಾಹರಿಸುತ್ತಾರೆ.

ತೈತ್ತರೀಯದಲ್ಲಿ, " **ಆಚಾರ್ಯದೇವೋಭವ**" ಎಂದು ವಿಧಿಸಿರುತ್ತದೆ. ಛಾಂದೋಗ್ಯದಲ್ಲಿ " **ಆಚಾರ್ಯವಾ೯ ಪುರುಷೋ ವೇದ** " ಮತ್ತೂ

"**ಆಚಾರ್ಯಸ್ತು ತೇ ಗತಿಂವಕ್ತಾ**" (ಛಾಂ. ೪. ೧೪. ೧.)

ಕಠಶ್ರುತಿಯಲ್ಲಿ :—

"**ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾಗುರೌ** |
**ತಸ್ಯೈ ತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ**"

ಇದು ಶ್ವೇತಾಶ್ವತರದಲ್ಲೂ ( ೬. ೨೩ ) ಉಂಟು. ಯಾವನಿಗೆ ಪರಮಾತ್ಮನಲ್ಲಿ ಹೇಗೆ ಪರ ಭಕ್ತಿಯೋ, ಹಾಗೆಯೇ ತನ್ನ ಆಚಾರ್ಯನಲ್ಲೂ ಉಂಟೋ, ಅಂತಹ ಮಹಾತ್ಮನಿಗೆ ಆಚಾರ್ಯ ಕೃಪೆಯಿಂದ ಈ ಎಲ್ಲಾ ಅಭಿಪ್ರಾಯಗಳೂ ಪ್ರಕಾಶಿಸುತ್ತವೆ.

ಗೀತೆಯಲ್ಲಿ, "**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯ ಮಾತ್ಮ ವಿನಿಗ್ರಹಃ** " ಆಚಾರ್ಯೋಪಾಸನವು ಮುಖ್ಯವಾಗಿ ಹೇಳಲ್ಪಟ್ಟಿರುತ್ತದೆ. ಆಚಾರ್ಯಾನುಗ್ರಹವೇ ಸರ್ವ ಸಿದ್ಧಿಗೆ ಕಾರಣ ಭೂತವೆಂದು ಬೋಧಾಯನರ ಪುರಾಣ ಸಾರ ಸಮುಚ್ಚಯದಲ್ಲಿ: —

**ದೇವತಾಯಾ ಗುರೋಶ್ಚಾಪಿ ಮನ್ತ್ರಸ್ಯಾಪಿ ಪ್ರಕೀರ್ತ್ತನಾತ್** |
**ಐಹಿಕಾಮುಷ್ಮಿಕೀ ಸಿದ್ಧಿ ರ್ದ್ವಿಜಸ್ಯಾಸ್ತೆ ನ ಸಂಶಯಃ** "

ಬ್ರಾಹ್ಮಣನು ಮಂತ್ರವನ್ನೂ, ಆ ಮಂತ್ರ ದೇವತೆಯನ್ನೂ, ಆ ಮಂತ್ರೋಪದೇಶಕ ಗುರುವನ್ನೂ ಸ್ತುತಿಸುವದರಿಂದ ಐಹಿಕಾಮುಷ್ಮಿಕ ಸರ್ವ ಸಿದ್ಧಿಯನ್ನೂ ಹೊಂದುವನೆಂದು, ಹೇಳಲ್ಪಟ್ಟಿರುತ್ತದೆ. ಈ ಸಿದ್ಧಿ ಶಬ್ದದಲ್ಲಿ ಜ್ಞಾನ ಮೊದಲಾಗಿ ಸರ್ವಾಪೇಕ್ಷಿತಗಳೂ ಅಂತರ್ಗತವು. ಜಯಾಖ್ಯ ಸಂಹಿತೆಯಲ್ಲಿ,

**" ಯಸ್ಮಾದ್ದೇವೋ ಜಗನ್ನಾಥಃ ಕೃತ್ವಾ ಮರ್ತ್ಯಮಯೀಂ ತನುಮ್**
**ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾಚ್ಛಾಸ್ತ್ರಪಾಣಿನಾ ।**
**ತಸ್ಮಾದ್ಭಕ್ತಿ ರ್ಗುರೌ ಕಾರ್ಯಾ ಸಂಸಾರಭಯಭೀರುಣಾ ॥ "**

ಸಂಸಾರ ಭಯದಿಂದ ಭೀತನಾದವನು ಶಾಸ್ತ್ರೋಪದೇಶಕರಾದ ಗುರುವಿನಲ್ಲಿ ಭಕ್ತಿ ಮಾಡ ತಕ್ಕದ್ದು. ಏಕೆಂದರೆ ದೇವನಾದ ಜಗನ್ನಾಥನು ಸಂಸಾರ ಸಾಗರದಲ್ಲಿ ಮುಳುಗಿದವರನ್ನು ಉದ್ಧಾರ ಮಾಡುವದಕ್ಕಾಗಿ ಮನುಷ್ಯನಾಗಿ ಅವತರಿಸಿ ಪರಮ ಕರುಣೆಯಿಂದ ಶಾಸ್ತ್ರವೆಂಬ ಹಸ್ತವನ್ನೀಡಿ ಅವರನ್ನು ಎತ್ತುವನಾದುದರಿಂದ; ಹಾಗೆಯೇ ಇನ್ನೂ ಅನೇಕ ಪ್ರಮಾಣಗಳುಂಟು :—

**" ದೇವಮಿವ ಆಚಾರ್ಯಮುಪಾಸೀತ "**
**" ಆಚಾರ್ಯಃ ಪ್ಲಾವಿತಾ ತಸ್ಯ ಜ್ಞಾನಂ ಪ್ಲವ ಇಹೋಚ್ಯತೇ । "**

ಸಂಸಾರ ಸಾಗರವನ್ನು ದಾಟಲು ಆಚಾರ್ಯರ ಸದುಪದೇಶದಿಂದುಂಟಾದ ಜ್ಞಾನವೇ ನಾವೆಯು, ಅದನ್ನು ನಡೆಸುವವನು ಆಚಾರ್ಯನೇ.

ಹಾಗೆಯೇ ಭಾಗವತದಲ್ಲೂ :—

**" ನೃದೇಹಮಾದ್ಯಂ ಸುಲಭಂ ಸುದುರ್ಲಭಂ**
**ಪ್ಲವಂ ಸುಕಲ್ಪಂ ಗುರು ಕರ್ಣ ಧಾರಮ್**
**ಮಯಾನುಕೂಲೇನ ನಭಸ್ವತೇರಿತಂ**
**ಪುಮಾನ್ ಭವಾಬ್ಧಿಂ ನ ತರೇತ್ಸ ಆತ್ಮಹಾ ॥ "**

ಇಲ್ಲಿ ಮನುಷ್ಯ ದೇಹವೇ ಒಂದು ನಾವೆ ಎಂದೂ, ಸದ್ಗುರುವು ಅದನ್ನು ನಡೆಸುವ ನಾವಿಕನೆಂದೂ, ಅದಕ್ಕೆ ಅನುಕೂಲವಾದ ಗಾಳಿಯು ಪರಮಪುರುಷನೆಂದೂ ಹೇಳಲ್ಪಟ್ಟು, ಇಂತಹ ಅನುಕೂಲಾವಸರದಲ್ಲಿ ಯಾವನು ಸಂಸಾರವನ್ನು ಆ ನಾವೆಯ ಮೂಲಕ ದಾಟುವದಿಲ್ಲವೋ ಅಂತವನು ತನ್ನ ಆತ್ಮವನ್ನು ತಾನೇ ಹಾಳು ಮಾಡಿಕೊಂಡ ನಿರ್ಭಾಗ್ಯನೆಂದು ಹೇಳಲ್ಪಟ್ಟಿರುತ್ತದೆ.

**" ಮಂತ್ರೇ ತದ್ದೇವತಾಯಾಂಚ ತಥಾ ಮಂತ್ರಪ್ರದೇಗುರೌ ।**
**ತ್ರಿಷು ಭಕ್ತಿಸ್ಸದಾ ಕಾರ್ಯಾ ಸಾ ಹಿ ಪ್ರಥಮಸಾಧನಮ್ ॥ "**

ವ್ಯಾಪಕಾದಿ ಮಂತ್ರದಲ್ಲೂ, ಆ ಮಂತ್ರ ದೇವತೆಯಲ್ಲೂ, ಆ ಮಂತ್ರವನ್ನೂ, ಮಂತ್ರಾರ್ಥವನ್ನೂ, ಉಪದೇಶಿಸಿದ ಗುರುವಿನಲ್ಲೂ, ಹೀಗೆ ಮೂರರಲ್ಲೂ, ಭಕ್ತಿಯನ್ನು

ಮಾಡತಕ್ಕದ್ದು ಆವಶ್ಯಕವು. ಮೋಕ್ಷಪ್ರಾಪ್ತಿಗೆ ಇದೇ ಮೊದಲನೆಯ ಸಾಧನವು.

**ಮನ್ತ್ರನಾಥಂ ಗುರುಂ ಮನ್ತ್ರಂ ಸಮಶ್ಚೈನಾಭಿಪೂಜಯೇತ್ ।**
**ಚಕ್ಷುರ್ಗಮ್ಯಂ ಗುರುಂ ತ್ಯಕ್ತ್ವಾ ಶಾಸ್ತ್ರಗಮ್ಯಂ ತು ಯಸ್ಸ್ಮರೇತ್ ।**
**ಕರಸ್ಥಮುದಕಂ ತ್ಯಕ್ತ್ವಾ ಘನಸ್ಥಂ ಸೋಭಿವಾಂಛತಿ ॥ "**

ಮನ್ತ್ರಕ್ಕೆ ಸ್ವಾಮಿಯಾದ ದೇವತೆಯನ್ನೂ, ಮನ್ತ್ರೋಪದೇಶ ಮಾಡಿದ ಗುರುವನ್ನೂ, ಮನ್ತ್ರವನ್ನೂ ಸಮವಾಗಿ ಪೂಜಿಸತಕ್ಕದ್ದು. ಪ್ರತ್ಯಕ್ಷ ದೇವತೆಯಾದ ಗುರುವನ್ನು ಬಿಟ್ಟು ಶಾಸ್ತ್ರದಿಂದ ಬೋಧಿತ ಸ್ವಾಮಿಯನ್ನು ಯಾವನು ಭಜಿಸಲೆತ್ನಿಸುವನೋ ಅವನು ಕೈಯ್ಯಲ್ಲಿರುವ ಉದಕವನ್ನು ತ್ಯಜಿಸಿ, ಮೇಘದಿಂದ ಉದಕವು ಯಾವಾಗ ಸಿಕ್ಕುತ್ತೋ ಎಂದು ಅಪೇಕ್ಷಿಸುತ್ತಾ ಕಾದಿರುವನು ಎಂದು ತಾತ್ಪರ್ಯವು.

**"ಸಚಾಚಾರ್ಯವಂಶೋ ಜ್ಞೇಯೋ ಭವತಿ ।**
**ಆಚಾರ್ಯಾಣಾಮಸಾವಸಾವಿತ್ಯಾಭಗವತ್ತಃ "**

ತನ್ನ ಆಚಾರ್ಯರ ವಂಶವನ್ನು ಚೆನ್ನಾಗಿ ತಿಳಿಯತಕ್ಕದ್ದು. ಭಗವಂತನನ್ನು ಮೊದಲುಗೊಂಡು ಇವರಿವರು ನಮ್ಮ ಆಚಾರ್ಯರ ವಂಶಕ್ಕೆ ಸೇರಿದವರೆಂಬುದನ್ನು ತಿಳಿಯತಕ್ಕದ್ದು. ಹೀಗಿರುವದರಿಂದಲೇ, ಇಲ್ಲಿ ಇವರು ತಮ್ಮ ಪ್ರಾಚಾರ್ಯರ ಭಜನವನ್ನು ಮಾಡಿರುತ್ತಾರೆ. ಇದರಿಂದ ಅವರ ಶಿಷ್ಯರಾದ ತಮ್ಮ ಆಚಾರ್ಯರನ್ನೂ ಭಜಿಸಿದ ಹಾಗಾಯಿತೆಂಬ ಭಾವವು.

ಶ್ರೀ ವಿಷ್ಣುಪುರಾಣದ ಆದಿಶ್ಲೋಕದಲ್ಲಿ ಶ್ರೀ ಪರಾಶರರ ಶಿಷ್ಯರಾದ ಮೈತ್ರೇಯರು ಈ ಮಹತ್ತಾದ ಸಂಪ್ರದಾಯಕ್ರಮವಾದ ಗ್ರಂಥಾದಿಯಲ್ಲಿ ಆಚಾರ್ಯವಂದನೆಯು ಆಚಾರ್ಯ ನಮಸ್ಕಾರಪೂರ್ವಕವಾದ ಮಂಗಳಾಚರಣೆಯು ಆವಶ್ಯಕವೆಂದು ಪ್ರಕಟಿಸಿರುತ್ತಾರೆ: —

**ಪರಾಶರಂ ಮುನಿವರಂ ಕೃತಪೌರ್ವಾಹ್ಣಿಕಕ್ರಿಯಮ್ ।**
**ಮೈತ್ರೇಯಃ ಪರಿಪಪ್ರಚ್ಛ ಪ್ರಣಿಪತ್ಯಾಭಿವಾದ್ಯ ಚ ॥ "**

ಈ ಶ್ಲೋಕದಲ್ಲಿರುವ ನಮಶ್ಶಬ್ದವು ಪ್ರಣಾಮವನ್ನು ಸೂಚಿಸುತ್ತದೆ. ಅಥವಾ ಆತ್ಮನಿವೇದನವನ್ನು ಬೋಧಿಸುತ್ತದೆಂದೂ ಭಾವಿಸಬಹುದು. ಸ್ತೋತ್ರವು ಪ್ರಾರಂಭಿಸಲ್ಪಟ್ಟು ನಿರ್ವಿಘ್ನ ಪರಿಸಮಾಪ್ತಿಯನ್ನು ಹೊಂದುವದಕ್ಕಾಗಿ ಪ್ರಣಾಮವು. ಸದ್ಗುರುವಿನಿಂದ ನಮಗುಂಟಾದ ಉಪಕಾರವು ನಿರವಧಿಕವಾದುದರಿಂದ : —

**" ದಂಡವತ್ಪ್ರಣಮೇದ್ಭೂಮೌ ನಿರ್ಲಜ್ಜೋ ಗುರುಸನ್ನಿಧೌ ।**
**ಶರೀರಮರ್ಥಂ ಪ್ರಾಣಂ ಚ ಸದ್ಗುರುಭ್ಯೋ ನಿವೇದಯೇತ್ ॥**

ಎಂದು ಹೇಳಲ್ಪಟ್ಟಿರುತ್ತದೆ. **ನಮಃ** ಆತ್ಮನಿವೇದನಪರವೆಂದು ಈಶ್ವರ ಸಂಹಿತೆಯಲ್ಲಿ ಮನ್ತ್ರರಾಜಪದ ಸ್ತೋತ್ರದಲ್ಲಿ ಹೇಳಲ್ಪಟ್ಟಿರುತ್ತದೆ; ಹೇಗೆಂದರೆ: —

**ನಮಸ್ಕಾರಾತ್ಮಕಂ ಯಸ್ಮೈ ವಿಧಾಯಾತ್ಮನಿವೇದನಮ್।**

ಎಂಬುದಾಗಿ. ಆ ನಾಥಮುನಿಗಳು ನಮಸ್ಕಾರಕ್ಕೆ ತುಂಬಾ ಅರ್ಹರು ಏತರಿಂದ ಎಂದರೆ: — **ಜ್ಞಾನವೈರಾಗ್ಯರಾಶಿ** ಗಳಾಗಿ, ಅವುಗಳನ್ನೇ ನಮಗೆ ಉಂಟಾಗುವ ಹಾಗೆ ಉಪದೇಶಿಸಿ, ಮೋಕ್ಷೋಪಾಯದಲ್ಲಿ ರುಚಿಯನ್ನುಂಟುಮಾಡಿ, ಹೀಗೆ ಮಹತ್ತಾದ ಉಪಕಾರಪರರಾದುದರಿಂದಲೂ, ನಮ್ಮಿಂದ ಯಾವ ಪ್ರತಿಫಲವನ್ನೂ ಅಪೇಕ್ಷಿಸದೇ, ತಮ್ಮನ್ನು ಆಶ್ರಯಿಸಿದರೆ ಸಾಕು? ಅವರಿಗೆ ಮಹೋಪಕಾರವನ್ನು ಎಸಗಬೇಕೆಂಬ **ವ್ರತಸಂಕಲ್ಪ** ಯುಕ್ತರಾದುದರಿಂದ ವಿಶೇಷಮಾನ್ಯರೆಂಬ ಭಾವವು.

ಇದನ್ನೇ ಮಹರ್ಷಿಯು ಸುಂದರಕಾಂಡದಲ್ಲಿ.—

**"ಪಕ್ಷೀ ಚ ಶಾಖಾನಿಲಯಂ ಪ್ರವಿಷ್ಟಃ"**

ಎಂಬ ಅಮೋಘ ಶ್ಲೋಕದಲ್ಲಿ ಉಪದೇಶಿಸಿರುತ್ತಾರೆ. ಗುರುವಿನಲ್ಲಿ ಮುಖ್ಯವಾಗಿ ಇಂತಹ ಗುಣಗಳಿರತಕ್ಕದ್ದು. ಹಾಗಿದ್ದರೇನೇ ಆಶ್ರಯಿಸಲು ಯೋಗ್ಯನು.

ಶ್ರೀ ನಿಗಮಾನ್ತಮಹಾದೇಶಿಕರವರು : —

**" ದೇಶಿಕೋ ಮೇ ದಯಾಳುಃ "** ಎಂದು ಹೇಳಿರುತ್ತಾರೆ.

ಲಕ್ಷ್ಮಣನು ಇದೇ ಅಭಿಪ್ರಾಯವನ್ನೇ **" ಗುಣೈರ್ದಾಸ್ಯಮುಪಾಗತಃ "** ಶ್ರೀರಾಮಚಂದ್ರ ಪ್ರಭುವನ್ನು ಆಶ್ರಯಿಸಲು ಮುಖ್ಯ ಕಾರಣವೇನೆಂದರೆ; ಆತನು " ಕಲ್ಯಾಣಗುಣ ಮಹೋದಧಿಯು " ಎಂದು ಹೇಳಿರುತ್ತಾನೆ. ಇಲ್ಲಿ ಮುಖ್ಯವಾಗಿ ಗುರುವಿನಲ್ಲಿ ಯಾವ ಜ್ಞಾನವು ಆವಶ್ಯಕವೆಂದರೆ " **ಸಾವಿದ್ಯಾಯಾ ವಿಮುಕ್ತಯೇ** " ಎಂಬಲ್ಲಿ ಹೇಳಿರುವ ಹಾಗೆ ಯಾವ ಜ್ಞಾನವು ಮೋಕ್ಷಪ್ರಾಪ್ತಿಗೆ ಹೇತುವೋ ಅಂತಹ ಜ್ಞಾನವನ್ನು ಹೊಂದಿರುತ್ತಾನೆ. ಅಂತಹ ಜ್ಞಾನದಿಂದಲೇ

**" ಸಂಜ್ಞಾಯತೇ ಯೇನ ತದಸ್ತದೋಷಂ**
**ಶುದ್ಧಂ ಪರಂ ನಿರ್ಮಲಮೇಕರೂಪಮ್**
**ಸಂದೃಶ್ಯತೇ ವಾಪ್ಯವಗಮ್ಯತೇ ವಾ**
**ತದ್ ಜ್ಞಾನಮಜ್ಞಾನಮತೋಽನ್ಯದುಕ್ತಮ್ "** ॥

ಬದ್ಧಮುಕ್ತನಿತ್ಯಜೀವಾತ್ಮರುಗಳಿಗಿಂತ ವಿಲಕ್ಷಣನಾಗಿ ವಿಕಾರಶೂನ್ಯನಾಗಿ ಹೇಯಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾದ ಪರಮಪುರುಷನನ್ನು ಆಗಮೋತ್ಥಜ್ಞಾನದಿಂದ ಗ್ರಹಿಸಿ ವಿವೇಕೋತ್ಥಜ್ಞಾನದಿಂದ ಆತನನ್ನು ವಿಮರ್ಶಿಸಿ ತಿಳಿದು ಭಕ್ತಿಯೋಗಾಪನ್ನ ಪರಜ್ಞಾನದಿಂದ ಸಾಕ್ಷಾತ್ಕರಿಸಲು ಯಾವ ಜ್ಞಾನವು ಯೋಗ್ಯವಾಗುತ್ತದೋ ಅದೀಗ ಜ್ಞಾನವು. ಮಿಕ್ಕಿದ್ದೆಲ್ಲಾ ಅಜ್ಞಾನವು.

ಇಂತಹ ಜ್ಞಾನವೇ ಇಲ್ಲಿ ಹೇಳಲ್ಪಟ್ಟುದುದು. ಆಹಾರವು ರುಚಿಯಾಗುವಹಾಗೆ ಮಾಡುವ ಜ್ಞಾನವಾಗಲಿ, ಧನಾರ್ಜನೆಯ ಜ್ಞಾನವಾಗಲಿ, ಇವೇ ಮೊದಲಾದವು ಇಲ್ಲಿ ಹೇಳಲ್ಪಡಲಿಲ್ಲವು. ಮೇಲೆ ಹೇಳಿದ ಜ್ಞಾನವಿಲ್ಲದವನೂ ಗುರುವಾಗಲು ಅನರ್ಹನು.

**ಭಿನ್ನನಾವಾಶ್ರಿತಸ್ತಬ್ಧೋ ಯಥಾ ಪಾರಂ ನ ಗಚ್ಛತಿ ।**
**ಜ್ಞಾನಹೀನಂ ಗುರುಂ ಪ್ರಾಪ್ಯ ಕುತೋ ಮೋಕ್ಷಮವಾಪ್ನುಯಾತ್ ॥**

ಒಡೆದು ಹೋದ ನಾವೆಯನ್ನಾಶ್ರಯಿಸಿದವನು ಹೇಗೆ ನೀರಿನ ಆಚೆ ದಡವನ್ನು ಸೇರಲಾರನೋ, ಹಾಗೆಯೇ ಮೇಲೆ ಉಪಪಾದಿಸಿದ ಹಾಗೆ ಜ್ಞಾನಶೂನ್ಯನು ಮೋಕ್ಷವನ್ನು ಹೊಂದಲಾರನು. ಹೀಗಿರುವಾಗ ಶಿಷ್ಯನಿಗೆ ಮೋಕ್ಷವನ್ನು ಹೊಂದಿಸಲು ಶಕ್ತನೇ ? ಮೋಕ್ಷ ಸಾಧನಕ್ಕೆ ಇನ್ನೊಂದು ಮುಖ್ಯವಾದುದು ಯಾವುದೆಂದರೆ ವೈರಾಗ್ಯವು. ಮೋಕ್ಷೇತರ ನಶ್ವರಗಳಾದ ಐಹಿಕ, ಸ್ವರ್ಗ ಮೊದಲಾದ ಅನುಭವಗಳಲ್ಲಿ ವಿರಕ್ತಿಯು ಆವಶ್ಯಕವೆಂದು ಈ ಗ್ರಂಥ ಕರ್ತರೇ ಗೀತಾರ್ಥಸಂಗ್ರಹದ ಪ್ರಥಮ ಶ್ಲೋಕದಲ್ಲಿ : —

**" ಸ್ವಕರ್ಮಜ್ಞಾನವೈರಾಗ್ಯಸಾಧ್ಯಭಕ್ತ್ಯೇಕಗೋಚರಃ ।**

ಇವರು ಮಹಾ ಕವಿಯಾದುದರಿಂದ ಈ ಮೇಲಿನ ಶ್ಲೋಕವು ಎರಡು ವಿಧಗಳಾದ ಉಪಾಯಗಳಿಗೂ ಅನ್ವಯಿಸುವ ಹಾಗೆ ಪ್ರಯೋಗಿಸಿ, ಶ್ರೀಭಗವದ್ಗೀತೆಯಲ್ಲೂ ಈ ಎರಡು ಉಪಾಯಗಳೂ ಅಲ್ಲಲ್ಲೇ ಉಪಪಾದಿತಗಳಾಗಿವೆ ಎಂದು ಬಹು ಸ್ವಾರಸ್ಯವಾಗಿ ತಿಳಿಸಿರುತ್ತಾರೆ. ( ಗೀ. ೫೭ ನೆಯ ಪು. ) ಆ ವೈರಾಗ ಹೇಗೆ ಉಂಟಾಗುತ್ತದೆ ಎಂದರೆ " **ಪರಮಾತ್ಮನಿ ಯೋ ರಕ್ತೋ ವಿರಕ್ತೋಽಪರಮಾತ್ಮನಿ ।"** ಪರಮಾತ್ಮನಲ್ಲೇ ಸಕ್ತವಾದ ಮನಸ್ಸು ಯಾರಿಗೋ ಅಂತವನು ಆತನನ್ನೇ ಹೊಂದುವುದಕ್ಕಾಗಿ ಪರಮಾತ್ಮ ವ್ಯತಿರಿಕ್ತಗಳಾದ ಐಹಿಕ ಸ್ವರ್ಗಾದಿ ಭೋಗಗಳೆಲ್ಲಾ ನಶ್ವರಗಳೆಂದು ತಿಳಿದು ವಿರಕ್ತನಾಗುತ್ತಾನೆ.

ಈ ಜ್ಞಾನವೈರಾಗ್ಯಗಳು ಎಂತವೆಂದರೆ ಅಚಿನ್ತ್ಯ, ಅದ್ಭುತ, ಅಕ್ಲಿಷ್ಟಗಳಾದವು ಎಂದು ಹೇಳಿದರು. ಇವುಗಳ ತಾತ್ಪರ್ಯವು ಮೇಲೆಯೇ ಉಪಪಾದಿತವು. ಈ ಜ್ಞಾನ ವೈರಾಗ್ಯಗಳು ಈ ನಾಥಮುನಿಗಳಲ್ಲಿ ಪರಿಪೂರ್ಣವಾಗಿ ಇದ್ದುದರಿಂದ **ರಾಶಿ** ಶಬ್ದ ಪ್ರಯೋಗವು. ಹಾಗೆ ಜ್ಞಾನ ವೈರಾಗ್ಯ ಉಂಟಾಗಲು ಕಾರಣವೇನೆಂಬುದನ್ನು ತಾವೇ ತಿಳಿಸುತ್ತಾರೆ. **ಭಗವದ್ಭಕ್ತಿ ಸಿಂಧವೇ** ಭಗವಂತನಲ್ಲಿ ಭಕ್ತಿಗೆ ಇವರು ಸಮುದ್ರವು; ಆದುದರಿಂದಲೇ ಇವರಲ್ಲಿ ವೈರಾಗ್ಯವು ಸಂಪೂರ್ಣವು. ಭಗವಚ್ಛಬ್ದಕ್ಕೆ ಅರ್ಥವೇನೆಂದರೆ ಹೇಯಪ್ರತ್ಯನೀಕನು ಕಲ್ಯಾಣ ಗುಣಾಕರನು. ಹೀಗೆ ಉಭಯ ಲಿಂಗಯುಕ್ತನೆಂದು ವ್ಯಾಸಸೂತ್ರದಲ್ಲಿ ಬೋಧಿತವು. ವ್ಯಾಸ ಪಿತಾಮಾದ ಪರಾಶರರು ಭಗವಚ್ಛಬ್ದಾರ್ಥವನ್ನು :—

**" ಜ್ಞಾನ ಶಕ್ತಿಬಲೈಶ್ವರ್ಯ ವೀರ್ಯತೇಜಾಂಸ್ಯಶೇಷತಃ ।**
**ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ ॥**

ಎಂಬ ಶ್ಲೋಕದಲ್ಲಿ ಹಾಗೆಯೇ ಉಪಪಾದಿಸಿರುತ್ತಾರೆ, ಹೀಗೆ ಭಗವಂತನಿಗೆ ಭಗವಚ್ಛಬ್ದವನ್ನು ಪ್ರಯೋಗಿಸಿದರೆ ಉಂಟಾಗುವ ಮುಖ್ಯಾರ್ಥವು

**" ಏವಮೇಷ ಮಹಾರ್ ಶಬ್ದೋ ಮೈತ್ರೇಯ ಭಗವಾನಿತಿ ॥ "**

ಈ ಅರ್ಥವು ವಾಸುದೇವನಿಗೆ ಮಾತ್ರವೇ ಅನ್ವಯಿಸುತ್ತದೇ ವಿನಾ ಇತರರಿಗಲ್ಲವು. ಆದರೆ ಭಗವಾರ್ ಶ್ರೀಪರಾಶರರು, ಭಗವಾರ್ ವಾಲ್ಮೀಕಿ ಎಂದು ಹೇಳುತ್ತೀವಲ್ಲಾ, ಅಲ್ಲೆಲ್ಲಾ ಅರ್ಥವೇನು ? ಎಂದರೆ ಹೇಳುತ್ತಾರೆ: —

**" ತತ್ರ ಪೂಜ್ಯಪದಾರ್ಥೋಕ್ತಿ ಪರಿಭಾಷಾಸಮನ್ವಿತಃ । "**

ವಿಶೇಷ ಭಕ್ತಿವಿಶ್ವಾಸವಿರುವ ಮಹನೀಯರಿಗೂ ಭಗವಚ್ಛಬ್ದವನ್ನು ಪ್ರಯೋಗಿಸುವುದುಂಟು. ಆ ಶಬ್ದಕ್ಕೆ ಅರ್ಹತೆಯುಳ್ಳವನು ಯಾರು ? ಎಂದರೆ ಹೇಳುತ್ತಾರೆ-

**" ಉತ್ಪತ್ತಿಂ ಪ್ರಳಯಂ ಚೈವ ಭೂತಾನಾಮಾಗತಿಂ ಗತಿಮ್ ।**
**ವೇತ್ತಿ ವಿದ್ಯಾಮವಿದ್ಯಾಂಚ ಸ ವಾಚ್ಯೋ ಭಗವಾನಿತಿ ॥ "**

( ವಿ. ಪು. ೬, ಅ. ೭೭ - ೯) ಭಗವಚ್ಛಬ್ದಕ್ಕೆ ಅರ್ಹತೆಯುಳ್ಳವನು ಏನನ್ನು ತಿಳಿದಿರಬೇಕು ಎಂದರೆ, ಜಗತ್ತಿನ ಸೃಷ್ಟಿ ( ಸ್ಥಿತಿ ) ಪ್ರಳಯವನ್ನೂ, ಮತ್ತು ಪ್ರಾಣಿಗಳ ಸೃಷ್ಟಿಕ್ರಮವನ್ನೂ, ಅವರಿಗುಂಟಾಗುವ ಗತಿಗಳನ್ನೂ, ಸ್ವಾಮಿಯನ್ನು ಹೊಂದಲು ಬೇಕಾದ ಬ್ರಹ್ಮವಿದ್ಯಾಸ್ವರೂಪನ್ನೂ, ಮತ್ತು ಅದಕ್ಕೆ ಸಹಕಾರಿಯಾದ ನಿತ್ಯ ನೈಮಿತ್ತಿಕಗಳ ಅನುಷ್ಠಾನ ಕ್ರಮವನ್ನೂ, ಹೀಗೆ ಇವೆಲ್ಲವನ್ನೂ ತಿಳಿದವನೇ ಭಗವಚ್ಛಬ್ದವಾಚ್ಯನಾಗಲು ಅರ್ಹನು.

ಭಗವದ್ಭಕ್ತಿಯು ಹೇಗೆ ಸಿಂಧುವಾಗಿ ಪರಿಣಮಿಸಿ ಅಗಾಧವಾಗುತ್ತದೆ ಎಂದರೆ, ನಿತ್ಯ ನೈಮಿತ್ತಿಕಾನುಷ್ಠಾನಗಳನ್ನು ಅನುಷ್ಠಿಸಿ ತ್ಯಾಗವನ್ನು ಹೇಳುವ ಸಂದರ್ಭದಲ್ಲಿ ಭಗವದ್ಭಕ್ತಿಯು ಸಾಧಾರಣವಾದುದಾಗಿ ಬೆಳೆದು ಉಪಾಯಾನುಷ್ಠಾನ ಕಾಲದಲ್ಲಿ ಶ್ರೇಷ್ಠವಾದುದುಗಿ ಪರಭಕ್ತಿ ಎಂದೆನಿಸಿ, ಆತನ ಧ್ಯಾನದ ಮೂಲಕ ಪರಜ್ಞಾನವೆಂದೆನಿಸಿ ಆತನನ್ನಗಲಿ ಸ್ವಲ್ಪ ಕಾಲವೂ ಇರಲಾರನೆಂಬ ಉತ್ಕಟೇಚ್ಛೆಯುಂಟಾದಾಗ ಪರಮಭಕ್ತಿ ಎಂದುಹೇಳಿಸಿಕೊಳ್ಳುವದರಿಂದ, ಹೀಗೆ ಅಭಿವೃದ್ಧಿಯನ್ನು ಹೊಂದುವುದರಿಂದ **ಭಕ್ತಿಸಿಂಧು** ವೆಂಬ ಪ್ರಯೋಗವು. ಹೀಗೆ ಭಕ್ತಿಯು ವೃದ್ಧಿಯಾಗುವುದು ಎರಡು ವಿಧ ಉಪಾಯಗಳಲ್ಲೂ ಉಂಟು. ಶ್ರೀಯತಿವರ್ಯರು ಶರಣಾಗತಿ ಗದ್ಯದಲ್ಲಿ :—

**" ಪರಭಕ್ತಿ ಪರಜ್ಞಾನ ಪರಮಭಕ್ತ್ಯೈಕ ಸ್ವಭಾವಂ ಕುರುಷ್ವ "**

ಎಂದು ಪ್ರಾರ್ಥಿಸಿರುವುದರಿಂದ, ಅವರು ಉಪಾಸನೆಯನ್ನು ಮಾಡಿದರೇ ವಿನಾ ಸ್ವತಂತ್ರ ಪ್ರಪತ್ತಿಯನ್ನು ಅನುಷ್ಠಿಸಲಿಲ್ಲವೆಂದು ಭಾವಿಸುವರು. ಇದು

**ತಸ್ಮೈ ನಮೋ ಮಧುಜಿದಂಘ್ರಿ ಸರೋಜ ತತ್ತ್ವ**
**ಜ್ಞಾನಾನುರಾಗ ಮಹಿಮಾತಿಶಯಾನ್ತ ಸೀಮ್ನೇ ।**
**ನಾಥಾಯ ನಾಥಮುನಯೇಽತ್ರ ಪರತ್ರ ಚಾಪಿ**
**ನಿತ್ಯಂ ಯದೀಯ ಚರಣೌ ಶರಣಂ ಮದೀಯಮ್ ॥ ೨ ॥**

---

ಸರಿಯಲ್ಲವು. ಭಗವಂತನ ಕೃಪೆಯಿಂದ ಇದು ಎರಡು ವಿಧ ಅಧಿಕಾರಿಗಳಿಗೂ ಉಂಟಾಗುವುದೆಂಬುದು ನಮ್ಮಾಳ್ವಾರ್ರವರ ಗ್ರಂಥದಿಂದಲೇ ವ್ಯಕ್ತವು. ಭಕ್ತಿಯು ಹೀಗೆ ಬೆಳೆಯುತ್ತಾ ಅಪಾರವಾದುದಾಗಿಯೂ, ಅಗಾಧವಾದುದಾಗಿಯೂ ಇರುವುದರಿಂದಲೂ, ವೃದ್ಧಿಯಾಗುವುದರಿಂದಲೂ ಸಮುದ್ರವೆಂಬ ರೂಪಕವು. ೧

**ಅವತಾರಿಕೆಯು —** ಹಿಂದಿನ ಶ್ಲೋಕದಲ್ಲಿ ತಮ್ಮ ಗುರುಗಳನ್ನು ನಮಿಸಿದ ತೃಪ್ತಿ ಸಾಲದೆ ತಮ್ಮ ಕೃತಜ್ಞತಾ ಪ್ರದರ್ಶನಕ್ಕಾಗಿ ಅನೇಕಸಲ ನಮಸ್ಕರಿಸತಕ್ಕದ್ದೆಂಬ ಶಾಸ್ತ್ರಮರ್ಯಾದೆಯಿರುವುದರಿಂದ ಪುನಃ ಪುನಃ ನಮಸ್ಕರಿಸುತ್ತಾರೆ. ಹಿಂದಿನ ಶ್ಲೋಕದಿಂದ ಭಗವದ್ಭಕ್ತಿ ಪರಿಪೂರ್ಣರೆಂದು ನಮಸ್ಕರಿಸಿದರು. ಈ ಶ್ಲೋಕದಲ್ಲಿಯಾದರೋ ಶ್ರಿಯಃ ಪತಿಯ ಪಾದಕಮಲದ ಮಾಹಾತ್ಮ್ಯೆಯನ್ನೂ ಆ ಮಹಾನುಭಾವನ ಸೌಲಭ್ಯ ಕಾರುಣ್ಯ ವಾತ್ಸಲ್ಯಾದಿಗಳ ಅತಿಶಯವನ್ನೂ, ತಿಳಿದ ಮಹಾಪ್ರಾಜ್ಞರಾದುದರಿಂದ ನಮಸ್ಕರಿಸಿರುತ್ತಾರೆ. ಇಂತಹ ಅತಿಶಯವು ನಮಗೆ ಸ್ವಾಮಿಯ ಅವತಾರ ಕಾಲದಲ್ಲೂ, ಮತ್ತು ಅರ್ಚಾವತಾರಿಯಾಗಿ ಶ್ರೀರಙ್ಗನಾಥ, ಶ್ರೀನಿವಾಸ, ಶ್ರೀವರದ, ಶ್ರೀಮನ್ನಾರಾಯಣ ರೂಪಗಳನ್ನು ಸ್ವತಃ ಧರಿಸಿ ಬಿಜಮಾಡಿರುವ ಕಾಲದಲ್ಲೂ ವ್ಯಕ್ತವು.

**ಅರ್ಥವು — ತಸ್ಮೈ** - ಇಲ್ಲಿ ತತ್ ಶಬ್ದವು ಮುಂದೆ ಬರುವ **ಯದೀಯ** ಎಂಬುದಕ್ಕೂ ಅನ್ವಯವನ್ನುತೋರಿಸುವ ಮಾತ್ರವೇ ಅಲ್ಲದೇ, ಮಹಾಪ್ರಸಿದ್ಧರೆಂಬ ಅರ್ಥವನ್ನೂ ಸೂಚಿಸುತ್ತದೆ. ಮಹಾ ಪ್ರಸಿದ್ಧರಾದ ನಾಥಮುನಿಗಳಿಗೆ **ನಮಃ** ನಮಸ್ಕಾರವು. ಅವರು ಎಂತವರೆಂದರೆ

**ಮಧುಜಿದಙ್ಘ್ರಿಸರೋಜತತ್ತ್ವಜ್ಞಾನಾನುರಾಗಮಹಿಮಾತಿಶಯಾನ್ತ ಸೀಮ್ನೇ । ಮಧುಜಿತ್** - ವೇದಗಳನ್ನು ಅಪಹರಿಸಿಕೊಂಡು ಹೋದ **ಮಧು** ಎಂಬ ರಾಕ್ಷಸನನ್ನು ಜಯಿಸಿ ಕೊಂದು ವೇದಗಳನ್ನು ತಂದು ಬ್ರಹ್ಮನಿಗೆ ಕೊಟ್ಟ ಭಗವಂತನ, **ಅಙ್ಘ್ರಿಸರೋಜ** - ಪಾದಕಮಲಗಳ, **ತತ್ತ್ವಜ್ಞಾನಾನುರಾಗ** - ಯಥಾರ್ಥ ಜ್ಞಾನ ಮತ್ತು ವಿಶ್ವಾಸಗಳ, **ಮಹಿಮಾತಿಶಯಾನ್ತ ಸೀಮ್ನೆ ।** ಮಹಿಮೆಯ ಮಾಹಾತ್ಮ್ಯೆಯ ಆಚೆಯ ದಡವನ್ನು ಮುಟ್ಟಿದವರು ಎಂದರೆ ಅದನ್ನು ಸಂಪೂರ್ಣವಾಗಿ ತಿಳಿದವರು, ಅವರು ಯಾರೆಂದರೆ :— **ನಾಥಮುನಯೇ** ನಾಥಮುನಿಯೆಂದು ನಾಮಧೇಯವುಳ್ಳವರು. ಆದುದರಿಂದ

ಅದು ಸಾರ್ಥಕ್ಯವನ್ನು ಹೊಂದಿ **ನಾಥಾಯ** ನಮಗೆಲ್ಲಾ ನಾಥರಾದ ಎಂದರೆ " **ಪತಿಂ ವಿಶ್ವಸ್ಯ** " ಎಂದು ಹೇಳಿಸಿಕೊಳ್ಳುವ ಸ್ವಾಮಿಯನ್ನು ಹೊಂದಿಸುವ ಪ್ರಾಜ್ಞರಾದುದರಿಂದ ನನಗೆ ಮುಖ್ಯಸ್ವಾಮಿಯಾದ, ಇಂತಹ ಪ್ರಸಿದ್ಧರಾದವರಿಗೆ **ನಮಃ** - ನಮಸ್ಕಾರವು. ತಮಗೆ ಇವರು ಹೇಗೆ ಪ್ರಸಿದ್ಧರೆಂಬುದನ್ನು ತಿಳಿಸುತ್ತಾರೆ. **ಯದೀಯ ಚರಣೌ** ಯಾವ ಮಹಾನುಭಾವರ ಪಾದದ್ವಂದ್ವವು, **ನಿತ್ಯಂ** - ಯಾವಾಗಲೂ, **ಇಹ** - ಇಲ್ಲೂ, **ಪರತ್ರಚಾಪಿ** - ದಿವ್ಯ ವೈಕುಂಠದಲ್ಲೂ ಸಹ, **ಮದೀಯಂ ಶರಣಂ** - ಜ್ಞಾನ ಭಕ್ತಿ ವೈರಾಗ್ಯೋತ್ಪಾದಕವಾಗಿ ನನಗೆ ರಕ್ಷಕ ರೂಪದಲ್ಲಿ ಗತಿಯು. ಆದುದರಿಂದ ಸೇವ್ಯರು ಎಂಬ ಭಾವವು. ಅಂತಹ ಪ್ರಸಿದ್ಧರಾದ ಗುರುಗಳಿಗೆ ನಮಸ್ಕಾರವು'

**ಉಪಪಾದನೆಯು :—** **ತಸ್ಮೈ** ಎಂಬುದು ಪ್ರಸಿದ್ಧಾರ್ಥವನ್ನೇ ಬೋಧಿಸುತ್ತದೆ ಎಂದು ದೇಶಿಕರವರು ಅರ್ಥ ಮಾಡಿ, ಅವರು ಹೇಗೆ ಪ್ರಸಿದ್ಧರು ಎಂದರೆ, ಅವರು ಭಕ್ತಿಯೋಗ ನಿಷ್ಠರಾದುದರಿಂದ ಬಹುಕಾಲ ಜೀವಂತರಾಗಿ ತಮ್ಮ ಯೋಗ ಮಾಹಾತ್ಮ್ಯೆಯಿಂದ ತತ್ವತ್ರಯದ ಪಾರಮಾರ್ಥ್ಯವನ್ನು ಗ್ರಹಿಸಿದುದರಿಂದ ಪ್ರಸಿದ್ಧರೆಂದು ತಿಳಿಸಿರುತ್ತಾರೆ. ಈ ನಮ್ಮ ಸಿದ್ಧಾಂತವು , **ನಾಥೋಪಜ್ಞಂ ಪ್ರವೃತ್ತಮ್** ಎಂದು ಇನ್ನೊಂದು ಕಡೆಯಲ್ಲೂ ಕೊಂಡಾಡಿರುತ್ತಾರೆ.

**ಮಧುಜಿತ್** ಎಂಬ ಪ್ರಯೋಗದ ಮೂಲಕ, ಹಾಗೆ ಅವತರಿಸಿದುದರಿಂದ ರಾಕ್ಷಸನಾದ ಮಧುವಿನ ವಿನಾಶವೂ, ಹಿರಣ್ಯಗರ್ಭನಾದ ಸಾಧು ಪರಿತ್ರಾಣವೂ ಹೇಗೆ ಉಂಟಾಯಿತೋ, ಹಾಗೆಯೇ ನಮಗೂ ಲಭ್ಯವೆಂಬುದು ತೋರಿಬರುತ್ತದೆ.

ಚತುರ್ಮುಖನಿಗೆ ವೇದಗಳನ್ನು ಪುನಃ ತಂದುಕೊಟ್ಟಹಾಗೆ ನಮಗೂ ರಾಕ್ಷಸ ರೂಪವಾದ ಅರಿಷಡ್ವರ್ಗಗಳನ್ನು ನಾಶಮಾಡಿ ವಿವೇಕಜ್ಞಾನವು ಉದಯಿಸುವ ಹಾಗೆ ಮಾಡಿ ತತ್ವಹಿತಪುರುಷಾರ್ಥಗಳ ರಹಸ್ಯವನ್ನೆಲ್ಲಾ ಚನ್ನಾಗಿ ತಮ್ಮ ಆಚಾರ್ಯರು ಉಪದೇಶಿಸುವಂಶಾವರು ಎಂಬ ಭಾವವು ಮಧುಜಿದಂಘ್ರಿಸರೋಜ ತತ್ವಾದಿ ಪ್ರಯೋಗದಿಂದ ಸೂಚಿತವು.

**ಮಧುಜಿದಂಘ್ರಿ ಸರೋಜ** ವೆಂಬ ಪ್ರಯೋಗದಿಂದ ಸರ್ವೇಶ್ವರನ ದಿವ್ಯಮಙ್ಗಳ ವಿಗ್ರಹದ **ಪಾರಮ್ಯತೆಯೂ, ದೃಷ್ಟಿ ಚಿತ್ತಾಪಹಾರಿತ್ವವೂ, ಪರಮ ಲಾವಣ್ಯವೂ** ಸೂಚಿತವು. ಸರೋಜ ಶಬ್ದವು ಭಗವಂತನ ಪಾದದ್ವಂದ್ವಕ್ಕಿರುವ ತಾಪತ್ರಯಗಳನ್ನು ಹೋಗಲಾಡಿಸಿ ಶಾಂತತೆಯನ್ನುಂಟುಮಾಡುವ ಶಕ್ತಿಯೂ, ಆಪಾದದ್ವಂದ್ವಗಳಿಗೆ ಉಂಟೆಂಬುದನ್ನು ಪ್ರಕಟಿಸುತ್ತದೆ. ಭಗವಂತನ ಸರ್ವಾವಯವಗಳಿಗಿಂತಲೂ ಪಾದದ್ವಂದ್ವಕ್ಕೆ ಆತ್ಮೋಜ್ಜೀವನವನ್ನುಂಟು ಮಾಡುವ ಶಕ್ತಿ ಇರುವುದರಿಂದ ಅದಕ್ಕೆ ವಿಶೇಷಮಾಹಾತ್ಮ್ಯೆಯುಂಟು. ಇದನ್ನು ಶ್ರೀ ನಿಗಮಾಂತ ದೇಶಿಕರವರು ಪ್ರಭಾವರಕ್ಷಾಧಿಕಾರದಲ್ಲಿ :—

**ಶಿಲಾದೇಃ ಸ್ತ್ರೀತ್ವಾದಿ ರ್ವಿಪರಿಣತಿರಸ್ತ್ವದ್ಭುತ ಮಿದಮ್ ।**
**ತತೋಽಪ್ಯೇತಚ್ಚಿತ್ರಂ ಯದುತ ದಹನಸ್ಯೇವ ಹಿಮತಾ ॥**

ಎಂಬುದರಿಂದ ಪ್ರಕಟಿಸಿರುತ್ತಾರೆ. ಸ್ವಾಮಿಯ ಪಾದಮಹಿಮೆಯಿಂದಲೇ ಅಹಲ್ಯೆಯು ನಿರ್ದೋಷಿಯಾದುದೂ, ಗಂಗೆಯು ಪಾವನತ್ವವನ್ನು ಹೊಂದಿದುದೂ, ವಿಭೀಷಣಾದಿಗಳು ಮುಕ್ತಿಯನ್ನು ಹೊದಿಂದುದೂ ಇವೆಲ್ಲಾ ಸರ್ವಶ್ರುತವಾದ ವಿಷಯಗಳೇ. **ಅಂಘ್ರಿ ಸರೋಜ** ಎಂಬಲ್ಲಿರುವ ಸರೋಜ ಶಬ್ದದಿಂದ ಮಂಗಳತ್ವವೂ, ಭೋಗ್ಯತ್ವವೂ ಹೇಳಲ್ಪಟ್ಟಿತು. ಸರ್ವೇಶ್ವರನ ಅಂಘ್ರಿ ಬಲದಿಂದ ಶಕಟಾಸುರನು ಜಿತನಾದ ಹಾಗೆ ಮಧುವೆಂಬ ರಾಕ್ಷಸನು ಜಿತನು. ಈ ಸಂದರ್ಭದಲ್ಲಾದರೋ ಆ ಪಾದಕಮಲದ ಭೋಗ್ಯತ್ವದಿಂದ ನಾಥಮುನಿಗಳು ಬಂಧವನ್ನು ದಾಟಿದರು. ಅದು ಹೇಗೆ ಎಂದರೆ ಅಂಥಹ ಸರ್ವೇಶ್ವರನ ಪಾದಕಮಲಸ್ವರೂಪದ ಯಥಾರ್ಥ ಜ್ಞಾನವು, ಆತನ ಪಾದಕಮಲವೇ ಮುಮುಕ್ಷುಗಳಿಗೆ ಸಿದ್ಧೋಪಾಯವೂ ಮತ್ತು ಪ್ರಾಪ್ಯವೂ ಎಂಬ ಸ್ಥಿರ ಬುದ್ಧಿಯನ್ನುಂಟುಮಾಡುತ್ತದೆ. ಇಲ್ಲಿ ಹೇಳಿರುವ ಜ್ಞಾನ ಶಬ್ದವು

“ **ಅಜಾಯಮಾನೋ ಬಹುಧಾ ವಿಜಾಯತೇ** ” ಎಂಬಲ್ಲೂ,

“ ಅಜೋಽಪಿ **ಸ್ನ ಅವ್ಯಯಾತ್ಮಾ** ” ಮತ್ತು “ **ಜನ್ಮ ಕರ್ಮ ಚ ಮೇ ದಿವ್ಯಮ್** ” ಇತ್ಯಾದಿ ಐದು ಶ್ಲೋಕಗಳಲ್ಲಿ ಹೇಳಲ್ಪಟ್ಟ ಅವತಾರ ರಹಸ್ಯಜ್ಞಾನವೆಂದಾದರೂ ಭಾವಿಸಬಹುದು. ಇಲ್ಲಿ ಅನುರಾಗ ಶಬ್ದವು ಅವತಾರ ಕಾಲದಲ್ಲಿ ಆತನ ಕಲ್ಯಾಣ ಗುಣಗಳ ಪ್ರಕಾಶದಿಂದ ಆತನಲ್ಲಿ ಉಂಟಾಗುವ ಪ್ರೀತಿಯು. “ **ಚಂದ್ರಕಾಂತಾನನಂ ರಾಮಮತೀವ ಪ್ರಿಯದರ್ಶನಮ್ ।**
**ರೂಪೌದಾರ್ಯಗುಣೈಃ ಪುಂಸಾಂ ದೃಷ್ಟಿ ಚಿತ್ತಾಪಹಾರಿಣಮ್ ॥**”

ಎಂಬಲ್ಲಿಯೂ ಮತ್ತು ಗೋಪಿಕಾ ಗೀತೆಯಲ್ಲಿಯೂ ತೋರಿಬರುವ ಪ್ರೀತಿ ವಿಶೇಷಗಳು. ಇದು “ **ಸರ್ವಸ್ಯ ಶರಣಂ ಸುಹೃತ್** “ ಎಂಬಲ್ಲಿ ಹೇಳಿರುವ ಹಾಗೆ ಸಮನ್ತರಿಗೂ ಏನೊಂದು ವಿಶೇಷವಿಲ್ಲದ ಹಾಗೆ ಮಿತ್ರರ ಹಾಗೆ ಭಾವಿಸುವ ಸೌಲಭ್ಯದಿಂದುಂಟಾದ ಪ್ರೀತಿ ವಿಶೇಷವು. ಇದು ಸುಗ್ರೀವ, ಗುಹ ಮೊದಲಾದವರಲ್ಲೂ, ಅಕ್ರೂರ, ಸಂಜಯ, ಉದ್ಧವ, ಅರ್ಜುನಾದಿಗಳಲ್ಲೂ ವ್ಯಕ್ತವಾಗಿ ತೋರಿ ಬರುವಂತಾದ್ದು. ಇಂಥಹ ಅನುರಾಗವೇ ತಾನು ದಾಸಭೂತನೆಂದು ತೋರಿದಾಗ ಭಕ್ತಿ ಶಬ್ದದಿಂದ ಹೇಳಲ್ಪಡುತ್ತದೆ. ಇದನ್ನು ಪ್ರಾಜ್ಞನಾದ ಆಂಜನೇಯನ ಉಕ್ತಿಯಿಂದ ಗ್ರಹಿಸಬಹುದು.

“ **ಸ್ನೇಹೋ ಮೇ ಪರಮೋ ರಾಜ ತ್ವಯಿ ನಿತ್ಯಂ ಪ್ರತಿಷ್ಠಿತಃ**
**ಭಕ್ತಿಶ್ಚ ನಿಯತಾ ವೀರ ಭಾವೋ ನಾನ್ಯತ್ರ ಗಚ್ಛತಿ ॥**

ಓ ರಾಜನಾದ ( ಸರ್ವ ಮನೋ ರಂಜಕನಾದ) ಶ್ರೀರಾಮನೇ ! ನಿನ್ನಲ್ಲೇ

ಯಾವಾಗಲೂ ನನಗೆ ಸ್ನೇಹವು ವಿಶೇಷವಾದುದಾಗಿ ಪ್ರತಿಷ್ಠಿತವಾಗಿರುತ್ತದೆ. ನೀನು ಮಹಾ ವೀರನು, ಆ ಕಾರಣದಿಂದ ನಿನ್ನಲ್ಲಿ ಭಕ್ತಿಯೂ ನಿಯತವಾಗಿರುತ್ತದೆ. ಆದುದರಿಂದ ನನಗೆ ನಿನ್ನಲ್ಲಿರುವ ನಿರತಿಶಯವಾದ ಅಭಿಪ್ರಾಯವು ಇನ್ನು ಬೇರೆ ಕಡೆಗೆ ಹೋಗಲಾರದು. ಆ ಭಕ್ತಿಗೆ ಬೇರೆ ಕಡೆಯಲ್ಲಿ ಎಂದಿಗೂ ಅನ್ವಯವೇ ಇಲ್ಲವು. ನಿನ್ನಲ್ಲೇ ಸುಪ್ರತಿಷ್ಠಿತವು ಎಂದು ಹೇಳಿಕೊಂಡಿರುತ್ತಾನೆ. ( ಉತ್ತ. ರಾಮಾ. ೪೦. ೧೫. ) ಇಂತಹ ಅವಸ್ಥೆಯಲ್ಲಿ ಅಧಿಕಾರಿಯು ವೈರಾಗ್ಯನಿಧಿಯೆಂದು ಎಣಿಸಲ್ಪಡುವನು. ಇಂತಹ ಭಕ್ತಿಯ ಮಹಿಮೆಯ ಆಚೆಯ ದಡವನ್ನು ಹೊಂದಿದವರು ನಾಥಮುನಿಗಳು ಎಂದು ಇಲ್ಲಿ ಹೇಳಲ್ಪಟ್ಟಿತು. ಇಂತಹ ನಾಥಮುನಿಯ ಪಾದಗಳೇ ತಮಗೆ ಶರಣವೆಂದು ಹೇಳಿಕೊಂಡರು. ಶ್ರೀನಾಥಮುನಿಗಳ ಸಂಗ್ರಹ ಚರಿತ್ರೆಗೆ ದಾಸನು ಬರೆದಿರುವ ಗುರುಪರಂಪರಾಸಾರದ ೭೫ ರಿಂದ ೮೦ ನೆಯ ಪುಟಗಳನ್ನು ನೋಡಿ. ಇಲ್ಲಿ **ನಾಥಾಯ ನಾಥಮುನಯೇ** ಎಂಬ ಪ್ರಯೋಗಗಳ ಸ್ವಾರಸ್ಯಾರ್ಥವನ್ನೇ ಮನಸ್ಸಿನಲ್ಲಿಟ್ಟು, ಶ್ರೀನಿಗಮಾನ್ತ ಮಹಾದೇಶಿಕರವರು, ನಾಥಮುನಿಗಳ ಅವತಾರ ಸ್ಥಳವಾದ ವೀರ ನಾರಾಯಣಪುರಿಗೆ ದಯಮಾಡಿಸಿದಾಗ,

**" ನಾಥೇನ ಮುನಿನಾ ತೇನ ಭವೇಯಂ ನಾಥವಾನಹಮ್ |**
**ಯಸ್ಯ ನೈಗಮಿಕಂ ತತ್ತ್ವಂ ಹಸ್ತಾಮಲಕತಾಂ ಗತಮ್ ॥ "**

ಎಂದು ನಾಥಮುನಿಗಳನ್ನು ಸೇವೆಮಾಡಿ ಹೇಳಿದ ದಿವ್ಯ ಸೂಕ್ತಿಯಿಂದ ವ್ಯಕ್ತವಾಗುತ್ತದೆ. ಈ ನಾಥಮುನಿಗಳಿಂದ ನಾನು ನಾಥನನ್ನು ಹೊಂದಿದವನಾದೆನು. ಅದೇನೆಂದರೆ ಈ ಮಹನೀಯರ ಪ್ರಸಿದ್ಧ ಜ್ಞಾನದಿಂದ, ವೇದಾಂತ ತತ್ತ್ವವೆಲ್ಲಾ ಕರತಲಾಮಲಕವಾಯಿತು. ಕರತಲಾಮಲಕವೆಂದರೆ ನೆಲ್ಲಿಕಾಯಿಯು ಹಸ್ತದಲ್ಲೇ ಇದ್ದರೆ ಎಷ್ಟು ಸುಸ್ಪಷ್ಟವೋ ಹಾಗೆ ವ್ಯಕ್ತವಾಯಿತೆಂಬ ಭಾವವು.

ಈ ಮಹಾನುಭಾವರ ಚರಣದ್ವಂದ್ವವು ತಮಗೆ **ಅತ್ರ** ಇಲ್ಲಿಯೂ **ಪರತ್ರ ಚ** ಹೇಗೆ **ಮದೀಯ ಶರಣಂ** ? ಎಂದರೆ ಮುಕ್ತಿಗೆ ಪೂರ್ವಾವಸ್ಥೆಯಲ್ಲಿ ಇಲ್ಲಿ ಜ್ಞಾನ ಭಕ್ತ್ಯಾದಿಗಳ ಉತ್ಪತ್ತಿಮುಖೇನ ಶರಣತ್ವವು. **ಪರತ್ರ** ವೆಂದರೆ ಮುಕ್ತಿದಶೆಯಲ್ಲಾದರೋ, ನಿತ್ಯಸೂರಿಗಳು ಹೇಗೆ ನಮಗೆ ಶೇಷಿಗಳೋ, ಹಾಗೆಯೇ ನಿತ್ಯ ಸೂರಿಗಳೂ, ಈ ನಾಥಮುನಿಗಳೂ ಪ್ರಾಪ್ಯದಲ್ಲೇ ಅಂತರ್ಭಾವವುಳ್ಳವರಾಗಿ ಈ ಲೋಕದಲ್ಲಿದ್ದಾಗ ಮಾಡಿದ ಮಹೋಪಕಾರದ ಸಾಕ್ಷಾತ್ಕಾರದಿಂದ ವಿಶೇಷ ಭಕ್ತಿಯನ್ನುಂಟುಮಾಡುವುದರ ಮೂಲಕ **ಪರತ್ರ ಚ ಶರಣಂ** ಎಂದು ಹೇಳಿದರು ಇಲ್ಲಿ ಮಾತ್ರವೇ ಅವರ ಉಪಕಾರ ಸ್ಮರಣವು ಎಂದು ಭಾವಿಸತಕ್ಕದ್ದಲ್ಲವು. ಆ ಉಪಕಾರ ಸ್ಮರಣೆಯು ದಿವ್ಯ ವೈಕುಂಠದಲ್ಲೂ ಉಂಟು ಎಂದು **ಪರತ್ರ ಚಾಪಿ** ಎಂಬಲ್ಲಿ **ಚ, ಅಪಿ** ಎಂಬ ಅವ್ಯಯಗಳ ಪ್ರಯೋಗವು. **ನಿತ್ಯಂ** ಎಂಬುದ

**ಮೂ —** **ಭೂಯೋ ನಮೋಽಪರಿಮಿತಾಚ್ಯುತ ಭಕ್ತಿ ತತ್ತ್ವ**
**ಜ್ಞಾನಾಮೃತಾಬ್ಧಿ ಪರಿವಾಹ ಶುಭೈರ್ವಚೋಭಿಃ ।**
**ಲೋಕೇಽವತೀರ್ಣ ಪರಮಾರ್ಥ ಸಮಗ್ರ ಭಕ್ತಿ**
**ಯೋಗಾಯ ನಾಥಮುನಯೇ ಯಮಿನಾಂ ವರಾಯ ॥ ೩ ॥**

---

ರಿಂದ ತಮ್ಮ ಆತ್ಮವು ಇರುವವರೆಗೂ ಎಂಬರ್ಥವಾಗಿ, ಆತ್ಮವು ಶಾಶ್ವತವಾದುದರಿಂದ, **ನಿತ್ಯಂ** ಯಾವಾಗಲೂ ಶಾಶ್ವತವಾಗಿ ಎಂಬರ್ಥವು. **ಯದೀಯ ಚರಣೌ** ಎಂದರೆ ಯಸ್ಯ ಚರಣೌ ಎಂಬ ಭಾವವು. **ಶರಣಂ** ಎಂಬ ಪದದಿಂದ ಉಪಾಯತ್ವ, ಪ್ರಾಪ್ಯತ್ವ, ರಕ್ಷಿತೃತ್ವಗಳು ಸಂಗ್ರಹಿಸಲ್ಪಟ್ಟವು. ಗುರುವನ್ನು ಪ್ರಾಪ್ಯ ಪ್ರಾಪಕ ಭಾವದಿಂದ ಆಶ್ರಯಿಸತಕ್ಕದ್ದೆಂಬುದು ಸಾತ್ವತ ತಂತ್ರದಲ್ಲಿ ವ್ಯಕ್ತವು.

**ಗುರುರೇವ ಪರಂ ಬ್ರಹ್ಮ ಗುರುರೇವ ಪರಾಗತಿಃ ।**
**ಗುರುರೇವ ಪರಾ ವಿದ್ಯಾ ಗುರುರೇವ ಪರಾಯಣಮ್ ॥**
**ಗುರುರೇವ ಪರಃ ಕಾಮೋ ಗುರುರೇವ ಪರಂ ಧನಮ್ ।**
**ಯಸ್ಮಾತ್ತದುಪದೇಷ್ಟಾಸೌ ತಸ್ಮಾದ್ಗುರುತರೋ ಗುರುಃ ॥**

ಎಂದು ಇರುತ್ತದೆ. ಆದುದರಿಂದ ಶ್ರೀವೇದಾಂತದೇಶಿಕರವರ ಪುತ್ರರು ತಮ್ಮ ತಂದೆಯ ವಿಷಯವಾದ ಸ್ತೋತ್ರದಲ್ಲಿ

**ಪಿತ್ರೇ ಬ್ರಹ್ಮೋಪದೇಷ್ಟ್ರೇ ಮೇ ಗುರವೇ ದೈವತಾಯ ಚ ।**
**ಪ್ರಾಪ್ಯಾಯ ಪ್ರಾಪಕಾಯಾಸ್ತು ವೇಂಕಟೇಶಾಯ ಮಂಗಳಮ್ ॥**

ಎಂದು ಸ್ತುತಿಸಿರುತ್ತಾರೆ. ಹಾಗೆಯೇ ಇನ್ನೊಂದು ಕಡೆಯಲ್ಲೂ :—

**ಧ್ಯಾಯೇಜ್ಜಪೇನ್ನಮೇದ್ಭಕ್ತ್ಯಾ ಭಜೇದಭ್ಯರ್ಚಯೇನ್ಮುದಾ ।**
**ಉಪಾಯೋಪೇಯಭಾವೇನ ತಮೇವ ಶರಣಂ ವ್ರಜ ೧**

ಎಂದು ಹೇಳಲ್ಪಟ್ಟಿರುತ್ತದೆ.

**ಅವತಾರಿಕೆ —** ಪುನರಪಿ ಶ್ರೀಮನ್ನಾಥಮುನಿಗಳೇ ತಮ್ಮ ನಿಷ್ಠೆಯನ್ನೇ ನಮಗೆಲ್ಲಾ ಉಪಾದೇಯವೆಂದು ತೋರಿಸಿ, ಹೀಗೆ ಲೋಕಸಂಗ್ರಹರೂಪ ಔದಾರ್ಯವನ್ನು ಪ್ರದರ್ಶಿಸಿದುದರಿಂದಲೂ, ತಮಗೆ ಪರಮ ಪುರುಷನಲ್ಲಿರುವ ಸಂಪೂರ್ಣ ಭಕ್ತಿಯನ್ನು ತತ್ವಜ್ಞಾನದೊಂದಿಗೆ ಅಮೃತ ಸದೃಶ ವಾಕ್ಕಿನ ಮೂಲಕ ಲೋಕೋಪಕಾರಕ್ಕಾಗಿ ಅವತರಿಸಿದವರೆಂದು ಭಾವಿಸಿ ನಮಸ್ಕರಿಸುತ್ತಾರೆ.

**ಅರ್ಥವು —** **ಅಪರಿಮಿತಾಚ್ಯುತಭಕ್ತಿತತ್ತ್ವಜ್ಞಾನಾಮೃತಾಬ್ಧಿಪರಿವಾಹಶುಭೈಃ —** ಆಶ್ರಿತ ಸಂರಕ್ಷಣವ್ರತದಿಂದ ಜಾರುವನಲ್ಲವನಾದುದರಿಂದ ಅಚ್ಯುತನು ಪರಮ ಪುರುಷನು. ಆತನಲ್ಲಿ ಅಪರಿಮಿತವಾದ ಭಕ್ತಿ ಮತ್ತು ತತ್ವ

ಜ್ಞಾನ, ಚಿದಚಿದೀಶ್ವರರೂಪ ತತ್ವತ್ರಯಜ್ಞಾನ ಇವುಗಳ ಅವ್ಮೃತವೆಂಬ ಸಮುದ್ರದ ಪ್ರವಾಹದ ಹಾಗೆ, **ಶುಭೈಃ** – ಮಂಗಳಕರವಾದ, **ವಚೋಭಿಃ** – ದಿವ್ಯ ಸೂಕ್ತಿಗಳಿಂದ ಎಂದರೆ ತತ್ವಹಿತ ಪುರುಷಾರ್ಥಗಳನ್ನು ಬಹು ಲಲಿತವಾಗಿಯೂ, ಹಿತವಾಗಿಯೂ, ಫಲಕಾರಿಯಾಗಿಯೂ ಆಗುವ ಹಾಗೆ ಭೋಧಿಸಿರುವ ದಿವ್ಯ ಸೂಕ್ತಿಗಳಿಂದ, **ಲೋಕೇ** – ಸಾತ್ವಿಕ ಶಿಖಾಮಣಿಗಳಿಂದ ತುಂಬಿದ ಈ ದೇಶ ಭಾಗದಲ್ಲಿ ಅಥವಾ ಕಲಿಕಾಲವಾದುದರಿಂದ ಅಸಾಧುಗಳಿಂದ ಕೂಡಿದ ಈ ಲೋಕದಲ್ಲಿ **ಅವತೀರ್ಣ ಪರಮಾರ್ಥ ಸಮಗ್ರ ಭಕ್ತಿ ಯೋಗಾಯ** – ವೀರನಾರಾಯಣ ಪುರದಲ್ಲಿ ಅವತರಿಸಿದ, **ಪರಮಾರ್ಥ** – ಸತ್ಯವಾದ, **ಸಮಗ್ರ** – ಸಂಪೂರ್ಣವಾದ ಎಂದರೆ ಅವ್ಯವಹಿತ ಸಾಧನವಾದ ಅಥವಾ ಕರ್ಮಯೋಗ, ಜ್ಞಾನಯೋಗರೂಪ ಅಂಗಗಳಿಂದ ಕೂಡಿದರೇನೇ ಅದು ಸಮಗ್ರ ಭಕ್ತಿಯೋಗವೆಂಬ ಭಾವವು. ಸಪರಿಕರವಾಗಿ ಸಂಪೂರ್ಣವಾದ, **ಭಕ್ತಿಯೋಗಾಯ** ಭಕ್ತಿಯೋಗವನ್ನುಳ್ಳ ಎಂದರೆ ಅನುಷ್ಠಿಸಿದ ಉಪಾಸನರೂಪವಾದ ಉಪಾಯವನ್ನವಲಂಬಿಸಿದ, **ಯಮಿನಾಂ ವರಾಯ** – ಭಗವಂತನಲ್ಲೇ ಸಕ್ತವಾದ ಕರಣತ್ರಯಗಳುಳ್ಳವರಾಗಿ ಸರ್ವೇಂದ್ರಿಯಗಳನ್ನು ಜಯಿಸಿದವರಲ್ಲಿ ಶ್ರೇಷ್ಠರಾದ, **ನಾಥಾಯ** ನಾಥಮುನಿಗಳಿಗೆ, **ಭೂಯಃ ನಮಃ** – ಪುನಃ ಪುನಃ ನಮಸ್ಕಾರವು.

**ಉಪಪಾದನೆಯು —** ಈಗ ಪ್ರಾರಂಭಿಸಿದ ಗ್ರಂಥವು ಪರಮಪುರುಷನ ಸ್ತುತಿಗಾಗಿ ಪ್ರವೃತ್ತಿಯುಳ್ಳದು ಹಾಗಿರಲಿ. ಅವರ ಶಿಷ್ಯರಾದ ಶ್ರೀಮಣಕ್ಕಾಲ ನಂಬಿಯವರಿಗೆ ಆಜ್ಞಾಪಿಸಿ ಆ ಶಿಷ್ಯರು ತಮಗೆಸಮಸ್ತ ರಹಸ್ಯಾರ್ಥ ಮೊದಲಾದುವುಗಳನ್ನು ಉಪದೇಶಿಸುವ ಹಾಗೆ ಮಾಡಿದ ಕೃತಜ್ಞತಾಭಾವಕ್ಕಾಗಿ ಪುನಃ ಪುನಃ ನಮಸ್ಕಾರವು, ದೇಹಾವಸಾನದ ವರೆಗೂಮಾಡಿದರೂ ತೀರದು ಎಂಬ ಭಾವದಿಂದ ಪುನಃಪುನಃ ನಮಸ್ಕರಿಸುತ್ತಾರೆ ಎಂಬಭಾವವು, ಸ್ವಾಮಿಯು ದಯಪಾಲಿಸಿ

ವಾದದಲ್ಲಿ ಗೆದ್ದ ಅರ್ಧರಾಜ್ಯಾಡಳಿತದಲ್ಲಿ ಮಗವಾಗಿದ್ದ ತಮ್ಮ ಮನಸ್ಸಿನಲ್ಲಿ ವೈರಾಗ್ಯ ಹುಟ್ಟುವಂತೆ ಉಪದೇಶಿಸಿ ರಾಜ್ಯವನುತ್ಯಾಗಮಾಡುವ ಹಾಗೆ ಮಾಡಿದ ಮಹೋಪಕಾರರಿಗೆ ಪುನಃ ಪುನಃ ನಮಸ್ಕರಿಸಬೇಡವೇಎಂಬ ತಾತ್ಪರ್ಯವು.

ಇವರು ಅನುಗ್ರಹಿಸಿದ **ಯೋಗ ರಹಸ್ಯ** ವೆಂಬ ಗ್ರಂಥವೇ ಶ್ರೀಯಾಮುನ ಮುನಿಗಳು ಅನುಗ್ರಹಿಸಿರುವ ಅಮೋಘ ಗ್ರಂಥಗಳಾದ **ಆಗಮ ಪ್ರಾಮಾಣ್ಯ, ಸಿದ್ಧಿತ್ರಯ** ಎಂಬ ಗ್ರಂಥಗಳಿಗೆ ಉಪಕಾರಕಗಳಾದುದರಿಂದ ವಿಶೇಷ ಕೃತಜ್ಞತೆಯು. ಆ ಕಾರಣದಿಂದಲೇ ಈ ಮೂರು ಶ್ಲೋಕಗಳಿಂದ ನಮಸ್ಕರಿಸುತ್ತಾರೆ.

**ಭೂಯೋ ನಮಃ** ಎಂಬೀ ನಮ್ಮ ಸಂಪ್ರದಾಯಕ್ಕೆ, ಮೂರು ಮುಖ್ಯರಾದ ನಾಥ ಯಾಮುನ ರಾಮಾನುಜರಾದ ಆಚಾರ್ಯರುಗಳಲ್ಲಿ ಒಬ್ಬರಾದವರ ದಿವ್ಯಸೂಕ್ತಿಯು, ಸರ್ವೇಶ್ವರನ ಮಹೋಪಕರದತಜ್ಞತಾ ಭಾವಕ್ಕೆ ಏಕ ಪ್ರಣಾಮವು ಸಾಲದು

ಎಂದುಅನೇಕನಲ ಪ್ರಣಾಮವೇ ಅರ್ಹವಾದುದೆಂಬುದನ್ನು ಸ್ಥಾಪಿಸುತ್ತದೆ. ಮತ್ತು ಇವರೇ ಇನ್ನೊಂದು ಕಡೆಯಲ್ಲಿ ಇದೇ ಗ್ರಂಥದಲ್ಲಿ **" ನಮೋ ನಮೋ ವಾಙ್ಮನ ಸಾತಿಭೂಮಯೇ "** ಎಂಬಲ್ಲೂ ಪುನಃ ಪುನಃ ಪ್ರಣಾಮವೇ ಸಂಪ್ರದಾಯವಾಗಿ ಭಾವಿಸಿರುತ್ತಾರೆ. ಹಾಗೆಯೇ ಇವರ ಶಿಷ್ಯರಾದ ಯತಿವರ್ಯರು **ಅವರ ವೈಕುಂಠ ಗದ್ಯದಲ್ಲಿ " ಪ್ರಣಮ್ಯೋತ್ಥಾಯೋತ್ಥಾಯ ಪುನಃ ಪುನಃ ಪ್ರಣಮ್ಯ "** ಎಂದು ಹೇಳಿರುವುದರಿಂದ ಸಂಪ್ರದಾಯವು **ಭೂಯೋ ನಮಃ** ಎಂದು ಹೇಳಿದಂತಾಯಿತು. ಆದುದರಿಂದ ಲೋಕ ಗುರುವಿಗೂ ನಹ ಭೂಯೋ ನಮಃ ವೇ ನ್ಯಾಯವು. ಮತ್ತು ಏಕ ಪ್ರಣಾಮವು **" ಪ್ರದಕ್ಷಿಣ ಪ್ರಣಾಮಾಂಶ್ಚ ಯುಗ್ಮಾನೇವ ಸಮಾಚರೇತ್ "** ಎಂಬ ವಾಕ್ಯಕ್ಕೂ ಸರಿಯಲ್ಲವು. ಈ ವಿಷಯದ ಚರ್ಚೆಗೆ ದಾಸನು ಬರೆದಿರುವ ಗುರು ಪರಂಪರಾ ಸಾರದ ೭–೮ ನೆಯ ಪುಟಗಳನ್ನು ಪರಾಂಬರಿಸಿ. ಶ್ರೀ ನಾಥಮುನಿಗಳ ಚರಿತ್ರೆಗೆ ೭೫–೮೧ ಪುಟಗಳನ್ನು ನೋಡಿ.

ಇಂತಹ ಉಪಯುಕ್ತ ಗ್ರಂಥಗಳನ್ನು ಅನುಗ್ರಹಿಸಿದುದನ್ನು ಮನಸ್ಸಿನಲ್ಲಿಟ್ಟೇ, **" ಅಚ್ಯುತ ಭಕ್ತಿ ತತ್ತ್ವ ಜ್ಞಾನಾಮೃತಾಬ್ಧಿ ಪರಿವಾಹ ಶುಭೈರ್ವಚೋಭಿಃ "** ಎಂಬುದರಿಂದ ಅವರ ದಿವ್ಯ ಸೂಕ್ತಿಗಳನ್ನು ಕೊಂಡಾಡಿರುತ್ತಾರೆ. **ಅಚ್ಯುತ** ಶಬ್ದದಿಂದ ಕಲ್ಯಾಣಗುಣಮಹೋದಧಿಯನ್ನು ಕೊಂಡಾಡಿರುತ್ತಾರೆ. ಅಚ್ಯುತನೆಂದರೆ. **'' ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ "** ಸರ್ವ ರಕ್ಷಕನೆಂದು ಭಾವಿಸಿ ಆಶ್ರಯಿಸಿದವನನ್ನು ಎಂದಿಗೂ ಬಿಡುವುದಿಲ್ಲವೆಂಬ ವ್ರತದಿಂದ ಬಿಟ್ಟುಹೋಗದವನೆಂಬರ್ಥವು; ಅಥವಾ ಯಾವ ಮಹಾನುಭಾವನಿಂದ ಭಕ್ತರುಗಳಿಗೆ ಚ್ಯುತಿಯಿಲ್ಲವೋ ಅವನು; ಅಥವಾ ಬ್ರಹ್ಮ ರುದ್ರೇಂದ್ರಾದಿಗಳು ತಮ್ಮ ತಮ್ಮ ಸ್ಥಾನದಿಂದ ಪ್ರಳಯಗಳಲ್ಲಿ ಜಾರುವವರು, ಅವರ ಹಾಗೆ ಜಾರದೇ ಶಾಶ್ವತಪದದಲ್ಲಿರುವವನು. ಇಂತಹ ಅಚ್ಯುತನ ವಿಷಯವಾದ ತತ್ವಜ್ಞಾನ ಮತ್ತು ಆತನಲ್ಲಿ ಭಕ್ತಿ ಇವುಗಳೇ ಒಂದು ಅಮೃತರೂಪ ಸಮುದ್ರವು. ಅದರ ಪ್ರವಾಹರೂಪವಾದ ಮಂಗಳಕರವಾದ ಸೂಕ್ತಿಗಳನ್ನುಳ್ಳವರೆಂದು ಹೇಳಲ್ಪಟ್ಟಿತು. ಇದರ ಅಭಿಪ್ರಾಯವೇನೆಂದರೆ; ಇವರೇ ವಿಶಿಷ್ಟಾದ್ವೈತ ಸಿದ್ಧಾಂತದ ಯಾಥಾರ್ಥ್ಯ ರೂಪ ತಳಹದಿಯನ್ನು ಪ್ರಥಮತಃ ಹಾಕಿದವರು. ವೇದಗಳಲ್ಲಿ ಐಕ್ಯ, ಭೇದ, ಘಟಕ, ಸ್ವರೂಪ ಶೋಧಕ, ಸಗುಣ ಪ್ರತಿಪಾದಕ, ಹೇಯಪ್ರತ್ಯನೀಕ ಬೋಧಕ, ನಿರ್ವಿಕಾರತ್ವ ಸೂಚಕ, ಮೊದಲಾದ ಶ್ರುತಿಗಳುಂಟು. ಇತರ ಸಿದ್ಧಾನ್ತಿಗಳು ಕೆಲವಕ್ಕೆ ಪ್ರಾಧಾನ್ಯವನ್ನೂ, ಇನ್ನು ಕೆಲವಕ್ಕೆ ಅಪ್ರಾಧಾನ್ಯವನ್ನೂ, ಕೊಡುವರು. ನಮ್ಮ ಸಿದ್ಧಾನ್ತಕ್ಕಾದರೋ ಎಲ್ಲವೂ ಪ್ರಾಧಾನ್ಯವಾಗಿ ಎಲ್ಲವೂ ಸಮಂಜಸವಾದುದ

ರಿಂದ, ತತ್ವತ್ರಯ ಜ್ಞಾನವೂ, ಆ ತತ್ವತ್ರಯಗಳಿಗೆ ಇರುವ ಸ್ವರೂಪ ಸ್ವಭಾವ ವೈಲಕ್ಷಣ್ಯ ಪ್ರದರ್ಶಕ ಜ್ಞಾನವೂ ಯಥಾರ್ಥವಾದುದರಿಂದ ಶ್ರೀನಾಥ ಮುನಿಗಳ ತತ್ವಜ್ಞಾನವನ್ನು ಅಮೃತಾಬ್ಧಿಗೆ ಹೋಲಿಸಿರುತ್ತಾರೆ. ಈ ಅಮೃತ ಶಬ್ದ ಸ್ವಾರಸ್ಯದಿಂದ ಆ ಜ್ಞಾನವು ಮೋಕ್ಷ ಪ್ರಾಪ್ತಿಗೆ ಹೇತುವಾಗುವ ಜ್ಞಾನವೆಂಬುದು ತೋರಿ ಬರುತ್ತದೆ. ಇವರ ಭಕ್ತಿಪರಿವಾಹವೂ ಅ ಸದೃಶವಾದುದೆಂಬುದು ಇವರ ಚರಿತ್ರೆಯಿಂದ ಏರ್ಪಡುತ್ತದೆ. ಇವರು ಪರಮ ಭಕ್ತಿಯಿಂದ ಸ್ವಾಮಿಯ ದಿವ್ಯಮಙ್ಗಳ ವಿಗ್ರಹವನ್ನು ಉಪಾಸಿಸಿ ಆ ಯೋಗ ಮಹಿಮೆಯಿಂದ ಬಹು ಕಾಲ(೩೩೦ ವರ್ಷಗಳು) ಜೀವಂತರಾಗಿದ್ದರೆಂದು ಹೇಳು ತ್ತಾರೆ. ಅದೂ ಅಲ್ಲದೆ ಸರ್ವೇಶ್ವರನು ಇವರ ಭಕ್ತಿಗೆ ಮೆಚ್ಚಿ, ನಮ್ಮಾಳ್ವಾರವರು ಪ್ರತ್ಯಕ್ಷವಾಗುವ ಹಾಗೆ ಭಕ್ತಿರಸದಿಂದ ತುಂಬಿ ತುಳುಕುವ ಅವರ ತಿರುವಾಯ್ ಮೊಳಿಯನ್ನೆಲ್ಲಾ ಉಪದೇಶಿಸುವ ಹಾಗೆ ಮಾಡಿದನು; ಅಂತಹ ದಿವ್ಯ ಪ್ರಬಂಧ ಸೇವೆಯು ಶ್ರೀವೈಕುಂಠ ಏಕಾದಶಿಯ ಸಮಯದಲ್ಲಿ ಗಾನಸಹಿತವಾಗಿ ಪಠನ ವಾಗುವ ಹಾಗೆ ಶ್ರೀರಙ್ಗ, ಕುಂಭಕೋಣ ಮೊದಲಾದ ದಿವ್ಯದೇಶಗಳಲ್ಲಿ ನಡೆಯುವ ಹಾಗೆ ಇವರುಮಾಡಿದರು. ಇಂತಹ ಭಕ್ತಿರಸ ಪೂರಿತ ಪ್ರಬಂಧಗಳ ನ್ನು ಭಕ್ತಿಯಿಂದ ಹಾಡುವ ಹಾಗೆ ದೇವಗಾನದ ಶಕ್ತಿಯನ್ನು ಸರ್ವೇಶ್ವರನು ಕೊಟ್ಟಿದ್ದನು. ಇವನ್ನೆಲ್ಲಾ ಮನಸ್ಸಿನಲ್ಲಿಟ್ಟೇ **ಅಚ್ಯುತ ಭಕ್ತಿ ತತ್ವ ಜ್ಞಾನಾಮೃತ ಪರಿವಾಹ ಶುಭೈರ್ವಚೋಭಿಃ** ಎಂಬ ಸಾರವತ್ತಾದ ಪ್ರಯೋಗವು.

ಹೀಗೆ ಲೋಕಸಂಗ್ರಹಾರ್ಥವಾಗಿ ಜನಿಸಿದ ಪುಣ್ಯಪುರುಷರಾದುದರಿಂದಲೇ **ಲೋಕೇವತೀರ್ಣಃ** ಎಂಬ ಪ್ರಯೋಗವು. ಇವರು ತಾವು ಅನುಷ್ಠಿಸಿದ ಭಕ್ತಿಯೋಗದ ರಹಸ್ಯವನ್ನರಿತು ಎಲ್ಲರೂ ನಿರತಿಶಯ ಸುಖಪ್ರಾಪ್ತಿಗಾಗಿ ಯತ್ನಿಸಲಿ ಎಂಬ ಉದಾರಭಾವದಿಂದ **ಯೋಗರಹಸ್ಯ** ವೆಂಬ ಗ್ರಂಥವನ್ನು ಅನುಗ್ರಹಿಸಿ ದುದನ್ನೇ ಮನಸ್ಸಿನಲ್ಲಿಟ್ಟು **ಪರಮಾರ್ಥಸಮಗ್ರಭಕ್ತಿಯೋಗಾಯ** ಎಂದು ಪ್ರಯೋಗಿಸಿರುತ್ತಾರೆ. ಹೀಗೆ ಮೂರು ಶ್ಲೋಕಗಳಿಂದ ಗುರುವಂದನೆಯನ್ನು ಮಾಡಿದುದು ಇವರಿಗೆ ಗುರುವಿನಲ್ಲಿರುವ ನಿರತಿಶಯ ಭಕ್ತಿಯನ್ನು ಪ್ರಕಟಿಸುತ್ತದೆ. ಇದರ ಸಮರ್ಥನೆಗಾಗಿ ಶ್ರೀ ನಿಗಮಾನ್ತ ದೇಶಿಕರವರು

**ಗುರುಪಾದಾಂಬುಜಂ ಧ್ಯಾಯೇದ್ಗುರೋರ್ನಾಮ ಜಪೇತ್ಸದಾ ।**
**ಗುರೋರ್ವಾರ್ತಾಂ ಕಥಾಂಚೈವ ಗುರೋರನ್ಯಂ ನ ಭಾವಯೇತ್ ॥**

ಎಂಬುದನ್ನು ಉದಾಹರಿಸಿರುತ್ತಾರೆ. **ಯಮಿನಾಂವರರು** ಏತರಿಂದ ಎಂದರೆ ಅತ್ಯುತ್ತಮವಾದ ಯೋಗವನ್ನು ಕೈಕೊಂಡಿರುವುದರಿಂದ; ಅಂತಹ ಯೋಗವು ಯಾವುದೆಂದರೆ ಪರಮಪುರುಷನನ್ನು ಪರಭಕ್ತಿಯಿಂದ ಉಪಾಸಿಸುವದೇ ಎಂದು

“ **ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**

**ಮೂ. —** **ತತ್ತ್ವೇನ ಯಶ್ಚಿದಚಿದೀಶ್ವರ ತತ್ಸ್ವಭಾವ**
**ಭೋಗಾಪವರ್ಗತದುಪಾಯಗತೀ ರುದಾರಃ ।**
**ಸಂದರ್ಶಯನ್ನಿರಮಿಮೀತ ಪುರಾಣರತ್ನಂ**
**ತಸ್ಮೈ ನಮೋ ಮುನಿವರಾಯ ಪರಾಶರಾಯ ॥ ೪ ॥**

---

**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥ "**
( ಗೀ. ೬. ೪೭. ) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ॥ ೩ ॥

**ಅವತಾರಿಕೆ —** ಹೀಗೆ ತಮಗೆ ಅತ್ಯಂತೋಪಕಾರಕರಾಗಿಯೂ, ಪಿತಾಮಹರಾಗಿಯೂ, ಗುರುಗಳಾಗಿಯೂ ಇರುವ ನಾಥಮುನಿಗಳನ್ನು ಮೂರು ಶ್ಲೋಕಗಳಿಂದ ಮನ ದಣಿಯುವ ಹಾಗೆ ವಂದಿಸಿ, ಇವರೆಲ್ಲರಿಗೂ ಅಂತಹ ತತ್ವತ್ರಯ ಯಾಥಾರ್ಥ್ಯ ಜ್ಞಾನವನ್ನು ನಿಪುಣತರವಾಗಿ ತಮ್ಮ ಪುರಾಣದಲ್ಲಿ ತಮ್ಮ ಶಿಷ್ಯರಿಗೆ ಉಪದೇಶಿಸಿ, ಹೀಗೆ ಸಿದ್ಧಾಂತವನ್ನು ಸ್ಥಾಪಿಸಿದುದರಿಂದ ತಮ್ಮ ಗ್ರಂಥಕ್ಕೆ ಪುರಾಣರತ್ನವೆಂಬ ಬಿರುದನ್ನು ಸಂಪಾದಿಸಿದ ಶ್ರೀಪರಾಶರ ಮಹರ್ಷಿಯನ್ನು ಕೊಂಡಾಡುತ್ತಾರೆ. ಹೀಗೆ ಕೊಂಡಾಡಿದುದರಿಂದ ಅವರು ಮಾಡಿದ ಪರಮೋಪಕಾರಕ್ಕೆ ಕೃತಜ್ಞತೆಯನ್ನು ತೋರಿಸಿದುದೂ ಅಲ್ಲದೆ, ಅವರ ಪುತ್ರಪೌತ್ರರಾದ ಶ್ರೀ ವ್ಯಾಸ ಶುಕಮಹರ್ಷಿಗಳಿಗೂ ಲೋಕೋಪಕೃತಿಗಾಗಿಯೂ ಕೃತಜ್ಞತೆಯನ್ನೂ ಸೂಚಿಸದಂತೆಯೂ ಆಯಿತು. ಹೀಗೆ ಈ ಮೂವರು ಮಹರ್ಷಿಗಳ ಲೋಕೋಪಕಾರವು ಚಿರಸ್ಮರಣೀಯವಾಗಿರುವುದರಿಂದ, ಅವರುಗಳ ಋಣಪ್ರೀತ್ಯರ್ಥವಾಗಿ ನಾವುಗಳು ನಿತ್ಯವೂ ದೇವರ್ಷಿಪಿತೃತರ್ಪಣವನ್ನು ಅನುಷ್ಠಿಸಿ, ಸ್ವಾಮಿಯಲ್ಲಿ ಸಮರ್ಪಿಸುವೆವು. ಆದುದರಿಂದ ಈ ಪರಾಶರರ ವಂದನೆಯು ಅತ್ಯಾವಶ್ಯಕವೆಂದು ಭಾವಿಸಿ ಅವರನ್ನು ನಮಿಸುತ್ತಾರೆ.

ಶ್ರೀಪರಾಶರರು ಮಾಡಿದ ಮಹೋಪಕಾರಕ್ಕಾಗಿ ಅವರ ಗ್ರಂಥವನ್ನೂ ಮತ್ತು ಅವರು ಬರೆದ ಪುರಾಣೋಪದೇಶವನ್ನೂ ಸರಿಯಯಾಗಿ ಯಾರಾದರೂ ಪ್ರಚುರಪಡಿಸಬೇಕೆಂಬ ಕೊರತೆಯು ಇವರನ್ನು ದೇಹಾವಸಾನಕಾಲದಲ್ಲೂ ಬಾಧಿಸುತ್ತಿತ್ತು. ಅದನ್ನು ಶ್ರೀಯತಿವರ್ಯರು, ಶ್ರೀರಂಗನಾಯಕಿಯಲ್ಲಿ ಮಾಡಿದ ಶರಣಾಗತಿಯ ಫಲವಾಗಿ ಅವರ ಪ್ರಿಯ ಶಿಷ್ಯರಾದ ಕೂರೇಶರಿಗೆ ಪುತ್ರರು ಜನಿಸಿ, ಮಹರ್ಷಿಯ ನಾಮವನ್ನೇ ಧರಿಸಿ ಸಹಸ್ರನಾಮ ಭಾಷ್ಯಾದಿಗಳನ್ನು ರಚಿಸಿ ವಿಷ್ಣು ಸರ್ವೋತ್ತಮತ್ವವನ್ನು ಸಮರ್ಥಿಸುವ ಹಾಗೆ ಮಾಡಿ, ಶ್ರೀವಾಲ್ಮೀಕಿಮಹರ್ಷಿಯು **" ಅಧಿಕಂಮೇನಿರೇ ವಿಷ್ಣುಮ್ "** ಎಂದು ಸ್ಥಾಪಿಸಿದಹಾಗೆ ಸಿಧ್ಧಾನ್ತಿಸಿದುದರ ಮೂಲಕ ಪರಿಹಾರಮಾಡಿದರು.

**ಅರ್ಥವು :—** **ಯಃ** - ಯಾವ ಚತುರ್ಮುಖ ಬ್ರಹ್ಮನ ನಪ್ತೃವಾಗಿಯೂ

(ಮೊಮ್ಮಕ್ಕಳ ಮಕ್ಕಳು) ವಸಿಷ್ಠಮಹರ್ಷಿಯ ಪೌತ್ರರಾಗಿಯೂ, ಪ್ರಸಿದ್ಧರಾದ ಶ್ರೀ ಪರಾಶರ ಮಹರ್ಷಿಯು, **ತತ್ತ್ವೇನ** – ಯಥಾರ್ಥವಾಗಿ, ಏನೊಂದೂ ಭ್ರಮೆಯಿಲ್ಲದೆ, ಶ್ರುತಿಯಲ್ಲಿ ಹೇಗೆ ಹೇಳಿರುತ್ತದೋ ಹಾಗೆ, **ಚಿದ ಚಿದೀಶ್ವರ ತತ್ಸ್ವಭಾವ ಭೋಗಾಪವರ್ಗ ತದುಪಾಯಗತೀಃ** ಮೂರು ವಿಧಗಳಾದ ಚೇತನರು, ಮೂರು ವಿಧವಾದ ಅಚೇತನ, ಇವುಗಳಿಂದ ಕೂಡಿದ ಈಶ್ವರ, ಹೀಗೆ ಈ ಮೂರು ತತ್ವಗಳ ಸ್ವರೂಪವೇನು, ಸ್ವಭಾವವೇನು, **ಭೋಗ**- ಪರಮಾತ್ಮನು ಅನುಗ್ರಹಿಸುವ ಐಹಿಕ ಮತ್ತು ಸ್ವರ್ಗಾದಿ ಇತರ ಲೋಕಗಳ ಭೋಗವೇನು ಮತ್ತು **ಅಪವರ್ಗ** - ಪರಿಪೂರ್ಣ ಬ್ರಹ್ಮಾನುಭವರೂಪ ಮೋಕ್ಷ ಸುಖವೇನು, **ತದುಪಾಯ** - ಅವುಗಳನ್ನು ಹೊಂದುವ ಸಾಧನಗಳೇನು, **ಗತೀಃ**- ಆ ಸಾಧನಗಳನ್ನು ಅನುಷ್ಠಿಸಿದವರು ಅವುಗಳನ್ನು ಹೊಂದುವ ಮಾರ್ಗ ಗಳೇನು, ಅರ್ಚಿರಾದಿ ಧೂಮಾದಿ ಗತಿಗಳೇನು, ಇವೆಲ್ಲವನ್ನೂ, **ಉದಾರಃ** - ಯಾವ ಪ್ರತಿಫಲವನ್ನೂ ತಮ್ಮ ಶಿಷ್ಯರಿಂದ ಅಪೇಕ್ಷಿಸದೇ ಉದಾರರಾಗಿ **ಸಂದರ್ಶಯನ್** - ಮೂರು ಭ್ರಮಗಳಿಗೂ ಆಸ್ಪದವಿಲ್ಲದ ಹಾಗೆ ವ್ಯಕ್ತವಾಗಿ ನಿಪುಣತರವಾಗಿ ಉಪದೇಶಿಸುವವರಾಗಿ, **ಪುರಾಣರತ್ನಂ** - ಅಷ್ಟಾದಶ ಪುರಾಣ ಗಳೆಲ್ಲಿಲ್ಲಾ ಸರ್ವೋತ್ಕೃಷ್ಟಪುರಾಣವಾದ ವಿಷ್ಣುಪುರಾಣವನ್ನು, **ನಿರಮಿಮೀತ** ತಮ್ಮ ಶಿಷ್ಯರಾದ ಮೈತ್ರೇಯರನ್ನೂ, ತನ್ಮೂಲಕವಾಗಿ ಸಮಸ್ತಲೋಕದ ಅನು ಗ್ರಹಕ್ಕಾಗಿ ನಿರ್ಮಾಣಮಾಡಿದರೋ, **ತಸ್ಮೈ**- ಅಂತಹ ಪ್ರಸಿದ್ಧರಾದ, **ಮುನಿ ವರಾಯ**- ಪರಬ್ರಹ್ಮಮನನಶೀಲರಾದ ಮುನಿಗಳಲ್ಲೆಲ್ಲಾ ಶ್ರೇಷ್ಠರಾದ, **ಪರಾ ಶರಾಯ**= ಶ್ರೀಪರಾಶರ ಮಹರ್ಷಿಗೆ, **ನಮಃ**- ನಮಸ್ಕಾರವು. ॥ ೪ ॥

**ಉಪಪಾದನೆಯು —** ಶ್ರೀಪರಾಶರರ ದಿವ್ಯನಾಮವು ಸಾರ್ಥವಾದುದು. **ಪರಾನ್**- ಬಾಹ್ಯ ಕುದೃಷ್ಟಿಗಳನ್ನು, **ಪ್ರಮಾಣತರ್ಕಶರೈಃ**- ಪ್ರಮಾಣತರ್ಕ ವೆಂಬ ಬಾಣದಿಂದ, **ಆಶೃಣಾತಿ**- ಹಿಂಸಿಸುವರಾದುದರಿಂದ ಶ್ರೀಪರಾಶರರೆಂಬ ನಾಮಧೇಯ.ವು. ಹೀಗೆ ಬಾಹ್ಯ ಕುದೃಷ್ಟಿಗಳೆನ್ನೆಲ್ಲಾ ತಮ್ಮ ಯಥಾರ್ಥಜ್ಞಾನ ದಿಂದ ನಿರಾಕರಿಸಿದುದರಿಂದಲೇ, **ತತ್ತ್ವೇನ** ಎಂಬ ಪ್ರಯೋಗವು. ವೇದಾರ್ಥ ಗಳನ್ನು ಗ್ರಹಿಸುವುದು ಕಷ್ಟವು. ಗುರುಗಳ ಉಪದೇಶ ಸಂಸ್ಕಾರವಿಲ್ಲದೆ ದೊರೆ ಯುವುದಿಲ್ಲವು. ಹಾಗಾದರೆ ಈ ಮಹನೀಯರಿಗೆ ಅಂತಹ ಸುಸಂಸ್ಕಾರವು ಹೇಗೆ ದೊರೆಯಿತು ? ಎಂದರೆ, ಆ ವಿಷ್ಣುಪುರಾಣದ ಆದಿಯಲ್ಲೇ ಇತಿಹಾಸವು ಉಪ ಪಾದಿತವು. ಒಂದು ದಿವಸ ಮುನಿವರರಾದ ಶ್ರೀ ಪರಾಶರಮಹರ್ಷಿಯು ಪೂರ್ವಾ ಹ್ಣಿಕ ಕ್ರಿಯೆಗಳನ್ನೆಲ್ಲಾ ಮುಗಿಸಿ ಕುಳಿತಿರುವಾಗ ಅವರ ಶಿಷ್ಯರಾದ ಶ್ರೀ ಮೈತ್ರೇಯರು ಬಂದು ಪ್ರದಕ್ಷಿಣ ನಮಸ್ಕಾರಗಳನ್ನೆಸಗಿ ಚಿದಚಿದೀಶ್ವರರಾದ ತತ್ವತ್ರಯಗಳ ಸ್ವರೂಪ ಸ್ವಭಾವಗಳ ಮತ್ತೂ ಜಗತ್ಕಾರಣತ್ವ ಮೊದಲಾದ

ಅನೇಕ ವಿಷಯವಾಗಿ ಪ್ರಶ್ನಿಸುತ್ತಾರೆ. ಪರಮೋದಾರರಾದ ಜ್ಞಾನಾಗ್ರೇಸರರು ತಮ್ಮ ಶಿಷ್ಯರನ್ನು ಕುರಿತು ಹೇಳುತ್ತಾರೇನೆಂದರೆ, " ವಿಶ್ವಾಮಿತ್ರರಿಂದ ಪ್ರೇರಿತನಾದ ಒಬ್ಬ ರಾಕ್ಷಸನು ಬಂದು ನನ್ನ ಪಿತಾವನ್ನು ಕೊಂದು ತಿಂದನು. ಇದಕ್ಕೆ ನಾನು ಕುಪಿತನಾಗಿ ಲೋಕವು ಅರಾಕ್ಷಸವಾಗಿ ಆಗುವದಕ್ಕಾಗಿ ಯಜ್ಞವನ್ನು ಆರಂಭಿಸಿ ಅನೇಕ ರಾಕ್ಷಸರು ಹತರಾಗುವ ಹಾಗೆ ಮಾಡಿದೆನು. ಆಗ ನನ್ನ ಪಿತಾಮಹರಾದ ವಸಿಷ್ಠಮಹರ್ಷಿಯು ಬಂದು ನನಗೆ ವಿವೇಕವನ್ನು ಬೋಧಿಸಿ ಅನಿಷ್ಟವಾದ ಕೋಪವನ್ನು ತ್ಯಾಗಮಾಡಿ ಯಜ್ಞವನ್ನು ನಿಲ್ಲಿಸು, ಕರ್ಮಾನುಸಾರವಾಗಿ ಸ್ವಾಮಿಸಙ್ಕಲ್ಪದಿಂದ ನಡೆದು ಹೋದ ವಿಷಯದಲ್ಲಿ ಕ್ರೋಧವು ಜ್ಞಾನಿಗೆ ಸರಿಯಲ್ಲವು. ಸಾಧುಗಳಿಗೆ ಕ್ಷಮೆಯೇ ಸಾರಭೂತವಾದುದು ಎಂದು ಉಪದೇಶಿಸಿದುದರಿಂದ, ನಾನು ಬಾಢಂ ಎಂದು ಹೇಳಿ ಯಜ್ಞವನ್ನು ನಿಲ್ಲಿಸಿದೆನು. ಅನಂತರ ನನ್ನಲ್ಲಿಗೆ ಚತುರ್ಮುಖರ ಪುತ್ರರಾದ ಪುಲಸ್ತ್ಯರು ಬಂದು, ನೀನು ಪಿತಾಮಹರ ಬುದ್ಧಿವಾದಕ್ಕೆ ಮರ್ಯಾದೆಯನ್ನು ಕೊಟ್ಟುದುದರಿಂದ ನೀನು ಸಕಲ ಶಾಸ್ತ್ರಪ್ರವೀಣನಾಗಿ ದೇವತಾಪಾರಮಾರ್ಥ್ಯ ಮೊದಲಾದ ಸರ್ವಶಾಸ್ತ್ರಾರ್ಥಗಳನ್ನೂ ಒಳಗೊಂಡಿರುವ ಅತ್ಯುತ್ತಮವಾದ ವಿಷ್ಣುಪುರಾಣವನ್ನೂ ಒಂದು ಸಂಹಿತೆಯನ್ನೂ ರಚಿಸುವಿ ಎಂದು ಹೇಳಿ, ನನ್ನ ಪಿತಾಮಹರೂ, ಪುಲಸ್ತ್ಯರೂ ಹೊರಟು ಹೋದರು. ಅಂತಹ ಇಬ್ಬರು ಮಹನೀಯರ ತಪಃಪ್ರಭಾವದಿಂದ ಹರಿಸಿದ ಸಂಸ್ಕಾರಬಲದಿಂದ, ಓ ಮೈತ್ರೇಯರೇ, ನೀವು ಕೇಳಿದ ಸರ್ವ ಪ್ರಶ್ನೆಗಳಿಗೂ ಉತ್ತರವನ್ನು ಈ ಸಾರತಮವಾದ ವಿಷ್ಣುಪುರಾಣದ ಮೂಲಕ ಹೇಳುವೆನು, ಸಾವಧಾನದಿಂದ ಕೇಳು " ಎಂದು ಉಪದೇಶಿಸಿದುದರಿಂದ, ಗುರು ಸಂಸ್ಕಾರ ಬಲವು ಇವರಿಗೆ ಸರ್ವಾತಿಶಯವಾದುದಾಗಿತ್ತೆಂಬುದು ವ್ಯಕ್ತವು. ಹೀಗೆ ಪುಲಸ್ತ್ಯ ವಸಿಷ್ಠ ವರಪ್ರಸಾದದಿಂದ ಪ್ರಾಪ್ತವಾದ ದೇವತಾ ಪಾರಮಾರ್ಥ್ಯವನ್ನು ಕುರಿತ ಜ್ಞಾನವುಳ್ಳವರಾಗಿ ಶ್ರೀಪರಾಶರರು ಮಹಾಪ್ರಸಿದ್ಧರು. ಜ್ಞಾನ ನಿಧಿಗಳಲ್ಲೆಲ್ಲಾ ಪ್ರಥಮೋದಾಹರಣೆಗೆ ಯೋಗ್ಯರಾದ ಶ್ರೀ ವ್ಯಾಸಮಹರ್ಷಿಗೆ ತಂದೆಯಾಗಿ ಪ್ರಸಿದ್ಧರೆಂದು, ಶ್ರುತಿಯಲ್ಲೂ " **ಸಹೋವಾಚ ವ್ಯಾಸಃ ಪಾರಾಶರ್ಯಃ** " ಎಂದು ಕೊಂಡಾಡಲ್ಪಟ್ಟಿರುತ್ತಾರೆ. ವ್ಯಾಸರಿಗೆ ಪ್ರಾಶಸ್ತ್ಯವು ಪಾರಾಶರ್ಯರಾದುದರಿಂದ, ಪರಾಶರ ಪುತ್ರರಾದುದರಿಂದ ಎಂಬ ಭಾವವು. "**ಪಾರಾಶರ್ಯವಚಸ್ಸುಧಾಂ**" ಎಂಬುದೂ ಅನುಸಂಧೇಯವು.

ತತ್ವಗಳು ಮೂರೆಂದು ಶ್ರುತಿ ಸ್ಮೃತಿಗಳಲ್ಲೆಲ್ಲಾ ಹೇಳಿರುವುದರಿಂದ **ಚಿದಚಿದೀಶ್ವರ**ರೆಂದು ಇಲ್ಲಿ ಹೇಳಲ್ಪಟ್ಟಿತು. ಇವು ಮೂರೂ ಒಟ್ಟಿಗೆ ಇರುವುವು. ಚೇತನ ವರ್ಗ ಅಚೇತನವರ್ಗ ಇವೆರಡನ್ನೂ ಸರ್ವೇಶ್ವರನು ವ್ಯಾಪಿಸಿ, ಅವುಗಳಿಗೆ ಆತ್ಮಾವಾಗಿ ನಿಯಾಮಕನಾಗಿರುವನು. ಇದೀಗ ವಿಶಿಷ್ಟಾದ್ವೈತ

ಸಿದ್ಧಾನ್ತವು. ಹೀಗೆ ಬೋಧಿಸುವ ಅನೇಕ ಪ್ರಮಾಣಗಳುಂಟು. ಅವುಗಳಲ್ಲಿ ಕೆಲವನ್ನು ಉದಾಹರಿಸುವೆವು:—

(೧) **ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ,** ಅರ್ಥವು ವ್ಯಕ್ತವು. (೨) **ಕ್ಷರಂ ಪ್ರಧಾನಂ, ಅಮೃತಾಕ್ಷರಂ ಹರಃ, ಕ್ಷರಾತ್ಮಾನೌ ಈಶತೇ ದೇವ ಏಕಃ** —ಕ್ಷರವೆಂಬುದು ಅಚೇತನವು, ಮತ್ತು ಸ್ವರೂಪ ವಿಕಾರವಿಲ್ಲದ ಅಚೇತನವರ್ಗವು, ಹರಃ - ಸಮಸ್ತ ಅಚೇತನವರ್ಗವೂ ಭೋಗ್ಯವಾದುದೆಂದು ಅದನ್ನು ಅಪಹರಿಸಿ ಅನುಭವಿಸುವ ಜೀವ ತತ್ವವು, ಇವೆರಡನ್ನೂ ಸರ್ವೇಶ್ವರನು ನಿಯಮಿಸುವನು.

(೩) **ಸಕಾರಣಂ ಕರಣಾಧಿಪೋಽಧಿಪಃ** — ಇಂದ್ರಿಯಗಳಿಗೆ ಅಧಿಪನಾದ ಚೇತನವರ್ಗ ಮತ್ತು ಇಂದ್ರಿಯ ಶಬ್ದದಿಂದ ಸರ್ವ ಅಚಿದ್ವರ್ಗಕ್ಕೂ ಒಡೆಯನಾದ ಸರ್ವೇಶ್ವರನು, ಆತನೇ ಎಲ್ಲಕ್ಕೂ ಕಾರಣನು.

(೪)· **ಪ್ರಧಾನ ಕ್ಷೇತ್ರಜ್ಞಪತಿರ್ಗುಣೇಶಃ** — ಅಚೇತನ ಚೇತನ ಇವೆರಡಕ್ಕೂ ಸ್ವಾಮಿಯಾದ ಕಲ್ಯಾಣಗುಣಾಕರನು. ಹೀಗೆ ಇನ್ನೂ ಅನೇಕ ಪ್ರಮಾಣಗಳಿವೆ. ಹಾಗೆಯೇ ಗೀತೆಯಲ್ಲೂ,

(೫) **ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ । ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ॥ ಜೀವಭೂತಾಂ ಮಹಾಬಾಹೋ.** ನನ್ನ ಶರೀರವಾಗಿ ನಾನು ಅವುಗಳಿಗೆ ಆತ್ಮಾವಾಗಿರುವ ಎರಡು ಪಕ್ಕೃತಿಗಳುಂಟು. ಅಪರಾ ಪ್ರಕೃತಿಯು, ಸ್ವರೂಪಸ್ವಭಾವ ವಿಕಾರವುಳ್ಳದು ಅಚೇತನವು, ಅದು ಎಂಟು ವಿಧವು; ಇನ್ನೊಂದು ಸ್ವರೂಪ ವಿಕಾರವಿಲ್ಲದೆ ಸ್ವಭಾವ ಮಾತ್ರ ವಿಕಾರವುಳ್ಳದಾದುದಾಗಿ ಶ್ರೇಷ್ಠವಾದ ಪ್ರಕೃತಿಯು; ಅದು ಚೇತನ ವರ್ಗವು. (ಗೀ. ೭. ೪-೫.)

(೬) **"ಮಯಾಧ್ಯಕ್ಷೇಣ ಪ್ರಕೃತಿಸ್ಸೂಯತೇ ಸಚರಾಚರಮ್"** (ಗೀ. ೯. ೧೦.) ಚರಾಚರಗಳೆರಡನ್ನೂ ನಾನು ನಿಯಾಮಕನಾಗಿ ಸೃಷ್ಟಿಸುವೆನು. ಹೀಗೆ ವಿಷ್ಣುಪುರಾಣದಲ್ಲಿ ತತ್ವತ್ರಯವನ್ನು ಎಲ್ಲಿ ಉಪಪಾದಿಸಿರುತ್ತದೆ? ಎಂದು ಕೇಳಿದರೆ, ಅನೇಕ ಪ್ರಮಾಣಗಳಲ್ಲಿ ಒಂದನ್ನು ತಿಳಿಸುವೆವು.

**ವಿಷ್ಣೋಃಸ್ವರೂಪಾತ್ಪರತೋದಿತೇ ದ್ವೇ ಸ್ವರೂಪೇ ಪ್ರಧಾನಂ ಪುರುಷಶ್ಚ ವಿಪ್ರ । ತಸ್ಯೇವ ಯೇಽನ್ಯೇನ ಧೃತೇ ವಿಯುಕ್ತೇ ರೂಪಾನ್ತರಂ ತದ್ದ್ವಿಜ ಕಾಲ ಸಂಜ್ಞಮ್ ॥** ಈ ಸಾರತಮ ಪುರಾಣದಲ್ಲಿ ಹೇಳಿರುವುದು ಏನೆಂದರೆ :— ಅಚೇತನವು - ಪ್ರಕೃತಿ, ಕಾಲ, ಶುದ್ಧ ಸತ್ವವೆಂದು ಮೂರು ವಿಧವೆಂದೂ, ಚೇತನವು - ನಿತ್ಯ ಮುಕ್ತಬದ್ಧರೆಂದು ಮೂರು ವಿಧವೆಂದೂ, ಈಶ್ವರ ತತ್ವವು

ಶ್ರಿಯಃಪತಿಯಾಗಿ ನಿಸ್ಸಮಾಭ್ಯಧಿಕನಾಗಿ ಒಬ್ಬನೇ ಎಂದೂ ಹೇಳಲ್ಪಟ್ಟಿರುತ್ತದೆ. ಈಶ್ವರನಿಗೆ ಎಲ್ಲಾ ಚೇತನಾಚೇತನಾತ್ಮಕವಾದ ಜಗತ್ತೆಲ್ಲಾ ಶರೀರವು, ಆತನು ಅವುಗಳಿಗೆಲ್ಲಾ ಆತ್ಮಾವಾಗಿ ಸತ್ತಾದಾಯಕನು. ಇವೆಲ್ಲಾ ಅನಾದಿಯಾಗಿ ಇರುತ್ತವೆ.

**ಪ್ರಕೃತಿ** - ಸತ್ವರಜಸ್ತಮೋ ಗುಣಗಳಿಂದ ಸತತ ವಿಕಾರವನ್ನು ಹೊಂದವಂಥಾದ್ದು. ಸ್ವರೂಪ ಸ್ವಭಾವಗಳೆರಡರಲ್ಲೂ ವಿಕಾರವು. ಇದಕ್ಕೆ ಜ್ಞಾನವಿಲ್ಲವು. ಇದು ಇತರರಿಗೆ ಮಾತ್ರವೇ ಪ್ರಕಾಶವು. ಆದುದರಿಂದ ಇದು ಜಡವೆಂದು ಹೇಳಲ್ಪಡುತ್ತದೆ. ಇದರಲ್ಲಿ ಪ್ರಕೃತಿಗಳೆಂಟೆಂದೂ ವಿಕೃತಿಗಳು ಹದಿನಾರೆಂದೂ ಹೀಗೆ ಇಪ್ಪತ್ತನಾಲ್ಕು ವಿಭಾಗಗಳು. ಇನ್ನೊಂದು ವಿಧವಾಗಿಯೂ ವಿಭಾಗಿಸುತ್ತಾರೆ.-

ಮೂಲಪ್ರಕೃತಿ, ಅಹಂಕಾರ, ಮಹತ್ತತ್ವಗಳು - ೩; ಪಂಚ ತನ್ಮಾತ್ರಗಳೂ ಪಂಚ ಭೂತಗಳು - ೧೦; ಮನಸ್ಸು, ದಶೇಂದ್ರಿಯಗಳು - ೧೧, ಹೀಗೆ ೨೪. ಇದು ಅನಂತವಾದುದು. ಇದಕ್ಕೆ **ಮಿಶ್ರತತ್ವ, ತ್ರಿಗುಣ, ಮಾಯಾ** ಇತ್ಯಾದಿ ಹೆಸರುಗಳುಂಟು; **ಕಾಲವು** ಇದೂ ಅನಾದಿಯು. ಇದರ ಮಾಹಾತ್ಮ್ಯಯಿಂದ ಅಚೇತನಕ್ಕೆ ಸ್ವರೂಪ ಸ್ವಭಾವಗಳಲ್ಲಿ ವಿಕಾರವೂ, ಬದ್ಧ ಚೇತನನಿಗೆ ಸ್ವಭಾವದಲ್ಲಿ ವಿಕಾರವೂ, ಜನ್ಮ ಜರಾ ಮರಣಾದಿಗಳಿಂದ ಆತನ ಶರೀರಕ್ಕೆ ವಿಕಾರವೂ ಉಂಟಾಗುವುದರಿಂದ ಈ ಅಶಾಶ್ವತ ಲೋಕಗಳಲ್ಲಿ ಕಾಲವು ಪ್ರಭುವೆಂದು ಹೇಳಿಸಿ ಕೊಳ್ಳುತ್ತದೆ. ಈ ಲೋಕಗಳ ಸೃಷ್ಟಿ ಸ್ಥಿತಿ ಲಯಗಳಿಗೂ ಕಾರಣವು. ಇದಕ್ಕೆ ಸತ್ವಶೂನ್ಯವೆಂಬ ಹೆಸರೂ ವುಂಟು. ವೈಕುಂಠದಲ್ಲಿ ಕಾಲವು ಅಸ್ವತಂತ್ರವು. ವಿಷ್ಣುಪುರಾಣದ ೧. ೨. ೨೬; ೪. ೧. ೮೪.

**ಶುದ್ಧ ಸತ್ವವು** - ಇದರ ಹೆಸರಿಗೆ ಅನುಗುಣವಾಗಿ ರಜಸ್ಸು ತಮಸ್ಸುಗಳಿಂದ ಸೇರದೇ ಇರುವಂಥಾದ್ದು. ನಿತ್ಯವಾಗಿ ದಿವ್ಯ ವೈಕುಂಠದ ಮಂಟಪ ಗೋಪುರಾದಿಗಳಾಗಿರುವ ದ್ರವ್ಯವು, ನಿತ್ಯರೂ, ಮುಕ್ತರೂ, ಧರಿಸುವ ಶರೀರಗಳೂ ಮತ್ತು ಈಶ್ವರನ ಅವತಾರ ವಿಗ್ರಹಗಳೂ ಶುದ್ಧ ಸತ್ವಮಯವಾದುವು. ಶ್ರೀ ಪರಾಶರರು "**ತ್ರಿಗುಣಂ ತಜ್ಜಗದ್ಯೋನಿ ರನಾದಿ ಪ್ರಭವಾಪ್ಯಯಮ್ । ವ್ಯಕ್ತಾ ವ್ಯಕ್ತೇ ತಥೈವಾನ್ಯೇ ರೂಪೇ ಕಾಲಸ್ತಥಾಪರಃ ॥ ಕಲಾಮುಹೂರ್ತಾದಿಮಯಶ್ಚ ಕಾಲೋ ನಯದ್ವಿಭೂತೇಃ ಪರಿಣಾಮಹೇತುಃ**" ಇತ್ಯಾದಿಗಳಿಂದ ಪ್ರಕೃತಿ ಕಾಲ ತತ್ವಗಳ ಸ್ವಭಾವಾದಿಗಳನ್ನು ತಿಳಿಸಿರುತ್ತಾರೆ.

**ಚೇತನರ** ಸ್ವರೂಪವು ನಿತ್ಯವು, ಅಜಡ, ಅಣು, ಜ್ಞಾನಾನಂದರೂಪವಾದುದು. ಜ್ಞಾನ ಗುಣವುಳ್ಳದು. ಇದನ್ನು ಧರ್ಮಭೂತ ಜ್ಞಾನವೆನ್ನುವರು. ನಿರವಯವಾಗಿ ಅಚ್ಛೇದ್ಯವು, ಅದಾಹ್ಯವು, ಅಕ್ಲೇದ್ಯವು, ನಿರ್ವಿ

ಕಾರ ಸ್ವರೂಪವುಳ್ಳದು. ಕರ್ತೃತ್ವ ಭೋಕ್ತೃತ್ವ ಉಳ್ಳದು, ಸರ್ವೇಶ್ವರನಿಗೆ ಆಧೇಯತ್ವ, ನಿಯಾಮ್ಯತ್ವ ಶೇಷತ್ವಗಳಿಂದ ಪರಮಾತ್ಮನಿಗೆ ಶರೀರವಾಗಿ, ಆತನೇ ತನಗೆ ಆತ್ಮವಾಗಿ ಉಳ್ಳದುದು. ಚೇತನ ವರ್ಗವು — ಮೂರು ವಿಧವು; ನಿತ್ಯ, ಮುಕ್ತ, ಬದ್ಧರೆಂದು. ಬದ್ಧಾತ್ಮರು ಈ ಲೋಕದ ಮತ್ತು ಸ್ವರ್ಗಾದಿ ಲೋಕದ ಪ್ರಾಣಿಗಳೆಲ್ಲಾ ಪೂರ್ವ ಕರ್ಮ ಸಂಸ್ಕಾರಗಳಿಗೆ ಅನುಕೂಲವಾದ ಶರೀರಗಳನ್ನು ಹೊಂದಿ, ಸುಖ ದುಃಖಾದಿಗಳನ್ನು ಅನುಭವಿಸುವವರು, ಈ ಜೀವಾತ್ಮನು ದೇಹ, ಇಂದ್ರಿಯ, ಪ್ರಾಣ, ಬುದ್ಧಿಗಳಿಗಿಂತಲೂ ಬೇರೆಯಾದವನು.

**ಪಿಂಡಃ ಪೃಥಗ್ಯತಃ ಪುಂಸಃ ಶಿರಃ ಪ್ರಾಣ್ಯಾದಿ ಲಕ್ಷಣಃ ।**
**ತತೋऽಹಮಿತಿ ಕುತ್ರೈತಾಂ ಸಂಜ್ಞಾಂ ರಾಜನ್ ಕರೋಮ್ಯಹಮ್ ॥**

( ವಿ. ಪು. ೨. ೧೩. ೮೯. ) ಎಂಬಲ್ಲಿ ಜೀವಾತ್ಮನು ಶರೀರ ಮತ್ತು ಇಂದ್ರಿಯ ಮನಸ್ಸು ಮೊದಲಾದವುಗಳಿಗಿಂತ ಬೇರೆ ಎಂದೂ ಹೇಳಲ್ಪಟ್ಟಿರುತ್ತದೆ. ಇದನ್ನೇ ಶ್ರೀಯಾಮುನ ಮುನಿಗಳು :— **ದೇಹೇಂದ್ರಿಯ ಮನಃ ಪ್ರಾಣ ಧೀಭ್ಯೋऽನ್ಯೋऽನನ್ಯ ಸಾಧನಃ । ನಿತ್ಯೋ ವ್ಯಾಪೀ ಪ್ರತಿಕ್ಷೇತ್ರ ಮಾತ್ಮಾ ಭಿನ್ನಸ್ಸತಸ್ಸುಖೀ ॥** ಎಂಬಲ್ಲಿ ಉಪಪಾದಿಸಿರುತ್ತಾರೆ. ( ಆತ್ಮಸಿದ್ಧಿ ) ಪುನಃ,

**ಪುಮಾನ್ನದೇವೋ ನ ನರೋ ನ ಪಶು ರ್ನಚ ಪಾದಪಃ ।**
**ಶರೀರಾಕೃತಿ ಭೇದಾಸ್ತು ಭೂಪೈತೇ ಕರ್ಮಯೋನಯಃ ॥**

( ವಿ. ಪು. ೧೩. ೯೮ ) ಇಲ್ಲಿಯೂ ದೇಹವೇ ಬೇರೆ ಆತ್ಮವೇ ಬೇರೆ ಎಂದು ಹೇಳಲ್ಪಟ್ಟಿರುತ್ತದೆ. ಆತ್ಮನು ಮಹಾ ಪರಿಶುದ್ಧ ಸ್ವರೂಪನೆಂದು " **ನಿರ್ವಾಣಮಯ ಏವಾಯಮಾತ್ಮಾ ಜ್ಞಾನಮಯೋऽಮಲಃ । ಆತ್ಮಾ ಶುದ್ಧೋऽಕ್ಷರಶ್ಶಾನ್ತೋ ನಿರ್ಗುಣಃ ಪ್ರಕೃತೇಃ ಪರಃ** " ಎಂಬಲ್ಲಿ ಜೀವಾತ್ಮನ ಪರಿಶುದ್ಧ ಸ್ವರೂಪವಾದ ಆನಂದತ್ವ, ಅಮಲತ್ವ ಪ್ರಕೃತಿಗಿಂತ ವಿಲಕ್ಷಣವೆಂಬ ಇತ್ಯಾದಿಗಳು ಹೇಳಲ್ಪಟ್ಟಿವೆ.

ಜೀವಾತ್ಮನ ಸ್ವರೂಪಜ್ಞಾನಕ್ಕೂ, ಆತನಿಗೆ ವಿಶೇಷಣವಾದ ಜ್ಞಾನಕ್ಕೂ ( ಧರ್ಮಭೂತ ಜ್ಞಾನಕ್ಕೂ ) ವ್ಯತ್ಯಾಸವುಂಟು. ಎರಡೂ ದ್ರವ್ಯವಾದರೂ ವ್ಯತ್ಯಾಸ ಹೇಗೆಂದರೆ — ಆತ್ಮಾ ಸ್ವಯಂ ಪ್ರಕಾಶವು; **ಅಹಂ ಅಹಂ** ಎಂದು ತೋರಿಬರುತ್ತದೆ. ಧರ್ಮಭೂತ ಜ್ಞಾನಕ್ಕೆ ಈ ಗುಣ ( ಪ್ರತ್ಯಕ್ತ್ವ ) ವಿಲ್ಲವು. ಆದರೆ ವಿಷಯಗಳನ್ನು ಆತ್ಮನಿಗೆ ಪ್ರದರ್ಶಿಸುತ್ತದೆ. ಇದಕ್ಕೆ ಪರಾಕ್ತ್ವವೆಂಬ ಹೆಸರು. ಬದ್ಧ ಚೇತನನಿಗೆ ಪ್ರಾಕೃತ ಶರೀರ ವಿಮೋಚನವಾಗಬೇಕಾದರೆ ತಾನೇ ಉಪಾಯಾನುಷ್ಠಾನ ಮೂಲಕವಾಗಲಿ, ಅಥವಾ ಮಹಾ ಭಾಗವತರ ಮೂಲಕವಾಗಿ ಉಂಟಾಗುತ್ತದೆ. ಮರಣಾನಂತರ ಅರ್ಚಿರಾದಿಮಾರ್ಗವು ಲಭಿಸಿ ಅಪ್ರಾಕೃತ ಶರೀರ ಮತ್ತು ವೈಕುಂಠ ಲೋಕ ಪ್ರಾಪ್ತಿಗಳು ಲಭಿಸುತ್ತವೆ.

ಉಪಾಯಾನುಷ್ಠಾನವಿಲ್ಲವಾದರೆ ಪುನಃ ಪುನಃ ಪ್ರಾಕೃತ ಶರೀರಪ್ರಾಪ್ತಿ ಜನನ ಮರಣಾದಿಗಳು ಉಂಟು. ಇವರಿಗೆ ಧರ್ಮಭೂತಜ್ಞಾನದ ಸಂಕೋಚ ವಿಕಾಸಾದಿಗಳು ಮರಣಾದಿಗಳು ಬದ್ಧದೆಶೆಯಲ್ಲುಂಟು.

**ಮುಕ್ತರು—** ಒಂದು ಕಾಲದಲ್ಲಿ ಪ್ರಾಕೃತ ಶರೀರ, ಜ್ಞಾನ, ಸಂಕೋಚಗಳಿದ್ದು ಉಪಾಯಾನುಷ್ಠಾನದಿಂದ ಅವುಗಳಿಲ್ಲದವರು. ಇವರೂ ಪರಮಾತ್ಮನೊಂದಿಗೆ ಸಮಾನ ಭೋಗವನ್ನುಳ್ಳವರು. ಕಾಮಚಾರವು ಇವರಿಗೆ ಉಂಟು. ಪುನರಾವೃತ್ತಿ ಇಲ್ಲವು. ಇವರ ವಿಷಯವಾಗಿ **ಗತ್ವಾ ಗತ್ವಾ ನಿವರ್ತನ್ತೇ ಚಂದ್ರ ಸೂರ್ಯಾದಯೋಗ್ರಹಾಃ । ಅದ್ಯಾಪಿ ನ ನಿವರ್ತನ್ತೇ ದ್ವಾದಶಾಕ್ಷರಚಿನ್ತಕಾಃ"** (ವಿ. ಪು ) ಎಂದರೆ ಚಂದ್ರ ಸೂರ್ಯಾದಿ ಬದ್ಧರು ಪುನಃ ಪುನಃ ಜನ್ಮವೆತ್ತಬಹುದು. ಶ್ರೀ ದ್ವಾದಷಾಕ್ಷರವಾದ ವಾಸುದೇವ ಮನ್ತ್ರೋಪಾಸಕರು ಎಂದಿಗೂ ಹಿಂತಿರುಗುವುದಿಲ್ಲವು ಎಂಬರ್ಥವು. **"ಯದ್ವೈ ಪಶ್ಯಂತಿ ಸೂರಯಃ"** ಎಂಬಲ್ಲಿ ನಿತ್ಯರ ವಿಷಯವಾಗಿ ಹೇಳಲ್ಪಟ್ಟಿತು.

**ನಿತ್ಯರು—** ಪರಮಾತ್ಮ ನಿತ್ಯ ಸಂಕಲ್ಪದಿಂದ ಬಂಧವನ್ನೇ ತಿಳಿಯದವರು. ಇವರೂ ಮುಕ್ತರು ಸಹ ಪರಮಾತ್ಮನಿಗೆ ಶೇಷಭೂತರಾಗಿ ಆತನಿಗೆ ಕೈಂಕರ್ಯವನ್ನು ಎಸಗುವರು.

**ಈಶ್ವರ ತತ್ವವು—** ಜ್ಞಾನಾನಂದ ಸ್ವರೂಪನು ಶ್ರಿಯಃಪತಿಯು, ಹೇಯಗುಣರಹಿತನು. ಷಾಡ್ಗುಣ್ಯಾದಿ ಸಕಲ ಕಲ್ಯಾಣಗುಣವಿಶಿಷ್ಟನು. ಲೀಲಾವಿಭೂತಿ ನಿತ್ಯವಿಭೂತಿಗಳನ್ನೇ ಅಪೃಥಗ್ವಿಶೇಷಣವಾಗಿ ಉಳ್ಳವನು ಸರ್ವಚಿದಚಿಚ್ಛರೀರಕನಾಗಿ ಸರ್ವ ಜಗದಾತ್ಮಕನು. ಇವಕ್ಕೆಲ್ಲಾ ಆಧಾರನು, ನಿಯಾಮಕನು, ರಕ್ಷಕನು. ಜೀವಾತ್ಮವರ್ಗಕ್ಕೆ ಸಕಲವಿಧ ಬಂಧುವು, ಲೀಲಾ ವಿಭೂತಿಯ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನು.

ಇಂತಹ ಸಕಲ ಯಥಾರ್ಥಗಳಾದ ಅಭಿಪ್ರಾಯಗಳನ್ನೆಲ್ಲಾ ಶ್ರೀಪರಾಶರರು ತಮ್ಮ ಪುರಾಣರತ್ನದಲ್ಲಿ ಉಪಪಾದಿಸಿರುತ್ತಾರೆಂದು **"ತತ್ವೇನ"** ಎಂದಾರಂಭಿಸಿ **ಅಪವರ್ಗ ಗತೀಃ"** ಎಂಬುವವರೆಗೂ ಪ್ರಯೋಗವು. ಈಶ್ವರಸ್ವರೂಪಾದಿಗಳು ಎಲ್ಲಿ ಹೇಳಲ್ಪಟ್ಟಿವೆ? ಎಂದರೆ **"ಅವಿಕಾರಾಯ ಶುದ್ಧಾಯ ನಿತ್ಯಾಯ ಪರಮಾತ್ಮನೇ । ಸದೈಕರೂಪರೂಪಾಯ ವಿಷ್ಣವೇ ಸರ್ವಜಿಷ್ಣವೇ " " ಪರಃ ಪರಾಣಾಂ ಪರಮಃ" "ಶಾಸ್ತಾ ವಿಷ್ಣುರಶೇಷಸ್ಯ" " ಸಮಸ್ತ ಕಲ್ಯಾಣ ಗುಣಾತ್ಮಕೋಸೌ" " ಆತ್ಮಭಾವಂ ನಯತ್ಯೇನಂ ತದ್ಬ್ರಹ್ಮ ಧ್ಯಾಯಿನಂ ಮುನೇ । ವಿಕಾರ್ಯಂ ಆತ್ಮನಶ್ಶಕ್ತ್ಯಾ ಲೋಹಮಾಕರ್ಷಕೋಯಥಾ"** ಅನಾದ್ಯ ವಿದ್ಯಾಕರ್ಮ ವಾಸನಾದಿಗಳಿಂದ ಬದ್ಧ

ನಾದ ಜೀವಾತ್ಮನು ಭಗವಂತನನ್ನು ಧ್ಯಾನಿಸುವುದರಿಂದ ತನ್ನ ವಿಕಾರ ಭಾವಗಳನ್ನೆಲ್ಲಾ ಕಳೆದುಕೊಂಡು ತನ್ನ ಸ್ವಂತವಾದ ಸ್ವರೂಪ ಸತ್ಯಕಾಮತ್ವ, ಸತ್ಯಸಂಕಲ್ಪಾದಿಗಳ ಆವಿರ್ಭಾವವನ್ನು ಹೊಂದುವನು. ಹೇಗೆ? ಎಂದರೆ ಲೋಹವು ಅಯಸ್ಕಾಂತ ಸಾಮೀಪ್ಯದಿಂದ ಅಯಸ್ಕಾಂತದ ಸ್ವಭಾವವನ್ನೇ ಹೇಗೊ ಎಂಬ ಹಾಗೆ ಭಾವವು.

ಇಲ್ಲಿ **ತತ್ಸ್ವಭಾವ** ಎಂದು ಹೇಳಿರುವುದರಿಂದ •ಸ್ವರೂಪವು ಏಕೆ ಹೇಳಲಿಲ್ಲವು ಎಂದು: ಪ್ರಶ್ನಿಸಿದರೆ ಸ್ವಭಾವದಲ್ಲೇ ಅದು ಅಂತರ್ಗತವು. ಹೇಗೆಂದರೆ ಸ್ವಭಾವ ಶಬ್ದದಿಂದ ಧರ್ಮಗಳು ಭೋಧಿತವು. ಅವು ಎರಡು ವಿಧವು. ಸ್ವರೂಪ ನಿರೂಪಕ ಧರ್ಮಗಳೂ ಮತ್ತು ನಿರೂಪಿತ ಸ್ವರೂಪ-ವಿಶೇಷಣಗಳೂ. ಆದುದರಿಂದ ಸ್ವರೂಪ ನಿರ್ಧಾರಕ ಗುಣಗಳೂ ಭೋಧಿತವೆಂದು ಭಾವಿಸತಕ್ಕದ್ದು. **ತತ್ಸ್ವಭಾವ** ಶಬ್ದದಿಂದ ಈ ತತ್ವತ್ರಯಗಳಿಗೂ ಸ್ವರೂಪ ಸ್ವಭಾವಗಳಲ್ಲಿರುವ ವೈಲಕ್ಷಣ್ಯವು ಬಹು ಸ್ವಾರಸ್ಯವಾಗಿ ಉಪಪಾದಿತವೆಂಬುದು ಸೂಚಿತವು. **ಭಕ್ತಿ ತತ್ವಜ್ಞಾನ** ವೆಂಬಲ್ಲಿ ದ್ವಂದ್ವ ಸಮಾಸವು. **ತತ್ವಜ್ಞಾನ** ವೆಂಬ ಪ್ರಯೋಗದಿಂದ ಅವರ ದಿವ್ಯ ಸೂಕ್ತಿಗಳಲ್ಲಿ (೧) ದೇಹಾತ್ಮ ಭ್ರಮ (೨) ಸ್ವಂತತ್ರಾತ್ಮ ಭ್ರಮ (೩) ಜೀವ ಪರಮಾತ್ಮೈಕ್ಯ ಭ್ರಮಗಳು ಯಾವುವೂ ಇಲ್ಲದೇ ಪರಮೋಪಾದೇಯವಾದ ಗ್ರಂಥವು ವಿಷ್ಣುಪುರಾಣವೆಂಬುದು ಸೂಚಿತವು. ಆದುದರಿಂದಲೇ **"ಪುರಾಣೇಷುಚ ವೈಷ್ಣವಂ"** ಎಂಬ ಪ್ರಯೋಗವು. ಇದರಿಂದ ಆ ಪುರಾಣದಲ್ಲಿ ಸಂಪೂರ್ಣವಿಶ್ವಾಸವನ್ನಿಟ್ಟು ಅದನ್ನು ಪುನಃ ಪುನಃ ಪಠಿಸಿ, ಮನನ ಮಾಡಲು ಯೋಗ್ಯವಾದುದು. **ಭೋಗ** ಶಬ್ದದಿಂದ ಇಹಲೋಕಾನುಭವವೂ ಸ್ವರ್ಗಲೋಕಾನುಭವವೂ ಆತ್ಮಾನುಭವರೂಪಕೈವಲ್ಯವೂ ಹೇಳಲ್ಪಟ್ಟವು. ಅಪವರ್ಗಶಬ್ದದಿಂದ ವೈಕುಂಠಲೋಕಾನುಭವವೂ ಬೋಧಿತವು. ಹೀಗೆ **ಚತುರ್ವಿಧಾ ಭಜಂತೇಮಾಂಜನಾ ಸ್ಸುಕೃತಿನೋಽರ್ಜುನ"**(ಗೀ. ೭.) ಎಂಬಲ್ಲಿ ಹೇಳಿರುವ **ನಾಲ್ಕು** ಜನ ಆಶ್ರಿತರಿಗೆ ಉಂಟಾಗುವ ಭೋಗವು ಹೇಳಲ್ಪಟ್ಟಿತು. ಅನಂತರ ಅಪವರ್ಗ ಶಬ್ದ ಪ್ರಯೋಗದಿಂದ " **ಚತುರ್ವಿಧಾ ಮಮ ಜನಾ ಭಕ್ತಾ ಏವ ಹಿ ತೇ ಶ್ರುತಾಃ । ತೇಷಾ ಮೇಕಾನ್ತಿನ ಶ್ಶ್ರೇಷ್ಠಾ ಸ್ತೇ ಚೈವಾನನ್ಯ ದೇವತಾಃ। ಅಹಮೇವ ಗತಿ ಸ್ತೇಷಾಂ ನಿರಾಶೀಃಕರ್ಮಕಾರಿಣಾಮ್ । ಯೇ ತು ಶಿಷ್ಟಾಸ್ತ್ರಯೋಭಕ್ತಾಃ ಫಲಕಾಮಾ ಹಿ ತೇಮತಾಃ। ಸರ್ವೇಚ್ಯವನ ಧರ್ಮಾಣಃ ಪ್ರತಿಬುದ್ಧಸ್ತು ಮೋಕ್ಷಭಾಕ್** ॥ ಎಂಬಲ್ಲಿ ಉಪದೇಶಿಸಿರುವ ವಿವೇಕವು ಸೂಚಿತವು. ಈ ನಾಲ್ಕು ಜನರು ನನ್ನ ಭಕ್ತರೇ ಸರಿ. ಏಕೆಂದರೆ ಅವರು ಅನ್ಯ ದೇವತೆಗಳನ್ನು ತ್ಯಜಿಸಿ, ಅವರು ಅನುಷ್ಠಿಸುವ ಕರ್ಮಗಳಲ್ಲಿ ಫಲ, ಕರ್ತೃತ್ವ ಮಮತೆಗಳನ್ನೂ ತ್ಯಜಿಸಿ, ನನ್ನನ್ನೇ ಭಜಿಸುವರಾದುದರಿಂದ, ಅವರಲ್ಲಿ

ಜ್ಞಾನಿ ಹೊರತು ಮಿಕ್ಕ ಮೂವರೂ ಅಷ್ಟು ಪ್ರಜ್ಞಾವಂತರಲ್ಲವು. ಏಕೆಂದರೆ ಅವರು ಅಶಾಶ್ವತಫಲಗಳನ್ನು ಕೋರುವವರು, ಶಾಶ್ವತವಾದ.ಮೋಕ್ಷಸುಖವನ್ನು ಬಯಿಸುವವನೇ ಮಹಾಪ್ರಾಜ್ಞನು; ಆತ್ಮಾನುಭವ ಉಂಟಾದವನೂ ಕೂಡ ಚ್ಯವನ ಧರ್ಮತೆಯನ್ನು ಹೊಂದಿದವನು; ಆತನು ಅನಂತರ ಬ್ರಹ್ಮವಿದ್ಯಾನಿಷ್ಠನಾಗಿ ಎಂದರೆ ಪರಮಾತ್ಮನನ್ನು ಉಪಾಸಿಸುವನಾಗಿ ಮುಕ್ತಿಯನ್ನು ಹೊಂದುವನೆಂದು ಭಾವಿಸತಕ್ಕದ್ದು. ಈವಿಷಯವು **ಯೋಗಿನಾಮಮೃತಂ ಸ್ಥಾನಂ ಸ್ವಾತ್ಮಸಂತೋಷ ಕಾರಿಣಾಂ**"ಎಂಬಲ್ಲಿ ಸ್ವಾತ್ಮಾನುಭವರುವ ಕೇವಲ ಅಪುನರಾವೃತ್ತಿ ರೂಪಸ್ಥಾನವು ಹೇಳಲ್ಪಟ್ಟಿರುತ್ತದೆ. ಸನಕಾದಿ ಯೋಗಿಗಳಾದ ಜ್ಞಾನಿಗಳಿಗೂ ಅಮೃತ ಸ್ಥಾನವೇ ಅಪುನರಾವೃತ್ತಿರೂಪ ದಿವ್ಯ ವೈಕುಂಠವೇ ಸ್ಥಾನವೆಂದು ತೋರಿಬರುತ್ತದೆ. ಆದರೆ ಮುಂದಕ್ಕೆ ವಿಷ್ಣುಪುರಾಣದಲ್ಲಿ "**ಏಕಾಂತಿನಸ್ಸದಾ ಬ್ರಹ್ಮ ಧ್ಯಾಯಿನೋ ಯೋಗಿನೋಹಿ ತೇ । ತೇಷಾಂ ತತ್ಪರಮಂ ಸ್ಥಾನಮ್** ಎಂದು ಅದಕ್ಕಿಂತಲೂ ಮೇಲಾದ ಸ್ಥಾನವನ್ನು ಹೇಳಿರುವುದರಿಂದ, ಸ್ವಾತ್ಮಾನುಭವರಿಗೆ ಕೈವಲ್ಯವು ಹೇಳಲ್ಪಟ್ಟಿತು. ಇಲ್ಲಿ ಅಪವರ್ಗ ಶಬ್ದದಿಂದ ಹೇಳಲ್ಪಟ್ಟದುದು (೧) ಅರ್ಚಿರಾದಿಗತಿಯ ಮೂಲಕಪ್ರಾಕೃತ ಶರೀರದ ವಿಯೋಗವೂ (೨) ಸ್ವಸ್ವರೂಪಾವಿರ್ಭಾವವೂ (೩) ಅಪ್ರಾಕೃತ ಶರೀರ ಪ್ರಾಪ್ತಿಯೂ (೪) ಪರಿಪೂರ್ಣ ಬ್ರಹ್ಮಾನುಭವವೂ (೫) ತತ್ಕೈಂಕರ್ಯವೂ. ಇಲ್ಲಿ ಸ್ವಸ್ವರೂಪಾವಿರ್ಭಾವವೆಂದರೆ, ಈತನ ಜ್ಞಾನಾದಿ ಗುಣಗಳಿಗೆ ಪ್ರಕೃತಿಸಂಬಂಧದಿಂದ ಸಂಕೋಚವುಂಟಾಗಿದ್ದುದು ಈಗ ವಿಕಾಸವನ್ನು ಹೊಂದಿ ವಿಭುವಾದುದರಿಂದ ಸರ್ವಜ್ಞತ್ವಾದಿ ಗುಣಾಷ್ಟಕಗಳೂ ಹಿಂದೆ ಇದ್ದವೇ ಪ್ರಾದುರ್ಭವಿಸಿದವು ಎಂಬರ್ಥವು. ಈ ಅಭಿಪ್ರಾಯಕ್ಕೆ "**ಯಥಾ ನ ಕ್ರಿಯತೇ ಜ್ಯೋತ್ಸ್ನಾ ಮಲಪ್ರಕ್ಷಾಳನಾ ನ್ಮಣೇಃ । ದೋಷಪ್ರಹಾಣಾನ್ನಜ್ಞಾನಮಾತ್ಮನಃಕುರುತೇ ತಥಾ । ಸದೇವ ನೀಯತೇ ವ್ಯಕ್ತಿ ಮಸತ ಸ್ಸಂಭವಃ ಕುತಃ । ತಥಾ ಹೇಯಗುಣಧ್ವಂಸಾ ದವಭೋದಾದಯೋ ಗುಣಾಃ । ಪ್ರಕಾಶ್ಯನ್ತೇ ನ ಜನ್ಯಂತೇ ನಿತ್ಯಾ ಏವಾತ್ಮನೋ ಹಿ ತೇ ॥**" ಎಂಬುದು ಅನುಸಂಧೇಯವು ಕೆಸರಿನಲ್ಲಿ ಬಿದ್ದ ರತ್ನವನ್ನು ತೊಳೆಯುವುದರಿಂದ ಮೊದಲಿದ್ದ ನೈಜ ಪ್ರಕಾಶವು ಹೇಗೆ ಉಂಟಾಗುತ್ತದೋ, ಹಾಗೆಯೇ ಆತ್ಮನಿಗೆ ಮೊದಲೇ ಇದ್ದ ಸ್ವರೂಪ ಧರ್ಮಗಳಾದ ಜ್ಞಾನ ಮೊದಲಾದವುಗಳು ಪ್ರಕಾಶಿಸುತ್ತವೇವಿನಾ ಹೊಸದಾಗಿ ಉತ್ಪತ್ತಿಯತ್ನು ಹೊಂದುವದಿಲ್ಲವು. ಇರುವದೇ ಜಾಜ್ವಲ್ಯಮಾನವಾಗಿ ತೋರುತ್ತದೇವಿನಾ ಇಲ್ಲದಿರುವುದಕ್ಕೆ ಉತ್ಪತ್ತಿ ಎಂಬುವುದು ಎಲ್ಲಾದರೂ ಉಂಟೋ; ಎಂಬರ್ಥವು.

ಈ ನಾಲ್ಕು ಜನ ಭಕ್ತರ ಇಷ್ಟಾರ್ಥಗಳಿಗೆ ಸಾಧನವು ಎರಡು ವಿಧವು:- ಅಶಾಶ್ವತ ಫಲಗಳು ಪ್ರವೃತ್ತಿರೂಪಗಳಾಗಿ ಪುನಃಪುನಃ ಜನ್ಮಗಳಿಗೆ ಹೇತುಗ

೪. ಶಾಶ್ವತ ಫಲವು ನಿವೃತ್ತಿ ಧರ್ಮರೂಪದಿಂದ ಅಪುನರಾವೃತ್ತಿಗೆ ಹೇತುವು. ಇದಕ್ಕೆ ಪ್ರಮಾಣವಾಗಿ ಮುಂದಿನ ಮೋಕ್ಷಧರ್ಮಸೂಕ್ತಿಯು ಅನುಸಂಧೇಯವು.

**ಪ್ರವೃತ್ತಿ ಲಕ್ಷಣಂ ಧರ್ಮಂ ಪ್ರಜಾಪತಿರಥಾ ಬ್ರವಿತ್ ।**
**ನಿವೃತ್ತಿ ಲಕ್ಷ್ಮಣಂ ಧರ್ಮಂ ಋಷಿ ರ್ನಾರಾಯಣೋಽಬ್ರವೀತ್ ॥**
**ಪ್ರವೃತ್ತಿಃ ಪುನರಾವೃತ್ತಿಃ ನಿವೃತ್ತಿಃ ಪರಮಾ ಗತಿಃ ।**

ಎಂಬುದು. ಆದುದರಿಂದ ಆ ನಾಲ್ಕು ವಿಧ ಭಕ್ತರುಗಳಲ್ಲಿ ಆರ್ತನಿಗೂ ಅರ್ಥಾರ್ಥಿಗೂ, ಅಶಾಶ್ವತ ಫಲಾರ್ಥಿಗಳಾದುದರಿಂದ, ಪುನಸ್ಸಂಸಾರವು. ಜಿಜ್ಞಾಸು ಜ್ಞಾನಿಗಳಿಗೆ ಅಪುನರಾವೃತ್ತಿರೂಪ ಮೋಕ್ಷವು. ಇವರಿಬ್ಬರಲ್ಲಿ ಜಿಜ್ಞಾಸುವಿಗೆ ಆತ್ಮ ಪ್ರಾಪ್ತಿಯುಂಟಾಗಿ ಅನಂತರ ಪರಮಾತ್ಮ ಜ್ಞಾನದಿಂದ ಮೋಕ್ಷವು. ಇದನ್ನು ಶ್ರೀ ಪರಾಶರರು ಎಲ್ಲಿ ಹೇಳಿರುತ್ತಾರೆಂದರೆ—"**ಯೋಗಿನಾಮಮೃತಂ ಸ್ಥಾನಂ ಸ್ವಾತ್ಮಸಂತೋಷಕಾರಿಣಾಮ್**" ಇಲ್ಲಿ ಜಿಜ್ಞಾಸುವಿಗೆ ಪ್ರಾಪ್ತವಾಗುವ ಕೈವಲ್ಯಸ್ಥಾನವು ಹೇಳಲ್ಪಟ್ಟಿತು ಇದಕ್ಕೆ ಪ್ರಧಾನತಮ ಸಿದ್ಧೋಪಾಯನೇ ಉಪಾಯನಾಗಿ ಆತನೇ ಫಲಪ್ರದನೂ ಮತ್ತು ಉಪೇಯನೂ; ಉಪಾಯಗಳಾದ ಭಕ್ತಿ ಪ್ರಪತ್ತಿಗಳು ವ್ಯಾಜಮಾತ್ರಗಳು. ಕರ್ಮಯೋಗಾದಿಗಳು ಭಕ್ತಿಗೆ ಅಂಗಗಳು, ಪ್ರಪತ್ತಿಗೆ ಅಂಗಗಳಲ್ಲವು. ಆದರೂ ಬೇರೇ ವಿಧಿಗಳಿಂದ ನಿತ್ಯ ನೈಮಿತ್ತಿಕಗಳು ಅವಶ್ಯಕವಾಗಿ ಅನುಷ್ಠೇಯಗಳು. ಹೀಗೆ ವಿಷ್ಣುಪುರಾಣದಲ್ಲಿ ಈ ಉಪಾಯಗಳೆರಡೂ ಕೊಂಡಾಡಲ್ಪಟ್ಟಿವೆ. ಹೀಗೆ ಉಪಾಯಾನುಷ್ಠಾನವನ್ನು ಮಾಡಿದ ಪ್ರಪನ್ನರಿಗೆ ದೇಹಾವಸಾನದಲ್ಲಿ **ಗತಿಗಳು** ಹೇಳಲ್ಪಟ್ಟಿವೆ. ಮೇಲೆ ಹೇಳಿದ ಜಿಜ್ಞಾಸು ಜ್ಞಾನಿಗಳಿಗೆ ಅರ್ಚಿರಾದಿ ಮಾರ್ಗವೂ; ಆರ್ತ ಮತ್ತು ಅರ್ಥಾರ್ಥಿಗಳಿಗೆ ಧೂಮಾದಿ ಮಾರ್ಗವೂ ಹೇಳಲ್ಪಟ್ಟಿವೆ. ಅರ್ಚಿರಾದಿ ಮಾರ್ಗದಲ್ಲಿ ಹೋದವರಿಗೆ ಪುನರ್ಜನ್ಮವಿಲ್ಲವು. ಧೂಮಾದಿ ಮಾರ್ಗದಲ್ಲಿ ಹೋದವರಿಗೆ ಪುನರ್ಜನ್ಮವುಂಟು. ಅಲ್ಲಿ ಪ್ರಾಪ್ತವಾಗುವ ಅಪವರ್ಗವೆಂತಾದ್ದೆಂದರೆ ಶ್ರೀ ಪರಾಶರರು ಹೇಳುತ್ತಾರೆ:— "**ನಿರಸ್ತಾ ತಿಶಯಾಹ್ಲಾದ ಸುಖ ಭಾವೈಕ ಲಕ್ಷಣಾ । ಭೇಷಜಂ ಭಗವತ್ಪ್ರಾಪ್ತಿರೇಕಾಂತಾತ್ಯಂತಿಕೀಮತಾ। ತದ್ಭಾವಭಾವಮಾಪನ್ನಃ**" ಎಂಬುದಾಗಿ ಭೋಗೋಪಾಯವನ್ನು ಶ್ರೀ ಪರಾಶರರು ಧ್ರುವಾದಿ ವೃತ್ತಾಂತಗಳಿಂದ ಉದಾಹರಿಸಿರುತ್ತಾರೆ. ಭಕ್ತಿಯೋಗ ರೂಪೋಪಾಯವನ್ನು

**"ತದ್ರೂಪಪ್ರತ್ಯಯೋ ಚೈಕಾ ಸಂತತಿಶ್ಚಾನ್ಯ ನಿಸ್ಪೃಹಾ ।**
**ತಧ್ಯಾನಂಪ್ರಥಮೈಷ್ಷಡ್ಭಿರಂಗೈರ್ನಿಷ್ಪಾದ್ಯತೇ ನೃಪ"**

ಎಂಬಲ್ಲಿ ವ್ಯಕ್ತಪಡಿಸಿರುತ್ತಾರೆ.— ಶಂಖ ಚಕ್ರ ಗಧಾದ್ಯಾಯುಧಗಳಿಂದಲೂ, ಕಿರೀಟ ಕೇಯೂರಾದಿ ಭೂಷಣಗಳಿಂದಲೂ ಯುಕ್ತನಾಗಿ ಚತುರ್ಭುಜಯುಕ್ತನಾಗಿ ಲಕ್ಷ್ಮೀಸಹಿತನಾಗಿರುವ ಶ್ರೀ ವಾಸುದೇವನ ರೂಪವನ್ನು ಯಮ ನಿಯ

ಮಾದಿ ಅಂಗಗಳಿಂದ ಇತರಾಶೆಗಳನ್ನು ತೊರೆದು ಅಮೊಂದನ್ನೇ ಪ್ರವಾಹರೂಪ ದಲ್ಲಿ ಚಿಂತಿಸುತ್ತಾ ಬಂದರೆ ಉಪಾಸನ ಕೈಗೂಡುತ್ತದೆಂದು ಹೇಳಲ್ಪಟ್ಟಿರು ತ್ತದೆ. (ವಿ. ಪು. ೬. ೭. ೯೧)

ಹಾಗೆಯೇ ಪ್ರಪತ್ತಿರೂಪವಾದುದು ಉಪಾಯವೆಂದು, "**ತಾವದಾರ್ತಿ ಸ್ತಥಾವಾಂಛಾ ತಾವನ್ಮೋಹ ಸ್ತಥಾ ಸುಖಮ್ । ಯಾವನ್ನಯಾತಿ ಶರಣಂ ತ್ವಾಮಶೇಷಾಘನಾಶನಮ್**" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಪಾಪ ಹರನಾದ ನಿನ್ನನ್ನು ಎಲ್ಲಿವರೆಗೆ ಶರಣುಹೊಂದುವುದಿಲ್ಲವೋ ಅದುವರೆಗೂ ಆತನಿಗೆ ಆರ್ತಿಯೂ, ಆಶೆಯೂ, ಮೋಹವೂ, ಸುಖವಿಲ್ಲದಿರೋಣವೂ, ಉಂಟೆಂದು ಹೇಳಲ್ಪ ಟ್ಟಿರುತ್ತದೆ. ಇಲ್ಲಿ ಆರ್ತಿಯು ಐಶ್ವರ್ಯವನ್ನೂ ಕಳೆದುಕೊಂಡು, ಹೋಯಿತೇ ಎಂದಿ ರುವ ದೈನ್ಯವೂ, ವಾಂಛಾ ಎಂದರೆ ಹೊಸ ಐಶ್ವರ್ಯವನ್ನಪೇಕ್ಷಿಸುವ ಅರ್ಥಾರ್ಥಿ ಯ ಅಪೇಕ್ಷೆಯು, ಮೋಹವು ಪ್ರಕೃತಿವಿಯುಕ್ತ ಆತ್ಮಪ್ರಾಪ್ತಿಯೇ ಶ್ರೇಷ್ಠ ಫಲವೆಂಬುದು; ಅಸುಖವು ಯಾವುದೆಂದರೆ ಮೋಕ್ಷವಿಲ್ಲದೇ ಜನ್ಮಸಂತತಿಯ ದುಃಖವು. ಹೀಗೆ ನಾಲ್ಕು ವಿಧ ಭಕ್ತರ ಅಪೇಕ್ಷೆಯೂ ದೊರೆಯುವುದಿಲ್ಲ ವೆಂಬ ಭಾವವು.

ಅಥವಾ ಗತಿಗಳು ಗೀತೆಯಲ್ಲಿ "**ಊರ್ಧ್ವಂ ತಿಷ್ಠಂತಿ ಸತ್ವಸ್ಥಾಃ ಮ ಧ್ಯೇ ತಿಷ್ಠಂತಿ ರಾಜಸಾಃ । ಜಘನ್ಯಗುಣವೃತ್ತಿಸ್ಥಾಃ ಅಧೋಗಚ್ಛಂತಿ ತಾ ಮಸಾಃ**" ಎಂದು ಹೇಳಿರುವುವು.

**ಉದಾರಃ** ಎಂಬುವುದರಿಂದ ಮಹರ್ಷಿಗೆ ಪ್ರತ್ಯುಪಕಾರಾದಿಗಳ ಅಪೇಕ್ಷೆಯಿಲ್ಲದೆಯೇ ಲೋಕೋಪಕಾರಕ್ಕಾಗಿ ಅದ್ಭುತವಾದ ಪುರಾಣರತ್ನವನ್ನು ನಿರ್ಮಿಸಿ ಗ್ರಂಥಾಂತ್ಯದಲ್ಲಿ ಪರಮೋದಾರನಾದ ಭಗವಂತನು ಸರ್ವರಿಗೂ ಒಳ್ಳೆ ಬುದ್ಧಿಯನ್ನು ಕೊಟ್ಟು ತನ್ನನ್ನಾಶ್ರಯಿಸಿ ಮುಕ್ತಿಯನ್ನು ಹೊಂದಲಿ ಎಂದು ಆಶೀ ರ್ವದಿಸಿರುತ್ತಾರೆ.

"**ಇತಿ ವಿವಿಧಮಜಸ್ಯ ಯಸ್ಯರೂಪಂ ಪ್ರಕೃತಿ ಪರಾತ್ಮಮಯಂ ಸನಾತನಸ್ಯ ಪ್ರದಿಶತುಭಗವಾನಶೇಷಪುಂಸಾಂ ಹರಿರಪಜನ್ಮಜರಾದಿಕಾಂ ಸಮೃದ್ಧಿಮ್॥**"
ಇಂತಹ ಅಮೋಘೋಪದೇಶವನ್ನು ಮಾಡಿದ ಗುರುವಿಗೆ ಯಾವುದನ್ನೂ ಕೊಟ್ಟ ರೂ ಸಾಲದು. ಅಂತವರು ಎಂದಿಗೂ ಪ್ರತಿಫಲವನ್ನು ಅಪೇಕ್ಷಿಸರು. ಆದರೂ ಅಂತವರ ಋಣವನ್ನು ಜ್ಞಾಪಕದಲ್ಲಿಟ್ಟು ಸತತ ಕೃತಜ್ಞತಾಭಾವವನ್ನು ತೋರ ಬೇಕು. ಇದನ್ನೇ ಶ್ರೀ ಯಾಮುನ ಮುನಿಗಳು ಜ್ಞಾಪಕದಲ್ಲಿಟ್ಟು ತಮ್ಮ ಕೃತ ಜ್ಞತಾಭಾವವನ್ನು ಈ ಶ್ಲೋಕದಮೂಲಕ ಪ್ರದರ್ಶಿಸಿರುತ್ತಾರೆ.
ಬಹಳ ಹಿಂದಿನ ಕಾಲದಲ್ಲಿ ಲೋಕಸಂಗ್ರಹಾರ್ಥವಾಗಿ ಮಹರ್ಷಿಯು ಮಾಡಿದ ಮಹೋಪಕಾರ ವಿಷಯದಲ್ಲಿ ಈಗೇನು ಪ್ರಶಂಸೆಯು? ಎಂದರೆ, ಅಂತವರು

ಮಾಡಿದ ಇಂತಹ ಉಪಕಾರವು ಲೋಕವಿರುವವರೆಗೂ ಎಲ್ಲರಿಂದಲೂ ಚಿರ ಸ್ಮರಣೀಯವೆಂಬ ಭಾವವನ್ನು ಪ್ರದರ್ಶಿಸಿರುತ್ತಾರೆ. **ಸಂದರ್ಶಯನ್** ಎಂಬ ಪದವು ಲೋಕದಲ್ಲಿನ ಜ್ಞಾನವಾನ್ ಆದ ಸಮಸ್ತ ಜನರಿಗೂ ಇದರ ಚಿರಸ್ಮರಣೀಯ ಭಾವವನ್ನು ವ್ಯಕ್ತ ಪಡಿಸುತ್ತದೆ. ಮನುಷ್ಯರಲ್ಲಿರುವ ಅಜ್ಞಾನವನ್ನು ಹೋಗಲಾಡಿಸುವ ಮಹನೀಯರು ಉದಾರರು ಎಂಬುದರಲ್ಲಿ ಸಂದೇಹವಿಲ್ಲವು. ಅಂತವರಿಗೆ ಏನನ್ನು ಕೊಟ್ಟರೂ ಸಾಲದೆಂದು, **ಅಜ್ಞಾನಾಯ ತು ಯೋಽಜ್ಞಾನಂ ದದ್ಯಾದ್ಧರ್ಮೋಪದೇಶನಮ್. ಕೃತ್ಸ್ನಾಂ ವಾ ಪೃಥಿವೀಂ ದದ್ಯಾತ್ತೇನ ತುಲ್ಯಂ ನತತ್ಫಲಮ್ । ಬ್ರಹ್ಮವಿದ್ಯಾ ಪ್ರದಾನಸ್ಯ ದೇವೈರಪಿ ನ ಶಕ್ಯತೇ । ಪ್ರತಿಪ್ರದಾನ ಮಥವಾದದ್ಯಾ ಚ್ಛಕ್ತಿತ ಆದರಾತ್ । ವಿದ್ಯಾದಾನಂ ತತೋಽಧಿಕಮ್** । ಬ್ರಹ್ಮವಿದ್ಯಾಪ್ರದಾತಾ ಎಲ್ಲರಿಗಿಂತ ಉದಾರರು. **ತತ್ತ್ವೇನ ಸಂದರ್ಶಯನ್** ಎಂಬ ಪ್ರಯೋಗವು, "**ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಂ**" ಎಂಬಲ್ಲಿ ಹೇಳಿರುವ ಪರಮಾಚಾರ್ಯನ ಇತಿಕರ್ತವ್ಯತೆಯನ್ನು ಬೋಧಿಸುತ್ತದೆ. ಇಂತಹ ಇತಿಕರ್ತವ್ಯತೆಯನ್ನು ಚನ್ನಾಗಿ ವಿಮರ್ಶಿಸಿ ತಿಳಿದ ಪ್ರಾಜ್ಞರು ಅಂತಹ ಜ್ಞಾನವನ್ನು ಸಂಪಾದಿಸಬೇಕೆಂಬ ಕುತೂಹಲವುಳ್ಳವರೆಲ್ಲಾ, ಅವರುಗಳ ಜೀವಮಾನದಲ್ಲೇ ಸಿಕ್ಕಲಾರರಾದುದರಿಂದ, ತಮ್ಮ ಸದುಪದೇಶಗಳನ್ನೆಲ್ಲಾ ಗ್ರಂಥಮುಖೇನ ಬರೆದಿಟ್ಟು ಲೋಕಹಿತವನ್ನು ವಿಶೇಷವಾಗಿ ಮಾಡಿರುತ್ತಾರೆ. ಇಂತವರ ಮಧ್ಯದಲ್ಲಿ ಶ್ರೀ ಪರಾಶರ, ವ್ಯಾಸ, ಶುಕ ವಾಲ್ಮೀಕಾದಿಗಳು, ಮಾತ್ರವೇ ಅಲ್ಲದೇ ಶ್ರೀ ನಾಥಮುನಿ, ಯಾಮುನಮುನಿ ಶ್ರೀರಾಮಾನುಜಮುನಿ, ಶ್ರೀ ನಿಗಮಾಂತ ದೇಶಿಕರೇ ಮೊದಲಾದವರು ಮಾಡಿರುವ ಉಪಕಾರವಿಷ್ಟೆಂದು ಪರಿಗಣಿಸಲುಕೂಡ ಸಾಧ್ಯವೇಇಲ್ಲವು. ಇವರುಗಳೆಲ್ಲಾ ತಮ್ಮ ಗ್ರಂಥಗಳಮೂಲಕ ನಮಗೆಉಪದೇಶಿಸಿರುವುದು ಸರ್ವವೇದಾಂತಾರ್ಥಗಳು.

ಶ್ರೀ ಪರಾಶರರು **ತತ್ತ್ವೇನ**ಎಂಬಲ್ಲಿ ಹೇಳಿರುವಹಾಗೆ ಯಥಾರ್ಥವಾದುದನ್ನೇ ಉಪಪಾದಿಸಿರುತ್ತಾರೆ. ಆದುದರಿಂದ ಯಥಾರ್ಥವಿಲ್ಲದಿರುವದನ್ನು ಎಲ್ಲಿಯೂ ಉಪದೇಶಿಸಲಿಲ್ಲವು. ಸರ್ವಕರ್ಮಗಳಿಂದುಂಟಾದ ಬಂಧವು ತೊಲಗಿದರಲ್ಲವ್ಮೆ ಮೋಕ್ಷವು. ಹಾಗೆ ಪುಣ್ಯ ಪಾಪಗಳನ್ನೆಲ್ಲಾ ಕಳೆದುಕೊಂಡು ಪರಿಶುದ್ಧವಾದವರಿಗೆ ಮೋಕ್ಷದಲ್ಲಿ ತಾರತಮ್ಯವು ಉಂಟಾಗಲು ಕಾರಣವೇನು? ಇದು ಸರಿಯಲ್ಲವಾದುದರಿಂದ ಅವರು ಅಂತಹ ತಾರತಮ್ಯವನ್ನು ಎಲ್ಲಿಯೂ ಉಪಪಾದಿಸಲಿಲ್ಲವು. ಕರ್ಮದ ಸ್ವಲ್ಪ ಭಾಗವು ತೊಲಗಿ, ಬೇರೆ ಸ್ವಲ್ಪ ಭಾಗವು ತೊಲಗದಿರುವದರಿಂದ ಮೋಕ್ಷ ತಾರತಮ್ಯವು, ಎಂದರೆ ಕರ್ಮವೆಲ್ಲಾ ಸಂಪೂರ್ಣವಾಗಿ ತೊಲಗುವವರೆಗೂ ಮೋಕ್ಷವೆಲ್ಲಿಯದು? ಬಂಧಕಭಾಗವಿನ್ನೂ ಇದ್ದರೆ ಬಂಧವಿಮೋಚನೆಯು ಹೇಗಾಯಿತು? ಜಗತ್ತೆಲ್ಲಾ ಮಿಥ್ಯೆ ಎಂಬುದು ಅಯಥಾರ್ಥ

**ಮಾತಾಪಿತಾ ಯುವತಯ ಸ್ತನಯಾವಿಭೂತಿ |**
**ಸ್ಸರ್ವಂ ಯದೇವ ನಿಯಮೇನ ಮದನ್ವಯಾನಾಮ್ |**
**ಆದ್ಯಸ್ಯ ನಃ ಕುಲಪತೇ ರ್ವಕುಳಾಭಿರಾಮಮ್ |**
**ಶ್ರೀಮತ್ತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ || ೫ ||**

---

ವಿಷಯವು; ಅದನ್ನೂ ಎಲ್ಲಿಯೂ ಹೇಳಲಿಲ್ಲವು. ತತ್ವತ್ರಯದ ಯಾತಾರ್ಥ್ಯ ಉಂಟಾದ ಪ್ರಾಜ್ಞನಿಗೆ ಜಗನ್ಮಿಥ್ಯೆ ಹೇಗಾದೀತು? ಶ್ರೀ ಪರಾಶರರು **"ಜಗ ಚ್ಛಸಃ"** ಎಂದೂ **"ಜ್ಯೋತೀಂಷಿ ವಿಷ್ಣುರ್ಭುವನಾನಿ ವಿಷ್ಣುಃ"** ಎಂದೂ ಸಾಮಾನಾಧಿಕರಣ್ಯದಿಂದ ಹೇಳಿರುವಾಗ, ಅದೆಲ್ಲಾ ಮಿಥ್ಯೆ ಹೇಗಾದೀತು? **"ತ ತತ್ಸರ್ವಂ ವೈ ಹರೇ ಸ್ತನುಃ"** ಎಂದು (ವಿ. ಪು. ) ಉಪದೇಶಿಸಿರುವಾಗ, ಹರಿಯ ಶರೀರವೆಲ್ಲಾ ಮಿಥ್ಯೆಯೇ? ಇಂತಹ ಪ್ರಶ್ನೆಗಳೆಲ್ಲಾ ನಿರುತ್ತರವಾಗುವುದರಿಂದ ಮಿಥ್ಯಾವಾದವೇ ಹಾಸ್ಯಾಸ್ಪದವು.

ಇದು **ಪುರಾಣರತ್ನಂ** ಎಂದು ಹೇಳಲ್ಪಟ್ಟಿರುತ್ತದೆ. ಪುರಾಣವೆಂದರೆ ಹಿಂದೆಯೇ ಬಹು ಕಾಲದಿಂದ ಇರತಕ್ಕದ್ದನ್ನೇ ಈಗ ಹೊಸದಾಗಿ ತೋರ್ಪಡಿಸಿರುವ ಗ್ರಂಥವು. **"ಪುರಾಣಂ ಪಂಚ ಲಕ್ಷಣಂ"** ಎಂದು ಅಮರದಲ್ಲಿ ಹೇಳಿರುವಹಾಗೆ ಐದು ವಿಷಯಗಳು ಅದರಲ್ಲಿ ಇರತಕ್ಕದ್ದು?. **ಸರ್ಗ** ವೆಂದರೆ ಸೃಷ್ಟಿಯು. **ಪ್ರತಿಸರ್ಗ** ವೆಂದರೆ ಪ್ರಳಯವೂ, **ವಂಶ** ಕ್ರಮವೂ, **ಮನ್ವಂತರಗಳೂ, ವಂಶಾನುಚರಿತವೂ** ಇವುಗಳ ವಿಚಾರವಿರಬೇಕು. ಇವುಗಳು ವಿಶದವಾಗಿಯೂ ಯಥಾರ್ಥವಾಗಿಯೂ ಈ ವಿಷ್ಣುಪುರಾಣದಲ್ಲಿ ಉಪಪಾದಿತವಾದುದರಿಂದ **ಪುರಾಣರತ್ನವು,**

**ಅವತಾರಿಕೆಯು:—** ಅನಂತರ ಶ್ರೀ ಪರಾಶರರ ಪುರಾಣರತ್ನಕ್ಕಿಂತಲೂ ವೇದಾಂತ ರಹಸ್ಯಗಳ ವೈಶದ್ಯಾತಿಶಯಕ್ಕೆ ಕಾರಣಭೂತಗಳಾಗಿ, ಒಡನೆಯೇ ಪಠಿಸುವವರಿಗೆ ಪರಮಾತ್ಮನಲ್ಲಿ ಮನಸ್ಸು ನಿಂತು ನಿರತಿಶಯ ಭಕ್ತ್ಯುತ್ಪಾದಕವಾಗಿ, ವೇದಾಂತೋದಿತವಾಗಿರುವ ತತ್ವಗಳನ್ನೆಲ್ಲಾ ರಸವತ್ತಾಗಿ ಉಪಬ್ರಂಹಣಮಾಡಿರುವ ದ್ರಾವಿಡ ಪ್ರಬಂಧವನ್ನು ಅನುಗ್ರಹಿಸಿ, ಮಧುರಕವಿ ಮೊದಲುಗೊಂಡು ಸಂಪ್ರದಾಯರೀತ್ಯಾ ನಾಥಮುನಿಗಳಿಗೂ ಪರಮೋಪಕಾರಕರಾದ ಉಪದೇಷ್ಟಾವಾಗಿ ಸರ್ವೋಪನಿಷತ್ಸಾರಭೂತಾರ್ಥಗಳನ್ನೆಲ್ಲಾ ದಯಪಾಲಿಸಿದ ಪರಾಂಕುಶಮುನಿಗಳಿಗೂ (ಶ್ರೀ ನಮ್ಮಾಳ್ವಾರ್) ಕೃತಜ್ಞತಾಪುರಸ್ಸರವಾದ ಪ್ರಣಾಮವನ್ನೆಸಗುತ್ತಾರೆ. ಶ್ರೀಪರಾಶರರ ಗ್ರಂಥಕ್ಕೆ ಪ್ರಾಶಸ್ತ್ಯವು. **"ತತ್ವೇನ"** ಯಥಾರ್ಥವಾದ ವೇದೋಪಬ್ರಹ್ಮಣಮೂಲಕವಾಗಿ ಎಂದು ಹೇಳಲ್ಪಟ್ಟಿತು. ಶ್ರೀ ನಮ್ಮಾ

ಳ್ವಾರವರ ಗ್ರಂಥಕ್ಕಾದರೋ ಇದಕ್ಕಿಂತ ಹೆಚ್ಚು ಅತಿಶಯವು; ಏಕೆಂದರೆ ಆಳ್ವಾರವ ರು ಅವರಹಾಗೆಯೇ ಯಥಾರ್ಥವಾದ ವೇದೋಪಬ್ರಹ್ಮಣವನ್ನೇ ರಸವತ್ತಾಗಿ ಭಕ್ತಿರಸದಿಂದ ತುಳಕಾಡುವಹಾಗೆ ಮಾಡಿ, ನಾಯಕಿ ನಾಯಕ ಪ್ರಸಂಗರೂ ದಲ್ಲಿ ಬಹು ಮಧುರವಾಗಿಯೂ ಮನೋಹರವಾಗಿಯೂ ಉಪದೇಶಿಸಿರುವವ ರಿಂದ ಎಂದು ಭಾವಿಸತಕ್ಕದ್ದು. ಆದುದರಿಂದ ಸರ್ವೋಪನಿಷತ್ತುಗಳ ಸಾರ ಭೂತವಾದ ಉಪದೇಷ್ಟಾವಾದುದರಿಂದ **ಪ್ರಣಮಾಮಿ ಮೂರ್ಧ್ನಾ** ಎಂದು ನಮ ಸ್ಕರಿಸುತ್ತಾರೆ. ಇನ್ನೊಂದು ಮುಖ್ಯ ಕಾರಣವು ಈ ಪ್ರಣಾಮಕ್ಕೆ ಯಾವುದು? ಎಂದರೆ ತಮಗೆ ಆಚಾರ್ಯರೂ ಪಿತಾಮಹರೂ ಆದ ನಾಥಮುನಿಗಳಿಗೆ ತಮ್ಮ ಗ್ರಂಥ ವಾದ ತಿರುವಾಯ್ ಮೊಳಿಯನ್ನೆಲ್ಲಾ ಉಪದೇಶಿಸಿ, ತನ್ಮೂಲಕ ಲೋಕಹಿ ತಾರ್ಥವನ್ನು ಮಾಡಿ, ಪ್ರಪನ್ನಜನ ಕೂಟಸ್ಥರೆಂಬ ಬಿರುದನ್ನು ಹೊಂದಿದರಿಂದ ತುಂಬಾ ಸ್ತುತ್ಯರ್ಹರೆಂಬ ಭಾವವು.

**ಅರ್ಥವು:—** ಮೊದಲು ಶ್ರೀ ಪರಾಶರರನ್ನು ನಮಸ್ಕರಿಸಿ ಅನಂತರ ನಮ್ಮಾಳ್ವಾರವರನ್ನು ನಮಸ್ಕರಿಸಿದ ಕ್ರಮಕ್ಕೆ ಕಾರಣವೇನೆಂದರೆ? ಅವರವ ರುಗಳು ಉಪಜೀವ್ಯಗಳಾದ ಗ್ರಂಥನಿರ್ಮಾಣಮಾಡಿದ ಕ್ರಮವನ್ನು ಮನಸ್ಸಿನಲ್ಲಿ ಟ್ಟು ಹಾಗೆ ಪ್ರಣಾಮಗಳನ್ನೆಸಗಿರುತ್ತಾರೆ—

**ನಃ** = ನಮ್ಮೆಲ್ಲರಿಗೂ, ಮತ್ತು **ಮದನ್ವಯಾನಾಂ** - ನಮ್ಮ ಕುಲದಲ್ಲಿ ಹುಟ್ಟಿದವರಿಗೂ, ನಮ್ಮ ಶಿಷ್ಯಪ್ರಶಿಷ್ಯರಾದವರ ವಂಶದಲ್ಲಿ ಮುಂದಕ್ಕೆ ಹುಟ್ಟು ವವರಿಗೂ, **ಮಾತಾ** - ಹಿತಪ್ರವರ್ತಕಳಾಗಿಯೂ ಸತ್ತೆಯನ್ನು ಕೊಟ್ಟು ಪೋ ಷಕಳಾಗಿಯೂ ಇರುವ ತಾಯಿಯೂ ಅವರೇ, **ಪಿತಾ** - ವಿದ್ಯಾ ಬುದ್ಧಿ ವಿವೇಕ ಗಳನ್ನುಂಟುಮಾಡುವಹಾಗೆ ಶಾಸಿತಾವಾದ ತಂದೆಯೂ ಅವರೇ **ಯುವತಯಃ** - ಲೀಲೆಗಳಿಂದಲೂ ಮೃದುವಾಕ್ಯಗಳಿಂದಲೂ ಆನಂದರಸವನ್ನು ಹೆಚ್ಚಿಸಿ, ಪ್ರೀತಿ ಯನ್ನು ಅಭಿವೃದ್ಧಿಗೊಳಿಸುವ ಹೆಣ್ಣುಮಕ್ಕಳೂ **ತನಯಾಃ** - ತಮ್ಮ ವಿಹಿತ- ವಾದ ಮನೋಹರವಾದ ವ್ಯಾಪಾರಗಳಿಂದ ಮಾತಾಪಿತೃಗಳನ್ನು ಆನಂದಗೊಳಿ ಸುವ ಗಂಡುಮಕ್ಕಳೂ, **ವಿಭೂತಿಃ** - ದಾಸ, ಭೃತ್ಯ, ಧನ, ರತ್ನಮೊದಲಾದ ಶೇಷಭೂತವಾದವೂ, ಅಥವಾ ನಿಯಾಮ್ಯವರ್ಗವೂ, **ಸರ್ವಂ** - ಇವೆಲ್ಲವೂ **ನಿಯಮೇನ** - ಈ ಬದ್ಧದೆಶೆಯಲ್ಲೂ, ಮುಕ್ತಿದೆಶೆಯಲ್ಲೂ ಹೀಗೆ ಯಾವಾಗ ಲೂ, **ಯತ್** - ಯಾವ ಪ್ರಸಿದ್ಧರಾಗಿ ಭಕ್ತಿರಸದಿಂದ ತುಂಬಿ ತುಳುಕಾಡುವ ಹಾಗೆ ನಮ್ಮಗಳ ಉಜ್ಜೀವನಾರ್ಥವಾಗಿ ತಿರುವಾಯ್‌ಮೊಳಿ ಮುಂತಾದ ಗ್ರಂಥ ವನ್ನು ರಚಿಸಿ ಅನುಗ್ರಹಿಸಿದ ನಮ್ಮಾಳ್ವಾರ್‌ರವರ ಪಾದಕಮಲ ದ್ವಂದ್ವವು ಯಾವುದೋ, ಆ ನಮ್ಮಾಳ್ವಾರವರು ಎಂತವರೆಂದರೆ ಹೇಳುತ್ತಾರೆ. **ಆದ್ಯಸ್ಯ**- ನಮಗಿಂತ ಹಿಂದಿನವರಿಗೂ ಕೂಡ ತತ್ಪರ ಪುರುಷಾರ್ಥಗಳನ್ನೂ **ಬೋಧಿ**

ಸಿರುವುದರಿಂದ ಪ್ರಪನ್ನ ಜನ ಸಮುದಾಯದಲ್ಲಿ ಆದಿ ಎಂದೆನಿಸಿರುವ, **ಕುಲಪತೇ** ನಮಗೂ ನಮಗೆ ಸಂಬಂಧಿಸಿವರಿಗೂ ಸಹ, ನಾಥಮುನಿ ಸಂಪ್ರದಾಯವನ್ನೂ ಅನುಸರಿಸಿದವರಿಗೂ ಮತ್ತು ಸಾಕ್ಷಾತ್ತಾಗಿ ಅವರ **ವಂಶಕ್ಕೂ** ಸೇರಿದ ನಮ್ಮ **ಕೂಟಕ್ಕೆ** ಸ್ವಾಮಿಯಾದವರ, **ಶ್ರೀಮತ್ತದಂಘ್ರಿಯುಗಳಂ** — ಮೋಕ್ಷ ಸಾಮ್ರಾಜ್ಯಕ್ಕೆ ಸಹಕಾರಿ ಯಾಗಿರುವ ಪಾದಕಮಲದ್ವಂದ್ವವನ್ನೂ, **ಮೂರ್ಧ್ನಾ** ಶಿರಸ್ಸಿನಿಂದ, **ಪ್ರಣಮಾಮಿ** — ನಮಸ್ಕರಿಸುವೆನು, ಆ ಪಾದಕಮಲವು ಎಂತಾದ್ದೆಂದರೆ **ವಕುಳಾಭಿರಾಮಂ** — ಶ್ರೀನಮ್ಮಾಳ್ವಾರವರು ಅವತರಿಸಿದ ಆಳ್ವಾರತ್ತಿರುನಗರಿಯಲ್ಲಿ ಬಹು ಶೀತಳವಾಗಿಯೂ, ಮಕರಂದ ಪರಿಪೂರ್ಣವಾಗಿಯೂ ಇರುವ ವಕುಳ ಪುಷ್ಪ ವಿಶೇಷವಾಗಿರುವುದರಿಂದ, ವಕುಳ ಪುಷ್ಪದಿಂದ ಮನೋಹರವಾಗಿ ಶೋಭಿಸುವ ಪಾದದ್ವಂದ್ವವನ್ನು ಶಿರಸಾ ನಮಸ್ಕರಿಸುವನೆಂಬ ಭಾವನೆಯು. ಆದುದರಿಂದ ವಕುಳ ಪುಷ್ಪವು ಅಲ್ಲಿನ ಆದಿನಾಥಸ್ವಾಮಿಗೆ ತುಂಬಾ ಪ್ರಿಯವೆಂಬ ಭಾವವು.

**ಉಪಪಾದನೆಯು**—ಈ ಶ್ಲೋಕವು ಶ್ರೀ ಯಾಮುನ ಮುನಿಗಳು ಅನುಗ್ರಹಿಸಿದ ನಮ್ಮಾಳ್ವಾರ್ ವಿಷಯವಾದ ತನಯವೆಂದುಭಾವಿಸಿ,ಪ್ರಥಮತಃ ಈ ಶ್ಲೋಕವನ್ನೇಪಠಿಸುವ ಸಂಪ್ರದಾಯವು ಈಗಲೂ ಇರುತ್ತದೆ. ಈ ನಮ್ಮಾಳ್ವಾರ ಪಾದಗಳಿಗೆ ಎರಗುವಾಗ ಅವುಗಳನ್ನು ಸ್ತುತಿಸುತ್ತಾರೆ. — ಅದೇ ತಮಗೆ ಸರ್ವವಿಧ ಸುಖಗಳನ್ನೂ ಪುರುಷಾರ್ಥಗಳನ್ನೀಯುವ ಬಂಧುವರ್ಗವೆಂದು ಶ್ಲಾಘಿಸುತ್ತಾರೆ — ಅದೇ **ಮಾತಾ** —ತಾಯಿಯು ; ತಾಯಿಯು ಹೇಗೆ **ಮಾತೃದೇವೋ ಭವ** ಎಂಬ ಶ್ರುತಿ ವಾಕ್ಯದ ಪ್ರಕಾರ ಈ ಬದ್ಧದಶೆಯಲ್ಲಿ ತನ್ನ ಜನ್ಮಕ್ಕೆ ಕಾರಣ ಭೂತಳಾಗಿಯೂ ತನಗೆ ಸ್ತನ್ಯವನ್ನು ಕೊಟ್ಟು, ಮೊಗುವಿನಿಂದುಂಟಾಗುವ ಅಶುಚಿ ಅಸೌಖ್ಯ ಮೊದಲಾದವನ್ನೆಲ್ಲಾ ಸಹಿಸಿಕೊಂಡು, ಕಾಲಕಾಲಗಳಲ್ಲಿ ಆಹಾರವನ್ನಿತ್ತು ಸತ್ತಾದಾಯಕಳಾಗಿ ಎಲ್ಲರಿಗಿಂತಲೂ ಪ್ರಥಮತಃ ವಿಶೇಷಪೂಜ್ಯಳೋ, ಹಾಗೆಯೇ ಇವರ ಪಾದದ್ವಂದ್ವವು ಸತ್ತಾದಾಯಕವಾಗಿ ವಿಶೇಷ ಮಾನ್ಯವಾದುದು ಎಂಬ ಭಾವವು **ಮಾತಾ** ಎಂದು ಪ್ರಥಮತಃ ಹೇಳಿರುವರು " **ಪಿತುಶ್ಶತಗುಣಾ ಮಾತಾ ಗೌರವೇಣಾತಿರಿಚ್ಯತೇ** " ಇವೇ ಮೊದಲಾದ ಪ್ರಮಾಣಗಳಲ್ಲಿ ತಾಯಿಗೆ ಹೆಚ್ಚಾದ ಗೌರವವು ವ್ಯಕ್ತವು. ಈ ಅಭಿಪ್ರಾಯದಿಂದಲೇ ಶ್ರುತಿಯು **ಮಾತೃದೇವೋ ಭವ** ಎಂದು ಮೊದಲು ಹೇಳಿ ಅನಂತರ **ಪಿತೃದೇವೋ ಭವ** ಎಂದು ಹೇಳಿತು.ಮಾತಾ ಪಿತೃಗಳಿಂದ ಜನ್ಮವನ್ನೆತ್ತಿದರಲ್ಲವೇ ಆಚಾರ್ಯನು ಬೇಕಾಗತಕ್ಕದ್ದು,ಆ ಕಾರಣದಿಂದ ಆಚಾರ್ಯ ದೇವೋ ಭವವೆಂದು ಮಾತಾ ಪಿತೃಗಳಾದ ನಂತರ ಹೇಳಿತು. " **ಯತ್ರಾನುಕೂಲ್ಯಂ ದಂಪತ್ಯೋಸ್ತ್ರಿವರ್ಗಸ್ತತ್ರ ವರ್ಧತೇ** " ಎಂದು ಧರ್ಮಾರ್ಥಕಾಮ, ಗಳಾದ ಐಹಿಕ ಸುಖಗಳಿಗೆ ದಾಂಪತ್ಯಾನುಕೂಲವು ಮುಖ್ಯವಾದುದರಿಂದ, **ಯುವತ್ಯಯಃ** ಎಂದು ಹೇಳಲ್ಪಟ್ಟಿವು. **ತನಯಾಃ** ಎಂಬ ಪ್ರಯೋಗದಿಂದ, ಅವರನ್ನು

ನೋಡುವದು, ಎತ್ತಿಕೊಳ್ಳುವದು, ಮುದ್ದಾಡುವದು, ಅವರುಗಳು ಅಭಿವೃದ್ಧಿಗೆ ಬಂದರೆ ನೋಡಿ ಆನಂದಿಸುವದು, ತಾನು ವೃದ್ಧನಾದಾಗ ಅವರಿಂದ ಶುಶ್ರೂಷಾದಿಗಳನ್ನು ಹೊಂದುವದು, ಇವೇ ಮೊದಲಾದ ಭೋಗಗಳು ಯಾವುವೋ ಇವೆಲ್ಲಕ್ಕೂ ಅತಿಶಯವಾದ ಆನಂದವು ಪರಮಾಚಾರ್ಯ ಸ್ಥಾನದಲ್ಲಿರುವ ನಮ್ಮಾಳ್ವಾರವರ ಪಾದ ಕಮಲ ಸೇವೆಯಿಂದ ಉಂಟಾಗುತ್ತವೆಂದು ಹೇಳಿರುತ್ತಾರೆ. **"ಆಸ್ಫೋಟಯಂತಿ ಪಿತರಃ ಪ್ರನೃತ್ಯನ್ತಿ ಪಿತಾಮಹಾಃ। ವೈಷ್ಣವೋ ನಃ ಕುಲೇ ಜಾತ ಸ್ಸನ್ಸಂತಾರಯಿಷ್ಯತಿ"** ಎಂಬಲ್ಲಿ ಹೇಳಿರುವಹಾಗೆ, ನಮ್ಮ ಕುಲದಲ್ಲಿ ಒಬ್ಬನು ಹುಟ್ಟಿ ವಿಷ್ಣುವನ್ನು ಆಶ್ರಯಿಸಿದನೆಂದು ಪಿತೃ ಪಿತಾಮಹ ಪ್ರಪಿತಾಮಹರುಗಳೆಲ್ಲಾ ಆನಂದಿಸುವರೆಂದು ಹೇಳಿರುವದರಿಂದ **ತನಯಾಃ** ಎಂದು ಹೇಳಲ್ಪಟ್ಟಿತು. ಅದು ತಮಗೆ ನಮ್ಮಾಳ್ವಾರವರೇ ಎಂದು ಹೇಳಿದರು. **ವಿಭೂತಿ** ಶಬ್ದದಿಂದ ದಾಸರೂ ಭೃತ್ಯರೂ ಕ್ಷೇತ್ರ, ಧನ ರತ್ನಾದಿ ತನಗೆ ಆನಂದವನ್ನುಂಟುಮಾಡುವ ನಿಯಾಮ್ಯ ವರ್ಗವು ಹೇಳಲ್ಪಟ್ಟಿತು. ಧಾರಕ ಪೋಷಕಾದಿ ರೂಪವಾದುದು; ಇಂತಹ ವಿಭೂತಿಯು ಎಲ್ಲವೂ ಅವರ ಪಾದಕಮಲವೇ. ಇಲ್ಲಿ **ಸರ್ವಂ** - ಎಂದು ಹೇಳಿರುವದರಿಂದ ಇವಲ್ಲದೆ ಬೇರೇ ಐಹಿಕಾಮುಷ್ಮಿಕ ಪುರುಷಾರ್ಥ ಸಾಧನವಾಗಿರುವದೆಲ್ಲವೂ ಹೇಳಲ್ಪಟ್ಟಿತು. **ಯತ್** ಎಂಬುದು ಇಲ್ಲಿ ಪ್ರಸಿದ್ಧಾರ್ಥವುಳ್ಳದ್ದು; ಸಾತ್ವಿಕಗುಂಪಿನಲ್ಲಿಯಾವುದು ಪ್ರಸಿದ್ಧವೋ ಎಂಬರ್ಥವು. **ಯದೇವ** ಎಂಬ ಅವಧಾರಣ ಪ್ರಯೋಗದಿಂದ, ಇದೊಂದೇ ದೃಷ್ಟಾದೃಷ್ಟರೂಪವಾದ ಸರ್ವಪುರುಷಾರ್ಥಗಳಿಗೂ ಹೇತುವಾಗಿ ಇನ್ನೂ ಯಾವುದರ ಅಪೇಕ್ಷೆಯೂ ಇಲ್ಲವೆಂಬ ಭಾವವು ಸೂಚಿತವು. **ಯದೇವ ನಿಯಮೇನ** ಎಂಬ ಪ್ರಯೋಗಗಳಿಂದ, ಭಗವಂತನ ಕೃಪೆಯಿಂದ ಇವೆಲ್ಲವೂ ನಿರತಿಶಯವಾಗಿಯೂ ಕ್ಷಿಪ್ರವಾಗಿಯೂ ಸಂದೇಹವಿಲ್ಲದೆಯೂ ದೊರೆಯುತ್ತವೆಂಬ ಭಾವವು ದ್ಯೋತಿತವು. ಈ ಆಚಾರ್ಯ ಕೃಪೆಯು, ಪರಮಪುರುಷನ ನಿಗ್ರಹ ಸಂಕಲ್ಪವನ್ನೂ ಅಡಗಿಸಿ, ಅನುಗ್ರಹವನ್ನು ನಿಸ್ಸಂಶಯವಾಗಿ ಸಂಪಾದಿಸಿ ಕೊಡುವಂತಾದ್ದೆಂಬುದೂ ಸೂಚಿತವು. ಇದೂ ಅಲ್ಲದೆ ಸರ್ವೇಶ್ವರನೂ ತಾನೇ ಪ್ರತ್ಯಕ್ಷದಲ್ಲಿದ್ದು ನಮ್ಮ ಉಪದೇಶಕ್ಕಾಗಿಯೇ ಕಾದಿರಲಾರನು, ಆಚಾರ್ಯರಾದರೋ ನಮ್ಮ ಉಪದೇಶಕ್ಕಾಗಿ ಕಾದು ಇದ್ದು, ಆಶ್ರಯಿಸಿದವರನ್ನು ಹೇಗಾದರೂ ಮಾಡಿ ಭಗವಂತನ ಕೃಪೆಗೆ ಪಾತ್ರರನ್ನಾಗಿ ಮಾಡಬೇಕೆಂಬ ದೃಢಸಂಕಲ್ಪವನ್ನು ಧರಿಸಿರುತ್ತಾರೆಂದೂ ಆದುದರಿಂದ ತನಗಿಂತಲೂ ಪೂಜಿಸಲ್ಪಡಲು ಅರ್ಹರೆಂದೂ ಭಾವಿಸಿರುವನು. ಆದುದರಿಂದ ತಾನು ಭಕ್ತಪರಾಧೀನನೆಂದು ಹೇಳಿಕೊಂಡಿರುತ್ತಾನೆ. ಇದನ್ನು ಅಂಬರೀಷೋಪಾಖ್ಯಾನದಲ್ಲಿ ಕಾಣಬಹುದು. ರಾಮಾವತಾರಿಯಾಗಿ, ವಿಶ್ವಾಮಿತ್ರರ ಎದುರಿಗೆ ನಿಂತು **"ಇಮೌ ಸ್ಮ ಮುನಿಶಾರ್ದೂಲ ಕಿಂಕರೌ ಸಮುಪಸ್ಥಿತೌ। ಆಜ್ಞಾಪಯ ಯಥೇಷ್ಟಂ ವೈ ಶಾಸನಂ ಕರವಾವ ಕಿಮ್"** ಎಂದು

ಹೇಳಿಕೊಂಡಿರುತ್ತಾರೆ. ಹಾಗಿರುವದರಿಂದ **"ದೇವಮಿವ ಆಚಾರ್ಯಮುಪಾಸೀತ"** ಎಂಬ ಹೇಳಿಕೆಗೆ ಅನುಸಾರವಾಗಿ, ಭಗವಂತನು ಹೇಗೆ "ಮಾತಾ ಪಿತಾ ಭ್ರಾತಾ" ಎಂಬ ಶ್ರುತಿವಾಕ್ಯವನ್ನನುಸರಿಸಿ ತಾವೇ ಮುಂದೆ "ಪಿತಾತ್ವಂ ಮಾತಾತ್ವಂ" ಎಂದು ಹೇಳಿರುವ ಹಾಗೆ ಈ ನಮ್ಮಾಳ್ವರವರೂ "ಮಾತಾ ಪಿತಾ" ಎಂದು ಹೇಳಲ್ಪಟ್ಟರು. "**ನಹ್ಯಮ್ಮಯಾನಿ ತೀರ್ಥಾನಿ ನದೇವಾಮೃಚ್ಛಿಲಾಮಯಾಃ। ತೇ ಪುನನ್ತ್ಯುರು ಕಾಲೇನ ದರ್ಶನಾದೇವ ಸಾಧವಃ**" ಎಂದೂ, "ಆಚಿನೋತಿ ಹಿ ಶಾಸ್ತ್ರಾರ್ಥಾನ್ ಆಚಾರೇ ಸ್ಥಾಪಯತ್ಯಪಿ। ಸ್ವಯಮಾಚರತೇ ಯಸ್ಮಾತ್ತಸ್ಮಾದಾಚಾರ್ಯ ಉಚ್ಯತೇ" ಎಂಬ ಪ್ರಮಾಣಗಳಿಂದ ಈ ಅಭಿಪ್ರಾಯವು ವ್ಯಕ್ತವು. ಪರಮಪುರುಷನೂ ದೈತ್ಯಾದಿಗಳಿಗೆ ಉಪದೇಶಿಸುವಾಗ ಅವರುಗಳ ಕರ್ಮಾನುಸಾರ ವಂಚಿಸಿ ತಪ್ಪು ಉಪದೇಶಗಳನ್ನು ಮಾಡಿರುವುದುಂಟು. ನಮ್ಮ ಆಚಾರ್ಯರುಗಳಾದರೋ ಪರಮಾರ್ಥವನ್ನು ಉಪದೇಶಿಸುವರೇ ವಿನಾ, ಶಾಸ್ತ್ರವಿರುದ್ಧವಾದವುಗಳನ್ನು ಎಂದಿಗೂ ಉಪದೇಶಿಸಲಾರರು. ಇನ್ನೊಂದು ವಿಶೇಷ ಮಹಿಮೆಯನ್ನು ಆಚಾರ್ಯರುಗಳ ವಿಷಯದಲ್ಲಿ ಗಹಿಸತಕ್ಕದ್ದಿರುತ್ತದೆ. ಭಾಗವತಾಪರಾಧವನ್ನು ಸ್ವಾಮಿಯು ಎಂದಿಗೂ ಕ್ಷಮಿಸನು. ಆಚಾರರಾದರೋ ಭಗವತಾಪರಾಧ ಭಾಗವತಾಪರಾಧಗಳೆರಡನ್ನೂ ಹೋಗಲಾಡಿಸಲು ಶಕ್ತಿಯುಳ್ಳವರು. ಸುಗ್ರೀವನು ಕಾಲವಿಳಂಬಮೂಲಕ ಶ್ರೀರಾಮನಲ್ಲಿ ಮಾಡಿದ ಅಪರಾಧವೂ ಲಕ್ಷ್ಮಣನಲ್ಲಿ ಮಾಡಿದ ಕ್ಷಮಾಪಣೆಯಿಂದ ಕಳೆಯಿತು, ಎಂಬುವುದು ಇದಕ್ಕೆ ನಿದರ್ಶನವು. ಇದರಿಂದಲೇ ನಮ್ಮಾಳ್ವಾರವರ ಪಾದಕಮಲಗಳೇ ತಮಗೆ ಎಲ್ಲವೂ ಎಂದು ಹೇಳಿಕೊಂಡರು. **ಆದ್ಯಸ್ಯ** ಎಂದು ಹೇಳಿದುದರಿಂದ ಹಿಂದೆ ತಮಗೆ ಸೇರಿದ ಪೂರ್ವಿಕರಿಗೂ ಕೂಡ ಜ್ಞಾನವೈರಾಗ್ಯ ಪ್ರಾಪ್ತಿಗೆ ಹೇತುವೆಂಬ ಭಾವವು ಸೂಚಿತವು. **ನಃ** - ತಮ್ಮ ಪಿತಾಮಹರಾದ ನಾಥಮುನಿಗಳ ಸಂಪ್ರದಾಯಕ್ಕೆ ಸೇರಿದ ತಮ್ಮೆಲ್ಲರಿಗೂ **ಕುಲಪತಿಯು** ನಮ್ಮಾಳ್ವಾರ್ರವರು ಎಂದು ಹೇಳಿದುದರಿಂದ, ಸರ್ವೇಶ್ವರನು ಎಲ್ಲರಿಗೂ ಸಾಧಾರಣನಾದ ಕುಲಪತಿಯಾದರೂ, ನಮ್ಮಗಳಿಗಾದರೋ ಇವರು ಅಸಾಧಾರಣ**ಕುಲಪತಿಯು**; ಏತಕ್ಕೆಂದರೆ ಮಧುರಕವಿ ಆಳ್ವಾರ್ರವರ "ಕಣ್ಣಿನುಣ್ ಶಿರುತ್ತಾಂಬು" ಎಂಬ ಪಾಶುರಗಳನ್ನು ಬಹುಸಲ ಪಠಿಸಿ ನಮ್ಮಾಳ್ವಾರ್ರವರನ್ನು ಸಾಕ್ಷಾತ್ಕರಿಸಿದನಂತರ ಅವರು ತಿರುವಾಯ್ ಮೊಳಿಯನ್ನೆಲ್ಲಾ ಸಮಗ್ರವಾಗಿ ತಮ್ಮ ಗುರುವಾದ ಪಿತಾಮಹರಿಗ ಉಪದೇಶಿಸಿದುದರಿಂದ, ಅಸಾಧಾರಣ **ಕುಲಪತಿಯು.** ಯೋಗಾಭ್ಯಾಸದ ಮಹಿಮೆಯನ್ನೂ. ಭರನ್ಯಾಸದ ಮಹಿಮೆಯನ್ನೂ, ಎರಡನ್ನೂ ಚೆನ್ನಾಗಿ ಅರಿತವರಾದರೂ ತಾವು ಶಕ್ತರೆಂದು ಭಾವಿಸಿ, ಭಕ್ತಿಯೋಗ ಮಹಿಮೆಯನ್ನು ತಾವೇ ತಮ್ಮ ಶಿಷ್ಯರಿಗೆ ಉಪದೇಶಿಸಿದುದರಿಂದಲೂ, ಶ್ರೀನಮ್ಮಾಳ್ವಾರವರತಿರುವಾಯ್‌ಮೊಳಿಮೂಲಕಭರನ್ಯಾಸ ಮಹಿಮೆಯನ್ನು ಹರಡಿದುದರಿಂದಲೂಅಸಾಧಾರಣ**ಕುಲಪತಿಯು.**

ಪರಮಾತ್ಮ ಜೀವಾತ್ಮರಲ್ಲಿ ಶೇಷಿ ಶೇಷ ಭಾವವನ್ನೂ ರಕ್ಷಕ ರಕ್ಷ್ಯಾದಿ ಸಂಬಂಧಗಳನ್ನೂ ನಿಪುಣತರವಾಗಿ ಸ್ಥಾಪಿಸಿರುವ ತಿರುವಾಯ್ಮೊಳಿಯನ್ನು ಅನುಗ್ರಹಿದುದರಿಂದಾಗಲಿ, ಅಸಾಧಾರಣ **ಕುಲಪತಿಯು.**

ಪರತತ್ವ ನಿರ್ಣಯವನ್ನೂ, ಪರಮಹಿತೋಪದೇಶವನ್ನೂ, ಪರಮಪುರುಷಾರ್ಥಪ್ರಾಪ್ತಿಯನ್ನೂ ಬಹು ಮನೋಹರವಾಗಿ ತಮ್ಮ ಗ್ರಂಥದ ಮೂಲಕ ಪುಷ್ಪಪರಿಮಳದಹಾಗೆ ಹರಡಿರುವುದರಿಂದ ವಕುಳ ಕುಸುಮದ ಹಾಗೆ ಅಭಿರಾಮವಾದುದು ಅವರ ಪಾದಕಮಲವೆಂದು ಹೇಳಲ್ಪಟ್ಟಿತು **ಅಂಘ್ರಿಯುಗಳಕ್ಕೆ** ಶ್ರೀಮಚ್ಛಬ್ಧ ವಿಶೇಷಣದ ಮೂಲಕ ವೈಷ್ಣವ ಸಾಮ್ರಾಜ್ಯ ಚಿಹ್ನೆಗಳಿಂದ ತಾವೇ ಅಲಂಕೃತರಾಗಿ, ತಮ್ಮನ್ನು ಆಶಯಿಸಿದವರಿಗೂ ಅಂತಹ ಸಾಮ್ರಾಜ್ಯಪ್ರದರಾಗಿದ್ದಾರೆಂಬುದು ಸೂಚಿತವು **' ಸತುನಾಗವರ ಶ್ರೀಮಾನ್ "** ಎಂದು ಗ್ರಾಹಗ್ರಸ್ತನಾದ ಗಜೇಂದ್ರನಿಗೂ, **' ಅಂತರಿಕ್ಷಗತ ಶ್ರೀಮಾನ್ "** ಎಂದು ರಾವಣನಿಂದ ಧಿಕ್ಕರಿಸಲ್ಪಟ್ಟ ಸರ್ವವನ್ನೂ ತ್ಯಾಗಮಾಡಿಬಂದ ವಿಭೀಷಣನಿಗೂ ಹೇಗೆ ಶ್ರೀಮಚ್ಛಬ್ಧ ಪ್ರಯೋಗದಿಂದ ಪರಮಪುರುಷಾನುಗ್ರಹರೂಪ ಸಂಪತ್ತು ದ್ಯೋತಿತವೋ, ಹಾಗೆಯೇ ಇವರ ಪಾದಕಮಲವೂ ಶ್ರಿಯಃಪತಿಯ ಅನುಗ್ರಹರೂಪ ಸಾಮ್ರಾಜ್ಯವನ್ನು ಹೊಂದಿಸುವಂತಾದ್ದೆಂಬ ಭಾವವು.

ಹೀಗೆ ಮಹಿಮೆಯನ್ನು ಹೊಂದಿದ ಪಾದವಾದುದರಿಂದ ಆ ಪಾದಗಳು ನಿರತಿಶಯವಾಗಿ ಬೇರೆ ಯಾವ ಉಪಮೆಯೂ ಇಲ್ಲವೆಂಬ ಭಾವದಿಂದ ಅದಕ್ಕೆ ಅದೇ ಸಮಾನವೆಂಬ ಭಾವದಿಂದ ಅಂಘ್ರಿಯುಗಳಂ ಎಂದು ಪ್ರಯೋಗಿಸಿರುತ್ತಾರೆ. **ಪ್ರಣಮಾಮಿ** ಎಂದು ಪ್ರಣಾಮವನ್ನೆಸಗುವುದು ಭಕ್ತಿಯ ಪರಾಕಾಷ್ಠೆಯನ್ನು ಪ್ರದರ್ಶಿಸುತ್ತದೆ. ಪ್ರಣಾಮವನ್ನು ಸರ್ವಕರಣಗಳಿಂದಲೂ ಮಾಡತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. — **ಸರ್ವೈಃ ಕರಣೈರ್ನಮಸ್ಯೇ ಸಮಗ್ರೋ ಭವತಿ, ಸಮಗ್ರೋ ನಮ್ರ ಆಪ್ತಕಾರೀ ಭವತಿ, ಆಪ್ತಕಾರೀ ಭಗವಂತಂ ಪ್ರಾಪ್ನೋತಿ "** ಅಂತಹ ಪ್ರಣಾಮವು ಹೀಗೆ ಶ್ಲಾಘಿಸಲ್ಪಟ್ಟಿರುತ್ತದೆ. ಮನಸ್ಸಿನಿಂದ ಪ್ರಣಾಮಕ್ಕಿಂತಲೂ, **ವಾಚಾನಮಃ** ಎಂದು ಹೇಳುವುದಕ್ಕಿಂತಲೂ ಶಿರಸಾ ಕಾಯೇನ ಪ್ರಣಾಮವು ಅತ್ಯುತ್ಕೃಷ್ಟವಾದುದು. ಇಂತಹ ಮೂರ್ಧ್ನಾ ಪ್ರಣಾಮವು ನಾಲ್ಕು ವಿಧವು :— **ಪಂಚಾಂಗ ಪ್ರಮಾಣವು** —' **ಪಾದಾಂಗುಳಿಭ್ಯಾಂ ಜಾನುಭ್ಯಾಂ ಶಿರಸಾಸ್ಪೃಶೇ| ಬದ್ಧಾಂಜಲಿರ್ನಮಸ್ಕುರ್ಯಾತ್ಪಂಚಾಂಗ ಉದೀರಿತೇ'** ಅರ್ಥವು ವ್ಯಕ್ತವು ( ವೈಖಾನಸೇ ). **ಷಡಂಗ ಪ್ರಣಾಮವು — ನಿಧಾಯ ದಂಡವದ್ದೇಹಂ ಪ್ರಸಾರ್ಯ ಚರಣೌ ಕರೌ| ಬದ್ಧ್ವಾ ಮುಕುಳವತ್ಪಾಣೀ ಪ್ರಣಾಮೋ ದಂಡಸಂಜ್ಞಿತಃ||'** (ಶಾಂಡಿಲ ಸ್ಮೃತಿಯಲ್ಲಿದಂಡವತ್ಪ್ರಣಾಮವು ಹೀಗೆ ವಿಧಿಸಿರುತ್ತದೆ). **ಅಷ್ಟಾಂಗಪ್ರಣಾಮವು — 'ಪಾದೌ ಶಿರಸ್ತಥಾ ಹಸ್ತೌ ನಿಕುಚ**

**ಯನ್ಮೂರ್ಧ್ನಿ ಮೇ ಶ್ರುತಿಶಿರಸ್ಸು ಚ ಭಾತಿ ಯಸ್ಮಿ**
**ನಸ್ಮನ್ಮನೋರಥಪಥಸ್ಸಕಲಸ್ಸಮೇತಿ।**
**ಸ್ತೋಷ್ಯಾಮಿ ನಃ ಕುಲಧನಂ ಕುಲದೈವತಂ।**
**ತತ್ಪಾದಾರವಿಂದಮರವಿಂದವಿಲೋಚನಸ್ಯ ॥ ೬ ॥**

---

**ಮುಕುಳಾಕೃತೀ। ಮನೋಬುದ್ಧ್ಯಭಿಮಾನೈಶ್ಚ ಪ್ರಣಾಮೋಽಷ್ಟಾಂಗಸಂಯು ತಃ"** ಹಾಗೆಯೇ ಸಾತ್ವತದಲ್ಲಿ, '**ಮನೋಬುದ್ಧ್ಯಭಿಮಾನೇನ ಸಹ ನ್ಯಸ್ಯಧರಾತಲೇ। ಕೂರ್ಮವಚ್ಚತುರಃ ಪಾದಾನ್, ಶಿರಸ್ತತ್ರೈವ ಪಂಚಮಮ್। ಪ್ರದಕ್ಷಿಣ ಸಮೇತೇನೇತ್ಯೇವಂ ರೂಪೇಣ ಸರ್ವದಾ। ಅಷ್ಟಾಂಗೇನ ನಮಸ್ಕೃತ್ಯ ಹ್ಯುಪವಿಶ್ಯಾಗ್ರತೋವಿಭೋಃ॥**' ಎಂದು ಸಂಕರ್ಷಣಸಂಹಿತೆಯಲ್ಲಿ ಸುಕೃತಪ್ರಣಾಮವಿಧಿಯು ಹೇಳಲ್ಪಟ್ಟು ಅದು ದ್ವಾದಶಾಂಗಪ್ರಣಾಮವೆಂದು ಉಪದೇಶಿಸಲ್ಪಟ್ಟಿರುತ್ತದೆ ಯಾವುವು ಭೂಮಿಸ್ಪರ್ಶವನ್ನು ಹೊಂದಬೇಕು ಎಂದರೆ '**ಲಲಾಟೋದರ ಜಾನ್ವಂಘ್ರಿಯುಗಾನೂರ್ಧ್ವಗತೌ ಕರೌ। ಭೂಮೌ ಸಂದಾಯ ಮನಸಾ ವಾಸುದೇವಮನುಸ್ಮರನ್॥**' ಹಣೇ ಹೊಟ್ಟೆ ೨ ಮೊಣಕಾಲು, ೨ ಪಾದಗಳು, ಎರಡು ಕೈಗಳು, ಮನಸ್ಸು, ಬುದ್ಧಿ, ಅಹಂಕಾರ, ವಾಸುದೇವ ಸ್ಮರಣೆಯು, ಇವುಗಳಲ್ಲೆಲ್ಲಾ ಮುಖ್ಯವಾಗಿ ಮೂರ್ಧ್ನಾ ಎಂದರೆ ಶಿರಸಾಪ್ರಣಾಮವು ಬಹು ಶ್ಲಾಘ್ಯವಾದುದರಿಂದ **ಪ್ರಣಮಾಮಿ ಮೂರ್ಧ್ನಾ** ಎಂಬ ಪ್ರಯೋಗವು. ಶ್ರೀಭರತನ ಶಿರಸಾಪ್ರಣಾಮಕ್ಕೆ ಶ್ರೀರಾಮಚಂದ್ರನು ಕಟ್ಟುಬಿದ್ದು '**ಶಿರಸಾಯಾಚಿತಸ್ತಸ್ಯ ವಚನಂ ನಕೃತಂ ಮಯಾ**' ಎಂದರೆ ತಲೆಬಾಗಿ ಪ್ರಣಾಮವನ್ನೆಸಗಿದ ಭರತನ ಮಾತನ್ನು ನಡೆಸಿಕೊಡಲಿಲ್ಲವೇ ಎಂದು ಖೇದವನ್ನು ಪ್ರದರ್ಶಿಸಿರುತ್ತಾರೆ. ಆದುದರಿಂದ ಶಿರಸಾ ಪ್ರಣಾಮದ ಮಹಿಮೆಯು ಹೆಚ್ಚು. ಅಂತಹ ಪ್ರಣಾಮದೊಂದಿಗೆ ಅಪೇಕ್ಷಿಸಿದ ಪುರುಷಾರ್ಥವು ಸಿದ್ಧಿಸದೇ ಇರುವುದಿಲ್ಲವು ಎಂಬ ಭಾವವು ಸೂಚಿತವು. ॥ ೫ ॥

**ಅವ.** ಹೀಗೆ ಪರಮೋಪಕಾರರಾದ ನಾಥಮುನಿ ಶ್ರೀಪರಾಶರಮಹರ್ಷಿಗಳಿಗೆ ಪ್ರಣಾಮವನ್ನು ಹಿಂದಿನ ಶ್ಲೋಕಗಳಲ್ಲಿ ಮಾಡಿದರು. ಮುಂದೆ ಇಂತಹ ಶಾಸ್ತ್ರಜ್ಞಾನ, ಆಚಾರ್ಯಪ್ರಾಪ್ತಿ, ಸತ್ಸಂಪ್ರದಾಯಸಿದ್ಧಿ ಮೊದಲಾದ ತಮಗೆ ಉಂಟಾದ ಸುಕೃತಗಳಿಗೆಲ್ಲಾ ಲೋಕಗುರುವಾದ ಭಗವಂತನೇ ಕಾರಣಭೂತನಾದುದರಿಂದ, ತಮಗೆ ಆಚಾರ್ಯರ ಮೂಲಕ ಉಂಟಾದ ತತ್ವಜ್ಞಾನ, ಭಕ್ತಿವೈರಾಗ್ಯಗಳು ತಮ್ಮಲ್ಲಿ ತುಂಬಿ ತುಳುಕಿ, ಮಹಾಪ್ರವಾಹವಾಗಿ ಈ ಸ್ತೋತ್ರರತ್ನರೂಪದಲ್ಲಿ ಪರಿಣಮಿಸುವುದಕ್ಕೂ ಭಗವಂತನೇ ಕಾರಣಭೂತನಾದುದರಿಂದ, ತಮ್ಮ ಕುಲದೈವದ ಪಾದಾರವಿಂದಯುಗಳದಲ್ಲಿ ಪ್ರಣಾಮವನ್ನು ಎಸಗುತ್ತಾರೆ.

ಅರ್ಥವು:— **ಯತ್** - ಯಾವ ತಮ್ಮ ಪ್ರಸಿದ್ಧವಾದ ಕುಲದೈವದ ಪಾ

ದಕಮಲವು, **ಮೇ**- ಅತಿನಿಕೃಷ್ಟನಾದ ನನ್ನ, **ಮೂರ್ಧ್ನಿ**- ಶಿರಸ್ಸಿನಮೇಲೂ,ಮತ್ತು **ಶ್ರುತಿಶಿರಸ್ಸಿಚ** - ಶ್ರುತಿಗಳಿಗೆ ಶಿರೋರೂಪವಾಗಿರುವ ಅಮೋಘ ಉಪನಿಷತ್ತುಗಳಲ್ಲೂ ಸಹ, **ಭಾತಿ** - ಸಮರೂಪದಲ್ಲಿ ಪ್ರಕಾಶಿಸುತ್ತದೋ ( ಇದರಿಂದ ಭಗವಂತನ ಸೌಶೀಲ್ಯವು ಉದಾಹೃತವು ), **ಯಸ್ಮಿನ್** - ಪ್ರಸಿದ್ಧವಾದ ಯಾವ ಭಗವಂತನ ಪಾದಕಮಲದಲ್ಲಿ, **ಸಕಲಾಃ** - ಸಮಸ್ತವಾದ, **ಮನೋರಥಪಥಾಃ** - ಚತುರ್ವಿಧ ಪುರುಷಾರ್ಥಗಳ ಮಾರ್ಗವು, ಎಂದರೆ ಕಾಮಿತವಾದವುಗಳೆಲ್ಲಾ, **ಸಮೇತಿ** - ಚೆನ್ನಾಗಿ ಉಂಟಾಗುತ್ತವೋ, **ತತ್** - ಅಂತಹ ಸೌಶೀಲ್ಯ ಕಾರುಣ್ಯಾದಿಗಳಿಂದ ಪ್ರೇರಿತನಾದ ಪ್ರಸಿದ್ಧನಾದ, **ನಃ** -ನಮ್ಮ, **ಕುಲಧನಂ** - ವಂಶಕ್ಕೆ ಧನರೂಪವಾಗಿರುವ, ಎಂದರೆ ನಮ್ಮ ಕುಲಕ್ಕೆ ಸರ್ವಶ್ರೀಯನ್ನುಂಟುಮಾಡಿದ, **ಕುಲದೈವತಂ** – ನಮ್ಮ ಕುಲದವರೆಲ್ಲಾ ಆರಾಧಿಸಿದ ದೇವತೆಯಾದ, ಇವೆಲ್ಲಾ ಪಾದಾರವಿಂದಂ ಎಂಬುದಕ್ಕೆ ವಿಶೇಷಣಗಳು, ಯಾರ ಪಾದಕಮಲವೆಂದರೆ, **ಅರವಿಂದ ವಿಲೋಚನಸ್ಯ** - ತಾವರೆಯ ಹಾಗೆ ಅಥವಾ ತಾವರೆಯದಳದ ಹಾಗೆ ಕಣ್ಣುಗಳನ್ನುಳ್ಳವನ, ಪಾದಾರವಿಂದಗಳನ್ನು ಕುರಿತು, **ಸ್ತೋಷ್ಯಾಮಿ** – ಸ್ತುತಿಸುತ್ತೇನೆ.

ತಾತ್ಪರ್ಯಾರ್ಥಗಳು :— ಇಲ್ಲಿ **ಯತ್ ತತ್** ಎಂಬ ಪ್ರಯೋಗಗಳು ಶ್ರುತ್ಯಾದಿ ಶಾಸ್ತ್ರಗಳಲ್ಲಿ ಪ್ರಸಿದ್ಧತೆಯನ್ನೂ, ಸರ್ವೋತ್ಕೃಷ್ಟತೆಯನ್ನೂ ಸೂಚಿಸುತ್ತವೆ. ‘ **ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ** ’ ಇತ್ಯಾದ್ಯನೇಕ ಪ್ರಮಾಣಗಳನ್ನು ಕಾಣಬಹುದು. **ಮೇ ಮೂರ್ಧ್ನಿ** ಎಂದು ಹೇಳಿರುವುದರಿಂದ, ಅತ್ಯಂತ ನಿಕೃಷ್ಟವಾದ ತಮ್ಮ ತಲೆಯಮೇಲೂ, ಮಹಾಮಹಿಮೆಯುಳ್ಳ ಉಪನಿಷತ್ತುಗಳಮೇಲೂ ಪಾದಾರವಿಂದವು ಸಮವಾಗಿ ಪ್ರಕಾಶಿಸುತ್ತದೆ, ಎಂದು ಹೇಳಿದುದರಿಂದ ಗಂಗಾನದಿಗೆ ಹೋಗಿ ಅವಗಾಹನಸ್ನಾನ ಮಾಡಲು ಅಶಕ್ತನಾಗಿರುವ ಕುಂಟನ ಶಿರಸ್ಸಿನಮೇಲೆ ಗಂಗಾಪ್ರವಾಹವು ತಾನಾಗಿಯೇ ಬಿದ್ದಂತೆ, ಸ್ವಾಮಿಯ ನಿರ್ಹೇತುಕ ಕೃಪೆಯೂ ಮತ್ತು ಆಶ್ರಯಣಕ್ಕೆ ಉಚಿತವಾದ ಔದಾರ್ಯ, ಸೌಲಭ್ಯ, ಸೌಶೀಲ್ಯ, ವಾತ್ಸಲ್ಯಾದಿ ಗುಣಗಳೂ ಶ್ರಿಯಃಪತಿಯಲ್ಲಿ ಸೂಚಿತವು. **ಶ್ರುತಿ ಶಿರಸ್ಸಿನ** ಮೇಲೂ ಪ್ರಕಾಶಿಸುತ್ತದೆಂದು ಹೇಳಿದುದರಿಂದ ಸರ್ವಾಧಿಕತ್ವವೂ ಸರ್ವರಕ್ಷಕತ್ವವೂ, ಹೇಯಪ್ರತ್ಯನೀಕತ್ವ, ಕಲ್ಯಾಣಗುಣಾಕರತ್ವ ಪರತ್ವ, ಸರ್ವಕಾರಣತ್ವ, ಪರಮ ಪ್ರಾಪ್ಯಪ್ರಾಪಕತ್ವಾದಿಗಳೂ ಸೂಚಿತವು. **ಭಾತಿ** ಎಂಬ **ಪ್ರಯೋ**ಗವು **ತಸ್ಯ ಭಾಸಾಸರ್ವಮಿದಂ ವಿಭಾತಿ**—ಆತನಕಾಂತಿಯಿಂದಲೇ ಆತನ ವಿಭೂತಿವರ್ಗವೆಲ್ಲಾ ಪ್ರಕಾಶಿಸುತ್ತದೆಂದು ಹೇಳುವ ಶ್ರುತಿಯು ಸ್ಮಾರಿತವು. **ಸ್ವಾಮಿಗೆ** ಇರುವ ಸೌಶೀಲ್ಯವನ್ನು ಪ್ರಕಟಿಸುವುದಕ್ಕಾಗಿಯೇ “ **ಯಸ್ಮಿನ್ಮೂರ್ಧ್ನಿ ಮೇ** ” ಎಂದು ನಿಕೃಷ್ಟರಾದ ತಮ್ಮ ಶಿರಸ್ಸನ್ನು ಮೊದಲು ಹೇಳಿ ನೈಚ್ಯಾನುಸಂಧಾನವನ್ನು ಮಾಡಿರುತ್ತಾರೆ. **ಶ್ರುತಿಶಿರಸ್ಸಿಚ** ಎಂಬಲ್ಲಿ ಚಕಾರ ಸ್ವಾರಸ್ಯದಿಂದ ಸ್ವಾಮಿಯು

ನಿರತಿಶಯಾನುಗ್ರಹಕ್ಕೆ ತಾರತಮ್ಯ ಭಾವವೇ ಇಲ್ಲವೆಂಬುದೂ ಸೂಚಿತವು. ಹೀಗೆ ಇರುವಾಗ ತರತಮ ಭಾವಾನಂದಗಳನ್ನು ಮುಕ್ತರಿಗೆ ಕೊಡುವರೇ? ಎಂದಿಗೂ ಇಲ್ಲವೆಂಬ ಭಾವವೂ ಸೂಚಿತವು. **ಶ್ರುತಿ ಶಬ್ದಕ್ಕೆ ನಿತ್ಯಂಶ್ರೂಯತೇ** ಯಾವಾಗ ಲೂ ಆಚಾರ್ಯರು ಹೇಳುವದರ ಮೂಲಕ ಶಿಷ್ಯನಿಂದ ಕೇಳಲ್ಪಡುತ್ತದೆ, ಆದುದ ರಿಂದ ಶ್ರುತಿಗೆ ಅಪೌರುಷೇಯತ್ವವೂ ನಿರ್ದೋಷನಿತ್ಯತ್ವವೂ ಸಿದ್ಧವು **ಶ್ರುತಿಶಿರಶ ಬ್ದದಿಂದ ಉಪನಿಷತ್ತುಗಳು** ಹೇಳಲ್ಪಟ್ಟಿದುದು ಹೇಗೆಂದರೆ ಇತರ ಭಾಗದ ಶ್ರುತಿ ಗಳ ಹಾಗೆ "**ತ್ರೈಗುಣ್ಯವಿಷಯೋವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ**" ( ಗೀತಾ ೪೫ ) ತ್ರಿಗುಣ್ಯವಿಷಯಗಳು ಯಾವುವೂ ಇಲ್ಲದೆ ನಿಸ್ತ್ರೈಗುಣ್ಯವಾಗುವು ದಕ್ಕೆ ಯೋಗ್ಯವಾದ ಉಪದೇಶಗಳು ಮಾತ್ರವೇ ಇರುವುದರಿಂದ ವೇದಗಳಲ್ಲಿ ಸಾರ ವತ್ತಾಗಿ ಗ್ರಾಹ್ಯವಾದ ಭಾಗವಾದುದರಿಂದ **ಶುತಿಶಿರಸ್ಸು** ಎಂದು ಹೇಳಲ್ಪಟ್ಟಿತು ಮೋಕ್ಷಪ್ರಾಪ್ತಿಗೆ ಮುಖ್ಯವಾಗಿ ಬೇಕಾದ ಸಾರತಮವಾದುದೇ ಅವುಗಳಲ್ಲಿರುವು. ರಿಂದ **ಶ್ರುತಿ ಶಿರಸ್ಸು** ಎಂಬ ಪ್ರಯೋಗವು. **ಶ್ರುತಿ ಶಿರಸ್ಸು** ಎಂಬ ಬಹುವಚನ ದಿಂದ ನಾವು ಗ್ರಹಿಸತಕ್ಕ ಅಂಶವೇನೆಂದರೆ, **ಉಪನಿಷತ್ತು** ಗಳೆಲ್ಲವೂ ಉಪಾದೇ ಯವಾಗಿ ಅವುಗಳಿಗೆ ಐಕಕಂಠ್ಯ ಉಂಟೆಂಬುದು ದಶೋಪನಿಷತ್ತುಗಳೆಲ್ಲಾ ಒಂದೇ ವಿಧವಾಗಿ ಉಪದೇಶಿಸಿರುವದರಿಂದ ಐಕಕಂಠ್ಯವು ಅವುಗಳಿಗೆ ಸಿದ್ಧವು. ಇದನ್ನು ಶ್ರೀಮಾನ್ ಕಪಿಸ್ಥಳಂ ದೇಶಿಕಾಚಾರ್ಯರವರ ಗ್ರಂಥದಲ್ಲಿ ಕಾಣಬಹುದು. ಮೊದಲು ತಮ್ಮ ಶಿರಸ್ಸನ್ನು ಹೇಳಿರುವದರಿಂದ ಸ್ವಾಮಿಯ ನಿಕೃಷ್ಟರಾದವರಲ್ಲೂ ಇರುವ ಸೌಶೀಲ್ಯ, ಸೌಲಭ್ಯಾದಿ ಗುಣಗಳಿಗೆ ಪ್ರಾಮುಖ್ಯವನ್ನು ತೋರಿಸಿರುತ್ತಾರೆ.

ಯಸ್ಮಿನ್ ಎಂದು ಆ ಪಾದಾರವಿಂದದ ಮಾಹಾತ್ಮ್ಯೆಯನ್ನು ವರ್ಣಿಸಿ ಹೇಳಿರು ವದರಿಂದ, ಅದು ತಮಗೆ ಪ್ರಾಪ್ತಿಯನ್ನು ಹೊಂದಿಸುವುದಕ್ಕೆ ಪರಮೋಪಾಯ ವೆಂದು ವ್ಯಕ್ತಗೊಳಿಸುತ್ತದೆ. **ಅಸ್ಮನ್ಮನೋರಥಪಥಃ** ಎಂಬಲ್ಲಿ ಯಚ್ಛಬ್ದವು ಸರ್ವ ಪ್ರಕಾರದಿಂದಲೂ ನಿರವಧಿಕ ಭೋಗ್ಯತ್ವವು ಸ್ವಾಮಿ ಪಾದಾರವಿಂದದಲ್ಲುಂಟೆಂಬು ದನ್ನು ಪ್ರಕಟಿಸುತ್ತದೆ; ಮತ್ತು ತಮಗೆ ಭೋಗ್ಯವಾದುದು ಮಾತ್ರವೇ ಅಲ್ಲದೇ ತಮ್ಮ ಶಿಷ್ಯ, ಪ್ರಶಿಷ್ಯ ಅನುಬಂಧಿಗಳಿಗೂ ಸಹ ಭೋಗ್ಯ ಭೂತವೆಂಬುದೂ ದ್ಯೋತಿತವು **ಮನೋರಥಪಥಃ** ಎಂದರೆ **ಇಚ್ಛಾಮಾರ್ಗಃ**, ಅಭಿಲಾಷೆಯ ಪ್ರಕಾರವು. **ಯಸ್ಮಿನ್ನಸ್ಮನ್ಮನೋರಥಪಥಃ** ಎಂಬ ಏಕವಚನ ಪ್ರಯೋಗದಿಂದ ತಮಗೂ ತಮಗೆ ಸೇರಿದ ಆಚಾರ್ಯ ಪ್ರಾಚಾರ್ಯರುಗಳಾದ ಮಣಕ್ಕಾಲ್ ನಂಬಿನಾಥ ಮುನಿಗಳಿಗಾದರೋ ಆ ಮನೋರಥ ಪಥವು ಒಂದೇ, ಮೋಕ್ಷ ಪ್ರಾಪ್ತಿಯಲ್ಲಿ ಮಾತ್ರವೇ ಎಂದು ಸೂಚಿಸಿದರು. ಇಲ್ಲಿರುವ ಅಸ್ಮನ್ಮನೋರಥ ಶಬ್ದಗಳಿಂದ ತಮಗೆ ಸರ್ವಪ್ರಕಾರದಿಂದಲೂ ನಿರವಧಿಕ ಭೋಗ್ಯವಾದುದೆಂದು ಹೇಳಿದಂತಾಯಿತು. ಆದರೆ ಅದಪಿಂದ ಲೋಚನನ ಪಾದಾರವಿಂದವನ್ನು ನಂಬಿದವರಿಗೆ "**ತಸ್ಮಿನ್ಪ್ರಸ**

**ನ್ನೇ ಕಿಮಿಹಾಸ್ತ್ಯಲಭ್ಯಂ** '' ( ವಿ. ಪು. ೬ ) ಎಂಬಲ್ಲಿ ಹೇಳಿರುವಹಾಗೆ ಚತುರ್ವಿಧ ಪುರುಷಾರ್ಥವೂ ಇತರ ಮನೋರಥಪಥವನ್ನುಳ್ಳವರಿಗೆ ಲಭಿಸುತ್ತದೆಂದು ತಿಳಿಸಿರುವಹಕ್ಕಾಗಿ **ಸಕಲಃ** ಎಂಬ ಪ್ರಯೋಗವು. ಮೋಕ್ಷಕ್ಕಾಗಿ ಆತನನ್ನು ಆಶ್ರಯಿಸಿದರೂ, ಆಶ್ರಿತರಲ್ಲಿರುವ ಪರಮ ಕರುಣೆಯಿಂದ ಪ್ರೇರಿತನಾಗಿ ಅವರಿಗೆ ಐಹಿಕ ಸಕಲ ಪುರುಷಾರ್ಥಗಳನ್ನು ದಯಪಾಲಿಸುವನೆಂಬುದೂ ಈ **ಸಕಲ** ಶಬ್ದದಿಂದ ಸೂಚಿತವು **ಪ್ರೀತ** ನಾದ ಸರ್ವೇಶ್ವರನು ಕುಚೇಲರಿಗೆ ದಯಪಾಲಿಸಿದ ಹಾಗೆ ಐಹಿಕ ಸುಖ ಭೋಗಗಳನ್ನು ಈಯುವನೆಂಬುದು ಹೇಳಲ್ಪಟ್ಟಿತು. ಇದಕ್ಕೆ ತಾವೂ ಕೂಡ ನಿದರ್ಶನವು, ಏಕೆಂದರೆ ಚೋಳ ದೇಶದ ರಾಜನ ಅರ್ಧರಾಜ್ಯವನ್ನು ತಮಗೆ ಬರುವ ಹಾಗೆ **ಭಕ್ತ** ಪ್ರೀತನಾದ ಸರ್ವೇಶ್ವರನೇ ದಯಪಾಲಿಸಿದ ಇತಿಹಾಸವೇ ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

ಇನ್ನೊಂದು ಭಾವವೂ ತೋರಿಬರುತ್ತದೆ. ಮಹಾ ವೈರಾಗ್ಯ ಶಿಖಾಮಣಿಗಳಾದ ತಮಗೂ ತಮ್ಮ ಆಚಾರ್ಯ ಪ್ರಾಚಾರ್ಯರಿಗಾದರೋ **ಮನೋರಥಪಥಃ ಸಕಲಃ** ಎಂದರೆ ಸಕಲ ಮನೋರಥವೆಲ್ಲಾ ಆತನ ಪಾದಾರವಿಂದವೇ. ಅದೇ ಸಕಲ ಪುರುಷಾರ್ಥವೇ ವಿನಾ ಇನ್ನು ಯಾವುದೂ ಅಲ್ಲವು. ಐಹಿಕಾ ಮುಷ್ಮಿಕ ಪ್ರಾಪ್ಯ ಪ್ರಾಪಕವೆಲ್ಲಾ ಎಂಬ ಭಾವವು. ಅದರಲ್ಲೇ ಮಗ್ನವಾಗಿರುವದು ತಮ್ಮ ಮನಸ್ಸು. ಹೇಗೆಂದರೆ '' **ಯಾ ಪ್ರೀತಿರವಿವೇಕಾನಾಂ ಹೃದಯೇಷ್ವನಪಾಯಿನೀ। ತ್ವಾ ಮನುಸ್ಮರತಸ್ಸಾಮೇ ಹೃದಯಾನ್ಮಾಪ ಸರ್ಪತು**'' ಅವಿವೇಕಿಗಳಾದ ವಿಷಯಾಭಿಲಾಷಿಗಳು ತಮಗೆ ಪ್ರೀತಿಕರವಾದ ವಸ್ತುವನ್ನೇ ಹೇಗೆ ಯಾವಾಗಲೂ ಹೊಂದಬೇಕೆಂಬ ನಿರತಿಶಯ ಕಾಮನೆಯುಂಟೋ, ಹಾಗೆಯೇ ನಿನ್ನನ್ನೇ ಹೊಂದಬೇಕೆಂಬ ಆಶೆಯಿಂದ ಸದಾ ನಿನ್ನ ಅ ಪಾದಕಮಲವನ್ನೇ ಚಿಂತಿಸುವರೆಂದು ಹೇಳಿದಂತಾಯಿತು. ಇನ್ನೊಂದು ವಿಧವಾಗಿಯೂ ಈ ಶ್ಲೋಕಕ್ಕೆ ಅರ್ಥ ಹೇಳಬಹುದು ನಿನ್ನನ್ನೇ ಸದಾ ಧ್ಯಾನಿಸುತ್ತಿರುವ ನನ್ನ ಹೃದಯದಿಂದ, ವಿಷಯಲಂಪಟರಿಂದ ಅವಿವೇಕಿಗಳಿಗಿರುವ ಪ್ರೀತಿಯು, **ಹೇ ಮಾಪ** — ಲಕ್ಷ್ಮೀಪತಿಯೇ, ನನ್ನ ಹೃದಯದ ಪಕ್ಕದಿಂದ, **ಸರ್ಪತು** — ಹೊರಟು ಹೋಗಲಿ. ಎರಡರ್ಥಗಳೂ ಗ್ರಾಹ್ಯಗಳೇ. ( ವಿ- ಪು. ೧. ೨೦ ೧೯ ) ಇದು ಪ್ರಹ್ಲಾದೋಕ್ತಿಯು, ಇದನ್ನೇ ಮುಂದೆಯೂ '' **ಪಿತಾತ್ವಂ ಮಾತಾತ್ವಂ** '' ( ಶ್ಲೋಕ ಎಂಬಲ್ಲಿ ಉಪಪಾದಿಸುತ್ತಾರೆ. ಈ ಅರ್ಥವನ್ನೇ ಶ್ರೀಭಾಷ್ಯಕಾರರು ಪೃಥುಗದ್ಯದಲ್ಲಿ '' **ತ್ವಮೇವ ಮಾತಾ ಚ ಪಿತಾ ತ್ವಮೇವ** '' ಎಂಬಲ್ಲಿ ಹೇಳಿರುತ್ತಾರೆ.

ಸ್ವಾಮಿ, ಪ್ರೀತನ ದರೆ, ಸಕಲ ಮನೋರಥ ಪಥದ ಸಿದ್ಧಿಯೂ ಉಂಟೆಂಬ ಅರ್ಥದಲ್ಲಿ —

**ಸಂಪದೈಶ್ವರ್ಯ ಮಾಹಾತ್ಮ್ಯ ಜ್ಞಾನ ಸಂತತಿ ಕರ್ಮಣಾಮ್ ।**

**ನ್ನೆ ಕಿಮಿಹಾಸ್ತ್ಯಲಭ್ಯಂ**" ( ವಿ. ಪು. ೬ ) ಎಂಬಲ್ಲಿ ಹೇಳಿರುವಹಾಗೆ ಚತುರ್ವಿಧ ಪುರುಷಾರ್ಥವೂ ಇತರ **ಮನೋರಥಪಥ** ವನ್ನುಳ್ಳವರಿಗೆ ಲಭಿಸುತ್ತದೆಂದು ತಿಳಿಸ್ಪುವುದಕ್ಕಾಗಿ **ಸಕಲಃ** ಎಂಬ ಪ್ರಯೋಗವು. **ಮೋಕ್ಷಕ್ಕಾಗಿ** ಆತನನ್ನು ಆಶ್ರಯಿಸಿದರೂ, ಆಶ್ರಿತರಲ್ಲಿರುವ ಪರಮ ಕರುಣೆಯಿಂದ ಪ್ರೇರಿತನಾಗಿ ಅವರಿಗೆ ಐಹಿಕ ಸಕಲಪುರುಷಾರ್ಥಗಳನ್ನು ದಯಪಾಲಿಸುವನೆಂಬುದೂ **ಈ ಸಕಲ** ಶಬ್ದದಿಂದ ಸೂಚಿತವು. ಪ್ರೀತ ನಾದ **ಸರ್ವೇಶ್ವರನು** ಕುಚೇಲರಿಗೆ ದಯಪಾಲಿಸಿದ ಹಾಗೆ ಐಹಿಕ ಸುಖಭೋಗಗಳನ್ನೂ ಈಯುವನೆಂಬುದು ಹೇಳಲ್ಪಟ್ಟಿತು. ಇದಕ್ಕೆ ತಾವೂ ಕೂಡ ನಿದರ್ಶನವು, ಏಕೆಂದರೆ ಚೋಳ ದೇಶ ರಾಜನ ಅರ್ಧರಾಜ್ಯವನ್ನೂ ತಮಗೆ ಬರುವ ಹಾಗೆ **ಭಕ್ತ** ಕ್ರೀತನಾದ ಸರ್ವೇಶ್ವರನೇ ದಯಪಾಲಿಸಿದ ಇತಿಹಾಸವೇ ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ.

ಇನ್ನೊಂದು ಭಾವವೂ ತೋರಿ ಬರುತ್ತದೆ. ಮಹಾ ವೈರಾಗ್ಯ ಶಿಖಾಮಣಿಗಳಾದ ತಮಗೂ ತಮ್ಮ ಆಚಾರ್ಯ ಪ್ರಾಚಾರ್ಯರಿಗಾದರೋ **ಮನೋರಥ ಪಥಃ ಸಕಲಃ** ಎಂದರೆ ಸಕಲ ಮನೋರಥವೆಲ್ಲಾ ಆತನ ಪಾದಾರಪಿಂದವೇ. ಅದೇ ಸಕಲ ಪುರುಷಾರ್ಥವೇ ವಿನಾ ಇನ್ನು ಯಾವುದೂ ಅಲ್ಲವು. ಐಹಿಕಾ ಮುಷ್ಮಿಕ ಪ್ರಾಪ್ಯ ಪ್ರಾಪಕವೆಲ್ಲಾ ಎಂಬ ಭಾವವು. ಅದರಲ್ಲೇ ಮಗ್ನವಾಗಿರುವದು ತಮ್ಮ ಮನಸ್ಸು. ಹೇಗೆಂದರೆ "**ಯಾ ಪ್ರೀತಿರವಿವೇಕಾನಾಂ ಹೃದಯೇಷ್ವನಪಾಯಿನೀ ತ್ವಾಮನುಸ್ಮರತಸ್ಸಾಮೇ ಹೃದಯಾನ್ನಾಪಸರ್ಪತು**" ಅವಿವೇಕಿಗಳಾದ ವಿಷಯಾಭಿಲಾಷಿಗಳಿಗೆ ಪ್ರೀತಿಕರವಾದ ವಸ್ತುವನ್ನೇ ಹೇಗೆ ಯಾವಾಗಲೂ ಹೊಂದಬೇಕೆಂಬ ನಿರತಿಶಯ ಕಾಮನೆಯುಂಟೋ ಹಾಗೆಯೇ ನಿನ್ನನ್ನೇ ಹೊಂದಬೇಕೆಂಬ ಆಶೆಯಿಂದ ಸದಾ ನಿನ್ನ ಆ ಪಾದ ಕಮಲವನ್ನೇ ಚಿಂತಿಸುವರೆಂದು ಹೇಳಿದಂತಾಯಿತು. ಇನ್ನೊಂದು ವಿಧವಾಗಿಯೂ ಈ ಶ್ಲೋಕಕ್ಕೆ ಅರ್ಥ ಹೇಳಬಹುದು. ನಿನ್ನನ್ನೇ ಸದಾ ಧ್ಯಾನಿಸುತ್ತಿರುವ ನನ್ನ ಹೃದಯದಿಂದ, ವಿಷಯ ಲಂಪಟರಾದ ಅವಿವೇಕಿಗಳಿಗಿರುವ ಪ್ರೀತಿಯು, **ಹೇ ಮಾಪ** — ಓ ಲಕ್ಷ್ಮೀಪತಿಯೇ, ನನ್ನ ಹೃದಯದ ದಶೆಯಿಂದ, **ಸರ್ಪತು** — ಹೊರಟು ಹೋಗಲಿ. ಎರಡರ್ಥಗಳೂ ಗ್ರಾಹ್ಯಗಳೇ. ( ವಿ. ಪು. ೧. ೨೦. ೧೯ ) ಇದು ಪ್ರಹ್ಲಾದೋಕ್ತಿಯು. ಇದನ್ನೇ ಮುಂದೆಯೂ "**ಪಿತಾತ್ವಂ ಮಾತಾತ್ವಂ**" (      ಶ್ಲೋಕ ) ಎಂಬಲ್ಲಿ ಉಪಪಾದಿಸುತ್ತಾರೆ. ಈ ಅರ್ಥವನ್ನೇ ಶ್ರೀ ಭಾಷ್ಯಕಾರರು ಪೃಥುಗದ್ಯದಲ್ಲಿ "**ತ್ವಮೇವ ಮಾತಾಚ ಪಿತಾತ್ವಮೇವ**" ಎಂಬಲ್ಲಿ ಹೇಳಿರುತ್ತಾರೆ.

ಸ್ವಾಮಿ ಪ್ರೀತನಾದರೆ, ಸಕಲ ಮನೋರಥಪಥದ ಸಿದ್ಧಿಯೂ ಉಂಟೆಂಬ ಅರ್ಥದಲ್ಲಿ,

**ಸಂಪದೈಶ್ವರ್ಯ ಮಾಹಾತ್ಮ್ಯ ಜ್ಞಾನ ಸಂತತಿ ಕರ್ಮಣಾಮ್ ।**

**“ ವಿಮುಕ್ತಿಶ್ಚೈಕತೋ ಲಭ್ಯಾ ಮೂಲಮಾರಾಧನಂ ಹರೇಃ ”**

ಹರಿಯ ಆರಾಧನವೇ ಇವೆಲ್ಲಕ್ಕೂ ಕಾರಣವೆಂದು ಇಲ್ಲಿ ಹೇಳಲ್ಪಟ್ಟಿರುತ್ತದೆ. ಮನಸ್ಸೇರಥವಾಗಿ ಉಳ್ಳದ್ದು ಅಭಿಲಾಷೆಯಾದುದರಿಂದ ಮನೋರಥವೆನಿಸುತ್ತದೆ. ಆ ಮನೋರಥವು ಸಿದ್ಧಿಸಬೇಕಾದರೆ ಇಂದ್ರಿಯಗಳ ಪ್ರವೃತ್ತಿಯು ಬೇಕು. ಇಂದ್ರಿಯಗಳು ಶ್ರುತಿಯಲ್ಲಿ **ಹಯಾನಾಹುಃ** ಎಂದು ಕುದುರೆಗಳಾಗಿ ರೂಪಕ ಮಾಡಿ ಹೇಳಿರುವದರಿಂದ, **ಮನೋರಥಪಥ** ವೆಂಬ ಪ್ರಯೋಗವು. ಆ ಕುದುರೆಗಳಾದ ಇಂದ್ರಿಯಗಳು ಸಂಚರಿಸುವ ಮಾರ್ಗವು ಎಂಬ ಭಾವವು.

**ಸ್ತೋಷ್ಯಾಮಿ** ಎಂಬುದರಿಂದ ವಾಚಿಕ ಕೈಂಕರ್ಯವನ್ನೂ ಮಾಡುತ್ತೇವೆಂಬ ತಮ್ಮ ಸಂಕಲ್ಪವನ್ನು ವ್ಯಕ್ತಪಡಿಸಿದರು. ಈ ಸ್ತುತಿಯು ವಾಗ್ರೂಪವಾದ **ಯಜ್ಞವು**. ಇದರಿಂದ ಸ್ವಾಮಿಯು ಪ್ರೀತನಾಗುವನೆಂದು, “ **ವಾಗ್ಯಜ್ಞೇನಾರ್ಚಿತೋ ದೇವಃ ಪ್ರಿಯತಾಂ ಮೇ ಜನಾರ್ದನಃ** ” ಎಂಬಲ್ಲಿ ಹೇಳಲ್ಪಟ್ಟಿರುತ್ತದೆ “ **ಏಷ ಮೇ ಸರ್ವ ಧರ್ಮಾಣಾಂ ಧರ್ಮಾಧಿಕತಮೋ ಮತಃ । ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈ ಅರ್ಚೇನ್ನರ ಸ್ಸದಾ ॥** ಎಂಬಲ್ಲಿ ಪುಂಡರೀಕಾಕ್ಷನನ್ನು ತುಂಬಾ **ಭಕ್ತಿಯುಕ್ತ**ನಾಗಿ ಸ್ತೋತ್ರಗಳಿಂದ ಅರ್ಚಿಸೋಣವು ಅಧಿಕ ತಮವಾದ ಧರ್ಮವೆಂದು ಹೇಳಲ್ಪಟ್ಟಿರುತ್ತದೆ. “ **ಆದರೇಣ ಯಥಾ ಸ್ತೌತಿ ಧನವಂತಂ ಧನೇಚ್ಛಯಾ । ಏವಂ ಚೇದ್ವಿಶ್ವಕರ್ತಾರಂ ಕೋನ ಮುಚ್ಯೇತ ಬಂಧನಾತ್** ” ತುಂಬಾ ಆದರದಿಂದ ಧನಕ್ಕಾಗಿ ಧನವಿರುವ ಒಬ್ಬನನ್ನು ಸ್ತುತಿಸಿದರೆ ಧನಪ್ರಾಪ್ತಿಯುಂಟಾಗುವಾಗ, **ಲೋಕಕರ್ತ್ರಾ**ವನ್ನು **ಮುಕ್ತಿ**ಗೆ ಸ್ತುತಿಸಿದರೆ ಈ ಬಂಧನದಿಂದ ಬಿಡುಗಡೆಯನ್ನು ಯಾವನು ತಾನೇ ಹೊಂದುವದಿಲ್ಲವು ? ಆದುದರಿಂದ ಇಂತಹ ಪ್ರಸಿದ್ಧಿಯುಳ್ಳ ವಾಚಿಕಕೈಂಕರ್ಯವನ್ನು ಮಾಡಲು ಯತ್ನಿಸಿರುವೆನು ಎಂದು **ಸ್ತೋಷ್ಯಾಮಿ** ಎಂದು ಹೇಳಿಕೊಂಡರು. ಯಥಾರ್ಥ ಗುಣವರ್ಣನ ಮೂಲಕ ಸೇವೆ ಮಾಡುತ್ತೇವೆಂಬ ಭಾವವು. ಲೋಕದಲ್ಲಿ ಸ್ತುತಿಯು ಅನೇಕ ಸಂದರ್ಭದಲ್ಲಿ ಗುಣವಿಹೀನನಲ್ಲಿ ಗುಣಾವಿಷ್ಕಾರ ಮಾಡಿ ಹೇಳುವದಾಗಿರುತ್ತದೆ ಇಲ್ಲಿಯಾದರೋ ಹಾಗಲ್ಲವು. **ಸ್ತೋಷ್ಯಾಮಿ** ಎಂಬುದರಿಂದ ಪರಮಪುರುಷನಲ್ಲಿ ಯಥಾರ್ಥವಾಗಿರುವ ಗುಣಗಳನ್ನು ಕುರಿತೇ **ಹೊಗಳುತ್ತೇ**ವೆಂಬ ಎಂಬ ತಾತ್ಪರ್ಯವು. ಅದೂ ಅಲ್ಲದೆ ಆತನಲ್ಲಿರುವ ಎಲ್ಲಾ ಗುಣಗಳನ್ನೂ ಸಮಗ್ರವಾಗಿ ಹೇಳಲಾದರೂ ಯೋಗ್ಯತೆಯುಂಟೋ ? ಎಂದರೆ ಶ್ರುತಿಯೇ ಆನಂದವೆಂಬ ಒಂದು ಗುಣದ ಮಾಹಾತ್ಮ್ಯ ಎಷ್ಟು ಎಂದು ಹೇಳಲು ಯತ್ನಿಸಿ ಸ್ವಲ್ಪ ದೂರ ಹೇಳಿ, ಅನಂತರ ಸಾಧ್ಯವಿಲ್ಲವೆಂಬ ಅಭಿಪ್ರಾಯದಿಂದ “ **ಯತೋ ವಾಚೋನಿವರ್ತಂತೇ ಅಪ್ರಾಪ್ಯ ಮನಸಾ ಸಹ** ” ಎಂದು ಹೇಳಿ ವಿರಾಮವನ್ನು ಹೊಂದಿತು. ಆದುದರಿಂದ **ಸ್ತೋಷ್ಯಾಮಿ** ಎಂಬುದರ ಅರ್ಥವೇನೆಂದರೆ ನೀನು ಕೃಪಯಾ ದಯಪಾಲಿಸಿದ ಜ್ಞಾನ ಮೂಲಕ ಎಷ್ಟರ ಮಟ್ಟಿಗೆ

ನಾಧ್ಯವೋ ಅಷ್ಟರವುಟ್ಟಿಗೆ ಸ್ತೋತ್ರವನ್ನು ಮಾಡುತ್ತೇನೆಂಬ ಭಾವವು. ಇಂತಹ ಮಿತಪ್ರಜ್ಞನು ಸ್ತೋತ್ರಮಾಡುವದರಿಂದ ಪರಮ ಪುರುಷನ ಮಹಿಮೆಗೆ ಕುಂದಕ ವಲ್ಲವೋ ಎಂದರೆ ಕುಂದಕವಿಲ್ಲವೆಂದು ಶ್ರೀ ನಿಗಮಾಂತ ದೇಶಿಕರವರು ಪಾದುಕಾ ಸಹಸ್ರದಲ್ಲಿ ಹೇಳಿರುತ್ತಾರೆ. ಹೇಗೆಂದರೆ —

**ಯದೇಷಸ್ವಾಮಿತ್ವಾಂ ತ್ರಿಯುಗ ಚರಣತ್ರಾಯಿಣಿ ತತೋ**
**ಮಹಿಮ್ನಃ ಕಾಹಾನಿಃ ತವ ಮಮತು ಸಂಪನ್ನಿರವಧಿಃ ।**
**ಶುನಾಲೀಢಾ ಕಾಮಂ ಭವತು ಸುರಸಿಂಧುರ್ಭಗವತೀ ।**
**ತದೇಷಾ ಕಿಂಭೂತಾ ಸತು ಸಪದಿ ಸಂತಾಪರಹಿತಃ "**

ಷಾಡ್ಗುಣ್ಯ ಪರಿಪೂರ್ಣನಾದ ಭಗವಂತನ ಪಾದವನ್ನು ರಕ್ಷಿಸುವ ಇಂತಹ ಮಹಿಮೆಯುಳ್ಳ ಪಾದುಕೆಯೇ, ಅಲ್ಪಮತಿಯಾದ ಈ ನಾನು ನಿನ್ನನ್ನು ಸ್ತುತಿಸಿ ದುದಾದರೆ ನಿನ್ನ ಮಹಿಮೆಗೆ ಏನು ಕುಂದಕವು ? ನನಗಾದರೋ ಅದರಿಂದ ನಿರ ತಿಶಯ ಸಂಪತ್ತಿನ ಪ್ರಾಪ್ತಿಯುಂಟು. ಮಹಿಮೆಗೆ ಹಾನಿಯಿಲ್ಲವೆಂದು ಹೇಗೆ ಹೇಳು ತ್ತೀ ಎಂದರ, ಮಹಾ ಪರಿಶುದ್ಧಳಾಗಿ ಸ್ವಾಮಿ ಪಾದದಿಂದ ಅವತರಿಸಿ, ಅವಗಾಹನ ಮಾಡಿದವರ ಪಾಪವಿಮೋಚಕಳಾದ ಗಂಗೆಯನ್ನು ಒಂದು ನಾಯಿ ಬಂದು ಮುಟ್ಟಿ ದರೆ ಗಂಗೆಯ ಮಾಹಾತ್ಮ್ಯಗೇನಾದರೂ ಕುಂದಕವೇ ? ನಾಯಿಗಾದರೋ ಗಂಗೆ ಯಲ್ಲಿ ಈಜಾಡಿ ನೀರು ಕುಡಿದುದರಿಂದ, ಅದರ ದೇಹ ತಾಪಗಳೆಲ್ಲವೂ ಕಳೆದು ಹೋಗುವುದಿಲ್ಲವೇ ? ಎಂದು ಉಪಪಾದಿಸಿರುತ್ತಾರೆ.

ಆದುದರಿಂದ ಮಹಾಗುಣಾಢ್ಯನನ್ನು ತನ್ನ ಬುದ್ಧ್ಯನುಸಾರವಾಗಿ ಹೊಗಳು ವದೇ ಸ್ತುತಿಯು. ಇದು ಶ್ಲಾಘ್ಯವಾದ ವಿಷಯವು. ಗುಣಗಳಿಲ್ಲ ದಿರುವನನ್ನು ಕುರಿತು ಗುಣಗಳನ್ನಾರೋಪಿಸಿ ಹೇಳುವದು ಹೀನಕೃತ್ಯವು. ಇದನ್ನು ಸತ್ಕವಿಗಳು ಅವಲಂಬಿಸತಕ್ಕದ್ದಲ್ಲವು.

ಅದರೆ ಪರಮಾಚಾರ್ಯರುಗಳ ಸ್ತುತಿಯು ಹೇಗೆ ? ಅದು ಹೇಗೆ ಉಪಾದೇಯ ವು ? ಎಂಬ ಸಂದರ್ಭದಲ್ಲಿ " **ಗುರುರೇವ ಪರಂಬ್ರಹ್ಮ** " " **ಯಥಾ ದೇವೇ ತಥಾ ಗುರೌ** " ಇವೇ ಮೊದಲಾದ ಅನೇಕ ಪ್ರಮಾಣಗಳ ಮೂಲಕ " **ಗುರುಂ ಪ್ರಕಾಶಯೇ ಧೀಮಾನ್** " ಎಂಬ ವಿಧ್ಯನುಸಾರ **ಗುರು**ಸ್ತೋತ್ರವು ಅವಶ್ಯಕವು ಅಲ್ಲಿಯೂ ಗುಣವು ಅರೋಪಿತವಲ್ಲವೊ ? ಎಂದರೆ ಸರ್ವಾತ್ಮನಾ ಅಲ್ಲವು. ಏಕೆಂ ದರೆ **ಗುರು** ಷಬ್ದಕ್ಕೆ ಅರ್ಹರಾದವರು, ಸಾಮಾನ್ಯರಲ್ಲವು ; ಅವರಲ್ಲಿ ಸಾಮಾನ್ಯ. ಮನುಷ್ಯ ಭಾವವು ನರಕ ಪ್ರಾಪ್ತಿಯನ್ನುಂಟು ಮಾಡುತ್ತದೆಂದು ಹೇಳಲ್ಪಟ್ಟಿರು ತ್ತದೆ. ಸ್ವಾಮಿಯಿಂದ ಆಜ್ಞಪ್ತರಾಗಿ ದಿವ್ಯ ವೈಕುಂಠದಿಂದ ಮಿತಪ್ರಜ್ಞರ ಉಜ್ಜೀವ ನ ರ್ಥವಾಗಿ ಇಲ್ಲಿಗೆ ಬಂದವರು ಗುರುಗಳು ಎಂಬ ಭಾವನೆಯು ಇರತಕ್ಕದ್ದು. ಆದುದರಿಂದಲೇ ಶ್ರೀ ಯಾಮುನ ಮುನಿಗಳು ತಮ್ಮ ಗುರುಗಳನ್ನು ಪ್ರಥಮತಃ

ಸ್ತುತಿಸಿರುತ್ತಾರೆ.

ತಮ್ಮ **ಸ್ತೋತ್ರಕ್ಕೆ** ವಿಷಯವು ಆವುದು ಎಂಬ ಸಂದರ್ಭದಲ್ಲಿ ಅರವಿಂದ ಲೋಚನನ ಪಾದಕಮಲವು. ಹಾಗೆ ಹೇಳಿದುದು ಅರವಿಂದ ಲೋಚನನ **ಸ್ತುತಿ** ಗೂ ಉಪಲಕ್ಷಣವು. ಅರವಿಂದ ಲೋಚನನೆಂದು ಹೇಳಿದುದರಿಂದ " **ಪುರುಷೇ ಪುಷ್ಕರೇಕ್ಷಣೇ** " " **ಜಿತಂತೇ ಪುಂಡರೀಕಾಕ್ಷ** " " **ಮತ್ಸ್ಯಃ ಕಮಲಲೋಚನಃ** " " **ಮಹಾ ವರಾಹಸ್ಫುಟ ಪದ್ಮಲೋಚನಃ** " " **ರಾಮೋ ರಾಜೀವ ಲೋಚನಃ** " ಇತ್ಯಾದಿಗಳಲ್ಲಿ ದ್ಯೋತಿತವಾದ ಕರುಣೆಯಿಂದ ಪ್ರೇರಿತನಾಗಿ ಅನುಗ್ರಹ ಶೀಲತ್ವವು ಬೋಧಿತವು. ಮಾರ್ಕಂಡೇಯರು ಶ್ರೀಕೃಷ್ಣನ ಕಣ್ಣಿನ ಸೊಬಗಿನಿಂದ ಮೋಹಿತರಾಗಿ ಧರ್ಮರಾಯಾದಿಗಳಿಗೆ ಹೇಳುತ್ತಾರೇನೆಂದರೆ ;—

**ಯಸ್ಯ ದೇವೋ ಮಯಾ ದೃಷ್ಟಃ ಪುರಾ ಪದ್ಮಾಯತೇಕ್ಷಣಃ ।**
**ಸ ಏವ ಪುರುಷವ್ಯಾಘ್ರ ಸಂಬಂಧೀ ತೇ ಜನಾರ್ದನಃ ॥**

( ವನಪರ್ವ ೧೯. ೧೧.)

ಯಾವ ಪದ್ಮಪತ್ರದ ಹಾಗೆ ವಿಶಾಲವಾದ ಕಣ್ಣುಳ್ಳ ಪರಮ ಪುರುಷನನ್ನು ನಾನು ಪ್ರಳಯಕಾಲದಲ್ಲಿ ಭಾಗ್ಯ ವಿಶೇಷದಿಂದ ನೋಡಿದೆನೋ ಅವನೇ ಈಗ ಧರ್ಮರಾಜನೇ ನಿನಗೆ ಸೋದರತ್ತೆ ಮಗನಾಗಿ ಅವತರಿಸಿರುತ್ತಾನೆ. ಅದನ್ನು ಹೇಗೆ ನಿಸ್ಸಂದೇಹವಾಗಿ ಹೇಳುತ್ತೀರಿ ಎನ್ನುತ್ತೀಯೋ ? ಎಂದರೆ, ಆ ಪದ್ಮಕಮಲದ ಹಾಗೆ ವಿಶಾಲವಾದ ಕಣ್ಣಿನ ಚಂದವು ಇನ್ನು ಯಾರಿಗೂ ಇಲ್ಲವು. ಆತನೇ ಆದುದರಿಂದ ಪರತತ್ವವು, ಆತನಲ್ಲಿ ಪಂಚಪಾಂಡವರಾದ ನೀವೂ, ದ್ರೌಪದಿಯು ಸಹ ಶರಣಾಗತಿಯನ್ನನುಷ್ಠಿಸಿ, ಎಂದು ಹೇಳಿ, ಅವರು ಅನುಷ್ಠಿಸುವ ಹಾಗೆ ಮಾಡಿರುತ್ತಾರೆ. ಅಂತಹ ಮಹಿಮೆಯುಳ್ಳ ಅರವಿಂದ ಲೋಚನಗಳು ಪರಮ ಪುರುಷನಿಗೆ ಉಂಟು. ಈ ಅಭಿಪ್ರಾಯವನ್ನು ಶ್ರುತಿಯು ಹೇಳಿರುತ್ತದೆ. " **ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವ ಮಕ್ಷಿಣೀ** " ಎಂದು ಛಾಂದೋಗ್ಯದಲ್ಲಿ ( ೧. ೬. ೫ ) ಹೇಳಲ್ಪಟ್ಟಿರುತ್ತದೆ ಇದಕ್ಕೆ ಶ್ರೀಶಂಕರಾಚಾರ್ಯರು ಹೇಳಿದ ಕಪಿಯ ಆಸನದ ಹಾಗೆ ಕೆಂಪಗೂ ಕಮಲದ ಹಾಗೂ ಇರುವ ಕಣ್ಣುಗಳುಳ್ಳವನೆಂದು ಎರಡು ಉಪಮೆಯಾಗಿ ಅರ್ಥಹೇಳಿದುದು ನಮ್ಮ ಶ್ರೀಯತಿವರ್ಯರಿಗೆ ಸರಿಬೀಳದೆ ವೇದಾರ್ಥ ಸಂಗ್ರಹದಲ್ಲಿ ಇದಕ್ಕೆ ವ್ಯಾಖ್ಯಾನವನ್ನು ದಯಪಾಲಿಸಿರುತ್ತಾರೆ. — " **ಗಂಭೀರಾಂಭಸ್ಸಮುದ್ಭೂತ ಸುಮೃಷ್ಟನಾಳ ರವಿಕರವಿಕಸಿತ ಪುಂಡರೀಕದಳಾಯತೇಕ್ಷಣಃ** " ಎಂದು **ಕಂಪಿಬತೀತಿ ಕಪಿಃ** ಎಂಬ ವ್ಯುತ್ಪತ್ತಿಯಿಂದ ನೀರನ್ನು ಕುಡಿಯುವನು ಸೂರ್ಯನೆಂದೂ ಆತನಿಂದ **ಆಸಂ** ಅರಳಿಸಲ್ಪಟ್ಟ ಕಮಲ ಪುಷ್ಪದಳದ ಹಾಗೆ ನಿರ್ಮಲವಾದ ವಿಶಾಲವಾದ ಕಣ್ಣುಳ್ಳವ ನೆಂದಾಗಲೀ, ಅಥವಾ **ಕಂ — ಉದಕವನ್ನು, ಪಿಬತಿ — ಕುಡಿಯುತ್ತದೆ ;** ಇದರಿಂದ ಜಲದಲ್ಲಿರುವ ಕಮಲದ

ನಾಳವು ಹೇಳಲ್ಪಟ್ಟಿತು ; ಗಂಭೀರವಾದ ಜಲದಲ್ಲಿದ್ದ ಆ ನಾಳದಲ್ಲೇ ಸೂರ್ಯಕಿರಣ ದಿಂದ ಅರಳಿದ ಕಮಲದಳದ ಹಾಗೆ ವಿಶಾಲವಾದ ಕಣ್ಣುಳ್ಳವನು ಎಂದರ್ಥ ಮಾಡಿ ದ್ದಾರೆ. ಇದೀಗ ಇಲ್ಲಿರುವ **ಅರವಿಂದ ಲೋಚನಸ್ಯ** ಎಂಬುದಕ್ಕೆ ಅರ್ಥವು ಸ್ವಾಮಿಯು ಅರವಿಂದ ಲೋಚನನಾದುದರಿಂದಲೇ " **ಜಾಯಮಾನಂ ಹಿ ಪುರುಷಂ ಯಂ ಪಶ್ಯೇ ನ್ಮಧುಸೂದನಃ । ಸಾತ್ವಿಕ ಸ್ಸತು ವಿಜ್ಞೇಯಸ ವೈ ಮೋಕ್ಷಾರ್ಥಚಿಂತಕಃ** " ಎಂದು ಹೇಳಿರುವ ಹಾಗೆ, ಜನ್ಮಕಾಲದಲ್ಲಿ ಈಕ್ಷಿ ಸಿದ ಫಲವಾಗಿ ತಮಗೆ ಮಹತ್ತಾದ ಯೋಗಿಗಳ ಕುಲದಲ್ಲಿ ಜನ್ಮವನ್ನು ಕೊಟ್ಟು, ಸಾತ್ವಿಕ ಗುಣವನ್ನು ವೃದ್ಧಿಗೊಳಿಸುವದಕ್ಕಾಗಿ ಸದಾಚಾರ್ಯರ ಮಧ್ಯೆ ಬೆಳೆಯುವ ಹಾಗೆ ಮಾಡಿ, ಜ್ಞಾನ ವಿವೇಕಾದಿಗಳು ಲಭಿಸುವ ಹಾಗೆ ಮಾಡಿ, ಈಗ ನಿನ್ನ ಸ್ತುತಿರೂಪ ಗ್ರಂಥ ನಿರ್ಮಾಣ ರೂಪ ಸಂಕಲ್ಪವನ್ನೂ ಆ ದಿವ್ಯ ಕಟಾಕ್ಷವು ಉಂಟು ಮಾಡಿತು ಎಂಬ ಭಾವವು ಸೂಚಿತವು. " **ಲೋಚನಾಭ್ಯಾಂ ಪಿಬನ್ನಿವ** " ಎಂಬ ಮಹರ್ಷಿಯ ಉಕ್ತಿಗೆ ಅನುಸಾರವಾಗಿ ಅಂತಹ ಅರವಿಂದದ ಹಾಗೆ ಶೈತ್ಯವಾದ ಮತ್ತೂ ಕಾರುಣ್ಯ ಪೂರಿತವಾದ ಕಟಾಕ್ಷದಿಂದ ಸ್ತೋತ್ರವು ಪೂರೈಸುವದರ ಮೂಲಕ ಭಗವತ್ಪ್ರೀತಿಯು ಲಭಿಸಿ ತಾವು ಕೃತಕೃತ್ಯರಾಗುವದು ಸಿದ್ಧವೆಂಬುದು ಸೂಚಿತವು ಹಾಗೆ ಧನ್ಯನಲ್ಲದವನು ಇವು ಯಾವುದನ್ನೂ ಮಾಡಲು ಭಗವಂತನ ಕೃಪೆಯಿಲ್ಲವ ವನಾಗುವನೆಂದು, ಶ್ರೀವಿಷ್ಣು ಧರ್ಮೋತ್ತರದಲ್ಲಿನ ರುದ್ರಗೀತೆಯಲ್ಲಿ " **ನಾಽಧನ್ಯಃ ಕೇಶವಂ ಸ್ತೌತಿ ನಾಽಧನ್ಯೋಽರ್ಚಯತಿ ಪ್ರಭುಮ್ । ನಮತ್ಯಧನ್ಯೋ ನ ಹರಿಂ ನಾಧನ್ಯೋ ವೇತ್ತಿ ಮಾಧವಮ್** " ಎಂದು ಹೇಳಲ್ಪಟ್ಟಿರುತ್ತದೆ.

ಅಂತವನ **ಪಾದಕಮಲ**ವು ಎಂದು ಹೇಳಿರುವದರಿಂದ ಲಕ್ಷ್ಮೀಕಾಂತನಾ ಗಿರಲು ಯೋಗ್ಯವಾದ ಕಾಂತಿ ಸೌರಭ್ಯ ಸೌಕುಮಾರ್ಯಾದಿಗಳು ಬೋಧಿತವು. ಅದು **ಕುಲಧನ** ವೆಂದು ಹೇಳಿದುದರಿಂದ ಆಪನ್ನಿವಾರಣೆಗಾಗಿ ಸಂಗ್ರಹಿಸಲ್ಪಟ್ಟ ಅನು ಕೂಲೋಪಾಯವಾದ **ಆಪದ್ಧನ** ವೆಂದು ಹೇಳಿದಂತಾಯಿತು. ಈ ಪ್ರಯೋಗವು ಒಂದು ಇತಿಹಾಸವನ್ನು ಸೂಚಿಸುತ್ತದೆ. ಆಳವಂದಾರ್ರವರು ವಾದದಲ್ಲಿ ಗೆದ್ದು ಚೋಳ ನೃಪನಿಂದ ಅರ್ಧರಾಜ್ಯವನ್ನು ಸ್ವೀಕರಿಸಿ ಸುಖದಿಂದಿರುವಾಗ, ಅವರಲ್ಲಿಗೆ ನಾಥಮುನಿ ಶಿಷ್ಯರಾದ ಮಣಕ್ಕಾಲ್ ನಂಬಿಯವರು ಬಂದು ಅವರಿಗೆ ಗೀತೋಪ ದೇಶ ಮಾಡಿ ವೈರಾಗ್ಯವು ಜನಿಸಿದಾಗ, ತಮ್ಮ ಪಿತಾಮಹರಾದ ನಾಥಮುನಿಗಳು ತಮಗೆ ಒಪ್ಪಿಸುವದಕ್ಕಾಗಿ ಕುಲಧನವನ್ನು ಕೊಟ್ಟಿರುತ್ತಾರೆ ; ತಾವು ದಯವಿಟ್ಟು **ಶ್ರೀರಂಗಕ್ಕೆ** ಬಂದರೆ ಅದನ್ನು ತಮಗೆ ಒಪ್ಪಿಸುವನೆಂದು ಹೇಳಿ ಮಣಕ್ಕಾಲ್ ನಂಬಿ ಯವರು ಶ್ರೀರಂಗನಾಥನಿಗೆ ಪ್ರಣಾಮವನ್ನು ಮಾಡಿ ನಿಂತಿರುವ ಈ ಯಾಮುನ ಮುನಿಗಳಿಗೆ ರಂಗನಾಥನನ್ನು ತೋರಿಸಿ, ಅದೇ ಶ್ರೀನಾಥಮುನಿಗಳು ತಮಗೆ ಒಪ್ಪಿ ಸಿದ ಕುಲಧನವೆಂದು ಹೇಳಿ ಸುಮ್ಮನಾದರು ಎಂಬ ಇತಿಹಾಸವನ್ನು, ಈ ಕುಲ

ತತ್ತ್ವೇನ ಯಸ್ಯ ಮಹಿಮಾರ್ಣವ ಶೀಕರಾಣು ।
ಶ್ಶಕ್ಯೋನ ಮಾತುಮಪಿ ಶರ್ವ ಪಿತಾಮಹಾದ್ಯೈಃ ॥
ಕರ್ತುಂ ತದೀಯ ಮಹಿಮಸ್ತುತಿ ಮುದ್ಯತಾಯ ।
ಮಹ್ಯಂ ನಮೋಽಸ್ತು ಕವಯೇ ನಿರಪತ್ರಪಾಯ ॥ ೭ ॥

---

ಧನಂ ಎಂಬ ಪ್ರಯೋಗವು ಸ್ಮರಿಸುತ್ತದೆ. ಕುಲಧನಂ ಎಂಬುದರಿಂದ ತಮಗೆ ಆರಾಧ್ಯದೇವತೆಯಾದ ಶ್ರೀರಂಗನಾಥನೆಂದಾಗಲಿ, ಅಥವಾ ವೀರನಾರಾಯಣ ಪುರವು ತಮ್ಮ ಪಿತಾಮಹರ ಜನ್ಮಸ್ಥಳವಾಗಿ ತಾವು ಕೆಲವು ಕಾಲ ಅಲ್ಲಿಯೇ ವಸಿಸಿದುದರಿಂದ ಆ ಪುರದ ಸ್ವಾಮಿಯಾದ ವೀರನಾರಾಯಣನು ಹೇಳಲ್ಪಟ್ಟನೆಂದಾಗಲಿ ಭಾವಿಸಬಹುದು

ಇಲ್ಲಿ ಒಂದು ಪ್ರಶ್ನೆಯು ತಲೆದೋರಬಹುದು. ಸ್ವಾಮಿಯು ಸರ್ವರನ್ನು ತನ್ನ ಕಣ್ಣಿನ ಸೊಬಗು ಮುಖಾರವಿಂದ ಲಾವಣ್ಯದಿಂದಲೂ ಮನವನ್ನೆಲ್ಲಾ ಆಕರ್ಷಿಸಿ ಅತೀವ ಪ್ರಿಯದರ್ಶನವಾಗಿರುವಾಗ ಅಂತಹ ಮುಖವೇ ಮೊದಲಾದವುಗಳನ್ನೆಲ್ಲಾ ಬಿಟ್ಟು ಪಾದಕ್ಕೇನು ಮಹಿಮೆಯು ? ಎಂದರೆ

(೧) ಪರಮ ಪಾವನೆಯಾದ ಗಂಗೆಯು ಉತ್ಪನ್ನವಾಗುವ ಹಾಗೆ ಮಾಡಿದುದು, (೨) ಅಪವಿತ್ರಳಾದ ಅಹಲ್ಯೆಯ ದೋಷವನ್ನು ಹೋಗಲಾಡಿಸಿದುದೂ (೩) ಬಲಿಯ ತಲೆಯಮೇಲೆ ಪಾದವಿನ್ಯಾಸಮಾಡಿ ಆತನನ್ನೂ, ಅದಕ್ಕೆ ಮುಂಚೆ ತಿವಿಕ್ರಮಾವತಾರಮಾಡಿ ತನ್ನ ಪಾದಚ್ಛಾಯೆಯಿಂದ ಅನೇಕ ಭಕ್ತರನ್ನು ಉದ್ಧಾರಮಾಡಿದುದೂ (೪) ಅಶ್ವತ್ಥಾಮರ ಅಪಾಂಡವಾಸ್ತ್ರದಿಂದ ಬೆಂದುಹೋದ ಶಿಶುವನ್ನು ಪರೀಕ್ಷತ್ತಾಗಿ ಮಾಡಿದುದೂ (೫) ಶಕಟಾಸುರನನ್ನು ವಧಿಸಿದುದೂ (೬) ವಿಭೀಷಣ ಕಾಕಾಸುರ ಪಾಂಡವಾದಿಗಳೆಲ್ಲಾ ಸ್ವಾಮಿಯ ಪಾದದಲ್ಲಿ ಶರಣಾಗತಿಯನ್ನನುಷ್ಠಿಸಿದುದೂ ಇವೇ ಮೊದಲಾದ ಅನೇಕ ನಿದರ್ಶನಗಳಿಂದ ಸರ್ವೇಶ್ವರನ ಪಾದಗಳೇ ಪ್ರಾಮುಖ್ಯತೆ ಯನ್ನೂ ಹೊಂದಿದೆಂಬುದು ಸ್ಥಾಪಿತವು. ॥ ೬ ॥

**ಅವತಾರಿಕೆ:**—ಭಗವಂತನು ಅಪರಿಚ್ಛಿನ್ನ ಮಹಿಮೆಯುಳ್ಳವನು. ಆತನ ಸ್ವರೂಪ ರೂಪ, ಗುಣ, ವಿಭೂತಿ, ಐಶ್ವರ್ಯಾದಿಗುಣಗಳನ್ನು ಸಂಪೂರ್ಣವಾಗಿ ಸ್ತುತಿಸಲು ಸಾಧ್ಯವೇ? ಮಂದಮತಿಯಾಗಿ ಸ್ತುತಿಸುತ್ತೇನೆಂದೇನೋ ಸಙ್ಕಲ್ಪಿಸಿ ಬಿಟ್ಟೆನು. ಇದು ಹೇಗಾಯಿತೆಂದರೆ, "ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ" ಏನೊಂದೂ ಸೌಕರ್ಯಗಳಿಲ್ಲದೇ ವಾಮನನಾಗಿರುವವನು ತನಗೆ ಎಟಕದೆ ಮರದ ಮೇಲೆ ಎತ್ತರದಲ್ಲಿರುವ ಹಣ್ಣಿಗಾಗಿ ಎರಡು ಕೈಗಳನ್ನು ಎತ್ತಿಕೊಂಡಿದ್ದರೆ ಹೇಗೆ ಲಜ್ಜಾಸ್ಪದವೋ, ಅಂತಹ ಲಜ್ಜೆ ಇಲ್ಲದ ಅವಸ್ಥೆಯನ್ನು ಹೊಂದಿರುತ್ತೇನೆಂದು ತಮ್ಮನ್ನು ನಿಂದಿಸಿಕೊಳ್ಳುವದಕ್ಕಾಗಿ ತಮಗೂ ಸಹ ಒಂದು ನಮಸ್ಕಾರವು ಎನ್ನು

ತ್ತಾರೆ. ಅಂತವನ ಅವಸ್ಥೆಗೆ ಒಂದು ಗೋವಿಂದ ಎಂಬುದಾಗಿ ನಮಸ್ಕಾರವು. ಇದು ಹೇಳನರೂಪ ನಮಸ್ಕಾರವು. **ಅರ್ಥವು:– ಯಸ್ಯ**–ನಿರತಿಶಯಸ್ವರೂಪರೂಪಗುಣ ವಿಭೂತ್ಯೈಶ್ವರ್ಯಾದಿಗಳಿಂದ ಕೂಡಿ **ಉಪನಿಷತ್ತು**ಗಳಲ್ಲಿ ಪ್ರತಿಪಾದ್ಯನಾಗಿ ಯಾವ ಮಹಾ ಪ್ರಸಿದ್ಧನಾದ ಭಗವಂತನ,**ಮಹಿಮಾರ್ಣವ ಶೀಕರಾಣುರಪಿ ಮಾತುಮ್**-ಮಹಿಮೆ ಎಂಬ ಸಮುದ್ರದ ಜಲಕಣದ ಅತ್ಯಲ್ಪಭಾಗವೂ ಕೂಡ ಇಷ್ಟೆಂದು ಅಳೆಯಲ್ಪಡುವದಕ್ಕೆ ಎಂದರೆ ತಿಳಿಯಲ್ಪಡುವದಕ್ಕೆ, **ಶರ್ವ ಪಿತಾಮಹಾದ್ಯೈರಪಿ** — ರುದ್ರ, ಚತುರ್ಮುಖ ಬ್ರಹ್ಮ, ಆದಿಪದದಿಂದ ಸನಕ ಇಂದ್ರಾದಿಗಳಿಂದಲೂ ಕೂಡ, **ನ ಶಕ್ಯಃ** — ಸಾಧ್ಯವಲ್ಲವು. ಹಾಗಿದ್ದರೂ ಕೂಡ, **ತದೀಯ** — ಅಂತಹ ಅಪರಿಚ್ಛಿನ್ನ ಮಹಿಮೆಯುಳ್ಳ ನಿನ್ನ ಸಂಬಂಧವಾದ, **ಮಹಿಮಸ್ತುತಿಂ** — ನಿನ್ನ ಮಹಿಮೆಯನ್ನು ಕೊಂಡಾಡುವ ಸ್ತೋತ್ರವನ್ನು **ಕರ್ತುಂ** — ಮಾಡುವದಕ್ಕಾಗಿ, **ಉದ್ಯತಾಯ** — ಪ್ರಯತ್ನಪಟ್ಟಿರುವ **ನಿರಪತ್ರಪಾಯ** — ನಿರ್ಲಜ್ಜನಾದ, ಅಜ್ಞನಾಗಿದ್ದರೂ ಕವಿ ಎಂದರೆ ಸರ್ವಜ್ಞನೆಂದು ಭಾವಿಸಿರುವ, **ಮಹ್ಯಂ** — ನನಗೂ ಸಹ, **ನಮೋಸ್ತು** — ಒಂದು ದೊಡ್ಡ ನಮಸ್ಕಾರವು. ಸರ್ವಜ್ಞನುನಾನು ಎಂದು ಭಾವಿಸಿರುವ ಈ ಮಂದ ಮತಿಗೂ, ನಾಚಿಕೆಯನ್ನು ತ್ಯಜಿಸಿ ಅಪರಿಚ್ಛಿನ್ನ ಮಹಿಮೆಯುಳ್ಳ ಭಗವಂತನನ್ನು ಸ್ತುತಿಸುವೆನೆಂದು ಉದ್ಯುಕ್ತವಾಗಿರುವ ನನಗೂ ಸಹ ಇಂತಹ ಲಜ್ಜಾಸ್ಪದವಾಗಿರುವ ಕೆಲಸವನ್ನಾರಂಭಿಸಿದುದಕ್ಕೂ ಒಂದು ನಮಸ್ಕಾರವು ಎಂದು ಹೇಳಿಕೊಂಡಿರುತ್ತಾರೆ.

**ತಾತ್ಪರ್ಯಗಳು:—** ತತ್ವೇನ ಎಂದು ಹೇಳಿದುದರ ಅಭಿಪ್ರಾಯವೇನೆಂದರೆ ತಮಗೆ ತಿಳಿದಷ್ಟು ಮಾತ್ರ ಸ್ತೋತ್ರಮಾಡಲು ಅನೇಕರು ಸಮರ್ಥರೇ ಸರಿ, ಆದರೆ ಯಥಾರ್ಥವಾಗಿ ಸಮಗ್ರವಾಗಿ ತಿಳಿದು ಸ್ತುತಿಸಲು ಯಾರಿಗೂ ಶಕ್ತಿಯಿಲ್ಲವೆಂದು ತಿಳಿಸುವದಕ್ಕಾಗಿ ಹಾಗೆ ಪ್ರಯೋಗವು. **ಯಸ್ಯ** ಎಂಬುದು ಪ್ರಸಿದ್ಧಿವಾಚಕವು: ಕಾಲ ದೇಶ ವಸ್ತು ಪರಿಚ್ಛೇದ ರಹಿತನಾಗಿ ಸರ್ವ ಕಾರಣಭೂತನಾಗಿ ನಿರವಧಿಕ ಗುಣ ವಿಭೂತಿ ಯುಕ್ತನಾಗಿರುವನೆಂಬ ಭಾವವು ಅದರಿಂದ ಸೂಚಿತವು. ಇಲ್ಲಿ **ಮಹಿಮೆ** ಎಂಬ ಪದದಿಂದ ನಿರುಪಾಧಿಕ ಸರ್ವಜ್ಞತ್ವ ಸತ್ಯಸಂಕಲ್ಪತ್ವಾದಿ ಗುಣಗಳೇನು, ಸರ್ವಜಗತ್ತಿನ ಸತ್ತಾ ಸ್ಥಿತಿ ನಿಯಮನಗಳೇನು, ಇಂತಹ ಅದ್ಭುತ ಶಕ್ತಿಯು ಹೇಳಲ್ಪಟ್ಟಿತು. ಇದು ಹೀಗೆ ಅಗಾಧವಾದುದಾಗಿಯೂ ಅತಿವಿಸ್ತಾರವಾಗಿ ಊ ಇರುವದರಿಂದ **ಅರ್ಣವ** ಎಂದರೆ ಸಮುದ್ರದ ಹಾಗೆ ರೂಪಕವು. ಅದರ ಆಳವು ಇಷ್ಟೆಂದು ತಿಳಿಯಲು ಸಾಧ್ಯವಲ್ಲದುದು. ಆದುದರಿಂದ ಅದನ್ನೆಲ್ಲಾ ವಿಮರ್ಶಿಸಿ, ಅದರಲ್ಲಿರುವ ರತ್ನಗಳ ಜ್ಞಾನವು ಅತಿ ದುರ್ಲಭವಾದುದರಿಂದ, ಅದರ ಅತ್ಯಲ್ಪ ಭಾಗವಾದ **ಶೀಕರಾಣುವಿನ** ಇ**ಯತ್ತಾ** ಇಷ್ಟೆಂದು ತಿಳಿದು ಹೊಗಳಲು ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿತು. ನಮ್ಮ ಪಾಡು ಹಾಗಿರಲಿ. ಅದನ್ನು **ಮಾತುಂ** ಇಷ್ಟಂದು ಅಳೆತೆಮಾಲು ಸ್ವಾಮಿಗೆ ತುಂಬಾ

ಬೇಕಾದವರಾದ ಬ್ರಹ್ಮ ರುದ್ರಾದಿಗಳಿಂದ ಕೂಡ ಅಸಾಧ್ಯವಾದುದೆಂದು ಹೇಳಿದರು. ವೇದಗಳಿಗೂ ಅಸಾಧ್ಯವಾಗಿ ತೈತ್ತೀರಿಯುದಲ್ಲಿ ಸರ್ವೇಶ್ವರನ ಆನಂದದ ಎಲ್ಲೆಯನ್ನು ಕಂಡುಹಿಡಿಯಲು ಯತ್ನಿಸಿ, ಅಸಾಧ್ಯವಾಗಿ ಕೊನೆಯಲ್ಲಿ " **ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹಃ** " ಎಂದು ಹೇಳಿ ಸುಮ್ಮನಾಯಿತು. ಇನ್ನೊಂದು ಕಡೆಯಲ್ಲಿ ಶ್ರುತಿಯು **ಯಸ್ಯಾಮತಂ ತಸ್ಯಮತಂ, ಮತಂ ಯಸ್ಯ ನವೇದಸಃ । ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್** " (ಕೇನ ೨. ೩) ಪರಮಾತ್ಮನ ಮಹಿಮೆಯು ಅಪರಿಚ್ಛಿನ್ನವಾಗಿರುವಾಗ ನನಗೆ ತಿಳಿಯಲಿಲ್ಲ ವೆಂದು ಹೇಳುವನೀಗ ಪ್ರಾಜ್ಞನು; ತಿಳಿಯಿತು ಎಂದು ಹೇಳುವನೀಗ ಅಜ್ಞನೆಂದು ಭಾವಿಸತಕ್ಕದ್ದೆಂಬುದು ತಾತ್ಪರ್ಯವು. ಎರಡೂ ವಾಕ್ಯಗಳೂ ಸಮಾನಾರ್ಥಗಳು. ಹಾಗೆಯೇ ಇನ್ನೊಂದು ಕಡೆಯಲ್ಲೂ " **ತ್ವಮೇವ ತ್ವಾಂವೇತ್ಥ, ಯೋಸಿಸೋಸಿ ಯೋ ಅಸ್ಯಾಧ್ಯಕ್ಷಃ ಪರಮೇವ್ಯೋಮನ್, ಸೋಅಂಗವೇದ ಯದಿವಾನ ವೇದ** " ನೀನು ಹೇಗೆ ಯಥಾರ್ಥವಾಗಿದ್ದೆಯೋ ಹಾಗೆ ಇರುತ್ತೀಯೇ, ನಮಗೆ ಅದು ತಿಳಿಯದು ಎಂಬರ್ಥವು, ನಿನ್ನನ್ನು ನೀನೆ ತಿಳಿದಿರುವೆ ಎಂಬ ತಾತ್ಪರ್ಯವು. ಹೋಗಲಿ ನಿನ್ನ ಮಹಿಮೆಗೆ ಅಂತವೇ ಇಲ್ಲದುದರಿಂದ ನಿನ್ನ ಮಹಿಮೆಯು ನಿನಗೆ ತಿಳಿಯುದವೋ ಇಲ್ಲವೋ ಎಂಬ ಸಂದೇಹವು. ಆದರೆ ಹೀಗೆ ಹೇಳುವದು ಸರ್ವೇಶ್ವರ ಸರ್ವಜ್ಞತೆಗೆ ಕುಂದಕವಲ್ಲವೋ? ಎಂದರೆ ಶತಶೃಂಗದ ಹಾಗೆ ಎರಡು ವಿಭೂತಿಗಳ ಮಹಿಮೆಯು ಅಪರಿಚ್ಛಿನ್ನವಾಗಿರುವಾಗ ಇಲ್ಲದಿರುವ ಪರಿಚ್ಛಿತ್ತಿಯುಂಟು. ಎಂದು ತಿಳಿಯುವದೀಗ ಸರ್ವಜ್ಞತೆಗೆ ಕುಂದಕವೇ ವಿನಾ, ಮಹಿಮೆಯ ಇಯತ್ತಾವನ್ನು ತಿಳಿಯದಿರುವಡು ಸರ್ವಜ್ಞತೆಗೆ ಏನೂ ನ್ಯೂನತೆಯಿಲ್ಲವು. ಹಾಗೆ ಭಗವಂತನೇ ತನ ಮಹಿಮೆಯ ಇಯತ್ತಾವನ್ನು ತಿಳಿಯದಿರುವಾಗ, ಪರಮಾತ್ಮನಿಂದಲೇ ಉಪದಿಷ್ಟನಾದ ಚತುರ್ಮುಖನೂ ಅವನಿಂದ ಉಪದೇಶಿಸಲ್ಪಟ್ಟು ತಾನು ಸರ್ವೇಶ್ವರನೆಂದು ಹೇಳಿಕೊಳ್ಳುವ ರುದ್ರನೂ, ಹಾಗೆಯೇ ಸನಕ ಸನಂದನಾದಿಗಳೂ ಇವರೆಲ್ಲರೂ ಸ್ವಾಮಿಯ ಮಹಿಮೆಯನ್ನು ತಿಳಿಯಲು ಸಾಧ್ಯರೋ? ಆದುದರಿಂದಲೇ **ಶರ್ವಪಿತಾಮಹಾದ್ಯೈಃ ಮಾತುಂ ನಶಕ್ಯಃ** ಎಂದು ಹೇಳಲ್ಪಟ್ಟಿತು. ಪಿತಾಮಹನಿಗೆ ಸ್ವಾಮಿಯೇ ಸಾಕ್ಷಾತ್ತಾಗಿ ಉಪದೇಶಿಸಿರುತ್ತಾರೆ. ರುದ್ರನಾದರೋ " **ಈಶಾನ ಸರ್ವವಿದ್ಯಾನಾಂ** " ಸಮಸ್ತ ವಿದ್ಯೆಗಳಿಗೂ ನಿಯಾಮಕನೆಂದೂ, " **ಈಶ್ವರ ಸ್ಸರ್ವಭೂತಾನಾಮ್** " ಸರ್ವಚೇತನರಿಗೂ ನಿಯಾಮಕನೆಂದೂ, " **ಈಶ್ವರಾತ್ ಜ್ಞಾನ ಮನ್ವಿಚ್ಛೇತ್** " ರುದ್ರನು ಸಮಸ್ತ ವಿದ್ಯೆಗಳಿಗೂ ಅಧಿಪತಿಯಾದುದರಿಂದ ಆತನ ಮೂಲಕವಾಗಿ ಜ್ಞಾನವನ್ನು ಸಂಪಾದಿಸತಕ್ಕದ್ದೆಂದೂ ಹೀಗೆಲ್ಲಾ ಹೇಳಿರುವ ರುದ್ರನಿಂದಲೂ ತಿಳಿಯಲು ಸಾಧ್ಯವಿಲ್ಲವಾಗಿದೆ. ಅದೂ ಅಲ್ಲದೆ ಬ್ರಹ್ಮಭಾವನೆಯೊಂದ ಕೂಡಿದ ಸನಕಸನಂದನಾದಿಗಳಿಗೂ ಅಸಾಧ್ಯವಾದುದು. ಇಂತಹ ಲೋಕೋತ್ತರ

ರಾದವರಿಗೇ ಅಸಾಧ್ಯವಾದುದು. ಶ್ರುತಿಯಲ್ಲಿ ಮಾತ್ರವೇ ಅಲ್ಲವೇ ಹಾಗೆಯೇ ಉತ್ತರರಾಮಾಯಣದಲ್ಲಿ "**ತ್ವಂ ಹಿ ಲೋಕಗತಿ ರ್ದೇವ ನತ್ವಾಂ ಕೇ ಚನ ಜಾಯತೇ**" ನಿನ್ನನ್ನು ತಿಳಿದವರು ಯಾರೂ ಇಲ್ಲವೆಂದು ಬ್ರಹ್ಮನು ಶ್ರೀರಾಮನನ್ನು ಕುರಿತು ಹೇಳುತ್ತಾನೆ. ಮೋಕ್ಷಧರ್ಮದಲ್ಲಿ ಭೃಗು ಭರದ್ವಾಜರ ಸಂವಾದದಲ್ಲಿ,

**"ಪ್ರಜಾಪತಿಂ ಚ ರುದ್ರಂಚಾಹಮೇವ ಸೃಜಾಮಿವೈ ।**
**ತೌ ಚ ಮಾಂ ನವಿಜಾನೀತೋ ಮಮ ಮಾಯಾವಿಮೋಹಿತೌ ॥**

ಚತುರ್ಮುಖನನ್ನೂ ರುದ್ರನನ್ನೂ ನಹ ನಾನೇ ಸೃಷ್ಟಿಸಿದವನು; ನನ್ನ ಮಾಯೆಯಿಂದ ಮೋಹಿತರಾದುದರಿಂದ ಅವರಿಬ್ಬರೂ ಕೂಡ ನನ್ನನ್ನು ತಿಳಿಯಲಾರರು ಎಂದು ಹೇಳಲ್ಪಟ್ಟಿರುತ್ತದೆ. ಬ್ರಹ್ಮ ರುದ್ರರ ಸಂವಾದದಲ್ಲೂ, **ತವಾಂತರಾತ್ಮಾ ಮಮ ಚ ಯೇ ಚಾನ್ಯೇ ದೇಹಿ ಸಂಜ್ಞಿತಾಃ । ಸರ್ವೇಷಾಂ ಸಾಕ್ಷಿಭೂತೋಽಸೌ ನಗ್ರಾಹ್ಯಃಕೇನ ಚಿತ್ಕ್ವಚಿತ್**" ರುದ್ರನನ್ನು ಕುರಿತು ಚತುರ್ಮುಖನು ಹೇಳುತ್ತಾನೆ. ನಿನಗೂ ನನಗೂ ನಹ ಹಾಗೆಯೇ ಇತರ ಎಲ್ಲಾ ಪ್ರಾಣಿಗಳಿಗೂ ಅಂತರಾತ್ಮನಾಗಿ ರುವನನ್ನು ಯಾರಿಂದಲೂ ಸ್ವಲ್ಪವೂ ತಿಳಿಯಲು ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿತು. ವಿಷ್ಣುಧರ್ಮದಲ್ಲಿ,

**ನ ಯಸ್ಯ ರೂಪಂ ನಬಲ ಪ್ರಭಾವೌ ನಚಸ್ವಭಾವಃಪರಮಸ್ಯಪುಂಸಃ ।**
**ವಿಜ್ಞಾಯತೇ ಶರ್ವ ಪಿತಾಮಹಾದ್ಯೈಃ ತಂವಾಸುದೇವಂ ಪ್ರಣಮಾಮ್ಯ ಚಿಂತ್ಯವ್ ॥**

ಯಾವ ಪರಮ ಪುರುಷನ ಸ್ವರೂಪ ಬಲ ಪ್ರಭಾವ ಕಲ್ಯಾಣಗುಣಗಳ ಮಹಿಮೆಯು ಬ್ರಹ್ಮ ರುದ್ರಾದಿಗಳಿಂದಲೂ ತಿಳಿಯಲು ಅಸಾಧ್ಯವೋ ಅಂತಹ ಚಿಂತಿಸಲೂ ಕೂಡ ಅಸಾಧ್ಯವಾದ ವಾಸುದೇವನನ್ನು ನಮಸ್ಕರಿಸುವನೆಂದು ಹೇಳಲ್ಪಟ್ಟಿರುತ್ತದೆ. **ವಿಷ್ಣುಪುರಾಣದಲ್ಲೂ,**

**"ಯನ್ನ ದೇವಾ ನ ಮುನಯೋ ನಚಾಹಂ ನಚ ಶಂಕರಃ ।**
**ಜಾನಂತಿ ಪರಮೇಶಸ್ಯ ತದ್ವಿಷ್ಣೋಃ ಪರಮಂಪದವ್" ॥** ಎಂದು

ಹಾಗೆಯೇ ಹೇಳಲ್ಪಟ್ಟಿರುತ್ತದೆ. ಶ್ರೀವರಾಹ ಪುರಾಣದಲ್ಲಿ "**ಅದ್ಯಾಪಿ ಮಾಂ ನ ಜಾನಂತಿ ರುದ್ರೇಂದ್ರಾ ಸ್ಸಪಿತಾಮಹಾಃ**" **ಚತುರ್ಮುಖ ಸಹಿತರಾದ ರುದ್ರೇಂದ್ರಾದಿಗಳು** ಯಾರೂ ಇನ್ನೂ ಕೂಡ ತಿಳಿಯಲು ಸಾಧ್ಯವಿಲ್ಲದವರಾಗಿದ್ದಾರೆಂದು ಭಗವಂತನ ವಾಕ್ಯವಿರುತ್ತದೆ. ಹಾಗೆಯೇ ಭಗವದ್ಗೀತೆಯಲ್ಲೂ, "**ನಾಹಂ ಪ್ರಕಾಶ ಸರ್ವಸ್ಯ**" ಯಾರಿಗೂ ನಾನು ಪ್ರಕಾಶನಲ್ಲವು, ಎಂದೂ "**ಮಾಂತು ವೇದ ನ ಕಶ್ಚನ**" ಯಾರೊಬ್ಬರೂ ನನ್ನನ್ನು ನರಿಯಾಗಿ ತಿಳಿಯಲಾರರೆಂಬ ಪ್ರಯೋಗಗಳಿವೆ. ಇಂತಹ ಪ್ರಾಜ್ಞರಾದವರಿಗೆ ಆತನ ಮಹಿಮೆಯ ಲವಾಂಶವನ್ನು ಕೂಡ ಸ್ತುತಿಸಲು ಸಾಧ್ಯವಿಲ್ಲದಿರುವಾಗ ನಾನು ಆ ಮಹಿಮೆಯನ್ನು ಕೊಂಡಾಡಲು

ಸಂಕಲ್ಪಿಸಿಬಿಟ್ಟಿನು ಎಂದು **"ಕೀರ್ತುಂ ತದೀಯ ಮಹಿಮ ಸ್ತುತಿ ಮುದ್ಯತಾಯ"** ಎಂಬುವದರಿಂದ ತಿಳಿಸಿರುತ್ತಾರೆ. ಇದು ಅತ್ಯಂತ ಹಾಸ್ಯಾಸ್ಪದವಾಗಿ ಲಜ್ಜೆಗೆ ಗುರಿಮಾಡಿರುತ್ತದೆ. ಆದರೂ ಎಷ್ಟೇ ಅಶಕ್ತತಾ ಭಾವ ಮೊದಲಾದ ವಿಘ್ನಗಳುಂಟಾದರೂ ಸಂಕಲ್ಪಿಸಿದುದನ್ನು ನೆರವೇರಿಸುವದು ಯುಕ್ತವೆಂದು **"ಪ್ರಾರಬ್ಧ ಮುತ್ತಮ ಗುಣಾ ನ ಪರಿತ್ಯಜನ್ತಿ"** ಎಂಬಲ್ಲಿ ಹೇಳಿರುವಹಾಗೆ ಸ್ತುತಿಯನ್ನು ಲಜ್ಜೆಯನ್ನು ನೀಗಿ ಆರಂಭಿಸಿರುತ್ತೇನೆ. ಆದುದರಿಂದ ಅಂತಹ ಕೆಲಸವನ್ನು ಹಿಡಿಯಬಹುದೇ ಕೂಡದೇ ಎಂದು ವಿಮರ್ಶಿಸಿ ತಿಳಿಯದೇ ಇರುವ ಅವಿವೇಕಿಯಾದ ನನಗೂ ಸಹ ಒಂದು ನಮಸ್ಕಾರವೆಂದು **ಮಹ್ಯಂ ನಮೋಽಸ್ತು** ಎಂದು ಪ್ರಯೋಗವು. ಇಂತಹ ನಿರ್ಲಜ್ಜೆಯಿಂದ ತೊಡಗಿದ ವಿವೇಕಶೂನ್ಯನು ಲೋಕದಲ್ಲಿ ಎಲ್ಲೂ ಇರಲಾರನಾದುದರಿಂದ, ಅಂತಹವನಿಗೂ ಒಂದು ನಮಸ್ಕಾರವೆಂಬ ಭಾವವು. ನಿಂದಾರೂಪದಲ್ಲಿ ಪ್ರಣಾಮವು. ಇದು ದೊಡ್ಡ ಸಾಹಸ ಕಾರ್ಯವು, ಎಂದಿಗೂ ಸಾಧ್ಯವಲ್ಲದುದು ; ಆದುದರಿಂದ ಪ್ರಣಾಮವು ಎಂಬ ತಾತ್ಪರ್ಯವು. ಅಸಾಧ್ಯ ಕೆಲಸವೇ, ಸಂಕಲ್ಪಿಸಿದನೇ ಎಂಬ ಲಜ್ಜೆಯು ಉಂಟಾಯಿತು. ಸಂಪೂರ್ಣವಾಗಿ ಸ್ತುತಿಸಲು ಯೋಗ್ಯತೆಯಿಲ್ಲದಿದ್ದರೂ ಸರ್ವೇಶ್ವರನಿಂದ ದಯಪಾಲಿಸಲ್ಪಟ್ಟ ಬುದ್ಧಿಯು ಎಷ್ಟರಮಟ್ಟಿಗೋ ಅಷ್ಟು ಮಾತ್ರವಾದರೂ ಕರುಣಾನಿಧಿಯನ್ನು ಸ್ತುತಿಸಬೇಕೆಂಬ ದಾಹ ಹುಟ್ಟಿತು ; ಅದನ್ನು ಏಕೆ ತೀರಿಸಿಕೊಳ್ಳಕೂಡದೆಂಬ ಭಾವನೆಯಿಂದ ಲಜ್ಜೆಯನ್ನು ತ್ಯಾಗ ಮಾಡಿದರೆಂಬ ಅರ್ಥವೂ **ನಿರಪತ್ರಪಾಯ** ಎಂಬ ಪ್ರಯೋಗದಿಂದ ತೋರಿಬರುತ್ತದೆ. ಇಲ್ಲಿ ಸುಮಾರು ೫೭ ಶ್ಲೋಕಗಳಿಂದ ಹೊಗಳಿದರೆ, ಸಮಗ್ರವಾಗಿ ಮಹಿಮೆಯನ್ನು ಕೊಂಡಾಡಿದ ಹಾಗೆ ಆಗುತ್ತದೆಯೋ ? ಎಷ್ಟು ಸಾಧ್ಯವೋ ಅಷ್ಟು ಮಾತ್ರ ಸ್ತುತಿಸುವೆನೆಂಬುದೂ ಸೂಚಿತವು. ಯಾವಾಗ ಅಸಾಧ್ಯ ವೆಂದು ತೋರಿತೋ ಆಗ ವಿವೇಕಿಯಾದವರು ಬಿಡಬೇಕಾಗಿತ್ತು. ಹಾಗೆ ಬಿಡದೆ ಸ್ತುತಿಯಲ್ಲಿ ಉದ್ಯುಕ್ತರಾದುದರಿಂದ ತಮ್ಮ ಸಂತೋಷಾರ್ಥವಾಗಿಯೂ ಕೈಂಕರ್ಯ ರೂಪವಾಗಿಯೂ, ಎಷ್ಟು ಮಟ್ಟಿಗೆ ಸಾಧ್ಯವೋ ಅಷ್ಟು ಮಟ್ಟಿಗೆ ಸ್ತುತಿಸಲು ಆರಂಭಿಸಿರುವೆನೆಂಬ ಭಾವವು. ತಮಗೆ **ಕವಯೇ** ಎಂಬ ಪ್ರಯೋಗವು ಸಹ ಪರಿಹಾಸಕ್ಕಾಗಿ ಮಾಡಿದುದು. **ಕವಿ ಶಬ್ದಕ್ಕೆ ಕ್ರಾಂತದರ್ಶಿ** ಯಲ್ಲಿ ಅನ್ವಯವು ; ಎಂದರೆ ಕಳೆದು ಹೋದುದನ್ನು ತಿಳಿಯುವ ಪ್ರಾಜ್ಞತೆಯುಳ್ಳವನೆಂಬರ್ಥವಾಗುತ್ತದೆ. ಕವಿ ಶಬ್ದಕ್ಕೆ ಆದುದರಿಂದ ಸರ್ವಜ್ಞನೆಂಬ ಅರ್ಥವು. ಅಸಾಧ್ಯವಾದುದನ್ನು ಯತ್ನಿಸುವ ಸರ್ವಜ್ಞನ ಎಂದು ಹೇಳಿ ತಮ್ಮ ಅವಿಜ್ಞತೆಯನ್ನು ಪ್ರದರ್ಶಿಸುವದಕ್ಕಾಗಿ **ಕವಯೇ** ಎಂಬ ಹಾಸ್ಯಾಸ್ಪದವಾದುದನ್ನು ಪ್ರದರ್ಶಿಸುವ ಪ್ರಯೋಗವು. ಹೀಗೆ ಹಾಸ್ಯಾಸ್ಪದವಾಗುತ್ತದೆಂದು ತಿಳಿಯದಿರುವದರಿಂದ ನಿರಪತ್ರನೆಂದು ಹೇಳಿಕೊಂಡರು ॥ ೭ ॥

**ಯದ್ವಾಶ್ರಮಾವಧಿ ಯಥಾಮತಿವಾಪ್ಯಶಕ್ತ |**
**ಸ್ತೌಮ್ಯೇವಮೇವ ಖಲು ತೇಽಪಿ ತದಾ ಸ್ತುವನ್ತಃ ||**
**ವೇದಾ ಶ್ಚತುರ್ಮುಖಮುಖಾಶ್ಚ ಮಹಾರ್ಣವಾಂತಃ |**
**ಕೋ ಮಜ್ಜತೋ ರಣುಕುಲಾಚಲಯೋರ್ವಿಶೇಷಃ || ೮ ||**

---

**ಅವತಾರಿಕೆ :—** ಹಿಂದಿನ ಶ್ಲೋಕದಲ್ಲಿ ಲಜ್ಜೆಯನ್ನು ತೊರೆದು ಅಪರಿಚ್ಛಿನ್ನ ಮಹಿಮೆಯುಳ್ಳವನನ್ನು ಸ್ತೋತ್ರಮಾಡುವ ಅಸಾಧ್ಯ ಕೆಲಸವನ್ನು ಪ್ರಾರಂಭಿಸಿದೆ ನೆಂದು ಹೇಳಿಕೊಂಡರು. ಸಂಕಲ್ಪಿಸಿದ್ದೇನೋ ಆಯಿತು. ಸ್ತೋತ್ರಮಾಡತಕ್ಕದ್ದೇ ನ್ಯಾಯವು. ಆವರವರುಗಳು ಅವರವರ ಶಕ್ತಿ ಬುದ್ಧಿ ಇರುವ ಹಾಗೆ ಸ್ತೋತ್ರಮಾಡು ತ್ತಾರೆ. ಇದರಲ್ಲಿ ಯಾರಿಗೂ ಸಮಗ್ರವಾಗಿ ಯಥಾವತ್ತಾಗಿ ಸ್ತೋತ್ರಮಾಡುವ ಶಕ್ತಿ ಯು ವೇದ ಮೊದಲುಗೊಂಡು ಚತುರ್ಮುಖಬ್ರಹ್ಮ ಮೊದಲಾದವರಿಗೂ ಸಹ ಇಲ್ಲವು. ಒಂದು ಸಣ್ಣಕಲ್ಲೂ ಮೈನಾಕ ಪರ್ವತವೂ ಎರಡೂ ಸಮುದ್ರದಲ್ಲಿ ಮುಳುಗಿ ಹೋಗುವ ಹಾಗೆ, ಈ ಮಹಿಮೆ ಎಂಬ ಸಮುದ್ರದಲ್ಲಿ ಪ್ರಾಜ್ಞರೂ ನಾನೂ ಮುಳುಗಿ ಹೋಗುವದರಿಂದ, ಅವರಿಗೂ ನನಗೂ ಏನು ವ್ಯತ್ಯಾಸವು ಎಂದು ಸಮಾಧಾನವನ್ನು ತಂದುಕೊಂಡವರಾಗಿ, ೧೦ ನೆಯ ಶ್ಲೋಕದಿಂದ ಸ್ತುತಿಯನ್ನಾರಂಭಿಸುತ್ತಾರೆ :—

**ಅರ್ಥವು :—** ಹಿಂದಿನ ಅಭಿಪ್ರಾಯವನ್ನು ವಿಕಲ್ಪಿಸಿ ಬೇರೆ ಅಭಿಪ್ರಾಯವು ಹೇಳಲ್ಪಡುವದರಿಂದ **ಯದ್ವಾ** — ಒಂದು ವೇಳೆ ಹಾಗೆ ಅಲ್ಲದಿದ್ದರೂ **ಅಶಕ್ತೋಽಪಿ** — ಹಿಂದೆ ಹೇಳಿದ ಹಾಗೆ ಅಶಕ್ತನಾದರೂ ಕೂಡ, **ಶ್ರಮಾವಧಿ** — ಶ್ರಮವೇ ಅವಧಿಯುಳ್ಳ ಹಾಗೆ ಎಂದರೆ ನನ್ನ ಶ್ರಮಕ್ಕೆ ಅನುಗುಣವಾಗಿ, ಅಥವಾ ಶ್ರಮವನ್ನೇನೋ ಪಡಬಹುದು, ಬುದ್ಧಿಯೇ ಇಲ್ಲದೇ ಹೋದರೆ ಸ್ತುತಿಯು ಹೇಗೆ? ಆದುದರಿಂದ **ಯಥಾಮತಿವಾ** — ತನ್ನ ಬುದ್ಧಿ ಕುಶಲತೆಗೆ ಅನುಗುಣವಾಗಿಯಾಗಲೀ **ಸ್ತೌಮಿ** — ಸ್ತೋತ್ರಮಾಡುತ್ತೇನೆ. ಹಾಗೆ ಸ್ತುತಿಸುವದರಿಂದ ಏನಾಯಿತು? ಆದರಿಂದ ಲಜ್ಜಾಸ್ಪದ ಹಾಸ್ಯಾಸ್ಪದ ವಾಗಿರುವದೇನಿದೆ? ಎಂಬ ತಾತ್ಪರ್ಯವು; ಇದು "**ಯದ್ವಾ**" ಎಂಬುದರಿಂದ ತೋರಿಬರುವ ಅರ್ಥವು. **ವೇದಾಃ** — ವೇದಗಳೂ, **ಚತುರ್ಮುಖಮುಖಾಶ್ಚ** — ಬ್ರಹ್ಮರುದ್ರೇಂದ್ರ ಸನಕ ನಾರದಾದಿಗಳೂ, ಕೂಡ **ತೇಽಪಿ** — ಅಂತಹ ಜ್ಞಾನಾಗ್ರೇಸರುಗಳೂ ಕೂಡ **ಏವಮೇವ** – ಹೀಗೆಯೇ ಎಂದರೆ ಅವರುಗಳ ಶಕ್ತಿ ಬುದ್ಧಿಗಳಿಗನುಗುಣವಾಗಿಯೇ, **ಸದಾ ಸ್ತುವಂತಃ ಖಲು** - ಯಾವಾಗಲೂ ಸ್ತುತಿಸುವರಾಗಿರುತ್ತಾರೆಯಷ್ಟೇ? **ಮಹಾರ್ಣವಾಂತಃ** - ಅಗಾಧವಾದ ಸಮುದ್ರದ ಒಳಗಡೆ, **ಮಜ್ಜತಃ** — ಮುಳುಗಿರುವ, **ಅಣುಕುಲಾಚಲಯೋಃ** — ಸಣ್ಣವಸ್ತು ಅಥವಾ ಕಲ್ಲು ಮತ್ತು ಕುಲಾಚಲ ಪರ್ವತ, ಇವೆರಡಕ್ಕೂ, **ಕಃ ವಿಶೇಷಃ** - ಏನು ವಿಶೇಷವು. ವೇದ ಚತುರ್ಮುಖಾದಿಗಳೂ ಹಾಗೆಯೇ

ನಾನೂ ನಹ ಪರಮಪುರುಷನನ್ನು ಸ್ತುತಿಸುವರಾಗಿ ಮಹಿಮೆ ಎಂಬ ಸಮುದ್ರದಲ್ಲಿ ಮುಳುಗಿರುವೆವು. ಅವರುಗಳು ಅವರವರ ಶಕ್ತಿ ಬುದ್ಧಿಗೆ ಅನುಸಾರವಾಗಿ ಸ್ತುತಿಸಿದರು ; ಹಾಗೆಯೇ ನಾನೂ ನನ್ನ ಶಕ್ತಿಬುದ್ಧಿಗನುಸಾರವಾಗಿ ನಾನು ಸ್ತುತಿಸುತ್ತೇನೆ. ಇದರಲ್ಲೇನು ವ್ಯತ್ಯಾಸವು ? ಏನೂ ಇಲ್ಲವೆಂಬ ಭಾವವು.

**ತಾತ್ಪರ್ಯಗಳು** :—ಹಿಂದಿನ ಶ್ಲೋಕದಲ್ಲಿ ಅಸಾಧ್ಯ ಕೆಲಸವನ್ನು ಹಿಡಿದೆನೇ ? ಲಜ್ಜೆಗೂ ಹಾಸ್ಯಕ್ಕೂ ಗುರಿಯಾದನೇ ? ಎಂದು ನಿಂದಿಸಿಕೊಂಡರು. ಅಂತಹ ನಿಂದೆಯೇನು ? ಪ್ರಾಜ್ಞರೂ ಮಂದಮತಿಗಳೂ ಅವರವರ ಶಕ್ತಿ ಬುದ್ಧಿಗೆ ಅನುಗುಣವಾಗಿ ಸ್ತುತಿಸುವದರಲ್ಲಿ ಅಭ್ಯಂತರವೇನೆಂದು ಹೇಳುತ್ತಾರೆ. ಆದುದರಿಂದ “ **ಅಶಕ್ತೋಽಪಿ ಸ್ತೌಮಿ** ” ಅಶಕ್ತನೆಂಬುದನ್ನೇನೋ ಒಪ್ಪಿಕೊಂಡೆನು ; ಆದರೂ ನನ್ನ ಶಕ್ತಿ ಬುದ್ಧಿಗಳಿಗನುಸಾರವಾಗಿ ಸ್ತುತಿಸುವೆನು. ಇಲ್ಲಿ **ಸ್ತೌಮ್ಯೇವ** ಎಂಬಲ್ಲಿರುವ **ಏವ** ಕಾರದಿಂದ ನಿಶ್ಶೇಷವಾಗಿ ಸ್ತುತಿ ಎಂಬುದು ಅಸಾಧ್ಯವೆಂಬುದನ್ನು ಸ್ಥಾಪಿಸುತ್ತದೆ. ಹಾಗಿಲ್ಲದಿದ್ದರೆ ಪರಮಾತ್ಮ ಸ್ತುತಿಯೇ ಸಾಧ್ಯವಿಲ್ಲವಾಗುತ್ತದೆ. ಏಕೆಂದರೆ ಸಮಗ್ರವಾಗಿ ಸ್ತುತಿಸುವ ಶಕ್ತಿ ಜ್ಞಾನಗಳು ಯಾರಿಗೂ ಇಲ್ಲವಾದುದರಿಂದ. ಅಶಕ್ತ ಶಬ್ದಾಭಿಪ್ರಾಯವು ಆ ಪರಮ ಪುರುಷನ ಮಹಿಮೆಯನ್ನು ಯಥಾವತ್ತಾಗಿ ತಿಳಿಯುವದಕ್ಕಾಗಲಿ, ಹೇಳುವದಕ್ಕಾಗಲೀ ತಮಗೆ ಶಕ್ತಿಯಿಲ್ಲವೆಂಬುದನ್ನು ಒಪ್ಪಿಕೊಂಡೇ ಹೇಳುವ ಭಾವವು. ಕಾಳಿಯನ ಉಕ್ತಿಯಾದ “ **ಸೋಹಂ ತೇ ದೇವ ದೇವೇಶ ನಾರ್ಚನಾದೌ ಸ್ತುತೌ ನ ಚ । ಸಾಮರ್ಥ್ಯವಾನ್ ಕೃಪಾಮಾತ್ರ ಮನೋವೃತ್ತಿಃ ಪ್ರಸೀದತು ಮೇ** ”ಎಂಬುದು ಅನುಸಂಧೇಯವು. ಹೀಗೆ ಶಕ್ತಿ ಬುದ್ಧಿ ಎರಡೂ ಇಲ್ಲದಿದ್ದರೂ ನನ್ನನ್ನು ಸ್ತುತಿಸಬೇಕೆಂದು ಉದ್ಯುಕ್ತನಾಗಿರುತ್ತಾನಲ್ಲಾ ಎಂದು ದಯಾಳುವಾದ ಪರಮ ಪುರುಷನು ಸುಮ್ಮನಿರುವನೇ ? ಅವೆರಡನ್ನೂ ಕೊಟ್ಟು ನನ್ನ ಸಂಕಲ್ಪವನ್ನು ನೆರವೇರಿಸುವೆನೆಂಬ ಭಾವವು ಸೂಚಿತವು. “ ಯಥಾಮತಿ ” ಎಂಬ ಪ್ರಯೋಗವು. “ **ಇಷುಕ್ಷಯಾನ್ನಿವರ್ತಂತೇ ನಾಂತರಿಕ್ಷ ಕ್ಷಿತಿಕ್ಷಯಾತ್ । ಮತಿಕ್ಷಯಾ ನ್ನಿವರ್ತಂತೇ ನ ಗೋವಿಂದ ಗುಣಕ್ಷಯಾತ್** ” ಎಂಬಲ್ಲಿ ಹೇಳಿರುವ ಅಭಿಪ್ರಾಯವನ್ನು ಸ್ಮರಿಸುವಹಾಗೆ ಮಾಡುತ್ತದೆ. ಬಾಣವನ್ನು ಆಕಾಶದಲ್ಲಿ ಬಿಟ್ಟರೆ ಸ್ವಲ್ಪದೂರ ಹೋಗಿ ಹಿಂತಿರುಗುತ್ತದೆ. ಇದರಿಂದ ಬಾಣಕ್ಕೆ ಮುಂದಕ್ಕೆ ಹೋಗಲು ಸ್ಥಳವಿಲ್ಲದುದರಿಂದಲ್ಲವು ; ಅದಕ್ಕೆ ಮುಂದಕ್ಕೆ ಶಕ್ತಿಯಿಲ್ಲದೆ ಹಿಂತಿರುಗಿತು. ಹಾಗೆಯೇ ಗೋವಿಂದನನ್ನು ಯಥಾಶಕ್ತಿ ಯಥಾಮತಿ ಸ್ತುತಿಸಿ ಅನಂತರ ಸುಮ್ಮನಾಗುವೆನು ; ಆತನ ಕಲ್ಯಾಣ ಗುಣಗಳ ಸ್ತೋತ್ರವು ಮುಗಿಯಿತು ಎಂದಲ್ಲವು. **ಯಥಾಮತಿ** ಸ್ತುತಿಸುವೆನೆಂಬುದಕ್ಕೆ ಮಹಾಭಾರತವನ್ನು ದೃಷ್ಟಾಂತವಾಗಿ “ ಯಥಾಜ್ಞಾನಂತು ವಕ್ಷ್ಯಾಮಿ ಪುರುಷಂ ತಂ ಸನಾತನಮ್ । ತಸ್ಯೈಕಸ್ಯ ಮಹತ್ವಂ ಸಚೈಕಃ ಪುರುಷ ಸ್ಥಿತಃ। ಮಹಾಪುರು

ಷ ಶಬ್ದಂ ನಭಿಭರ್ತ್ಯೇಕ ಸ್ಸನಾತನಃ ಕಾಣಬಹುದು. ಹಾಗೆಯೇ ಗೀತೆಯಲ್ಲಿ " **ಯಾವಾನರ್ಥ ಉದಪಾನೇ ಸರ್ವತ ಸಂಪ್ಲುತೋದಕೇ** " (೨. ೪೬.) ಪರಿಪೂರ್ಣವಾದ ತಟಾಕಾದಿ ಜಲಾಶಯದಲ್ಲಿ ಬೇಕಾದಷ್ಟು ಜಲವಿದೆ. ಎಲ್ಲವನ್ನೂ ಉಪಯೋಗಿಸಲು ಸಾಧ್ಯವೇ? ತನ್ನ ಕೆಲಸಕ್ಕೆ ಕುಡಿಯುವದಕ್ಕೋ ಅಡಿಗೆಗೋ ಎಷ್ಟು ಬೇಕೋ ಅಷ್ಟು ತಾನೇ ಪರಿಗ್ರಹಿಸುವನು. ಇದರಲ್ಲಿ ಹಾಸ್ಯಾಸ್ಪದವೇನು? ಎಂಬ ಭಾವವು. ಇಲ್ಲಿ ಸ್ತೌಮಿ ಎಂಬ ವರ್ತಮಾನ ನಿರ್ದೇಶವು ಹೇಗೆ? ಇನ್ನೂ ಸ್ತೋತ್ರಾರಂಭವಿಲ್ಲವಲ್ಲಾ ಎಂದಗೆ, ಇನ್ನೇನು ಸದ್ಯದಲ್ಲೇ ಪ್ರಾರಂಭಿಸುತ್ತಾರಾದುದರಿಂದ ಹಾಗೆ ಪ್ರಯೋಗವು; ಅಥವಾ ಪರಮ ಪುರುಷನ ಮಹಿಮೆಯು ಅಪರಿಚ್ಛಿನ್ನವೆಂಬ ಉಪಪಾದನೆಯು ಈ ಶ್ಲೋಕಗಳಲ್ಲೂ ಇರುವದರಿಂದ ಇವುಗಳೂ ಸ್ತುತಿರೂಪವೇ ಎಂಬ ಭಾವದಿಂದ ವರ್ತಮಾನ ನಿರ್ದೇಶಕವೆಂದು ಭಾವಿಸಬಹುದು. **ಏವಮೇವ** ಎಂಬ ಪ್ರಯೋಗದಿಂದ ಪ್ರಾಜ್ಞರೇ ಆಗಲಿ, ಮಂದಮತಿಗಳೇ ಆಗಲಿ, ಯಾರಿಂದಲೂ ಸಮಗ್ರವಾಗಿ ಸ್ತುತಿಯು ಸಾಧ್ಯವೇ ಇಲ್ಲವೆಂಬ ಭಾವವು ಸ್ಥಾಪಿತವು. ಇದರಿಂದ **ಯಾರೂ** ಸ್ತುತಿಮಾಡಕೂಡದು, ಏಕೆಂದರೆ ಯಾಥಾವತ್ತಾಗಿ ಸ್ತುತಿಸಲು ಯಾರಿಗೂ ಯೋಗ್ಯತೆ ಇಲ್ಲವು ಎಂದು ನಿರ್ಭಂದಿಸಿದರೆ **ಪರಮಾತ್ಮನ** ಸ್ತುತಿಯೇ **ಜಗತ್ತಿ** ನಲ್ಲಿ ಇಲ್ಲವಾಗುತ್ತದೆ. ಹೀಗಾದನಂತರ ಸಹಸ್ರನಾಮದಲ್ಲಿ ಹೇಳಿರುವ " **ಸ್ತವ್ಯ ಸ್ತವ ಪ್ರಿಯಃ ಸ್ತೋತ್ರಂ ಸ್ತುತಿಃ** " ಇತ್ಯಾದಿನಾಮಗಳಿ**ಗೆ** ಏನು ಗತಿಯು? ಅವುಗಳು ಆಗ ನಿರರ್ಥಕ ಗಳಾಗುವುವು. ಆದುದರಿಂದ ವೇದಗಳು ಮೊದಲುಗೊಂಡು ಸರ್ವರೂ ಯಥಾಶಕ್ತಿ ಯಥಾಮತಿಯೇ ಸ್ತೋತ್ರಮಾಡುವದು ಸಿದ್ಧವು ಎಂದು ತೋರುವದಕ್ಕಾಗಿ " ಖಲು " ಎಂಬ ಪ್ರಯೋಗವು. ಶ್ರುತಿಯಲ್ಲಿ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಪ್ರಯೋಗದಲ್ಲಿ **ಖಲು** ಶಬ್ದವು ನಿಸ್ಸಂದೇಹವಾಗಿ ಸ್ಥಾಪಿತವಾದ ಅರ್ಥವನ್ನು ಬೋಧಿಸುತ್ತದೆ. **ತೇ** ಎಂದು **ಅಪಿ** ಶಬ್ದದಿಂದ ಸೇರಿಸಿ ಹೇಳಿರುವದರಿಂದ ಸರ್ವೋತ್ಕೃಷ್ಟ ಜ್ಞಾನಿಗಳಾದರೂ ಅವರೂ ಸಹ ನಮ್ಮ ಹಾಗೆಯೇ ಸಮಗ್ರವಾಗಿ ಸ್ತುತಿಸಲಾರರು. ನಮಗಿಂತ ಸ್ವಲ್ಪ ಉತ್ತಮವಾಗಿ ಸ್ತುತಿಸಬಹುದು; ಇಷ್ಟೇ ವ್ಯತ್ಯಾಸವೇ ವಿನಾ ಹೆಚ್ಚು ವಿಶೇಷವೇನೂ ಇಲ್ಲವೆಂಬ ಭಾವವು ತೋರಿಬರುತ್ತದೆ. ಅವರುಗಳು ಬೇಕಾದರೆ **ಸದಾ ಸ್ತುವಂತಃ** ಆಗಿರಬಹುದು; ವೇದಗಳಿಗೂ " **ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ವಿಷ್ಣೋ ರ್ಯತ್ಪರಮಂ ಪದಮ್** " ಎಂದರೆ **ವಿಪ್ರಾಸಃ** - ಮೇಧಾವಿಗಳಾಗಿಯೂ, **ಜಾಗೃವಾಂಸಃ** — ಅಸ್ಖಲಿತ ಜ್ಞಾನವುಳ್ಳವರಾಗಿಯೂ ಇರುವ **ನಿತ್ಯ** ಸೂರಿಗಳು **ವಿಷ್ಣೋಃ ಯತ್ಪರಮಂ ಪದಮ್** — ವಿಷ್ಣುವಿನ ಯಾವ ಶ್ರೇಷ್ಠವಾದ ಪ್ರಾಪ್ಯವಾದ ಸ್ಥಿತಿಯನ್ನು ಕುರಿತು, **ವಿಪನ್ಯವಃ** — ಸ್ತೋತ್ರಮಾಡುವವರಾಗಿ, **ಸಮಿಂಧತೇ** — ಪ್ರಕಾಶಿಸಿರುತ್ತಾರೆ, ಎಂಬಲ್ಲೂ " ಏತತ್ಸಾಮಗಾಯ

ಆಸ್ತೇ" ಎಂಬಲ್ಲೂ ಹೇಳಿರುವ ಹಾಗೆ, ನಿತ್ಯಸೂರಿಗಳಿಗೂ **ಸದಾ ಸ್ತೋತೃತ್ವಂ** ಸಲ್ಲುತ್ತದೆ. ಚತುರ್ಮುಖಾದಿಗಳಿಗಾದರೋ ಅವರುಗಳು ಆ ಅಧಿಕಾರಗಳನ್ನು ಹೊಂದಿರುವವರಿಗೂ ಯಾವಾಗಲೂ ಸ್ತುತಿಸಲಾರರು; ಮತ್ತೂ ಅವರುಗಳಲ್ಲಿ ಕೆಲವರಿಗೆ ಮುಕ್ತಿಯು ಸಿದ್ಧವಾದುದರಿಂದ ಅನಂತರವೂ ಅವರುಗಳು **ಸದಾ ಸ್ತುವಂತಃ** ಎಂದು ಹೇಳಲ್ಪಟ್ಟರು. ಇಲ್ಲಿ ಚತುರ್ಮುಖನನ್ನು ಮುಖ್ಯವಾಗಿ ಹೇಳಿರುವದು, ಆತನಿಗೆ ಕಲ್ಪಾಂತದಲ್ಲಿ ಮುಕ್ತಿಯು ವ್ಯಕ್ತವಾದುದರಿಂದ ಹಾಗೆ ಪ್ರಯೋಗವು; ಅದೂ ಅಲ್ಲದೇ ಬ್ರಹ್ಮಲೋಕದಲ್ಲೇ ಇರುವಾಗಲೂ ನಾಲ್ಕು ಮುಖಗಳಿಂದಲೂ ನಾಲ್ಕು ವೇದಗಳನ್ನೂ ಉಚ್ಚರಿಸುತ್ತಿರುವದರಿಂದಲೂ, ಹಾಗೆ ಪ್ರಯೋಗವು. **ಮುಖಾಶ್ಚ** ಎಂಬುದರಿಂದ ಸನಕಾದಿಗಳೂ ನಾರದರೂ ಮೊದಲಾದವರೂ ಹೇಳಲ್ಪಟ್ಟರೆಂದು ಭಾವಿಸಬಹುದರಿಂದ **ಸದಾ ಸ್ತುವಂತಃ** ಎಂಬ ಪ್ರಯೋಗವು. ಅವರುಗಳ ವಿಷಯದಲ್ಲೂ ಯುಕ್ತವೇ ಸರಿ. ಇತರ ಮಹಾನುಭಾವರಾದ ಪ್ರಾಜ್ಞರೂ ಸಹ ಈ **ಮುಖಾಶ್ಚ** ಎಂಬ ಪ್ರಯೋಗದಿಂದ ಹೇಳಲ್ಪಟ್ಟರೆಂದು ಭಾವಿಸಬಹುದು, ಆಗ **ಸದಾ** ಎಂದರೆ ಅವರುಗಳಿಗೆ ಸಾಧ್ಯವಾದ ಕಾಲದಲ್ಲೆಲ್ಲಾ ಸ್ತುತಿಸುವವರು ಎಂದು ಅರ್ಥ ಮಾಡಬಹುದು; ಅಥವಾ ಕ್ಲಿಪ್ತಕಾಲಗಳಲ್ಲಿ ನಿತ್ಯವೂ ಸ್ತುತಿಸುವವರು ಎಂಬರ್ಥವು.

**ಸದಾ ಸ್ತುವಂತಃ** ಎಂಬುದರಿಂದ ಇನ್ನೊಂದು ಭಾವವೂ ತೋರಿಬರುತ್ತದೆ. ಹೀಗೆ **ಸದಾ ಸ್ತುತಿ** ಸುವುದರಿಂದಾಗಲಿ ಸಮಗ್ರವಾದ ಸ್ತೋತ್ರವಾಗುತ್ತದ್ಯೋ? ಎಂದರೆ ಆಗಲೂ ಸಮಗ್ರವಾಗಿ ಆಗುವುದಿಲ್ಲವೆಂಬುದನ್ನು ಸೂಚಿಸುವದಕ್ಕಾಗಿಯೂ ಹಾಗೆ ಪ್ರಯೋಗವು. ವೇದವು ಪರಮಾತ್ಮನ ಆನಂದವೆಷ್ಟು ಎಂದು ಹೇಳಲು ಹೊರಟು ಸಾಧ್ಯ ವಾಗದೇ, ಅದರ ಇಯತ್ತನ್ನು ಇನ್ನು ಹುಡುಕುತ್ತಲೇ ಇದೆ ಎಂಬುದನ್ನು ಸೂಚಿಸುವದಕ್ಕಾಗಿಯೂ **ಸದಾ** ಎಂಬ ಪ್ರಯೋಗವು. ಹಾಗೆ ತನಗೆ ಇನ್ನೂ ಸ್ವಾಧವಿಲ್ಲವೆಂದೇ "ಯತೋ ವಾಚೋ ನಿವರ್ತಂತೇ" ಎಂದು ಹೇಳಿತು. ಈ ಅಭಿಪ್ರಾಯವೇ ಭಾರತದಲ್ಲಿ:—

> **"ವರ್ಷಾಯುತೈರ್ಯಸ್ಯ ಗುಣಾ ನಶಕ್ಯಾವಕ್ತುಂ ಸಮೇತೈರಪಿ ಸರ್ವದೇವೈಃ । ಮಹಾತ್ಮನಶ್ಶಂಖ ಚಕ್ರಾಸಿ ಪಾಣೇರ್ಜಿಷ್ಣೋರ್ವಿಷ್ಣೋರ್ವಸುದೇವಾತ್ಮಜಸ್ಯ ॥"**

ಲೆಖ್ಖವಿಲ್ಲದಷ್ಟು ವರ್ಷಗಳ ಕಾಲ ಸಮಸ್ತ ದೇವತೆಗಳೂ ಸೇರಿ ಒಬ್ಬೊಬ್ಬರು ಒಂದೊಂದು ಭಾಗವನ್ನು ಸ್ತುತಿಸಿದರೂ ಆ ಮಹಾತ್ಮನ ಗುಣಗಳನ್ನೆಲ್ಲಾ ಹೇಳಿ ಮುಗಿಸಲು ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ವಿಷ್ಣು ಧರ್ಮದಲ್ಲೂ,

> **ಸತ್ವಾದಯೋ ನ ಸಂತೀಶೇ ಯತ್ರ ಚ ಪ್ರಾಕೃತ ಗುಣಾಃ ।**
> **ನ ಹಿ ತಸ್ಯ ಗುಣಾ ಸರ್ವೇ ಸರ್ವೈರ್ಮುನಿಗಣೈರಪಿ ।**
> **ವಕ್ತುಂ ಶಕ್ಯಾ ವಿಯುಕ್ತಸ್ಯ ಸತ್ವಾದ್ಯೈರಖಿಲೈರ್ಗುಣೈಃ ॥**

**ಕಿಂಚೈಷ ಶಕ್ತ್ಯತಿಶಯೇನ ನತೇಽನು ಕಂಪ್ಯಃ**
**ಸ್ತೋತಾಪಿ ತು ಸ್ತುತಿ ಕೃತೇನ ಪರಿಶ್ರಮೇಣ ।**
**ತತ್ರ ಶ್ರಮಸ್ತು ಸುಲಭೋ ಮಮ ಮಂದಬುದ್ಧೇ**
**ರಿತ್ಯುದ್ಯಮೋ ಯ ಮುಚಿತೋ ಮಮ ಚಾಬ್ಜನೇತ್ರ ॥ ೯ ॥**

---

ಪರಮ ಪುರುಷನು ನಮ್ಮಲ್ಲೆಲ್ಲಾ ಇರುವ ಹೇಯವಾದ ಪ್ರಾಕೃತಗುಣಗಳಿಲ್ಲದೆ ಅಪ್ರಾಕೃತ ಕಲ್ಯಾಣಗುಣಗಳಿಂ ದಯುಕ್ತನು. ಸಮಸ್ತ ಮುನಿಗಣವೂ ಸೇರಿದರೂ ಆ ಕಲ್ಯಾಣಗುಣಗಳನ್ನು ಪರ್ಣಿಸುವದು ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ವಿಷ್ಣುಪುರಾಣದಲ್ಲಿ ಕಾಳಿಯನ ಹೆಂಡತಿಯು ಸ್ತುತಿಸುತ್ತಾಳೆ ;— ಹೇಗೆಂದರೆ ;- " **ನ ಸಮರ್ಥಾ ಸ್ಸುರಾ ಸ್ತೋತುಂ ಯಮನಂತಮಜಂ ವಿಭುಮ್। ಸ್ವರೂಪವರ್ಣನಂ ತಸ್ಯ ಕಥಂ ಯೋಷಿತ್ಕರಿಷ್ಯತಿ** " ದೇವತೆಗಳೆಲ್ಲಾ ನಿನ್ನನ್ನು ಸ್ತುತಿಸಲು ಸಾಧ್ಯವಿಲ್ಲದವರಾಗಿರುವಾಗ ಸ್ತ್ರೀಯಾದ ನಾನು ನಿನ್ನ ಸ್ವರೂಪ ನಿರೂಪಕ ಧರ್ಮಗಳ ಕಥನವನ್ನು ಹೇಗೆ ಮಾಡಲು ಸಾಧ್ಯವು ಎಂದು ಹೇಳಿಕೊಂಡಿರುತ್ತಾಳೆ. ಹಾಗೆಯೇ ವಾರಾಹದ ರುದ್ರಗೀತೆಯಲ್ಲಿ ;—

**ಚತುರ್ಮುಖಾಯುರ್ಯದಿ ಕೋಟಿ ವಕ್ತ್ರೋ ಭವೇನ್ನರಃ ಕ್ವಾಪಿ ವಿಶುದ್ಧ ಚೇತಾಃ । ನ ತೇ ಗುಣಾನಾಮಯುತೈಕ ಮಂಶಂ ವದೇನ್ನ ವಾ ದೇವವರ ಪ್ರಸೀದ ॥**

ಯಾವನಾದರೂ ಪ್ರಾಜ್ಞನಾದ ಮನುಷ್ಯನು ಕೋಟಿ ಮುಖಗಳನ್ನೂ ಚತುರ್ಮುಖನ ಆಯುಸ್ಸನ್ನು ಹೊಂದಿ ನಿನ್ನನ್ನು ಸ್ತುತಿಸಿದರೆ, - ಆಗಲೂ ನಿನ್ನ ಕಲ್ಯಾಣ ಗುಣಗಳ ಅಯುತ ಭಾಗದಲ್ಲಿ ಒಂದಂಶವನ್ನಾಗಲೀ ಸ್ತುತಿಸಿದ ಹಾಗೆ ಆಗುತ್ತದೋ ಇಲ್ಲವೋ ಹೇಳಲಾರೆನು, ಆದುದರಿಂದ ಸರ್ವದೇವತೆಗಳಿಗಿಂತಲೂ ಉತ್ಕೃಷ್ಟನಾದವನೇ ಪ್ರಸನ್ನನಾಗು " ಎಂಬ ರುದ್ರವಾಕ್ಯವು.

ಹೀಗೆ ಯಾರಿಂದಲೂ ಸಮಗ್ರವಾಗಿ ಸ್ತುತಿಸಲು ಸಾಧ್ಯವಿಲ್ಲನಾದ ನಂತರ, ನಾನು ಸ್ತುತಿಸುವದರಲ್ಲಿ ಅಭ್ಯಂತರವೇನು? ಅವರದೂ ಸ್ತುತಿಯು ನನ್ನದೂ ಸ್ತುತಿಯು ; ಏನೊಂದೂ ವಿಶೇಷವಿಲ್ಲವು. ಇದನ್ನು ಅರ್ಥಾಂತರ ನ್ಯಾಸಾಲಂಕಾರ ಮೂಲಕ ಸಮರ್ಥಿಸುತ್ತಾರೆ. ಸಮುದ್ರದಲ್ಲಿ ಅತ್ಯಲ್ಪವಸ್ತುವೊ ಕುಲಾಚಲ ಪರ್ವತವೂ ಎರಡೂ ಮುಳುಗಿದ್ದರೆ ಹೇಗೆ ಏನೊಂದೂ ವ್ಯತ್ಯಾಸ ತೋರುವದಿಲ್ಲವೋ, ಹಾಗೆಯೇ ಆತನ ಮಹಿಮಾರ್ಣವ ಸ್ತುತಿಯಲ್ಲಿ ಮುಳುಗಿದವರಲ್ಲಿ ಏನೊಂದೂ ವಿಶೇಷವಿಲ್ಲವು ಎಂದು ಮನಸ್ಸಮಾಧಾನ ಮಾಡಿಕೊಂಡು ಸ್ತುತಿಯನ್ನು ಸದ್ಯದಲ್ಲೇ ಆರಂಭಿಸುವರಾಗಿದ್ದಾರೆ ॥ ೮ ॥

**ಅವತಾರಿಕೆ** :— ಹಿಂದೆ ಏಳನೆಯ ಶ್ಲೋಕದಲ್ಲಿ ಸ್ತೋತ್ರವನ್ನು ಸಙ್ಕಲ್ಪಿಸಿ

ದನೇ, ಅದು ಉಚಿತವಲ್ಲವೇ ಎಂದು ತಮ್ಮನ್ನು ನಿಂದಿಸಿಕೊಂಡರು. ಎಂಟನೆಯ ಶ್ಲೋಕದಲ್ಲಿ ಅಂತಹ ಅನುಚಿತವಾದುವೇನು? ಪ್ರಾಜ್ಞರೂ ಮಂದಬುದ್ಧಿಗಳೂ ಸಹ ತಮ್ಮ ತಮ್ಮ ಶಕ್ತಿ ಬುದ್ಧಿಗನುಸಾರವಾಗಿ ಸ್ತುತಿಸಬಹುದು; ಅನುಚಿತವಾದುದೇನೂ ಇಲ್ಲವು ಎಂದು ಹೇಳಿದರು. ಈ ಶ್ಲೋಕದಲ್ಲಾದರೋ ಮಂದರಾದ ಶಕ್ತಿ ಬುದ್ಧಿ ಹೊಂದಿದ್ದರೂ ತಮ್ಮ ಸ್ತುತಿಯು ಉಚಿತವು ಎಂದು ಸ್ಥಾಪಿಸುತ್ತಾರೆ;– ಏಕೆಂದರೆ? ಭಗವದನುಗ್ರಹದ ಸುಲಭ ಸಂಪಾದಕತ್ವವು ಶಕ್ತಿ ಬುದ್ಧಿಗಳ ಮೇಲೆ ಹೋಗುವದಿಲ್ಲವು. ಅದಕ್ಕೆ ಸರಿಯಾದ ಅಧಿಕಾರಿಯ ಅರ್ಹತೆಯ ಮೇಲೆ ಹೋಗುತ್ತದೆಂಬಾದುದರಿಂದ ತಮಗೆ ಭಗವದನುಗ್ರಹ ಉಂಟೆಂಬ ಮಹಾವಿಶ್ವಾಸವಿರುವದರಿಂದ ತಾವು ಶಕ್ತನ ಮಾರ್ಗವನ್ನು ತ್ಯಜಿಸಿ ಅಶಕ್ತನಾಗಿ, ಸುಲಭೋಪಾಯವನ್ನು ಅವಲಂಬಿಸಿರುವದರಿಂದ ಸ್ತುತಿಯು ಉಚಿತವೆಂದು ಸಮರ್ಥಿಸುತ್ತಾರೆ;—

**ಕಿಂಚ** — ಹಿಂದೆ ಹೇಳಿದುದಲ್ಲದೇ ಇನ್ನೂ ಹೇಳತಕ್ಕದ್ದಿದೆ ಎಂದು **ಕಿಂಚ** ಎಂಬ ಪ್ರಯೋಗವು; ಇನ್ನೂ ಹೇಳುವದುಂಟು ಎಂಬ ಭಾವವು. **ಏಷಃ ಸ್ತೋತಾ** — ಈ ಸ್ತುತಿಕರ್ತನು, **ಶಕ್ತ್ಯತಿಶಯೇನ** — ತನ್ನಲ್ಲಿ ಹೆಚ್ಚು ಶಕ್ತತೆಯುಟೆಂಬುದರಿಂದ, **ತೇ** — ನಿನಗೆ, **ನಾನುಕಂಪ್ಯಃ** — ದಯೆ ತೋರಿಸಲು ಯೋಗ್ಯನಾಗುವದಿಲ್ಲವು; ಸ್ತುತಿ ಮಾಡಲು ಶಕ್ತಿಯಿದೆ ಎಂಬ ಮಾತ್ರದಿಂದಲೇ ನಿನ್ನ ಅನುಗ್ರಹಕ್ಕೆ ಪಾತ್ರನಾಗುವದಿಲ್ಲವು. ಇನ್ನೂ ಏತರಿಂದ ಅನುಗ್ರಹ ಪ್ರಾಪ್ತಿಯು? ಎಂದರೆ, **ಸ್ತುತಿ ಕೃತೇನ ಪರಿಶ್ರಮೇಣ** - ಸ್ತುತಿಯಿಂದ ಮಾಡಲ್ಪಟ್ಟ ಹೆಚ್ಚು ಶ್ರಮೆಯಿಂದ. ಶ್ರಮವು ಯಾವುದು ಎಂದರೆ ಅಶಕ್ತಿಯಿದ್ದರೂ ಹೇಗಾದರೂ ಮಾಡಿ ಭಕ್ತಿ ವಿಶ್ವಾಸಗಳ ಮೂಲಕ ಸ್ತುತಿಸಬೇಕೆಂಬ ವಿಶೇಷ ಪ್ರಯತ್ನವು. ಅಥವಾ ಪರಿಶ್ರಮವೆಂದರೆ ಹೆಚ್ಚು ಶ್ರಮದಿಂದುಂಟಾಗುವ ವೈಲಕ್ಷಣ್ಯದಿಂದ, ಪ್ರಾಜ್ಞತೆ ಅದು ಎಂತಾದ್ದೆಂದರೆ "**ಯಮೇವೈಷ ವೃಣುತೇನ ಲಭ್ಯಃ**" ಎಂಬಲ್ಲಿ ಹೇಳಿರುವ ಹಾಗೆ ಆತನ ಪ್ರೀತಿಯುಂಟಾಗುವ ಹಾಗೆ ಸ್ತುತಿ ಮೊದಲಾದುವುಗಳ ಮೂಲಕ ಆತನನ್ನು ಭಕ್ತಿ, ವಿಶ್ವಾಸ, ಶ್ರದ್ಧಾ ಮೊದಲಾದವುಗಳೊಂದಿಗೆ ಆಶ್ರಯಿಸ ತಕ್ಕದ್ದಾಗಿರುತ್ತದೆಂಬ ಭಾವವು ತೋರಿಬರುತ್ತದೆ. ಬರೀ ಸ್ತುತಿಸಲು ಹೆಚ್ಚಾದ ಶಕ್ತಿ ಮಾತ್ರವೇ ಇದ್ದರೆ ಸಾಲದು. **ತತ್ರ** — ಆ ಸಂದರ್ಭದಲ್ಲಿ, **ಮಂದಬುದ್ಧೇಃ** — ಅಲ್ಪಜ್ಞನಾಗಿರುವ ದೈನ್ಯತೆ ಇರುವದರಿಂದಲೇ, **ಮಮ** — ನನಗೆ, **ಶ್ರಮಸ್ತು** — ಶ್ರಮವಾದರೋ **ಸುಲಭಃ** — ಮಂದಬುದ್ಧಿಯಾದುದರಿಂದ ತುಂಬಾ ಸ್ತುತಿಸಲು ಹೆಚ್ಚು ಯೋಗ್ಯತೆ ಇಲ್ಲದುದರಿಂದ, ಅತಿಶಯ ಯುಕ್ತಿಯುಳ್ಳವನಿಗಿಂತ ಸುಲಭವಾಗಿಯೇ ಇರುತ್ತದೆ; ಈ ಸುಲಭ ಶಬ್ದದಿಂದ ಭಗವದನುಗ್ರಹವು ನನಗೆ ಸುಲಭವಾಗಿಯೇ ಲಭಿಸುತ್ತದೆಂಬ ತಮಗೆ ನಂಬಿಕೆಯುಟೆಂಬ ಭಾವವು ತೋರಿಬರುತ್ತದೆ. **ಇತಿ** — ಎಂಬದಾಗಿ ಹೀಗಾದನಂತರ, **ಹೇ ಅಬ್ಜನೇತ್ರ** — ತುಂಬಾ ಭಕ್ತಿ ವಿಶ್ವಾಸಗಳಿಂದ ಸ್ತುತಿಸುವವ

ರಿಗೆ ನಾನು ಅತಿಸುಲಭನಾಗಿ ಅನುಗ್ರಹಮಯನೆಂಬ ಭಾವವನ್ನು ಸೂಚಿಸುವ ಹಾಗೆ, ಕಮಲದ ಹಾಗೆ ಮನೋಹರವಾದ ಕಣ್ಣುಗಳುಳ್ಳವನೇ, **ಮಮಾಪಿ** – ನನಗೇನೆ **ಅಯಂ ಉದ್ಯಮಃ**– ಈ ಸ್ತುತಿಸಬೇಕೆಂಬ ಉದ್ದೇಶ್ಯವಾದರೋ, **ಉಚಿತಃ**-ಯೋಗ್ಯವಾದುದೇ. ನಿನ್ನಸ್ತುತಿಯು ನನಗೆ ಅನುಚಿತವೆಂದು ಭಾವಿಸಿದ್ದೆನು, ಅದು ಈಗ ಸರಿಯಲ್ಲವೆಂದು ತೋರುತ್ತದೆ. ನನ್ನ ಸಙ್ಕಲ್ಪವು ಯೋಗ್ಯವಾದುದೇ ಎಂಬ ಭಾವವು. ಸ್ತೋತ್ರದಲ್ಲಿ ಶಕ್ತಿಯುಳ್ಳವನು, ಹೇಗೋ ನಿನ್ನ ಪ್ರೀತಿಯನ್ನು ಸಂಪಾದಿಸಿಕೊಳ್ಳಬಹುದು. ಶಕ್ತಿಯಿಲ್ಲದವರನ್ನು ಕಂಡರೆ ನಿನಗೆ ಅತ್ಯಂತ ಪ್ರೀತಿ ಎಂಬುದನ್ನು ನಾನುಬಲ್ಲೆನು. ಆದುದರಿಂದ ನಿನ್ನ ಅನುಗ್ರಹವು ಸುಲಭದಿಂದ ದೊರಕುವದರಿಂದ, ನಾನು ನಿನ್ನನ್ನು ಸ್ತುತಿಸಬೇಕೆಂಬ ಉದ್ದೇಶ್ಯವು ಉಚಿತ ವಾದುದೇ ಎಂಬ ಭಾವವು.

**ತಾತ್ಪರ್ಯಗಳು**:– ಯಾವಾಗ ಸ್ತುತಿಸಲು ಶಕ್ತನಾಗಿರುತ್ತಾನೋ ಅಂಥವನು ಶಕ್ತನೆಂದು ಭಾವಿಸುವನಾಗುವದರಿಂದ ಅಂಥವನಿಗೆ ಶೀಘ್ರವಾಗಿಯೂ ಸುಲಭವಾಗಿಯೂ ಭಗವದನುಗ್ರಹವು ದೊರಕದು. ತಾವಾದರೋಸ್ತುತಿಗೆ ಅಶಕ್ತರಾದುದರಿಂದ ತಮ್ಮ ಮಿತ ಪ್ರಜ್ಞತೆಗೆ ಅನುಗುಣವಾಗಿ ಸ್ತುತಿಸಿ, ಅಂತವನು ಮಾಡತಕ್ಕ ಮಾರ್ಗವಾದ ಪ್ರಪದನವನ್ನು ಅವಲಂಬಿಸುವದರಿಂದ ತಮಗೆ ಭಗವದನುಗ್ರಹವು ಶೀಘ್ರವಾಗಿಯೂ ಸುಲಭವಾಗಿಯೂ ಸಿದ್ಧವಾದುದರಿಂದ ತಮ್ಮ ಈ ಸ್ತುತಿಸಬೇಕೆಂಬ ಸಂಕಲ್ಪವೂ ಉಚಿತವಾದುದೇ ಎಂದು ಹೇಳುತ್ತಾರೆ. ತಾಯಿತಂದೆಗಳಿಗೆ ಬಲಹೀನನಾದ ಮಗನಲ್ಲಿ ಹೇಗೆ ಹೆಚ್ಚುದಯೆಯೋ, ಹಾಗೆಯೇ ಈ ಲೋಕಪಿತಾವಿಗೆ ತಾವು ಅನುಕಂಪ್ಯನು ಎಂದು ಹೇಳಿಕೊಳ್ಳುತ್ತಾರೆ. ಸರ್ವೇಶ್ವರನು ದೀನಾನುಕಂಪಿಯಾದುದರಿಂದ ಅಶಕ್ತಿಯಿಂದುಂಟಾದ ದೈನ್ಯದಿಂದ ಪ್ರೇರಿತನಾಗಿ ಅನುಗ್ರಹಿಸುವನೆಂಬುದು ಸತ್ಯವಾದುದರಿಂದ ತಮಗೆ ಸ್ತುತಿಯಲ್ಲಿ ನ್ಯಾಯವಾದ ಅಧಿಕಾರ ಉಂಟೆಂದು ಹೇಳಿಕೊಳ್ಳುತ್ತಾರೆ. ಯಾವನು ತನಗೆ ಸ್ತುತಿಸಲು ಶಕ್ತಿಯಿದೆ ಎಂಬ ಭಾವದಿಂದ ಹೊರಟನೋ ಅಂತಹ ಅಹಂಭಾವವುಳ್ಳವನಲ್ಲಿ ಸ್ವಾಮಿ ಕೃಪೆಯು ವಸ್ತುತಃ ಸ್ವಲ್ಪಕಮ್ಮಿಯು; ಇದನ್ನೇ ಪ್ರಥಮತಃ ಹೇಳುತ್ತಾರೆ. **ಏಷಃ ಸ್ತೋತಾ ಶಕ್ತ್ಯತಿಶಯೇನ, ನತೇ ಅನುಕಂಪ್ಯಃ** – ಶಕ್ತ್ಯತಿಶಯವಿರುವದರಿಂದ ಮಾತ್ರವೇ ;ನಿನ್ನದಯೆಗೆ ಪಾತ್ರನಾಗುವದಿಲ್ಲವು. ಹಾಗಾದರೆ ಇನ್ನೂ ಏತರಿಂದ ಅನುಕಂಪ್ಯನಾಗುವನು ಎಂದರೆ ಹೇಳುತ್ತಾರೆ. ಶಕ್ತ್ಯತಿಶಯವಿಲ್ಲದೆ ಅಶಕ್ತತೆಯಿಂದ ದೈನ್ಯತೆಯನ್ನೂ ಹೊಂದಿದವನೇ ನಿನಗೆ ಅನುಕಂಪ್ಯನು ಎನ್ನುತ್ತಾರೆ. **ಅಪಿತು ಸ್ತುತಿ ಕೃತೇನ ಪರಿಶ್ರಮೇಣ–ಪರಿತಃಶ್ರಮೇಣ** ವಿಶೇಷ ಶ್ರಮ ಮೂಲಕವಾಗಿ, ತಾನು ತುಂಬಾ ಅಶಕ್ತನೇ, ಆತನ ಅನುಗ್ರಹವನ್ನು ಹೇಗೆ ಹೊಂದಲಿ ಎಂಬ ದೈನ್ಯತೆಯಿಂದ ಕೂಡಿ ಸ್ತೋತ್ರದಿಂದ ದಯನೀಯನಾಗುವನು:

**ನಾವೇಕ್ಷಸೇಯದಿ ತತೋ ಭುವನಾನ್ಯ ಮೂನಿ**
**ನಾಲಂ ಪ್ರಭೋ ಭವಿತು ಮೇವ ಕುತಃ ಪ್ರವೃತ್ತಿಃ।**
**ಏವಂ ನಿಸರ್ಗ ಸುಹೃದಿ ತ್ವಯಿ ಸರ್ವಜನ್ತೋಃ।**
**ಸ್ವಾಮಿನ್ನ ಚಿತ್ರ ಮಿದ ಮಾಶ್ರಿತವತ್ಸಲತ್ವಮ್ ॥ ೧೦ ॥**

---

ಸ್ವಾಮಿಯ ಅನುಗ್ರಹಕ್ಕೆ ಪಾತ್ರನಾಗುವನು ಎಂಬ ಭಾವವು. ಹೀಗಿರುವದರಿಂದ ಆ ಸಂದರ್ಭದಲ್ಲಿ ತಮಗೇನೇ ಭಗವದನುಗ್ರಹವು ಎಂಬುದು ಸ್ಪಷ್ಟವೆಂದು ಮುಂದೆಹೇಳುತ್ತಾರೆ. ತಮಗೆ ಸುಲಭಶ್ರಮದಿಂದ ಅನುಗ್ರಹಪ್ರಾಪ್ತಿಯು ಎಂದು ಮುಂದೆಹೇಳುತ್ತಾರೆ. ಅಂತಹ ಅನುಗ್ರಹಪ್ರಾಪ್ತಿಗೆ ವ್ಯಾಜಸಾಪೇಕ್ಷೆ ಉಂಟೆಂದು ಹೇಳಿದಂತಾಯಿತು. **ಮಂದ ಬುದ್ಧೇಃ** ಎಂದು ತಮ್ಮಲ್ಲಿ ನ್ಯೂನತೆಯೇ ಶ್ರೇಯೋ ರೂಪವಾಗಿ ಪರಿಣಮಿಸಿತು ಎಂಬ ಭಾವದಿಂದ ಹಾಗೆ ಪ್ರಯೋಗವು, ಮಂದ ಬುದ್ಧಿಯಾದುದರಿಂದಲೇ ತಮ್ಮ ದೈನ್ಯತೆಯನ್ನು ನೋಡಿ ಸ್ವಾಮಿಗೆ ದಯೆಯುಂಟಾಗಿ ಅನುಗ್ರಹವೆಂಬ ಭಾವವು. ಇಲ್ಲಿ **ಉದ್ಯಮವು**ಯಾವುದೆಂದರೆ ಹಿಂದೆ ಎರಡು ಶ್ಲೋಕಗಳಲ್ಲೂ 'ಸ್ತೋಷ್ಯಾಮಿ' 'ಸ್ತೌಮಿ' ಎಂದು ಮಾಡಿದ ಸಙ್ಕಲ್ಪವು. **ಮಮಚ** ಎಂಬಲ್ಲಿ ಚಶಬ್ದಕ್ಕೆ ಅವಧಾರಣಾರ್ಥವೇ **ನನಗೇನೇ** ಎಂಬರ್ಥಸರಿಯೇ ವಿನಾಸಮುಚ್ಚಯನಾರ್ಥವು ಸರಿಯಲ್ಲನೆಂದು ಹೇಳಲ್ಪಟ್ಟಿರುತ್ತದೆ. **ಮಮಚ**– ನನಗೇನೇ ಈ ಉದ್ಯಮವು, ಚತುರ್ಮುಖ ಮೊದಲಾದವರುಗಳಿಗಿಂತ ಉಚಿತವಾದುದು ಎಂಬ ತಾತ್ಪರ್ಯ ಉಂಟಾಗುವದರಿಂದ ಅವಧಾರಣವೇ ಸ್ವಾರಸ್ಯವು. ಹೀಗೆ ಸಙ್ಕಲ್ಪವುಂಟಾದುದರಿಂದಲೇ **ಅವಲೋಕನ ದಾನೇನ ಭೂಯೋಮಾಂಪಾಲಯ** ಎಂಬಲ್ಲಿ ಹೇಳಿರುವ ಹಾಗೆ ಭಗವಂತನ ಕಟಾಕ್ಷವು ತಮಗೆ ಒದಗಿರುತ್ತೆಂಬಭಾವವೂ ಸಹ ಸೂಚಿತವು. ॥೯॥

**ಅವತಾರಿಕೆಯು:**– ಹಿಂದಿನ ಶ್ಲೋಕವನ್ನು ಅಬ್ಜನೇತ್ರ ಎಂಬ ಸಂಬೋಧನೆಯಿಂದ ಮುಗಿಸಿರುವದರಿಂದ ನನ್ನಂತಹ ಅಶಕ್ತರಾಗಿ ಮಿತಪ್ರಜ್ಞರಾಗಿ ದೈನ್ಯದಿಂದಿರುವವರ ವಿಷಯದಲ್ಲಿ ಅಬ್ಜನೇತ್ರನಾದ ನಿನ್ನಕಟಾಕ್ಷ ವೀಕ್ಷಣದಿಂದ ನಾನು ಅನುಗ್ರಹಿಸಲ್ಪಡುವದು ಸಿದ್ಧವೆಂದು ಹೇಳಿದರು. ಹಾಗೆ ನಿನ್ನ ಆಶ್ರಿತರ ವಿಷಯದಲ್ಲಿ ಕಟಾಕ್ಷ ವೀಕ್ಷಣ ವಿರುವನೇನೂ ಆಶ್ಚರ್ಯಕರವಾದುದಲ್ಲವು. ನಿನ್ನ ಸಹಜವಾದ ಗುಣವೇ ಅದು. ಹಾಗೆ ನಿನ್ನ ಕಟಾಕ್ಷ ವೀಕ್ಷಣವಿಲ್ಲವೆ ಹೋದರೆ ಜಗತ್ತಿನ ಸೃಷ್ಟಿ ಸ್ಥಿತಿ ಪ್ರಳಯಾದಿಗಳೆಲ್ಲಾ ಎಲ್ಲಿಯದು? ಪ್ರಾಣಿಗಳಿಗೆ ಸತ್ತೆ ಮೊದಲಾದವೆಲ್ಲಾ ಎಲ್ಲಯದು? ಇದಕ್ಕೆಲ್ಲಾ ನಿನ್ನ ದಯಾಯುಕ್ತವಾದ ಕಟಾಕ್ಷ ವೀಕ್ಷಣವೇ ಕಾರಣವಲ್ಲವೇ ಎಂದು ಹೇಳಿ ಭಗವಂತನಿಗೆ ಮುಖ್ಯವಾಗಿ ಆಶ್ರಿತರ ವಿಷಯದಲ್ಲಿರುವ ವಾತ್ಸಲ್ಯವನ್ನು ಕೊಂಡಾಡುತ್ತಾರೆ.– ತಾವು ಅಲ್ಪಶಕ್ತರು ಮಿತ

ಪ್ರಜ್ಞರಾದರೂ, ತಮ್ಮ ಈ ಸ್ತುತಿಯಲ್ಲಿ ಔಚಿತ್ಯವೂ ಅತಿಶಯವೂ ಏತರಿಂದ ವೆಂದರೆ ಸ್ವಾಮಿಯಲ್ಲಿ ಆಶ್ರಿತರನ್ನು ಅನುಗ್ರಹಿಸಲು ಬೇಕಾಗಿರುವ ಕೃಪಾ, ಸೌಲಭ್ಯ ವಾತ್ಸಲ್ಯಾದಿಗಳು ಪರಿಪೂರ್ಣವಾಗಿವೆ ಎಂದು ಸ್ವಾಮಿಯ ಮಹೋಪಕಾರಗಳ ನ್ನೆಲ್ಲಾ ಸೃಷ್ಟಿ ಮೊದಲುಗೊಂಡು ಸ್ಮರಿಸಿ ಇದೇನೂ ಆಶ್ಚರ್ಯರಕವಾದಲ್ಲವೆನ್ನು ತ್ತಾರೆ.– ಜಗತ್ಕಾರಣತ್ವವನ್ನು ಉಪಪಾದಿಸುವ ಶಾಸ್ತ್ರಾರಂಭಕ ಸ್ತೋತ್ರವೆಂದು ಭಾವಿಸತಕ್ಕದು. ಇಲ್ಲಿ ಅಶ್ರಿತವತ್ಸಲತ್ವವೆಂದು ಹೇಳಿರುವದರಿಂದ ಹಿಂದಿನ ಶ್ಲೋಕದಲ್ಲಿ ತಾವು ಅಶಕ್ತತೆ ಮಂದ ಬುದ್ಧಿಯುಳ್ಳವರಾದರೂ, ಸುಲಭ ಮಾರ್ಗ ದಲ್ಲಿ ಭಗವಂತನನ್ನು ಆಶ್ರಯಿಸುವ ಸುಕೃತವು ತಮಗೆ ಸ್ವಾಮಿಕಟಾಕ್ಷದಿಂದಲೇ ಉಂಟಾಗಿದೆ ಎಂಬ ಭಾವವು ಸೂಚಿತವು. ಶಕ್ತರಾಗಿ ಉಪಾಸನ ಮಾರ್ಗದಿಂದ ಆಶ್ರಯಿಸುವರಿಗಿಂತ, ತಮ್ಮ ಅಶಕ್ತತೆಮಿತ ಪ್ರಜ್ಞೆಗಳೇ ತಮಗೆ ಸಹಾಯಕಗಳಾಗಿ ಸುಲಭವಾಗಿ ಆತನನ್ನು ಆಶ್ರಯಿಸಿರುವದೂ ಆ ಕಟಾಕ್ಷ ಮಹಿಮೆಯಿಂದಲೇ ಎಂದು ಹೇಳಿ, ಈ ಶ್ಲೋಕದಲ್ಲಿ ಅಂತಹ ಕಟಾಕ್ಷ ವೀಕ್ಷಣೆಯೂ ಆಶ್ರಿತ ವಾತ್ಸಲ್ಯವೂ ಏನೊಂದೂ ಪರಮಕೃಪಾಕರನಲ್ಲಿ ಆಶ್ಯರ್ಯವಾದುದಲ್ಲವೆಂದು ಹೇಳು ತ್ತಾರೆ.

**ಅರ್ಥವು. ನಾವೇಕ್ಷಸೇಯದಿ:–** ನೀನು ಅಜ್ಜನೇತ್ರನಾಗಿದ್ದರೂ ದಿವ್ಯ ಕಟಾಕ್ಷದಿಂದ ನೋಡದೇ ಹೋದರೆ, **ತತಃ–** ಆ ನೀನು ನೋಡದಿರುವ ಕಾರಣ ದಿಂದ, **ಅಮೂನಿಭುವನಾನಿ–** "ಆಬ್ರಹ್ಮಭುವನಾಲ್ಲೋಕಾಃ" ಈ ಬ್ರಹ್ಮಲೋಕ ಮೊದಲುಗೊಂಡು ಎಲ್ಲಾ ಲೋಕಗಳೂ, **ಭವಿತು ಮೇವ–** ಸೃಷ್ಟಿಯಾಗುವದಕ್ಕೂ ಕೂಡ, **ನಾಲಂ–** ಸಮರ್ಥವಾಗುವದಿಲ್ಲವು. **ಭವಿತುಂ–** ಎಂದು ಹೇಳಿರುವದು ಸ್ಥಿತಿ, ರಕ್ಷಣೆ, ಲಯಾದಿಗಳಿಗೂ ಕೂಡ ಉಪಲಕ್ಷಣವಾದುದರಿಂದ, ಆ ಅಭಿಪ್ರಾಯ ವನ್ನೇ ಸೂಕ್ಷ್ಮವಾಗಿ ತಿಳಿಸುತ್ತಾರೆ. **ಹೇಪ್ರಭೋ–** ಓಸರ್ವಶಕ್ತನಾದ ಸ್ವಾಮಿಯೇ ಹೀಗೆ ಸರ್ವಕ್ಕೂ ಕಾರಣವಾಗಿರುವ ನೀನು ನಿನ್ನ ಕಟಾಕ್ಷವೀಕ್ಷಣದಿಂದ ಸೃಷ್ಟಿ ಸವೇ ಹೋದರೆ, ಆಗ **ಕುತಃ ಪ್ರವೃತ್ತಿಃ–** ಯಾವ ವಿಧವಾದ ಪ್ರವೃತ್ತಿ ಎಂದರೆ ವ್ಯಾಪಾರವೂ, ಎಲ್ಲಿಯದು? ಲೋಕಗಳ ಸೃಷ್ಟಿಯೂ, ಅವುಗಳಲ್ಲಿ ತೋರಿಬರುವ ಸರ್ವವ್ಯಾಪಾರವೂ ನಿನ್ನ ಮೂಲಕವಾಗಿಯೇ ಆಗಿರುತ್ತದೆ. ಹೀಗಿರುವಾಗ ಸೃಷ್ಟಿಯೇ ಇಲ್ಲದೆ ಹೋದರೆ ವ್ಯಾಪಾರವೆಲ್ಲಿಯದು? ಎಂಬ ಭಾವವು. ಹೀಗೆ ಅರ್ಥ ಮಾಡಿ ದರೆ ಲೀಲಾ ವಿಭೂತಿಗೆ ಸೇರಿದ ಲೋಕಗಳು ಹೇಳಲ್ಪಟ್ಟು, ನಿತ್ಯ ವಿಭೂತಿಯು ಪುನಃ ಪುನಃ ಸೃಷ್ಟಿಗೆ ಸೇರಿದುದಲ್ಲವಾದುದರಿಂದ ವ್ಯಾವರ್ತಿಸಲ್ಪಡುತ್ತದೆ. ಆದರೆ ನಿತ್ಯ ವಿಭೂತಿಯೂ ಕೂಡ ಸರ್ವೇಶ್ವರನ ನಿತ್ಯ ಸಙ್ಕಲ್ಪದಿಂದುಂಟಾದುದರಿಂದ ಅದನ್ನೂ ಸೇರಿಸಿ ಹೇಳಬೇಕೆಂಬ ಆಶೆಯಿಂದ **ಭವಿತುಂ** ಎಂದರೆ ಉಂಟಾಗು

ಪದಕ್ಕೆ **ನಾಲಂ** ಎಂದು ಪ್ರಯೋಗಿಸಿರಬಹುದು. ನಿತ್ಯ ವಿಭೂತಿಯು ನಿತ್ಯ ವಾಗಿರಲಿ ಎಂಬ ಸಙ್ಕಲ್ಪದಿಂದಲೂ ಲೀಲಾ ವಿಭೂತಿಯು ಅನಿತ್ಯವಾಗಿರಲಿ ಎಂಬ ಸಙ್ಕಲ್ಪದಿಂದಲೂ ಉಂಟಾದವೆಂಬ ಭಾವವು. ಹೀಗೆ ನಿನ್ನ ಕಟಾಕ್ಷ ವೀಕ್ಷಣ ದಿಂದ ಲೀಲಾ ವಿಭೂತಿಗೆ ಸೇರಿದ ಎಲ್ಲಾ ಲೋಕಮನ್ನೂ ಸೃಷ್ಟಿಸಿ, ಅವುಗಳಸತ್ತಾ ಸ್ಥಿತಿ ನಿಯಮನಾದಿಗಳಿಗೆ ಕಾರಣಭೂತನಾಗಿರುವದರಿಂದ, ಹೇಸ್ವಾಮಿನ್ – ಓ ಸರ್ವಕ್ಕೂ ಸ್ವಾಮಿಯಾದವನೇ, ಆದುದರಿಂದ ನಮ್ಮೆಲ್ಲರಿಗೂ ಸ್ವಾಮಿಯಾದವನೇ, **ನಿಸರ್ಗ ಸುಹೃದಿ–** ಸ್ವಾಭಾವಿಕವಾಗಿ ನಿನ್ನ ಸ್ವತ್ತಾದ ನಮ್ಮಲ್ಲಿ ಮಿತ್ರಭಾವವನ್ನು ಹೊಂದಿರುವ, **ತ್ವಯಿ–** ಸರ್ವಶರೀರಕನಾದ ನಿನ್ನಲ್ಲಿ, **ಇದಂ ಆಶ್ರಿತವತ್ಸಲತ್ವಂ–** ಈ ಆಶ್ರಿತವತ್ಸಲತ್ವವು, ಪರಮ ಸುಹೃತ್ತಾದನಿನ್ನಲ್ಲಿ ತೋರುವ ಆಶ್ರಿತವತ್ಸಲತ್ವವೂ, ಅಥವಾ ಹಿಂದಿನ ಶ್ಲೋಕದಲ್ಲಿ **ಅಬ್ಜನೇತ್ರ** ಎಂಬಲ್ಲಿ ಸೂಚಿಸಿದ, **ಇದಂ ಈ ಆಶ್ರಿತ ವತ್ಸಲತ್ವವು, ನಚಿತ್ರಂ**- ಆಶ್ಚರ್ಯ ಕರವಾದುದೇನೂ ಅಲ್ಲವು. ನಿಸರ್ಗಸುಹೃತ್ತಿಗೆ ಉಚಿತವಾಗಿ ಸಾಧಾರಣವಾದುದೇ ಎಂಬ ಭಾವವು.

**ತಾತ್ಪರ್ಯವು. ನಾವೇಕ್ಷಸೇಯದಿ–** ಎಂದು ವ್ಯತಿರೇಕಪ್ರಯೋಗದಿಂದ ಹೇಳಲ್ಪಟ್ಟ, ನೀನು ನಿನ್ನದಿವ್ಯಕಟಾಕ್ಷದಿಂದ ನೋಡದಿದ್ದರೆ ಜಗತ್ತಿನ ಸೃಷ್ಟಿಯೇ ಇಲ್ಲವೆಂದು ಹೇಳಿದುದರಿಂದ ಜಗತ್ತುಗಳ ಸೃಷ್ಟಿಯೆಲ್ಲಾ ಭಗವಂತನ ವೀಕ್ಷಣ ದಿಂದಲೇ ವಿನಾ ಅನ್ಯಥಾಯಿಲ್ಲವೆಂದು ಹೇಳಿಂದಂತಾಯಿತು. ಇಲ್ಲಿ ಹೇಳಿರುವ ಈಕ್ಷಣಕ್ಕೆ ಸಙ್ಕಲ್ಪವೆಂದರ್ಥವು. ಭಗವತ್ಸಙ್ಕಲ್ಪವಿದ್ದರೆ ಜಗತ್ತಿನ ಸೃಷ್ಟಿ, ಸ್ಥಿತಿ. ರಕ್ಷಣೆಲಯಾದಿಗಳು ಯಾವುವು ಇಲ್ಲವೆಂದು ಶಾಸ್ತ್ರಾರ್ಥವು ಬೋಧಿಸಲ್ಪಟ್ಟಿತು, ಈ ಆಳವಂದಾರ ಸ್ತೋತ್ರದಲ್ಲಿ ಶ್ರೀಯಾಮುನ ಮುನಿಗಳು ಉಪನಿಷದರ್ಥಗಳನ್ನೂ, ವ್ಯಾಸಸೂತ್ರಾರ್ಥಗಳನ್ನೂ ಗರ್ಭೀಕರಿಸಿರುವದರಿಂದಲೂ, ಈ ಅರ್ಥಗಳೇ ಇವರ ಶಿಷ್ಯರಾದ ಶ್ರೀಯತಿವರ್ಯರಿಂದ ಶ್ರೀ ಭಾಷ್ಯದಲ್ಲಿ ಉಪಪಾದಿತಸಾಗಿರುವದ ರಿಂದಲೂ, **ಈ ಸ್ತೋತ್ರಕ್ಕೆ** ಸ್ತೋತ್ರರತ್ನವೆಂದೂ **ಕುಟ್ಟಿಭಾಷ್ಯ**ವೆಂದು ಹೆಸರುಗಳು. "ಓಂ ಅಥಾತೋ ಬ್ರಹ್ಮಜಿಜ್ಞಾಸಾ" ಎಂಬಲ್ಲಿ ಹೇಳಿರುವ ಬ್ರಹ್ಮಶಬ್ದದ ಅರ್ಥವನ್ನು ಶ್ರೀ ಭಾಷ್ಯಕಾರರು ಪ್ರಥಮ ಸೂತ್ರದ ವ್ಯಾಖ್ಯಾನದಲ್ಲಿ ನಿಪುಣತರವಾಗಿ ಉಪಪಾದಿಸಿರುತ್ತಾರೆ. ಆ ಅಭಿಪ್ರಾಯಗಳೇ, ಈ ಸ್ತೋತ್ರರತ್ನದಲ್ಲಿತೋರಿ ಬರುತ್ತವೆ. ಈ ಶ್ಲೋಕದಲ್ಲಿ **"ಜನ್ಮಾದ್ಯಸ್ಯಯತಃ" "ಈಕ್ಷತೇರ್ನಾಶಬ್ದಂ"** ಎಂಬ ಸೂತ್ರಾರ್ಥಗಳು ಉಪಪಾದಿತವು. ಇಲ್ಲಿ **ನಾವೇಕ್ಷಸೇ** ಎಂಬಲ್ಲಿ **"ತದೈಕ್ಷತ ಬಹು ಸ್ಯಾಂಪ್ರಜಾಯೇಯ** (ಛಾ-೬-೨-೧) ಆಪರಬ್ರಹ್ಮವು ಸೃಷ್ಟಿಸು ತ್ತೇನೆಂದು ಸಙ್ಕಲ್ಪಸಿತು ಎಂದೂ **"ಸೋಕಾಮಯತ ಬಹುಃಸ್ಯಾಂಪ್ರಜಾಯೇ ಯೇತಿ** (ತೈಆನಂದ ೬) ಎಂದೂ ಹೇಳಲ್ಪಟ್ಟಿರುತ್ತದೆ: ಎರಡನೆಯ ಬ್ರಹ್ಮಸೂತ್ರ

ವಾದ "**ಜನ್ಮಾದ್ಯಸ್ಯಯತಃ**" ಎಂಬಲ್ಲೂ ಇದು ಉಪಪಾದಿತವು, **ಅಸ್ಯ**– ಈ ವಿವಿಧ ವಿಚಿತ್ರ ಬೋಕ್ತೃ ಭೋಗ್ಯವರ್ಗದಿಂದ ಪೂರ್ಣವಾದ ಜಗತ್ತಿನ, **ಜನ್ಮಾದಿ** ಸೃಷ್ಟಿ ಸ್ಥಿತಿಲಯಾದಿಗಳು, **ಯತಃ**– ಯಾವನಿಂದಲೋ, ಆತನೇ ಪರಬ್ರಹ್ಮವು ಎಂಬುದು ಸೂತ್ರಾರ್ಥವು. ಇದಕ್ಕೆ ವಿಷಯವಾದ ಶ್ರುತಿವಾಕ್ಯವು ಯಾವುದೆಂದರೆ "**ಯತೋವಾ ಇಮಾನಿ ಭೂತಾನಿ ಜಾಯನ್ತೇ । ಯೇನಜಾತಾನಿ ಜೀವಂತಿ । ಯತ್ಪ್ರಯನ್ತ್ಯ ಭಿಸಂವಿಶನ್ತಿ ; ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ**" (ತೈ. ಉ. ಭೃ. ೧). "**ಈಕ್ಷತೇರ್ನಾ ಶಬ್ದಮ್**" (೧. ೧. ೫) ಎಂಬ ಸೂತ್ರದಲ್ಲಿ **ಅಶಬ್ದಮ್**– ಪ್ರಧಾನವು, **ನ**– ಜಗತ್ಕಾರಣವಲ್ಲವು; ಏಕೆಂದರೆ "ಈಕ್ಷತೇ" ಎಂಬ ಸಙ್ಕಲ್ಪದಿಂದುಂಟಾದುದೆಂದು ಹೇಳಿರುವದರಿಂದ ಚೇತನವಾದ ಪರಬ್ರಹ್ಮವೇ ಕಾರಣವೇ ವಿನಾ, ಪ್ರಕೃತಿಯಲ್ಲವು, ಇದರಿಂದ ಪ್ರಕೃತಿಯೇ ಉಪಾದಾನ ಕಾರಣವೆಂದು ಹೇಳುವ ಅಭಿಪ್ರಾಯವು ಸಮ ಯಲ್ಲವೆಂಬುದು ತೋರಿ ಬರುತ್ತದೆ. ಆದರೆ ಮುಂದಿನ ಸೂತ್ರವಾದ "**ಗೌಣಶ್ಚೇನ್ನ ಆತ್ಮಶಬ್ದಾತ್**" ಪ್ರಧಾನಕ್ಕೂ ಗೌಣವಾಗಿ "ಈಕ್ಷಣ" ಶಬ್ದದ ಪ್ರಯೋಗವು "ತಾ ಆಪ ಇಕ್ಷತ" ಇತ್ಯಾದಿ ಸ್ಥಳಗಳಲ್ಲಿ ಹೇಳಿರುವದರಿಂದ ಪ್ರಧಾನವೇ ಏಕೆ ಜಗತ್ತಿಗೆ ಕಾರಣವಾಗ ಕೂಡದು? ಎಂದರೆ, **ನ**– ಸರಿಯಲ್ಲವು, ಏಕೆಂದರೆ ಅಲ್ಲಿ "**ಐತದಾತ್ಮ್ಯ ಮಿದಂ ಸರ್ವಂ ತತ್ಸರ್ವಂ ಸ ಆತ್ಮಾ**" ಆ ಜಗತ್ಕಾರಣನು ಆತ್ಮಾ ಎಂದು ಹೇಳಿರುವದರಿಂದ, ಈ ಅರ್ಥಗಳೆಲ್ಲಾ ಸಙ್ಗ್ರಹವಾಗಿ "ನಾವೇಕ್ಷಸೇಯದಿ ತತೋ ಭುವನಾನಿ" ಎಂಬಲ್ಲಿ ಸೂಚಿತವು.

ಪರಬ್ರಹ್ಮವು ಸಙ್ಕಲ್ಪಿಸದೆ, ಸೃಷ್ಟಿಯೇ ಇಲ್ಲದಿದ್ದರೆ, **ಕುತಃ ಪ್ರವೃತ್ತಿಃ – ಈ ಪ್ರವೃತ್ತಿ** ಶಬ್ದದಿಂದಲೂ ಪ್ರಧಾನವು ಜಗತ್ತಿಗೆ ಕಾರಣವಾಗಲಾರದು. ಏಕೆಂದರೆ ಆತ್ಮಾ ಸೇರದಿರುವ ಬರೀ ಪ್ರಕೃತಿಯು ಇಲ್ಲವೇ ಅಲ್ಲವು; ಅದು ಇಲ್ಲದೆ ಪ್ರವೃತ್ತಿಯೂ ಇಲ್ಲವು, ಹೀಗೆ ಎರಡೂ ಮಿಳಿತವಾಗಿರುವದರಿಂದಲೇ ಗೀತೆಯಲ್ಲಿ "**ನಹಿ ಕಶ್ಚಿತ್ ಕ್ಷಣ ಮಪಿ ಜಾತು ತಿಷ್ಠ ತ್ಯಕರ್ಮಕೃತ್**" (ಗೀ. ೩. ೫) ಜೀವಾತ್ಮನೂ ಪ್ರಕೃತಿಯೊಂದಿಗೇ ಇರುವದರಿಂದ ಒಂದು ಕ್ಷಣವಾಗಿಲಿ ಪ್ರವೃತ್ತಿ ಇಲ್ಲದಿರುವದು ಅಸಾಧ್ಯವೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಪರಮ ಪುರುಷನೂ ಈ ಚಿದಚಿತ್ತಗಳೊಂದಿಗೆ ಸೇರಿರುವದರಿಂದಲೇ ಲೋಕದ ಸರ್ವ ಪ್ರವೃತ್ತಿಗಳೂ ಎಂದು ತಿಳಿಯತಕ್ಕದ್ದು. ಮೋಕ್ಷಧರ್ಮದಲ್ಲಿ "**ಯತ್ಕಿಂಚಿದ್ವರ್ತತೆ ಲೋಕೇ ಸರ್ವಂ ತನ್ಮದ್ವಿಚೇಷ್ಟಿತಮ್। ಅನ್ಯೋಹ್ಯನ್ಯಚ್ಚಿಂತಯತಿ ಸ್ವಚ್ಛಂದ ವಿದಧಾಮ್ಯಹಮ್**" ಎಂದು ಲೋಕದ ಸರ್ವ ಪ್ರವೃತ್ತಿಯೂ ತನ್ನ ಸ್ವತಂತ್ರಸಙ್ಕಲ್ಪ ಮೂಲಕವೇ ಎಂದು ಹೇಳಲಟ್ಟಿರುತ್ತದೆ.

ಯಾವಾಗ ಕಾರಣತ್ವವು ಹೇಳಲ್ಪಟ್ಟಿತೋ, ಆಗ ಸ್ಥಿತಿ, ನಿಯಮನ ಲಯಗಳೂ ಹೇಳಲ್ಪಟ್ಟವು. ಸೃಷ್ಟಿಗೆ ಒಳಗಾದುದು ಲಯಕ್ಕೂ ಒಳಗಾಗಲೇಬೇಕು. "**ಉತ್ಪ**

**ನ್ನಸ್ಯ ವಿನಾಶೋಧ್ರುವಂ"** (ಭಾಷ್ಯ) ಎಂದು ಹೇಳಲ್ಪಟ್ಟಿರುತ್ತದೆ ಇಲ್ಲಿ ಸೃಷ್ಟಿ ಶಬ್ದಕ್ಕೆ ಹೊಸದಾಗಿ ದ್ರವ್ಯವು ಉಂಟಾಗುವದು ಎಂಬರ್ಥವಲ್ಲವು. ಹಾಗೆಯೇ **ವಿನಾಶ** ಅಥವಾ **ಲಯ** ವೆಂದರೆ ದ್ರವ್ಯವಿಲ್ಲದೇ ಹೋಯಿತೆಂಬ ಅರ್ಥವಲ್ಲವು. ಸೂಕ್ಷ್ಮವಾಗಿದ್ದುದು ಸ್ಥೂಲವಾಗುವದೇ ಸೃಷ್ಟಿಯು; ಸ್ಥೂಲವಾದುದು ಸೂಕ್ಷ್ಮವಾಗುವದೇ ಲಯವು. ಆದುದರಿಂದ ದ್ರವ್ಯವೆಲ್ಲಾ ನಿತ್ಯವು.

ಹೀಗೆ ಸೃಷ್ಟ್ಯಾದಿಗಳನ್ನುಂಟು ಮಾಡುವನು ಏತಕ್ಕೆ? ಎಂದರೆ ಆತನು **ಸಹಜ ಸುಹೃತ್** ನಮಗೆ ನಿರ್ಹೇತುಕವಾಗಿ ಸಹಜವಾಗಿಯೇ ಇರುವ ಮಿತ್ರನು; ಕಾರುಣ್ಯ, ಸೌಲಭ್ಯ, ಸೌಶೀಲ್ಯ ವಾತ್ಸಲ್ಯಾದಿಗುಣಗಳಿಂದ ಪ್ರೇರಿತನಾಗಿ ಸೃಷ್ಟಿ ಮೊದಲಾದವುಗಳನ್ನೂ ಮಾಡುತ್ತಾನೆ.

**ಕಾರಣತ್ವಂ ನಿಯನ್ತೃತ್ವಂ ಸುಹೃತ್ತ್ವಂ ಸ್ವಾಮಿತ್ವಂ ಹರೇಃ ।**
**ವಾತ್ಸಲ್ಯ ಮಿತಿ ಪಂಚೈತೇ ಕಂಠೋಕ್ತಾ ಇಹ ಸದ್ಗುಣಾಃ ॥**

ಈ ಶ್ಲೋಕದಲ್ಲಿ ಸ್ವಾಮಿಯ ಐದು ಕಲ್ಯಾಣ ಗುಣಗಳು ಹೇಳಲ್ಪಟ್ಟಿರುತ್ತದೆ. (೧) **ಜಗತ್ಕಾರಣತ್ವವು,** (೨) **"ತತ್ಸೃಷ್ಟ್ವಾ ತದೇವಾನುಪ್ರಾವಿಶತ್"** ಜಗತ್ತನ್ನು ಸೃಷ್ಟಿಸಿ ಅನುಪ್ರವೇಶಮಾಡಿ ಅವುಗಳಿಗೆ ಆತ್ಮವಾಗಿರುವದರಿಂದ, **ಸರ್ವ ನಿಯಂತೃತ್ವವೂ** (೩) ಹೀಗೆ ಮಾಡುವದುಏತರಿಂದ ಎಂದರೆ **ಸಹೃತ್ವದಿಂದ.** ಅಚಿತ್ತುಗಳಿಂದ ಸೇರಿರುವ ಈ ಚೇತನರನ್ನುಕಂಡು ಪರಮ ದಯೆಯಿಂದ ಪ್ರೇರಿತನಾಗಿ, ಬಂಧವನ್ನೂ ನೀಗಿಕೊಳ್ಳಲಿ ಎಂದು ಅವರ ಕರ್ಮಾನುಸಾರವಾಗಿ ಕರಣ ಕಳೇಬರಯೋಗವನ್ನುಂಟುಮಾಡಿದುದರಿಂದ **ನಿಸರ್ಗಸುಹೃತ್ವವು.** (೪) ಈ ಚೇತನಾಚೇತನ ಯುಕ್ತವಾದ ಜಗತ್ತೆಲ್ಲಾ ಆತನಸ್ವತ್ತು; ಆತನು ಸ್ವಾಮಿಯು; ಆದುದರಿಂದ **ಸ್ವಾಮಿತ್ವವು** ಇದನ್ನು ಹೇಳುವದಕ್ಕಾಗಿಯೇ **ಸ್ವಾಮಿನ್** ಎಂಬ ಸಂಬೋಧನೆಯು. (೫) ತಾನುದಯಪಾಲಿಸಿದ ಕರಣ ಕಳೇಬರಯೋಗದಿಂದ ತನ್ನನ್ನು ಶಾಸ್ತ್ರೋಕ್ತ ವಿಧಿಗಳ ಮೂಲಕ ಆಶ್ರಯಿಸಲಿ ಎಂದು ಚೇತನರಲ್ಲಿರುವ **ಆಶ್ರಿತವತ್ಸಲತ್ವವು.** ಹೀಗೆ ಐದು ಅಮೋಘಗುಣಗಳು ಸರ್ವೇಶ್ವರನಲ್ಲುಂಟೆಂದು ಆತನ ಹೇಯಪ್ರತ್ಯನೀಕತ್ವ ಕಲ್ಯಾಣ ಗುಣಾಕರತ್ವಗಳು ಬೋಧಿತವು. **ಭುವನಾನ್ಯಮೂನಿ**- ಈ ಲೋಕಗಳೆಲ್ಲಾ ಉಂಟಾದುವು ಆತನಿಂದ ಎಂಬುದರಿಂದ ಉಭಯ ವಿಭೂತಿಗೂ ಆತನೇಕಾರಣನೆಂದು ಭಾವಿಸತಕ್ಕದ್ದು. **ಏಕ ಪಾದ್ವಿಭೂತಿ, ತ್ರಿಪಾದ್ವಿಭೂತಿ;** ಸೃಷ್ಟಿ ಸ್ಥಿತಿ ಲಯಾದಿಗಳಿಗೊಳಗಾದ **ಲೀಲಾ ವಿಭೂತಿಯೂ,** ಇವುಗಳಿಗೆ ಒಳಗಾಗದ **ನಿತ್ಯ ವಿಭೂತಿ** ಗಳೆರಡು **ಭುವನಾನಿ** ಎಂಬ ಶಬ್ದದಿಂದ ಸಂಗೃಹೀತವು.

**ನಾಪೇಕ್ಷಸೇ** ಎಂದು ಪರಮಾತ್ಮ ಸಙ್ಕಲ್ಪವಿಲ್ಲದಿದ್ದರೆ ಭುವನಗಳೇ ಇಲ್ಲವೆಂಬ ಹೇಳಿಕೆಯು **"ಕಾರಣಾಭಾವಾತ್ಕಾರ್ಯಾಭಾವವು"** ಕಾರಣವಿಲ್ಲದಿದ್ದರೆ ಕಾರ್ಯವೂ ಇಲ್ಲವೆಂಬ ಶಾಸ್ತ್ರಾರ್ಥವೂ, ಮತ್ತು ಕಾರಣವೇ ಕಾರ್ಯವಾಗುತ್ತದೆ, ಎಂಬ ಶಾಸ್ತ್ರಾರ್ಥವೂ, ಎಂದರೆ ಸೂಕ್ಷ್ಮಚಿದ್ಚಿತ್ಪರಮಾತ್ಮನೇ ಸ್ಥೂಲಚಿದ ಚಿತ್ಪರಮಾತ್ಮನಾಗುವನೆಂಬುದೂ ಎರಡೂ ಭೋದಿತವು.

**ಪ್ರಭೋ** ಎಂಬ **ಸರ್ವಶಕ್ತಿತ್ವವನ್ನು** ಭೋಧಿಸುವ ಸಂಭೋಧನೆಯಿಂದ ಸ್ವಾಮಿಯು ನಿತ್ಯಮುಕ್ತ ಬದ್ಧರಾದ ತ್ರಿವಿಧ ಚೇತನರನ್ನೂ ಪ್ರಕೃತಿ, ಕಾಲ, ಶುದ್ಧಸತ್ವವೆಂಬ ತ್ರಿವಿಧ ಅಚೇತನವನ್ನೂ ನಿಯಮಿಸಿ ತನ್ನ ಸ್ವಾಧೀನದಲ್ಲಿಟ್ಟುಕೊಳ್ಳುವ ಸಾಮರ್ಥ್ಯವು ಬೋಧಿತವು.

**ಭವಿತುಮ್** ಎಂಬ ಪದದಿಂದ ಬರೀ ಸೃಷ್ಟಿ ಮಾತ್ರವೇ ಹೇಳಲ್ಪಟ್ಟಿತೆಂದು ಭಾವಿಸತಕ್ಕದ್ದಲ್ಲವು. ಜಗತ್ತುಗಳನ್ನು ಸೃಷ್ಟಿಸಿ ಅನುಪ್ರವೇಶಮಾಡಿ, ಅವುಗಳಿಗೆ ಆತ್ಮವಾಗಿ ನಿಯಮಿಸೋಣವೆಲ್ಲಾ, ಹೇಳಲ್ಪಟ್ಟಿತು. ನೀನಿಲ್ಲದೆ, ಎಲ್ಲಾಜಗತ್ತಿನ ಚಿದಚಿತ್ತುಗಳಿಗೆ ಸ್ವರೂಪ, ಸತ್ತಾ ಸ್ಥಿತಿಯಾವವೂ ಇಲ್ಲವೆಂಬ ಭಾವವು **ಭವಿತುಂ** ಎಂಬುದರಿಂದ ತೋರಿಬರುತ್ತದೆ. ಹೀಗಿರುವಾಗ, **ಕುತಃ ಪ್ರವೃತ್ತಿಃ** ಎಂದು ಹೇಳಿದರು. ಶ್ರುತಿಯೂ **"ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನಸ್ಯಾತ್"** ಈ ಆನಂದಮಯನಾದ ಪರಮಾತ್ಮ ನಿಲ್ಲದಿದ್ದರೂ ಯಾವ ಚೇತನನಿಗೂ ಸತ್ತೆಯೇ ಇಲ್ಲವೆಂದು ಹೇಳಿರುತ್ತದೆ. ಶ್ರೀಮದ್ರಾಮಾಯಣದಲ್ಲಿ ಲಕ್ಷ್ಮಣ ವಾಕ್ಯವಾದ **"ನಚ ಸೀತಾ ತ್ವಯಾ ಹೀನಾ ನ ಚಾಹ ಮಪಿ ರಾಘವ। ಮುಹೂರ್ತ ಮಪಿ ಜೀವಾವ ಮತ್ಸ್ಯಾವಿವ ಜಲಾದ್ಧೃತೌ"** (ಅಯೋಧ್ಯಾ) ಹಾಗೆಯೇ ಸುಮಂತ್ರ ವಾಕ್ಯವೂ ಸಹ,

**"ವಿಷಯೇತೇ ಮಹಾರಾಜ ರಾಮವ್ಯಸನ ಕರ್ಶಿತಾಃ।**
**ಸಪುಷ್ಪಾಂಕುರ ಕೋರಕಾಃ। "**

ಅನುಸಂಧೇಯವು. ಆತನಿಲ್ಲದೆ ಯಾವ ಪ್ರವೃತ್ತಿಯೂ ಇಲ್ಲವು ಎಂದು ಶಾಸ್ತ್ರಾರ್ಥವು ಬೋಧಿತವು. ಮೋಕ್ಷಧರ್ಮದಲ್ಲಿ **"ಯತ್ಕಿಂಚಿ ದ್ವರ್ತತೇ ಲೋಕೇ ಸರ್ವತನ್ಮದ್ವಿಚೇಷ್ಟಿತಮ್"** ಲೋಕದ ಪ್ರವೃತ್ತಿಯೆಲ್ಲಾ ನನ್ನ ವಿಚೇಷ್ಟಿತವೆಂದು ಹೇಳಿಕೊಂಡಿರುತ್ತಾರೆ. **"ಯ ಆತ್ಮನಿ ತಿಷ್ಠನ್,.... ಆತ್ಮಾನಮನ್ತರೋಯಮಯತಿ"** ಎಂಬ ಅಂತರ್ಯಾಮಿ ಬ್ರಾಹ್ಮಣವೂ ಅನುಸಂಧೇಯವು.

ಸೃಷ್ಟಿಯೂ, ಅನಂತರ ಶಾಸ್ತ್ರಪ್ರದಾನವೂ, ತನ್ನನ್ನು ಆಶ್ರಯಿಸುವ ಹಾಗೆ ಮಾಡೋಣವೂ ಇವೆಲ್ಲವನ್ನೂ **"ಯೋಬ್ರಹ್ಮಾಣಂ ವಿದಧಾತಿ ಪೂರ್ವಂ, ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ, ತಂಹ ದೇವ ಮಾತ್ಮ ಬುದ್ಧಿಪ್ರಕಾಶಂ**

**ಮುಮುಕ್ಷುರ್ವೈ ಶರಣ ಮಹಂ ಪ್ರಪದ್ಯೇ"** (ಶ್ವೇತಾ.೬) ಎಂಬಲ್ಲಿ ಪ್ರಥಮತ ಬ್ರಹ್ಮನನ್ನು ತನ್ನ ನಾಭೀಕಮಲದಲ್ಲಿ ಸೃಷ್ಟಿಸಿ, ಆತನಿಗೆ ವೇದವನ್ನುಪದೇಶಿಸಿ, ಆತನು ತನ್ನನ್ನು ಆಶ್ರಯಿಸುವಹಾಗೆ ಮಾಡಿ, ಆಶ್ರಯಿಸಿದ ಆತನಲ್ಲಿ ವಾತ್ಸಲ್ಯ ವನ್ನು ತೋರಿ ಕಲ್ಪಾಂತದಲ್ಲಿ ಆತನಿಗೆ ಮುಕ್ತಿಕೊಡುತ್ತೇನೆಂಬ ಭರವಸೆಯೂ ಇವೆಲ್ಲಿವನ್ನೂ ಈ ಮೇಲಿನ ಶ್ವೇತಾಶ್ವತರಿ ಶ್ರುತಿಯಿಂದ ಊಹಿಸ ಬಹುದು. ಹೀಗೆ ಹೀಗೆ ಆತನೇ ಶರಣ್ಯನೆಂಬ ಭಾವವನ್ನು **"ಆಶ್ರಿತವತ್ಸಲತ್ವಂ"** ಎಂಬುದರಿಂದ ಸೂಚಿಸಿದರು.

ಈ ವಾತ್ಸಲ್ಯದ ಮಹಿಮೆ ಎಂತಾದೆಂಬುದನ್ನು ಸೀತೆಯು ರಾವಣನಿಗೆ ಉಪ ದೇಶಿಸಿರುತ್ತಾರೆ- ಹಿಂದೆ ಎಂತಹ ಅಪರಾಧಗಳನ್ನು ಮಾಡಿದ್ದರೂ ಅವುಗಳೊಂದನ್ನು ಸ್ಮರಿಸದೆ ಅನುಗ್ರಹಿಸುವನೆಂದು ಹೇಳಿರುತ್ತಾಳೆ. **"ವಿದಿತಸ್ಸಹಿಧರ್ಮಜ್ಞ ಶ್ಶರಣಾಗತ ವತ್ಸಲಃ। ತೇನ ಮೈತ್ರೀ ಭವತುತೇಯದಿ ಜೀವಿತು ಮಿಚ್ಛಸಿ। ಪ್ರಸಾದಯಸ್ವ ತ್ವಂಚೈನಂಶ ರಣಾಗತವತ್ಸಲಮ್।"** ಆತನು ನಿಸರ್ಗ **ಸುಹೃತ್ತೂ ಮತ್ತೂ ಆಶ್ರಿತ ವತ್ಸಲನೂ** ಆದುದರಿಂದ **"ತೇನ ಮೈತ್ರೀಭವತುತೆ"** ಎಂದು ಅತ್ಯುತ್ಕಟಾಪ ರಾಧಿ ಯಾಗಿರುವ ದುರಾತ್ಮನಾದ ರಾವಣನಿಗೆ ಉಪದೇಶಿಸುತ್ತಾಳೆ. ಇದು ಅನು ಸಂಧೇಯವು.

ಇಲ್ಲಿ ಪ್ರಭು ಶಬ್ದವೂ ಸುಹೃಚ್ಛಬ್ದವೂ ಇರುವದರಿಂದ **"ಸರ್ವಸ್ಯ ಪ್ರಭುರೀ ಶಾನೋ ಸರ್ವಸ್ಯಶರಣಂಸುಹೃತ್"** ಎಂಬ ಶ್ವೇತಾಶ್ವತರ ವಾಕ್ಯಾರ್ಥವನ್ನು ಸೂಚಿ ಸುತ್ತಾರೆ. **ಸರ್ವಜಂತೋಃ** ಎಂಬುದನ್ನು ಕಾಕಾಕ್ಷಿನ್ಯಾಯದ ಪ್ರಕಾರ **'ಸರ್ವ ಜಂತೋಃ ನಿಸರ್ಗಸುಹೃದಿ, ಸರ್ವಜನ್ತೋಃ ಸ್ವಾಮಿನಿ** ಎಂದು ಅನ್ವಯಿಸಿದರೆ, **ಸರ್ವಸ್ಯಪ್ರಭುಃ, ಸರ್ವಸ್ಯಸುಹೃತ್** ಎಂಬ ಮೇಲಿನ ಶ್ರುತ್ಯರ್ಥವು ವ್ಯಕ್ತವು.

**ಏವಂ ನಿಸರ್ಗ ಸುಹೃದಿ:-** ಎಂಬಲ್ಲಿ **ಏವಂ** ಶಬ್ದಾರ್ಥವೇನೆಂದರೆ ಹೀಗೆಲ್ಲಾ ಉಪಕರಿಸಿದ ಸ್ವಾಭಾವಿಕ ಸುಹೃತ್ತು; ಹಿಗೆಲ್ಲಾ ಎಂದರೆ (೧) ಪ್ರಳಯದಲ್ಲಿ ಸಿಕ್ಕಿದ ವರಿಗೆ ತನ್ನ ಕೃಪಾಮೂಲಕವಾಗಿ ಕರಣಕಳೇಬರಗಳನ್ನು ಉಂಟುಮಾಡಿ ಜ್ಞಾನ ವಿವೇಕಗಳನ್ನು ಕೊಟ್ಟಿದುದು. (೨) ತನ್ನನ್ನು ಬಂದು ಸೇರಲೆಂದು ಸಚ್ಛಾಸ್ತ್ರವಾದ ವೇದವನ್ನುಪದೇಶಿಸಿ ಉಚ್ಚಾರಣಾನೂಚ್ಚಾರಣ ರೂಪದಲ್ಲಿ ಬರುವ ಹಾಗೆ ಮಾಡಿ ದುದೂ, (೩) ಅವುಗಳನ್ನು ಉಪಬೃಹ್ಮಣ ರೂಪದಲ್ಲಿ ಉಪದೇಶಾರ್ಹವಾಗುವ ಹಾಗೆ ಪರಾಶರವ್ಯಾಸ, ಶುಕಶೌನಕ, ವಾಲ್ಮೀಕಿ ಮನು ಮೊದಲಾದವರನ್ನು ಪ್ರೇರಿಸಿದುದೂ, (೪) ಅವುಗಳನ್ನು ಸರಿಯಾಗಿ ಉಪದೇಶಿಸುವ ಹಾಗೆ ಎಲ್ಲಾ ಕಾಲದಲ್ಲೂ ಉಪದೇಶಕಾ ಚಾರ್ಯರನ್ನು ಸ್ಥಾಪಿಸುವದೂ, (೫) ತನ್ಮೂಲಿಕ ಮು ಮುಕ್ಷುವಾದವನು ಉಪಾಯನುಷ್ಠಾನವನ್ನು ಮಾಡುವ ಹಾಗೆ ಪ್ರೇರಿಸುವದು

(೬) ಇದಕ್ಕೆ ಸಂತೋಷಿಸಿ ತನಗೆ ಯಾವ ಆನಂದವೋ ಅಂತಹ ಆನಂದವನ್ನೇ ಕೊಟ್ಟು ತನಗೆ ಸಮನಾಗಿಮಾಡಿಕೊಳ್ಳುವದು. ಇವೆಲ್ಲಾ **ಏವಂ** ಶಬ್ದಾರ್ಥವು. ಇಂತಹ ಉಪಕಾರಕಸುಹೃತ್ತಿಗೆ ಪ್ರತ್ಯುಪಕಾರವಾಗಿ ಏನನ್ನು ಸಮರ್ಪಿಸಲಿ? ಎಂದು ಮುಂದೆ "ಮಮನಾಥ" ಎಂಬ ಶ್ಲೋಕದಲ್ಲಿ ಪರಿತಾಪ ಪಡುತ್ತಾರೆ. ಹೀಗೆಯೇ ನಮ್ಮಾಳ್ವಾರವರು **"ಉನಕ್ಕೋರ್ ಕೈಮಾರು ಒನ್ರಿಲೇನ್ ಎನದಾವಿಯು ಉನದೇ"** ಎಂದು ಹಾಗೆಯೇ ಚಿಂತಿಸಿರುತ್ತಾರೆ.

ಹೀಗೆ **"ಸವಿಕಾಕೀ ನರನೋತ"** ಎಂಬಲ್ಲಿ ತೋರಿಬರುವ ಸೃಷ್ಟಿಯೂ, ಲೀಲಾ ವಿಭೂಯಲ್ಲಿರುವ ಸ್ವಾಮಿಯು ಅಸುರಾಗ, ದಯೆ, ಸೌಲಭ್ಯ ಸೌಶೀಲ್ಯ ವಾತ್ಸಲ್ಯಾದಿಗಳು **ನಿಸರ್ಗಸುಹೃದಿ** ಎಂಬ ಪ್ರಯೋಗದಿಂದ ಸೂಚಿತವು. **ನಿಸರ್ಗಸುಹೃದಿ** ಎಂಬಲ್ಲಿ ಹೇಳಿರುವ ಹಾಗೆಯೇ **"ಸ್ವಾಭಾವಕೀಜ್ಞಾನ ಬಲಕ್ರಿಯಾಚ"** ಎಂಬ ಶ್ವೇತಾಶ್ವತರ ವಾಕ್ಯವೂ ಇದೆ. ಸರ್ವಸ್ವಾಮಿತ್ವವು, **"ಪತಿಂ ವಿಶ್ವಸ್ಯಾತ್ಮೇಶ್ವರಂ"** **"ಸಕಾರಣಂ ಕರಣಾಧಿ ಪಾಧಿಪಃ"** ಆತನೇ ಸರ್ವಕ್ಕೂ ಕಾರಣವು, ಇಂದ್ರಿಯಗಳಿಗೆಲ್ಲಾ ಸ್ವಾಮಿಯಾದ ಜೀವಾತ್ಮನಿಗೂ ಸ್ವಾಮಿಯು, **"ಪ್ರಧಾನ ಕ್ಷೇತಜ್ಞಪತಿರ್ಗುಣೇಶಃ"** ಪ್ರಕೃತಿ ಜೀವಾತ್ಮಾ ಇವರುಗಳಿಗೂ ಸ್ವಾಮಿಯು, ಸಮಸ್ತ ಕಲ್ಯಾಣ ಗುಣಾಕರನು, **"ಪತಿಂ ಪತೀನಾಂ ಪರಮಂ ಪರಸ್ತಾತ್ ಏಷ ಭೂತಪತಿರೇಷ ಭೂತಪಾಲಃ"** ಸ್ವಾಮಿಗಳಿಗೆಲ್ಲಾ ಸ್ವಾಮಿಯು ಪ್ರಧಾನ ಪುರುಷರಿಗೂ ಸ್ವಾಮಿಯು ಇತ್ಯಾದಿಗಳಲ್ಲಿ ಪ್ರಸಿದ್ಧವು. ಇಂತಹ ಮೇಲೆ ಹೇಳಿದ ಕಲ್ಯಾಣ ಗುಣಗಳು ನಿನ್ನಲ್ಲಿರುವದೇನೂ, **ನಚಿತ್ರಂ–** ಆಶ್ಚರ್ಯವಲ್ಲವು. ನಾನು ಈಗ ನಿನ್ನನ್ನು ಸ್ತುತಿಸುವ ಮಾತು ಹಾಗಿರಲಿ. ನೀನು ಸಹಜಸುಹೃತ್ತಾಗಿ, ಸಹಜ ಕಾರುಣ್ಯ, ಸೌಲಭ್ಯ, ಆಶ್ರಿತವಾತ್ಸಲ್ಯಗಳಿಂದ ಪ್ರೇರಿತನಾಗಿ ನೀನೇ ಅನುಗ್ರಹಿಸುವಾಗ ಆಶ್ಚರ್ಯವೇನಿರುತ್ತದೆ ಎಂಬ ಭಾವವು. ಈ ಸ್ವಾಮಿಯಲ್ಲಿರುವ ವಾತ್ಸಲ್ಯಾತಿರೇಕವು ಕಠವಲ್ಲಿಯಲ್ಲಿ **"ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿತಿಷ್ಠತಿ। ಈಶಾನೋಭೂತ ಭವ್ಯಸ್ಯ ನತತೋ ವಿಜುಗುಪ್ಸತೇ"** ನಮ್ಮಗಳ ಹೃದಯ ಗುಹೆಯಲ್ಲಿ ನಮ್ಮ ಅನುಗ್ರಹಾರ್ಥವಾಗಿ ಪರಮಾತ್ಮನು ಅದನ್ನೇ **"ವಿಶ್ವಸ್ಯಾಯತನಂಮಹತ್"** ತನಗೆ ಮಹತ್ತಾದ ದೇವಾಲಯವನ್ನಾಗಿ ಮಾಡಿಕೊಂಡು ಇದ್ದುಕೊಂಡು ಸರ್ವಪ್ರಾಣಿಗಳಿಗೂ ಪ್ರೇರಕನಾಗಿ, ಹೇಯ ದೇಹವಲ್ಲಿದ್ದೇನೆಂಬ ಜುಗುಪ್ಸತೆಯಿಲ್ಲವೆ, ತನ್ನ ಕರುವಿನ ಶರೀರದ ಮೇಲೆ ಕೊಳೆ ಇದೆ ಎಂಬುದನ್ನು ಲಕ್ಷಿಸದೆ ಧೇನುವು **ಹೇಗೆ**ನೆಕ್ಕಿ ಅದನ್ನು ರಕ್ಷಿಸುತ್ತದೋ, ಹಾಗೆ ಪರಮಾತ್ಮನು ಆಶ್ರಿತ ವತ್ಸಲನೆಂದು ಹೇಳಲ್ಪಟ್ಟಿರುತ್ತದೆ. ಈ ವಾತ್ಸಲ್ಯವು ಬಹುವಾಗಿ **"ರಿಪೂಣಾಂ ಮಪಿವತ್ಸಲಃ"** (ರಾಮಾಯಣ) **"ಯದಿವಾ ರಾವಣಸ್ಸ್ವಯಮ್"** **"ನಸ್ಮರತ್ಯಪಕಾರಾಣಾಂಶತ ಮಪ್ಯಾತ್ಮ ವತ್ತಯಾ"** ಇತ್ಯಾದಿ ಇತಿಹಾಸ ವಾಕ್ಯಗಳಲ್ಲಿ ಉಪಪಾದಿತವು.

**ಸ್ವಾಭಾವಿಕಾ ನವಧಿಕಾತಿಶಯೇ ಶಿತೃತ್ವಂ।**
**ನಾರಾಯಣ ತ್ವಯಿ ನಮೃಷ್ಯತಿ ವೈದಿಕಃಕಃ।**
**ಬ್ರಹ್ಮಾ ಶಿವ ಶ್ಯತಮುಖಃ ಪರಮ ಸ್ವರಾಡಿ।**
**ತ್ಯೇತೇಪಿ ಯಸ್ಯ ಮಹಿಮಾರ್ಣವ ವಿಪ್ರುಷಸ್ತೇ ॥೧೧॥**

---

ಹೀಗೆ ನಿನ್ನಲ್ಲಿ ಆಶ್ರಿತ ವಾತ್ಸಲ್ಯವಿರುವದರಿಂದ ಪರಮ **ಕುತೂಹಲದಿಂದ** ನಿನ್ನನ್ನು ಸ್ತುತಿಸಲು ಸಂಕಲ್ಪಿಸಿದೆನು. ಇನ್ನೂ ಕಲಿಯುತ್ತಿರುವ ಬಾಲನು ತಂದೆಯ ಎದುರಿಗೆ ನನಗೆ ಇದು ತಿಳಿಯುವದು ಎಂದರೆ ಆತನು ವಿಶೇಷ ಪ್ರೀತಿಯಿಂದ ಪ್ರೇರಿತನಾಗಿ ಹೇಳು ನೋಡೋಣ ಎಂದು ಮುಗ್ಧ **ಭಾಷಿತದಲ್ಲಿ** ಪ್ರೀತಿಯನ್ನು ತೋರಿಸುವಹಾಗೆ ಲೋಕ ಪಿತಾವಾದ ನೀನೂ ನಿನ್ನ **ಪುತ್ರನಾದ** ನನ್ನನ್ನು ಕರೆದು ಎಲ್ಲಿಸ್ತುತಿಸು ನೋಡೋಣವೆಂದು ಪ್ರೋತ್ಸಾಹಿಸಿದ **ಹಾಗೆ** ತೋರುತ್ತದೆ. ಆದುದರಿಂದ ಆತನನ್ನು ಈ ಶ್ಲೋಕದಿಂದಲೇ **ಸ್ತುತಿಸಲು** ಉದ್ಯುಕ್ತರಾಗಿರುತ್ತಾರೆ.

ಈ ಶ್ಲೋಕದಲ್ಲಿ ಪರತತ್ವವು ಯಾವುದೆಂದು ನಿರ್ಣಯಿಸುವವನರಾಗಿ ಶ್ರೀಮನ್ನಾರಾಯಣನೇ ಪರತತ್ವವೆಂದು '**ವೇದೇಷುಪೌರುಷಂ ಸೂಕ್ತಮ್**' ಎಂಬಲ್ಲಿ ವೇದಗಳ ಸಾರಭೂತಾರ್ಥವನ್ನು ತಿಳಿಸುವ ಪುರುಷ ಸೂಕ್ತದಲ್ಲೂ, ಪ್ರಣವದಲ್ಲೂ, ನಾರಾಯಣಾನುವಾಕದಲ್ಲೂ, ಮೋಕ್ಷಧರ್ಮದಲ್ಲೂ, ಶ್ರೀ ಪರಾಶರವ್ಯಾಸಾದಿ ಮುಖ್ಯೋಕ್ತಿಗಳಿಂದಲ್ಲೂ ಶ್ರೀಮನ್ನಾರಾಯಣನೇ ಪರತತ್ವವೆಂದು ಹೇಳಿ, ಆತನುಯಾರೆಂಬುದನ್ನು ನಿರ್ಧರಿಸಲು "ಹ್ರೀಶ್ಚತೇ ಲಕ್ಷ್ಮೀಶ್ಚಪತ್ನ್ಯೌ" ಎಂಬಲ್ಲಿ ಶ್ರಿಯಃ ಪತಿತ್ವವೇ ನಾರಾಯಣನಿಗೆ ಸ್ವರೂಪನಿರೂಪಕ ಧರ್ಮವಾದುದರಿಂದ ನಾರಾಯಣನೇ ಪರತತ್ವವೇ ವಿನಾ ಬ್ರಹ್ಮರುದ್ರೇಂದ್ರಾದಿಗಳು ಯಾರು ಅಲ್ಲವೆಂದು ಪರತತ್ವನಿರ್ಣಯವನ್ನು ಮಾಡುತ್ತಾರೆ.- **ಹೇನಾರಾಯಣ–** ಓಶ್ರಿಯಃ ಪತಿಯಾದ ನಾರಾಯಣನೇ, ತ್ವಯಿ- ನಿನ್ನಲ್ಲಿ, **ಸ್ವಾಭಾವಿಕಾ ನವಧಿಕಾತಿಶಯೇ** ಶಿ**ತೃತ್ವಮ್** ಎಂದರೆ **ಸ್ವಾಭಾವಿಕ–** ತನಗೇನೆ ಸಹಜವಾದ ಇತರರಿಗೆ ಅಧೀನವಲ್ಲದ ಎಂಬ ಭಾವವು; **ಅನವಧಿಕ-** ಅವಧಿಯಿಲ್ಲದ, ಇಷ್ಟೆಂದು ಹೇಳಲು ಸಾಧ್ಯವಲ್ಲದ, **ಅತಿಶಯ–** ಮಹಿಮೆಯುಳ್ಳ **ಈಶಿತೃತ್ವಮ್–** ಸಮಸ್ತಲೋಕಗಳ, ಲೀಲಾವಿಭೂತಿ ನಿತ್ಯವಿಭೂತಿಗಳ ನಿಯಮನ ಶಕ್ತಿಯು ಎಂದರೆ ಅವುಗಳನ್ನೆಲ್ಲಾ ವ್ಯಾಪಿಸಿ, ಅವುಗಳಿಗೆ ಸ್ವಾಮಿಯಾಗಿ ಭರಿಸಿ ನಿಯಮಿಸುವ ಶಕ್ತಿಯನ್ನು, **ಕಃ–** ಯಾವ, **ವೈದಿಕಃ–** ವೇದ ಪ್ರಮಾಣದಲ್ಲಿ ನಂಬಿಕೆ ಇರುವ ಆಸ್ತಿಕನು, **ನಮೃಷ್ಯತಿ–** ಸಹಿಸುವದಿಲ್ಲವು? ಎಂದರೆ ವೇದ ಪ್ರಮಾಣದಲ್ಲಿ ಆಸ್ತಿಕ್ಯಬುದ್ಧಿಯುಳ್ಳವರೆಲ್ಲರು ನಿನಗೆ ಇಂತಹ ಸರ್ವಲೋಕ ಈಶಿತೃತ್ವವುಂಟೆಂದು ನಂಬಿಯೇ ನಂಬುವರು; ಏಕೆಂದರೆ "ವೇದೈಶ್ಚ ಸರ್ವೈರಹಮೇವ ವೇದ್ಯಃ" ಎಂಬಲ್ಲಿ

ಹೇಳಿರುವ ಹಾಗೆ ವೇದಗಳು ಸರ್ವೇಶ್ವರನ ಸ್ವರೂಪ ರೂಪ ಗುಣ ವಿಭವೈಶ್ವರ್ಯಗಳ ಮಾಹಾತ್ಮ್ಯೆಯನ್ನು ಬೋಧಿಸುವುದರಿಂದ, ಆತನ ಈಶಿತೃತ್ವಯನ್ನು ಯಥಾರ್ಥವಾಗಿ ತಿಳಿದವನು, ಅವೈದಿಕನಾದರೋ ತಿಳಿಯಲಾರನು. ಚಾರ್ವಾಕರೂ, ವೇದಬಾಹ್ಯರೂ, ಕುದೃಷ್ಟಿಗಳೂ ನಂಬಲಾರರೇವಿನಾ, ಅಪೌರಷೇಯುವಾದ ವೇದ ಪ್ರಾಮಾಣ್ಯದಲ್ಲಿ ನಂಬಿಕೆಯುಳ್ಳವರೆಲ್ಲರೂ ನಂಬಿಯೇ ನಂಬುವರೆಂಬ **ಭಾವವು.** ಆಗಲಿ ಲೋಕದಲ್ಲಿ ಕೆಲವರು ರುದ್ರಾದಿಗಳೇ ಈಶ್ವರರೆಂದು ನಂಬುವರಲ್ಲಾ; ಅದು ಹೇಗೆ? ಎಂದರೆ ಅದು ವೇದ ಪ್ರಮಾಣ ಸಿದ್ಧವಲ್ಲವೆಂದೂ ಅವರುಗಳೆಲ್ಲಾ ಈತನ ನಿಯಾಮ್ಯ ವರ್ಗಕ್ಕೆ ಸೇರಿದವರಾಗಿ ನಮ್ಮ ಹಾಗೆ ಜೀವರಾಶಿಗೆ ಸೇರಿದವರೆಂದು ಉತ್ತರಾರ್ಧದಿಂದ ಹೇಳುತ್ತಾರೆ. **ಬ್ರಹ್ಮಾ**– ಚತುರ್ಮುಖನೂ, **ಶಿವಃ**– ರುದ್ರನೂ, **ಶತಮುಖಃ**– ನೂರುಯಜ್ಞಗಳನ್ನುಮಾಡಿ ಸ್ವರ್ಗಲೋಕಾಧಿಪತ್ಯವನ್ನು ಹೊಂದಿದ ಇಂದ್ರನೂ, **ಪರಮಃ**– ಈ ಬದ್ಧರಾದ ಚತುರ್ಮುಖ ರುದ್ರೇಂದ್ರರಿಗಿಂತ ಶ್ರೇಷ್ಠರಾದ, ಅವರ ಭೋಗಕ್ಕಿಂತ ಉತ್ಕೃಷ್ಟ ಭೋಗವನ್ನುಳ್ಳ ಈ ಮುಕ್ತರಿಗೆ "**ಭೋಗಮಾತ್ರ ಸಾಮ್ಯಲಿಂಗಾಚ್ಚ**" ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವ ಹಾಗೆ ಪರಮ ಪುರುಷನಾದವನಿಗೆ ಸಮ ಭೋಗವನ್ನು ಹೊಂದಿರುವವರು; ಆದುದರಿಂದ **ಪರಮಸ್ಸ್ವರಾಟ್**. ಆದರೆ ಜಗದ್ವ್ಯಾಪಾರವರ್ಜಂ" ಎಂಬ ಸೂತ್ರದಲ್ಲಿ ಹೇಳಿರುವ ಹಾಗೆ ಜಗತ್ತಿನ ಈಶಿತೃತ್ವ ಮಾತ್ರ ಇವರಿಗಿಲ್ಲವು. **ಸ್ವರಾಟ್**– ಅಕರ್ಮ ವಶ್ಯನಾದ ಮುಕ್ತಜೀವ, **ಇತ್ಯೇತೇಪಿ**– ಹೀಗೆ ಇವರೆಲ್ಲರೂಕೂಡ **ಯಸ್ಯ**– ಯಾವ ಪ್ರಸಿದ್ಧನಾದ, **ತೇ**– ನಿನ್ನ, ಅಪಾರವಾದ ಸ್ವರೂಪ ರೂಪ ಗುಣ ವಿಭವೈಶ್ವರ್ಯ ಯುಕ್ತನಾದ ನಿನ್ನ, **ಮಹಿಮಾರ್ಣವ ವಿಪ್ರುಷಃ**– ಅಗಾಧವಾದ ಮಹಿಮೆ ಎಂಬ ಸಮುದ್ರದ ಜಲಕಣಗಳು; ಲವಾಂಶವೆಂಬ **ಭಾವವು.**

ಇದು ಪರತತ್ತ್ವನಿರ್ಣಯ ಶ್ಲೋಕವಾಗಿರುತ್ತದೆ. ಪರತತ್ವವು ಶ್ರೀಮನ್ನಾರಾಯಣನೆಂದೂ, ಬ್ರಹ್ಮರುದ್ರೇಂದ್ರಾದಿಗಳೆಲ್ಲರೂ ನಮ್ಮ ಹಾಗೆ ಜೀವಕೋಟಿಗೆ ಸೇರಿದವರೆಂದೂ, ಅವರುಗಳು ಮುಕ್ತರುಗಳಿಗೂ ಅಂತಸ್ಥನಲ್ಲಿ ಕೆಳಗೆಂದೂ ಶಾಸ್ತ್ರ ನಿರ್ಣಯವನ್ನು ಮಾಡುವ ಶ್ಲೋಕವು. ಪೂರ್ವಾರ್ಧವನ್ನು ಕೆಲವರು ಎರಡು ವಾಕ್ಯವಾಗಿ ಮಾಡಿರುತ್ತಾರೆ.– ಈಶಿತೃತ್ವಂ ಎಂಬುದನ್ನು ಕರ್ತೃಪದವಾಗಿಯೂ, "ಅಸ್ತಿ" ಎಂದು ಅಧ್ಯಾಹಾರ ಮಾಡಿಕೊಳ್ಳಬೇಕೆಂದೂ, ಮಿಕ್ಕಿದ್ದೆಲ್ಲವೂ ಇನ್ನೊಂದು ವಾಕ್ಯವೆಂದೂ ಅಭಿಪ್ರಾಯಪಡುತ್ತಾರೆ. ಏಕವಾಕ್ಯವಾಗುವಾಗ ಎರಡು ವಾಕ್ಯಗಳಾಗಿ ಭಾವಿಸುವದು ಸರಿಯಲ್ಲವು. **ನವ್ಯೃಷ್ಯತಿ** ಎಂಬುದಕ್ಕೆ ಈಶಿತೃತ್ವಂ ಎಂಬುದನ್ನು ಕರ್ಮವಾಗಿ ಭಾವಿಸಿ ಏಕವಾಕ್ಯವಾಗಿ ಭಾವಿಸಿದರೇನೇ ಸ್ವಾರಸ್ಯವು. **ವೈದಿಕ** ಶಬ್ದದಿಂದ ವೇದ ಪ್ರಾಮಾಣ್ಯವನ್ನು ಒಪ್ಪಿಕೊಂಡು, ವೇದಗಳಿಗೆ ಕುದೃಷ್ಟಿಗಳ ಹಾಗೆ ವಿಪರೀತಾ

ರ್ಥಗಳನ್ನು ಮಾಡದೆ, ಪೂರ್ವಾಪರ ವಿರೋಧವಿಲ್ಲದೆ ಸಮಂಜಸಾರ್ಥವನ್ನು ಮಾಡುವ ಆಸ್ತಿಕ ಬುದ್ಧಿಯುಕ್ತನು ಹೇಳಲ್ಪಟ್ಟನು. ಪರಮಾತ್ಮನನ್ನು ಬೋಧಿಸುವ ಅನೇಕ ನಾಮಗಳ ಅರ್ಥಗಳನ್ನು ಚನ್ನಾಗಿ ಪರಿಶೀಲಿಸಿದರೆ **ನಾರಾಯಣ** ಶಬ್ದದಲ್ಲಿ ತೋರಿ ಬರುವ ಅರ್ಥಗಳು ಇನ್ನು ಯಾವ ನಾಮದಲ್ಲೂ ತೋರಿಬರುವದಿಲ್ಲವು. ಆದ್ದರಿಂದ ತೈತ್ತರೀಯವು, ಶಂಭು, ಶಿವ, ಅಚ್ಯುತ, ಪರಮಾತ್ಮಾ, ಪರಂಜ್ಯೋತಿಸ್ಸು, ಹರಿ, ಇನೆಲ್ಲಾ ನಾಮಗಳೂ .ನಾರಾಯಣನನ್ನೇ ಬೋಧಿಸುತ್ತವೆಂದು ಹೇಳಿ, **"ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿವಾ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ"** ಎಂದು ಮುಗಿಸಿ. ಆ ನಾರಾಯಣನು ಯಾರು ಎಂಬ ನಿಷ್ಕರ್ಷೆಗಾಗಿ, **"ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ"** ಎಂಬುವರಿಂದ ಆತನಿಗೆ ಲಕ್ಷ್ಮಿಯೂ ಭೂದೇವಿಯೂ ಪತ್ನಿಯರು ಎಂದು ಹೇಳಿರುವದರಿಂದ ಶ್ರೀಮನ್ನಾರಾಯಣನೇ ಪರತತ್ವವೆಂಬುದು ಸಾಧಿಸಿತವು. ಆದುದರಿಂದ ಪೂರ್ವಾಚಾರ್ಯರುಗಳೆಲ್ಲರೂ ಪರಮಾತ್ಮ ಸ್ವರೂಪಾದಿಗಳನ್ನು ಹೇಳಲು ಹೊರಟಾಗೆಲ್ಲಾ "ಶ್ರಿಯಃ ಪತಿಯಾಯ್, ಹೇಯಪ್ರತ್ಯನೀಕನಾಯ್" ಎಂದು ಪ್ರಾರಂಭಿಸಿರುತ್ತಾರೆ. ಶ್ರೀ ಭಾಷ್ಯಮಙ್ಗಳ ಶ್ಲೋಕದಲ್ಲಿ ಶ್ರೀಯತಿವರ್ಯರೂ "ಬ್ರಹ್ಮಣಿ ಶ್ರೀನಿವಾಸೇ" ಎಂದು ಪ್ರಯೋಗಿಸಿರುವ ರಿಂದ ಪರಬ್ರಹ್ಮವು ಯಾರೆಂದರೆ ಲಕ್ಷ್ಮಿಗೆ ನಿವಾಸನುಯಾರೋ ಆತನೆಂದು ಅಪ್ಪಣೆ ಕೊಡಿಸಿರುತ್ತಾರೆ. ಆದರೆ ಶ್ರುತಿಗಳಲ್ಲಿ"ಹಿರಣ್ಯಗರ್ಭಸ್ಸಮ ವರ್ತತಾಗ್ರೇ" ಎಂಬಲ್ಲಿ ಚತುರ್ಮುಖನೂ, **"ನಸನ್ನ ಚಾಸಚ್ಛಿವ ಏವ ಕೇವಲಃ"** ಎಂಬಲ್ಲಿ ಶಿವನೂ, **"ಇಂದ್ರೋಮಾಯಾಭಿಃ ಪುರರೂಪ ಈಯತೇ"** ಎಂಬಲ್ಲಿ "ಇಂದ್ರನೂ, **"ಯಂಕಾಮಂ ಕಾಮಯತೇ ಸೋಽಸ್ಯ ಸಂಙ್ಕಲ್ಪಾದೇವ ಸಮುತ್ತಿಷ್ಠತಿ"** ಎಂಬಲ್ಲಿ ಮುಕ್ತನೂ ಜಗತ್ಕಾರಣವಾಗಿ ಹೇಳಿದೆಯಲ್ಲಾ ಎಂದರೆ, ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲದೆ ಐಕಕಠ್ಯವಿಸುವದರಿಂದ, ಎಲ್ಲಾದಕ್ಕೂ ಸಾಮಂಜಸ್ಯವುಳ್ಳ ಅರ್ಥಗಳನ್ನೇ ಹೇಳಬೇಕೆಂದಾಯಿತು. ಹಿರಣ್ಯಗರ್ಭ, ಶಿವ, ಇಂದ್ರ ಶಬ್ದಗಳಿಗೆ ಮುಖ್ಯ ವೃತ್ತಿಯಲ್ಲಿ ಶ್ರೀ ವಿಷ್ಣುವನ್ನೇ ಬೋಧಿಸುವದರಿಂದ ವಿಷ್ಣುಸಹಸ್ರನಾಮದಲ್ಲಿ ಈ ನಾಮಗಳನ್ನು ಕಾಣಬಹುದು. ಆಗ ಅವುಗಳಿಗೆ ಅರ್ಥವೇನೆಂಬುದನ್ನು ದಾಸನು ಬರೆದಿರುವ ವಿಷ್ಣು ಸಹಸ್ರನಾಮದವ್ಯಾಖ್ಯಾನದಲ್ಲಿ ವ್ಯುತ್ಪತ್ತಿ ಮೂಲಕ ಶ್ರೀಮನ್ನಾರಾಯಣನನ್ನೇ ಬೋಧಿಸುತ್ತವೆಂಬುದನ್ನು ಕಾಣಬಹುದು. **ಹಿರಣ್ಯಗರ್ಭಸ್ಸಮವರ್ತತಾಗ್ರೇ** ಎಂಬಲ್ಲಿ ಹಿರಣ್ಯಗರ್ಭನು ನಾರಾಯಣನು; ಹಿರಣ್ಯವೆಂದರೆ ಶುದ್ಧ ಸತ್ವಮಯವಾಗಿ ಸುವರ್ಣಕಾಂತಿಯಿಂದ ಪ್ರಕಾಶಿಸುವ ದಿವ್ಯವೈಕುಂಠವು, ಅದನ್ನೇ ಗರ್ಭವಾಗಿ ವಾಸವಾಗಿವುಳ್ಳವನು; **"ಯಥಾಹಿರಣ್ಯನಿಧಿಂ"** ಎಂದು ಹಿರಣ್ಯನಿಧಿಯ ಸಾಮ್ಯವು ಹೇಳಿರುವದರಿಂದಾಗಲ್ಲಿಹಿರಣ್ಯಗರ್ಭನು ಅಥವಾ ಆದಿತ್ಯವರ್ಣನೆಂದೂ ಹಿರಣ್ಯವರ್ಣನೆಂದೂ

ಹೇಳಲ್ಪಟ್ಟಿರುವದರಿಂದಾಗಲಿ ಹಿರಣ್ಯಗರ್ಭನು. ಇವುಗಳಲ್ಲೆಲ್ಲಾ ಮೊದಲಿನ ಅರ್ಥವೇ ಗ್ರಾಹ್ಯವು.

ಪರತತ್ವವು ಶ್ರುತಿಗಳಲ್ಲಿ ಶಿವ, ಮಹೇಶ್ವರ, ರುದ್ರ ಇತ್ಯಾದಿ ಶಬ್ದಗಳಿಂದ ಬೋಧಿತವು. ಶ್ವೇತಾಶ್ವತರದಲ್ಲಿ "**ಸರ್ವಾನನ ಶಿರೋಗ್ರೀವಃ ಸರ್ವಭೂತ ಗುಹಾ ಶಯಃ। ಸರ್ವವ್ಯಾಪೀಚ ಭಗವಾನ್ ತಸ್ಮಾತ್ಸರ್ವಗತಶ್ಶಿವಃ" ಸರ್ವಗತಶ್ಶಿವಃ**– ಸರ್ವ ಗತನಾಗಿ ಹೇಯವಸ್ತುಗಳಾದ ಚಿದಚಿತ್ತುಗಳಲ್ಲೆಲ್ಲಾ ಇದ್ದರೂ ಕೂಡ, **ಶಿವಃ**– ಮಂಗಳರೂಪನು, ಪರಿಶುದ್ಧನು ಹೇಯಪ್ರತ್ಯನೀಕನು ಎಂಬರ್ಥವು. ತೈನಾರಾ ಯಣದಲ್ಲಿ "**ಯದ್ವೇದಾದೌ ಸ್ವರಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತಃ। ತಸ್ಯ ಪ್ರಕೃತಿಲೀನಸ್ಯಯಃ ಪರಸ್ಸ ಮಹೇಶ್ವರಃ**"– ಇಲ್ಲಿ ಮಹೇಶ್ವರ ಶಬ್ಧವು ರುದ್ರ ವಾಚಕವಾಗಲು ಸಾಧ್ಯವಿಲ್ಲವು ಅಕಾರ ವಾಚ್ಯನಾಗಿಯೂ ಪ್ರಣವವಾಚ್ಯನಾ ಗಿಯೂ ಇರುವ ಹರಿಯೊಂದಿಗೆ ಪ್ರಣವವು ಹೇಳಲ್ಪಡುವದರಿಂದ, ಮಾಹೇಶ್ವರ ಶಬ್ದ ದಿಂದ, ಸರ್ವವ್ಯಾಪಿಯಾಗಿ ಸರ್ವಸ್ವಾಮಿಯಾಗಿ ಸರ್ವನಿಯಾಮಕನಾಗಿರುವ ಶ್ರೀ ಮಹಾ ವಿಷ್ಣುವೇ ಬೋಧಿಸಲ್ಪಟ್ಟನು. ಶ್ರುತಿಗಳಲ್ಲಿ ರುದ್ರ ಶಬ್ದವು ಭಗವಂತನನ್ನು ಬೋಧಿ ಸುತ್ತದೆ. ಏಕೆಂದರೆ ಪ್ರಳಯಕಾಲದಲ್ಲಿ ಎಲ್ಲವೂ ಅಳುವ ಹಾಗೆ ಮಾಡುತ್ತಾನಾದು ದರಿಂದ ಆತನು ರುದ್ರನು. ಜನಾರ್ದನ ಶಬ್ಧಕ್ಕೂ ಇದೇ ಅರ್ಥವು. ವಿಷ್ಣು ಸಹ ಸ್ರನಾಮದಲ್ಲೂ ರುದ್ರ ಶಬ್ಧವು ೧೧೫ನೆಯ ನಾಮವು ಅಲ್ಲಿ ಭಕ್ತರುಗಳ ಮನ ಸ್ಸನ್ನು ತನ್ನ ದಿವ್ಯರೂಪ ಚೇಷ್ಟಿತಗಳಿಂದ ಅಪಹರಿಸಿ ಆನಂದ ಭಾಷ್ಪವನ್ನು ಸುರಿಸುವ ಹಾಗೆ ಮಾಡುವನಾದುದರಿಂದ ರುದ್ರನು. ಹಾಗೆ ಇಂದ್ರಶಬ್ಧವು **ಇದಿ ಮಹದೈಶ್ವರ್ಯೇ** ಎಂಬ ಧಾತುವನ್ನನುಸರಿಸಿ, ಮಹತ್ತಾದ ಪರಮೈಶ್ವರ್ಯ ಯುಕ್ತನೆಂಬರ್ಥ ವನ್ನು ಕೊಡುತ್ತದೆ. ಮಹೇಂದ್ರನೆಂದು ವಿಷ್ಣು ಸಹಸ್ರನಾಮದಲ್ಲಿದೆ. ಮೇಲೆ ಉದಾ ಹರಿಸಿದ "ಇನ್ದ್ರೋಮಾಯಾಭಿಃ ಪುರುರೂಪ ಈಯತೇ" (ಬೃಹ ೪. ೫೧೯) ಮಹ ತ್ತಾದ ಐಶ್ವರ್ಯವುಳ್ಳ ಭಗವಂತನು **ಮಾಯಾಭಿಃ**– ಮಾಯಾ **ವಯುನಂಜ್ಞಾನಂ** ಎಂಬನಿಘಂಟು ಪ್ರಕಾರ ಸಙ್ಕಲ್ಪ ರೂಪಜ್ಞಾನಗಳಿಂದ, **ಉರುರೂಪ**– ಬಹು ಶರೀರ ವನ್ನು, **ಈಯತೇ**– ಹೊಂದುವನು. ಸ್ವೇಚ್ಛೆಯಿಂದ "ಬಹೂನಿ ಮೇವ್ಯತೀತಾನಿ" ಬಹುರೂಪಗಳು ಕಳೆದವೆಂಬರ್ಥವು.

**ವೈದಿಕಃ**– ವೇದಗಳನ್ನು ತಿಳಿದವನು ಎಂಬುದರಿಂದ, "**ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯ ವಿಸ್ತರಃ। ಪುರಾಣಂ ಧರ್ಮಶಾಸ್ತ್ರಂಚ ವಿದ್ಯಾಹ್ಯೇತಾ ಶ್ಚತುರ್ದಶ ॥**" ಹೀಗೆ ಇವುಗಳು ಪರಿಗ್ರಾಹ್ಯವು. ಆದರೆ ಪುರಾಣಗಳಲ್ಲಿ ಸಾತ್ವಿಕರಿಗಾಗಿ ಹೇಳಿರುವ ೬ ಪುರಾಣಗಳು ಮಾತ್ರವೇ ಗ್ರಾಹ್ಯವು. ವೇದಗಳಲ್ಲಿ ವೇದೋಪ ಬ್ರಹ್ಮಣಗಳೂ ಸೇರಿದುದರಿಂದ ಪರಾಶರ,ವ್ಯಾಸ, ಶುಕ, ಮನುವಾಲ್ಮೀಕಿ ಮಹರ್ಷಿಗಳ ವಾಕ್ಯಗಳಿಂದ ಶ್ರೀಮನ್ನಾ

ರಾಯಣನೇ ಪರತತ್ತ್ವವೆಂಬುದು ಏರ್ಪಡುತ್ತದೆ. **"ಪಿತೃದೇವ ಮನುಷ್ಯಾಣಾಂ ವೇದಶ್ಚಕ್ಷುಸ್ಸನಾತನಮ್। ಶ್ರುತಿಸ್ಮೃತೀತು ವಿಪ್ರಾಣಾಂ ಚಕ್ಷುಷೀದ್ವೇವಿನಿರ್ಮಿತೇ"** ಎಂಬಲ್ಲಿ ವೈದಿಕನಿಗೆ ಶ್ರುತಿ ಸ್ಮೃತಿಗಳೆರಡೂ ಎರಡು ಕಣ್ಣುಗಳೆಂದು ಹೇಳಲ್ಪಟ್ಟಿದೆ. ಅವುಗಳಜ್ಞಾನವಿಲ್ಲದವನು ಕಣ್ಣುಗಳಿಲ್ಲದ ಕುರುಡನ ಹಾಗೆ ಎಂಬ ಭಾವವು. **"ಸರ್ವೇವೇದಾಸ್ಸಪಿತರೋ ಬ್ರಹ್ಮಾದ್ಯಾಶ್ಚಾಂಡ ಮಧ್ಯಗಾಃ। ವಿಷ್ಣೋಸ್ಸಕಾಶಾದುತ್ಪನ್ನಾ ಇತೀಯಂ ವೈದಕೀಶ್ರುತಿಃ"**; ಎಂಬ ವಾರಾಹ ಪುರಾಣವಚನವು ಭಗವಂತನಿಂದ ಉಂಟಾದುವೆಂದೂ ಅದು ನಮ್ಮಗಳ ಶ್ರೇಯಸ್ಸಿಗಾಗಿ ಉಂಟಾದ ಭಗವದುಕ್ತಿಯೆಂದು ಹೇಳಿರುವದರಿಂದ ವೇದಕ್ಕೆ ನಿತ್ಯತ್ವವೂ ಅಪೌರುಷೇಯತ್ವವೂ ಸ್ಥಾಪಿತವು. ಕೂರ್ಮ ಪುರಾಣವಚನವಾದ **"ವೇದವೇದ್ಯೋಹಿ ಭಗವಾನ್ ವಾಸುದೇವಸ್ಸನಾತನಃ। ಗೀಯತೇ ಸಪರೋವೇದೈರ್ಯೋವೇದೈನಂ ಸವೇದವಿತ್"** ಎಂಬುದು ವೈದಿಕನಾದ ವೇದವಿತ್ತು ವೇದಗಳಿಂದ ಪರಮ ಪುರುಷನನ್ನು ತಿಳಿದವನು; ಆತನನ್ನು **ಕಃ ವೈದಿಕಃನಮ್ಮೃಷ್ಯತಿ** ಎಂದು ಹೇಳಲ್ಪಟ್ಟಿತು. ಶ್ರೀಪರಾಶರರು **"ವಿಷ್ಣೋಸ್ಸ ಕಾಶಾದುದ್ಭೂತಂ"** ವೆಂದು ಜಗತ್ಕಾರಣನು ವಿಷ್ಣುವೆಂದು ಹೇಳಿರುತ್ತಾರೆ. ವ್ಯಾಸೋಕ್ತಿಯಲ್ಲಿ ಕೆಲವನ್ನು ಇಲ್ಲಿ ಉದಾಹರಿಸುವೆವು.– **"ಸಬ್ರಹ್ಮಕಾ ಸ್ಸರುದ್ರಾಶ್ಚ ಸೇನ್ದ್ರಾ ದೇವಾ ಸ್ಸಮಹರ್ಷಯಃ। ಅರ್ಚಯನ್ತಿ ಸುರಶ್ರೇಷ್ಠಂ ದೇವಂ ನಾರಾಯಣಂ ಹರಿಮ್।"** ಇಲ್ಲಿ ಸುರಶ್ರೇಷ್ಠ ಎಂಬುದು ಪಂಚಮೀ ತತ್ಪುರುಷವು ಷಷ್ಠಿಯಲ್ಲವು. **"ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾಸ್ಮೃತಾಃ। ಪ್ರತಿಬುದ್ಧಾನಸೇ ವಂತೆಯುಸ್ಮಾತ್ಪರಿ ಮಿತಂಫಲಮ್" "ಅಭೂತಸಂಪ್ಲವೇ ಪ್ರಾಪ್ತೇಪ್ರಲೀನೇ ಪ್ರಕೃತೌ ಮಹಾನ್। ಏಕಸ್ತಿಷ್ಠತಿ ಧರ್ಮಾತ್ಮಾ ಸತು ನಾರಾಯಣಃ ಪ್ರಭುಃ" "ಆಲೋಡ್ಯಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ। ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ" "ವೇದಶಾಸ್ತ್ರಾತ್ ಪರಂ ನಾಸ್ತಿನದೈವಂ ಕೇಶವಾತ್ಪರಮ್"** ಇತ್ಯಾದಿ ಸಹಸ್ರ ಪ್ರಮಾಣಗಳು ನಾರಾಯಣನೇ ಪರತತ್ತ್ವವೆಂದು ಉದ್ಘೋಷಿಸುವುವು. ಹಾಗೆಯೇ "ಪ್ರಶಾಸಿತಾರಂ ಸರ್ವೇಷಾಂ" ಎಂದೂ "ಶಾಸ್ತಾ ವಿಷ್ಣುರಶೇಷಸ್ಯ" ಇತ್ಯಾದಿ ಸ್ಮೃತಿವಚನಗಳೂ, **"ಮತ್ತಃ ಪರತರಂ ನಾನ್ಯದ್ಕಿಂಚಿದಸ್ತಿಧನಂಜಯ"** ಎಂಬ ಗೀತೆಯಲ್ಲಿ ಸ್ವವಾಕ್ಯವೂ ಇವೆ. ಬೃಹಸ್ಪತಿಯು, **"ನಾರಾಯಣಃ ಪರೋಽವ್ಯಕ್ತಾದಂಡ ಮವ್ಯಕ್ತ ಸಂಭವಮ್। ಅಂಡಾದ್ಬ್ರಹ್ಮಾ ಸಮಭವತ್ತೇನ ಸೃಷ್ಟಮಿದಂಜಗತ್"** ಎಂದೂ, ಹೇಳಿರುತ್ತಾರೆ. ದಕ್ಷಸ್ಮೃತಿಯಲ್ಲಿ **"ಧ್ಯಾಯೇನ್ನಾರಾಯಣಂ ದೇವಂಸ್ನಾನಾದಿಷು ಚಕರ್ಮಸು। ಬ್ರಹ್ಮಲೋಕ**

**ಮವಾಪ್ನೋತಿನ ಚೇಹಾ ಜಾಯತೇ ಪುನಃ**'' ಎಂದು ಹೇಳಲ್ಪಟ್ಟಿರುತ್ತದೆ. ವಾಲ್ಮೀಕಿಮಹರ್ಷಿಯು "**ಅಧಿಕಂಮೇನಿರೆ ವಿಷ್ಣುಮ್**" ಎಂದೂ ,"**ಬ್ರಹ್ಮಾ ಸ್ವಯಂಭೂ ಶ್ಚತುರಾನನೋವಾ ರುದ್ರಸ್ತ್ರಿನೇತ್ರಃ ತ್ರಿಪುರಾಂತಕೋವಾ ಇಂದ್ರೋಮಹೇಂದ್ರ ಸ್ಸುರನಾಯಕೋವಾ ತ್ರಾತುಂನಶಕ್ತಾ ಯುಧಿರಾಮ ವಧ್ಯಂ**' ಎಂಬಲ್ಲೂ, ಬ್ರಹ್ಮರುದ್ರೇಂದ್ರಾದಿಗಳು ಅಶಕ್ತರೆಂದೂ, ಪರತತ್ವವಾಗಿ ವಿಷ್ಣುವಿನ ಅವತಾರಿಯಾದ ರಾಮನೇ ಸರ್ವಶಕ್ತನೆಂದು ಹೇಳಲ್ಪಟ್ಟಿರುತ್ತದೆ. ಹೀಗಿದ್ದರೂ "**ಅತ್ರ ಪೂರ್ವಂ ಮಹಾದೇವಃ ಪ್ರಸಾದ ಮಕರೋತ್ಪ್ರಭುಃ**'' ಶ್ರೀರಾಮನು ತನಗೂ ಸ್ವಾಮಿಯಾದ ಶಿವನ ಲಿಂಗವನ್ನು ಅರ್ಚಿಸಿ ಪ್ರಸನ್ನತೆಯನ್ನು ಹೊಂದಿದನೆಂಬ ವ್ಯಾಖ್ಯಾನವು ಅತ್ಯಂತ ಪರಿಹಸನೀಯವಾಗಿದೆ. ದೇವ ಶಬ್ದವನ್ನು ಪರಮಾತ್ಮನಿಗೆ ಪ್ರಯೋಗಿಸುತ್ತಾರೆ. **ಮಹಾದೇವ** ನೆಂದರೆ ಮಾತ್ರ ಶಿವನುಎಂದು ಹೇಳುವದು ಹಾಸ್ಯಾಸ್ಪದವೆಂಬುವದರಲ್ಲಿ ಸಂದೇಹವಿಲ್ಲವು. ಹಾಗೆಯೇ ಪರಮೇಶ್ವರ ಶಬ್ದಕ್ಕೂ ಮುಖ್ಯ ವೃತ್ತಿಯಲ್ಲಿ ನಾರಾಯಣನಲ್ಲೇ ಯಾದುದರಿಂದ ಪರಮೇಶ್ವರ ಶಬ್ದದಿಂದ ಹೇಗೆ ನಾರಾಯಣನೇ ಹೇಳಲ್ಪಡುವನೋ, ಹಾಗೆಯೇ ಮಹಾದೇವ ಶಬ್ದವು. "**ಆದಿದೇವೋ ಮಹಾದೇವೋ ದೇವೇಶೋ ದೇವಭೃದ್ಗುರುಃ**'' ಎಂದು ಶ್ರೀ ವಿಷ್ಣುಸಹಸ್ರ ನಾಮದಲ್ಲಿ ೪೯೨ನೆಯ ನಾಮವು. ರಾವಣ ಸಂಹಾರಕ್ಕಾಗಿ ಸಙ್ಕಲ್ಪ ಮಾಡಿಕೊಂಡು ತಮಗೆ ಕುಲದೈವವಾದ ರಂಗನಾಥನನ್ನು ಆರಾಧಿಸಿದ ದರ್ಭಶಯನವಿದು ಎಂದು ಸೀತೆಗೆ ತೋರಿಸಿದರೆಂಬರ್ಥವು ಸರ್ವ ಸಮಂಜಸವು.

ಆಗಲಿ ಶ್ರೀಮನ್ನಾರಾಯಣನೇನೋ ಪರತತ್ವವೆಂದು ಒಪ್ಪೋಣ. ಆದರೆ ಶ್ರುತಿಯಲ್ಲಿ "**ಸಬ್ರಹ್ಮಾಸಶಿವಃ ಸೇನ್ದ್ರಃ ಸೋಕ್ಷರಃ ಪರಮಸ್ಸ್ವರಾಟ್**" ಆ ಪರ ಬ್ರಹ್ಮನೇ ಚತುರ್ಮುಖನು, ರುದ್ರನು, ಇಂದ್ರನು, ಪ್ರಕೃತಿ ವಿಯುಕ್ತ ಜೀವಾತ್ಮನು, ಮುಕ್ತನು. ಹೀಗೆಲ್ಲಾ ಶ್ರುತಿಯಲ್ಲಿ ಹೇಳಿರುವದು ಹೇಗೆ? ಎಂದರೆ ಅದ್ವೈತಿಗಳು ಹೇಳುವ ಹಾಗೆ ಐಕ್ಯವೆಂಬ ಭಾವನೆಯಿಂದಲ್ಲವು. ಶರೀರಾತ್ಮ ಭಾವದಿಂದ ಪರಮಾತ್ಮನೇ ಇವರಿಗೆಲ್ಲಾ ಆತ್ಮಾವಾಗಿ, ಈ ಬ್ರಹ್ಮ ರುದ್ರೇಂದ್ರಾದಿಗಳು ಶರೀರವಾದುದರಿಂದ ಅವನು ಮನುಷ್ಯನು ಎಂಬಲ್ಲಿ ಹೇಳಿರುವ ಹಾಗೆ ಆತ್ಮವನ್ನು ಸಾಮಾನಾಧಿಕರಣ್ಯದಿಂದ ಶರೀರವಾಚಕ ಶಬ್ದಗಳಿಂದ ಹೇಳಬಹುದು. ಹಾಗೆಯೇ ನಮ್ಮಾಳ್ವಾರ್ರವರಾರೂ "**ಮುನಿಯೇ ನಾನ್ಮುಗನೇ ಮುಕ್ಕಣ್ಣಪ್ಪಾ**" ಎಂಬ ಸಾಮಾನಾಧಿಕರಣ್ಯ ಪ್ರಯೋಗವನ್ನು ಮಾಡಿರುತ್ತಾರೆಂದು ಭಾವಿಸತಕ್ಕದ್ದು. ಚತುರ್ಮುಖ, ರುದ್ರ ಇಂದ್ರ ಮೊದಲಾದ ಎಲ್ಲಾ ಪ್ರಾಣಿಗಳೂ ಶರೀರವಾಗಿ ಅವರಿಗೆಲ್ಲಾ ನಾರಾಯಣನೇ ಆತ್ಮವಾದುದರಿಂದ ಎಲ್ಲಾ ಶರೀರವಾಚಿಕ ಶಬ್ದಗಳಿಂದ ಅತನೇ

ಹೇಳಲ್ಪಡುವನೆಂಬ ಭಾವವು.

ನಾರಾಯಣನೇನೋ ಪರತತ್ವವೆಂದು ನಾರಾಯಣ ಎಂಬ ಸಂಬೋಧನೆ ಯಾದರೆ, ಲಕ್ಷ್ಮೀಯುಕ್ತನಾದ ನಾರಾಯಣನು, ಪರತತ್ವವಲ್ಲವೇ? ಆದುದರಿಂದ, ಪ್ರಾಜ್ಞರೆಲ್ಲಾ **"ಶ್ರೀಮಾನ್ನಾರಾಯಣೋನಃ ಪತಿಃ"** ಎಂಬಲ್ಲಿ ಹೇಳಿರುವ ಹಾಗೆ ತಾವೇ ಪರತತ್ವ ನಿರ್ಣಯಮಾಡಿರುವಾಗ **ಶ್ರೀಮನ್ನಾರಾಯಣ** ಎಂದು ಹೇಳದೆ ಬರೀ ನಾರಾಯಣನೆಂದು ಹೇಳಬಹುದೋ? ಎಂದರೆ, ಇದಕ್ಕೆ ಎರಡು ವಿಧವಾಗಿ ಸಮಾಧಾನವನ್ನು ಹೇಳಬಹುದು.– (೧) ಲಕ್ಷ್ಮಿಯು ನಾರಾಯಣನಿಗೆ ಅಪೃಥಕ್ಸಿದ್ಧ ವಿಶೇಷಣವಾದುದರಿಂದ ಪೃಥಕ್ಕಾಗಿ ಹೇಳುವ ಆವಶ್ಯಕವಿಲ್ಲವು. ಪುಷ್ಪವು ಬಂತು ಎಂದರೆ ಹೇಗೆ ಪರಿಮಳದೊಂದಿಗೆ ಬಂತು ಎಂದು ಹೇಳುವ ಆವಶ್ಯಕವಿಲ್ಲವೋ, ಸೂರ್ಯನು ಉದಯಿಸಿದನೆಂದರೆ ಸೂರ್ಯಕಿರಣವೂ ಉದಿಸಿತು ಎಂದು ಹೇಳುವ ಆವಶ್ಯಕ ವಿಲ್ಲವೋ, ಹಾಗೆಯೇ ನಾರಾಯಣನೆಂದು ಹೇಳುವಾಗ ಲಕ್ಷ್ಮಿಯೊಂದಿಗಿರುವ ನಾರಾಯಣನೆಂದು ಹೇಳುವ ಆವಶ್ಯಕವಿಲ್ಲವು. (೨)ನೆಯ ಸಮಾಧಾನವೇನೆಂದರೆ, **ನಾರಾಯಣ** ಶಬ್ದದ **ನಾರ** ಪದವು ನಾಶವಿಲ್ಲದೆ ನಿತ್ಯಗಳಾದ ಪರಮಾತ್ಮನ ವಿಶೇಷಣ ಗಳಾದ, ಲಕ್ಷ್ಮಿ, ಕಲ್ಯಾಣ ಗುಣಗಳು, ದಿವ್ಯಾಯುಧ ದಿವ್ಯಾಭರಣ, ಚೇತನಾ ಚೇತನಗಳಾದ ಉಭಯ ವಿಭೂತಿ, ಇವುಗಳೆಲ್ಲಾ ಅಂತರ್ಗತವಾದುದರಿಂದ ಬರೀ ನಾರಾಯಣ ಶಬ್ದದಲ್ಲೇ ಲಕ್ಷ್ಮಿಯೂ ಅಂತರ್ಗತಳು. ಆದುದರಿಂದ ಪೃಥಕ್ಕಾಗಿ ಹೇಳಲಿಲ್ಲವೆಂದು ಭಾವಿಸತಕ್ಕದ್ದು.

ಈ ಈಶ್ವರತ್ವವು **ನಾರಾಯಣನೊಬ್ಬನಿಗೆ** ಮಾತ್ರವೇ **ಸ್ವಾಭಾವಿಕವಾಗಿ** ಸಹಜವಾದುದು; ಇತರರಾದ ಬ್ರಹ್ಮರುದ್ರೇಂದ್ರಾದಿಗಳಿಗೆ ಇದರಿಂದ ಸ್ವಾಭಾವಿಕ ವಾದುದಲ್ಲವೆಂಬುದು ವ್ಯಕ್ತವು. ಸ್ವಾಮಿಯ ಈಶಿತೃತ್ವವು, **ಅನವಧಿಕಾತಿಶಯ ವಾದುದು**. ಬ್ರಹ್ಮರುದ್ರೇಂದ್ರಾದಿಗಳ ಈಶಿತೃತ್ವವು ಪರಿಮಿತಿಯುಳ್ಳದು, ಅಶಾಶ್ವತ ವಾದುದು ಎಂಬುದು ಇದರಿಂದ ವ್ಯಕ್ತವು. ಕರ್ಮೋಪಾಧಿಯಿಂದ ಉಂಟಾಗಿ ಅನಿತ್ಯ ವಾದುವು ಅವರುಗಳ ಈಶಿತೃತ್ವವೆಂದು ಹೇಳಿದಂತಾಯಿತು. **"ಆ ಬ್ರಹ್ಮಭುವನಾ ಲ್ಲೋಕಾಃ ಪುನರಾವರ್ತಿನೋಽರ್ಜುನ"**ವೆಂದು ಗೀತೆಯಲ್ಲಿ ಹೇಳಲ್ಪಟ್ಟಿರುತ್ತದೆ. ಪರಮಾತ್ಮನ ಈಶಿತೃತ್ವವು ಸರ್ವೋತ್ಕೃಷ್ಟವೆಂದು **"ಪರಾಸ್ಯಶಕ್ತಿ ರ್ವಿವಿಧೈವ ಶ್ರೂಯತೇ। ಸ್ವಾಭಾವಿಕೀಜ್ಞಾನ ಬಲಕ್ರಿಯಾಚ"** (ಶ್ವೇ. ೬. ೮) ಎಂದು ಶ್ರುತಿ ಯಲ್ಲಿ ಹೇಳಿರುತ್ತದೆ. ಗೀತೆಯಲ್ಲಿ ಭಗವಂತನ ಈಶಿತೃತ್ವವನ್ನು ವಿವರಿಸಿ ಹೇಳು ವದು ಸಾಧ್ಯವಿಲ್ಲವೆಂದು ಹೇಳಿರುತ್ತದೆ ಏಕೆಂದರೆ ಅದಕ್ಕೆ ಅಂತವೇ ಇಲ್ಲವೆಂದು ಹೇಳಿರುತ್ತದೆ.– **"ಹನ್ತತೇ ಕಥಯಿಷ್ಯಾಮಿ ವಿಭೂತೀ ರಾತ್ಮನಶ್ಶುಭಾಃ। ಪ್ರಾಧಾ ನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯಮೇ"** (ಗೀ. ೧೦. ೧೯) ಎಂಬಲ್ಲಿ.

ಇಲ್ಲಿ ನಾರಾಯಣ ಶಬ್ದ ಸಂಬೋಧನೆಯಿಂದ ಇನ್ನೊಂದು ವಿಶೇಷಾರ್ಥ ವನ್ನು ಶ್ರೀಯಾಮುನ ಮುನಿಗಳು ನಮ್ಮ ಅವಗಾಹನೆಗೆ ತರುತ್ತಾರೆ. ಏನೆಂದರೆ ಬ್ರಹ್ಮಸೂತ್ರಗಳ ನಾಲ್ಕು ಅಧ್ಯಾಯಗಳಿಂದಲೂ ಕ್ರಮವಾಗಿ ಹೇಳಲ್ಪಟ್ಟ ಜಗ ತ್ಕಾರಣತ್ವ, ಇನ್ನು ಯಾವುದೂ ಜಗತ್ಕಾರಣವಲ್ಲವೆಂಬ ನಿರ್ಬಾಧತ್ವ, ಉಪಾಯತ್ವ, ಉಪೇಯತ್ವ, ಇವೆಲ್ಲಾ ಅಭಿಪ್ರಾಯಗಳೂ ಶಾಬ್ದವಾಗಿಯೂ ಆರ್ಥವಾಗಿಯೂ ಈ ನಾರಾಯಣ ಶಬ್ದದಲ್ಲೇ ಅಡಗಿವೆ ಎಂದು ನಿರುಕ್ತಿಮೂಲಕ ವ್ಯಕ್ತವೆಂಬು ದನ್ನು ತೋರಿಸುವದಕ್ಕಾಗಿ ಎಂದು ಭಾವಿಸತಕ್ಕದ್ದು.

ಹೀಗೆ ನಾರಾಯಣ ಶಬ್ದಾಭಿಪ್ರಾಯವನ್ನು ಶ್ರೀ ಮನುವು ಅವರ ಅಮೋಘ ಗಳಾದ ಏಳು ಶ್ಲೋಕಗಳಲ್ಲಿ **"ಆಸೀದಿದಂ"** ಎಂದಾರಂಭಿಸಿ ನಾರಾಯಣನೇ ಜಗ ತ್ಕಾರಣನೆಂದು ಹೇಳಿ, **"ಆಪೋನಾರಾ ಇತಿಪ್ರೋಕ್ತಾ ಆಪೋವೈ ನರಸೂನವಃ। ತಾಯದಸ್ಯಾಯನಂ ಪೂರ್ವಂತೇನ ನಾರಾಯಣ ಸ್ಮೃತಃ"** ಎಂದು ನಿರ್ವಚನ ಮಾಡಿದ್ದಾರೆ. ನಾರವೆಂದು ಹೇಳಲ್ಪಟ್ಟವುಗಳಿಗೆ ಅಯನವೆಂದು ಹೇಳಿರುವುದು ರಿಂದ ಮೂರು ಅರ್ಥಗಳು ಏರ್ಪಟ್ಟವು ಸರ್ವಕಾರಕತ್ವ, ಜಗದನ್ತರ್ಯಾಮಿತ್ವ, ಜಗ ತ್ಕಾರಣತ್ವಗಳು. ಆದುದರಿಂದಲೇ ಯುಧಿಷ್ಠಿರರು ಶ್ರೀ ಭೀಷ್ಮರನ್ನು ಕುರಿತು **"ಕುತಸ್ಸೃಷ್ಟ ಮಿದಂ ಸರ್ವಂ ಜಗತ್‌ಸ್ಥಾವರ ಜಙ್ಗಮಮ್। ಪ್ರಳಯೇ ಚ ಕ ಮಭ್ಯೇತಿ ತನ್ಮೇಬ್ರೂಹಿ ಪಿತಾಮಹ"** (ಭಾರತ. ಶಾನ್ತಿ) ಈ ಜಗತ್ತು ಯಾರಿಂದ ಸೃಷ್ಟಿಸಲ್ಪಟ್ಟು ಯಾರಲ್ಲಿ ಲಯ ಹೊಂದುತ್ತದೆಂದು ಪ್ರಶ್ನಿಸುತ್ತಾರೆ. ಇದಕ್ಕೆ ಉತ್ತ ರವು.– **"ನಾರಾಯಣೋ ಜಗನ್ಮೂರ್ತಿ ರಂತರಾತ್ಮಾ ಸನಾತನಃ"** ಎಂದಾರಂಭಿಸಿ ನಾರಾಯಣನೇ ಜಗತ್ಕಾರಣನು, ಪರಮಾತ್ಮನಾಗಿ ಸರ್ವಕ್ಕೂ ಅಂತರಾತ್ಮವೆಂದು ಮುಂದೆ ಹೇಳುತ್ತಾರೆ.

ಹೀಗೆ ಮನುವಿನಿಂದ ಸ್ಥಾಪಿಸಲ್ಪಟ್ಟ ಪರದೇವತಾ ಪಾರಮಾರ್ಥ್ಯವನ್ನೇ ಇತರ ಪ್ರಮಾಣಗಳು ಐಕ್ಯಕಂಠ್ಯದಿಂದ ಹೇಳುತ್ತವೆಂದು ಉಪದೇಶಿಸಲ್ಪಟ್ಟಿರುತ್ತದೆ.– **"ವೇದೇ ರಾಮಾಯಣೇಚೈವ ಭಾರತೇ ಭರತರ್ಷಭ। ಆದೌ ಮಧ್ಯೇತಥೇ ಚಾಂತೌ ವಿಷ್ಣು ಸ್ಸರ್ವತ್ರ ಗೀಯತೇ"** ಆದುದರಿಂದ **"ನಾರಾಯಣ ಪರಾ ವೇದಾಃ"** ಎಂಬುದು ನಾರಾಯಣಾನು ವಾಕತ್ರೈತ್ತರೀಯಾದಿಗಳಿಂದ ಸಿದ್ಧವು.

**ನವೃಷ್ಯತಿ ವೈದಿಕಃ ಕಃ** ಎಂದು ಹೇಳಿರುವದರಿಂದ ಅಪೌರಷೇಯವಾದ ವೇದ ಪ್ರಾಮಾಣ್ಯದಲ್ಲಿ ಆಸ್ತಿಕ ಬುದ್ಧಿಯುಕ್ತನು ನಾರಾಯಣನಿಗೆ ಈಶಿತೃತ್ವ ವನ್ನು ಸಹಿಸದೇ ಇರುವವನು ಯಾರು? ಎಂದು ಹೇಳಿರುವದರಿಂದ ಅವೈದಿಕನು ನಾರಾಯಣನಿಗೆ ಈಶಿತೃತ್ವವನ್ನು ಒಪ್ಪುವದಿಲ್ಲವೆಂದು ಹೇಳಿದಂತಾಯಿತು. ಇದ ರಿಂದ ಈ ಈಶಿತೃತ್ವವನ್ನು ವಹಿಸಿರುವ ಸಗುಣ ಬ್ರಹ್ಮನಿಗೂ ಶ್ರೇಷ್ಠನಾಗಿ ಪರಬ್ರಹ್ಮ ನೊಬ್ಬನುಂಟೆಂಬವಾದವು ನಿರಸ್ತವು. ಹಾಗೆಯೇ ಚಾರ್ವಾಕ ಬೌದ್ಧಾದಿ ಅಭಿಪ್ರಾಯ

ಗಳೂ ನಿರಸ್ತವು. ಇವೆಲ್ಲಾ ಬ್ರಹ್ಮಸೂತ್ರದ ಎರಡನೆಯ ಅಧ್ಯಾಯದಲ್ಲಿ ಉಪಪಾದಿತವು. ಇವುಗಳನೆಲ್ಲಾ ಶ್ರೀನಿಗಮಾಂತ ದೇಶಿಕರವರು "**ಗಾಥಾ ತಾತಾಗತಾನಾಂ**" ಎಂಬ ಯತಿರಾಜ ಸಪ್ತತಿಯ ಶ್ಲೋಕದಲ್ಲಿ ನಿರಾಕರಿಸಿರುತ್ತಾರೆ.

ಹೀಗೆ ಶ್ರೀಮನ್ನಾರಾಯಣನಿಗೆ ಈಶಿತೃತ್ವವನ್ನು ಸಹಿಸಿದೇ ಇರುವವರು ಪಾಪಿಷ್ಠರೆಂದು ನಿಂದಿಸಲ್ಪಟ್ಟಿರುತ್ತಾರೆ.– "**ನಾರಾಯಣಂ ಪರಿತ್ಯಜ್ಯ ಹೃದಿಸ್ಥಂ ಪ್ರಭು ಮೀಶ್ವರಮ್। ಯೋಽನ್ಯಮರ್ಚಯತಿ ದೇವಂ ಪರಬುದ್ಧ್ಯಾ ಸ ಪಾಪ ಭಾಕ್**" ಎಂದು ಪ್ರಾಜಾಪತ್ಯಸ್ಮೃತಿಯಲ್ಲಿರುತ್ತದೆ. ನಮ್ಮ ಹೃದಯ ಗುಹೆಯಲ್ಲೇ ಇದ್ದುಕೊಂಡು ನಮಗೆ ಹಿತಚಿಂತಕನಾಗಿ ಪ್ರೇರಿಸುವ ನಾರಾಯಣನನ್ನು ತ್ಯಜಿಸಿ, ಯಾವನು ಅನ್ಯದೇವತೆಯನ್ನು ಪೂಜಿಸುವನೋ ಆತನು ಪಾಪಿಯು" ಎಂಬುದು ಅರ್ಥವು. ಹಾಗೆಯೇ "**ಯೇದ್ವಿಷಂತಿ ಮಹಾತ್ಮಾನಂ ನಸ್ಮರಂತಿ ಚ ಕೇಶವಮ್। ನ ತೇಷಾಂ ಪುಣ್ಯತೀರ್ಥೇಷು ಗತಿಃ**" ಎಂದು ಭಾರತ ವಾಕ್ಯವಿರುತ್ತದೆ. ಅರ್ಥವು ಸ್ಪಷ್ಟವು. ಪುನಃ ಭಾರತದಲ್ಲಿ ಸಪ್ತರ್ಷಿಸಂವಾದದಲ್ಲಿ "**ವಿಷ್ಣುಂ ಬ್ರಹ್ಮಣ್ಯದೇವೇತಂ ದೇವದೇವಂ ಜನಾರ್ದನಂ। ವಿಹಾಯಸ ಭಜತ್ಯನ್ಯಂ ಬಿಸ ಸ್ತೈನ್ಯಂ ಕರೋತಿಯಃ**" ಇಂದ್ರನು ಬಂದು ಆಹಾರಕ್ಕಾಗಿ ಸಂಗ್ರಹಿಸಲ್ಪಟ್ಟ ಕಮಲದ ಗೆಡ್ಡೆಗಳನ್ನು ಅಪಹರಿಸಿದ ಕಾಲದಲ್ಲಿ, ನಾವ್ಯಾರೊಬ್ಬರೂ ಅವುಗಳ ಕಳವನ್ನು ಮಾಡಲಿಲ್ಲವು; ಹಾಗೆ ಮಾಡಿದ್ದರೆ ವಿಷ್ಣುವಿನನ್ನು ತ್ಯಜಿಸಿ ಅನ್ಯದೇವತೆಯನ್ನು ಅರ್ಚಿಸಿದವನ ಪಾಪಕ್ಕೆ ಹೋಗುವೆನೆಂದು ಪ್ರಮಾಣ ಮಾಡಿದ ವಾಕ್ಯವು. ಹಾಗೆಯೇ ಗೀತೆಯಲ್ಲೇ ಶ್ರೀಕೃಷ್ಣನೇ ಹೇಳುತ್ತಾನೇ ನೆಂದರೆ.— "**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷುನರಾಧಮಾನ್। ಕ್ಷಿಪಾಮ್ಯಜಸ್ರ ಮಾಸುರೇಷ್ವೇವ ಯೋನಿಷು**". (ಗೀ. ೧೬. ೧೯) ತನ್ನನ್ನು ದ್ವೇಷಿಸುವ ಕ್ರೂರ ಪ್ರಕೃತಿಗಳನ್ನು ನರಾಧಮರೆಂದು ನಿಂದಿಸಿ, ಅವರನ್ನು ಆಸುರಯೋನಿಗಳಲ್ಲಿ ಪುನಃ ಪುನಃ ಹುಟ್ಟುವಹಾಗೆ ನಿಗ್ರಹಿಸುವನೆಂದು ಉಪದೇಶಿಸಿರುತ್ತಾರೆ. ಅಂತಹರು ಪಾಷಂಡಿಗಳೆಂದು ಅನೇಕ ಕಡೆಗಳಲ್ಲಿ ನಿಂದಿಸಲ್ಪಟ್ಟಿರುತ್ತಾರೆ.– ಬ್ರಹ್ಮಾಂಡ ಕೂರ್ಮ ಪುರಾಣಗಳಲ್ಲಿ– "**ಯೋಽನ್ಯಂ ದೇವಂ ಪರತ್ವೇನ ವದಂತ್ಯಜ್ಞಾನ ಮೋಹಿತಾಃ। ನಾರಾಯಣಾ ಜ್ಜಗನ್ನಾಥಾ ತ್ತೇವೈ ಪಾಷಂಡಿನಃ ಸ್ಮೃತಾಃ**" ಜಗತ್ತಿಗೆ ಸ್ವಾಮಿಯಾದ ನಾರಾಯಣನನ್ನು ಬಿಟ್ಟು ಬೇರೆ ದೇವತಯನ್ನು ಅಜ್ಞಾನದಿಂದ ಮೋಹಿತರಾಗಿ ಪರದೇವತೆಯೆಂದು ಯಾರು ಹೇಳುವರೋ ಅವರು ಪಾಷಂಡಿಗಳು. ಭಾಗವತದಲ್ಲಿ, "**ಅಸ್ಮಾದನ್ಯಂ ಪರತ್ವೇನ ಚೇತಯಾನೋ ಹ್ಯಚೇತನಃ। ಸಪಾಷಂಡೀತಿ ವಿಜ್ಞೇಯ ಸ್ಸರ್ವಕರ್ಮ ಬಹಿಷ್ಕೃತಃ**" ಅಂತವನು ಪಾಷಂಡಿಯು, ಸರ್ವ ಕರ್ಮಗಳಿಗೂ ಅರ್ಹನಲ್ಲವೆಂದು ಹೇಳಲ್ಪಟ್ಟಿರುತ್ತದ. ಇನ್ನೊಂದು ಕಡೆಯಲ್ಲಿ "**ಯಸ್ತು ನಾರಾಯಣಂದೇವಂ ಸಮುತ್ವೇನಾಭಿಮನ್ಯತೇ। ಸತುತೇನಾಪ**

**ಮಾನೇನ ನರಕಾನ್ನಾತಿವರ್ತತೇ"** ಯಾವನು ಸರ್ವಾಧಿಕನಾಗಿ ಸರ್ವೇಶ್ವರನಾಗಿರುವ ನಾರಾಯಣನನ್ನು ಅನ್ಯದೇವತೆಗಳಿಗೂ ತನಗೂ ಸಮವೆಂದೂ ಭಾವಿಸುವನೋ, ಅವನು ಪರಮಾತ್ಮನ ಅವಮಾನದಿಂದ ನರಕವನ್ನು ಅತಿಕ್ರಮಿಸಿ ಬರದೇ ಅಲ್ಲೇ ಇರುವನೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ **"ಯೇತುಸಾಮಾನ್ಯಭಾವೇನ ಮನ್ಯಂತೇ ಪುರುಷೋತ್ತಮಂ। ತೇವೈಪಾಷಂಡಿನೋಜ್ಞೇಯಾನರಕಾರ್ಹಾನರಾಧಮಾಃ"** ಆತನನ್ನು ಸಾಮಾನ್ಯನನ್ನಾಗಿ ಭಾವಿಸುವರು ಪಾಷಂಡಿಗಳು. ನರಾಧಮರು, ಆದುದರಿಂದ ನರಕದಲ್ಲಿರಲು ಯೋಗ್ಯರೆಂದು ಹೇಳಲ್ಪಟ್ಟಿದೆ. ಪುನಃ **"ಯಃ ಪುತ್ರಃ ಪಿತರಂ ದ್ವೇಷ್ಟಿತಂ ವಿದ್ಯಾ ದನ್ಯ ರೇತಸಂ। ಯೋ ವಿಷ್ಣುಂ ಸತತಂ ದ್ವೇಷ್ಟಿತಂ ವಿದ್ಯಾ ದನ್ತ್ಯ ರೇತಸಮ್"** ಯಾವಪುತ್ರನು ತಂದೆಯನ್ನು ದ್ವೇಷಿಸುತ್ತಾನೋ ಅಂತವನು ಇತರನರೇತಸ್ಸಿಗೆ ಹುಟ್ಟಿದವನೆಂದು ಭಾವಿಸತಕ್ಕದ್ದು. ಹಾಗೆಯೇ ಲೋಕಪಿತಾವಾದ ವಿಷ್ಣುವನ್ನು ಯಾವನು ದ್ವೇಷಿಸುತ್ತಾನೋ ಅವನು ಚಂಡಾಲನಿಗೆ ಹುಟ್ಟಿದವನನ್ನಾಗಿ ತಿಳಿ" ಎಂಬುದು ಅರ್ಥವು.

**"ವಿಷ್ಣು ಭಕ್ತಿವಿಹೀನೋಯ ಸ್ಸರ್ವಶಾಸ್ತ್ರಾರ್ಥವೇದ್ಯಪಿ।**
**ಚತುರ್ವೇದ್ಯಪಿಯೋ ವಿಪ್ರೋ ವಾಸುದೇವಂ ನವಿಂದತಿ।**
**ವೇದಭಾರ ಭರಾಕ್ರಾಂತ ಸ್ಸವೈ ಬ್ರಾಹ್ಮಣ ಗರ್ದಭಃ॥**

ವೇದಗಳ ಮತ್ತು ಇತರ ಶಾಸ್ತ್ರಜ್ಞಾನವಿದ್ದು, ವೇದಗಳನ್ನು ಪಠಿಸುತ್ತಿರುವವನು ಸುಮ್ಮನೆ ಹೊರೆಯನ್ನು ಹೊತ್ತ ಬ್ರಾಹ್ಮಣ ಗರ್ದಭವೆಂದು ಹೇಳಿಸಿಕೊಳ್ಳುವನೆಂಬ ಭಾವವು. ಹೀಗೆ ಇನ್ನೂ ಅನೇಕ ಪ್ರಮಾಣಗಳಿವೆ.

ಹೀಗೆ ಪೂರ್ವಾರ್ಧದಿಂದ ಶ್ರೀಮನ್ನಾರಾಯಣನೇ ಪರತತ್ವವೆಂದು ಹೇಳಿ, ಅದಕ್ಕೆ ವ್ಯತಿರಿಕ್ತವಾದ ವಾದಗಳನ್ನೆಲ್ಲಾ ನಿರಾಕರಿಸುವದಕ್ಕಾಗಿ ಉತ್ತರಾರ್ಧವನ್ನು ವ್ಯಾಸ ಸೂತ್ರಗಳ ದ್ವಿತೀಯಾಧ್ಯಾಯಾಭಿಪ್ರಾಯಗಳನ್ನು ಅನುಗ್ರಹಿಸಿರುತ್ತಾರೆ. **"ಸಬ್ರಹ್ಮಾ ಸಶಿವಸ್ಸೇಂದ್ರಃ"** ಇತ್ಯಾದಿ ಶ್ರುತಿವಾಕ್ಯಗಳ ಅಭಿಪ್ರಾಯಗಳನ್ನು ಚೆನ್ನಾಗಿ ವಿಮರ್ಶಿಸ ತಿಳಿಯದೇ ಹೇಳುವ, ಎಲ್ಲಾ ಆತ್ಮವೂ ಒಂದೇ, ಎಲ್ಲಾ ಆತ್ಮರೂ ಸಮ, ತ್ರಿಮೂರ್ತಿಗಳೂ ಒಂದೇ, ಇತ್ಯಾದ್ಯಭಿಪ್ರಾಯಗಳನ್ನು ನಿರಾಕರಿಸುತ್ತಾರೆ. ಚತುರ್ಮುಖ ಬ್ರಹ್ಮನೂ ರುದ್ರನೂ ಸಹ ನಮ್ಮಹಾಗೆ ಜೀವಕೋಟಿಗೆ ಸೇರಿದವರು. ಸುಕೃತ ಪರಿಪಾಕದಿಂದ ಅವರು ನಮಗಿಂತ ಉತ್ಕೃಷ್ಟರಾದ ಲೋಕಾಧೀಶ್ವರರೇವಿನಾ ನಾರಾಯಣನ ಈಶಿತೃತ್ವವು ಅವರಿಗಿಲ್ಲವೆಂದು ಹೇಳುತ್ತಾರೆ. ಅವರುಗಳಿಗಿರುವ ವಿಭೂತಿಮತ್ವವಲ್ಲಾ ಶ್ರೀಮನ್ನಾರಾಯಣನ ಕೃಪೆಯಿಂದುಂಟಾದದೆಂಬುದೂ ಸೂಚಿತವು. ಹಾಗಾದರೆ **ಸಬ್ರಹ್ಮಾ ಸಶಿವಃ** ಇತ್ಯಾದಿವಾಕ್ಯಗಳ ಅರ್ಥವೇನು? ಎಂದರೆ ಬ್ರಹ್ಮ ಶಿವ ಇಂದ್ರ ಮೊದಲಾದ ಜೀವಕೋಟಿಯೆಲ್ಲಾ **"ಯಸ್ಯ ಆತ್ಮಾ ಶರೀರಂ"** ಎಂಬ ಶ್ರುತಿಯಲ್ಲಿ ಹೇಳಿರುವ ಹಾಗೆ ವಿಷ್ಣುವಿಗೆ ಶರೀರವು. **"ಏತ**

**ದಾತ್ಮ್ಯಮಿದಂಸರ್ವಂ"** ಎಂಬಲ್ಲಿ **"ಯಆತ್ಮಾ ಅಂತರೋಯಮಯತಿ"**ಎಂಬಲ್ಲೂ ಹೇಳಿರುವ ಹಾಗೂ ಆತ್ಮಾವಾಗಿರುವದರಿಂದ ಸಾಮಾನಾಧಿಕರಣ್ಯವು. ಇದರಿಂದ ಆತ್ಮಾವನ್ನು ಶರೀರವಾಚಕ ಶಬ್ದದಿಂದ **ಅವನು ಮನುಷ್ಯನು** ಎಂದು ಹೇಳುವ ಹಾಗೆ ಪ್ರಯೋಗವು ನ್ಯಾಯವು. ಕಾರಣ ವಾಕ್ಯದಲ್ಲಿ ಹಿರಣ್ಯಗರ್ಭ, ಶಿವ, ಶಂಭು, ರುದ್ರ ಮೊದಲಾದವುಗಳಿದ್ದರೆ ಐಕಕಂಠ್ಯಕ್ಕಾಗಿ ಪರಬ್ರಹ್ಮಪರವಾಗಿ ವ್ಯುತ್ಪತ್ತಿಮೂಲಕ ಅನ್ವಯಿಸತಕ್ಕದ್ದೆಂದು ಮೇಲೆಯೇ ಉಪಪಾದಿಸಲ್ಪಟ್ಟಿತು. "ಲಿಙ್ಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ" ಎಂಬ ಬ್ರಹ್ಮಸೂತ್ರದಲ್ಲಿ (೩. ೩. ೪೩) ವಹರ ವಿದ್ಯೆಯಲ್ಲಿ ಮಾತ್ರ ಶ್ರೀಮನಾರಾಯಣನೇ ಉಪಾಸ್ಯನೇ ಅಥವಾ ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಆತನೇ ಉಪಾಸ್ಯನೇ ಎಂಬ ನಿರ್ಣಯದಲ್ಲಿ ಈ ಸೂತ್ರವು ಹೇಳುವದೇನೆಂದರೆ ಈ ಎರಡನೆಯ ಅಭಿಪ್ರಾಯವೇ ಸರಿಯಾದುದೆಂದು ತೈತ್ತರೀಯ ನಾರಾಯಣೀಯದಲ್ಲಿ **"ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್ ವಿಶ್ವಂ ನಾರಾಯಣಂ ದೇವಂ"** ಎಂದಾರಂಭಿಸಿ **"ಸೋಽಕ್ಷರಃ ಪರಮ ಸ್ವರಾಟ್"** ಎಂದು ಮುಗಿಸಿ ಹೇಳಿದ ಅನುವಾಕದಿಂದ ವ್ಯಕ್ತವು. ಪರಬ್ರಹ್ಮ, ಪರತತ್ವ, ಪರಂಜ್ಯೋತಿಃ, ಪರ ಮಾತ್ಮಾ ಅಕ್ಷರ, ಶಿವ, ಶಂಭು ಮೊದಲಾದ ಶಬ್ದಗಳಿಂದ ವ್ಯುತ್ಪತ್ತಿ ಮೂಲಕ ವಾಗಿ ಪರಬಹ್ಮನಾದ ನಾರಾಯಣನೇ ಹೇಳಲ್ಪಟ್ಟನೆಂಬುದು ಸ್ಥಾಪಿತವು. ಪ್ರಕ ರಣಕ್ಕಿಂತ ಮೇಲಿನ ಅನುವಾಕ ವಾಕ್ಯಕ್ಕೇ ಬಲೀಯಸ್ತ್ವವು ಎಂದು ಪೂರ್ವಮೀ ಮಾಂಸೆಯು ಹೇಳುತ್ತದೆ. ಆದುದರಿಂದ ಬ್ರಹ್ಮ ಶಿವ ಶಬ್ದಗಳಿಂದ ಹೇಳಲ್ಪಡುವ ಜೀವಾತ್ಮರು ಪರತತ್ವವಲ್ಲವು. ಬ್ರಹ್ಮನು ಶ್ರೀಮನ್ನಾರಾಯಣನ ನಾಭಿಕಮಲ ದಿಂದ ಜನಿಸಿದ ಜೀವನು. ಆತನ ಮಗನು ಶಿವನು, ರುದ್ರನು. **ಶತಮಖನು** ಎಂದು ಇಂದ್ರನನ್ನು ಹೇಳಿದುದು ಆತನೂ ಇವರುಗಳ ಹಾಗೆ ಕರ್ಮವಶ್ಯನೆಂದು ತಿಳಿಸುವದ ಕ್ಕಾಗಿ. ಆಗಲಿ **ಪರಮ ಸ್ವರಾಟ್- "ಸಸ್ವರಾಡ್ಭವತಿ"** (ಛಾಂ. ೭. ೨೫. ೨) ಎಂದು ಶ್ರುತಿಯಲ್ಲಿ ಹೇಳಿರುವ ಹಾಗೆ, ಇವರುಗಳಿಗಿಂತ ಉತ್ಕೃಷ್ಟನಾಗಿ ಪ್ರಕೃತಿ ಸಂಬಂದ ವನ್ನೂ ಕರ್ಮ ವಶ್ಯತೆಯನ್ನೂ ಕಳೆದುಕೊಂಡ ಮುಕ್ತನ ವಿಷಯವಲ್ಲಾದರೋ, ಅವನೂ ಕೂಡ ಹಾಗೆಯೇ. ನಿತ್ಯರೂ ಸಹ ನಾರಾಯಣನ ಈಶಿತೃತ್ವಕ್ಕ ಸೇರಿದವ ರೆಂದು ಹೇಳಿರುತ್ತಾರೆ. ಆಗಲಿ ನಿತ್ಯರೂ ಮುಕ್ತರೂ ಪರಮಾತ್ಮನಿಗೆ ಸದಾ ಅಧೀನ ಸ್ವರೂಪರಾದ ನಂತರ, ಸ್ವರಾಡೆಂಬ ಪ್ರಯೋಗವು ಹೇಗೆ? ಎಂದರೆಪರತಂತ್ರರಾ ದರೂ, ಸರ್ವಜ್ಞತ್ವ, ಸತ್ಯ ಸಙ್ಕಲ್ಪತ್ವ, ಇಚ್ಛೆಗೆ ವಿಘಾತ ವಿಲ್ಲದಿರುವದರಿಂದ **ಸ್ವರಾಟ್** ಎಂದು ಹೇಳಲ್ಪಟ್ಟಿತು. ಇದು "ಸಙ್ಕಲ್ಪಾದೇವಾ ತಚ್ಛ್ರುತೇಃ" "ಅತ ಏವಚಾನ ನ್ಯಾಧಿಪತಿಃ" ಎಂಬ (೪. ೪. ೮, ೯) ಸೂತ್ರಗಳಲ್ಲಿ ಉಪಪಾದಿತವು. ಈ ಮುಕ್ತನಿಗೆ ತನ್ನ ಇಚ್ಛಾನುಸಾರ ಸೃಷ್ಟಿಯ ಶಕ್ತಿ ಉಂಟೆಂದು ಹೇಳಿದುದು, ಜಗತ್ತನ್ನೂ ಸೃಷ್ಟಿ ಸುವ ಶಕ್ತಿಯೂಉಂಟೇ? ಎಂಬಲ್ಲಿ ಜಗತ್ತಿನ ಸೃಷ್ಟಿ ಮೊದಲಾದವುಗಳ ಸೃಷ್ಟಿ ಆತ

ನಿಗಿಲ್ಲವೆಂದು ಬ್ರಹ್ಮ ಸೂತ್ರವು ಹೇಳುತ್ತದೆ, ಆದುದರಿಂದ ಸೃಷ್ಟಿಯು ಪರಿಮಿತವಿಷಯವು. ಆದರೆ ಪರಮಸ್ಸ್ವರಾಟೆಂದು, ಪರಮ ವಿಶೇಷಣವೇತಕ್ಕೆ? ಈ ನಿತ್ಯರೂ ಮತ್ತು ಮುಕ್ತರೂ ಬ್ರಹ್ಮಾ ಶಿವ ಇಂದ್ರ ಮೊದಲಾದವರಿಗಳಿಗಿಂತ ಹೆಚ್ಚು ಐಶ್ವರ್ಯಯುಕ್ತರೆಂಬ ಭಾವನೆಯಿಂದ **ಪರಮ** ವೆಂಬ ವಿಶೇಷಣವು. ಈ ಮುಕ್ತರುಗಳು ಐಶ್ವರ್ಯವು **"ಇಂದ್ರ ಪ್ರಜಾ ಪತಿ ಪಶು ಪತಿಗಳ"** ಐಶ್ವರ್ಯಕ್ಕಿಂತ ಮೇಲಾದುದು. ಅವರುಗಳ ಐಶ್ವರ್ಯವು ಶಾಶ್ವತವಾದುದು; ಇವರುಗಳ ಐಶ್ವರ್ಯವು ಅಶಾಶ್ವತವಾದುದಾಗಿಯೂ ಅಲ್ಪಗಳಾದವು. ಆದುದರಿಂದಲೇ ಸ್ವಾಮಿ ದೇಶಿಕವರ್ಯರು ಶ್ರೀ ಯಮುನಮುನಿಗಳ **ಪರಮ ಸ್ವರಾಟೆಂಬ** ಪ್ರಯೋಗವನ್ನೇ ಮನಸ್ಸಿನಲ್ಲಿಟ್ಟು ಇವರ ಗೀತಾರ್ಥ ಸಂಗ್ರಹದ ಎಂಟನೆಯ ಅಧ್ಯಾಯದ ಸಙ್ಗ್ರಹ ಶ್ಲೋಕದಲ್ಲಿರುವ "ಐಶ್ವರ್ಯಾಕ್ಷರ ಯಾಥಾತ್ಮ್ಯ"ವೆಂಬಲ್ಲಿರುವ **ಐಶ್ವರ್ಯಶಬ್ದಕ್ಕೆ "ಇನ್ದ್ರ ಪ್ರಜಾಪತಿಪಶುಪತಿ ಭೋಗೇಭ್ಯೋಽತಿಶಯಿತ ಭೋಗಃ"** ಎಂಬ ವ್ಯಾಖ್ಯಾನವನ್ನು ದಯಪಾಲಿಸಿರುತ್ತಾರೆ; ಏಕೆಂದರೆ, ಈ ಆರ್ತರು ಅರ್ಥಾರ್ಥಿಗಳು ಅಶಾಶ್ವತಗಳಾದ ಭೋಗಗಳನ್ನು ಪ್ರಾರ್ಥಿಸಿದರೂ ಕರುಣಾಸಾಗರನು ಇವರುಗಳು ಮಾಡಿದ ಸುಕೃತವಿಶೇಷದಿಂದ ಮುಂದಿನ ಜನ್ಮಗಳಲ್ಲೇ ಈ ಬ್ರಹ್ಮರುದ್ರೇಂದ್ರಾದಿಗಳ ಭೋಗಕ್ಕಿಂತ ಉತ್ಕೃಷ್ಟವಾದ ಮೋಕ್ಷೈಶ್ವರ್ಯವನ್ನು ಕೊಡುವನೆಂಬ ಭಾವದಿಂದ ಹಾಗೆ ಭಾಷ್ಯವು. ಆ ಕಾರಣದಿಂದಲೇ ಇಲ್ಲಿ **ಪರಮ ಸ್ವರಾಟ್** ಎಂಬ ಪ್ರಯೋಗವು. ದಾಸನು ಬರೆದಿರುವ ಭಗವದ್ಗೀತೆಯ ೧೧೨ನೆಯ ಪುಟವನ್ನು ಪರಾಂಬರಿಸಿ. ಆದುದರಿಂದ **"ಬ್ರಹ್ಮಾ ಶಿವ ಶತಮುಖ"** ರಿಗೆ ಪರಮ ಶಬ್ದ ವಿಶೇಷಣವಿಲ್ಲವು, ಏಕೆಂದರೆ ಬದ್ಧ ಜೀವಕೋಟಿಗೆ ಸೇರಿದವರು; **ಸ್ವರಾಟ್**– ಅಕರ್ಮವಶ್ಯನಾದ ಮುಕ್ತನಾದರೋ **ಪರಮಃ**– ಅವರೆಲ್ಲರಗಿಂತಲೂ ಶ್ರೇಷ್ಠನು; ಏಕೆಂದರೆ ಮುಕ್ತೈಶ್ವರ್ಯ ಭೋಗವನ್ನುಳ್ಳವನು.

ಇಂತಹ ಲೋಕಾಧೀಶ್ವರರು ಎಲ್ಲರೂ, ನಿತ್ಯ ಮುಕ್ತಬದ್ಧರೂ ಎಲ್ಲರೂ ಆತನಮಹಿಮೆ ಎಂಬ ಅಗಾಧ ಸಮುದ್ರದ ಜಲಕಣಗಳು, ಜಲಬಿಂದುಗಳೆಂದು ಹೇಳಿದರು. ಈ ಅಭಿಪ್ರಾಯವನ್ನೇ ಚೋಳ ನೃಪನ ವಿಭೂತಿಯ ದೃಷ್ಟಾಂತದ ಮೂಲಕ ಉಪಪಾದಿಸಿರುತ್ತಾರೆ. "ಯಥಾಚೋಳ ನೃಪಸ್ಸ ಮ್ರಾಡದ್ವಿತೀಯೋಸ್ತಿ ಭೂತಲೇ ಇತಿತತ್ತುಲ್ಯ ನೃಪತಿ ನಿವಾರಣ ಪರಂವಚಃ।। ಚೋಳ ನೃಪನಿಗೆ ಸಮಾನರುಯಾರೂ ಜಗತ್ತಿನಲ್ಲಿ ಇಲ್ಲವೆಂದು ಹೇಳಿದರೆ, ಬೇರೆರಾಜರು ಯಾರು ಎಂದಿಷ್ಟು ಮಾತ್ರವೇ ಅರ್ಥವು. ಅತನಿಗೆ ಭೃತ್ಯರೂ ಸುತರೂ ಹಂಡತಿ ಪುತ್ರರೂ ಯಾರೂ ಇಲ್ಲವೆಂಬರ್ಥ ಹೇಗೆ ಅಲ್ಲವೋ ಹಾಗೆಯೇ ಪರಮಾತ್ಮನಿಗೆ ಎರಡನೆಯವರೇ ಇಲ್ಲವೆಂದು **ಏಕಮೇ ವಾದ್ವಿತೀಯಮ್** ಎಂಬಲ್ಲಿ ಇವೆಲ್ಲಾ ಮಿಥ್ಯಾ ಎಂಬರ್ಥವಲ್ಲವು. ವಿಶೇಷವಾಗಿ ವಿಭೂತಿಗಳು ಉಂಟು. ಅವೆಲ್ಲಾ ಆತನ ಮಹಿಮೆಯ ಸಮುದ್ರದ ಜಲಕಣಗಳೆಂಬರ್ಥವು. ಪರಮಾತ್ಮನೊಬ್ಬನೇ ಜಗತ್ತಿಗೆ ಸರ್ವ

ವಿಧಕಾರಣನು ಎಂಬರ್ಥವು. ಜಗತ್ತು ಮಿಥ್ಯೆ ಎಂಬರ್ಥವಲ್ಲವು. ಪರಮಾತ್ಮ ನಲ್ಲದೇ ಇನ್ನು ಯಾವುದೂ ಇಲ್ಲನೆಂಬರ್ಥವಲ್ಲವು. **"ತಥಾಸುರಾ ಸುರನರ ಬ್ರಹ್ಮಾಂಡಾಯುತ ಕೋಟಿಯಃ। ಕ್ಲೇಶ ಕರ್ಮ ವಿಪಾಕಾದ್ಯೈ ರಸ್ಪೃಷ್ಟಸ್ಯಾ ಖಿಲೇಶಿತುಃ। ಜ್ಞಾನಾದಿಷಾಡ್ಗುಣ್ಯನಿಧೇ ರಚಿಂತ್ಯ ವಿಭವಸ್ಯತಾಃ। ವಿಷ್ಣೋರ್ವಿಭೂತಿ ಮಹಿಮ ಸಮುದ್ರದ್ರಪ್ಸ ವಿಪ್ರುಷಃ।"** ಎಂದು ಎಂಬಲ್ಲಿ ಅವರು ರಚಿಸಿದ **ಸಂವಿತ್ಸಿದ್ಧಿ** ಯಲ್ಲಿ ಹೇಳಿರುತ್ತಾರೆ. ಸ್ವಾಮಿಯ ಮಹಿಮೆ ಯನ್ನು ಅರ್ಣವವೆಂದರೆ ಸಮುದ್ರವನ್ನಾಗಿ ರೂಪಕಮಾಡಿ ಹೇಳಿದುದು, ಅದರ ಅಕ್ಷರತ್ವವನ್ನೂ ಅಪಾರತ್ವಾದಿಗಳನ್ನೂ ತಿಳಿಸುವದಕ್ಕಾಗಿ.

ಈ **"ಸ್ವಾಭಾವಿಕಾನವಧಿಕಾತಿಶಯ"** ವೆಂಬ ಶ್ಲೋಕದ ವಿಷಯದಲ್ಲಿ ಒಂದು ಅಮೋಘವಾದ ಇತಿಹಾಸವೂ ಉಂಟು. ಏನೆಂದರೆ– ಶ್ರೀ ಯತಿನ್ಯ್ಯರೂ ಅವರ ತಮ್ಮಂದಿರಾದ ಗೋವಿಂದ ಭಟ್ಟರೂ ಸಹ ಯಾದವ ಪ್ರಕಾಶರಂಬ ಅದ್ವೈತಿಗಳ ಶಿಷ್ಯರಾಗಿದ್ದರು. ಶ್ರೀಯತಿವರ್ಯರು ವಿಶೇಷಮೇಧಾವಿಗಳಾಗಿ ಶ್ರುತಿ ಗಳಿಗೆ ಯಾದವ ಪ್ರಕಾಶರು ಉಪದೇಶಿಸಿದ ಅರ್ಥಗಳಿಗಿಂತ ವಿಲಕ್ಷಣಾರ್ಥಗಳನ್ನು ಶ್ರೀರಾಮಾನುಜರು ಹೇಳಿದುದರಿಂದ, ಇವರು ಜೀವಿಸಿದ್ದರೆ ತಮ್ಮ ಖ್ಯಾತಿಗೆ ಕುಂದಕವೆಂದು ಭಾವಿಸಿ, ಯಾದವ ಪ್ರಕಾಶರು ಶಿಷ್ಯವರ್ಗದಿಂದ ಕೂಡಿ, ಗಂಗಾ ಯಾತ್ರೆಗೆಂದು ಹೊರಟು, ಗಂಗೆಯಲ್ಲಿ ಶ್ರೀರಾಮಾನುಜರನ್ನು ತಳ್ಳಿಬಿಡಬೇಕೆಂದು ಸಙ್ಕಲ್ಪಿಸಿದರು. ಈ ಸುಳುವು ಗೋವಿಂದ ಭಟ್ಟರಿಗೆ ತಿಳಿದು, ಅವರು ತಮ್ಮ ಅಣ್ಣಂದಿರನ್ನು ಜೊತೆಯಲ್ಲಿ ಬಾರದ ಹಾಗೆ ಮಧ್ಯ ಮಾರ್ಗದಲ್ಲಿ ನಿಲ್ಲಿಸಿ ಬಿಟ್ಟರು. ಶ್ರೀಕಾಂಚೀವರದರೂ ಲೋಕಮಾತೆಯೂ ಅವರಿಗೆ ವೃದ್ಧರಾಗಿ ಕಾಣಿಸಿಕೊಂಡು, ದಾಹವಾಗುತ್ತದೆ, ನೀರು ತಂದುಕೊಡಿ ಎಂದು ಕೇಳಿ, ಅವರನ್ನು ಕಾಂಚೀಪುರದ ಹತ್ತಿರದಲ್ಲಿ ಬಿಟ್ಟು ಅದೃಶ್ಯರಾದರು. ಅನಂತರ ಶ್ರೀರಾಮಾನುಜರು ಕಾಂಚೀ ಪುರಕ್ಕೆ ಹೋಗಿ ಸ್ವಾಮಿ ಅಭಿಷೇಕಕ್ಕೆ ಬೆಳ್ಳಿಯಕೊಡದಲ್ಲಿ ತೀರ್ಥವನ್ನು ಒಂದು ಭಾವಿಯಿಂದ ತಂದು ಕೊಡುವಕೈಙ್ಕರ್ಯವನ್ನು ಮಾಡಿಕೊಂಡಿದ್ದರು.

ಇತ್ತಲಾಗಿ ಗೋವಿಂದ ಭಟ್ಟರು ಕಾಶಿಗೆ ಹೋಗಿ ಸ್ನಾನ ಮಾಡಿ ಅರ್ಘ್ಯ ವನ್ನು ಕೊಡುವಾಗ ಅವರ ಕೈಗೆ ಒಂದು ಲಿಂಗವು ಬರುವ ಹಾಗೆ ತಂತ್ರವನ್ನು ಮಾಡಿ, ಅದನ್ನು ಮಧುರ ಮಂಗಲದಲ್ಲಿ ಪ್ರತಿಷ್ಠಿಸಿ, ಅದರ ಆರಾಧನೆಯನ್ನು ಮಾಡಿಸಿ, ಅವರನ್ನು ಅದ್ವೈತಿಯನ್ನಾಗಿ, ವಿಭೂತಿ, ರುದ್ರಾಕ್ಷಿಗಳನ್ನು ಧರಿಸುವ ಹಾಗೆ ಮಾಡಿ, ಅದರ ಹತ್ತಿರವಿರುವ ಕಾಳಹಸ್ತಿಯ ಶೈವ ದೇವಾಸ್ಥಾನಕ್ಕೆ ಅಧಿಕಾರಿ ಯಾಗಿ ಮಾಡಿದರು. ಈ ಸಮಾಚಾರವನ್ನು ಶ್ರೀಯತಿವರ್ಯರು ಕೇಳಿ, ತಮ್ಮ ತಮ್ಮಂದರಿಗೆ ಉಂಟಾದ ಅವಸ್ಥೆಗಾಗಿ ಪರಿತಾಪಪಟ್ಟು, ಕೂರೇಶರು, ಧಾದೂರ

**ಕಶ್ಶ್ರೀಃ ಶ್ರಿಯಃ ಪರಮ ಸತ್ತ್ವಸಮಾಶ್ರಯಃ ಕಃ।**
**ಕಃ ಪುಂಡರೀಕನಯನಃ ಪುರುಷೋತ್ತಮಃ ಕಃ।**
**ಕಸ್ಯಾಯುತಾಯುತ ಶತೈಕ ಕಲಾಂ ಶಕಾಂಶೇ।**
**ವಿಶ್ವಂ ವಿಚಿತ್ರ ಚಿದ ಚಿತ್ಪ್ರವಿಭಾಗವೃತ್ತಮ್॥ ೧೨ ॥**

ವ್ಮಾಳ್ ಎಂಬ ತಮ್ಮ ಮುಖ್ಯಶಿಷ್ಯರನ್ನೂ ಕರೆದು ಕೊಂಡು ಅವರನ್ನು ಹೇಗಾ ದರೂ ಮಾಡಿ, ಅಲ್ಲಿಂದ ತಪ್ಪಿಸಿ, ಅದ್ವೈತಾಭಿಪ್ರಾಯವನ್ನು ನಿರಾಕರಿಸಿ ವಿಶಿ ಷ್ಟಾದ್ವೈತಿಯನ್ನಾಗಿ ಮಾಡಬೇಕೆಂದು ಶ್ರೀಯತಿವರ್ಯರು ಆಜ್ಞಾಪಿಸಿದುದರಿಂದ ಹಾಗೆಯೇ ಇವರುಗಳು ಕಾಳಹಸ್ತಿಗೆ ಹೋಗಿ ಗೋವಿಂದ ಭಟ್ಟರನ್ನು ವಾದದಲ್ಲಿ ಗೆದ್ದು, ಭಸ್ಮರುದ್ರಾಕ್ಷಿಗಳನ್ನು ಪರಿತ್ಯಜಿಸಿ ಶ್ರೀವೈಷ್ಣವರನ್ನಾಗಿ ಮಾಡಿದರೆಂಬ ಇತಿ ಹಾಸವು ಗುರು ಪರಂಪರೆಯಲ್ಲಿರುತ್ತದೆ. ಆಗವಾದದಲ್ಲಿ ಕುರೇಶರಾದಿಗಳು ಉಪ ಯೋಗಿಸಿದ ಅನೇಕ ಪ್ರಮಾಣಗಳಲ್ಲಿ ಈ ಶ್ಲೋಕವೂ ಮತ್ತು ಮುಂದಿನ (೧೨. ೧೩. ೧೪) ಮೂರು ಶ್ಲೋಕಗಳಲ್ಲಿ ಉಪಪಾದಿತಾಭಿಪ್ರಾಯಗಳೂ, ಕೆಲವು ಪಾತುರಗಳೂ, ಮುಖ್ಯವೆಂದು ಹೇಳಲ್ಪಟ್ಟಿರುತ್ತದೆ. ಪರತತ್ವವು ರುದ್ರನಲ್ಲ ವೆಂಬುದು ಯಾವಾಗ ತೋರಿತೋ, ಆಗ ರುದ್ರಾರಾಧನೆಯು ಸರಿಯಲ್ಲವೆಂಬ ಜ್ಞಾನ ಉಂಟಾಗಿ ಕಾಳಹಸ್ತಿಯ ಯಜಾಜ ಮಾನ್ಯಕ್ಕೆ ಬೇರೆಯವರನ್ನು ಏರ್ಪಡಿಸಿ, ತಾವು ಶ್ರೀಯತಿವರ್ಯರನ್ನು ಹೋಗಿ ಸೇರಿದರು.

ಪರಮ ಪುರುಷನ ಐಶ್ವರಯೋಗವು ಅಗಾಧವಾದುದು. ಅದನ್ನು ವಿಸ್ತ ರಿಸಿ ಹೇಳಲು ಸಾಧ್ಯವಿಲ್ಲೆಂದು ಶ್ರೀ ಕೃಷ್ಣಭಗವಾನರವರೇ ಅರ್ಜನನನ್ನು ಕುರಿತು ಹೇಳಿ, ಅವುಗಳಲ್ಲಿ ಮುಖ್ಯವಾದುವನ್ನು ಮಾತ್ರ ಹೇಳುತ್ತೇನೆಂದು ಅರ್ಜುನನಿಗೆ ಗೀತೆಯಲ್ಲಿ ಉಪದೇಶಿಸಿರುತ್ತಾರೆ.– ಅರ್ಜುನನು ಕೇಳುತ್ತಾನೆ– **"ವಕ್ತುಮರ್ಹ ಸ್ಯಶೇಷೇಣ ದಿವ್ಯಾಹ್ಯಾತ್ಮ ವಿಭೂತಯಃ। ಯಾಭಿ ರ್ವಿಭೂತಿಭಿರ್ಲೋಕಾ ಇಮಾಂ ಸ್ತ್ವಂವ್ಯಾಪ್ಯತಿಷ್ಠಸಿ"** ಹೀಗೆ ವಿಭೂತಿಗಳು ದಿವ್ಯವಾಗಿ ಪರಮಾತ್ಮ ನಿಂದ ವ್ಯಾಪ್ತಗಳಾದವು ಮಿಥ್ಯೆಯೇ? ಶ್ರೀ ಕೃಷ್ಣಭಗವಾನರವರೇ **"ನಾಸ್ತ್ಯಂತೋ ವಿಸ್ತರಸ್ಯಮೇ"** ಎಂದು ಹೇಳಿರುವದು ಹೇಗೆ ಸುಳ್ಳಾದೀತು? ಆದುದರಿಂದ ಮಿಥ್ಯಾ ವಾದ ತಿಮಿರವು ಶ್ರುತಿವಾಕ್ಯ ಪ್ರಕಾಶದ ಎದುರಿಗೆ ಒಂದು ನಿಮಿಷವೂ ಕೂಡನಿಲ್ಲ ಲಾರದು. ಆದುದರಿಂದ ಶ್ರೀ ಶಂಕರಾಚಾರ್ಯಾವಲಂಬಿಗಳೇ **ಮಿಥ್ಯಾ** ಶಬ್ದಕ್ಕೆ **ಸವಿಕಾರ ವಸ್ತುಗವೆಂದು** ಅರ್ಥಮಾಡಿರುತ್ತಾರೆ. ಈ ಅಭಿಪ್ರಾಯವು ನಿರ್ವಿ ವಾದವಾದುದು. ॥೧೧॥

**ಅವತಾರಿಕೆಯು:—** ಹಿಂದಿನ ಶ್ಲೋಕದಲ್ಲಿ, ನಾರಾಯಣನೇ ಪರತತ್ವ ವೆಂದೂ, ಬ್ರಹ್ಮರುದ್ರೇಂದ್ರಾದಿಗಳು ಆತನ ಮಹಿಮಾರ್ಣವದ ಶೀಕರಗಳು

ಎಂದೂ ಹೇಳಲ್ಪಟ್ಟಿತು. ಆದರೂ ಒಂದು ಪೂರ್ವಪಕ್ಷವು ಉಂಟಾಗ ಬಹುದು. **ಹಿರಣ್ಯಗರ್ಭಸ್ಸಮವರ್ತತಾಗ್ರೇ** ಎಂಬಲ್ಲಿ ಹಿರಣ್ಯಗರ್ಭ ಶಬ್ದಕ್ಕೆ ಚತುರ್ಮುಖನಲ್ಲೇ ಅನ್ವಯವಿರುವದರಿಂದ ಆತನೇ ಏಕೆ ಜಗತ್ಕಾರಣನೆಂದು ಹೇಳಕೂಡದು? ಪುರುಷ ಸೂಕ್ತದಲ್ಲೂ **"ಪ್ರಜಾಪತಿಶ್ಚರತಿಗರ್ಭೇ ಅಂತಃ"** ಎಂದು **ಪ್ರಜಾಪತಿ** ಶಬ್ದ ವಿರುವದರಿಂದಲೂ, ಅದೂ ಚತುರ್ಮುಖನಿಗೆ ಪರ್ಯಾಯ ಪದವಾದುದರಿಂದಲೂ **ಚತುರ್ಮುಖನೇ** ಜಗತ್ಕಾರಣನೆಂದು ಏಕೆ ಹೇಳಕೂಡದು? ತೈತ್ತರೀಯ ಅಂಭ ಸಿಯ ಮೊದಲು ವಾಕ್ಯದಲ್ಲೂ **"ಪ್ರಜಾಪತಿಶ್ಚರತಿಗರ್ಭೇ ಅಂತಃ"** ಎಂಬ ಇದೇ ವಾಕ್ಯವೇ ಇರುತ್ತದೆ. **"ಧಾತಾಯಥಾ ಪೂರ್ವಮಕಲ್ಪಯತ್"** ಎಂಬಲ್ಲಿ ಧಾತೃ ಶಬ್ದವೂ ಚತುರ್ಮುಖನನ್ನೇ ಬೋಧಿಸುತ್ತದೆ. ಹೀಗೆಲ್ಲಾ ಇರುವದರಿಂದ ಚತುರ್ಮುಖನಿಗೇನೆ ಜಗತ್ಕಾರಣತ್ವಾದಿಗಳನ್ನು ಹೇಳುವೆವು ಎಂದರೆ ಹಾಗಲ್ಲವು. ಏಕೆಂದರೆ ಈ ನಾರಾಯಣ ಶಬ್ದದಿಂದ ಬೋಧಿತನಾದ ಜಗತ್ಕಾರಣನು ಯಾರು ಎಂಬ ಸಂದೇಹವಲ್ಲಿ ಪುರುಷ ಸೂಕ್ತದಲ್ಲೇ ಪ್ರ ಜಾ ಪ ತಿ ಶ ಬ್ದ ದಿ ಂ ದ ಲೂ ಹೇಳಲ್ಪಟ್ಟ ಜಗತ್ಕಾರಣನು, **"ಹ್ರೀಶ್ಚತೇ ಲಕ್ಷ್ಮೀಶ್ಚಪತ್ನೌ"** ಎಂಬ ವಾಕ್ಯ ದಿಂದ, ಆತನು ಶ್ರಿಯಃಪತಿಯೇ ವಿನಾ, ಇತರರಲ್ಲಾ ಎಂದು ಸಂದೇಹನಿ ವೃತ್ತಿಯನ್ನುಂಟು ಮಾಡಿ ಶ್ರೀಯಃ ಪತಿಯೇ ಜಗತ್ಕಾರಣನೆಂದು ಸ್ಥಾಪಿಸಿದ ಅಂಶವನ್ನು ಈ ಶ್ಲೋಕದಲ್ಲಿ ಉಪಪಾದಿಸುತ್ತಾರೆ. ಆದುದರಿಂದ **ಹಿರಣ್ಯಗರ್ಭ, ಪ್ರಜಾಪತಿ, ಧಾತೃ** ಶಬ್ದಗಳಿಗೆ ನಾರಾಯಣ ಪರವಾಗಿಯೇ ವ್ಯುತ್ಪತ್ತಿ ಮೂಲಕ ಅರ್ಥಮಾಡಬೇಕೆಂಬುದು ಸ್ಥಾಪಿತವು. ಅಲ್ಲಲ್ಲೇ ಶ್ರುತಿಗಳೂ ಹಾಗೆಯೇ ಅರ್ಥ ವಾಗುವ ಹಾಗೆ ಉಪಪಾದಿಸಿರುತ್ತವೆ.

**ಪ್ರಜಾಪತಿಶ್ಚರತಿಗರ್ಭೇ ಅಂತಃ** ಎಂಬುದರಿಂದ ಪ್ರಜೆಗಳ ಪತಿಯಾಗಿ ಅವರುಗಳಿಗೆ ನಿಯಾಮಕನಾಗಿ ಅವರುಗಳ ಹೃದಯ ಗುಹೆಯಲ್ಲೇ ಇರುತ್ತಾ ನೆಂದು ಹೇಳಲ್ಪಟ್ಟಿರುತ್ತದೆ. **ಅಂಭಸಿಯಲ್ಲಿ** ಈ ಪ್ರಜಾಪತಿಗೇನೆ, ಸಮುದ್ರ ಶಾಯಿತ್ವವನ್ನೂ, ಜಗತ್ಕಾರಣತ್ವವನ್ನು ವಿಶ್ವತಶ್ಚಕ್ಷುಪೆಂದೂ ವಿಶ್ವತೋ ಮುಖ ವೆಂದೂ, ಮೋಕ್ಷ ಪ್ರದತ್ವವನ್ನೂ ಹೇಳಿರುವದರಿಂದ ಚತುರ್ಮುಖನಲ್ಲವು. ಅದೂ ಅಲ್ಲದೆ ಬೇರೇ ಶ್ರುತಿವಾಕ್ಯದಲ್ಲಿ **"ನಬ್ರಹ್ಮಾನೇಶಾನಃ"** ಚತುರ್ಮುಖನೂ, ರುದ್ರನೂ ಜಗತ್ಕಾರಣರಲ್ಲವೆಂದೂ ವ್ಯಕ್ತವಾಗಿ ಹೇಳಲ್ಪಟ್ಟಿರುತ್ತದೆ. ಏಕೆಂದರೆ ಚತುರ್ಮುಖ ರುದ್ರರುಗಳು, ಪರಮಪುರುಷನ ಸೃಷ್ಟಿಗೆ ಸಿಲುಕಿದವರು, ಅವನ ನಿಯಾಮ್ಯ **ವರ್ಗಕ್ಕೆ** ಸೇರಿದವರು. ಕರ್ಮವಶ್ಯರಾಗಿ ನಮ್ಮ ಹಾಗೆ ಜೀವಾತ್ಮರು. ಆದುದರಿಂದ ಶ್ರೀಮನ್ನಾರಾಯಣನೇ ಪರತತ್ವವೆಂದೂ, ಲಕ್ಷ್ಮೀಪತಿ ತ್ವವೇ ಈ ಸಂದರ್ಭದಲ್ಲಿ ಸ್ವರೂಪನಿರೂಪಕ ಲಿಂಗವೆಂದೂ ಈ ಶ್ಲೋಕದಲ್ಲಿ ಸ್ಥಾಪಿಸುತ್ತಾರೆ.–

**ಅರ್ಥವು. ಕಶ್ಶ್ರೀಶ್ಶ್ರಿಯಃ,** ಶ್ರಿಯಃ– ಲಕ್ಷ್ಮಿಗೆ, **ಶ್ರೀಃ**– ಆಶ್ರಯ ಭೂತನು, ಆಕೆಗೆ ಪತಿಯಾಗಿ ಅತಿಶಯದಾಯಕನು. ನಾರಿಗಳಿಗೆ ಅತಿಶಯಕದಾಯಕನು ಭರ್ತಾವಲ್ಲವೇ; ಅಂತಹ ಅತಿಶಯವನ್ನು ಹೊಂದಿದ ಲಕ್ಷ್ಮಿಗೆ ತಾನು ಪತಿಯಾಗಿ ರುವದು ತನಗೂ ಅತಿಶಯಾವಹವೆಂಬ ಭಾವವೂಸೂಚಿತವು. **ಕಃ**– ಯಾರು? **ಕೋನ್ಯಃ**– ಬೇರೇ ಇನ್ನು ಯಾರು ಇದ್ದಾರೆ? ಅಥವಾ, **ಶ್ರಿಯಃ ಶ್ರೀಃ**– ಲಕ್ಷ್ಮಿಗೂ ಅತಿಶಯದಾಯಕನು, **ಕಃ**– ಯಾರು? ಎಂದರೆ ಹಿಂದಿನ ಶ್ಲೋಕ ದಲ್ಲಿ ಪರತತ್ವವೆಂದು ಸ್ಥಾಪಿಸಿದ **ಸಏವ**– ಆ ನಾರಾಯಣನೇ ಎಂಬ ಭಾವವು ದ್ಯೋತಿತವು. **ಸತ್ವಸನಾಶ್ರಯಃ ಕಃ**– ರಜಸ್ತಮೋಗುಣಗಳ ಸಂಬಂಧವಿಲ್ಲದೆ ಶುದ್ಧವಾದ ಸತ್ವಗುಣಕ್ಕೆ ಒಳ್ಳೇ ಆಶ್ರಯನು ಯಾರು? ಎಂದರೆ ಹಿಂದೆ ಹೇಳಿದ ನಾರಾಯಣನೇ. **ಕಃ ಪುಂಡರೀಕನಯನಃ**– ತನ್ನ ದಿವ್ಯಮಙ್ಗಳ **ವಿಗ್ರಹಕ್ಕೆ** ಅಧಿಕಲಾವಣ್ಯವನ್ನುಂಟು ಮಾಡಿ, ಆಶ್ರಿತರನ್ನು ಸತ್ಯವಾಗಿಯೂ ಕಾಯುವೆನೆಂಬ ಕೃಪಾಪ್ರವಾಹವನ್ನು ಸೂಚಿಸುವ ಕಮಲದಳನಯನನು ಯಾರು? ಆ ನಾರಾ ಯಣನೇ. **ಪುರುಷೋತ್ತಮಃ ಕಃ**– ಎಲ್ಲಾ ತ್ರಿವಿಧ ಬದ್ಧ ಮುಕ್ತ ನಿತ್ಯ ಪುರುಷರು ಗಳಿಗಿಂತಲೂ ಸರ್ವೋತ್ಕೃಷ್ಟ ಪುರುಷನು ಯಾರು? ಆ ನಾರಾಯಣನೇ ಎಂಬ ಭಾವವು. ಮತ್ತು **ಕಸ್ಯ**– ಯಾವ ಮಹಿಮೆಯುಳ್ಳವನ, **ಅಯುತಾಯುತ**– ಹತ್ತು ಸಾವಿರ ಭಾಗದಲ್ಲಿ ಒಂದನ್ನು ಪುನಃ ಹತ್ತು ಸಾವಿರ ಭಾಗಮಾಡಿ, ಆ ಒಂದರ, **ಶತೈಕ**– ನೂರು ಭಾಗಮಾಡಿ ಬಂದ ಒಂದು ಭಾಗದ, **ಕಲಾಂಶ ಕಾಂಶೇ --** ಅಲ್ಪಭಾಗದ, ಒಂದು ಅತ್ಯಲ್ಪ ಭಾಗದಲ್ಲಿ, **ವಿಶ್ವಂ**– ಈ ಸಮಸ್ತ ಪ್ರಪಂ ಚವೂ, **ಚಿದಚಿತ್ಪ್ರವಿಭಾಗ ವೃತ್ತಮ್–ಚಿತ್**– ಪ್ರಾಣಿವರ್ಗವೆಂದೂ, **ಅಚಿತ್ತು**– ಅಚೇತನವರ್ಗವೆಂದೂ ಸ್ವರೂಪಸ್ವಭಾವಗಳಲ್ಲಿ ವ್ಯತ್ಯಸ್ತವಾದ ಧರ್ಮಗಳುಳ್ಳವೆಂದು ವಿಭಾಗಿಸಲ್ಪಟ್ಟಿತೋ, ಅವನೂ ನಾರಾಯಣನೇ ಎಂಬ ಭಾವವು. ಹೀಗೆ ಲಕ್ಷ್ಮಿಗೂ ಅತಿಶಯದಾಯಕನಾಗಿಯೂ ಹೇಯಪ್ರತ್ಯನಾಗಿ ಶುದ್ಧಸತ್ವ ಗುಣೋಪೇತ ಕಲ್ಯಾಣ ಗುಣಾಕರನಾಗಿ, ಕೃಪಾಸೂಚಕ ಪುಂಡರೀಕ ಸದೃಶನಯನಗಳುಳ್ಳವನಗಿಯೂ, ಪರತ್ವ, ಸೌಲಭ್ಯ ಸೌಶೀಲ್ಯ ವಾತ್ಸಲ್ಯಾದಿ ಗುಣಗಳಿಂದ ಪುರುಷೋತ್ತಮನಾಗಿಯೂ ಈ ಚಿತ್ತು ಅಚಿತ್ತುಗಳನ್ನೇ ತನಗೆ ಶರೀರವಾಗಿಹೊಂದಿ ಅವುಗಳಿಗೆ ಆತ್ಮವಾಗಿ ರುವ, ಆತನ ಅಗಾಧವಾದ ಐಶ್ವರ್ಯದ ಒಂದು ಲವಾಂಶವಾಗಿ ವಿಶ್ವವನ್ನೆಲ್ಲಾಹೊಂದಿ ರುವವನು ನಾರಾಯಣನೇವಿನಾ ಇನ್ನ್ಯಾರಿಗೂ ಇವೆಲ್ಲಾ ಸಲ್ಲುವದಿಲ್ಲವೆಂಬ ಭಾವವು. ಇನ್ನು ಮಿಕ್ಕಬ್ರಹ್ಮರುದ್ರಾದಿಗಳೆಲ್ಲಾ ಜೀವಕೋಟಿಗೆ ಸೇರಿ; ಆತನ ನಿಯಾಮ್ಯ ವರ್ಗದಲ್ಲಿ ಸೇರಿ, ಕರ್ಮ ವಶ್ಯರಾಗಿರುವದರಿಂದ ಅವರಿಗೆಲ್ಲಾ ಮೇಲೆ ಹೇಳಿದ ವೊಂದೂ ಸಲ್ಲುವದಿಲ್ಲವೆಂಬ ಭಾವವೂ, **ಕಃ**, ಕಸ್ಯ, ಇತ್ಯಾದಿ ಶಬ್ದಗಳಿಂದ ಸೂಚಿ ತವು.

**ತಾತ್ಪರ್ಯಗಳು – "ಹಿರಣ್ಯ ಗರ್ಭಸ್ಸಮವರ್ತ ತಾಗ್ರೇ"** ಎಂಬುದಕ್ಕೆ **"ಅದ್ಭ್ಯಸ್ಸಂಭೂತ"** ವೆಂಬಿವೇ ಮೊದಲಾದದರೊಂದಿಗೆ ಐಕಕಂಠ್ಯವನ್ನು ಸ್ಥಾಪಿಸಿ ಶ್ರೀಮನ್ನಾರಾಯಣನೇ ಪರತತ್ವವೆಂದು ಸ್ಥಾಪಿಸಿದರೂ, ಚತುರ್ಮುಖನನ್ನೇ ಅಲ್ಲೇ **ಪ್ರಜಾಪತಿ** ಶಬ್ದವು ಬೋಧಿಸಿರುವುದರಿಂದಲೂ, ಹಾಗೆಯೇ **ಪುರುಷ** ಶಬ್ದವೂ ಚತುರ್ಮುಖನನ್ನೇ ಹೇಳುವುದರಿಂದಲೂ, **"ಅಂಭಸ್ಯಪಾರೇ"** ಎಂಬದರಾಂಬಿಸಿ ಹೇಳುವ ಅಂಭಸಿ ವಾಕ್ಯದಲ್ಲೂ **"ಪ್ರಜಾಪತಿಶ್ಚರತಿಗರ್ಭೇ ಅಂತಃ" "ಸ ನೋಬಂಧು ರ್ಜನಿತಾಸವಿಧಾತಾ", "ಸೂರ್ಯಾ ಚಂದ್ರಮಸೌ ಧಾತಾ ಯಥಾ ಪೂರ್ವ ಮಕಲ್ಪಯತ್"** ಎಂಬಲ್ಲೂ ಚತುರ್ಮುಖನನ್ನೇ ಬೋಧಿಸುವ ಹಾಗೆ ತೋರುವುದರಿಂದ, ಈ ಪದಗಳೂ ಬಹುಶಃ ಚತುರ್ಮುಖನನ್ನೇ ಬೋಧಿಸುತ್ತವೆ ಎಂದರೆ, ಹಿಂದೆಯೇ **ನ ಬ್ರಹ್ಮನೇಶಾನಃ –** ಬ್ರಹ್ಮೇಂದ್ರರು ಜಗತ್ಕಾರಣರಲ್ಲಾ ಎಂದೇ ನಿಷೇಧಿಸಲ್ಪಟ್ಟಿರುವುದರಿಂದ ಈ ಪೂರ್ವಪಕ್ಷವು ನಿಲ್ಲುವುದಿಲ್ಲವು, ಆದರೂ ಸಮಾಧಾನವನ್ನು ಹೇಳುಸೆವು. ಅಂಭಸಿಯಲ್ಲಿ **"ಯ ಮಂತ ಸ್ಸಮುದ್ರೇಕವಯೋ ವಯಂತಿ"** ಎಂಬುದರಿಂದ ಸಮುದ್ರಶಾಯಿತ್ವವನ್ನೂ **"ಯದೇಕ ಮವ್ಯಕ್ತ ಮನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್"** ಎಂಬುದರಿಂದ ಬ್ರಹ್ಮಾಂಡದಿಂದ ಆಚೀಇರುವ ನಿತ್ಯ ವಿಭೂತಿಯಲ್ಲಿರೋಣವನ್ನೂ, **"ಸರ್ವೇನಿಮೇಷಾಜಜ್ಞಿರೇ ವಿದ್ಯುತಃ ಪುರುಷಾದಧಿ"** – ವಿದ್ಯುತ್ತಿನ ವರ್ಣವುಳ್ಳ ಶರೀರವುಳ್ಳ ಪುರುಷತ್ವವನ್ನು, **"ಸ ಆಪಃ ಪ್ರದುಘೇ ಉಭೇ ಇಮೇ"** ಎಂಬುದರಿಂದ ಜಗತ್ಕಾರಣತ್ವವನ್ನೂ **"ಯ ಏನಂ ವಿದು ರಮೃತಾಸ್ತೇ ಭವಂತಿ"** ಎಂಬುದರಿಂದ ಮೋಕ್ಷಪ್ರಾಪ್ತಿ ಹೇತುತ್ವವನ್ನೂ, "ವಿಶ್ವತಶ್ಚಕ್ಷುರುತ ವಿಶ್ವತೋ ಮುಖಃ" ಎಂಬಿವೇ ಮೊದಲಾದವುಗಳಿಂದ ಪುರುಷಸೂಕ್ತದಲ್ಲಿ ಹೇಳಿದ ಮಹಾಪುರುಷ ಲಕ್ಷಣವನ್ನೆಲ್ಲಾ ಹೇಳಿದುದರಿಂದ, **ಈ ಪ್ರಜಾಪತಿ ಪುರುಷ** ಶಬ್ದಗಳಿಂದ ಪುರುಷಸೂಕ್ತ ಮಹಾಪುರುಷನಾದ ನಾರಾಯಣನೇ ಹೇಳಲ್ಪಟ್ಟನೆಂಬುದು ಸ್ಥಾಪಿತವು. ಚತುರ್ಮುಖನಾದ ಪ್ರಜಾಪತಿ ರುದ್ರಾದಿಗಳೆಲ್ಲಾ ನಾರಾಯಣನ ಕಾರ್ಯರೂಪ ಸೃಷ್ಟಿಯಿಂದ ಉತ್ಪನ್ನರು, ಅವನ ವಿಭೂತಿಗೆ ಸೇರಿ ಆತನಿಂದ ನಿಯಾಮ್ಯರು, ಕರ್ಮವಶ್ಯರು. "ಅದ್ಭ್ಯಸ್ಸಂಭೂತ" ವೆಂಬ ಅನುವಾಕದಲ್ಲೂ ಶ್ರೀಮನ್ನಾರಾಯಣನೇ ಉಪಪಾದಿತವು. **"ವೇದಾಹ ಮೇತಂ ಪುರುಷಂ ಮಹಾನ್ತಂ"** ಎಂಬ ವಾಕ್ಯಾರ್ಥವೇ ಇಲ್ಲಿಯೂ ಸೂಚಿತವು. ಹೀಗೆ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ನಾರಾಯಣನಿಗೆ **ಶ್ರೀಯಃ ಪತಿತ್ವವೇ** ಸ್ವರೂಪ ನಿರೂಪಕಧರ್ಮವೆಂದು ಅಲ್ಲಿಯೇ "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" ಎಂಬಲ್ಲಿ ಹೇಳಿರುವ ಲಿಂಗವನ್ನು **"ಕಶ್ಶ್ರೀಃ ಶ್ರಿಯಃ** ಎಂದಾರಂಭಿಸಿದ ಶ್ಲೋಕದಿಂದ ಸ್ಥಾಪಿಸುತ್ತಾರೆ.

**ಕಶ್ಶ್ರೀಶ್ರಿಯಃ- ಭರ್ತಾನಾಮುಪರಂ ನಾರ್ಯಾ ಭೂಷಣಂಭೂಷಣಾದಪಿ"** ಎಂದರೆ ಹೆಂಗಸು ಧರಿಸುವ ಎಲ್ಲಾ ಭೂಷಣಗಳಿಗಿಂತಲೂ ಅತ್ಯುತ್ತಮ ಭೂಷಣವು ಆಕೆಯ ಪತಿಯೇ ಎಂದು ಮಹರ್ಷಿಯು ಹೇಳಿರುವ ಹಾಗೆ ಲಕ್ಷ್ಮಿಗೆ ಅತಿಶಯದಾಯಕನು ನಾರಾಯಣನೇ ಎಂಬ ಭಾವವು. ಲಕ್ಷ್ಮಿಯು ಶ್ರೀ ಶಬ್ದದಿಂದ ಬೋಧಿತಳು. ಏಕಂದರೆ ನಾಲ್ಕು ಅರ್ಥಗಳುಳ್ಳ ಧಾತುಗಳಿಂದ ಆರು ಅರ್ಥಗಳಿಂದ ಆಕೆಯು ಉಪಪಾದಿತಳು. ಆ ಆರು ಅರ್ಥಗಳೂ **"ಶೃಣಾತಿನಿಖಿಲಾನ್ ದೋಷಾನ್ ಶ್ರೀಣಾತಿಚಗುಣೈ ರ್ಜಗತ್, ಶ್ರೀಯತೇಚಾಖಿಲಂ ನಿತ್ಯಂ ಶ್ರಯತೇಚ ಪರಂ ಪದಮ್। ಶ್ರಯಂತೀಂ ಶ್ರೀಯಮಾಣಾಂಚ ಶೃಣತೀಂ ಶೃಣ್ವತೀಮಪಿ"** ಇವುಗಳ ಅರ್ಥಗಳನ್ನು ದಾಸನು ಬರೆದಿರುವ ಚತು **ಶ್ಲೋಕಿ** ಶ್ರೀಸ್ತುತಿ ಮೊದಲಾದ ವ್ಯಾಖ್ಯಾನಗಳಲ್ಲಿ ಕಾಣಬಹುದು. ಲಕ್ಷ್ಮಿಯು **ತಾನಾಗಿಯೇ** ಪರಮಾತ್ಮನಿಗೆ ಶೇಷ ಭೂತಳಾಗಿದ್ದಾಳೆಂಬುದು **ವಿಷ್ವಕ್ಸೇನ ಸಂಹಿತೆಯಲ್ಲಿ** ವ್ಯಕ್ತವೆಂದು ಆ ಗ್ರಂಥಗಳಲ್ಲೇ ಉಪಪಾದಿತವು. ತಾನು ಶೇಷ ಭೂತಳೆಂದು. ಲಕ್ಷ್ಮಿಯೇ **"ಅಸಂದೇಶಾತ್ತು ರಾಮಸ್ಯತಪಸ ಶ್ಚಾನುಪಾಲ ನಾತ್"** (          ) ಎಂಬಲ್ಲೂ "ಅಮಿತಸ್ಯಹಿ ದಾತಾರಂ ಭರ್ತಾರಂ **ಕಾನು ಪೂಜಯೇತ್"** ಎಂಬಲ್ಲೂ ಹೇಳಿಕೊಂಡಿರುತ್ತಾಳೆ. ಇಲ್ಲಿ ಅವು ಅನುಸಂಧೇಯಗಳು ಹಾಗೆಯೇ ರುಕ್ಮಿಣಿಯು ತಾನು ಬರೆದ ಪತ್ರದಲ್ಲಿ, **"ಯಸ್ಯಾಂಘ್ರಿ ಪಙ್ಕಜರಜಸ್ನಪನಂ ಮಹಾನ್ತೋ ವಾಂಛಂತ್ಯು ಮಾಪತಿರಿವಾತ್ಮ ತಮೋ ಪಹತ್ಯೈ॥ ಯರ್ಹ್ಯಮ್ಬುಜಾಕ್ಷ ನ ಲಭೇತವಪ್ರಸಾದಮ್"** ಎಂಬಲ್ಲಿ ತಾನು ಶೇಷ ಭೂತಳಾಗಿ ಆತನನ್ನೇ ನಂಬಿರುವವಳೆಂಬ ಭಾವವನ್ನು ತೋರಿಸಿರುತ್ತಾಳೆ. ಆದುದರಿಂದ ನಾರಾಯಣನಿಗೆ ಲಕ್ಷ್ಮಿಪತಿತ್ವವೇ ಸ್ವರೂಪನಿರೂಪಕ ಧರ್ಮವು ಎಂಬ ಭಾವವು.

ಶ್ರೀ ನಾರಾಯಣ ಮುನಿಗಳು ಇದರ ವ್ಯಾಖ್ಯಾನದಲ್ಲಿ ಇತರರಿಂದ, ತಮ್ಮ ಸ್ವರೂಪ ಸ್ಥಿತಿ ಪ್ರವೃತ್ತಿಗಳಿಗಾಗಿಯೂ ಆಶ್ರಯಿಸಲ್ಪಡುವವಳಾದುದರಿಂದ, ಅವಳಿಗೂ ಆಶ್ರಯನು ಎಂದು ಹೇಳಿರುತ್ತಾರೆ.

ಪುರುಷ ಸೂಕ್ತದಲ್ಲೂ ತೈತ್ತರೀಯ ಅಂಭಸಿಯಲ್ಲೂ ಪ್ರಜಾಪತಿ ಶಬ್ದವೂ ನಾರಾಯಣ ವಾಚಿ ಶಬ್ದವೇ. ಶ್ರೀ ವ್ಯಾಸರೂ ಹಾಗೆಯೇ ಪ್ರಯೋಗಿಸಿರುತ್ತಾರೆ.- "ರಾಜಾಧಿರಾಜ ಸ್ಸರ್ವೇಷಾಂ ವಿಷ್ಣುರ್ಬ್ರಹ್ಮಮಯೋ ಮಹಾನ್। ಈಶ್ವರಂತಂ ವಿಜಾನೀಮ ಸ್ಸಪಿತಾಸ ಪ್ರಜಾಪತಿಃ (ಭಾರತ) ಇಲ್ಲಿ ವಿಷ್ಣುವೇ ಸರ್ವೇಶ್ವರನೆಂದು ಹೇಳಿ ಪ್ರಜಾಪತಿ ಶಬ್ದದಿಂದ ಭೋಧಿತನಾಗಿದ್ದಾನೆ.

ಆಗಲಿ, ಪುರುಷ ಸೂಕ್ತದಲ್ಲಿ ಹೇಳಿರುವ **ಪ್ರಜಾಪತಿ** ಶಬ್ದವು ಹೇಗೆ **ನಾರಾಯಣ** ಪರವು? ತೈತ್ತರೀಯದಲ್ಲಿ **ಪುರುಷ** ಶಬ್ದವು **"ಸವಾಏಷ ಪುರುಷೋಽ**

**ನ್ನರಸಮಯಃ**" ಎಂಬಲ್ಲಿ, ಹಾಗೂ "**ಪ್ರಕೃತಿಂ ಪುರುಷಂಚೈವ ವಿದ್ಧ್ಯ ನಾದೀ ಉಭಾವಪಿ**" ಎಂಬಲ್ಲೂ, ಪುರುಷ ಶಬ್ದವು ನಾರಾಯಣ ಪರವಲ್ಲ ವೆಂದು ತೋರುತ್ತದೆಯಲ್ಲಾ? ಎಂದರೆ, ಪುರುಷಸೂಕ್ತದಲ್ಲಿ ಹೇಳಿರುವ ಪುರುಷನು ಜಗತ್ಕಾರಣನಾದ ಪರಮ ಪುರುಷನು. ಹಾಗೆಯೇ "**ಪುರುಷಸ್ಯಹರೇಸ್ಸೂಕ್ತಂ ಸ್ವರ್ಗ್ಯಂಧನ್ಯಂ ಯಶಸ್ಕರಮ್**" ಎಂಬಲ್ಲಿ **ಪುರುಷ ಸೂಕ್ತ** ವೆಂದರೆ **ಹರಿಯ ಸೂಕ್ತ** ವೆಂದು ಹೇಳಲ್ಪಟ್ಟಿರುತ್ತದೆ. ಸಾಧಾರಣನಾದ ಚತುರ್ಮುಖನೂ ತೈತ್ತ ರೀಯ ಗೀತೆಗಳಲ್ಲಿ ಹೇಳಿರುವ ಪುರುಷನು ಜೀವಕೋಟಿಗೆ ಸೇರಿದವರಾಗಿ, "**ಸಹಸ್ರಶೀರ್ಷಾ ಪುರುಷ ಸ್ಸಹಸ್ರಾಕ್ಷ ಸ್ಸಹಸ್ರಪಾತ್**" ಆಗಲಾರನಷ್ಟೇ? ಮೋಕ್ಷಧರ್ಮದಲ್ಲೂ ಪುರುಷ ಸೂಕ್ತವೆಂದರೆ ಪರಮ ಪುರುಷ ಸೂಕ್ತವೆಂದೇ ಹೇಳಲ್ಪ ಟ್ಟಿರುತ್ತದೆ. "**ಇದಂ ಪುರುಷಸೂಕ್ತಂಹಿ ಸರ್ವವೇದೇಷು ಪಠ್ಯತೇ। ಋತಂ ಸತ್ಯಂ ಚ ವಿಖ್ಯಾತಂ ಋಷಿ ಸಿಂಹೇನ ಚಿನ್ತಿತಮ್**" ಎಂದು ಹೇಳಿರುವುದ ರಿಂದ, ಹಾಗೆ ವೇದಗಳಲ್ಲೆಲ್ಲಾ ಹೇಳಲ್ಪಟ್ಟಿರುವವರು ಯಾರೆಂಬ ವಿಷಯದಲ್ಲಿ "**ವೇದೈಶ್ಚ ಸರ್ವೈರಹ ಮೇವ ವೇದ್ಯಃ**" ಎಂದಿರುವುದರಿಂದ ಪುರುಷ ಸೂಕ್ತದ ಪುರುಷ ಶಬ್ದವು ನಾರಾಯಣನನ್ನೇ ಬೋಧಿಸುತ್ತದೆಂಬುದು ವ್ಯಕ್ತವು.

**ವ್ಯಾಸಸ್ಮೃತಿಯಲ್ಲಿ :—**

**"ನವಿಷ್ಣ್ವಾರಾಧ ನಾತ್ಪುಣ್ಯಂ ವಿದ್ಯತೇ ಕರ್ಮವೈದಿಕಮ್।**
**ತಸ್ಮಾದನಾದಿ ಮಧ್ಯಾಂತಂ ನಿತ್ಯಮಾರಾಧಯೇದ್ಧರಿಮ್।**
**"ತದ್ವಿಷ್ಣೋ" ರಿತಿಮನ್ತ್ರೇಣ ಸೂಕ್ತೇನ ಪುರುಷೇಣತು।**
**ನೈವಾಭ್ಯಾಂಸದೃಶೋ ಮನ್ತ್ರೋ ವೇದೇಷೂಕ್ತ ಶ್ಚತುರ್ಷ್ವಪಿ।**
**"ನಿವೇದಯೀತ ಸ್ವಾತ್ಮಾನಂ ವಿಷ್ಣಾವಮಲತೇಜಸಿ।**
**ತದಾತ್ಮಾ ತನ್ಮನಾ ಶಾನ್ತಃ ತದ್ವಿಷ್ಣೋಃ ಪರಮಂ ಪದಮ್।**

**ಶೌನಕೀಯಕಲ್ಪದಲ್ಲೂ.**

"**ಆದ್ಯಯಾ ವಾಹಯೇದ್ದೇವಂ ಋಚಾತು ಪುರುಷೋತ್ತಮಮ್**" ಎಂದು ಪುರುಷ ಸೂಕ್ತದ ಪ್ರಥಮ ಋಕ್ಕಿನಿಂದ ಪುರುಷೋತ್ತಮನ ಆವಾಹನೆಯನ್ನು ಮಾಡತಕ್ಕದ್ದೆಂದು ಹೇಳಿರುವದರಿಂದ ಇಲ್ಲಿ ಪುರುಷ ಶಬ್ದವಾಚ್ಯನಾಗಿರುವ ಪ್ರಜಾ ಪತಿಯು ಪುರುಷೋತ್ತಮನೆಂಬುದು ವ್ಯಕ್ತವು. ಮುಂದೆ "**ಸಹಸ್ರಶೀರ್ಷಂ ದೇವಂ**" ಎಂದಾರಂಭಿಸಿ ಹೇಳುವದರಲ್ಲಿ ಈ **ಪುರುಷ ಪ್ರಜಾಪತಿ** ಶಬ್ದಗಳು ನಾರಾಯಣನನ್ನೇ ಬೋಧಿಸುತ್ತವೆಂದು ವ್ಯಕ್ತವಾಗಿ ಹೇಳಲ್ಪಟ್ಟಿರುತ್ತವೆ. ಈ ಅಭಿಪ್ರಾಯವನ್ನು ಸುಬಾಲೋಪನಿಷತ್ತೂ ಸಮರ್ಥಿಸುತ್ತದೆ. ಹೇಗೆಂದರೆ "**ಚಕ್ಷುಶ್ಚ ದ್ರಷ್ಟವ್ಯಂಚ ನಾರಾಯಣಃ**" ಎಂದು ಸರ್ವಾತ್ಮಕತ್ವವನ್ನು ಹೇಳಿ, **ಪುರುಷ**

**ಏವೇದಗ್ಂ ಸರ್ವಮ್"** ಎಂದು ಪುರುಷ ಸೂಕ್ತ ವಚನಾದಿಂದ ಮುಗಿಸಿರುವದರಿಂದ, ಸೂಕ್ತದ **ಪುರುಷ** ಶಬ್ದವು ನಾರಾಯಣನನ್ನೇ ಬೋಧಿಸುತ್ತದೆ. **"ಭಗವಾನಿತಿ ಶಬ್ದೋಽಯಂ ತಥಾಪುರುಷ ಇತ್ಯಪಿ। ನಿರುಪಾಧೀಚವರ್ತೇತೇ ವಾಸುದೇವೇಸನಾತನೇ"** ಎಂಬ ಪುರಾಣವಚನವು ಇದನ್ನು ಸಮರ್ಥಿಸುತ್ತದೆ. ಸರ್ವೇಶ್ವರನೊಬ್ಬನೇ ಪುರುಷನು. ಅವನಿಂದುಂಟಾಗಿ, ಅವನಿಂದ ನಿಯಮಿಸಲ್ಪಡುವ ಜೀವ ಶಬ್ದದಿಂದ ಬೋಧಿತ ಪುರುಷರೆಲ್ಲಾ **ಸ್ತ್ರೀಪ್ರಾಯಮಿತರತ್** ಎಂಬಲ್ಲಿ ಹೇಳಿರುವ ಹಾಗೆ ಸ್ತ್ರೀಪ್ರಾಯರು.

ಆದರೆ, ಶ್ವೇತಾಶ್ವತರೋಪನಿಷತ್ತಿನಲ್ಲಿ "ವೇದಾಹಮೇತಂ" ಎಂಬ ಪುರುಷ ಸೂಕ್ತವಾಕ್ಯವೂ ಇರುವದರಿಂದ ಅಲ್ಲಿ ಪುರುಷ ಶಬ್ದದಿಂದ ಬೋಧಿಸಲ್ಪಟ್ಟವನು ರುದ್ರನೆಂದು ಹೇಳಿರುವದರಿಂದಲೂ, ಈ ಪುರುಷ ಸೂಕ್ತದಲ್ಲಿರುವ ಪುರುಷ ಶಬ್ದವು ರುದ್ರ ನನ್ನು ಬೋಧಿಸುತ್ತದೆ ಎಂದೇ ಏಕೆ ಹೇಳಕೂಡದು? ಎಂದರೆ ಅದಕ್ಕೆ ಸಮಾಧಾನವಾಗಿ ಇಲ್ಲಿ **"ಪರಮ ಸತ್ವ ಸಮಾಶ್ರಯಃ ಕಃ"** ಎಂಬುದರಿಂದ ಸಮಾಧಾನವನ್ನು ಹೇಳುತ್ತಾರೆ. ಸಂಸಾರಿಗಳಲ್ಲೂ ಸುಖಹೇತುವಾಗಿ ಸತ್ವಾಶ್ರಯತ್ವವು ಉಂಟು. ಅವುರಜಸ್ತಮೋ ಗುಣಗಳಿಂದ ಮಿಶ್ರವಾದುವು. ಅದನ್ನು ವ್ಯವಚ್ಛೇದ ಮಾಡಿ ಹೇಳುವದಕ್ಕಾಗಿ **ಪರಮಸತ್ವವೆಂಬ** ಪ್ರಯೋಗವು. ವಿಷ್ಣುವು ಶುದ್ಧಸತ್ವಕ್ಕೆ ಆಶ್ರಯನು. ರಾಜಸತಾಮಸ ಗುಣಗಳ ಸ್ಪೃಕ್ಕೇ ಇಲ್ಲವೆಂಬ ಭಾವವು. ರುದ್ರನಾದರೋ ತಮೋಗುಣ ವಿಶಿಷ್ಟನು; ವಿಷ್ಣುವು ಹಾಗಲ್ಲದೆ ಮೋಕ್ಷ ಪ್ರಾಪ್ತಿಯನ್ನು ಹೊಂದಿಸುವದಕ್ಕೆ ಉಪಯುಕ್ತವಾದ, ರಜಸ್ತಮೋ ಗುಣಗಳ **ಸ್ಪೃಕ್ಕೇ** ಇಲ್ಲದಸಾತ್ವಿಕ ಕಲ್ಯಾಣ ಗುಣಗಳಿಗೆ ಆಶ್ರಯಭೂತನು. ಇಂತವನು ರುದ್ರನೆಂದಿಗೂ ಆಗನು. ಆದುದರಿಂದ ಶ್ವೇತಾಶ್ವತರ ವಾಕ್ಯದಲ್ಲೂ **ಶಿವ ಮಹೇಶ್ವರಾದಿ** ಶಬ್ದಗಳೂ ಪರಮ ಪುರುಷನನ್ನೇ ಬೋಧಿಸುತ್ತವೆಂದು ಅಭಿಪ್ರಾಯ ಪಡುವವೇ ಯುಕ್ತವಾದುದು. ಮೈತ್ರಾವರಣೀಯೋ ಪನಿಷತ್ತಿನಲ್ಲಿ, ನಾರಾಯಣನಿಗೆ ಸತ್ವಪ್ರವರ್ತಕತ್ವವೂ, ಚತುರ್ಮುಖನಿಗೂ ರುದ್ರನಿಗೂ ರಜಸ್ತಮಃ ಪ್ರವರ್ತಕತ್ವವೂ ಹೇಳಲ್ಪಟ್ಟಿರುತ್ತವೆ. ಹಾಗೆಯೇ ವಾರಾಹ ಪುರಾಣ ವಚನವೂ ಇರುತ್ತದೆ. ಲೈಂಗ ಪುರಾಣದ ೧೪ನೆಯ ಅಧ್ಯಾಯದಲ್ಲಿ,

**ಹಿರಣ್ಯ ಗರ್ಭೋ ರಜಸಾ ತಮಸಾ ಶಂಕರಸ್ಸ್ವಯಮ್।**
**ಸತ್ವೇನ ಸರ್ವಗೋ ವಿಷ್ಣು ಸ್ಸರ್ವಾತ್ಮ ಸದಸನ್ಮಯಃ॥**

ವಿಷ್ಣುವು ಸತ್ವಗುಣಾ ವಿಷ್ಟನೆಂದು ಹೇಳಲ್ಪಟ್ಟಿರುತ್ತದೆ. ಈ ಪ್ರಕಾರವಾಗಿಯೇ ಇತರ ಪುರಾಣಗಳಲ್ಲೂ ಭಗವಚ್ಛಾಸ್ತ್ರದಲ್ಲೂ ಹೇಳಲ್ಪಟ್ಟಿರುತ್ತದೆ. **ಸಾತ್ವಿಕೈ ಸ್ಸೇವ್ಯತೇ ವಿಷ್ಣುಃ ತಾಮಸೈರೇವ ಶಂಕರಃ। ರಾಜಸೈಸ್ಸೇವ್ಯತೇ ಬ್ರಹ್ಮಾ ಸಂಕೀರ್ಣೈಸ್ತು ಸರಸ್ವತೀ"** ಇತ್ಯಾದಿಗಳಿವೆ.

**ಪರಮ ಸತ್ತ್ವಸಮಾಶ್ರಯಃ** ಎಂಬುದಕ್ಕೆ ಇನ್ನೊಂದು ವಿಧವಾಗಿಯೂ ಅರ್ಥವನ್ನು ಹೇಳಬಹುದು.– **"ಸ್ವಸತ್ತಾಭಾಸಕಂ ಗುಣಸತ್ತ್ವಾದ್ವಿಲಕ್ಷಣಮ್"** ಎಂಬಲ್ಲಿ ಹೇಳಿರುವಹಾಗೆ ಈ ಪ್ರಕೃತಿಮಂಡಲದಲ್ಲಿರುವ ಸತ್ತ್ವಗುಣವು ಸ್ವಲ್ಪ ಸ್ವಲ್ಪ ರಾಜಸತಾಮಸಗುಣಗಳಿಂದ ಸೇರಿರುವಹಾಗೆ ಇಲ್ಲದೆ, ಸ್ವಯಂಪ್ರಕಾಶವಾದ ಶುದ್ಧ ಸತ್ತ್ವರೂಪವಾದ ಅಪ್ರಾಕೃತ ದಿವ್ಯ ಮಂಗಳ ವಿಗ್ರಹವನ್ನು ಆಶ್ರಯಿಸಿದವನೆಂಬ ಭಾವವು. ದಿವ್ಯ ವೈಕುಂಠವೆಲ್ಲವೂ ಶುದ್ಧ ಸತ್ತ್ವಮಯವಾದುದು, ಅಲ್ಲಿ ಪರ ವಾಸುದೇವ ದಿವ್ಯ ಮಙ್ಗಳ ವಿಗ್ರಹವನ್ನೂ, ಹಾಗೆಯೇ ಎಲ್ಲಾರೂಪಗಳನ್ನು ಹೊಂದಿರುವಾಗಲೂ ರಹಸ್ಯಾಮ್ನಾಯದಲ್ಲಿ ಹೇಳಿರುವಹಾಗೆ. ಶುದ್ಧ ಸತ್ತ್ವವನ್ನು ಆಶ್ರಯಿಸಿದವನು; ಎಂದೂ ಅರ್ಥವಾಗುತ್ತದೆ. ಸತ್ತ್ವಪ್ರವರ್ತಕತ್ವವೂ ಇದರಿಂದ ಹೇಳಲ್ಪಟ್ಟಿತು.

ಆಗಲಿ, ಪುರುಷಸೂಕ್ತದಲ್ಲಿ **"ಆದಿತ್ಯವರ್ಣಂ"** ಎಂಬ ಪ್ರಯೋಗವಿರುವುದರಿಂದಲೂ, **"ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋದೃಶ್ಯತೇ"** ಸೂರ್ಯಮಂಡಲದಲ್ಲಿ ಪುರುಷನಿದ್ದಾನೆ ಎಂದು ಪುರುಷ ಶಬ್ದಪ್ರಯೋಗ ವಿರುವುದರಿಂದಲೂ, ಮನುವು **"ಪ್ರಶಾಸಿತಾರಂ ಸರ್ವೇಷಾಂ ಅಣೀಯಾಂಸ ಮಣೀಯಸಾಮ್। ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತಂ ಪುರುಷಂ ಪರಮ್॥** ಎಂಬಲ್ಲಿ **ರುಕ್ಮಾಭಂ** ಎಂಬ ಪ್ರಯೋಗ ವಿರುವದರಿಂದಲೂ, **"ಅಸಾವಾದಿತ್ಯೋ ಬ್ರಹ್ಮ"** ಎಂಬ ಹೇಳಿಕೆಯಿಂದಲೂ ಪುರುಷ ಸೂಕ್ತವು ಆದಿತ್ಯನನ್ನು ಕುರಿತದ್ದು ಎಂದು ಪೂರ್ವಪಕ್ಷವನ್ನು ತಂದರೆ, ಅದಕ್ಕೂಕೂಡ ಸಮಾಧಾನವು, ಶ್ರಿಯಃಪತಿತ್ವಲಿಂಗದಿಂದಲೇ ಉಂಟಾದರೂ, ಛಾಂದೋಗ್ಯದಲ್ಲಿರುವ ಸುಪ್ರಸಿದ್ಧವಾದ ಲಿಂಗವನ್ನು ಹೇಳಿ ಆ ಪೂರ್ವಪಕ್ಷವನ್ನು ನಿರಾಕರಿಸುವದಕ್ಕಾಗಿ **ಪುಂಡರೀಕನಯನಃ ಕಃ** ಎಂದು ಹೇಳಿದರು. ಇಲ್ಲಿ ಹೇಳಿರುವ ಪುಂಡರೀಕನಯನವು ವಿಲಕ್ಷಣವಾಗಿ ಪರಮಾತ್ಮನಲ್ಲಿ ಮಾತ್ರವೇ ಉಂಟೇವಿನಾ, ಇತರ ಜೀವಾತ್ಮರಲ್ಲಿ ಇಲ್ಲವು. ಈ ಪುಂಡರೀಕನಯನವು, ಸ್ವಾಮಿಯ ದಿವ್ಯಮಙ್ಗಳ ವಿಗ್ರಹವತ್ತ್ವವನ್ನು ಸೂಚಿಸುತ್ತದೆ. **ಛಾಂದೋಗ್ಯ ೧ನೆಯ ಅಧ್ಯಾಯದ ೬ ನೆಯ ಖಂಡದಲ್ಲಿ "ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರು ಹಿರಣ್ಯಕೇಶ ಆಪ್ರಣ ಖಾತ್ ಸರ್ವಏವಸುವರ್ಣಃ"** ಎಂದಿರುವದರಿಂದ, ಇಲ್ಲಿ ಆದಿತ್ಯ ಶಬ್ದವೂ ಪುರುಷ ಶಬ್ದವೂ ಇರುವದರಿಂದಲೂ, ಈ ಶಬ್ದಗಳೂ ಪುರುಷ ಸೂಕ್ತದಲ್ಲೂ ಇರುವದರಿಂದಲೂ ಆದಿತ್ಯನೆಂಬ ಪುರುಷನಾದ ಜೀವಾತ್ಮನೇ ಹೇಳಲ್ಪಟ್ಟನೆಂಬುದು ಪೂರ್ವಪಕ್ಷವು. ಇದು **"ಅನ್ತಸ್ತದ್ಧರ್ಮೋಪದೇಶಾತ್"** ಎಂಬ ಸೂತ್ರದಲ್ಲಿ ಉಪಪಾದಿಸಲ್ಪಟ್ಟು ಖಂಡಿಸಲ್ಪಟ್ಟಿರುತ್ತದೆ. ಈ ಸೂತ್ರಾಭಿಪ್ರಾಯವೇನೆಂದರೆ.– ಈ ಮೇಲಿನ ಛಾಂದೋಗ್ಯವಾಕ್ಯದಲ್ಲಿ ಹೇಳಿರುವ ಪುರುಷನು

ಪರಮ ಪುರುಷನೇವಿನಾ ಜೀವಾತ್ಮನಾದ ಸೂರ್ಯನಲ್ಲವು, ಏಕೆಂದರೆ **ಅಸ್ತಿ:**– **"ಏಷೋಽನ್ತರಾದಿತ್ಯೇ"** ಎಂಬಲ್ಲಿ ಆದಿತ್ಯನಿಗೆ ಅನ್ತರಾತ್ಮವಾಗಿರುವವನೂ, ಮತ್ತು **"ಯ ಏಷೋಽನ್ತರಕ್ಷಿಣೀ ದೃಶ್ಯತೇ"** (ಛಾ. ೧. ೬ ) ಎಂಬಲ್ಲಿ ಕಣ್ಣಿನಲ್ಲಿರುವವನೂ ಪರಮಾತ್ಮನೇ ಸರಿ; ಏಕೆಂದರೆ **ತದ್ಧರ್ಮೋಪದೇಶಾತ್**– ಪರಮಾತ್ಮಧರ್ಮಗಳೇ ಉಪದೇಶಿಸಲ್ಪಟ್ಟಿರುವದರಿಂದ; ಆಧರ್ಮಗಳು ಯಾವುವು? ಎಂದರೆ ಅಪಹತಪಾಪ್ಮತ್ವ ಸರ್ವಲೋಕ ನಿಯನ್ತೃತ್ವ **"ತಸ್ಯಯಥಾ ಕಪ್ಯಾಸಂಪುಂಡರೀಕ ಮೇವ ಮಕ್ಷಿಣೀ"** ಎಂದು ಪುಂಡರೀಕನಯನದಿಂದ ಹೇಳಲ್ಪಟ್ಟ ದಿವ್ಯಮಙ್ಗಳ ವಿಗ್ರಹತ್ವವು; ಇಂತಹ ಧರ್ಮಗಳು ಇದರೊಂದಿಗೆ ಉಪದೇಶಿಸಲ್ಪಟ್ಟಿರುವದರಿಂದ **"ಗತ್ವಾಗತ್ವಾನಿವರ್ತ್ತಂತೇ ಚಂದ್ರ ಸೂರ್ಯಾದಯೋ ಗ್ರಹಾಃ"** ಎಂಬಲ್ಲಿ ಹೇಳಲ್ಪಟ್ಟಿರುವ ಜೀವನಲ್ಲವು; ಪರಮ ಪುರುಷನ ಧರ್ಮಗಳೇ ಉಪದೇಶಿಸಲ್ಪಟ್ಟಿರುವದರಿಂದ. ಆದುದರಿಂದ ಪುರುಷಸೂಕ್ತ ಪ್ರೋಕ್ತ ಪುರುಷನು ಜೀವನಾದ ಆದಿತ್ಯನಲ್ಲವು. ಪುಂಡರೀಕನಯನನಾದ ಪರ ಮಾತ್ಮನೇ ಎಂದು ಬೋಧಿಸುವದಕ್ಕಾಗಿ **ಪುಂಡರೀಕನಯನಃ ಕಃ** ಎಂದು ಮಹಾ ಪ್ರಾಜ್ಞರುಗಳು ಈ ಏಳು ಅಕ್ಷರಗಳಿಂದ ಹೇಳಿದ ಪ್ರಯೋಗವು ಇಷ್ಟು ವಿಸ್ತರವಾದ ಅರ್ಥ ಉಳ್ಳದ್ದು. ಶ್ರೀನಿಗಮಾಂತ ದೇಶಿಕರಂತಹ ವ್ಯಾಖ್ಯಾತಾ ಇಲ್ಲದಿದ್ದರೆ ಅಭಿ ಪ್ರಾಯವು ಗೂಢವಾಗಿಯೇ ಇದ್ದು ಹೋಗುತ್ತಿತ್ತು. ಈ ಪುಂಡರೀಕನಯನತ್ವವು ಮೇಲಿನ ಛಾಂದೋಗ್ಯ ಶ್ರುತಿಯಲ್ಲಿ ಉಪಪಾದಿತವು:– "ತಸ್ಯಯಥಾ ಕಪ್ಯಾಸಂ ಪುಂಡರೀಕಮೇವ ಅಕ್ಷಿಣೀ" ಇದಕ್ಕೆ ಶ್ರೀ ಶಂಕರಾಚಾರ್ಯರು ಹೇಳಿದ ಕಪಿಯ ಆಸನದ ಹಾಗೂ ಪುಂಡರೀಕದ ಹಾಗೂ ಇರುವ ಪರಮ ಪುರುಷನ ಕಣ್ಣುಗಳೆಂಬುದು ನಮ್ಮ ಶ್ರೀಯತಿವರ್ಯರಿಗೆ ಸರಿಬೀಳದೆ ದ್ರಮಿಡಕಾರರು ಹೇಳಿರುವ ಆರು ವಿಧ ಅರ್ಥ ಗಳಲ್ಲಿ ಮೂರು ಅರ್ಥಗಳನ್ನು ಮುಖ್ಯವಾಗಿ ತೆಗೆದುಕೊಂಡು **ಕಂಪಿಬತೀತಿ** – ಕಪಿಃ ಎಂದರೆ ಸೂರ್ಯನು ಎಂದರ್ಥಮಾಡಿ ಸೂರ್ಯನ ಕಿರಣಗಳಿಂದ ಅರಳಿದ ಪುಂಡರೀಕದ ಹಾಗೆಇರುವ ಕಣ್ಣುಳ್ಳವನೆಂಬ ಅರ್ಥವನ್ನೂ, ಅಥವಾ, ಕಂ ಎಂದರೆ ಉದಕವನ್ನು, ಪಿಬತಿ– ಕುಡಿಯುವ ಕಮಲದ ನಾಳವು, ಅವರಲ್ಲಿ ಅರಳಿರುವ ಕಮಲದಳದ ಹಾಗಿರುವ ಕಣ್ಣುಳ್ಳವನೆಂಬ. ಅಥವಾ, **ಕಪ್ಯಾಸಂ** – ಉದಕದ ಮೇಲೆಯೇ ಇರುವ ಎಂದರೆ ನಾಳದೊಂದಿಗಿರುವ ಕಮಲವು ಬಹುರಮಣೀಯವಾದುದರಿಂದ ಹಾಗಾಗಲಿ ಅರ್ಥವು. ಈ ಮೂರರ್ಥಗಳನ್ನೂ ಒಟ್ಟುಗೂಡಿಸಿ ಬಹುಸ್ವಾರಸ್ಯ ವಾಗಿ ಶ್ರೀ ಯತಿರಾಜರು ತಮ್ಮ ವೇದಾರ್ಥಸಂಗ್ರಹಗ್ರಂಥದಲ್ಲಿ ಈ ಶ್ರುತಿಯನ್ನು ವ್ಯಾಖ್ಯಾನಮಾಡಿರುವದು ಹೇಗೆಂದರೆ– **"ಗಂಭೀರಾಂಭ ಸಮುದ್ಭೂತ ಸಮೃಷ್ಟ ನಾಳರವಿಕರ ವಿಕಸಿತ ಪುಂಡರೀಕದಳಾಮಲಾಯತೇಕ್ಷಣಃ"** ತುಂಬಾ ಆಳ ವಾದ ನೀರಿನಲ್ಲಿ ಹುಟ್ಟಿ ಮನೋಹರವಾದ ನಾಳದಲ್ಲೇಇದ್ದು ಬೆಳಗಿನ ಸೂರ್ಯ ಕಿರಣದಿಂದ ವಿಕಸಿತವಾದ ಪುಂಡರೀಕದ ಎಲೆಯಹಾಗೆ ಶುದ್ಧವಾದ ವಿಶಾಲ

ವಾದ ಕೃಪಾಸೂಚಕ ಕಣ್ಣುಳ್ಳವನೆಂಬರ್ಥವು. ಹೀಗೆ ಇರುವ ಕಣ್ಣೂ ದಿವ್ಯಮಙ್ಗಳ ವಿಗ್ರಹವೂ ಜೀವಕೋಟಿಗೆ ಸೇರಿದ ಆದಿತ್ಯಾದಿಗಳಿಗಿಲ್ಲವೆಂಬ ಭಾವವು. ಇದರಿಂದ ಸ್ವಾಮಿಯ ಪರಿಪೂರ್ಣತ್ವವೂ, ಅನುಗ್ರಹ ಶೀಲತ್ವವೂ ದ್ಯೋತಿತವು. ಈ ಆದಿತ್ಯನ ಕಣ್ಣುಗಳಿಂದ ಸೂರ್ಯನು ಉತ್ಪನ್ನನಾದನೆಂದು **"ಚಕ್ಷೋ ಸ್ಸೂರ್ಯೋ ಅಜಾಯತ"** ಎಂದು ಹೇಳಿರುವದರಿಂದ ಸೂರ್ಯನೇ ಪುರುಷಸೂಕ್ತದಲ್ಲಿ ಹೇಳಲ್ಪಡಲಿಲ್ಲವೆಂಬುದು ಸಿದ್ಧವು. ಹಾಗೆಯೇ **"ಸೂರ್ಯಾ ಚಂದ್ರಮಸೌ ಧಾತಾಯಥಾ ಪೂರ್ವಮಕಲ್ಪಯತ್" "ಯೇನ ಸೂರ್ಯಸ್ತಪತಿ" "ನತತ್ರಸೂರ್ಯೋ ಭಾತಿ" ಯಸ್ಯಾದಿತ್ಯಶ್ಶರೀರಂ"** ಇತ್ಯಾದಿ ಪ್ರಯೋಗಗಳಿಂದಲೂ ಪುರುಷಸೂಕ್ತದ ಪುರುಷನು ಸೂರ್ಯನಲ್ಲವು, ಶ್ರೀಮನ್ನಾರಾಯಣನೇ ಆದುದರಿಂದಲೇ **ಪುಂಡರೀಕನಯನಃ** ಎಂಬ ಪ್ರಯೋಗವು.

ಈ ಪುಂಡರೀಕ ನಯನತ್ವದ ವಿಷಯದಲ್ಲಿ ಒಂದು ಇತಿಹಾಸವೂಉಂಟು. ಶ್ರೀ ಕೃಷ್ಣನ ಕಣ್ಣಿನ ಸೊಬಗಿನಿಂದ ಅನೇಕರು ಆಕರ್ಷಿಸಲ್ಪಟ್ಟಿರುವರು; ಗೋಪಿಯರೆಲ್ಲಾ ಹಿಂದಿನ ಜನ್ಮದಲ್ಲಿ ಋಷಿಗಳಾಗಿದ್ದುದರಿಂದ, ಆತನ ಕಣ್ಣಿನ ಲಾವಣ್ಯದಿಂದ ಮೋಹಿತರಾಗಿ ಒಂದುಕ್ಷಣಕೂಡ ಆತನನ್ನು ನೋಡದಿರುವದನ್ನು ಸಹಿಸರು. ಆದುದರಿಂದ ಗೋಪಿಕಾಗೀತೆಯಲ್ಲಿ ರೆಪ್ಪೆಪಾಟದಿಂದ ಒಂದುಕ್ಷಣಕಾಲ ಶ್ರೀಕೃಷ್ಣನನ್ನು ನೋಡುವುದಕ್ಕೆ ಭಂಗ ಬಂತಲ್ಲಾ ಎಂದು ಚತುರ್ಮುಖನು ಮಂದ ಬುದ್ಧಿಯುಕ್ತನು ಎಂದು **"ಜಡ ಉದೀಕ್ಷತಾಂ ಪಕ್ಷ್ಮಕೃದ್ದೃಶಾಮ್"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಹೀಗೆಯೇ ಎಲ್ಲಾ ಅವತಾರ ಶರೀರಗಳೂದಿವ್ಯ ಮಙ್ಗಳ ವಿಗ್ರಹಗಳಾದುದರಿಂದ ಶ್ರೀರಾಮಚಂದ್ರ ಪ್ರಭುವನ್ನು ಹೇಳುವಾಗ ಮಹರ್ಷಿಯು **"ರಾಮಂ ರಾಜೀವ ಲೋಚನಮ್"** ಎಂದೇ ಪ್ರಯೋಗಿಸಿರುತ್ತಾರೆ. ಹಾಗೆಯೇ ಮಾರ್ಕಂಡೇಯರು ಶ್ರೀಕೃಷ್ಣನ ಪುಂಡರೀಕನಯನವನ್ನು ಕಂಡು ಮೋಹಿತರಾಗಿ ಪಾಂಡವರಿಗೆ ವನವಾಸದಲ್ಲಿರುವಾಗ ಹೇಳುತ್ತಾರೇನೆಂದರೆ.— ಪ್ರಳಯದಲ್ಲಿ ನಾನು ಶ್ರೀಹರಿಯನ್ನು ಕಂಡಿದ್ದೆನು; ಸ್ವಮಾಹಾತ್ಮ್ಯೆಯನ್ನೆಲ್ಲಾ ನನಗೆ ಉಪದೇಶಿಸಿದನು. ಆತನ ಕಣ್ಣಿನ ಚಂದವನ್ನು ನೋಡಿ ನನ್ನ ಕಣ್ಣು ಹಿಂತಿರುಗಲಿಲ್ಲವು. ಈಗ ಈ ಶ್ರೀಕೃಷ್ಣನ ಕಣ್ಣಿನ ಲಾವಣ್ಯಾತಿಶಯವೂ ಆ ಪ್ರಳಯ ಕಾರಣನಾದ ಶ್ರೀಹರಿಯ ಕಣ್ಣಿನ ಸೌಂದರ್ಯವೂ ಒಂದೇಯಾಗಿರುವುದರಿಂದ ನಾನು ನಿಸ್ಸಂದೇಹವಾಗಿ ಶ್ರೀಕೃಷ್ಣನೇ ಪರತತ್ವವೆಂದು ನಿಮಗೆ ಹೇಳುವೆನು; **"ಯಸ್ಸ ದೇವೋ ಮಯಾದೃಷ್ಟಃ ಪುರಾ ಪದ್ಮಾಯತೇಕ್ಷಣಃ। ಸಏವ ಪುರುಷವ್ಯಾಘ್ರ ಸಂಬಂಧೀತೇ ಜನಾರ್ದನಃ" ಸರ್ವೇಷಾಮೇವ ಭೂತಾನಾಂ ಪಿತಾ ಮಾತಾಚ ಮಾಧವಃ। ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ"** ನಾನು ಪ್ರಳಯದಲ್ಲಿ ಕಂಡ ಪುಂಡರೀಕನಯನನವೇ, ಒಧರ್ಮರಾಯನೇ

ಈಗ ನಿನಗೆ ನೆಂಟನಾಗಿ ಅವತರಿಸಿರುವ ಪುರಮ ಪುರುಷನಾದ ಶ್ರೀಕೃಷ್ಣನು. ಈತನೇ ಎಲ್ಲಾ ಜೀವರಾಶಿಗೂ ತಂದೆ ತಾಯಿಯಾಗಿರುವ ಶ್ರಿಯಃ ಪತಿಯು. ಈತನನ್ನು ನೀವು ಉಪಾಯನನ್ನಾಗಿಯೂ ರಕ್ಷಕನಾಗಿ ಪ್ರಾಪ್ಯನಾಗಿರುವವ ನನ್ನಾಗಿಯೂ, ಭಾವಿಸಿ. ಓ ಪುರುಷ ಶ್ರೇಷ್ಠರಾದ ಪಾಂಡವರುಗಳಿರಾ ಆತನಲ್ಲಿ ಶರಣಾಗತಿಯನ್ನು ಅನುಷ್ಠಿಸಿರಿ ಎಂದು ಉಪದೇಶಿಸಿದರು. ಆಗ "**ಏವ ಮುಕ್ತಾ ಸ್ತೇ ಪಾರ್ಥಾಃ ಯಮೌ ಚ ಪುರುಷರ್ಷಭೌ। ದ್ರೌಪದ್ಯಾ ಸಹಿತಾಸ್ಸರ್ವೇ ನಮಶ್ಚಕ್ರು ರ್ಜನಾರ್ದನಮ್॥** ಎಂದು ಮಾರ್ಕಂಡೇಯರಿಂದ ಉಪದೇಶಿಸ ಲ್ಪಟ್ಟವರಾಗಿ, ಪಂಚಪಾಂಡವರೂ ದ್ರೌಪದಿಯೊಂದಿಗೆ ಶ್ರೀಕೃಷ್ಣನಲ್ಲಿ ಶರಣಾಗತಿ ಯನ್ನನುಷ್ಠಿಸದರೆಂಬ ಇತಿಹಾಸವು ಈ **ಪುಂಡರೀಕನಯನತ್ವವನ್ನು** ಸ್ವಾರಸ್ಯ ವಾಗಿ ಸಮರ್ಥಿಸುತ್ತದೆ. ಆದುದರಿಂದ ಪುರುಷಸೂಕ್ತವು ಶ್ರೀಮನ್ನಾರಾಯಣ ಪರವೆಂಬುದು ಸಿದ್ಧವು. ಆತನೇ ಪರತತ್ವವು.

ಚತುರ್ಮುಖ ಬ್ರಹ್ಮನು ಸರ್ವೇಶ್ವರನ ಪುತ್ರನು, ಆತನ ಮಗನು ರುದ್ರನು. ಹೀಗಿದ್ದರೂ ಈಶನೆಂದೂ ಈಶ್ವರನೆಂದೂ ಮಹೇಶ್ವರನೆಂದೂ ಹೀಗೆಲ್ಲಾ ಪ್ರಯೋಗ ಗಳಿರುವುದರಿಂದ ಈತನೇ ನಿರ್ವಿಶೇಷ ಚಿನ್ಮಾತ್ರವೆಂಬ ಭಾವನೆಯಿಂದ ಪರತತ್ವ ವೆಂದು ಕೆಲವರು ಅಭಿಪ್ರಾಯಪಡುವರು. ಆ ಅಭಿಪ್ರಾಯವನ್ನು ನಿರಾಕರಿಸುವ ದಕ್ಕಾಗಿ ಮುಂದೆ **ಪುರುಷೋತ್ತಮಃ ಕಃ** ಎಂದು ಪ್ರಯೋಗಿಸಿರುತ್ತಾರೆ. ಆತನೇ ಪುರುಷೋತ್ತಮನಾಗಿ ಆತನಿಗೆ ಸಮರೂ ಅಧಿಕರೂ ಇನ್ನುಯಾರೂ ಇಲ್ಲವೆಂದು ಶ್ರುತಿಯೂ ಹೇಳುತ್ತದೆ. ಇದು ಗೀತೆಯಲ್ಲಿ ೧೫ ನೆಯ ಅಧ್ಯಾಯದ ೧೬, ೧೭, ೧೮ ನೆಯ ಶ್ಲೋಕಗಳಲ್ಲಿ ಪುರುಷೋತ್ತಮತ್ವವನ್ನು ಶ್ರೀ ಕೃಷ್ಣಭಗವಾನರವರು ಉಪದೇಶಿಸುವ ಪ್ರಕರಣದಲ್ಲಿ ಸ್ಥಾಪಿತವು. ಆಶ್ಲೋಕಗಳನ್ನು ನರಾಂಬರಿಸಿ— ಆತ್ಮರುಗಳನ್ನು ಅಲ್ಲಿ ವಿಭಾಗಿಸಿ ಹೇಳರುತ್ತಾರೆ, "**ದ್ವಾವಿಮೌ ಪುರುಷೌ**" ಎಂಬ ಕ್ಷರ ಅಕ್ಷರ ಎಂದು ಜೀವಾತ್ಮರನ್ನು ವಿಭಾಗಿಸಿಹೇಳಿ, ಕ್ಷರರು ಬದ್ಧಾತ್ಮ ರೆಂದೂ, ಅಕ್ಷರರು ಸೃಷ್ಟಿಗೆ ಸೇರದ ಮುಕ್ತ ನಿತ್ಯರೆಂದೂ, ಹೀಗೆ ತ್ರಿವಿಧ ಜೀವಾತ್ಮರನ್ನು ಹೇಳಿ, ಮುಂದೆ **ಉತ್ತಮಃ ಪುರುಷಸ್ತ್ವನ್ಯಃ** ಎಂದು ಅವರು ಗಳಿಗಿಂತ ಪುರುಷೋತ್ತಮನಾದ ತನ್ನ ಉತ್ಕರ್ಷತೆಯನ್ನು ಹೇಳಿರುತ್ತಾರೆ. ಈ ಗೀತಾ ಶ್ಲೋಕದಲ್ಲಿ **ಪರಮಾತ್ಮೇತ್ಯುದಾಹೃತಃ** ಎಂದು ಎಲ್ಲರ ಹೃದಯಗುಹ ಪ್ರವೇಶಮಾಡಿರುವ ಭಾವವು, "**ತಸ್ಯಾಃ ಶಿಖಾಯಾಮಧ್ಯೇ ಪರಮಾತ್ಮಾ ವ್ಯವ ಸ್ಥಿತಃ**" ಎಂಬ ಪ್ರಯೋಗವನ್ನು ಸೂಚಿಸುತ್ತದೆ. ಮುಂದೆ "**ಯೋ ಲೋಕ ತ್ರಯ ಮಾವಿಶ್ಯ**" ಎಂಬುದರಿಂದ "**ಯಚ್ಚ ಕಿಂಚ ಜ್ಜಗತ್ಯಸ್ಮಿನ್ದೃಶ್ಯತೇ**" ಎಂಬುದು ವ್ಯಾಖ್ಯಾತವು. **ಬಿಭರ್ತಿ** ಎಂಬುದರಿಂದ ಸರ್ವಾಧಾರತ್ವವು ಹೇಳಲ್ಪಟ್ಟು "**ವಿಷ್ಣು ಸಂಜ್ಞಂ ಸರ್ವಾಧಾರಂ ಧಾಮ**" "**ಏಷ ಸೇತು ರ್ವಿಧರಣ ಏಷಾಂ**

**ಲೋಕಾನಾಂ ಅಸಂಭೇದಾಯ"** ಎಂಬ ಪ್ರಮಾಣಗಳ ಅರ್ಥವು ಹೇಳಲ್ಪಟ್ಟಿತು. **ವ್ಯಾಪ್ಯನಾರಾಯಣ ಸ್ಸ್ಥಿತಃ** ಎಂಬ ಪುರುಷ ಸೂಕ್ತವಾಕ್ಯವು **"ಅಂತಃ ಪ್ರವಿಷ್ಟಶ್ಶಾಸ್ತಾ"** ಇತ್ಯಾದಿ ಪ್ರಮಾಣಾನುಸಾರವಾಗಿ **ಅವ್ಯಯ ಈಶ್ವರಃ** ಎಂಬುದರಿಂದ ವ್ಯಾಖ್ಯಾತವು. **ಅವ್ಯಯ** ಶಬ್ದದಿಂದ **ಶಾಶ್ವತಂ ಶಿವ ಮಚ್ಯುತಂ** ಈಶ್ವರನಾಗ ಬೇಕಾದರೆ **ವ್ಯಾಪನಾತ್ ಭರಣಾ ತ್ಸ್ವಾಮ್ಯಾತ್** ಎಂದು ಯಾಮುನ ಮುನಿಗಳೇ ಗೀತಾರ್ಥ ಸಂಗ್ರಹದಲ್ಲಿ ಹೇಳಿರುವ ಈ ಮೂರೂ ಪುರುಷಸೂಕ್ತ ದಲ್ಲೇ ಹೇಳಿರುವದರಿಂದ ಈಶ್ವರನು. ಇದು **ಲೋಕೇ ವೇದೇಚ ಪ್ರಥಿತಃ** ಸ್ಮೃತಿಶ್ರುತಿಗಳಲ್ಲಿ ಈಶ್ವರನೆಂದು ಹೇಳಲ್ಪಟ್ಟಿರುವವನು. **"ಪರಂಜ್ಯೋತಿರುಪ ಸಂಪದ್ಯ ಸ್ವೇನರೂಪೇಣಾಭಿ ನಿಷ್ಪದ್ಯತೇ ಸ ಉತ್ತಮ ಪುರುಷಃ"** ಎಂಬ ಶ್ರುತಿಯೂ, **"ಅಂಶಾವತಾರಂ ಪುರುಷೋತ್ತಮಸ್ಯ ಹ್ಯನಾದಿ ಮಧ್ಯಾಂತ ಮಜಸ್ಯವಿಷ್ಣೋಃ"** ಎಂಬ ಸ್ಮೃತಿಯೂ ಅನುಸಂಧೇಯವು. ಆದುದರಿಂದ ಪುರುಷಸೂಕ್ತದ ಪುರುಷ ವಾಚ್ಯನಾದ ಶ್ರೀಮನ್ನಾರಾಯಣನು ಪುರುಷೋತ್ತಮನು. ಆದುದರಿಂದ **"ನಿತ್ಯೋನಿತ್ಯಾನಾಂ"** ಎಂಬ **"ದ್ವಾಸುಪರ್ಣಾ"** ಎಂಬ **"ದ್ವಾವಜಾ ವೀಶಾ ನೀಶೌ"** ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವ, ಎರಡು ವಿಧವಾದ ಆತ್ಮರೆಂದು ಜೀವಾತ್ಮ ಪರಮಾತ್ಮ ಭೇದವು ಉಪಪಾದಿತವು. ಜೀವಾತ್ಮನನ್ನು ಇಪ್ಪತ್ತೈದನೆಯ ತತ್ವವೆಂದೂ, ಪರಮ ಪುರುಷನನ್ನು ಇಪ್ಪತ್ತಾರನೆಯ ತತ್ವ ವೆಂದೂ, ಒಂದರಿಂದ ೨೪ ತತ್ವಗಳು ಪ್ರಕೃತಿಯ ಪ್ರಭೇದ ತತ್ವಗಳೆಂದೂ ಶ್ರೀವ್ಯಾಸ ಮಹರ್ಷಿಯು ಹೇಳಿರುತ್ತಾರೆ. ಮೂರುವಿದ ಜೀವಾತ್ಮರನ್ನೂ ಮೂರಾಗಿ ಪರಿಗಣಿ ಸಿದರೆ, ನಾಲ್ಕು ವಿಧವಾಗಿ ಆತ್ಮರುಗಳನ್ನೆಲ್ಲಾ ವಿಭಾಗಿಸಬಹುದು:– ಬದ್ಧ, ಮುಕ್ತ, ನಿತ್ಯರು– ಇವರು ಜೀವಾತ್ಮರು ಪರಮಾತ್ಮನು. ಹೀಗೆ **ನಾಲ್ಕು** ವಿಧ ಆತ್ಮರುಗಳು. ಇವರುಗಳನ್ನು ಪುರುಷ ಶಬ್ದದಿಂದ ಹೇಳಲು ಇಚ್ಛಿಸಿದರೆ ಕ್ರಮವಾಗಿ ಪುರುಷ, (ಬದ್ಧರು) ಉತ್ಪುರುಷ, (ಮುಕ್ತರು) ಉತ್ತರ ಪುರುಷ (ನಿತ್ಯರು) ಉತ್ತಮ ಪುರುಷ, (ಪುರುಷೋತ್ತಮ) ವೆಂದು ಹೇಳಬಹುದು. ಪುರುಷೋತ್ತಮನಲ್ಲೇ, **"ನಾರೀಣಾಂ ಉತ್ತಮಾ ವಧೂಃ"** ಎಂದು ಮಹರ್ಷಿಯ ಉಕ್ತಿಯಪ್ರಕಾರ ಸ್ತ್ರೀಗಳಲ್ಲಿ ಉತ್ತಮಳಾದ ಲಕ್ಷ್ಮಿಯೂ ಸೇರಿದಳು. ಈಶ, ಈಶ್ವರ ಶಬ್ದಗಳ ಪ್ರಯೋಗವು ರುದ್ರನಿಗೆ ಇರುವದರಿಂದಲೇ ಪರತತ್ವವೆಂದು ಹೇಳಲು ಸಾಧ್ಯವಿಲ್ಲವು. ಏಕೆಂದರೆ ಎಲ್ಲಾ ಶಾಸ್ತ್ರಗಳೂ ಆತನನ್ನು ಜೀವಕೋಟಿಗೆ ಸೇರಿಸಿ ಇವೆ. ಅಂತವನಿಗೆ **"ಜಗದ್ವ್ಯಾಪಾರ ವರ್ಜಂ"** ಎಂದು ಹೇಳಿರುವದರಿಂದ ಪುರುಷೋತ್ತಮತ್ವವೂ, **ಸರ್ವನಿಯಮನತ್ವವನ್ನು** ಬೋಧಿಸುವ ಈಶ್ವರತ್ವವೇ ಮೊದಲಾದುವುಗಳು ಇಲ್ಲವಾದುದರಿಂದ, ಅಂತವನನ್ನೂ ವ್ಯಾವರ್ತಿಸಿ ಹೇಳುವದಕ್ಕಾಗಿ **"ಪುರುಷೋ**

**ತ್ತಮಃ ಕಃ"** ಎಂದು ಹೇಳಿ ಪರತತ್ವವು **ಶ್ರೀಮನ್ನಾರಾಯಣನೇ** ಎಂದು ಸ್ಥಾಪಿಸಿದರು. ರುದ್ರನೇ, ಕೇಶವ ಶಬ್ದನಿರುಕ್ತಿಯನ್ನು ಮಾಡಿಹೇಳಿರುತ್ತಾನೆ.– **"ಕ ಇತಿ ಬ್ರಹ್ಮಣೋ ನಾಮ ಈಶೋಽಹಂ ಸರ್ವದೇಹಿನಾಮ್। ಆವಾಂತವಾಂಗೇ ಸಂಭೂತೌ ತಸ್ಮಾತ್ಕೇಶವನಾಮವಾ೯॥" ಕಃ** ಎಂದರೆ ಚತುರ್ಮುಖನು, ಈಶನೆಂದರೆ ನನ್ನ ಹೆಸರು, ನಾವಿಬ್ಬರೂ ನಿನ್ನ ಶರೀರದಿಂದ ಜನಿಸಿದವರಾದುದರಿಂದ, ನೀನು ಕೇಶವನೆಂದು ಹೇಳಲ್ಪಡುವಿ ಎಂಬ ರುದ್ರ ವಾಕ್ಯವಿರುತ್ತದೆ. ಆದುದರಿಂದ ಹಿರಣ್ಯಗರ್ಭ, ರುದ್ರ, ಇಂದ್ರಪದಗಳು ವ್ಯುತ್ಪತ್ತಿಮೂಲಕವಾಗಿಯೂ, ಶರೀರಾತ್ಮ ಭಾವದ ಮೂಲಕ ಸಾಮಾನಾಧಿಕರಣ್ಯೋಕ್ತಿ ಮೂಲಕವಾಗಿಯೂ **ಪುರುಷೋತ್ತಮ**ನಾದ ಶ್ರೀಮನ್ನಾರಾಯಣನನ್ನು ಬೋಧಿಸಿದರೂ, ಪ್ರಸಿದ್ಧರಾದಚತು ರ್ಮುಖಬ್ರಹ್ಮ ರುದ್ರ (ಶಿವ) ಇಂದ್ರಾದಿಗಳು ಜೀವಕೋಟಿಗೆ ಸೇರಿದವರಾದುದರಿಂದ **ಪುರುಷೋತ್ತಮಃ ಕಃ** ಎಂದು ಪ್ರಾಜ್ಞರನ್ನು ಕುರಿತು ಪ್ರಶ್ನಿಸಿರುತ್ತಾರೆ. **ಪುರುಷೋತ್ತಮ**ಶಬ್ದವು, ಗೀತೆಯಲ್ಲಿ **ಉತ್ತಮಃ ಪುರುಷಸ್ತ್ವನ್ಯಃ** ಎಂದು ಹೇಳಲ್ಪಟ್ಟು ಕರ್ಮಧಾರಯವು ಸೂಚಿತವು; ಆದರೆ ನಿರ್ಧಾರಣ ಷಷ್ಠೀತತ್ಪುರುಷ ಸಮಾಸವಂತೂ ಕೂಡುವುದೇ ಇಲ್ಲವು; ಏಕೆಂದರೆ ಆಗ ಎಲ್ಲಾ ಪುರುಷ ವರ್ಗಕ್ಕೆ ಈತನೂ ಸೇರಿದವನಾಗಿ ಉತ್ತಮನೆಂಬ ಅಪಾರ್ಥ ಉಂಟಾಗುತ್ತದೆ. ಸಪ್ತಮೀ ತತ್ಪುರುಷವನ್ನು ಮೇಲೆ ವಿವರಿಸಿದ್ದ ಹಾಗೆ ಸಮರ್ಥನೆ ಮಾಡಬಹುದು. ಶೈಷಿಕ ಷಷ್ಠಿಯನ್ನು ಸಮರ್ಥನೆ ಮಾಡಬಹುದು. ಆದರೆ ಪಂಚಮೀ ತತ್ಪುರುಷ ಸಮಾಸಮಾಡಿ ಎಲ್ಲಾ ಇತರ ಪುರುಷರುಗಳಿಗಿಂತ ಉತ್ತಮನೆಂಬುದು ಸಮಂಜಸವು. ಅದನ್ನೇ ಗೀತೆಯು **"ಯಸ್ಮಾತ್ಕ್ಷರ ಮತೀತೋಽಹ ಮಕ್ಷರಾದಪಿಚೋತ್ತಮಃ"** ಎಂದು ಪಂಚಮ್ಯರ್ಥವನ್ನು ಉಪಪಾದಿಸಿರುತ್ತದೆ. ಹೀಗೆ ಶ್ರೀಕೃಷ್ಣ ಪ್ರಭುವೇ ನಿರುಕ್ತ ಮೂಲಕ ಈ ೧೫ನೆಯ ಅಧ್ಯಾಯದಲ್ಲಿ ಈ ಪುರುಷೋತ್ತಮ ಶಬ್ದಾರ್ಥವನ್ನೂ ವಿವರಿಸಿರುವದರಿಂದ, ಪರಮಾತ್ಮನಾದ ನಾರಾಯಣನಿಗೆ ಸರ್ವಕಾರಣತ್ವ, ಸರ್ವವ್ಯಾಪನ ಭರಣನಿಯಮನ ಸಾಮ್ಯ ಮೊದಲಾವುಗಳು ಹೇಳಿರುವುದರಿಂದ ಇತರರೆಲ್ಲಾ ಅವರರೆಂಬುದು ಸಿದ್ಧವು.

ಹೀಗೆ ಈ ಎಲ್ಲಾ ಪೂರ್ವ ಪಕ್ಷಗಳನ್ನು ಒಟ್ಟು ಕೂಡಿಸಿ ನಿರಾಕರಿಸುವದಕ್ಕಾಗಿ ಉತ್ತರಾರ್ಧವು **"ಕಸ್ಯಾಯುತ"** ಎಂಬುದು ಪ್ರಯುಕ್ತವು. ವಿಶ್ವದಲ್ಲಿರುವ ಸರ್ವಚಿದ ಚಿತ್ತುಗಳೂ ಪರಮ ಪುರುಷನ ಏಕದೇಶದಲ್ಲಿರುವವೆಂದು ಹೇಳುತ್ತಾರೆ.– ಇದಕ್ಕೆ ಪ್ರಮಾಣ ವಾಕ್ಯವಾಗಿ, **"ಮೇರೋರಿವಾಣುರ್ಯಸ್ಯೇ ತತ್ ಬ್ರಹ್ಮಾಂಡ ಮಖಿಲಂ ಮುನೇ"** "ಓಮನನ ಶೀಲರಾದವರಲ್ಲಿ ಶ್ರೇಷ್ಠನೇ! ಪರ **ಮಾತ್ಮ**ನನ್ನು ಮೇರುಪರ್ವತವಾಗಿ ವಿಭಾಗಿಸಿದರೆ ಆತನ ಸಮಸ್ತ ಬ್ರಹ್ಮಾಂಡವು

ಅಣುರೂಪದ ಹಾಗೆ" ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಗೀತೆಯಲ್ಲಿ **"ಮಯಿ ಸರ್ವ ಮಿದಂ ಪ್ರೋತಮ್ ಸೂತ್ರೇಮಣಿಗಣಾವಿವ"** (ಗೀ. ೭. ೭) ಈ ಸಮಸ್ತ ಚಿದ ಚಿದ್ರೂಪವಾದ ವಿಶ್ವವೆಲ್ಲಾ ನನ್ನೊಂದಿಗೇ ಸೇರಿವೆ ಎಂದೂ, ಮತ್ತು **"ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾಮಿ ಸಚರಾಚರಮ್" "ಬ್ರಹ್ಮಾಣ ಮೀಶಂ ಕಮಲಾಸನಸ್ಥಂ"** (ಗೀ. ೧೧. ೭) ಸರ್ವೇಶ್ವರನ ವಿಶ್ವರೂಪದ ಏಕದೇಶ ವಾದ ಪ್ರದೇಶದಲ್ಲಿ ಈ ಸಮಸ್ತಜಗತ್ತಿನ ಚರಾಚರವನ್ನೂ, ಚತುರ್ಮುಖನನ್ನೂ ರುದ್ರನನ್ನೂ ನೋಡುತ್ತಿದ್ದೇನೆ ಎಂಬ ಅರ್ಜುನ ವಾಕ್ಯವಿರುತ್ತದೆ. ಆದುದರಿಂದ ವಿಷ್ಣುವಿಗೇ ಸರ್ವವ್ಯಾಪಿತ್ವವೂ, ಬ್ರಹ್ಮರುದ್ರೇಂದ್ರಾದಿಗಳಿಗೆ, ಆ ವಿಶ್ವರೂಪದ ಒಂದು ಮೂಲೆಯಲ್ಲಿ ಅವಸ್ಥಿತಿಯೂ ಹೇಳಲ್ಪಟ್ಟಿತು **ಅಯುತಾಯುತೇ** ತ್ಯಾದಿ ಪ್ರಯೋಗದಿಂದ, ಇಲ್ಲಿನ ಅಂಡ ಸೃಷ್ಟಿಯಹಾಗೆ, ಆತನು **ಅಖಿಲಾಂಡಕೋಟಿ** ಬ್ರಹ್ಮಾಂಡನಾಯಕನಾಗಿ, ತಾನೇ ಆ ಲೆಖ್ಖವಿಲ್ಲದ ಅಂಡಗಳಿಗೆಲ್ಲಾ ರಕ್ಷಕನಾಗಿಯೂ ನಾಯಕನಾಗಿಯೂ, ತನ್ನ ಆಜ್ಞೆಗಳಾದ ಸೃಷ್ಟಿಲಯಗಳನ್ನು ನಡೆಸುವವಕ್ಕಾಗಿ ಒಂದೊಂದು ಬ್ರಹ್ಮಾಂಡದಲ್ಲೂ ಒಬ್ಬೊಬ್ಬ ಚತುರ್ಮುಖನೂ, ಒಬ್ಬೊಬ್ಬರುದ್ರನೂ ಇರುವರೆಂಬ ಭಾವವು ಸೂಚಿತವು ಈ ಅಭಿಪ್ರಾಯವೇ ಗೀತೆಯ **"ವಿಷ್ಟ ಭ್ಯಾಹ ಮಿದಂಕೃತ್ಸ್ನ ಮೇಕಾಂಶೇನ ಸ್ಥಿತೋಜಗತ್"** ಎಂಬಲ್ಲಿ ಶ್ರೀ ಕೃಷ್ಣ ಭಗವಾನರವರಿಂದಲೇ ಹೇಳಲ್ಪಟ್ಟಿರುತ್ತದೆ.

ಈ ಶ್ಲೋಕಾರ್ಧದಲ್ಲಿರುವ **ವಿಶ್ವಂ** ಎಂಬಪದವು ಪರಮಾತ್ಮನ ಕಾರ್ಯಭೂತ ವಾದ ಸಕಲಾಂಡ ಸೃಷ್ಟಿಯೂ ಬೋಧಿತವು **ಚೇತನಾ ಚೇತನ ಪ್ರವಿಭಾಗ** ವೆಂಬುದರಿಂದ ಚೇತನಾಚೇತನಗಳಲ್ಲಿರುವ ವಿಚಿತ್ರ ಭೇದಗಳೂ, ಅವುಗಳಿಗಿರುವ ವೈಲಕ್ಷಣವೂ ಬೋಧಿಸಲ್ಪಟ್ಟವು. ದೇವ ಮನುಷ್ಯಾದಿ ಭೇದಗಳಿಂದ ಅವುಗಳ ಲ್ಲಿರುವ ವಿಚಿತ್ರವ್ಯತ್ಯಾಸವೂ, ಹಾಗೆಯೇ ಅಚೇತನಗಳಲ್ಲೂ ತ್ರಿವಿಧವಾಗಿ ಅವು ಗಳು ಹೇಗೆ ಭೋಗ್ಯ ಭೋಗೋಪಕರಣ ಭೋಗಸ್ಥಾನಗಳಾಗಿ ಪರಿಣಮಿಸಿವೆ ಎಂಬ ವಿಷಯವೆಲ್ಲಾ ಸೂಚಿತವು. **ಪ್ರವಿಭಾಗವೃತ್ತಮ್** ಎಂದು ಹೇಳಿರು ವದರಿಂದ ವಿಜಾತೀಯವಾದ ಸ್ವರೂಪ ಸ್ಥಿತಿ ಪ್ರವೃತ್ತಿಯುಳ್ಳವು ಈ ತ್ರಿವಿಧ ಚೇತನಾಚೇತನಗಳು ಎಂಬುದು ಹೇಳಲ್ಪಟ್ಟಿತು. ವಿಶ್ವವೆಲ್ಲಾಚಿದ ಚಿತ್ತುಗಳ ಸಮ್ಮೇಳನದ ಮೂಲಕ ವಿಚಿತ್ರವಾಮದು. ಚಿತ್ತಿಗೆ ಸ್ವರೂಪ ಪರಿಣಾಮ ವಿಲ್ಲವು. ಸ್ವಭಾವದಲ್ಲಿ ಪರಿಣಾಮವು; ಅಚಿತ್ತಿಗೆ ಸ್ವರೂಪಸ್ವಭಾವಗಳೆರಡರಲ್ಲೂ ಪರಿಣಾಮವು; ಹೀಗೆ ಇವು ಒಟ್ಟಿಗೆ ಸೇರುವದರಿಂದ ವೈವಿಧ್ಯವೂ ವೈಚಿತ್ರವೂ ವಿಶ್ವದಲ್ಲಿ ಏರ್ಪಟ್ಟಿತು. ಆದುದರಿಂದ ಯಾವ ಪ್ರಾಣಿವರ್ಗವನ್ನು ಅವಲೋಕಿ ಸಿದರೂ ಒಂದರ ಹಾಗೆ ಒಂದು ಇಲ್ಲವು. ಹೀಗೆ ಎಲ್ಲಾ ಮನುಷ್ಯರಲ್ಲೂ ಬದ್ಧದೆಶೆಯಲ್ಲಿ ದೇಹವಿರುವಾಗ ಭೇದವೇ ವಿನಾಸಮತ್ವವಿಲ್ಲವು. ದೇಹಕಳೆದು

**ವೇದಾಪಹಾರ ಗುರುಪಾತಕ ದೈತ್ಯಪೀಡಾ।**
**ದ್ಯಾಪದ್ವಿಮೋಚನ ಮಹಿಷ್ಠಫಲ ಪ್ರದಾನೈಃ।**
**ಕೋನ್ಯಃ ಪ್ರಜಾ ಪಶುಪತೀ ಪರಿಪಾತಿ ಕಸ್ಯ।**
**ಪಾದೋದಕೇನ ಸಶಿವ ಸ್ವಶಿರೋ ಧೃತೇನ ॥೧೩॥**

---

ಹೋದರೆ ಆಗ ಸಮತ್ವವೇವಿನಾ ಬದ್ಧದೆಶೆಯಲ್ಲಿ ಅಲ್ಲವು. ಈ ವಿಷಯವನ್ನು ತಿಳಿಯುವ ಪ್ರಾಜ್ಞತೆಯಿಲ್ಲವೆ ಕೆಲವರು ಬದ್ಧದೆಶೆಯಲೇ ಎಲ್ಲಾ ಮನುಷ್ಯರೂ ಒಂದೇ ಎಂದು ಪ್ರಲಾಪಿಸುತ್ತಾರೆ. ಇದು ಗೀತೆಯಲ್ಲಿ ಬಹು ನಿಪುಣತರವಾಗಿ **"ವಿದ್ಯಾ ವಿನಯಸಂಪನ್ನೇ"** ಎಂಬ (ಗೀ 5. 18.) ಎಂಬ ಶ್ಲೋಕದಲ್ಲಿ ಉಪ ಪಾದಿತವು. ವೈಚಿತ್ರ್ಯವನ್ನು ಪ್ರಾಣಿಗಳ ದೇಹರಚನೆಯಲ್ಲೂ ಅಚೇತನಗಳ ಸ್ಥಿತಿ ಯಲ್ಲೂ ಬಹುಸ್ವಾರಸ್ಯವಾಗಿ ಕಾಣಬಹುದು. ಕಣ್ಣು, ಕಿವಿ, ಹೃದಯ, ಸಸ್ಯ ಹೂವು ಫಲ, ವಜ್ರ ಮುಂತಾದವುಗಳಲ್ಲಿ ವೈಚಿತ್ರ್ಯವನ್ನು ಅವುಗಳ ವಿಷಯವಾದ ಜ್ಞಾನದಿಂದ ತಿಳಿಯಬಹುದು.

ಈ ಶ್ಲೋಕವು ಸಿದ್ಧಾನ್ತಾರ್ಥವನ್ನು ನಿಷ್ಕರ್ಷಿಸಿ ಹೇಳುವ ಹಾಗೆ ಹೇಳದೆ **"ಕಃ ಕಃ"** ಎಂದು ಪ್ರಶ್ನಾರ್ಥವಾಗಿ ಹೇಳಿದುದು ಏಕೆ? ಪ್ರಶ್ನೆಯು ವಿಮರ್ಶೆ ಯನ್ನು ತೋರಬಹುದು. ಇದಕ್ಕೆ ಉತ್ತರವೇನೆಂದರೆ ಹಿಂದಿನ ಶ್ಲೋಕದಲ್ಲಿ ಎಲ್ಲಾ ಪ್ರಾಜ್ಞರಾದ ವೇದವಿತ್ತುಗಳಲ್ಲಿ ಯಾರು ಶ್ರೀಮನ್ನಾರಾಯಣನಿಗೆ ಈಶ್ವ ರತ್ವವನ್ನು ಸಹಿಸದೇ ಇದ್ದಾರೆಂದು ಹೇಳಿರುವುದರಿಂದ, ಎಲ್ಲಾ ವೇದಾರ್ಥಗಳನ್ನು ಯಥಾರ್ಥವಾಗಿ ತಿಳಿದವರೆಲ್ಲಾ ನಾರಾಯಣನ ಈಶಿತೃತ್ವವನ್ನು ಒಪ್ಪಿಯೇ ಒಪ್ಪುವರೆಂದು ಹೇಳಿದರು. ಆದರೂ ಕೆಲವರು ಪುರುಷಸೂಕ್ತದಲ್ಲಿ ಪ್ರತಿಪಾದಿಸ ಲ್ಪಟ್ಟವನು ಚತುರ್ಮುಖನೆಂದೂ, ರುದ್ರನೆಂದೂ, ಇಂದ್ರನೆಂದೂ, ಸೂರ್ಯನೆಂದೂ ಭಿನ್ನ ಭಿನ್ನವಾಗಿ ಅಭಿಪ್ರಾಯಪಡುವರೆಂದೂ ಭಾವಿಸಿ ಅಂತಹಪೂರ್ವ ಪಕ್ಷಗಳನ್ನು ಕುರಿತು ಉತ್ತರಗಳನ್ನು ಹೇಳಿರಿ ಎಂದು ಕೇಳುವದಕ್ಕಾಗಿ, ಕಃ, ಕಃ, ಎಂಬ ಪ್ರಯೋಗವು. ಈ ಪ್ರಶ್ನೆಗಳಿಗೆ ನಾರಾಯಣನೇ ಪರತತ್ವ ಎಂದು ಇವರು ಹೇಳ ಬೇಕೇವಿನಾ ಅನ್ಯಥಾಯಿಲ್ಲವೆಂದು ತೋರುವದಕ್ಕಾಗಿ; ಆದುದರಿಂದ ಈ ಅಮೋಘ ಶ್ಲೋಕದಿಂದ ಪರತತ್ವಯಾಥಾತ್ಮ್ಯವನ್ನು ಸ್ಥಾಪಿಸಿ, ಪರತತ್ವವು ಶ್ರೀಮನ್ನಾರಾ ಯಣನೇವಿನಾ ಇನ್ನುಯಾರು ಅಲ್ಲವೆಂದು ನಿರ್ಣಯಿಸಿರುತ್ತಾರೆ. ॥೧೨॥

**ಅವತಾರಿಕೆಯು:—** ಇನ್ನೂ ಪೂರ್ವಪಕ್ಷಿಗಳಿಗೆ ಸಮಾಧಾನವನ್ನು ಹೇಳು ತ್ತಾರೆ. ಆದುದರಿಂದ ಪ್ರಶ್ನೆಯರೂಪದಲ್ಲೇ ಪುನಃ ಕೇಳುತ್ತಾರೆ. ಪುರುಷ ಸೂಕ್ತಮೊದಲಾದ ಶ್ರುತಿಗಳ ಮೂಲಕ ಪರತತ್ವವು ಶ್ರೀಮನ್ನಾರಾಣಯನೇ ಪರ ತತ್ವವೆಂದು ಹಿಂದಿನ ಶ್ಲೋಕದಲ್ಲಿ ಸ್ಥಾಪಿಸಿದರು. ಈ ಶ್ಲೋಕದಲ್ಲಾದರೋ,

**"ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್"** ಎಂದು ಹೇಳಿರುವುದರಿಂದ ಅವುಗಳೂಸಹ ಶ್ರೀಮನ್ನಾರಾಯಣನೇ ಪರತತ್ವವೆಂದೂ ಆತನಿಂದಲೇ ಈ ಬ್ರಹ್ಮರುದ್ರಾದಿಗಳೂ ಅವರಿಗೆ ಪ್ರಾಪ್ತವಾದ ಆಪತ್ಕಾಲದಲ್ಲಿ ರಕ್ಷಿಸಲ್ಪಟ್ಟರೆಂದು ಇತಿಹಾಸಗಳಲ್ಲಿ ಉಪಪಾದಿತವಾದ ಚರಿತ್ರೆಗಳಿಂದ ಹಿಂದೆ ಹೇಳಿದ ಪರತತ್ವ ಯಾಥಾತ್ಮ್ಯವನ್ನೇ ಪುನಃ ಸ್ಥಾಪಿಸುತ್ತಾರೆ. ಇಲ್ಲಿ ಪುರಾಣಗಳಲ್ಲಿ ೬ ಸಾತ್ವಿಕ ಪುರಾಣಗಳು ಮಾತ್ರ ಉಪಾದೇಯವು. **"ವೈಷ್ಣವಂ ನಾರದೀಯಂಚ ತಥಾ ಭಾಗವತಂ ಶುಭಮ್। ಗಾರುಡಂಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ। ಷಡೇತಾನಿ ಪುರಾಣಾನಿ ಸಾತ್ವಿಕಾನಿ ಮತಾನಿವೈ"** ೬ ರಾಜಸ, ೬ ತಾಪಸ ಪುರಾಣಗಳು ಗ್ರಾಹ್ಯವಲ್ಲವು. ಇತಿಹಾಸ ಸಾತ್ವಿಕ ಪುರಾಣಗಳ ವೃತ್ತಾಂತದಿಂದಲೂ ಶ್ರೀಯಃಪತಿಯೇ ಪರತತ್ವವೆಂದು ಇಲ್ಲಿ ಸ್ಥಾಪಿಸುತ್ತಾರೆ. ಶ್ರೀಮದ್ರಾಮಾಯಣ, ಭಾರತ ಮನ್ವಾದಿಸ್ಮೃತಿ ಇತ್ಯಾದಿಗಳಿಂದಲೂ ಪರತತ್ವವು ಶ್ರೀಮನ್ನಾರಾಯಣನೇ ಎಂದು ಹೇಳುತ್ತಾರೆ. ಆದುದರಿಂದ ಇತಿಹಾಸ ಪುರಾಣಗಳಲ್ಲಿ ಹೇಳಿರುವ ವೇದಾಪಹಾರಾದಿ ವೃತ್ತಾಂತಗಳೂ ಪರತತ್ವ ನಿರ್ಣಯದಲ್ಲಿ ನಮಗೆ ಪ್ರಮಾಣಗಳು. ಇದನ್ನನುಸರಿಸಿ ಶ್ರೀ ನಿಗಮಾಂತದೇಶಿಕರವರು ಪರದೇವತಾ ಪಾರಮಾರ್ಥ್ಯಾಧಿಕಾರದಲ್ಲಿ

**"ತ್ರಯ್ಯಂತೈರೇಕಕಂಠ್ಯೈಸ್ತದನುಗುಣ ಮನುವ್ಯಾಸ ಮುಖ್ಯೋಕ್ತಿಭಿಶ್ಚ**
**ಶ್ರೀಮನ್ನಾರಾಯಣೋನಃ ಪತಿರಖಿಲತನುರ್ಮುಕ್ತಿದೋ ಮುಕ್ತಭೋಗ್ಯಃ"**

ಹೇಳಿರುತ್ತಾರೆ. ನಿಸ್ಸಂಶಯವಾದ ಜ್ಞಾನ ಉಂಟಾಗಲು ಶ್ರೀ ಗುರುಗಳ ಪರದೇವತಾಪಾರಮಾರ್ಥ್ಯಾಧಿಕಾರವನ್ನು ಪಠಿಸಬಹುದು. ಹಿಂದಿನ ಶ್ಲೋಕದಲ್ಲಿ ವೇದಗಳ ಐಕ ಕಂಠ್ಯದಿಂದ ಪರತತ್ವ ನಿರ್ಣಯವನ್ನು ಮಾಡಿದರು. ಈ ಶ್ಲೋಕದಲ್ಲಿ **ತದನುಗುಣ ಮನುವ್ಯಾಸ ಮುಖ್ಯೋಕ್ತಿಗಳಿಂದ** ಸ್ಥಾಪಿಸುತ್ತಾರೆ.

ಅಥವಾ ಇನ್ನೊಂದು ವಿಧವಾಗಿಯೂ ಅವತಾರಿಕೆಯನ್ನು ಕೊಡಬಹುದು. ಹೇಗೆಂದರೆ, ಶ್ರುತಿಬಲದಿಂದ ಹಿಂದಿನ ಎರಡು ಶ್ಲೋಕಗಳಿಂದ ಶ್ರಿಯಃ ಪತಿಯಾದ ನಾರಾಯಣನೇ ಪರತತ್ವವೆಂದೇನೋ ಹೇಳಿದಿರಿ. ಆದರೆ ವೇದೋಪಬೃಹ್ಮಣಗಳಾದ ಇತಿಹಾಸ ಪುರಾಣಗಳಲ್ಲಿ ಕೆಲಕೆಲಕಡೆಗಳಲ್ಲಿ ಬ್ರಹ್ಮ ರುದ್ರರುಗಳಿಗೆ ಪಾರಮ್ಯವನ್ನು ಕೊಟ್ಟು ಇತಿಹಾಸಗಳಿದೆಯಲ್ಲಾ ಎಂಬ ಸಂದೇಹದಲ್ಲಿ, ಅದೇ ಇತಿಹಾಸ ಪುರಾಣಗಳಲ್ಲೇ, ಚತುರ್ಮುಖರುದ್ರಗಳಿಗೆ ಆತಂಕ ಉಂಟಾದ ಕಾಲದಲ್ಲಿ ಶ್ರೀಮನ್ನಾರಾಯಣನಿಂದಲೇ ರಕ್ಷಿಸಲ್ಪಟ್ಟರೆಂಬ ಇತಿಹಾಸಗಳಿರುವುದರಿಂದ ಸಂಶಯ ಬೇಕಿಲ್ಲವೆಂದು ಹೇಳಿ, ಆ ಇತಿಹಾಸಗಳನ್ನು ಸೂಚಿಸುತ್ತಾರೆಂದಾಗಲಿ ಅವತಾರಿಕೆಯು.

**ಅರ್ಥವು:- ವೇದಾಪಹಾರ ಗುರುಪಾತಕ ದೈತ್ಯಪೀಡಾದ್ಯಾಪದ್ವಿಮೋಚನಮಹಿಷ್ಠ ಫಲಪ್ರದನೈಃ** — ಚತುರ್ಮುಖನಿಗೆ ಉಂಟಾದ ಸ್ವಾಮಿದತ್ತ ವೇದಗಳನ್ನು ಮಧು ಕೈಭಟ ರಾಕ್ಷಸರಿಂದ ಅಪಹಾರವು, **ಗುರುಪಾತಕ**- ರುದ್ರನಿಗೆ ಉಂಟಾದ ತನ್ನ ಗುರುವಾದ ತಂದೆಯ ತಲೆಯನ್ನು ಉಗುರಿನಿಂದ ಕಿತ್ತುಹಾಕಿದ ಪಾಪವು, ಅಥವಾ ಗುರಪಾತಕ- ಅಂತಹ ಮಹತ್ತಾದ ಪಾತಕವು, **ದೈತ್ಯಪೀಡಾ**- ಅಂದಕಾಸುರ ಮತ್ತು ವೃಕಾಸುರ ಮೊದಲಾದವರುಗಳಿಂದ ರುದ್ರನಿಗೆ ಉಂಟಾದ ಪೀಡೆಯು, ಮತ್ತು ದೈತ್ಯಪೀಡೆಯು ಇಂದ್ರನಿಗೂ ಉಂಟಾದುದರಿಂದ, ಇಂದ್ರನಿಗೆ ಉಂಟಾದ ತೊಂದರೆಯೂ ಉಪಲಕ್ಷಣ ರೂಪದಲ್ಲಿ ಹೇಳಲ್ಪಟ್ಟಿತೆಂದೂ ಭಾವಿಸಬಹುದು, ಇವುಗಳೇ ಮೊದಲಾದ ಇದರಿಂದ ರಾವಣ ಕುಂಭಕರ್ಣ, ಹಿರಣ್ಯಾಕ್ಷ ಹಿರಣ್ಯಕಶಿಪು ಮೊದಲಾದವರುಗಳಿಗೆ ಬ್ರಹ್ಮನು ಕೊಟ್ಟ ವರಗಳ ಹೆಮ್ಮೆಯಿಂದ ಲೋಕಕಂಠಕರಾಗಿದ್ದ ಪ್ರವರ್ತನೆಗಳು ಸೂಚಿಸಲ್ಪಟ್ಟವು. ಅವರಿಂದುಂಟಾದ ಲೋಕಕ್ಷೋಭೆಯನ್ನು ಹೋಗಲಾಡಿಸಲು ತಮಗೆ ಶಕ್ತಿಯಿಲ್ಲದೆ ಶ್ರೀಮನ್ನಾರಾಯಣನೇ ಅವತಾರ ಮುಖೇನ ಹೋಗಲಾಡಿಸ ಬೇಕಾಗಿ ಬಂತು. ಆದಿ ಇವೇ ಮೊದಲಾದ ಇಂತಹ **ಆಪತ್**-ಆಪತ್ತುಗಳ, **ವಿಮೋಚನ**-ನಿವಾರಣವೇನು, **ಮಹಿಷ್ಠಫಲಪ್ರದಾನೈಃ**- ಶ್ರೇಷ್ಠಗಳಾದ ಫಲಗಳನ್ನು ಕೊಡೋಣವೇನು, ಇವುಗಳಿಂದ, **ಕೋನ್ಯಃ**- ಶ್ರೀಮನ್ನಾರಾಯಣನಲ್ಲದೆ ಇನ್ನೂ ಯಾರು, **ಪ್ರಜಾಪಶುಪತೀ**-ಪ್ರಜೆಗಳಿಗೆ ಪತಿಯಾದ ಚತರ್ಮುಖನನ್ನೂ ಪ್ರಮಥ ಗಣಗಳಿಗೆ ಪತಿಯಾದ ರುದ್ರನನ್ನೂ, **ಪರಿಪಾತಿ**-ರಕ್ಷಿಸುತ್ತಾರೆ? ಇನ್ನು ಬ್ರಹ್ಮ ರುದ್ರರುಗಳನ್ನು ರಕ್ಷಿಸುವ ಶಕ್ತಿಯು ಇನ್ನು ಯಾರಿಗೂ ಇಲ್ಲವೆಂಬ ಭಾವವು. ಆದುದರಿಂದ ಇಂತವರನ್ನು ಪರತತ್ವವೆಂದು ಹೇಳುವ ವಾದವು ಸರ್ವಾತ್ಮನಾ ಸರಿಯಲ್ಲವೆಂಬ ಭಾವವು. ಇನ್ನೂ ಒಂದು ಕಾರಣದಿಂದಲೂ ಅವರುಗಳು ಪರತತ್ವವಲ್ಲವು; ಶ್ರೀಮನ್ನಾರಾಯಣನೇ ಪರತತ್ವವೆಂದು ಹೇಳುತ್ತಾರೆ.- **ಸಃ**-ಅಂತಹ 'ಬ್ರಹ್ಮಹತ್ಯದೋಷದಿಂದ, ದೂಷಿತನಾದ ರುದ್ರನೂ ಸಹ, **ಸ್ವಶಿರೋ ಧೃತೇನ**-ಭಗೀರಥ ಪ್ರಾರ್ಥನೆಯ ಪ್ರಕಾರ ತನ್ನ ಶಿರಸ್ಸಿನಲ್ಲಿ ಧರಿಸಿದ, **ಕಸ್ಯ**- ಶ್ರೀಮಹಾವಿಷ್ಣುವಲ್ಲದ ಇನ್ನು ಯಾರ, **ಪಾದೋದಕೇನ**- ಬ್ರಹ್ಮನಿಂದ ವಿಷ್ಣು ಪಾದವನ್ನು ತೊಳೆದು ತನ್ನ ತಲೆಯಲ್ಲಿ ಪ್ರೋಕ್ಷಿಸಿ ಬಿಟ್ಟುದುದರಿಂದ ವಿಷ್ಣು ಪಾದೋದ್ಭವಳಾದ ಗಂಗೆಯ ಉದಕದಿಂದ, **ಶಿವಃ**-ಪಾಪಗಳು ಕಳೆದುದರಿಂದಶಿವಃ ಎಂದರೆ ಮಂಗಳಕರನೆಂಬ ನಾಮವುಳ್ಳವನು, **ಅಭೂತ್**-ಆದನು?

**ತಾತ್ಪರ್ಯ:-** ಶ್ರೀಯಃ ಪತಿಯಾದ ನಾರಾಯಣನು ಅಂಡಸೃಷ್ಟಿಯನ್ನು ಮಾಡಿ, ತನ್ನ ನಾಭೀಕಮಲದಿಂದ ಚತರ್ಮುಖಬ್ರಹ್ಮನನ್ನುಂಟುಮಾಡಿ ಆತನಿಗೆ

ಮುಂದಕ್ಕೆ ಸೃಷ್ಟಿಕ್ರಮವನ್ನು ಮಾಡುವ ಆಧಿಪತ್ಯವನ್ನೂ, ವೇದಗಳನ್ನೂ ಕೊಟ್ಟನೆಂಬುದು, **"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ"** ಎಂಬಲ್ಲಿ ಹೇಳಲ್ಪಟ್ಟಿರುವುದರಿಂದ ವೇದಾಧಿಕಾರಿಗಳಾದ ಪುರುಷರನ್ನು ಪ್ರಹಿಣೋತಿ ಕಳುಹಿಸಿಕೊಟ್ಟನು ಎಂಬುದಾಗಿ ತೋರಿಬರುತ್ತದೆ. ಇಲ್ಲಿ **ವಿದಧಾತಿ** ಎಂದೂ **ಪ್ರಹಿಣೋತಿ** ಎಂದೂ ಶ್ರುತಿಯಲ್ಲಿ ವರ್ತಮಾನ ನಿರ್ದೇಶವು ಏಕೆಂದರೆ ಕಲ್ಪ ಕಲ್ಪದಲ್ಲೂ ಆಕಾರ್ಯವು ನಡೆಯುತ್ತವೆಂಬುದನ್ನು ತಿಳಿಸುವುದಕ್ಕಾಗಿ ಎಂದು ಭಾವಿಸತಕ್ಕದ್ದು. ಈ ವೇದಪುರುಷರನ್ನು ಮಧುಕೈಟಭರೆಂಬ ರಾಕ್ಷಸರು ಪಾತಾಳಕ್ಕೆ ಕದ್ದುಕೊಂಡು ಹೋದರೆಂಬುದು ಪುರುಣೇತಿಹಾಸಗಳಲ್ಲಿ ಪ್ರಸಿದ್ಧವು:— **"ದದೃಶಾತೇಽರವಿಂದಸ್ಥಂ ಬ್ರಹ್ಮಾಣ ಮಮಿತ ಪ್ರಭಮ್। ಸೃಜಂತಂ ಪ್ರಥಮಂ ವೇದಾಂಶ್ಚತುರಶ್ಚಾರು ವಿಕ್ರಮ್। ತತೋ ವಿಗ್ರಹಿಣಸ್ತಾಂಸ್ತು ದೃಷ್ಟ್ವಾತಾವ ಸುರೋತ್ತಮೌ। ವೇದಾರ್ ಜಗೃಹತೂಂ ರಾರ್ಜ ಬ್ರಹ್ಮಣಃ ಪಶ್ಯತಸ್ತದಾ"** ಈ ನಾಲ್ಕು ವೇದಪುರುಷರು ಚತುರ್ಮುಖನಹತ್ತಿರ ವಿದ್ದುದ್ದನ್ನು ಕಂಡು ಆ ಮಧುಕೈಟಭರು ಅವರನ್ನು ಅಪಹರಿಸಿಕೊಂಡು **"ರಸಾಂವಿವಶತುಃ"** ಪಾತಾಳವನ್ನು ಹೊಕ್ಕರೆಂದು ಹೇಳಲ್ಪಟ್ಟಿರುತ್ತದೆ. ಆಗ ಚತುರ್ಮುಖನು ವ್ಯಸನಾಕ್ರಾಂತನಾಗಿ ತನ್ನ ಮಗನಾದ ರುದ್ರನಲ್ಲಿ ತನಗುಂಟಾದ ದುರವಸ್ಥೆಯನ್ನು ಹೇಳಿಕೊಳ್ಳುತ್ತಾನೆ.

**"ವೇದಾಮೇ ಪರಮಂ ಚಕ್ಷು ರ್ವೇದಾ ಮೇಪರಮಂ ಧನಮ್।**
**ವೇದಾಮೇ ಪರಮಂ ಧಾಮ ವೇದಮೇ ಬ್ರಹ್ಮಚೋತ್ತಮಮ್।**
**ಮಮ ವೇದಾಹೃತಾ ಸ್ಸರ್ವೇದಾನವಾಭ್ಯಾಂ ಬಲಾದಿತಃ**
**ಅಹೋಬತ ಮಹದ್ದುಃಖಂ ವೇದ ನಾಶನಜಂ ಮಮ"**

ಎಂದು ನನ್ನ ಸೃಷ್ಟಿಕೆಲಸಕ್ಕೆ ಕುಂದಕ ಉಂಟಾಯಿತೇ ಎಂದು ಮಗನಲ್ಲಿ ಹೇಳಿಕೊಳ್ಳುತ್ತಿರುವಾಗ, ಶ್ರೀಮಹಾವಿಷ್ಣುವು ಹಯಗ್ರೀವಾವತಾರವನ್ನೆತ್ತಿ ಮಧುಕೈಟಭರನ್ನು ಕೊಂದು ಆ ನಾಲ್ಕುವೇದವನ್ನೂ ತಂದು ಚತುರ್ಮುಖನಿಗೆ ಕೊಟ್ಟನೆಂಬ ವೃತ್ತಾಂತವಿರುತ್ತದೆ. **"ತತಸ್ತಯೋಃಸ್ವಧೇನಾಶುವೇದೋಪಾ ಹರಣೇನಚ। ಶೋಕಾಪನಯನಂ ಚಕ್ರೇ ಬ್ರಹ್ಮಣಃ ಪುರುಶೋತ್ತಮಃ"** ಎಂದಿರುತ್ತದೆ.

೨. **ರುದ್ರನಿಗೆ ಗುರುಪಾತಕಾಪತ್ತಿನ ವಿಮೋಚನವು**— ಇಲ್ಲಿ **ಗುರುಪಾತಕಂ** ಎಂದರೆ ಪಿತಾ ಗುರುಸಮಾನನಾದುದರಿಂದ, ಗುರುವಿನ ವಿಷಯವಾದ ಪಾತಕವು. ಅಥವಾ ಗುರುತರವಾದ ಪಾತಕವು. ತಿಳಿದವನಾಗಿಯೂ ಪಾತಕಕ್ಕೊಳಗಾದರೆ ಮಹತ್ತಾದ ಪಾತಕವು; ಗುರುಪಾತಕವು, ಬ್ರಾಹ್ಮಣೋತ್ತಮನಾಗಿಯೂ ತಂದೆಯಾಗಿಯೂ ಇರುವವನ ಕುತ್ತಿಗೆಯನ್ನು ಜಿಗಿಟಿ ಬಿಡುವದಕ್ಕಿಂತ

ಹೆಚ್ಚಾದ ಪಾತಕವಿಲ್ಲವು. ಆದರೂ ಕೃಪಾನಿಧಿಯು ಹೆಚ್ಚಾದ ಶಿಕ್ಷೆಗೆ ಹೀಗೆ ಗುರಿಯಾದವನನ್ನೂ ರಕ್ಷಿಸಿರುತ್ತಾನೆ; ಏಕೆಂದರೆ ಆತನನ್ನು ಶರಣ ಹೊಂದಿದುದರಿಂದ. ಮಾತ್ಸ್ಯಪುರಾಣದಲ್ಲಿ ರುದ್ರನು ತಾನೇ ಹೇಳಿಕೊಳ್ಳುತ್ತಾನೇನೆಂದರೆ.— **"ತತಃ ಕ್ರೋಧ ಪರೀತೇನ ಸಂರಕ್ತನಯನೇನಚ। ವಾಮಾಂಗುಷ್ಠನಖಾಗ್ರೇಣ ಛಿನ್ನಂ ತಸ್ಯ ಶಿರೋಮಯಾ"** ತುಂಬಾ ಕ್ರೋಧಯುಕ್ತನಾಗಿ, ಕಣ್ಣೆಲ್ಲಾ ಅದರಿಂದ ರಕ್ತವರ್ಣವುಳ್ಳವನಾಗಿ ಎಡಗಾಲಿನ ಅಂಗುಷ್ಠದ ಉಗುರಿನಿಂದ ಚತುರ್ಮುಖನ ಐದನೆಯ ತಲೆಯನ್ನು ನಾನು ಕತ್ತರಿಸಿ ಬಿಟ್ಟೆನು. ಇದರಿಂದ ತಂದೆಯ ಶಾಪವು ತನಗೆ ತಟ್ಟಿತೆಂದು **"ಯಸ್ಮಾದನಪರಾಧಸ್ಯ ಶಿರಶ್ಛಿನ್ನಂತ್ವಯಾಮಮ। ತಸ್ಮಾಚ್ಛಾಪ ಸಮಾಯುಕ್ತಃ ಕಪಾಲೀತ್ವಂ ಭವಿಷ್ಯಸಿ"** ಎಂಬಲ್ಲಿ ಹೇಳಿರುವ ಹಾಗೆ ಬ್ರಹ್ಮ ಕಪಾಲವು ಕೈಯಲ್ಲಿ **ಅಂಟಿಕೊಂಡು ಚರಿಸುತ್ತಿದ್ದೆನು.** ಅನಂತರ ಹಿಮವತ್ಪರ್ವತದ ಬದರಿಕಾಶ್ರಮವನ್ನು ಸೇರಿ, ನಾರಾಯಣನನ್ನು ಆಶ್ರಯಿಸಿ ಪ್ರಾರ್ಥಿಸಿದುದರಿಂದ, ಅತನು ನನ್ನ ಪಾರ್ಶ್ವವನ್ನು ನಖಾಗ್ರದಿಂದ ಗೀರಿದುದರಿಂದ ರಕ್ತ ಪ್ರವಾಹವು ಹರಿದುಹೋಗಿ, ಆ ಬ್ರಹ್ಮಕಪಾಲವು ಒಡೆದು ತುಂಡು ತುಂಡಾಗಿ ಹೋಗಿ ಪವಿತ್ರನಾದೆನೆಂದು **"ವಿಷ್ಣು ಪ್ರಸಾದಾತ್ ಸುಶ್ರೋಣಿ ಕಪಾಲಂ ತತ್ಸಹಸ್ರಧಾ। ಸ್ಫುಟಿತಂ ಬಹುಧಾಯಾತಂ ಸ್ವಪ್ನಲಬ್ಧಂಧನಂ ಯಥಾ"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಇನ್ನೊಂದು ಕಡೆಯಲ್ಲಿ ಪಾರ್ಶ್ವವನ್ನು ಗೀರಿದುದರಿಂದ ಬೆವರು ವಿಶೇಷವಾಗಿ ಹರಿದು ಹೋಯಿತು. ಎಂದು ಹೇಳಲ್ಪಟ್ಟಿರುತ್ತದೆ. ಇದು ಬಹುಶಃ ಬೇರೇ ಕಲ್ಪದ ವೃತ್ತಾಂತ ವಿರಬಹುದು. ಹೀಗೆ ವಿಷ್ಣು ಕೃಪಯಾ ತನಗೆ ಮಹತ್ತಾದ ಬ್ರಹ್ಮಹತ್ಯ ರೂಪದೋಷವು ತೊಲಗಿತೆಂದು ತಾನೇ ಹೇಳಿಕೊಂಡಿರುತ್ತಾನೆ.

**೩.** ರುದ್ರನಿಗೆ **ದೈತ್ಯ ಪೀಡೆಯಿಂದ** ಬಂದ ಕಷ್ಟವೂ ಶ್ರೀ ಮಹಾ ವಿಷ್ಣುವಿನ ಅನುಗ್ರಹದಿಂದ ತೊಲಗಿತೆಂಬ ಮಾತ್ಸ್ಯಪುರಾಣ ವೃತ್ತಾಂತ ವಿರುತ್ತದೆ. ರುದ್ರನಿಗೆ ಅಂಧಕಾಸುರ ನೊಂದಿಗೆ ಯುದ್ಧವು ಪ್ರಾಪ್ತವಾದಾಗ, ರುದ್ರನಿಂದ ಉಪಯೋಗಿಸಲ್ಪಟ್ಟ ಶಸ್ತ್ರಗಳ ಹತಿಯಿಂದ ಅಂಧಕಾಸುರನ ರಕ್ತವು ಬಿದ್ದರೆ, ಆ ಬಿಂದುಗಳೆಲ್ಲಾ ಆತನ ಸೈನಿಕರಾಗಿ ಹುಟ್ಟಿ ಶಂಕರನಿಗೆ ತುಂಬಾ ಕಷ್ಟ ಉಂಟಾಗಲು, ಆಗ ಶ್ರೀ ಮಹಾ ವಿಷ್ಣುವಿನಲ್ಲಿ ಶರಣಾಗತಿಯನ್ನು ಅನುಷ್ಠಿಸಿದುದರಿಂದ **ಶುಷ್ಕ ರೇವತಿ** ಎಂಬುವಳನ್ನು ಸೃಷ್ಟಿಸಿ, ಆಕೆಯು ಆ ಬಿದ್ದರಕ್ತವನ್ನೆಲ್ಲಾ ಪಾನಮಾಡುವ ಹಾಗೆ ಶ್ರೀ ವಿಷ್ಣುವು ಮಾಡಿದುದರಿಂದ ಕಷ್ಟದಿಂದ ನಿವಾರಿಸಲ್ಪಟ್ಟೆನು. **"ತತಸ್ಸ ಶಂಕರೋ ದೇವಸ್ತ್ವಂಧಕೈ ರಾಕುಲೀಕೃತಃ। ಜಗಾಮ ಶರಣಂ ದೇವೋ ವಾಸುದೇವ ಮಜಂ ವಿಭುಮ್। ತತಸ್ಸ ಭಗವಾನ್ ವಿಷ್ಣು ಸ್ಸೃಷ್ಟವಾನ್ ಶುಷ್ಕ ರೇವತೀಮ್ ಸಾ ಪಪೌ ಸಕಲಂ ತೇಷಾ ಮಂಧಕಾ ನಾಮಸೃಕ್ಕ್ಷಣಾತ್"**

ಎಂದು ಇದೆ.

**ದೈತ್ಯಪೀಡೆಗೆ** ಇನ್ನೊಂದು ನಿದರ್ಶನವೂ ಉಂಟು. ಹಾಗೆಯೇ ವೃಕಾಸುರ ನೆಂಬುವನು ರುದ್ರನನ್ನು ಕುರಿತು ತಪಸ್ಸನ್ನು ಮಾಡಿ ಮೆಚ್ಚಿಸಿ, ತಾನು ಯಾರ ತಲೆಯ ಮೇಲೆ ಕೈಯಿಟ್ಟರೂ ಅವರು ಒಡನೆ ಭಸ್ಮವಾಗುವ ಹಾಗೆ ವರವನ್ನೂ ಪಡೆದು, ಆ ಅಸುರನು ಅದನ್ನು ಪರೀಕ್ಷಿಸುವದಕ್ಕಾಗಿ ರುದ್ರನ ತಲೆಯ ಮೇಲೆಯೇ ತನ್ನ ಕೈಯನ್ನಿಡಲು ಪ್ರಯತ್ನಿಸಿದನು. ಆಗ ರುದ್ರನು ಭಯಪಟ್ಟು ವಿಷ್ಣುವಿನನ್ನು ಮರೆಹೊಕ್ಕು, ಆಗ ವಿಷ್ಣುವು ಅಸುರನನ್ನು ಕುರಿತು ರುದ್ರನು ಶಾಪಗ್ರಸ್ತನು; ಅವನ ಗೆಲ್ಲಿಯದು ಅಂತಹವರವನ್ನು ಕೊಡುವ ಶಕ್ತಿಯು; ಬೇಕಾದರೆ ನಿನ್ನ ತಲೆಯಮೇಲೆ ನಿನ್ನ ಕೈಯನ್ನಿಟ್ಟು ನೋಡು; ಏನೂ ಆಗುವುದಿಲ್ಲವೆಂದು ವಂಚಿಸಲು; ಆಗ ಆತನು ತನ್ನ ತಲೆಯಮೇಲೆ ತನ್ನ ಕೈಯನ್ನು ಪರೀಕ್ಷಿಸುವದಕ್ಕಾಗಿ ಇಡಲು, ಅಸರಿಂದ ಭಸ್ಮವಾದನೆಂಬ ಇತಿಹಾಸಉಂಟು.

ರುದ್ರನು ವಿಷ್ಣುವಿನ ಸಹಾಯದಿಂದ ಮಾಡಿದ ತ್ರಿಪುರಸಂಹಾರದ ಇತಿಹಾಸ ವನ್ನೂ ನಿದರ್ಶನವೆಂದು ಭಾವಿಸಬಹುದು. ದೇತ್ಯಪೀಡಾ ಮತ್ತು ಆದಿಪದದಿಂದ ಎಂಬುದರಿಂದ ಇಂದ್ರನಿಗೆ ದೈತ್ಯರಿಂದುಂಟಾದ ಭಯವೂ ಹೇಳಲ್ಪಟ್ಟಿತೆಂದು ಭಾವಿಸ ಬಹುದು. ಕ್ಷೀರ ಸಮುದ್ರ ಮಥನ ಕಾಲದಲ್ಲಿ ರುದ್ರನಿಗೆ ಉಂಟಾದ ಕಾಲ ಕೂಟ ವಿಷದಿಂದುಂಟಾದ ಆಪನ್ನಿವಾರಣವೂ, ಇಂದ್ರನಿಗೂ ದೇವತೆಗಳಿಗೂ ಉಂಟಾದ ಭಯವನ್ನು ಮೋಹಿನ್ಯಾವತಾರದಿಂದ ನಿವಾರಿಸಿ, ಅಮೃತವು ಇಂದ್ರಾದಿಗಳ ವಶವಾ ಗುವ ಹಾಗೆ ಮಾಡಿದುದೂ ನಿದರ್ಶನವು. ಅದೂ ಅಲ್ಲದೆ ಅಚ್ಯುತಾನಂತ ಗೋವಿಂದ ಎಂಬ ಮೂರು ನಾಮಪಠನಗಳಿಂದಲೂ ರುದ್ರನು ವಿಷಹತಿಯಿಂದ ಪಾರಾದನು. **"ಅಚ್ಯುತಾನಂತ ಗೋವಿಂದ ಮನ್ತ್ರ ಮಾನುಷ್ಟುಭಂ ಪರಮ್। ಓಂ ನಮ ಸ್ಸಂಪುಟೇ ಕೃತ್ವಾ ಜಪ ನ್ವಿಷಧರೋಹರಃ"** ಮತ್ತು ಇಂದ್ರನಿಗೆ ಹಿರಣ್ಯ ರಾವಣ ದುರ್ವಾಸರಿಂದುಂಟಾದ ವಿಪತ್ತುಗಳೂ ವಿಷ್ಣುವಿನಿಂದಲೇ ಪರಿಹರಿಸಲ್ಪಟ್ಟವು.

ಗುರುಪಾತಕ ದೈತ್ಯ ಪೀಡೆಗಳಿಗೆ ಹೀಗೆ ನಿದರ್ಶನಗಳಿವೆ ಮುಂದೆ ಆದಿ ಪದವಿರುವದರಿಂದ, ವಿಷ್ಣು ವಿನಿಂದಲೇ ಸಾಕ್ಷಾತ್ತಾಗಿ ಪರಾಜಿತನಾಗಿರುವ ನಿದರ್ಶ ನವುಂಟು. ಬಾಣ ಯುದ್ಧದಲ್ಲಿ ರುದ್ರನು ಬಾಣ ಸಹಾಯಾರ್ಥವಾಗಿ **ಯುದ್ಧಕ್ಕೆ** ಶ್ರೀ ಕೃಷ್ಣನೊಂದಿಗೆ ನಿಂತು ಪರಾಜಿತನಾದನೆಂದು ವೈಷ್ಣವ ಪುರಾಣದಲ್ಲಿ **"ಜೃಂಭ ಣಾಸ್ತ್ರೇಣ ಗೋವಿಂದೋ ಜೃಂಭಯಾ ಮಾಸ ಶಂಕರಮ್। ನಶಶಾಕ ತದಾ ಯೋದ್ಧುಂ ಕೃಷ್ಣೇನಾ ಕ್ಲಿಷ್ಟ ಕರ್ಮಣಾ"** ಎಂದು ಹೇಳಲ್ಪಟ್ಟಿದೆ.

ಶ್ರೀ ಮದ್ರಾಮಾಯಣದಲ್ಲಿ ಪರಶುರಾಮನು ಹೇಳುತ್ತಾನೆ.– **ಹುಂಕಾ ರೇಣ ಮಹಾಬಾಹುಃ ಸ್ತಂಭಿತೋಥತ್ರಿಲೋಚನಃ। ಜೃಂಭಿತಂತದ್ಧನು**

**ದೃಷ್ಟ್ವಾ ಶೈವಂ ವಿಷ್ಣುಪರಾಕ್ರಮೈಃ"** ರುದ್ರ ಧನಸ್ಸು ವಿಷ್ಣು ಧನಸ್ಸಿನಿಂದ ನಿಶ್ಶಕ್ತಿಯುಳ್ಳದ್ದಾಗಿ ಮಾಡಿಲ್ಪಟ್ಟಿತೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಸೀತಾ ಸ್ವಯಂವರದಲ್ಲಿ ವಿಷ್ಣುವಾದ ಶ್ರೀ ರಾಮನು ಜನಕನಲ್ಲಿದ್ದ ಶಿವಧನಸ್ಸನ್ನು ಮುರಿದು ಹಾಕಿದನು. ಮುಂದಕ್ಕೆ **"ಅಧಿಕಂಮೇನಿರೆ. ವಿಷ್ಣುಂ ದೇವಾ ಸ್ಸರ್ಷಿಗಣಾಸ್ತದಾ"** ಎಂದಿರುತ್ತದೆ. ಬದರಿಕಾಶ್ರಮದಲ್ಲಿ ತಾಪಸ ವೇಷದಿಂದಿರುವ, ನರಸಖನಾದ ನಾರಾಯಣ ನೊಂದಿಗೆ ರುದ್ರನು ಯುದ್ಧಕ್ಕೆಬರಲು; ರುದ್ರನ ದುರ್ಗತಿಯನ್ನು ಕಂಡು ತಂದೆಯಾದ ಚತುರ್ಮುಖನು ಬಂದು, ಮಗನಾದ ರುದ್ರನನ್ನು ಕಂಡು ಶ್ರೀಮನ್ನಾರಾಯಣನನ್ನು ಶರಣು ಹೊಂದು ಎಂದು ಹಿತಬೋಧೆಯನ್ನು ಮಾಡಲು, ಆಗ ರುದ್ರನು, **ಪ್ರಸಾದಯಾ ಮಾಸ ಭವೋದೇವಂ ನಾರಾಯಣಂ ಪ್ರಭುಮ್। ಶರಣಂ ಜಗಾಮಾದ್ಯಂ ವರೇಣ್ಯಂ ವರದಂ ಹರಿಮ್॥"** ಶ್ರೀಮನ್ನಾರಾಯಣನಲ್ಲಿ ಶರಣಾಗತಿಯನ್ನು ಮಾಡಿ ಪ್ರಸನ್ನ ನಾಗು ಎಂದು ಪ್ರಾರ್ಥಿಸಿ ರಕ್ಷಿಸಲ್ಪಟ್ಟನು.

ಕುಂಡಧರೋಪಾಖ್ಯಾನದಲ್ಲಿ, **"ಯುಗ ಕೋಟಿ ಸಹಸ್ರಾಣಿ ವಿಷ್ಣುಮಾರಾಧ್ಯ ಪದ್ಮಭೂಃ। ಪುನಸ್ತ್ರೈಲೋಕ್ಯಧಾತೃತ್ವಂ ಪ್ರಾಪ್ತವಾನಿತಿಶುಶ್ರುಮ"** ಚತುರ್ಮುಖನು ಬಹುಕಾಲ ವಿಷ್ಣುವನ್ನು ಆರಾಧಿಸಿ ತ್ರೈಲೋಕ್ಯ ಪದವಿಯನ್ನು ಪುನಃ ಪಡೆದನು ಎಂದು ಹೇಳಲ್ಪಟ್ಟಿರುತ್ತದೆ ರುದ್ರನಿಗೆ ಪಶುಪತಿತ್ವವೂ ದೇವಪತಿತ್ವವೂ ವಿಷ್ಣುವನ್ನು ಯಜ್ಞದಲ್ಲಿ ತೃಪ್ತಿಗೊಳಿಸಿ ಬಂದವೆಂದು ಪ್ರಮಾಣಗಳಿವೆ.— **"ಮಹಾದೇವ ಸ್ಸರ್ವಮೇಧೇ ಮಹಾತ್ಮಾ ಹುತ್ವಾತ್ಮಾನಂ ದೇವದೇವೋಬಭೂವ"**. ಬಹ್ವೃಚದಲ್ಲೂ **"ಅಸ್ಯದೇವಸ್ಯ ಮೀಢುಷೋವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ ವಿಧೇಹಿ ರುದ್ರೋ ರುದ್ರೀಯಂ ಮಹಿತ್ವಮ್"** ಈ ದೇವನಾದ ವಿಷ್ಣುವಿಗೆ ಹವಿಸ್ಸಮರ್ಪಣೆಯನ್ನು ಮಾಡ, ಆತನ ಪ್ರೀತಿಯನ್ನು ಸಂಪಾದಿಸಿ ರುದ್ರನು ರುದ್ರಸಂಬಂಧವಾದ ಮಹಿಮೆಯನ್ನು ಹೊಂದಿದನೆಂಬ ಅರ್ಥವು. **"ಸೋಽಬ್ರವೀ ದ್ವರಂ ವೃಣಾ ಅಹಮೇವ ಪಶೂನಾ ಮಧಿಪತಿಃ ಅಸಾನೀತಿ ತಸ್ಮಾದ್ರುದ್ರಃ ಪಶೂನಾ ಮಧಿಪತಿಃ"** 'ತಾನು ಪ್ರಮಥಗಳಣಕ್ಕೆಲ್ಲಾ ಅಧಿಪತಿಯಾಗ ಬೇಕೆಂದು ರುದ್ರನು ವಿಷ್ಣುವಿನಲ್ಲಿ ವರವನ್ನು ಪ್ರಾರ್ಥಿಸಿ **ಪಶುಪತಿ** ಯಾದನು. ಶ್ರೀನಾರಾಯಣೀಯದಲ್ಲಿ, ಸಮಸ್ತ ದೇವತೆಗಳಿಗೂ ಭಗವದಾರಾಧನೆಯೂ ಅವನಿಂದಲೇ ಸದ್ಗತಿಯೂ ಹೇಳಲ್ಪಟ್ಟಿವೆ.—

**"ತಂದೇವಾ ಋಷಯಶ್ಚೈವ ನಾನಾ ತನು ಸಮಾಶ್ರಿತಾಃ। ಭಕ್ತ್ಯಾ ಸಂಪೂಜಯಂತ್ಯೇನಂ ಗತಿಂಚೈಷಾಂದದಾತಿಸಃ॥"** ಯಜ್ಞಾಗ್ರಹರಾಧ್ಯಾಯದಲ್ಲೂ ವಿಷ್ಣುವಿಗೆ ಸರ್ವಕರ್ಮಾರಾಧ್ಯತ್ವವೂ ಆತನ ಪ್ರಸಾದದಿಂದುಂಟಾದ ದೇವತೆಗಳ ಯಜ್ಞಹವಿರ್ಭಾಗವೂ ಹೇಳಲ್ಪಟ್ಟವೆ.

ಕರ್ಮ ಕಾಂಡದ ಪ್ರಥಮಾಧ್ಯಾಯದಲ್ಲಿ ಪಾರ್ವತಿಯು ತನ್ನ ಪತಿಯಾದ ರುದ್ರನನ್ನು ಕುರಿತು ಕೇಳುತ್ತಾಳೆ.– **"ನಿತ್ಯಮರ್ಚಯಸೇ ದೇವ ಕಂ ದೇವ ಮಧಿಕಂ ತವ। ಯಸ್ಮಾನ್ಮಾನಸ ಮವ್ಯಗ್ರಂ ಕೃತ್ವಾತ್ರಿಭುವನೇಶ್ವರ। ಜಪಹೋಮ ನಮಸ್ಕಾರೈಸ್ತಂ ವದಸ್ವತಥಾ ಮಮ"** ಯಾರು ನಿನಗಿಂತ ಅಧಿಕರು? ಯಾರನ್ನು ನೀನು ನ್ನಿತವೂ ಪೂಜಿಸುವೇ? ಇತ್ಯಾದಿ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾನೆ.– **"ಶೃಣು ತತ್ವಂ ಮಹಾ ಭಾಗೇ ಯಥಾ ನಿತ್ಯಂ ನಮಾಮ್ಯಹಮ್। ಅರ್ಚಯನ್ತಿ ಸದಾ ಯಂನ್ವೈ ಸದಾ ಪಶ್ಯತಿಸೂರಯಃ। ತಂನ್ವೈಯಥಾ ತಥಂ ವಕ್ಷ್ಯೇ ತಸ್ಮಿನ್ ಧರ್ಮಸ್ಯ ನಿರ್ಣಯಮ್। ವಿಷ್ಣುರ್ದರ್ಮೋಽಡುಪ ಶ್ರೀರ್ನೂರ್ ಉತ್ತರಾರ್ಧ ಉದಾಹೃತಃ"** ವಿಷ್ಣುವೇ ಸರ್ವಾಧಿಕನೆಂಬ ಭಾವದಿಂದ ಆತನನ್ನೇನಮಸ್ಕರಿಸುತ್ತೇನೆ, ಪೂಜಿಸುತ್ತೇನೆಂದು ಹೇಳಿ ಕೊಂಡಿರುತ್ತಾನೆ.

ನಾರಸಿಂಹ ಪುರಾಣದಲ್ಲಿ ಮೇಲಿನ ಅಭಿಪ್ರಾಯವೇ ಸಂಕ್ಷೇಪವಾಗಿ ಹೇಳಲ್ಪಟ್ಟಿರುತ್ತದೆ.– **"ಬ್ರಹ್ಮಾದಯಸುರಾ ಸ್ಸರ್ವೇ ವಿಷ್ಣು ಮಾರಾಧ್ಯತೇ ಪುರಾ। ಸ್ವಸಂಪದ ಮನುಪ್ರಾಪ್ತಾಃ ಕೇಶವಸ್ಯ ಪ್ರಸಾದತಃ"** ಚತುರ್ಮುಖ ರುದ್ರೇಂದ್ರಾದಿಗಳೆಲ್ಲಾ ಹಿಂದೆ ವಿಷ್ಣುವನ್ನು ಆರಾಧಿಸಿ ತಮ್ಮ ತಮ್ಮಗಳ ಸಂಪತ್ತಾದ ಲೋಕಾಧಿಕಾರವನ್ನು ಆತನ ಅನುಗ್ರಹದಿಂದ ಪಡೆದರೆಂದು ಹೇಳಲ್ಪಟ್ಟಿರುತ್ತದೆ.

(೩) ಹೀಗೆ ಶ್ರೀ ಮಹಾವಿಷ್ಣುವಿನಿಂದಲೇ ಬ್ರಹ್ಮರುದ್ರರುಗಳು **ಮಹಿಷ್ಠಫಲ ಪ್ರದಾನವನ್ನು** ಹೊಂದಿರುತ್ತಾರೆ. ಮತ್ತು **ಪ್ರಜಾಪತಿತ್ವವನ್ನೂ ಪಶುಪತಿತ್ವವನ್ನೂ** ಹೊಂದಿ ಅನೇಕ ಸಂದರ್ಭಗಳಲ್ಲಿ ಪರಿಪಾಲಿಸಲ್ಪಟ್ಟಿರುದರಿಂದ ಶ್ರೀ ಮಹಾವಿಷ್ಣುವಲ್ಲದೆ ಇನ್ನು ಯಾರು ರಕ್ಷಿಸಲು ಶಕ್ತರೆಂದು **"ಕೋಽನ್ಯಃ ಪ್ರಜಾಪಶುಪತೀ ಪರಿಪಾತಿ"** ಎಂದು ಕೇಳಿರುತ್ತಾರೆ, **ಪ್ರಜಾಪತಿ ಪಶುಪತೀ** ಇಬ್ಬರನ್ನೂ ದ್ವಿವಚನದಿಂದ ಪ್ರಜಾಪಶುಪತೀ ಎಂದು ಸೇರಿಸಿ ಹೇಳಿರುತ್ತಾರೆ.– ಮುಂದೆ ರುದ್ರನಿಗೆ ಪ್ರಾಪ್ತವಾದ ಮಹತ್ತಾದ ಇನ್ನೊಂದು ಫಲವನ್ನು ಹೇಳಿ ವಿಷ್ಣುವಿನ ಕೃಪೆಗೆ ಪಾತ್ರನಾಗಿ ಆತನು ಶೇಷಭೂತನೆಂದು ಹೇಳುತ್ತಾರೆ.– **ಕಸ್ಯಪಾದೋದಕೇನ ಸಶಿವಃ** ರುದ್ರನಿಗಿದ್ದ ಅಮಂಗಳತ್ವವೆಲ್ಲಾ ಹೋಗಿ ಪರಿಶುದ್ಧನಾದುದು ಯಾರ ಪಾದೋದಕದಿಂದ ಎಂದು ಕೇಳುತ್ತಾರೆ. ಹೀಗೆ ಪೂರ್ವಪಕ್ಷಿಗಳನ್ನು ಕೇಳಿ, ಶ್ರೀ ಮನ್ನಾರಾಯಣನಿಗೇ ಪರದೇವತಾಪಾರಮಾರ್ಥ್ಯವನ್ನು ಸ್ಥಾಪಿಸಿರುತ್ತಾರೆ. ಇವೆಲ್ಲಾ ವಾದಗಳನ್ನೂ ಶ್ರೀ ಕೂರೇಶರು, ಯತಿವರ್ಯರ ಅನುಜರಾದ ಗೋವಿಂದ ಭಟ್ಟರವರಿಗೆ ಆರೋಪಿತವಾದ ಅದ್ವೈತ ಸಿದ್ಧಾಂತವನ್ನೂ ತ್ಯಜಿಸಿ ತಮ್ಮ ಸಿದ್ಧಾನ್ತವನ್ನು ಅವಲಂಭಿಸುವ ಹಾಗೆ ಮಾಡಿದ ಕಾಲದಲ್ಲಿ ಉಪಯೋಗಿಸಿದರು, ಹಿಂದೆ **ಪ್ರಜಾಪಶುಪತೀ** ಎಂದು ದ್ವಂದ್ವಸಮಾಸದಿಂದ ಚತುರ್ಮುಖರುದ್ರರು ಇಬ್ಬರೂ ಹೇಳ

**ವ್ಯರೋಚತ ತದಾತೋಯಂ ನಿರ್ಮಲಂ ಗತ ಕಲ್ಮಷಮ್।**
**ತತ್ರದೇವರ್ಷಿಗಂಧರ್ವಾ ವಸುಧಾತಲ ವಾಸಿನಃ।**
**ಭವಾಂಗ ಪತಿತಂ ತೋಯಂ ಪವಿತ್ರ ಮಿತಿ ಪಸ್ಪೃಶುಃ॥**

ಆ ಗಂಗಾನದಿಯ ಉದಕವು ಶಂಕರನ ಶಿರಸ್ಸಿನಿಂದ ಬಿದ್ದು, ಪುನಃ ಭೂಮಿಯಲ್ಲಿ ಅಲ್ಲಿಂದ ಬಿದ್ದು, ಆಗ ನಿರ್ಮಲವಾಗಿಯೂ ಪವಿತ್ರವಾಗಿಯೂ ತೋರಿತು. ದೇವತೆಗಳೂ ಋಷಿಗಳೂ ಭೂಮಿಯಲ್ಲಿರುವವರೂ ಭವನ ಎಂದರೆ ರುದ್ರನ ಅಂಗದಿಂದ ಬಿದ್ದ ನೀರು, ವಿಷ್ಣು ಪಾದೋದಕವಾಗಿ ನೈಜಪವಿತ್ರತೆ ಇದೆ ಎಂದು ತಿಳಿದು ತಲೆಗೆ ಪ್ರೋಕ್ಷಿಸಿ ಕೊಂಡರು ಎಂದರೆ ಸ್ನಾನಮಾಡಿದರು ಎಂಬರ್ಥವು. ಅಥವಾ ಭವಾಂಗದಿಂದ ಪತಿತವಾಗಿದ್ದರೂ, ಪತಿತಪಾವನವಾದ ಗಂಗೋದಕವು ಪವಿತ್ರವಾದುವೆಂದು ಅವಗಾಹನಮಾಡಿದರು ಎಂಬರ್ಥವು. ಶಂಕರ ತಲೆಯಲ್ಲಿ ಬಿದ್ದು ನೆಲದಲ್ಲಿ ಬಿದ್ದುದು ಎಂಬ ಮಹರ್ಷಿಯ ವಾಕ್ಯಾನುಸಾರ, **"ವಿಷ್ಣುಪಾದೋದ್ಭವಾಂ ದಿವ್ಯಾಂ"** ಎಂದು ಹೇಳಿರುವ ಹಾಗೆ ದಿವ್ಯತೆಯೂ ಪವಿತ್ರತೆಯೂ ನೈಜವಾಗಿಯೇ ಉಂಟು; ಆದರೆ ಶಂಕರ ಶಿರಸ್ಸಿನ ಸಂಬಂಧದಿದೇನಾದರೂ ಪವಿತ್ರೆಗೆ ಕುಂದಕವೆಂದರೆ ಪುನಃ ಭೂಮಿಯಲ್ಲಿ ಬಿದ್ದುದರಿಂದ ಅನ್ಯೂನತೆಯು ಆದರಿಂದ ತೋರಲಗಿತು. ಕಾಡಿನಲ್ಲಾಗಲಿ ಅರಣ್ಯದಲ್ಲಿಯಾಗಲಿ ಉತ್ತಮ ಜಾತಿಯರಿದ್ದು ನೀರಿಗೆ ಅಭಾವವಾದರೆ ಕೀಳು ಜಾತಿಯವರು ಬಹು ದೂರದಿಂದ ಒಳ್ಳೆಯ ನೀರನ್ನು ತಂದು ಭೂಮಿಯಲ್ಲಿ ಬಿಟ್ಟರೂ ಅದನ್ನು ಪರಿಗ್ರಹಿಸ ಬಹುದೆಂಬ ಶಾಸ್ತ್ರವಿರುತ್ತದೆ. ಆದುದರಿಂದ ಭಾಗವತ ರಾಮಾಯಣ ವಾಕ್ಯಗಳಿಂದ ಏಕಕಂಠ್ಯವೇವಿನಾ ವಿರೋಧವಿಲ್ಲವು. ಆದರೆ ಕೆಲವರು ಭವಾಂಗದಿಂದ **ಪತಿತಂ ತೋಯಂ** ಬಿದ್ದ ನೀರಾದುದರಿಂದ ಮಹಾಭಾಗವತ ದೇಹ ಸಂಬಂಧ ಉಂಟಾದುದರಿಂದ ಪವಿತ್ರವಾದುದೆಂದು ಪರಿಗ್ರಹಿಸಿದರು ಎಂದು ಕೆಲವರು ಅರ್ಥಮಾಡಿರುತ್ತಾರೆ. ಇದು ಸರಿಯಲ್ಲವು. ಆದರೆ **"ಹರಸ್ಯ ಗಾತ್ರ ಸಂಸ್ಪರ್ಶಾತ್ಪವಿತ್ರತ್ವಮುಪಾಗತಾ"** ಎಂದರೆ ಹರನ ಶರೀರ ಸಂಬಂಧದಿಂದ ಪವಿತ್ರತೆಯು ಗಂಗೆಗೆ ಉಂಟಾಯಿತು ಎಂಬ ಪ್ರಮಾಣ ವಿದೆಯಲ್ಲವೇ? ಹೌದು ಪ್ರಮಾಣ ಉಂಟು; ಅರ್ಥವು ಹಾಗಲ್ಲವು. ಹಾಗೆ ಅರ್ಥ ಉಂಟಾಗುವದಕ್ಕೆ **ಹರಗಾತ್ರ ಸಂಸ್ಪರ್ಶಾತ್** ಎಂದಿರ ಬೇಕಾಗಿತ್ತು ಮೇಲಿನ ವಾಕ್ಯಕ್ಕೆ ಅರ್ಥ ಹೇಗೆಂದರೆ **ಹರಸ್ಯ ಪವಿತ್ರತ್ವಂ ಉಪಾಗತಾ.—** ಹರನಿಗೆ ಪವಿತ್ರತೆಯನ್ನು ಉಂಟುಮಾಡಿದುದು ಆಯಿತು; ಏತರಿಂದ ಎಂದರೆ ಆತನ **ಗಾತ್ರ ಸಂಸ್ಪರ್ಶತ್-** ಆತನ ತಲೆಗೆ ಅದರ ಸಂಬಂಧ ಉಂಟಾದುದರಿಂದ ಎಂಬರ್ಥವು. ಭಾರತದಲ್ಲೂ ಈ ಅರ್ಥವೇ ಉಪಪಾದಿತವು; **"ತತಂಬು ಪತಿತಂ ದೃಷ್ಟ್ವಾದಧಾರ ಶಿರಸಾಹರಃ। ಪಾವನಾರ್ಥಂ ಜಟಾಮಧ್ಯೇಯೋ**

**ಕಸ್ಯೋದರೇ ಹರ ವಿರಿಂಚ ಮುಖ ಪ್ರಪಂಚಃ।**
**ಕೋರಕ್ಷತೀ ಮಮು ಜನಿಷ್ಟ ಚ ಕಸ್ಯ ನಾಭೇಃ।**
**ಕ್ರಾಂತ್ವಾ ನಿಗೀರ್ಯ ಪುನ ರುದ್ಗಿರತಿ ತ್ವದನ್ಯಃ।**
**ಕಃ ಕೇನ ವೈಷ ಪರವಾನಿತಿ ಶಕ್ಯ ಶಙ್ಕಃ॥**

---

**ಗ್ಯೋಽಸ್ಮೀತ್ಯವಧಾರಣಾತ್।"** ಪವಿತ್ರತೆ ಉಂಟಾಯಿತು ಎಂದರೆ ಹಿಂದೆ **ಅಪವಿತ್ರತೆ** ಯಿರಬೇಕು. ವಿಷ್ಣುಪಾದೋದಕವಾದ ಗಂಗೆಗೆ ಅಪವಿತ್ರತ್ವ ಎಲ್ಲಿಯದು? ಅಪವಿತ್ರತೆಯು ಆದುದರಿಂದ ರುದ್ರನಲ್ಲಿ;ತಂದೆಯ ಶಾಪದಿಂದ ಸಿದ್ಧವು. ಇದನ್ನು ಕಳೆದುಕೊಂಡು ರುದ್ರನು ಪವಿತ್ರನಾದನೆಂದೇ ಅರ್ಥ ಮಾಡ ತಕ್ಕದ್ದಾಗಿರುತ್ತದೆ.

ಹೀಗೆ ವೇದಾಪಹಾರ, ಗುರುಪಾತಕ ದೈತ್ಯಪೀಡಾ ಮೊದಲಾದ ಆಪತ್ತುಗಳು ಒದಗಿದ ಕಾಲದಲ್ಲಿ ಶ್ರೀ ಮಹಾವಿಷ್ಣುವೇ ಅವುಗಳನ್ನೆಲ್ಲಾ ನಿವಾರಣ ಮಾಡಿ ಅವರುಗಳಿಗೆ ಶ್ರೇಯಸನ್ನುಂಟು ಮಾಡಿದನೆಂಬ ಅನೇಕ ಇತಿಹಾಸ ಋಷಿವಾಕ್ಯಗಳಿಂದಲೇ ಬ್ರಹ್ಮರುದ್ರೇದ್ರಾದಿಗಳು ಪರತತ್ವವಲ್ಲವೆಂದೂ ಶ್ರೀಯಃ ಪತಿಯಾದ ನಾರಾಯಣನೇ ಪರತತ್ವವೆಂದೂ ಎಂಬುದೇ ಈ ಶ್ಲೋಕದ ಸಾರ ಭೂತಾರ್ಥವು. ॥೧೩॥

**ಅವತಾರಿಕೆ.** ಹಿಂದಿನ ಶ್ಲೋಕದಲ್ಲಿ ಪ್ರಜಾಪತಿ ಪಶುಪತಿಗಳು ನಮ್ಮ ಹಾಗೆಯೇ ಜೀವಕೋಟಿಗೆ ಸೇರಿದವರಾಗಿ, ಪರತಂತ್ರರಾಗಿ, ಕರ್ಮವಶ್ಯರಾಗಿ, ಆದರೆ ತುಂಬಾ ಸುಕೃತಿಗಳಾದುದರಿಂದ ಲೋಕಾಧಿಪತಿಗಳಾದ ಪ್ರಯುಕ್ತ ಅವರನ್ನು ಪರತತ್ವವೆಂದು ಭಾವಿಸುವದು ಶಾಸ್ತ್ರ ಸಮ್ಮತವಲ್ಲವೆಂದೂ ಹೇಳಿ, ಈ ಶ್ಲೋಕದಲ್ಲೂ ಹಿಂದಿನ ಶ್ಲೋಕದಲ್ಲಿ **ಸ್ಥಾಪಿಸಿದ ಹಾಗೆ (ಕಶ್ರೀಃ ಶ್ರಿಯಃ** ಎಂಬಲ್ಲಿ ಶ್ರೀಯಃ ಪತಿಯೇ ಪರತತ್ವವೆಂದು) ಜಗತ್ಸೃಷ್ಟಿ ಸ್ಥಿತಿಲಯಾದಿಗಳಿಗೆ ಆತನೇ ಕಾರಣ ಭೂತನಾಗಿಯೂ, ಜಗತ್ತಿನ ಚಿದ ಚಿತ್ತುಗಳಿಗೆಲ್ಲಾ ಆತನೇ ಆತ್ಮವಾಗಿ, ಚೇತನರುಗಳಿಗೆಲ್ಲಾ ನಿಯಾಮಕನಾಗಿ, ರಕ್ಷಕನಾಗಿ, ತನ್ನ ಪರತ್ವದಿಂದ ನಿಸ್ಸಮಾಭ್ಯಧಿಕನಾಗಿ ಸರ್ವೋತ್ಕೃಷ್ಟವೆಂದು ಉಪದೇಶಿಸುತ್ತಾರೆ. ಪೂರ್ವಪಕ್ಷಿಗಳನ್ನು ಕುರಿತು ಶಾಸ್ತ್ರರೀತ್ಯಾ ಶ್ರೀ ಮನ್ನಾರಾಯಣನಲ್ಲದೆ ಇನ್ನು ಯಾರು ಜಗತ್ತಿಗೆ ಕಾರಣ ಭೂತರಿದ್ದಾರೆಂದು ಪ್ರಶ್ನಿಸುತ್ತಾರೆ.

**ಅರ್ಥವು–** ಓ ಶ್ರಿಯಃ ಪತಿಯೇ! **ಕಸ್ಯೋದರೇ–** ನೀನಲ್ಲದೆ ಇನ್ನು ಯಾರಉದರದಲ್ಲಿ (ಮುಂದೆ **ತ್ವದನ್ಯಃ** ಎಂದಿರುವುದರಿಂದ ಹಾಗೆಯೇ ಅರ್ಥಮಾಡ ತಕ್ಕದ್ದು) **ಹರ**–ರುದ್ರನು, **ವಿರಿಂಚ–** ಚತುರ್ಮುಖನು ಅಮರದಲ್ಲಿ ವಿರಿಂಚಿ ಎಂದಿರುತ್ತದೆ. **ಮುಖ**- ಮೊದಲಾದ, **ಪ್ರಪಂಚಃ–** ಜಗತ್ತು, ಇರುತ್ತದೆ? ಶ್ರೀಮನ್ನಾ

ರಾಯಣನೇ ಈ ಚಿದಚಿದಾತ್ಮಕ ಜಗತ್ತಿಗೆಲ್ಲಾ ಆಧಾರನು ಎಂಬ ತಾತ್ಪರ್ಯವು. ಆತನಲ್ಲದೆ ಇನ್ನು ಯಾರು ಜಗತ್ತಿಗೆ ಆಧಾರವೆಂದು ಕೇಳಿದ್ದಾರೆ. **ಹರ ವಿರಂಚಿ** ಎಂಬ ನಾಮ ರೂಪಗಳು ಹೇಳಲ್ಪಟ್ಟಿರುವುದರಿಂದ ಸೃಷ್ಟಿಸಲ್ಪಟ್ಟ ಜಗತ್ತು ಎಂದು ಇಲ್ಲಿ ಭಾವಿಸಬಹುದು. **ಕಃ** – ಶ್ರಿಯಃ ಪತಿಯಾದ ನೀನಲ್ಲದೆ ಇನ್ನು ಯಾರು, **ಇಮಂ**- ಈ ಸೃಷ್ಟಿಸಿದ ಜಗತ್ತನ್ನು, **ರಕ್ಷತಿ** – ರಕ್ಷಿಸುತ್ತಾರೆ? ಬ್ರಹ್ಮರುದ್ರಾದಿ ಮಿಕ್ಕವರೆಲ್ಲಾ ರಕ್ಷಣೆಯಲ್ಲಿ ಅಸಮರ್ಥವೆಂಬುವುದು ಸೂಚಿತವು. **ಕಸ್ಯನಾಭೇಃ** – ನೀನಲ್ಲದೆ ಇನ್ನುಯಾರ ನಾಭಿ ಕಮಲದಿಂದ ಇಂತಹ ಪ್ರಪಂಚವು, **ಅಜನಿಷ್ಟಚ**– ಸೃಷ್ಟಿಸಲ್ಪಟ್ಟಿತು? **ತ್ವದನ್ಯಃ ಕಃ** - ನೀನಲ್ಲದೆ ಇನ್ನುಯಾರು, **ಕ್ರಾಂತ್ವಾ**– ಸೂಕ್ಷ್ಮ ಸ್ಥೂಲ ಎರಡುಕಡೆಯಲ್ಲೂ ಎಲ್ಲವನ್ನೂ ವ್ಯಾಪಿಸಿ; **ನಿಗೀರ್ಯ** – ಪ್ರಳಯದಲ್ಲಿ ಈ ಸೃಷ್ಟಿಸಿದುದನ್ನೇ ಪುನಃ ನುಂಗಿಎಂದರೆ ಉದರದಲ್ಲಿಟ್ಟುಕೊಂಡು, **ಪುನಃ ಉದ್ಗಿರತಿ** – ಪುನಃ ನಿನ್ನ ಸಜ್ಕಲ್ಪಾನುಸಾರ ಹೊರಕ್ಕೆ ಬಿಡುತ್ತಾರೆ? ಉಗುಳುತ್ತಾರೆ;ಎಂದರೆ ಸೃಷ್ಟಿಸುತ್ತಾರೆ? ಹೀಗೆ ಸೃಷ್ಟಿ, ಪಾಲನೆ, ಪ್ರಳಯ ಜಗತ್ತಿನ ಸರ್ವ್ವವ್ಯಾಪಾರವು ನಿನ್ನಿಂದಲೇ. ಈ ವಿಶ್ವಕ್ಕೆಲ್ಲಾ ನೀನೇ ಕಾರಣನು, ನೀನೇವ್ಯಾಪಿಸಿ ಆತ್ಮಾವಾಗಿರುತ್ತೀಯೇ, ನೀನೇಆಧಾರನು ಪಾಲಕನು ನಿಯಾಮಕನು. **ಕೇನವಾ** - ನೀನಲ್ಲದೆ ಇನ್ನುಯಾರಿಂದ, **ಏಷಃ** – ಈ ಪ್ರಪಂಚವು, **ಪರವಾ಼ನ್** – ನಾಥನನ್ನುಳ್ಳದ್ದು; ನೀನೇ ಎಲ್ಲಕ್ಕೂ ಸ್ವಾಮಿಯಾಗಿ, ಜಗತ್ತೆಲ್ಲಾ ನಿನ್ನ ಸ್ವತ್ತು ಎಂಬ ಭಾವವು; **ಇತಿ** – ಎಂಬುದಾಗಿ, **ಶಕ್ಯ ಶಂಕಃ** – ಶಂಕಿಸಲು ಸಾಧ್ಯವು. ಪ್ರಾಜ್ಞರುಯಾರು ಈ ವಿಷಯದಲ್ಲಿ ಶಂಕಿಸಲಾರರೆಂಬ ಭಾವವು. ಇದರಿಂದ ಶ್ರುತಿಯಲ್ಲಿ **"ಪತಿಂ ವಿಶ್ವಸ್ಯಾತ್ಮಾ"** ಎಂಬಲ್ಲ ಹೇಳೀರುವ ಸ್ವಾಮ್ಯತ್ವವು, ಶೇಷಿತ್ವವು, ನಿಯಮನತ್ವಾದಿಗಳು ಈ ಶ್ಲೋಕದಲ್ಲಿ ಹೇಳಲ್ಪಟ್ಟವು ಇಲ್ಲಿ ಶ್ರಿದೇಶಿಕರವರು ನಮ್ಮ ಸಿದ್ಧಾನ್ತಕ್ಕೆ ತಳ ಹದಿಯಾಗಿರುವ ಅಭಿಪ್ರಾಯವಾದ ಪ್ರಧಾನ ಪ್ರತಿ ತಂತ್ರಾದಿಕಾರದ ಆದಿಶ್ಲೋಕದಲ್ಲಿ ಹೇಳಿರುವ ವಿಷಯವು ಇಲ್ಲಿ ಉಪಪಾದಿತವು. **"ಆಧೇಯತ್ವ ಪ್ರಭೃತಿನಿಯಮೈರಾದಿ ಕರ್ತುಶ್ಶರೀರಂ"** ಎಂಬ ಶ್ಲೋಕವು ಅನುಸಂಧೇಯವು. ಶ್ರೀಮದ್ರಹಸ್ಯತ್ರಯಸಾರದ ನೆಯ ಪುಟಗಳನ್ನು ನೋಡಿ ಆದುದರಿಂದ ಶ್ರೀಯಃ ಪತಿಯೇ ಜಗತ್ತಿಗೆ ಕಾರಣನು, ಆಧಾರನು, ಅವನೇ ಆತ್ಮಾ ನಿಯಾಮಕನು, ಆತನೇ ಸತ್ತಾದಾಯಿಕನು, ಆತನೇಶೇಷಿ ಎಂದು ಹೇಳಲ್ಪಟ್ಟಿತು.

**ಉಪಪಾದನೆಯು ಕಸ್ಯೋದರೇ ಮುಂತಾದ್ದು.** ತನ್ನ ಉದರದಲ್ಲಿ ಎಲ್ಲಾ ವಿಶ್ವವು ಉಂಟೆಂಬುದನ್ನು ಶ್ರೀ ಕೃಷ್ಣಭಗವಾ಼ನರವರು ಯಶೋದೆಗೂ, ಹಾಗೆಯೇ ಗೀತೆಯಲ್ಲಿ ೧೧ನೆಯ ಅಧ್ಯಾಯದಲ್ಲಿ ಅರ್ಜುನನಿಗೂ ಇತರ ಋಷಿ

ಗಳು ಮೊದಲಾದವರಿಗೂ ತೋರಿಸಿರುತ್ತಾರೆ. ಹೀಗೆ ಉದರದಲ್ಲೇ ಎಲ್ಲವನ್ನು ಪ್ರಳಯಕಾಲದಲ್ಲಿ ಇಟ್ಟುಕೊಳ್ಳುತ್ತಾನೆಂಬುದು ಕಠ ಶ್ರುತಿಯಲ್ಲಿ **"ಯಸ್ಯ ಬ್ರಹ್ಮ ಚಕ್ಷತ್ರಂಚ ಉಭೇಭವತಿ ಓದನಃ। ಮೃತ್ಯುರ್ಯ ಸ್ಯೋಪಸೇಚನಂ ಕ ಇತ್ಥಾ ವೇದಯತ್ರಸಃ"** (೧. ೨. ೨೫.) ಎಂದರೆ ಯಾವ ಸರ್ವೇಶ್ವರನಿಗೆ ಬ್ರಾಹ್ಮಣ ಕ್ಷತ್ರಿಯಾದಿ ಸರ್ವಚರಾಚರಗಳೆಲ್ಲಾ ಭೋಗ್ಯವಾಗಿ ಪ್ರಳಯದೆಶೆಯಲ್ಲಿ ಊಟವೋ, ಮೃತ್ಯುವು ಯಾವ ಸರ್ವೇಶ್ವರನಿಗೆ ಭೋಗ್ಯವಾದ ಉಪ್ಪಿನಕಾಯಿಯ ರೂಪದಲ್ಲಿ ವ್ಯಂಜನವೋ ಅಂತವನನ್ನು ಯಾರು ಚನ್ನಾಗಿತಿಳಿದವರಿದ್ದಾರೆ? ಎಂದರೆ ಪ್ರಳಯ ದಶೆಯಲ್ಲಿ ಎಲ್ಲಾ ಜಗತ್ತನ್ನೂ ಪ್ರಳಯ ಹೊಂದಿಸಿ, ಸೂಕ್ಷ್ಮದೆಶೆಯಲ್ಲಿ ಅವು ಗಳೊಂದಿಗೆ ಸೇರಿರುತ್ತಾನೆಂಬ ಭಾವವು. ಇದು **"ಅತ್ತಾ ಚರಾ ಚರಗ್ರಹಣಾತ್"** ಎಂಬ (1. 2. 25) ಬ್ರಹ್ಮಸೂತ್ರಾರ್ಥವು. ಈ ಅಭಿಪ್ರಾಯವೇ **"ಗ್ರಸೇತ್ ಸಂಸಾರ ಸಮಯೇ ಜಗತ್ಸ್ಥಾವರ ಜಙ್ಗಮಮ್"** ಎಂಬಲ್ಲಿ ಹೇಳಲ್ಪಟ್ಟಿರು ತ್ತದೆ. ವಿಶ್ವದ ಪ್ರಳಯ ಕಾಲದಲ್ಲಿ ಭಗವಂತನಲ್ಲೇ ಸರ್ವವೂ ವಸಿಸುತ್ತದೆಂದು **"ಕಿಂತದಾಸೀನ್ನೈತೇಹ ಕಿಂಚನಾಗ್ರ ಅಸೀದ ಮೂಲ ಮನಾಧಾರಂ ಇಮಾಃ ಪ್ರಜಾಃ ಪ್ರಜಾಯನ್ತೇ ದಿವ್ಯೋದೇವ ಏಕೋ ನಾರಾಯಣಃ"** ಎಂದು ಸುಬಾಲೋಪನಿಷತ್ತಿನಲ್ಲಿ ಹೇಳಲ್ಪಟ್ಟಿರುತ್ತದೆ. ಇದರ ಅರ್ಥವು, ಆ ಪ್ರಳಯ ಕಾಲದಲ್ಲಿ ಸೃಷ್ಟಿಗೆ ಮುಂಚೆ ಎಲ್ಲವೂ ಸೂಕ್ಷ್ಮಚಿದ ಚಿದ್ವಿಶಿಷ್ಟವಾಗಿ ನಾಮ ರೂಪಕ್ಕೆ ಅನರ್ಹವಾದದೆಶೆಯಲ್ಲಿದ್ದುದರಿಂದ ಯಾವುದೂ ಇಲ್ಲದ ಹಾಗೆ ಇತ್ತು. ಪರಮಾತ್ಮ ಸಙ್ಕಲ್ಪ ವಿಲ್ಲದುದರಿಂದ ಎಲ್ಲವೂ ನಿರಾಧಾರವಾಗಿದ್ದುದರಿಂದ ಸೃಷ್ಟಿಯಿಲ್ಲವು. ದಿವ್ಯನಾದ ನಾರಾಯಣನೊಬ್ಬನೇ ಅವುಗಳ ಸೂಕ್ಷ್ಮದೆಶೆ ಯೊಂದಿಗೆ ಇದ್ದನು. ಮಹಾಭಾರತದಲ್ಲೂ **ಬ್ರಹ್ಮಾದಿಷು ಪ್ರಲೀನೇಷು ನಷ್ಟೇ ಲೋಕೇ ಚರಾಚರೇ। ಆಭೂತ ಸಂಪ್ಲವೇಪ್ರಾಪ್ತೇ ಪ್ರಲೀನಃ ಪ್ರಕೃತೌ ಮಹಾನ್। ಏಕಸ್ತಿಷ್ಠತಿ ವಿಶ್ವಾತ್ಮಾ ಸತು ನಾರಾಯಣಃ ಪ್ರಭುಃ"** ಚತುರ್ಮುಖ ಬ್ರಹ್ಮನೇ ಮೊದಲಾದವರೆಲ್ಲಾ ಲೀನವಾಗಿ ಚರಾಚರಗಳೆಲ್ಲಾ ಕಣ್ಣಿಗೆ ಕಾಣದೇ ಹೋದಾಗ ಹೀಗೆ ಪ್ರಳಯವು ಪ್ರಾಪ್ತವಾಗಲಾಗಿ ಮಹತ್ತತ್ವವು ಪ್ರಕೃತಿಯಲ್ಲಿ ಲೀನವಾದಾಗ ಇವುಗಳ ಸೂಕ್ಷ್ಮದೆಶೆಯೊಂದಿಗೆ ಪ್ರಭುವಾದ ಶ್ರೀಮನ್ನಾರಾ ಯಣನು ಒಬ್ಬನೇ ಇರುವನಾಗಿ ತೋರುತ್ತಾನೆ. **"ಕೃಷ್ಣ ಏವಹಿ ಲೋಕಾನಾಂ ಉತ್ಪತ್ತಿರಪಿಚಾಪ್ಯಯಮ್"** ಕೃಷ್ಣನೇ ಲೋಕಗಳ ಸೃಷ್ಟಿಲಯಗಳಿಗೆ ಕಾರ ಣನು. ವಿಷ್ಣುಪುರಾಣದಲ್ಲಿ

**ಪ್ರಕೃತಿರ್ಯ್ಯಾಮಯಾ ಖ್ಯಾತಾವ್ಯಕ್ತಾವ್ಯಕ್ತ ಸ್ವರೂಪಿಣೀ।**
**ಪುರುಷಶ್ಚಾ ಪ್ಯುಭಾ ವೇತೌ ಲೀಯೇತೇ ಪರಮಾತ್ಮನಿ॥**

**ಪರಮಾತ್ಮಾ ಚ ಸರ್ವೇಷಾಂ ಆಧಾರಃ ಪರಮೇಶ್ವರಃ।**
**ವಿಷ್ಣುನಾಮಾ ಸವೇದೇಷು ವೇದಾಂತೇಷು ಚ ಗೀಯತೇ॥**

ಪ್ರಳಯ ಕಾಲದಲ್ಲಿ ಸೂಕ್ಷ್ಮಾವಸ್ಥೆಯಲ್ಲಿ ವ್ಯಕ್ತವಲ್ಲದೆಯೂ ಸೃಷ್ಟಿಯಲ್ಲಿ ಸ್ಥೂಲಾವಸ್ಥೆಯನ್ನು ಹೊಂದಿಯೂ ಇರುವ ಜಡ ಪ್ರಕೃತಿಯು ಯಾವುದು ಹೇಳಲ್ಪಟ್ಟಿತೋ ಅದೂ ಮತ್ತು ಚೇತನನಾದ ಪುರುಷನೆನಿಸುವ ಜೀವಾತ್ಮನೂ (ಜಾತ್ಯೇಕವಚನವು) ಹೀಗೆ ಇವೆರಡೂ ಪ್ರಳಯಕಾಲದಲ್ಲಿ ಸೂಕ್ಷ್ಮದೆಶೆಯನ್ನು ಹೊಂದಿ ಪರಮಾತ್ಮನಲ್ಲಿ ಲಯವನ್ನು ಹೊಂದಿರುತ್ತವೆ. ಪರಮಾತ್ಮನಾದರೋ ಎಲ್ಲವನ್ನೂ ವ್ಯಾಪಿಸುವವನಾಗಿ ಎಲ್ಲಕ್ಕೂ ಆಧಾರವಾಗಿ ಎಲ್ಲಕ್ಕೂ ನಿಯನ್ತಾವಾಗಿ ವಿಷ್ಣುವೆಂಬ ನಾಮಕನಾಗಿದ್ದಾನೆಂದು ವೇದವೇದಾಂತಗಳಲ್ಲಿ ಕೊಂಡಾಡಲ್ಪಟ್ಟಿರುತ್ತದೆ. **ವಿಷ್ಣು ಧರ್ಮದಲ್ಲಿ "ಬ್ರಹ್ಮಾ ಶಂಭು ಸ್ತಥೈವಾರ್ಕ ಶ್ಚಂದ್ರಮಾಶ್ಚ ಶತಕ್ರತುಃ। ಏಕದಾದ್ಯಾಸ್ತಥೈವಾನ್ಯೇಯುಕ್ತಾ ವೈಷ್ಣವತೇಜಸಾ। ಜಗತ್ಕಾರ್ಯಾವಸಾನೇಷು ವಿಯುಜ್ಯನ್ತೇ ಸ್ವತೇಜಸಾ। ವಿತೇಜಸಸ್ತೇ ಸರ್ವೇ ಚ ಪಂಚತ್ವ ಮುಪಯಾನ್ತಿ ಚ"** ಚತುರ್ಮುಖನೂ ರುದ್ರನೂ ಸೂರ್ಯ ಚಂದ್ರರೂ ಇಂದ್ರನೂ ಮತ್ತು ಇತರರೂ ಶ್ರೀ ಮಹಾವಿಷ್ಣುವಿನಿಂದ ತೇಜಸ್ಸನ್ನು ಹೊಂದಿದವರಾಗಿ, ಜಗತ್ತಿನ ಕಾರ್ಯವು ಮುಗಿದ ನಂತರ ವಿಷ್ಣು ಸಜ್ಕಲ್ಪದಿಂದ ತಮ್ಮ ತೇಜಸ್ಸನ್ನೂ ಕಳೆದುಕೊಂಡವರಾಗಿ ಲಯವನ್ನು ಹೊಂದಿ ಪರಮಾತ್ಮನಲ್ಲೇ ಇರುತ್ತಾರೆ. ಹಾಗೆಯೇ **ನಾರಾಯಣೇ ಪ್ರಲೀಯನ್ತೇ** ಎಂದು ಹೇಳಲ್ಪಟ್ಟಿರುತ್ತದೆ.

**ಮಾರ್ಕಂಡೇಯದಲ್ಲಿ "ಸ್ವಪತ ಸ್ತಸ್ಯವೈ ಪದ್ಮಂ ಕೋಟಿ ಸೂರ್ಯ ಸಮಪ್ರಭಮ್। ನಾಭೇರ್ವಿನಿ ಸ್ಸೃತಂ ತಸ್ಯ ತತ್ರೋತ್ಪನ್ನಃ ಪಿತಾಮಹಃ"** **ಕ್ಷೀರ ಸಾಗರ** ಶಾಯಿಯ ನಾಭೀಕಮಲದಿಂದ ಪಿತಾಮಹನಾದ ಚತುರ್ಮುಖನು ಜನಿಸಿದನೆಂದು ಇರುತ್ತದೆ. **ಉತ್ತರ ರಾಮಾಯಣದ** ಇನ್ನೊಂದು ಕಡೆಯಲ್ಲಿ **"ಮಹಾರ್ಣವೇ ಶಯಾನೋಽಪ್ಸು ಮಾಂತ್ವಂ ಪೂರ್ವಮಜೀಜನಃ। ಪದ್ಮೇ ದಿವ್ಯಾರ್ಕ ಸಂಕಾಶೇ ನಾಭ್ಯಾಮುತ್ಪಾದ್ಯ ಮಾನಪಿ। ಪ್ರಾಜಾಪತ್ಯಂ ತ್ವಯಾ ಕರ್ಮ ಸರ್ವಂ ಮಯಿನಿವೇಶಿತಮ್"** ಚತುರ್ಮುಖನು ಶ್ರೀ ರಾಮನನ್ನು ಕುರಿತು ಹೇಳುವ ಮಾತು; ನೀನು ಸಾಗರದಲ್ಲಿ ಮಲಗಿರುವಾಗ ನಿನ್ನ ನಾಭೀಕಮಲದಿಂದ ನನ್ನನ್ನು ಜನಿಸುವ ಹಾಗೆ ಮಾಡಿ ಪ್ರಜಾಸೃಷ್ಟಿ ಕೆಲಸವು ನನ್ನಲ್ಲಿ ಇಡಲ್ಪಟ್ಟಿತು. ಎಂದು ಹೇಳಲ್ಪಟ್ಟಿರುತ್ತದೆ. ವಿಷ್ಣುಪುರಾಣದಲ್ಲಿ **"ರಕ್ಷತುತ್ವಾಮ ಶೇಷಾಣಾಂ ಭೂತಾನಾಂ ಪ್ರಭವೋಹರಿಃ। ಯಸ್ಯ ನಾಭಿ ಸಮುದ್ಭೂತ ಪಂಕಜಾದ ಭವಜ್ಜಗತ್" ಯಾವ** ಶ್ರೀ ಹರಿಯ ನಾಭೀ ಕಮಲದಿಂದ ಈ ಜಗತ್ತೂ ಬೀಜದ ಚಿತ್ತಲ್ಲಿ ಉಂಟಾಯಿತೋ ಅಂತಹ ಹರಿಯು ನಿನ್ನನ್ನು ರಕ್ಷಿಸಲಿ ಎಂದಿರುತ್ತದೆ.

ಇಲ್ಲಿ **ಕೋರಕ್ಷತಿ** ಎಂಬಲ್ಲಿರುವ ರಕ್ಷಣೆಯು ಪ್ರಳಯದಲ್ಲಿ ತನ್ನ ಉದರದಲ್ಲಿಟ್ಟು ರಕ್ಷಕನೂ ಶ್ರೀಮನ್ನಾರಾಯಣನೇ ಎಂದೂ ಮತ್ತು ಸೃಷ್ಟಿ ಕಾಲದಲ್ಲಿ ಆ ಪ್ರಪಂಚವು ಸ್ಥೂಲ ರೂಪವನ್ನೂ ನಾಮ ರೂಪವನ್ನೂ ಹೊಂದಿಸಿ ಅನಂತರ ಕರಣಕಳೇಬರಗಳನ್ನು ಕೊಟ್ಟು ರಕ್ಷಿಸುವವನೂ ಶ್ರೀಮನ್ನಾರಾಯಣ ನಲ್ಲದೇ ಬೇರೆ ಯಾರೂ ಇಲ್ಲವೆಂಬ ಭಾವವು. **ನಹಿಪಾಲನ ಸಾಮರ್ಥ್ಯ ಮೃತೇ ಸರ್ವೇಶ್ವರಂಹರಿಮ್"** (ವಿ. ಪು) ಶ್ರೀಹರಿಯನ್ನು ವಿನಾ ಇನ್ನು ಯಾರಿಗೂ ಪಾಲನ ಶಕ್ತಿ ಇಲ್ಲವೆಂಬ ಭಾವವು. ಶ್ರೀಮದ್ರಾಮಾಯಣದಲ್ಲಿ (ಉತ್ತರ) **"ತತಸ್ತ್ವಮಸಿ ದುರ್ಧಷ ಸ್ತಸ್ಮಾದ್ಭಾವಾ ತ್ಸನಾತನಾತ್। ರಕ್ಷಾರ್ಥಂ ಸರ್ವ ಭೂತಾನಾಂ ವಿಷ್ಣುತ್ವ ಮುಪಜಗ್ಮಿವಾನ್"** ಎಂಬ ಚತುರ್ಮುಖನ ವಾಕ್ಯವಿದೆ. ಹಾಗೆಯೇ ಪುನಃ **"ನಸಂಪದಾಂ ಸಮಾಹಾರೇ ವಿಪದಾಂ ವಿನಿವರ್ತನೇ। ಸಮರ್ಥೋ ದೃಶ್ಯತೇ ಕಶ್ಚಿತ್ತಂ ವಿನಾ ಪುರುಷೋತ್ತಮಮ್"** ಸಂಪತ್ತು ಗಳನ್ನುಂಟು ಮಾಡಿ ವಿಪತ್ತುಗಳನ್ನು ತೊಲಗಿಸಿ ರಕ್ಷಸುವದರಲ್ಲಿ, ಪುರುಷೋ ತ್ತಮನಾದ ಆತನನ್ನು ಬಿಟ್ಟರೆ ಬೇರೆ ಇನ್ನು ಯಾರು ಸಮರ್ಧರಾಗಿ ಕಾಣ ಲಿಲ್ಲವು. ಎಂದು ಹೇಳಲ್ಪಟ್ಟಿರುತ್ತದೆ. ( ವಿ. ಪು. ) ಸರ್ವೇಶ್ವರನು ಅನೇಕ ಅಂಡಗಳನ್ನು ಸೃಷ್ಟಿಸಿ ಒಂದೊಂದು ಅಂಡಕ್ಕೂ ಒಬ್ಬಸೃಷ್ಟಿಕರ್ತ್ತಾವಾದ ಬ್ರಹ್ಮ ನನ್ನೂ ಲಯಾಧಿಕಾರಿಯಾದ ಒಬ್ಬರುದ್ರನನ್ನೂ ನಿಯಮಿಸಿ, ಎಲ್ಲಾ ಅಂಡ ದಲ್ಲೂ ಪಾಲನಕಾರ್ಯವನ್ನು ತಾನೇ ಇಟ್ಟು ಕೊಂಡಿರುತ್ತಾನೆ.

"**ಯತೋವಾ ಇಮಾನಿ ಭೂತಾನಿ"** ಎಂದು ಹಿಂದೆಯೇ ಉದಾಹರಿ ಸಲ್ಪಟ್ಟ ಶ್ರುತ್ಯರ್ಥವೂ ಇಲ್ಲಿಯೂ ಹೇಳಲ್ಪಟ್ಟಿತು. ಹಾಗಾದರೇ ಪುನರುಕ್ತಿಯೇ? ಎಂದರೆ ಇಲ್ಲಿ ಮುಖ್ಯವಾಗಿ ಆತನೇ ಆಧಾರವೆಂದೂ ಈ ವಿಶ್ವವೆಲ್ಲಾ ಆಧೇಯ ವೆಂಬ ಭಾವವನ್ನು ಉಪದೇಶಿಸುವದಕ್ಕಾಗಿ ಈ ಶ್ಲೋಕವು ಪ್ರಯುಕ್ತವು.

**ಇಮಂ** ಎಂಬುದು ಪ್ರಪಂಚವನ್ನು ಬೋಧಿಸುತ್ತದೆ. ಅದನ್ನು ಕಾಕಾಕ್ಷಿ ನ್ಯಾಯದ ಪ್ರಕಾರ, **ಕೋರಕ್ಷತಿ ಇಮಂ** ಎಂದೂ, **ಇಮಂ ಅಜನಿಷ್ಟ ಚ ಕಸ್ಯನಾಭೇಃ** ಎಂದೂ ಎರಡುವಾಕ್ಯಕ್ಕೂ ಅನ್ವಯಿಸತಕ್ಕದ್ದು. ಇಲ್ಲಿ ಪ್ರಪಂಚವೇ ನಾಭೀಕಮಲದಿಂದುಂಟಾಯಿತು ಎಂದು ಹೇಳಿರುವದು ಹೇಗೆ? ಹೀಗೆ ಪ್ರಳಯ ದಲ್ಲಿ ಬಹುಕಾಲ ವಿದ್ದನಂತರ ಶ್ರೀಮನ್ನಾರಾಯಣನು **"ಬಹುಸ್ಯಾಂ ಪ್ರಜಾ ಯೇಯ"** ಎಂಬಲ್ಲಿ ಹೇಳಿರುವ ಹಾಗೆ ಸೃಷ್ಟಿ ಮಾಡಲು ಸಙ್ಕಲ್ಪಿಸುವನು. ಸೃಷ್ಟಿಸುವ ಪ್ರಪಂಚಕ್ಕೆ ಹೇತುವು **ಯಾವುದು ಎಂದರೆ ಕಸ್ಯನಾಭೇಃ** ಎಂದು ಹೇಳಲ್ಪಟ್ಟಿರುತ್ತದೆ. ಆದರೆ ಅನೇಕ ಪ್ರಮಾಣಗಳಲ್ಲಿ **"ಯನ್ನಾಭಿ ಪದ್ಮಾದ ಭವನ್ಮಹಾತ್ಮಾ ಪ್ರಜಾಪತಿಃ"** (ಮಹೋಪನಿಷತ್) ಎಂದೂ, **"ಬ್ರಹ್ಮನ್ವೈ**

**ಬ್ರಹ್ಮಾಣಂ ಪುಷ್ಕರೇಽಸೃಜತ್**" ಪರಮಪುರುಷನು ತನ್ನ ನಾಭೀಕಮಲದಿಂದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನೆಂದು ಹೇಳಿದೆ. ಹಾಗೆಯೇ "**ಅಜಸ್ಯನಾಭಾವಧ್ಯೇಕ ಮರ್ಪಿತಂ ಯಸ್ಮಿನ್ನಿದಂ ವಿಶ್ವಂ ಭುವನ ಮಧಿಶ್ರಿತಮ್ ವಿಶ್ವ ಕರ್ಮಾಹ್ಯಜನಿಷ್ಟ ದೇವಃ ಸಪ್ರಜಾಪತಿರೇಕಃ ಪುಷ್ಕರಪರ್ಣೇ ಸಮಭವತ್**" ಮಹೋಪನಿಷತ್ತಿನಲ್ಲಿ ಹೇಳಿರುವದೇನೆಂದರೆ "**ಸರ್ವಸ್ಯಾಯತನಂಹರಿಃ**" ಎಂದಾರಂಭಿಸಿ "**ಯನ್ನಾಭಿಪದ್ಮಾದ ಭವನ್ಮಹಾತ್ಮಾ**" ಎಂದು ಪರಮಾತ್ಮನ ನಾಭೀಕಮಲದಲ್ಲಿ ಚತುರ್ಮುಖನು ಉತ್ಪನ್ನನಾದನೆಂದು ಹೇಳಿರುತ್ತವೆ. "ಅಜಸ್ಯನಾಭಾವ **ಧ್ಯೇಕಂ ಯಸ್ಮಿನ್ ವಿಶ್ವಂ ಪ್ರತಿಷ್ಠಿತಮ್। ಪುಷ್ಕರಂಪುಷ್ಕ ರಾಕ್ಷಸ್ಯತಸ್ಮೈ ಪದ್ಮಾತ್ಮನೇ ನಮಃ**" ಎಂದು ಮೇಲಿನ ಅರ್ಥವು ಉಪಬ್ರಹ್ಮಣ ಮಾಡಲ್ಪಟ್ಟಿರುತ್ತದೆ. ಮನುವು ಈ ಸಂದರ್ಭದಲ್ಲಿ ಹೇಳಿರುವದೇನೆಂದರೆ:—

**ಸೋಽಭಿಧ್ಯಾಯ ಶರೀರಾತ್ಸ್ವಾತ್ಸಿ ಸೃಕ್ಷು ರ್ವಿವಿಧಾಃ ಪ್ರಜಾಃ।**
**ಅಪಏವಸಸರ್ಜಾದೌ ತಾಸು ವೀರ್ಯಮಪಾಸೃಜತ್॥**
**ತದಂಡ ಮಭವತ್ ಹೈಮಂ ಸಹಸ್ರಾಂಶು ಸಮ ಪ್ರಭಮ್।**
**ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕ ಪಿತಾಮಹಃ॥**

ಆ ಪರಬ್ರಹ್ಮನು ತನ್ನ ಶರೀರವಾದ ಚಿದಚಿತ್ತುಗಳಿಂದ ಕೂಡಿದ ತಮೋಽವ್ಯಕ್ತಾ ವಸ್ಥೆಯಿಂದಿರುವದರಿಂದ ವಿವಿಧ ಪ್ರಜೆಗಳನ್ನು ಸೃಷ್ಟಿಸಬೇಕೆಂಬ ಅಪೇಕ್ಷೆಯುಳ್ಳವನಾಗಿ ಹಾಗೆ ಸಙ್ಕಲ್ಪಿಸಿದನು. ಮೊದಲು ಪೃಥಿವಿಗೆ ಪೂರ್ವಕಾರಣ ರೂಪವಾದ ಅಪ್ಪನ್ನು ಸೃಷ್ಟಿಸಿದನು. "**ತಾ ಇಮಾಆಪ ಸ್ತದ್ಧಿರಣ್ಮಯ ಮಣ್ಡಮಭವತ್**" ಎಂದು ಶ್ರುತಿಯಲ್ಲಿ ಹೇಳಿರುವ ಹಿರಣ್ಮಯವಾದ ಅಂಡವು ಉಂಟಾಯಿತು. ಆ ಅಂಡವು ತುಂಬಾ ಪ್ರಕಾಶವಾದುದೆಂದು ಹೇಳಲ್ಪಟ್ಟಿತು. ಆ ಅಂಡದಲ್ಲಿ ವ್ಯಷ್ಟಿ ಸೃಷ್ಟಿಯಲ್ಲಿ ನಿಯಮಿಸಲ್ಪಟ್ಟ ಚತುರ್ಮುಖನು ಹುಟ್ಟಿದನು. ಆತನಿಗೆ ನಿತ್ಯವಾದ ವೇದಗಳೂ ಕಳುಹಿಸಲ್ಪಟ್ಟವೆಂದು ಇನ್ನೊಂದು ಶ್ರುತಿಯಿಂದ ಹೇಳಲ್ಪಟ್ಟಿರುತ್ತವೆ. ಇದನ್ನು ಮನಸ್ಸಿನಲ್ಲಿಟ್ಟೇ "**ಇಮಂ ಅಜನಿಷ್ಟ ಚ ಕಸ್ಯನಾಭೇಃ**" ಎಂಬ ಪ್ರಯೋಗವೆಂದು ಭಾವಿಸಬಹುದು. ಭೃಗುಭರದ್ವಾಜ ಸಂವಾದದಲ್ಲಿ ಹೇಳಿರುವರೂ "**ತತಸ್ತೇಜೋಮಯಂ ದಿವ್ಯಂ ಪದ್ಮಂ ಸೃಷ್ಟಂ ಸ್ವಯಂಭುವಾ। ತಸ್ಮಾತ್ಪದ್ಮಾತ್ ಸಮ ಭವದ್ಬ್ರಹ್ಮಾ ವೇದಮಯೋ ವಿಧಿಃ**" (ಭೃಗುಭರದ್ವಾಜ ಸಂವಾದ) ಹಾಗೆಯೇ "**ನಾರಾಯಣೋ ಮಹಾಯೋಗೀ ಶುಭಾಶುಭ ವಿವರ್ಜಿತಃ। ಸಸರ್ಜನಾಭಿಜಂ ಪುತ್ರಂ ಬ್ರಹ್ಮಾಣ ಮಮಿತ ಪ್ರಭಮ್। ತತಸ್ಸ ಪ್ರಾದುರಭವತ್ ಅಥೈನಂ ವಾಕ್ಯ ಮಬ್ರವೀತ್। ಮಮ ತ್ವಂ ನಾಭಿತೋ ಜಾತಃ ಪ್ರಜಾ ಸರ್ಗಕರಃ ಪ್ರಭುಃ। ಸೃಜಪ್ರಜಾ ಸ್ತ್ವಂ**

**ವಿವಿಧಾ ಬ್ರಹ್ಮ ಸಜಪ ಪಂಡಿತಾಃ''** ಮಹತ್ತಾದ ವಿಭೂತ್ಯೈಶ್ವರ್ಯಗಳಿಂದ ಯುಕ್ತನಾದ ನಾರಾಯಣನು ಸುಕೃತದುಷ್ಕೃತ ರೂಪಕರ್ಮಗಳಿಗೆ ವಶ್ಯನಲ್ಲದವನಾಗಿ ತನ್ನ ನಾಭೀ ಕಮಲದಿಂದ ಚತುರ್ಮುಖನೆಂಬ ಮಗನನ್ನು ಸೃಷ್ಟಿಸಿ, ಆತನನ್ನು ಕುರಿತು ಹೇಳದನೇನೆಂದರೆ, ನೀನು ನನ್ನ ನಾಭೀಕಮಲದಿಂದ ಜನಿಸಿ ಚಿದ ಚಿತ್ಪ್ರಜಾ ಸೃಷ್ಟಿಯನ್ನೆಸಗುವದಕ್ಕಾಗಿ ಸಮರ್ಥ ನಾಗಿರುವೆ. ನೀನು ಪ್ರಜೆಗಳನ್ನು ಸೃಷ್ಟಿಸು ಎಂಬುದಾಗಿ, ಸಭಾಪರ್ವದಲ್ಲಿ **"ತತಸ್ಸ ಭಗವಾಂ ಸ್ತೋಯೇ ಬ್ರಹ್ಮಾಣ ಮಸೃಜತ್ಸಯಂ"** ಎಂದು ಇದ್ದರೂ ಶ್ರೀಮನ್ನಾರಾಯಣನ ನಾಭೀಕಮಲ ದಿಂದ ಜನಿಸಿದನು ಎಂದು ವ್ಯಕ್ತವಾಗಿ ಹೆಳದಿದ್ದರೂ, ಹಾಗೆ ಜನಿಸಿದನೆಂದು ಭಾವಿಸಲು ಏನೂ ವಿರೋಧವಿಲ್ಲವು. **ಸುಪರ್ಣವೈಕುಂಠ** ಸಂಪಾದದಲ್ಲಿ **''ಯತ್ರತ್ಪದ್ಮಮಭೂತ್ಪೂರ್ವಂ ತತ್ರ ಬ್ರಹ್ಮಾ ವ್ಯಜಾಯತ। ಬ್ರಹ್ಮಣ ಶ್ಚಾಷಿ ಸಂಭೂತ ಶ್ಶಿವ ಇತ್ಯವಧಾರ್ಯತಾವ್''** ಶ್ರೀಮನ್ನಾರಾಯಣನ ನಾಭೀ ಕಮಲದಿಂದ ಬ್ರಹ್ಮನೂ, ಬ್ರಹ್ಮನಿಂದ ರುದ್ರನೂ ಹುಟ್ಟಿದರೆಂದು ಹೇಳಿರುತ್ತದೆ. ಮತ್ತು ಅನೇಕ ಇತರ ಪ್ರಮಾಣಗಳಲ್ಲೂ ಚತುರ್ಮುಖನು ಪರಮಾತ್ಮನ ನಾಭೀ ಕಮಲದಿಂದ ಉತ್ಪನ್ನನಾದನೆಂದುಹೇಳಿರುರುತ್ತವೆ. ಇವೆರಡು ವಿಧ ಪ್ರಮಾಣ ಗಳಿಗೆ ಐಕಕಂಠ್ಯವನ್ನು ಉಪಪಾದಿಸುವದೇ ನ್ಯಾಯವು.

ಆದರೆ ಶ್ರೀಯಾಮುನ ಮುನಿಗಳು ಪರಮ ಪುರುಷನ ನಾಭೀಕಮಲದಿಂದ ಜಗತ್ತುಂಟಾಯಿತು ಎಂಬ ಹೇಳಿಕೆಗೆ ವಿಷ್ಣು ಪುರಾಣ ವಾಕ್ಯವು ಪ್ರಮಾಣ ವಾಗಿ ತೋರುತ್ತದೆ. ಹೇಗೆಂದರೆ? **ರಕ್ಷಿತುತ್ವಾ ಮಶೇಷೇಣಾಂ ಭೂತಾನಾಂ ಪ್ರಭವೋಹರಿಃ। ಯಸ್ಯನಾಭಿ ಸಮುದ್ಭೂತ ಪಂಕಜಾದ ಭವಜ್ಜಗತ್''** ಇಲ್ಲಿ ನಾಭೀಕಮಲದಿಂದ ಜಗತ್ತೇ ಉಂಟಾಯಿತೆಂದು ಹೇಳಲ್ಪಟ್ಟಿರುತ್ತದೆ.

ಹಾಗೆಯೇ ಅನೇಕ ಪ್ರಮಾಣಗಳಲ್ಲಿ ಚತುರ್ಮುಖನಿಂದ ರುದ್ರನು ಹುಟ್ಟಿದ ನೆಂದೂ, ಚತುರ್ಮುಖನಲ್ಲಿ ರಾಜಸ ಗುಣಾಧಿಕ್ಯವೂ, ರುದ್ರನಲ್ಲಿ ತಮೋ ಗುಣಾ ಧಿಕವೂ ಉಂಟೆಂದು ಹೇಳಲ್ಪಟ್ಟಿವೆ. ಇನ್ನೂ ಕೆಲವು ಪ್ರಮಾಣಗಳು ಪರಮ ಪುರುಷನು ಚತುರ್ಮುಖನನ್ನು ಸೃಷ್ಟಿಸಿದನೆಂದೂ, ಚತುರ್ಮುಖನಿಂದ ರುದ್ರನು ಹುಟ್ಟಿದನೆಂದೂ ಹೇಳಲ್ಪಟ್ಟಿವೆ.

ಇದಕ್ಕೆ ನಿದರ್ಶನಗಳು **ವಾರಾಹ ಪುರಾಣ**ದಲ್ಲಿ ರುದ್ರ ವಾಕ್ಯದ ಪ್ರಮಾಣ ವಿರುತ್ತದೆ.— **''ನಾರಾಯಣಃ ಪರೋದೇವ ಸ್ತಸ್ಮರೂಪೀಜನಾರ್ದನಃ। ತ್ರಿಧಾತ್ಮಾನಂ ಸ ಭಗವಾನ್ ಸಸರ್ಜ ಪರಮೇಶ್ವರಃ। ರಜಸ್ತಮೋಭ್ಯಾಂ ಯುಕ್ತೋ ಭೂದ್ರಜಸ್ಸತ್ವಾದಿಕಂ ವಿಭುಮ್। ಸಸರ್ಜನಾಭಿಕಮಲೇಯುಕ್ತೇ ಬ್ರಹ್ಮಾಣಾ ಕಮಲಾಸನಮ್। ರಜಸಾತಮಸಾಯುಕ್ತಂ ಸೋಽಪಿಮಾ ಮಸೃ**

**ಜತ್ರಭೂಃ''** ಈ ಪ್ರಮಾಣದಲ್ಲಿ **ತ್ರಿಧಾತ್ಮಾನಂ** ಎಂಬುದರ ಅಭಿಪ್ರಾಯವು ತಾನೇ ತನ್ನಿಂದ ಉಂಟಾದ ಈ ಇಬ್ಬರು ಕ್ಷೇತ್ರಜ್ಞರಾದ ಚತುರ್ಮುಖ ರುದ್ರರೊಡಗೂಡಿ ಮೂರಾಗಿ ತೋರಿದನೆಂದು ಇತರ ಪ್ರಮಾಣಗಳಿಗನುಸಾರವಾಗಿ ತಿಳಿಯತಕ್ಕದ್ದು.

**ನಾರಸಿಂಹ ಪುರಾಣದಲ್ಲಿ** ಸ್ವಾಮಿಯ ನಾಭಿಯಿಂದ ಚತುರ್ಮುಖನು ಉತ್ಪನ್ನನಾದನೆಂದೂ, ಈತನಿಗೆ ಕೋಪ ಉಂಟಾಗಿ ರುದ್ರನುಂಟಾದನೆಂದೂ, ಆ ಬಾಲನು ಬಹಳವಾಗಿ ಅತ್ತನೆಂದೂ ಆ ಕಾರಣದಿಂದ ಆತನಿಗೆ ರುದ್ರನೆಂಬ ಹೆಸರನ್ನಿತ್ತನೆಂದೂ ಹೇಳಲ್ಪಟ್ಟಿರುತ್ತದೆ.

**ಮಹೋಪನಿಷತ್ತಿನಲ್ಲಿ** ಹೇಳಿರುವದೇನೆಂದರೆ – ನಾರಾಯಣನೊಬ್ಬನೇ ಪ್ರಳಯದಲ್ಲಿದ್ದನು. **"ಏಕೋಹವೈನಾರಾಯಣ ಆಸೀತ್ ನ ಬ್ರಹ್ಮಾನೇ ಶಾನೋ"** ಎಂದು ಹೇಳಿ, ಅನಂತರ ಪುನಃ ಸೃಷ್ಟಿಸಬೇಕೆಂದು **ಮನಸಾಧ್ಯಾಯತ** ಮನಸ್ಸಿನಿಂದ ಸಙ್ಕಲ್ಪಿಸಿದನು, ಆತನ ಹಣೆಯಿಂದ ಬೆವರು ಕೆಳಗೆ ಬಿತ್ತು, ಆಗ ಹಿರಣ್ಮಯವಾದ ಅಂಡ ಉಂಟಾಯಿತು; ಅದರಲ್ಲಿ ಚತುರ್ಮುಖನು ಉಂಟಾದನು; ಪುನಃ ಪರಮಪುರುಷನು ಸಙ್ಕಲ್ಪಿಸಿದನು ಪುನಃ ಹಣೆಯಿಂದ ಬೆವರು ಕೆಳಗೆ ಬಿತ್ತೂ, ಶೂಲಪಾಣಿಯಾದ ರುದ್ರನು ಉಂಟಾದನು ಎಂದು ಹೇಳಿರುತ್ತದೆ.

**ಮೋಕ್ಷಧರ್ಮ** ದಲ್ಲಿ **"ವಿಷಲೋಕಗುರುರ್ಬ್ರಹ್ಮಾ ಜಗದಾದಿಕರಃ ಪ್ರಭುಃ। ವಿಷಮಾತಾ ಪಿತಾಚೈವ ಯುಷ್ಮಾಕಂ ಚ ಪಿತಾಮಹಃ। ಮಯಾನು ಶಿಷ್ಟೋ ಭವಿತಾಸೋಪಿ ಸರ್ವ ವರಪ್ರದಃ।** ಅಸ್ಯಚೈವಾನು ಜೋರುದ್ರೋ ಲಲಾಟಾದ್ಯಸ್ಸ ಮೊತ್ಥಿತಃ ಎಂದು, ಚತುರ್ಮುಖನ ಲಲಾಟ ದಿಂದ ಉತ್ಪತ್ತಿಯು ರುದ್ರನಿಗೆ ಹೇಳಲ್ಪಟ್ಟಿರುತ್ತದೆ. ಛಾಂದೋಗ್ಯರು **"ವಿರೂಪಾಕ್ಷಾಯ ದಂತಾಂಜಯೇ ತುಥಾಯ ವಿಶ್ವವೇದಸೇ ಸಹಸ್ರಾಕ್ಷಾಯ ಬ್ರಹ್ಮಣಃ ಪುತ್ರಾಯ ಜ್ಯೇಷ್ಠಾಯ ಶ್ರೇಷ್ಠಾಯ ನಮೋಘಂಟಾಯ ಕರ್ಮಾಧಿ ಪತಯೇನಮಃ"** ಎಂದು ಸ್ತುತಿಸುವದರಲ್ಲಿ ಚತುರ್ಮುಖನ ಪುತ್ರನೆಂದೇ ಹೇಳಲ್ಪಟ್ಟಿರುತ್ತದೆ. ಶತಪಥ ಬ್ರಾಹ್ಮಣದಲ್ಲೂ ಚತುರ್ಮುಖನ ಮಗನು ರುದ್ರನೆಂದೇ ಹೇಳಲ್ಪಟ್ಟು ಆತನಿಗೆ ರುದ್ರನೆಂಬ ನಾಮಕರಣಮಾಡಿದನೆಂಬ ಹೇಳಿಕೆಯಿರುತ್ತದೆ. ಶ್ರೀಪರಾಶರರು ತಮ್ಮ ಶಿಷ್ಯರಿಗೆ ರುದ್ರ ಸರ್ಗವನ್ನು ಕುರಿತು ಹೇಳುವಾಗ ಬ್ರಹ್ಮನ ಮಗನು ರುದ್ರನೆಂದೂ ಬ್ರಹ್ಮನೇ ರುದ್ರನೆಂಬ ನಾಮಕರಣವನ್ನು ಕೊಟ್ಟ ನೆಂದೂ ಹೇಳಲ್ಪಟ್ಟಿರುತ್ತದೆ. ಇದಕ್ಕೆ ಪ್ರಮಾಣವು.– **"ರುದ್ರಸರ್ಗಂ ಪ್ರವಕ್ಷ್ಯಾಮಿತಂಮೇ ನಿಗದಿತಶ್ಶೃಣು। ಕಲ್ಪಾದಾವಾತ್ಮಾನ ಸ್ತುಲ್ಯಂ ಸುತಂ ಪ್ರಧ್ಯಾಯತ ಸ್ತತಃ। ಪ್ರಾದುರಾಸೀತ್ಪ್ರಭೋರಂಕೇ ಕುಮಾರೋ ನೀಲ ಲೋಹಿತಃ**

**ರುರೋದ ಸುಸ್ವರಂಸೋಥ ಪ್ರತ್ಯುವಾಚ ಪ್ರಜಾಪತಿಃ। ರುದ್ರಸ್ತ್ವಂ ದೇವ ನಾಮ್ನಾಸಿ ಮಾರೋದಿಸ್ಸ್ಥೈರ್ಯಮಾವಹ"** ಇತ್ಯಾದಿ. ಮೋಕ್ಷಧರ್ಮದಲ್ಲಿ ಬ್ರಹ್ಮರುದ್ರರ ಸಂವಾದದಲ್ಲಿ

**ಅಹಂ ಬ್ರಹ್ಮಾ ಚಾದ್ಯ ಈಶಃ ಪ್ರಜಾನಾಮ್ ತಸ್ಮಾಜ್ಜಾ ತಸ್ತ್ವಂ ಚ ಮತ್ತಃ ಪ್ರಸೂತಃ। ಮತ್ತೋ ಜಗಜ್ಜಙ್ಗಮ ಸ್ಥಾವರಂ ಚ ಸರ್ವೇ ವೇದಾ ಸ್ಸರಹಸ್ಯಾಶ್ಚಪುತ್ರೇತಿ"** ಬ್ರಹ್ಮನ ಪುತ್ರನು ರುದ್ರನೆಂದೇ ಇರುತ್ತದೆ. **ವಾರಾಹ ಪುರಾಣದಲ್ಲೂ ನಾರಾಯಣಃ ಪರೋದೇವಃ ತಸ್ಮಾಜ್ಜಾತಶ್ಚತುರ್ಮುಖಃ ತಸ್ಮಾದ್ರುದ್ರೋ ಭವದ್ದೇವಿ"** ಎಂದಿರುತ್ತದೆ.

ಹೀಗೆ ಪರಮ ಪುರುಷನಿಂದಲೇ ರುದ್ರೋತ್ಪತ್ತಿ ಎಂದೂ ಕೆಲವು ಪ್ರಮಾಣಗಳೂ, ಚತುರ್ಮುಖನಿಂದ ರುದ್ರೋತ್ಪತ್ತಿ ಎಂದು ಕೆಲವು ಪ್ರಮಾಣಗಳೂ ಇರುವದರಿಂದ, ಚತುರ್ಮುಖನ ತಮ್ಮನೆಂದು ಭಾವಿಸತಕ್ಕದ್ದೇ, ಅಥವಾ ಮಗನೆಂದು ಭಾವಿಸತಕ್ಕದೇ ಎಂಬ ಸಂದೇಹದಲ್ಲಿ ಇವೆರಡು ವಿಧವಾದಉಕ್ತಿಗಳೂ ಗ್ರಾಹ್ಯವಾದುದರಿಂದ ಕಲ್ಪಭೇದದಿಂದ ಹಾಗೆ ವ್ಯತ್ಯಾಸವೆಂದು ಭಾವಿಸತಕ್ಕದು. ಆದರೆ **"ಧಾತಾಯಥಾಪೂರ್ವಮಕಲ್ಪಯತ್"** ಎಂದಿರುವಾಗ ವ್ಯತ್ಯಾಸ ಹೇಗೆ? ಎಂದರೆ ಮುಖ್ಯ ವಿಷಯವಾದ ಜಗತ್ಸೃಷ್ಟಿ ಪ್ರಳಯಾದಿಗಳಲ್ಲಿ ವ್ಯತ್ಯಾಸವಿಲ್ಲದಿದ್ದರೂ ಮುಂದಿನ ಕ್ರಮಗಳಲ್ಲಿ ವ್ಯತ್ಯಾಸವಿರ ಬಹುದೆಂಬುದು ಸಮಾಧಾನವು.

ಹೀಗೆ ಬ್ರಹ್ಮರುದ್ರಾದಿಗಳು ಸುರ ಕೋಟಿಗೆ ಸೇರಿದವರಾಗಿ ಶ್ರೀಮನ್ನಾರಾಯಣನನ್ನು ಆರಾಧಿಸುವದು ನ್ಯಾಯವು. ಹಾಗೆ ಅನೇಕ ಸಂದರ್ಭಗಳಲ್ಲಿ ಆರಾಧಿಸುವುದಾಗಿಯೂ ಅಸುರ ದೈತ್ಯರುಗಳಿಂದ ಲೋಕಕ್ಕೆ ಭೀತಿಯುಂಟಾದಾಗ ಇವರುಗಳೆಲ್ಲಾ ಒಟ್ಟಿಗೆ ಸೇರಿ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿ, ಪ್ರಾಪ್ತವಾದ ಕ್ಲೇಶಗಳನ್ನು ನಿವಾರಣೆ ಮಾಡಿಕೊಂಡಾರುತ್ತಾರೆಂಬುವ ಅನೇಕ ಇತಿಹಾಸಗಳೂ ಇರುತ್ತವೆ. **"ಉಮಾಪತಿಃ ಪಶುಪತಿಃ ಶ್ರೀಕಂಠೋ ಬ್ರಹ್ಮಣಸ್ಸುತಃ"** ಎಂಬ ಇನ್ನೊಂದು ಪ್ರಮಾಣ ವಾಕ್ಯವಿರುತ್ತದೆ. ಹಾಗೆಯೇ ಶ್ರೀವಾರಾಹ ಪುರಾಣದಲ್ಲಿ **"ನಾರಾಯಣಃ ಪರೋದೇವ ಸ್ತಸ್ಮಾಜ್ಜಾತ ಶ್ಚತುರ್ಮುಖಃ"** ಎಂದಿರುತ್ತದೆ.

**ಕ್ರಾಂತ್ವಾ**– ಎಂಬಪದದಿಂದ **"ಯಸ್ಯೋರುಷು ತ್ರಿಷು ವಿಕ್ರಮಣೇಷು ಅಧಿಕ್ಷಿಯನ್ತಿ ಭುವನಾನಿ ವಿಶ್ವಾ"** ಎಂಬಲ್ಲಿ ಹೇಳಿರುವ ಪರಾವರ ತತ್ವ ವೈಲಕ್ಷಣ್ಯವನ್ನು ಸೂಚಿಸುವ ದಿವ್ಯಮಙ್ಗಳ ವಿಗ್ರಹವನ್ನು ಹೊಂದಿದವನನ್ನು ತಿಳಿಸುತ್ತದೆಂದು ಹೇಳಬಹುದು. ಇಲ್ಲಿ ಚತುರ್ಮುಖಾದಿಗಳು ಅವರ ತತ್ವಕ್ಕೆ ಸೇರಿದವರೆಂದೂ, ತ್ರಿವಿಕ್ರಮನಾದನಾರಾಯಣನು ಪರತತ್ವವೆಂದೂ ಆ ಕಾರಣದಿಂದ ಬ್ರಹ್ಮಾದಿಗಳು

ತ್ರಿವಿಕ್ರಮನ ಪಾದವನ್ನು ಆರಾಧಿಸಿದರೆಂದೂ ಗ್ರಹಿಸಬಹುದು. ಆಗ ಬ್ರಹ್ಮಾದಿ ಗಳೆಲ್ಲಾ ಮನುಷ್ಯರ ಹಾಗೆ ವಿಷ್ಣುವತಾರಿಯನ್ನು ಸ್ತುತಿಸಿರುತ್ತಾರೆ. ಅಥವಾ ಇಲ್ಲಿ **ಕ್ರಾಂತ್ವಾ ನಿಗೀರ್ಯಪುನರುದ್ಗಿರತಿ** ಎಂಬ **ನಿಗೀರ್ಯ** ಮತ್ತು **ಪುನರುದ್ಗರತಿ** ಪದಗಳೊಂದಿಗೆ ಕ್ರಾಂತ್ವಾವೆಂಬುದು ಸಹ ಪಠಿತವಾದುದರಿಂದ ಲಯ ಮತ್ತು ಸೃಷ್ಟಿಗಳೊಂದಾಗಿರುವ ವ್ಯಾಪಾರವು ಇಲ್ಲಿ ಉದ್ದೇಶ್ಯವೆಂದು ಭಾವಿಸಿ ಸೂಕ್ಷ್ಮಚಿದ ಚಿದ್ವಿ ಶಿಷ್ಟದೆಶೆಯಲ್ಲೂ ಸ್ಥೂಲ ವಿಶಿಷ್ಟದೆಶೆಯಲ್ಲೂ ಇರುವ ಸರ್ವವ್ಯಾಪ್ತಿಯೂ ಹೇಳ ಲ್ಪಟ್ಟಿತೆಂದು ತಿಳಿಸುತ್ತಾರೆ. ಸಾತ್ವತದಲ್ಲಿ ಹೀಗೆಯೇ ಹೇಳಲ್ಪಟ್ಟು ಸೃಷ್ಟಿಲಯ ಗಳು ಸ್ವಾಮಿಯ ಶ್ವಾಸೋಚ್ಛ್ವಾಸಗಳ ಹಾಗೆ ರೂಪಕವಾಡಿ ಹೇಳಿರುತ್ತದೆ. ಹೇಗೆಂದರೆ— **"ತ್ಯಜನ್ತಮಾಹರಂತಂಚ ಶ್ವಾಸೋ ಚ್ಛಾಸದ್ವಯೇನ ಚ। ಆ ಬ್ರಹ್ಮಭವನಂ ಸರ್ವಂ ಪ್ರಾಧಾನಿಕಂ ಹಿಯತ್" "ತತ್ಸೃಷ್ಟ್ವಾ ತದೇ ವಾನು ಪ್ರಾವಿಶತ್"** ಎಂಬುದು ಅನುಸಂಧೇಯವೆನ್ನುವರು. ಎಲ್ಲವೂ ಸ್ವಾಮಿಗೆ ಶರೀರವಾಗಿ ಎಲ್ಲವನ್ನೂ ವ್ಯಾಪಿಸುವವರ ಮೂಲಕ ಎಲ್ಲಕ್ಕೂ ಆತ್ಮಾವಾಗಿ ಸತ್ತಾಸ್ಥಿತಿ ನಿಯಮನಾದಿಗಳನ್ನುಂಟು ಮಾಡುವನೆಂಬ ಪ್ರಧಾನ ಪ್ರತಿ ತಂತ್ರಾಭಿಪ್ರಾಯವು ತೋರುತ್ತದೆ. ಇದೂ ಗ್ರಾಹ್ಯವೇ. ಪೂರ್ವಾರ್ಧದಿಂದ ಆಧಾರಾಧೇಯತ್ವವು; ಇದರಿಂದ ಶರೀರ ಶರೀರ ಭಾವವೂ ದ್ಯೋತಿತವು ಈ ಅಭಿಪ್ರಾಯವು ಅಂತ ರ್ಯಾಮಿ ಬ್ರಾಹ್ಮಣದಲ್ಲಿ **"ಯಃಪೃಥಿವೀ ಮಂತರೋ ಯಮಯತಿ; ಯ ಆತ್ಮಾನ ಮಂತರೋಯಮಯತಿ"** ಎಂಬಲ್ಲೂ ಸುಬಾಲೋಪನಿಷತ್ತಿನಲ್ಲಿ **"ಯಃ ಪೃಥಿವೀ ಮನ್ತರೇ ಸಂಚರನ್"** ಎಂಬಲ್ಲೂ ವ್ಯಕ್ತವು ಹಾಗೆಯೇ ಕೊನೆಯ **"ಏಷ ಸರ್ವ ಭೂತಾಂ ತರಾತ್ಮಾ ಪಹತ ಪಾಪ್ಮಾ ದಿವ್ಯೋದೇವ ಏಕೋನಾರಾಯಣಃ"** ಶ್ರೀಮನ್ನಾರಾಯಣನಿಗೆ ಸರ್ವ ಭೂತಗಳಿಗೂ ಅಂತರಾತ್ಮಾವಾಗಿರುವನೆಂಬುದು ಹೇಳಲ್ಪಟ್ಟಿರುತ್ತದೆ ಹೀಗೆ ವ್ಯಾಪಿಸುವಾಗ ಲಕ್ಷ್ಮಿಯೊಂದಿಗೆ ವ್ಯಾಪಿಸುವದರಿಂದ ಲಕ್ಷ್ಮಿಗೂ ಸಹ ಸರ್ವ ಭೂತಾಂತರತ್ವವು ಸಿದ್ಧವೆಂದು ಭಾವಿಸತಕ್ಕದು.

ಹೀಗೆ ಸರ್ವವನ್ನೂ ವ್ಯಾಪಿಸಿಕೊಂಡು ಪ್ರಳಯ ಸೃಷ್ಟಿರೂಪ ವ್ಯಾಪಾರ ಗಳನ್ನು ನಡೆಸುವನೆಂದು **ನಿಗೀರ್ಯ ಪುನರುದ್ಗರತಿ** ಎಂದು ಹೇಳಿರುತ್ತಾರೆ. ಇದೀಗ ಪರಮಾಶ್ಚರ್ಯವಾದುದಾಗಿಯೂ ಬ್ರಹ್ಮರುದ್ರಾದಿಗಳಿಗೆ ಅಶಕ್ಯವಾಗಿಯೂ ಇರುವ ವ್ಯಾಪಾರವು **ಉದ್ಗಿರತಿ** ಎಂದು ವರ್ತಮಾನ ನಿರ್ದೇಶದ ಅಭಿಪ್ರಾಯ ವೇನೆಂದರೆ, ಕಲ್ಪಕಲ್ಪದಲ್ಲೂ ಹೀಗೆಯೇ ನಡೆಯುತ್ತದೆಂಬ **"ಧಾತಾಯಥಾ ಪೂರ್ವಮಕಲ್ಪಯತ್"** ಎಂಬ ವ್ಯಾಪಾರ ಪ್ರವಾಹವನ್ನು ಸೂಚಿಸುವಕ್ಕಾಗಿ ಎಂದು ಭಾವಿಸತಕ್ಕದು. ಯಥಾಪೂರ್ವವಾಗಿಯೇ ನಡೆಯುತ್ತದೆಂಬುದನ್ನು ತಿಳಿಸುವದಕ್ಕಾಗಿಯೇ **ಪುನರುದ್ಗರಿತಿ** ಎಂಬಲ್ಲಿರುವ **ಪುನಃ** ಎಂಬ ಪ್ರಯೋಗವು.

ಆತನು ಆಧಾರವು, ಚಿದಚಿತ್ಪ್ರಪಂಚವು ಆಧೇಯವು; ಆತನು ಶರೀರಿಯು, ಅತ್ಮಾಶರೀರವೂ; ಸತ್ತಾಸ್ಥಿತಿ ನಿಯಮನಾದಿಗಳಿಗೆ ಆತನು ಕಾರಣನು; ಈತನು ಪಡೆಯುವನು; ಆತನು ಶೇಷಿ, ಪ್ರಪಂಚವು ಶೇಷ ಭೂತವು; ಹೀಗೆ ಇರುವದರಿಂದ ಆತನೇ ಸ್ವಾಮಿಯು, ಇವೆಲ್ಲಾ ಆತನ ಸ್ವತ್ತು ಎಂದು ಮುಂದೆ **ಕಃ ಕೇನನ್ವೈಷ ಶಕ್ಯ ಶಂಕಃ** ಎಂದು ಹೇಳುತ್ತಾರೆ. ಹೀಗೆ ವೈಲಕ್ಷಣ್ಯ ವಿರುವಾಗ ಆತನ ಸ್ವಾಮಿತ್ವದ ವಿಷಯದಲ್ಲಿ ಶಂಕಾ ಉತ್ಪನ್ನವಾಗಲು ಸಾಧ್ಯವೇ ವಿಲ್ಲವೆನ್ನುತ್ತಾರೆ. ನಿತ್ಯಮುಕ್ತರು ಯದ್ಯಪಿ ನಮಗಿಂತವಿಶೇಷ ಮಹಾತ್ಮ್ಯೆಯುಳ್ಳವರಾದರೂ, ಶ್ರೀವ್ಯಾಸ ಮಹರ್ಷಿಯು **"ಜಗದ್ವ್ಯಾಪಾರ ವರ್ಜಂ"** ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಹಾಗೆ ಸರ್ವಕ್ಕೂ ಆಧಾರವಾಗಿರೋಣವೂ, ಸರ್ವ ಸತ್ತಾ ಸ್ಥಿತಿ ನಿಯಮನಾದಿಗಳಿಗೆ ಹೇತುವಾಗಿ ರೋಣವೂ, ಸರ್ವ ಶರೀರಕನಾಗಿ ಸರ್ವಾತ್ಮಕನಾಗಿ ಸರ್ವಶೇಷಿಯಾಗಿರೋಣವೂ, ಸರ್ವಸ್ವಾತಂತ್ರವೂ, ಸರ್ವರಕ್ಷಕತ್ವವೂ, ಇವು ಯಾವುವೂ ಶ್ರೀಮನ್ನಾರಾಯಣನಲ್ಲಿ ಅಲ್ಲದೆ ಇನ್ನು ಕ್ಷೇತ್ರಜ್ಞರಾಗಿ ಹರವಿರಿಂಚಾದಿಗಳಲ್ಲಿ ಯಾರಲ್ಲೂ ಇಲ್ಲವೆಂದು ಉಪದೇಶಿಸಿರುತ್ತಾರೆ. ಆದುದರಿಂದಲೇ ಇಂತಹ ವೈಲಕ್ಷಣ್ಯವನ್ನು ಸೂಚಿಸುವ **ಏಷಃ** ಎಂಬಪದವು.

ಆದುದರಿಂದ **ಪರವಾನ್** ಎಂದರೆ **ನಾಥವಾನ್** ಎಂಬರ್ಥವು; ಎಂದರೆ ಸರ್ವಕ್ಕೂ ಆಧಾರನಾಗಿಯೂ, ಸರ್ವಕ್ಕೂ ಆತ್ಮಾವಾಗಿ ನಿಯಂತಾವಾಗಿಯೂ, ಸರ್ವಕ್ಕೂ ಶೇಷಿಯಾಗಿ, ಅವುಗಳನ್ನೆಲ್ಲಾ ಸ್ವತ್ತಾಗಿ ಹೊಂದಿ ಅವುಗಳೊಂದಿಗೇ ಇದ್ದು, ಅವುಗಳಿಗೆಲ್ಲಾ ಸ್ವಾಮಿಯಾಗಿರುವವನೆಂಬ ಭಾವವು. ಶಾಸ್ತ್ರಗಳನ್ನು ಚೆನ್ನಾಗಿ ಪರಿಶೀಲಿಸಿದ ಪ್ರಾಮಾಣಿಕರಿಗೆ ಶಂಕಾ ಉಂಟಾಗಲು ಕಾರಣವೇ ಇಲ್ಲವೆಂದು **ಕೇನವಾ ಶಕ್ಯ ಶಂಕಃ** ಎಂಬ ಪ್ರಯೋಗವು. ಇಲ್ಲಿ **ವಾ** ಎಂಬುದು ಚಕಾರಾರ್ಥವುಳ್ಳದ್ದಾಗಿ ಸಮುಚ್ಚಯಾರ್ಥವನ್ನು ಳ್ಳದ್ದು. ಶ್ರುತಿಗಳಿಗೆ ಅಪಾರ್ಥಗಳನ್ನು ಮೇಲೆ ಮೇಲೆ ತೋರುವ ಹಾಗೆ ಕಲ್ಪಿಸಿ, ಹೇಳುವವರಿಗೀಗ ಶಂಕಾ ಉಂಟೇವಿನಾ ಪ್ರಾಜ್ಞರಿಗೆ ಇಲ್ಲವೆಂದು ಕುದೃಷ್ಟಿಗಳ ಪೂರ್ವ ಪಕ್ಷಗಳನ್ನು ಖಂಡಿಸುವದಕ್ಕಾಗಿ ಪ್ರಶ್ನಾರ್ಥಕ ಪ್ರಯೋಗವು.

ಹೀಗೆ ಕುದೃಷ್ಟಿಗಳ ಶಂಕಾಗಳನ್ನು ಮಹರ್ಷಿಗಳೇ ಖಂಡಿಸಿರುತ್ತಾರೆ.— ವೈಷ್ಣವಧರ್ಮ ಶಾಸ್ತ್ರದ ಆಶ್ವಮೇಧಿಕವಲ್ಲಿ, **"ಅನಾಶ್ರಿತ್ಯೋಚ್ಚ್ರಯೋನಾಸ್ತಿ ಮುಖ್ಯ ಮಾಶ್ರಯ ಮಾಶ್ರಯೇತ್। ರುದ್ರಂ ಸಮಾಶ್ರಿತೋ ದೇವಾ। ರುದ್ರೋ ಬ್ರಹ್ಮಾಣ ಮಾಶ್ರಿತಃ। ಬ್ರಹ್ಮಾ ಮಾಮಾಶ್ರಿತೋ ರಾಜನ್ ನಾಹಂ ಕಂಚಿದು ಪಾಶ್ರಿತಃ। ಮಮಾಶ್ರಯೋ ನಕಶ್ಚಿತ್ತು ಸರ್ವೇಷಾ ಮಾಶ್ರಯೋ ಹ್ಯಹಮ್। ಇದಂ ರಹಸ್ಯಂ ಕೌನ್ತೇಯ ಪ್ರೋಕ್ತವಾನಹ ಮವ್ಯಯಮ್॥**

ಇದರರ್ಥಕ್ಕೆ 661–2 ಪುಟಗಳನ್ನು ಪರಾಂಬರಿಸಿ. **ಶ್ರೀಹರಿವಂಶದಲ್ಲಿ** ದೇವತೆಗಳನ್ನು ಕುರಿತು ರುದ್ರನು ಹೇಳುತ್ತಾನೆ.– **"ಏತದೇವ ಪರಂ ವಸ್ತು ನೈತಸ್ಮಾತ್ಪರಮಸ್ತಿವಃ। ಏವಮೇವ ವಿಜಾನೀಧ್ವಂ ಏತದ್ವಃ ಪರಮಂತಪಃ"** ಶ್ರೀಹರಿಯೇ ಪರತತ್ತ್ವವು, ಆತನಿಗಿಂತ ಶ್ರೇಷ್ಠನಾಗಿ ಯಾರೂ ನಿಮಗಿಲ್ಲವು. ನೀವು ಹೀಗೇ ತಿಳಿಯತಕ್ಕದ್ದು ಇದೇ ನಿಮಗೆ ಉತ್ಕೃಷ್ಟತಪಸ್ಸು. **ಶ್ರೀವರಾಹ ಪುರಾಣದಲ್ಲಿ "ರುದ್ರಾದಿತ್ಯಾವಸವೋ ಯೇಚ ಸಾಧ್ಯಾ ವಿಶ್ವೇಶ್ವಿನೌ ಮರುತ ಶ್ಚೋಷ್ಮಪಾಶ್ಚ। ಸರ್ವೇಭವನ್ತಂ ಶರಣಂಗತಾಸ್ಮಃ"** ಎಂದು ಹೀಗೆ ಎಲ್ಲರೂ ಶ್ರೀಮನ್ನಾರಯಣನನ್ನು ಶರಣ ಹೊಂದಿದರೆಂದು ಹೇಳಲ್ಪಟ್ಟಿರುತ್ತದೆ.

ಹಾಗೆಯೇ ಇನ್ನೊಂದು ಕಡೆಯಲ್ಲಿ **"ನಾರಾಯಣಾತ್ಪರೋದೇವೋ ನಭೂತೋನ ಭವಿಷ್ಯತಿ। ಏತದ್ರಹಸ್ಯಂ ವೇದಾನಾಂ ಪುರಾಣಾನಾಂಚ ಸತ್ತಮ"** ಬ್ರಾಹ್ಮ ಪುರಾಣದಲ್ಲಿ– **ಸರ್ವೇ ವಿಷ್ಣುಮಯಾ ದೇವಾಸ್ಸರ್ವೇ ವಿಷ್ಣುಮಯಾಗಣಾಃ। ನಹಿ ವಿಷ್ಣುಸಮಾಃ ಕಾಚ್ಚಿದ್ಗತಿರನ್ಯಾ ವಿಧೀಯತೇ॥ ಇತ್ಯೇವಂ ಸತತಂ ವೇದಾ ಗಾಯನ್ತೇ ನಾತ್ರ ಸಂಶಯಃ"** ಎಂದಿರುತ್ತದೆ.

ಆದಿತ್ಯ ಪುರಾಣದಲ್ಲಿ ರುದ್ರವಾಕ್ಯವು :—

**"ಯೋಸೌ ಸಾಕ್ಷಾದ್ವೇದ ಮೂರ್ತಿ ರ್ಯತ್ರವೇದಾಃ ಪ್ರತಿಷ್ಠಿತಾಃ। ತಂ ಯಾಮ ಶರಣಂ ವಿಷ್ಣುಂ ಸರ್ವೇ ಸೇಂದ್ರಾದಿರೌಕಸಃ"** ಅರ್ಥವು ವ್ಯಕ್ತವು.

ಆದುದರಿಂದ **"ಪತಿಂ ವಿಶ್ವಸ್ಯಾತ್ಮಾ"** ಎಂಬ ಶ್ರುತ್ಯರ್ಥವು **ಪರವಾ** ಎಂಬ ಶಬ್ದದಿಂದ ಉಪಬ್ರುಂಹಿತವು. ಮುಕ್ತರೂ ನಿತ್ಯರೂ ಸ್ವಾಮಿದತ್ತವಾದ ಅತಿಶಯ ಶಕ್ತಿಯುಳ್ಳವರಾದರೂ ಅವರ ತತ್ಪಕ್ಷೇ ಸೇರಿದವರಾಗಿ ನಿರತಿಶಯ ಸುಖವನ್ನೂ ಪರಿಪೂರ್ಣ ಬ್ರಹ್ಮಾನುಭವಾವನ್ನೂ ಹೊಂದಿ ಆತನನ್ನೇ ಸ್ತುತಿಸಿ; ಆತನಿಗೇ ಕೈಂಕರ್ಯಮಾಡುತ್ತಿರುವಾಗ ಬ್ರಹ್ಮರುದ್ರೇಂದ್ರಾದಿ ಸಕಲ ದೇವತೆಗಳೂ **ಕೀಳು ಕೋಟಿಗೆ** ಸೇರಿ, ಶ್ರೀಮನ್ನಾರಾಯಣ ನನ್ನೇ ಶರಣಹೊಂದಿ ಮುಂದಕ್ಕೆ ಮುಕ್ತಿಯನ್ನು ಹೊಂದಬೇಕಾದ ಸ್ಥಿತಿಯಲ್ಲಿದ್ದಾರೆಂಬುದು ಕೈಮುತಿಕ ನ್ಯಾಯ ಸಿದ್ಧವು ॥೧೪॥

**ಅವತಾರಿಕೆಯು –** ಹಿಂದೆ ಪ್ರಶ್ನೆಯರೂಪದಲ್ಲಿ ಹೇಳಿದ ೧೧ ರಿಂದ ೧೪ ನಾಲ್ಕೈದು ಶ್ಲೋಕಗಳಿಂದ, ಪೂರ್ವ ಪಕ್ಷಗಳಿಗೆಲ್ಲಾ ಸಮಾಧಾನವನ್ನು ಹೇಳಿ, ಪರತತ್ತ್ವವನ್ನು ಸ್ಥಾಪಿಸಿದರು. ಹೀಗೆ ಶಾಸ್ತ್ರಗಳೆಲ್ಲಾ ಐಕಕಂಠ್ಯದಿಂದ ಶ್ರೀಮನ್ನಾರಾಯಣನಲ್ಲೇ ಪರದೇವತಾ ಪಾರಮಾರ್ಥ್ಯವನ್ನು ಸ್ಥಾಪಿಸಿರುತ್ತವೆ. ಆತನ ಸ್ವರೂಪ ರೂಪ ಗುಣ ವಿಭವ ದಿವ್ಯ ಚೇಷ್ಟಿತಗಳಿಂದಲೂ, ಪ್ರಬಲ ಶಾಸ್ತ್ರ ಪ್ರಮಾಣಗಳಿಂದಲೂ ದೇವತಾ ಪಾರಮಾರ್ಥ್ಯವನ್ನು ಭಗವತ್ಕೃಪಯಾ ತಿಳಿದ ಮಹಾ

ಮೂ: ತ್ವಾಂಶೀಲ ರೂಪ ಚರಿತೈಃ ಪರಮ ಪ್ರಕೃಷ್ಟ!
ಸತ್ವೇನ ಸಾತ್ವಿಕತಯಾ ಪ್ರಬಲೈಶ್ಚಶಾಸ್ತ್ರೈಃ।
ಪ್ರಖ್ಯಾತದೈವ ಪರಮಾರ್ಥವಿದಾಂ ಮತೈಶ್ಚ।
ನೈವಾಸುರ ಪ್ರಕೃತಯಃ ಪ್ರಭವನ್ತಿ ಬೋದ್ಧುಮ್ ॥೧೫॥

ಪ್ರಾಜ್ಞರಾದ ಮಹರ್ಷಿವಾಕ್ಯಗಳಿಂದಲೂ ನಿಸ್ಸಂದೇಹವಾಗಿ ತತ್ವವು ವ್ಯಕ್ತವಾಗಿರುವಾಗ, ಅಪಸಿದ್ಧಾನ್ತಗಳೂ ಕೂಡ ತಲೆ ಎತ್ತಿರುವುವಲ್ಲಾ? ಕೆಲವರು ಸರ್ವೇಶ್ವರನೇ ಇಲ್ಲವೆನ್ನುವರು; ಇನ್ನು ಕೆಲವರು ಸರ್ವೇಶ್ವರನನ್ನು ಒಪ್ಪಿಕೊಂಡು ಆತನಿಗೆ ಗುಣಗಳೇ ಇಲ್ಲವೆನ್ನುವರು; ಆತನು ಒಬ್ಬನೇ ಇರುವನೇ ವಿನಾ ಜಗತ್ತೆಲ್ಲಾ ಮಿಥ್ಯೆ ಎನ್ನುವರು; ಎಲ್ಲಾ ಆತ್ಮರೂ ಒಂದು ಎಂದು ಹೇಳಿ, ವಿಷ್ಣು ಬ್ರಹ್ಮಾ ಶಿವ ತ್ರಿಮೂರ್ತಿಗಳೂ ಒಂದೇ ಎನ್ನುವರು; ಇನ್ನು ಕೆಲವರು ಮೂರು ಸಮವೆನ್ನುವರು; ಇನ್ನು ಕೆಲವರು ಬ್ರಹ್ಮ ರುದ್ರ ವಿಷ್ಣು ಈ ತ್ರಿಮೂರ್ತಿಗಳಿಗಿಂತ ಉತ್ಕೃಷ್ಟ ಪರಮ ಶಿವನೊಬ್ಬನು ಇರುವನು ಎನ್ನುವರು; ಹೀಗೆ ಸಾತ್ವಿಕ ಶಾಸ್ತ್ರಗಳನ್ನು ತ್ಯಜಿಸಿ, ಇತರವಾದವುಗಳನ್ನು ಅವಲಂಬಿಸಿ, ಅಪಸಿದ್ಧಾನ್ತಗಳನ್ನು ಹರಡಿರುವರಲ್ಲಾ; ಇವಕ್ಕೆಕಾರಣವೇನು? ಎಂದರೆ ಹೇಳುತ್ತಾರೆ. ಭಗವದನುಗ್ರಹಕ್ಕೆ ಬಾಹ್ಯರಾದ ಆಸುರ ಸ್ವಭಾವದಿಂದ ಕೂಡಿದವರು, ಪರ ದೇವತಾ ಪಾರಮಾರ್ಥ್ಯವನ್ನು ಚೆನ್ನಾಗಿ ವಿಮರ್ಶಿಸಿ ತಿಳಿಯಲು ಇಷ್ಟೊಂದು ಅನುಕೂಲವು ಇದ್ದರೂ, ಅವರದುರದೃಷ್ಟದಿಂದ ಯಾಥಾರ್ಥ್ಯವನ್ನು ತಿಳಿಯಲಾರದೇ ಹೋದರೇ ಎಂದು ಪರಿತಾಪದಿಂದ ಹೇಳುತ್ತಾರೆ. ಇದು ವ್ಯಾಸ ಸೂತ್ರಗಳಲ್ಲಿ ಅಪಸಿದ್ಧಾನ್ತಗಳನ್ನೆಲ್ಲಾ ನಿರಾಕರಿಸಿ ಸಿದ್ಧಾಂತ ಸ್ಥಾಪನೆಯನ್ನು ಮಾಡುವ ಎರಡನೆಯ ಅಧ್ಯಾಯದ ೧-ನೆಯ ಭಾಗದಸಂಗ್ರಹವೆಂದು ಭಾವಿಸತಕ್ಕದ್ದು. ಈ ಅಭಿಪ್ರಾಯವನ್ನೇ ಶ್ರೀನಿಗಮಾಂತ ದೇಶಿಕರವರು ಶ್ರೀಮದ್ರಹಸ್ಯತ್ರಯ ಸಾರದ ಪರದೇವತಾ ಪಾರಮಾರ್ಥ್ಯಾಧಿಕಾರದ ಶ್ಲೋಕವಾದ **"ಆತ್ಮೈಕ್ಯಂ ದೇವತೈಕ್ಯಂ"** ಎಂಬಲ್ಲಿ ಉಪಪಾದಿಸಿರುತ್ತಾರೆ. ಅಲ್ಲಿ ಪೂರ್ವಾರ್ಧದಿಂದ ಅಪಸಿದ್ಧಾನ್ತಗಳನ್ನೆಲ್ಲಾ ಹೇಳಿ, ಉತ್ತರಾರ್ಧದಲ್ಲಿ ಶ್ರೀಮನ್ನಾರಾಯಣನೇ ಪರತತ್ವವೆಂದು ಸರ್ವಶಾಸ್ತ್ರಗಳೂ ಐಕಕಂಠ್ಯದಿಂದ ಬೋಧಿಸುತ್ತವೆಂದು ಉಪದೇಶಿಸಿರುತ್ತಾರೆ.-

**ಅರ್ಥವು**- ಸರಿಯಾಗಿ ಪರದೇವತಾ ಪಾರಮಾರ್ಥ್ಯವನ್ನು ಗ್ರಹಿಸಲು ಇರುವ ಮಹತ್ತಾದ ಸಲಕರಣೆಗಳನ್ನೆಲ್ಲಾ ಹೇಳಿ, ಇವುಗಳಿಂದಲೂ ಕೂಡ ಆಸುರ ಪ್ರಕೃತಿಗಳು ತಿಳಿಯಲಾರರು; ಅವರು ಅಂತಹ ದುರದೃಷ್ಟರು ಎಂದು ತಿಳಿಸುತ್ತಾರೆ. **ಆಸುರ ಪ್ರಕೃತಯಃ**- ದುರದೃಷ್ಟರಾದ ರಾಜಸತಾಮಸಗುಣಾಧಿಕ್ಯದಿಂದ ಆಸುರಸ್ವಭಾವವುಳ್ಳವರು ಆ ಗುಣಗಳಿಂದ ತಿರೋಹಿತಜ್ಞಾನವುಳ್ಳವರು

**ತ್ವಾಂ**– ಹಿಂದೆ ನಾಲ್ಕು ಶ್ಲೋಕಗಳಿಂದಲೂ ಉಪಪಾದಿಸಿದ ಹೇಳಿದ ಮಹಿಮೆಗಳನ್ನೆಲ್ಲ್ಲ ಹೊಂದಿ ಜಗತ್ಕಾರಣನಾಗಿ ನಿಸ್ಸಮಾಭ್ಯಧಿಕನಾಗಿರುವ ನಿನ್ನನ್ನು, **ಬೋದ್ಧುಂ**– ವಿಮರ್ಶಿಸಿ ಯಥಾರ್ಥವಾಗಿ ತಿಳಿಯಲು, **ನಪ್ರಭವಂತಿ**– ಸಮರ್ಥರಾಗುವದಿಲ್ಲವು. ಸರಿಯಾಗಿ ತಿಳಿಯಲು ಎಷ್ಟೋಸಲಕರಣೆಗಳು ಇದ್ದರೂ ತಿಳಿಯಲಾರರು; ಅವುಯಾವುವೆಂದರೆ.—

(೧) **ಶೀಲರೂಪ ಚರಿತ್ರೈಃ**– ಶೀಲವೆಂದರೆ ಮಹತ್ತಾದವನು ಕೀಳುವರ್ಗದವರೊಂದಿಗೆ ಸೇರಿರುವ ಸ್ವಭಾವ, ಇದು ಸೌಶೀಲ್ಯ ಕೃಪಾ ಮೊದಲಾದ ಆಶ್ರಿತ ರಕ್ಷಣೋಪಯುಕ್ತ ಕಲ್ಯಾಣಗುಣಗಳಿಗೂ ಉಪಲಕ್ಷಣವು; ನಿಷಾಧನಾದ ಗುಹ, ಸ್ತ್ರೀಯಾದ ಶಬರಿ, ವಾನರರಾದ ಸುಗ್ರೀವ ಆಂಜನೇಯ, ರಾಕ್ಷಸರಾದ ಪ್ರಹ್ಲಾದ ವಿಭೀಷಣ ಇತ್ಯಾದಿ ಕೀಳುವರ್ಗದವರೊಂದಿಗೆ ಸೇರಿರುವಿಕೆ ಮತ್ತು ಪ್ರೀತಿ, **ರೂಪ**– ದುಷ್ಟ ನಿಗ್ರಹ ಶಿಷ್ಟಪರಿಪಾಲನ ಧರ್ಮ ಸಂಸ್ಥಾಪನ ಕಾಲಗಳಲ್ಲಿ ದಿವ್ಯ ಮಙ್ಗಳ ವಿಗ್ರಹ ರೂಪದಲ್ಲಿ ಅವತಾರಗಳನ್ನು ಮಾಡುವದು, ಅರ್ಚಾ ವಿಗ್ರಹವನ್ನು ಆಕ್ರಮಿಸೋಣವೂ, **ಚರಿತ್ರೈಃ**– ಅತಿ ಮಾನುಷಗಳಾದ, ಸಮುದ್ರ ಮಥನ, ಗೋವರ್ಧನೋದ್ಧಾರಣ, ಖರದೂಷಣಾದಿ ಸಮಸ್ತ ರಾಕ್ಷಸ ನಿರ್ಮೂಲನ, ಪ್ರಹ್ಲಾದ ಪರಿಪಾಲನಾದಿ ಚೇಷ್ಟೆಗಳಿಂದಲೂ, ಆಸುರಪ್ರಕೃತಿಗಳು ನಿನ್ನನ್ನು ಅರಿಯಲಾರರು ಎಂಬರ್ಥವು.

(೨) **ಪರಮ ಪ್ರಕೃಷ್ಟಸತ್ವೇನ**– ನಿನ್ನ ಸರ್ವೋತ್ಕೃಷ್ಟವಾದ ಸತ್ವಗುಣದಿಂದಲೂ ಆಸುರ ಪ್ರಕೃತಿಗಳು ನಿನ್ನನ್ನು ತಿಳಿಯಲಾರರು. ಸತ್ವಗುಣವು ಚತುರ್ಮುಖನಲ್ಲಿ ರಾಜಸಗುಣಾಧಿಕ್ಯದಿಂದ ಕಲುಷಿತವು- ಹಾಗೆಯೇ ರುದ್ರನಲ್ಲಿ ತಾಮಸಗುಣಾಧಿಕ್ಯದಿಂದ ಕಲುಷಿತವು; ಶ್ರೀಮಹಾವಿಷ್ಣುವಿನಲ್ಲಿ, ರಾಜಸತಾಮಸಗುಣ ಲೇಶವೂ ಇಲ್ಲದ ಶ್ರೇಷ್ಠವಾದ ಶುದ್ಧ ಸತ್ವಗುಣ ಪರಿಪೂರ್ಣವಾದುದು. ಇದು ಭೃಗು ಮಹರ್ಷಿಯ ಉಪಾಖ್ಯಾನದಿಂದ ವ್ಯಕ್ತವು. ಅಥವಾ ಪರಮ ಪ್ರಕೃಷ್ಟ ಸತ್ವೇನ– ಉತ್ಕೃಷ್ಟವಾದ ಪಂಚೋಪನಿಷನ್ಮಯವಾದುದು ಸರ್ವೇಶ್ವರನ ದಿವ್ಯ ಮಂಗಳ ವಿಗ್ರಹ ವೆಂದೂ, ಮಾಂಸ ರಕ್ತ ಮಜ್ಜಾದಿಗಳಿಂದ ನಮ್ಮ ದೇಹಗಳ ಹಾಗೆ ಪ್ರಾಕೃತವಾಗುದಲ್ಲವೆಂದೂ, ಅಪ್ರಾಕೃತವಾದುದೆಂದೂ ಹೇಳಲ್ಪಟ್ಟಿರುತ್ತದೆ. ಇದರಿಂದಲೂ ಆ ದುರದೃಷ್ಟರು ತಿಳಿಯಲಾರರು.

(೩) **ಸಾತ್ವಿಕತಯಾಪ್ರಬಲೈಶ್ಚ ಶಾಸ್ತ್ರೈಃ**— ವೇದಗಳಿಂದ ತಿಳಿಯುವದೇನೋ ಕಷ್ಟವು. ಅದು ಹಾಗಿರಲಿ, ಅವುಗಳ ಉಪಬೃಂಹಣಗಳಾದ ಸಾತ್ವಿಕತೆಯಿಂದ ಮುಖ್ಯಗಳಾದ ಶಾಸ್ತ್ರಗಳಿಂದಲೂ ತಿಳಿಯಲಾರರು. **ಸಾತ್ವಿಕತಯಾ** ಎಂದು ಏತಕ್ಕೆ ಹೇಳಿದರೆಂದರೆ, ಸಾತ್ವಿಕಗಳಲ್ಲದ ಅನೇಕ ಸ್ಮೃತಿ ಮತ್ತು ಪುರಾಣ

ಗಳುಂಟು; ಕಾಪಿಲ ಸ್ಮೃತಿ, ಮತ್ತು ರಾಜಸ ತಾಮಸಗಳಾದ ಹನ್ನೆರಡು ಪುರಾಣ ಗಳುಂಟು. ಇವುಗಳನ್ನು ವ್ಯಾವರ್ತಿಸಿ ಹೇಳುವದಕ್ಕಾಗಿ ಸಾತ್ವಿಕತಯಾ ಎಂಬ ಪ್ರಯೋಗವು. ಹೀಗೆ ಸಾತ್ವಿಕತೆಯಿಂದ ಪ್ರತಿಷ್ಠಿತವಾಗಿದ್ದರೇನೇ ಅದಕ್ಕೆ ಪ್ರಾಬಲ್ಯವು; ಆದುದರಿಂದ ಪ್ರಬಲ ಶಾಸ್ತ್ರಗಳಿಂದಲೂ ಅವರು ಪರತತ್ವವನ್ನು ತಪಸ್ಸಿ ತಿರೋಹಿತಜ್ಞಾನದಿಂದ ತಿಳಿಯಲಾರರು. ಅಂತಹ ಪ್ರಬಲ ಶಾಸ್ತ್ರಗಳು ಯಾವುವೆಂದರೆ, ಮುಖ್ಯವಾಗಿ ಶ್ರುತಿಯು ನಾರಾಯಣೋಪನಿಷತ್ತು ಮತ್ತು ಪುರುಷ ಸೂಕ್ತವು. ಆ ಮೇಲೆ ಇವುಗಳ ಉಪಬ್ರಹ್ಮಣಗಳಿಂದ ದೇವತಾಪಾರಮ್ಯಾರ್ಥ್ಯವನ್ನು ಭಗವದನುಗ್ರಹದಿಂದ ತಿಳಿದ ಅಮೋಘವಾದ ಶ್ರೀ ಪರಾಶರ, ವ್ಯಾಸ, ಶುಕ, ಶೌನಕ ವಾಲ್ಮೀಕಿ ಮಹರ್ಷಿ ಮುಂತಾದವರ ದಿವ್ಯಸೂಕ್ತಿಗಳಿಂದಲೂ ಆದುರದೃಷ್ಟರು ತಿಳಿಯಲಾರರು.

ಸತ್ವಾದಿಕಾರ್ಯ ಭೇದಗಳು ಶ್ರೀ ಕೃಷ್ಣಭಗವಾನರವರಿಂದಲೇ ಗೀತೆಯಲ್ಲಿ ಹೇಳಲ್ಪಟ್ಟಿರುತ್ತದೆ– **"ಸತ್ವಾತ್ಸಂಜಾಯತೇಜ್ಞಾನಂ ರಜಸೋಲೋಭ ಏವಚ। ಪ್ರಮಾದಮೋಹೌ ತಮಸೋ ಭವತೋಽಜ್ಞಾನ ಮೇವಚ"** ಯಥಾರ್ಥ ಜ್ಞಾನ ಸಾತ್ವಿಕ ಬುದ್ಧಿಗೆ, ಪ್ರಮಾದಮೋಹ ಅಜ್ಞಾನಗಳು ಆಸುರ ಪ್ರಕೃತಿಯ ಬುದ್ಧಿಗೆ ಉಂಟು ಎಂದು ಹೇಳಲ್ಪಟ್ಟಿರುತ್ತದೆ. ಮತ್ತು **"ಪ್ರವೃತ್ತಿಂಚ ನಿವೃತ್ತಿಂಚ ಕಾರ್ಯಾಕಾರ್ಯೇ ಭಯಾಭಯೇ। ಬಂಧಂ ಮೋಕ್ಷಂಚಯೋ ವೇತ್ತಿ ಬುದ್ಧಿಸ್ಸಾ ಪಾರ್ಥ ಸಾತ್ವಕೀ॥ ಯಯಾಧರ್ಮ ಮಧರ್ಮಂಚ ಕಾರ್ಯಂಚಾ ಕಾರ್ಯಮೇವಚ। ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾ ಪಾರ್ಥರಾಜಸೀ। ಅಧರ್ಮಂ ಧರ್ಮ ಮಿತಿಯಾ ಮನ್ಯತೇ ತಮಸಾವೃತಾ। ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸೀ"** ಎಂದು ಹೇಳಲ್ಪಟ್ಟಿರುತ್ತದೆ. ಇವುಗಳ ಅರ್ಥಕ್ಕೆ ದಾಸನು ಬರೆದಿರುವ ಭಗವದ್ಗೀತಾರ್ಥವನ್ನು ಪರಾಂಬರಿಸ ಬಹುದು. ಮನುವು **"ಯೋವೇದ ಬಾಹ್ಯಾಸ್ಸ್ಮೃತಯೋ ಯಾಶ್ಚಕಾಶ್ಚ ಕುದೃಷ್ಟಯಃ। ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ॥"** ಎಂದು ವೇದ ಬಾಹ್ಯರ ಮತ್ತು ಕುದೃಷ್ಟಿಗಳ ಅಭಿಪ್ರಾಯಗಳನ್ನು ದೂಷಿಸಿರುತ್ತಾರೆ. ಮಾತ್ಸ್ಯ ಪುರಾಣದಲ್ಲಿ ಪುರಾಣಗಳನ್ನು ಸಾತ್ವಿಕರಾಜಸ ತಾಮಸವೆಂದು ವಿಭಾಗಮಾಡಿ ಸಾತ್ವಿಕ ಮಾತ್ರವೇ ಮುಕ್ತಿ ಮಾರ್ಗಕ್ಕೆ ಸಾಧಕವೆಂದು ಹೇಳಲ್ಪಟ್ಟಿರುತ್ತದೆ. **"ಸಾತ್ವಿಕೇಷ್ವಧಿಕಂ ತದ್ವದ್ವಿಷ್ಣೋರ್ಮಾಹಾತ್ಮ್ಯ ಮುಚ್ಯತೇ। ತೇಷ್ವೇವ ಯೋಗ ಸಂಸಿದ್ಧಾ ಗಮಿಷ್ಯನ್ತಿ ಪರಾಂ ಗತಿಮ್।"** ರಾಜಸ ಪುರಾಣಗಳಲ್ಲಿ ಚತುರ್ಮುಖನ ಮಹಾತ್ಮ್ಯೆಯೂ, ತಾಮಸಗಳಲ್ಲಿ ಶಿವಮಾಹಾತ್ಮ್ಯೆಯೂ ಸಾತ್ವಿಕಗಳಲ್ಲಿವಿಷ್ಣುಮಹಾತ್ಮ್ಯೆಯೂಮುಖ್ಯವಾಗಿ ಮೋಕ್ಷ ಮಾರ್ಗವೂ ಹೇಳಲ್ಪಟ್ಟು ಸಾತ್ವಿಕಕ್ಕೇ ಹೆಚ್ಚು ಮಹಾತ್ಮ್ಯೆಯೂ

ಕೂರ್ಮ ಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ. **ಪ್ರಬಲೈಶ್ಚ ಶಾಸ್ತ್ರೈಃ** ಎಂದು ಹೇಳಿರುವದು ಭಾರತ ಭಾಗವತ ರಾಮಾಯಣಗಳೆಂಬ ಇತಿಹಾಸಗಳೂ, ಪಾದ್ಮ, ವೈಷ್ಣವ, ನಾರದೀಯ, ಮಾರ್ಕಂಡೇಯ, ವರಾಹ ವಾಮನ, ಮಾತ್ಸ್ಯಗಾರುಡ, ಬ್ರಹ್ಮಾಂಡ ನಾರಸಿಂಹಾದಿ ಪುರಾಣಗಳಿಗೂ ಅನ್ಯೋನ್ಯ ಸಾಮರಸ್ಯವನ್ನು ಸೂಚಿಸುತ್ತದೆ.

(೪) **ಪ್ರಖ್ಯಾತ ದೈವ ಪರ ಮಾರ್ಥ ವಿಧಾಂ ಮತೈಶ್ಚ** – ಪ್ರಸಿದ್ಧರಾಗಿಯೂ, **ದೈವ ಪರಮಾರ್ಥವಿದಾಂ**– ಪರದೇವತಾಪಾರ ಮಾರ್ಥ್ಯವನ್ನು ವಿಮರ್ಶಿಸಿ ತಿಳಿದ ಮಹಾನುಭಾವರುಗಳಾಗಿಯೂ ಇರುವವರ **ಮತೈಶ್ಚ** – ಅಭಿಪ್ರಾಯಗಳಿಂದ, ಹಿಂದಿಯೇ ವಿಷ್ಣುಸರ್ವೋತ್ತಮವತ್ವವನ್ನು ಉಪಪಾದಿಸಿರುವ ಮೇಲೆ ಹೇಳಿದಮಾಹರ್ಷಿಗಳ ಮತ್ತು ಮನು ಮೊದಲಾದವರುಗಳ ಮತ್ತು ನಮ್ಮಾಳ್ವಾರ್ ನಾಥಮುನಿ ಮೊದಲಾದವರುಗಳ ಅಭಿಪ್ರಾಯದಿಂದಲೂ ದೈವ ಪ್ರಕೃತಿಯುಕ್ತರು ತಿಳಿಯುವರು. ಆದರೆ ಇತರ ನಿರ್ಭಾಗ್ಯರು ತಿಳಿಯಲಾರರು. ಏಕೆಂದರೆ ಅವರು ಆಸುರ ಪ್ರಕೃತಿಗಳಾದುದರಿಂದ ವಿಮರ್ಶಿಸಿ ತಿಳಿಯಲು ಶಕ್ತರಲ್ಲವೆಂದು ಹೇಳಿದರು. ದೈವ ಶಬ್ದವು ಮೂಲದಲ್ಲಿ ಪರದೇವತೆಯ ಪರವಾಗಿಯೂ ಅರ್ಥ ಮಾಡಬಹುದು.

ಆಸುರ ಪ್ರಕೃತಿಗಳು ಯಾರು? ಎಂದರೆ ಭಗವದ್ಗೀತೆಯಲ್ಲಿ ದೈವಾಸುರ ಪ್ರಕೃತಿಗಳ ವಿಭಾಗಮಾಡಿ ಹೇಳಿರುವ ೧೬ನೆಯ ಅಧ್ಯಾಯದಲ್ಲಿ ೪ನೆಯ ಶ್ಲೋಕದಲ್ಲಿ ಆಸುರ ಸ್ವಭಾವಗಳು "**ದಂಭೋ ದರ್ಪೋಽತಿಮಾನಶ್ಚ ಕ್ರೋಧಃ ಪಾರುಷ್ಯಮೇವಚ। ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದ ಮಾಸುರೀಂ**" ಎಂಬಲ್ಲಿ ಹೇಳಲ್ಪಟ್ಟಿವೆ. ಇದರರ್ಥಕ್ಕೆ ದಾಸನು ಬರೆದಿರುವ ಭಗವದ್ಗೀತೆಯ ವ್ಯಾಖ್ಯಾನವನ್ನು ಪರಾಂಬರಿಸಿ. ಅವರಿಗೆ ಶೌಚವಾಗಲಿ ಆಚಾರವಾಗಲಿ ಸತ್ಯವಾಗಲಿ ಇರುವುದಿಲ್ಲವೆಂದೂ ಜಗತ್ತಿಗೆ ಈಶ್ವರನೊಬ್ಬನೆಂಬುದು ಇಲ್ಲವೆಂದೂ ಹೇಳುವವರು. ಅವರು ಕಾಮ ಕ್ರೋಧ ಪರಾಯಣರಾಗಿ ಆಶಾಪಾಶ ಬದ್ಧರಾಗಿರುವವರು; ಅವರು ತಾವೇ ಸ್ವತಂತ್ರಿಸಿ ತಮಗೆ ಉಂಟಾದುದನ್ನೆಲ್ಲಾ ಸಾಧಿಸಿಕೊಂಡವರು ಎಂದು ಹೇಳುವವರು. ಆದುದರಿಂದ ಅವರು ಶಾಸ್ತ್ರಜ್ಞಾನ ಹೀನರಾಗಿ ದೇವತಾ ಪಾರಮಾರ್ಥ್ಯಜ್ಞಾನ ಶೂನ್ಯರೆಂಬ ಭಾವವು. ಇಂತವರಿಗೇ ಅಧೋಗತಿಯೇವಿನಾ ಶ್ರೇಯಸ್ಸೆಂಬುದು ಇಲ್ಲವೆಂದು ಹೇಳಲ್ಪಟ್ಟಿರುತ್ತದೆ.

ಆದುದರಿಂದ ಆಸುರ ಸ್ವಭಾವವನ್ನು ನೀಗಿ "**ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ**" (ಗೀ. ೧೬. ೨೪) ಎಂಬಲ್ಲಿ ಹೇಳಿರುವಹಾಗೆ ಸಾತ್ವಿಕ ಶಾಸ್ತ್ರ ಪ್ರಮಾಣವನ್ನು ಅಂಗೀಕರಿಸಿ ದೇವತಾ ಪಾರಮಾರ್ಥ್ಯವನ್ನು ತಿಳಿಯಲು ಮೇಲೆ ಹೇಳಿದ ಹಾಗೆ ನಾಲ್ಕುವಿಧ ಸಹಕಾರಿಗಳಿರುವುದರಿಂದ, ಅವುಗಳಿಂದ ಶ್ರಿಯಃ ಪತಿಯಾದ ನಾರಾಯಣನೇ ಪರತತ್ವವೆಂದು ಭಾವಿಸತಕ್ಕದ್ದೆಂಬ ಭಾವವು.

**ಉಪಪಾದನೆಯು** – ಶ್ರೀಮನ್ನಾರಾಯಣನೇ ಪರತತ್ವವೆಂದು ತಿಳಿಯಲು ಅನೇಕ ಸಲಿಕರಣಗಳುಂಟು. ಅವು ಯಾವುವೆಂದರೆ–

(೧) **ಶೀಲರೂಪ ಚರಿತ್ರೈಃ** – ರಾಮಾವತಾರಿಯಾದಾಗ ನಿ ಷಾದಾಧಿಪತಿಯಾದ ಗುಹನು ಮಾಡಿದ ನ್ಯಗ್ರೋದಕ್ಷೀರ, ನಾವೆ ಮೊದಲಾದುವುಗಳನ್ನು ತಂದುಕೊಟ್ಟ ಕೈಙ್ಕರ್ಯಕ್ಕೆ ಸಂತೋಷಿಸಿ ಅವನೊಂದಿಗೆ ಸಖ್ಯವನ್ನು ಬೆಳೆಸಿದ ಶೀಲವು; ಶಬರಿಯು ಪ್ರೀತಿಯಿಂದ ಆರಿಸಿ ಇಟ್ಟ ವನ್ಯಫಲಗಳನ್ನು ಸ್ವೀಕರಿಸಿ ಮೋಕ್ಷವನ್ನಿತ್ತ ಶೀಲವು; ಜಟಾಯು ಪಕ್ಷಿಯು ತನ್ನ ಪ್ರಿಯ ಪತ್ನಿಯನ್ನು ಅಪಹರಿಸಿದ ರಾವಣನೊಂದಿಗೆ ಯುದ್ಧಮಾಡಿ ಮಡಿದುದರಿಂದ ಆತನಿಗೆ ಔರ್ಧ್ವ ದೇಹಿಕ ಕೈಂಕರ್ಯವನ್ನು ಮಾಡಿ ಮೋಕ್ಷವನ್ನಿತ್ತ ಶೀಲವು; ವಾನರರಾದ ಸುಗ್ರೀವ ಹನುಮಂತರೊಂದಿಗೆ ಸಖ್ಯವನ್ನು ಬೆಳಿಸಿ ಅವರಿಗೆ ಸರ್ವಶ್ರೇಯಸ್ಸುಗಳನ್ನಿತ್ತ ಶೀಲವು. ತನ್ನ ಸಹಾಧ್ಯಾಯಿಯಾಗಿ ಮಹಾಭಾಗವತ ಶಿರೋಮಣಿಯು ವೈರಾಗ್ಯನಿಧಿಯೂ ಆದ ಕುಚೇಲರಿಗೆ, ಕಾಲನ್ನು ತೊಳೆದು ತೀರ್ಥವನ್ನು ನೀನು ನಿನ್ನ ಪತ್ನಿಯೂ ಸಹ ಪ್ರೋಕ್ಷಿಸಿಕೊಂಡು, ಸರ್ವ ವಿಧೋಪಚಾರಗಳನ್ನೂ ನಡೆಸಿ, ಕಡೆಗೆ ಅಪ್ರಾರ್ಥಿತನಾಗಿಯೇ ಅವರ ದಾರಿದ್ರ್ಯದೆಶೆಯನ್ನು ಹೋಗಲಾಡಿಸಿ ಕಡೆಗೆ ಮುಕ್ತಿಯನ್ನು ಕೊಟ್ಟ ಶೀಲವು; ಒಬ್ಬ ರಾಕ್ಷಸನು ಬಂದು ಆಶ್ರಿತನಾದನೇ ಎಂಬುದಾಗಿ ಆತನನ್ನು ವಿಶೇಷವಾಗಿ ಪ್ರೀತಿಸಿ ಆತನ ಮೂಲಕ ರಾವಣವಧೆಯಲ್ಲಿ ಸಹಾಯವನ್ನು ಹೊಂದಿ ಲಂಕಾ ರಾಜ್ಯವನ್ನೂ ಕೊನೆಗೆ ಮೋಕ್ಷವನ್ನು ಇತ್ತ ಶೀಲವು; ಇಂತಹ ಶೀಲಗಳ ಅನೇಕ ನಿದರ್ಶನಗಳನ್ನು ಇತಿಹಾಸದಲ್ಲಿ ಕಾಣಬಹುದು. ಇವುಗಳಲ್ಲಿ ಕೆಲವನ್ನು ಶ್ರೀ ದೇಶಿಕರವರು ದಯಾಶತಕದಲ್ಲಿ ( ೬೫ ) **"ನಿಷಾದಾನಾಂ ನೇತಾ ಕಪಿಕುಲಃ ಪತಿಃ ಕಾಪಿ ಶಬರೀ"** ಎಂಬ ಶ್ಲೋಕವಲ್ಲಿ ಉದಾಹರಿಸಿರುತ್ತಾರೆ. ಇಂತಹ ಶೀಲಗಳಿಂದಲೇ ಶ್ರೀಮನ್ನಾರಾಯಣನೇ ಪರತತ್ವವೆಂದು ಗ್ರಹಿಸ ಬಹುದು.

**ರೂಪ**ಗಳಿಂದಲೂ ಗ್ರಹಿಸಬಹುದು; ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥವಾಗಿ ಅನೇಕ ಅವತಾರಗಳನ್ನು ತನ್ನ ಪ್ರಿಯಪತ್ನಿಯೊಂದಿಗೆ ಎತ್ತಿ ಲೋಕಸೌಖ್ಯವನ್ನುಂಟು ಮಾಡಿರುತ್ತಾನೆ. ಅವುಗಳಲ್ಲಿ ದಶಾವತಾರಗಳು ಪ್ರಧಾನವಾಗಿ ಹೇಳಲ್ಪಟ್ಟಿವೆ. ಹೀಗೆ ದಿವ್ಯಮಙ್ಗಳ ವಿಗ್ರಹಗಳನ್ನೆತ್ತಿ ಪ್ರಪನ್ನರನ್ನು ರಕ್ಷಿಸಿರುವವನು ಶ್ರೀಮನ್ನಾರಾಯಣನು ಎಂದು ಅವನ ರೂಪಗಳಿಂದ ತಿಳಿಯಬಹುದು. ಇದಲ್ಲದೆ ಪರರೂಪವಾದ ಶಾಶ್ವತ ರೂಪವನ್ನು ಧರಿಸಿ ನಿತ್ಯಮುಕ್ತರುಗಳಿಗೆ ಸೇವೆಯನ್ನೂ ತನ್ಮೂಲಕ ಪರಿಪೂರ್ಣ ಬ್ರಹ್ಮಾನು ಭವರೂಪವಾದ ಆನಂದವನ್ನು ಕೊಟ್ಟು ಅವರುಗಳು ಮಾಡುವ ಕೈಂಕರ್ಯವನ್ನು ಪರಿಗ್ರಹಿಸುವನೆಂದು ಶಾಸ್ತ್ರಗಳಲ್ಲಿ ಪ್ರೋಕ್ತವಾಗಿರುವದರಿಂದ, ಹೀಗೆ ಇಂತಹ ರೂಪದಿಂದ ಶ್ರಿಯಃಪತಿಯು ಪರ

ವಾಸುದೇವನಾದ ಶ್ರೀಮನ್ನಾರಾಯಣನೆಂದು ತಿಳಿಯಬಹುದು. ಹಾಗೆಯೇ ವ್ಯೂಹ ರೂಪಗಳನ್ನೂ ಧರಿಸುವನೆಂಬುದು ಶಾಸ್ತ್ರ ಪ್ರೋಕ್ತವು. ಹಾರ್ದ್ರ ರೂಪಿಯಾಗಿ ಉಪಾಸಕನಿಗೆ ಶ್ರೇಯಸ್ಸನ್ನು ಕೊಡುವನು. ಅರ್ಚಾವತಾರಿಯಾಗಿ ಪಾಮರರಿಗೂ ದರ್ಶನವನ್ನು ಇತ್ತು ಅವರುಗಳಿಗೆ ಪುರುಷಾರ್ಥದಾಯಕನು. ಹೀಗೆ ಅದ್ಭುತ ರೂಪಗಳನ್ನು ಧರಿಸಿರುವದರಿಂದಲೂ ಪರತತ್ವವು ಶ್ರೀಮನ್ನಾರಾಯಣನೆಂದು ತಿಳಿಯಬಹುದು. ಈ ಐದು ವಿಧರೂಪಗಳ ವಿಷಯವನ್ನು ಚನ್ನಾಗಿ ತಿಳಿಯಬೇಕೆಂಬ ಅಪೇಕ್ಷಿಸುವವರು ದಾಸನು ಮುದ್ರಿಸಿರುವ ತತ್ತ್ವತ್ರಯಾಧಿಕಾರದ ೫೫೧–೫೮೪ ಪುಟಗಳನ್ನು ಪರಾಂಬರಿಸಿ, ಈ ರೂಪಗಳಲ್ಲಿ ಪರಮಪುರುಷನ ದೇಹವು ನಮ್ಮ ದೇಹದ ಹಾಗೆ ಅಲ್ಲವೆ ಅಪ್ರಾಕೃತವಾದುದು (೧) **"ನಭೂತ ಸಙ್ಗಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ"** (೨) **"ನತಸ್ಯ ಪ್ರಾಕೃತಾ ಮೂರ್ತಿರ್ಮಾಂಸ ಮೇಧೋಽಸ್ಥಿ ಸಂಭವಾ"** ಎಂಬ ಪ್ರಮಾಣಗಳಿವೆ.

**ಚರಿತ್ರೈಃ**– ಆತನ ದಿವ್ಯ ಚೇಷ್ಟಿತಗಳಿಂದಲೂ, ಆತನೇ ಪರತತ್ವವೆಂದು ಸುಲಭವಾಗಿ ತಿಳಿಯಬಹುದು. ಸ್ವಾಮಿಯು ಅವತಾರಕಾಲಗಳಲ್ಲಿ ಆಯಾ ಆಕೃತಿಗಳಾದ ಮತ್ಸ್ಯ ಕೂರ್ಮ ವರಾಹಗಳಹಾಗೆಯೇ ದೇಹಾಕೃತಿಯಾದರೂ, ದಿವ್ಯಚೇಷ್ಟಿತಗಳಾದರೋ ಅತ್ಯದ್ಭುತವಾಗಿಯೂ ಅತ್ಯಾಶ್ಚರ್ಯವಾದುವುಗಳು. ಇವುಗಳಿಂದಲೇ ಆತನು ಪರತತ್ವವಾದ ಶ್ರಿಯಃ ಪತಿ ಎಂಬುದನ್ನು ಅರಿಯಬಹುದು. ವೇದಗಳನ್ನು ಮಾಧುಕೈಟಭರನ್ನು ಕೊಂದು ತರೋಣವು, ವರಾಹಾವತಾರಿಯಾಗಿ ಸಮುದ್ರದಿಂದ ಮೇಲಕ್ಕೆ ಭೂಮಿಯನ್ನು ಎತ್ತೋಣವು, ಕೂರ್ಮಾವತಾರಿಯಾಗಿ ಮಂದರ ಪರ್ವತವನ್ನು ಎತ್ತೋಣವು, ಕೃಷ್ಣಾವತಾರಿಯಾಗಿ ಗೋವರ್ಧನ ಪರ್ವತವನ್ನು ಎತ್ತೋಣವು, ನೃಸಿಂಹಾವತಾರಿಯಾಗಿ ಪ್ರಹ್ಲಾದ ಪರಿಪಾಲನವು. ಇವೇ ಮೊದಲಾದವುಗಳಿಂದಲೂ ಪರತತ್ವನಿರ್ಣಯವನ್ನು ಮಾಡಬಹುದೆಂಬ ತಾತ್ಪರ್ಯವು.

೨. **ಪರಮಪ್ರಕೃಷ್ಟಸತ್ವೇನ**– ಮೇಲೆಯೇ ಸ್ವಾಮಿಯ ದಿವ್ಯಮಙ್ಗಳ ವಿಗ್ರಹವು ಶುದ್ಧಸತ್ವಮಯವಾಗಿ ಪಂಚೋಪನಿಷನ್ಮಂತ್ರ ವಿಗ್ರಹವೆಂದೂ ಚತುರ್ಮುಖ ರುದ್ರಾದಿಗಳಹಾಗೆ ರಾಜಸತಾಮಸ ಮಿಶ್ರವಾದುವಲ್ಲವೆಂದೂ ಹೇಳಲ್ಪಟ್ಟಿರುತ್ತದೆ. ಆದರೆ **'ಸತ್ವಾದಯೋನಸಂತೀಶೇ ಯತ್ರಹಿ ಪ್ರಾಕೃತಾಗುಣಾಃ'** ಎಂದು ಸತ್ವವೇ ಮೊದಲಾದ ಪ್ರಾಕೃತಗುಣಗಳು ಯಾವುವೂ ಇಲ್ಲವೆಂದು ಸತ್ವಗುಣವನ್ನೂ ಪ್ರಮಾಣವು ನಿಷೇಧಿಸಿರುವುದು ಹೇಗೆ? ಎಂದರೆ ಇಲ್ಲಿಯ ಸತ್ವಗುಣವು ಎಷ್ಟು ಮಹತ್ತಾಗಿ ತೋರಿದರೂ ಅದಕ್ಕೆ ರಜೋಗುಣ ತಮೋಗುಣಗಳ ಸಂಬಂಧ

---

(೧) ಭಾರ. ಶಾಂತಿ. ೨೦೬. ೬೦ (೨) ವಾರಾಹ ೩೮. ೩೦

ವಿಲ್ಲದೇ ಇಲ್ಲವು, ಹಾಗಲ್ಲದೇ ಆ ಗುಣಗಳ ಸಂಬಂಧವಿಲ್ಲದ ಶುದ್ಧ ಸತ್ತ್ವಮಯವಾದದು ಎಂಬುದು ಪ್ರಮಾಣದ ಅರ್ಥವು. ಆದುದರಿಂದಲೇ ಪರಮಪ್ರಕೃಷ್ಟವೆಂಬ ವಿಶೇಷಣವು. ಅದೂ ಅಲ್ಲದೆ, ಇಲ್ಲಿರುವ ಜೀವಾತ್ಮರ ಸತ್ತ್ವಗುಣವು ಭಗವತ್ಕಟಾಕ್ಷದ ಮೂಲಕ ಲಬ್ಧವು. ಆತನ ಶುದ್ಧ ಸತ್ತ್ವವಾದರೋ ಸ್ವತಂತ್ರವಾದುದು.

(೩) **ಸಾತ್ತ್ವಿಕತಯಾ ಪ್ರಬಲೈಶ್ಚ ಶಾಸ್ತ್ರೈಃ**- ಇಲ್ಲಿ ಸಾತ್ತ್ವಿಕತಯಾ ಎಂದು ವಿಶೇಷಿಸಿ ಹೇಳಿರುವುದರಿಂದ, ರಾಜಸ ತಾಮಸ ಪುರಾಣಾದಿಗಳಿಗೆ ತತ್ತ್ವಬೋಧಕತ್ವವಿಲ್ಲವೆಂದು ಹೇಳಿದಂತಾಯಿತು. ಅಂತಹ ಪುರಾಣಾದಿಗಳು ದುಷ್ಕರ್ಮಪರಿಪಾಕಯುತರಿಗೆ ಆಪ್ಯಾಯನವಾಗಿ ಪರಿಣಮಿಸುವುದಕ್ಕಾಗಿ ಸ್ವಾಮಿಯಿಂದುಂಟಾದುವು. ಅಪೌರುಷೇಯ ಶಾಸ್ತ್ರದಲ್ಲಿ ಹೇಳಿರುವುದೆಲ್ಲಾ ಸಾತ್ತ್ವಿಕವಾದರೂ ಅಲ್ಲಿಯೂ ಕೂಡ ಸಾತ್ತ್ವಿಕರಾಜಸ ತಾಮಸಾಧಿಕಾರಿಗಳಿಗನುಗುಣವಾದ ಪ್ರತಿಪಾದನೆಗಳುಂಟು. ಆದುದರಿಂದಲೇ ಶ್ರೀ ಗೀತಾಚಾರ್ಯರು **"ತ್ರೈಗುಣ್ಯ ವಿಷಯಾ ವೇದಾಃ ನಿಸ್ತ್ರೈಗುಣ್ಯೋಭವಾರ್ಜುನ"** ಎಂದು ಉಪದೇಶಿಸಿರುತ್ತಾರೆ. ಪೌರುಷೇಯ ಶಾಸ್ತ್ರಗಳಲ್ಲೂ ಶಾಸ್ತ್ರಗಳನ್ನು ಬೋಧಿಸಿರುವದು ಹೀಗೆ ಮೂರು ತೆರನಾಗಿರುವುದು. ಹಾಗೆಯೇ ತಾಮಸ ರಾಜಸ ಪುರಾಣಗಳು ಉಪಾದೇಯವಲ್ಲವು; ಸಾತ್ತ್ವಿಕಗಳು ಮಾತ್ರವೇ ಉಪಾದೇಯವು. ಅವು ಯಾವುದೆಂದರೆ – **"ವೈಷ್ಣವಂ ನಾರದೀಯಂಚ ತಥಾ ಭಾಗವತಂ ಶುಭಮ್। ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ। ಷಡೇತಾನಿ ಪುರಾಣಾನಿ ಸಾತ್ತ್ವಿಕಾನಿ ಮತಾನಿವೈ"** ಹಾಗೆಯೇ ಮೋಹಶಾಸ್ತ್ರಗಳು ಯಾವುವೆಂಬುದು ಪಾದ್ಮೋತ್ತರ ಖಂಡದಲ್ಲೂ ಮತ್ತು ಭವಿಷ್ಯತ್ಪುರಾಣ, ವಾರಾಹಪುರಾಣ ಪರಾಶರಸಂಹಿತೆ ಮೊದಲಾದವುಗಳಲ್ಲಿ ಮೋಹ ಶಾಸ್ತ್ರೋತ್ಪತ್ತಿಗೆ ಕಾರಣ ಮೊದಲಾದವು ಹೇಳಲ್ಪಟ್ಟಿವೆ. ಇಂತಹ ಮೋಹಶಾಸ್ತ್ರಗಳನ್ನು ಮನುವು ದೂಷಿಸಿರುತ್ತಾರೆ

**"ಯಾವೇದ ಬಾಹ್ಯಾಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ।**
**ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋ ನಿಷ್ಠಾಹಿತೇ ಸ್ಮೃತಾಃ॥**

**ಪ್ರಬಲೈಶ್ಚ ಶಾಸ್ತ್ರೈಃ** ಎಂದು ಬಹು ವಚನವಿರುವುದರಿಂದ ಆಶಾಸ್ತ್ರಗಳಿಗೆಲ್ಲಾ ಐಕಕಂಠ್ಯವಿದೆ ಎಂದೂ ಅವುಗಳೆಲ್ಲವೂ ಶ್ರೀಮನ್ನಾರಾಯಣನೇ ಪರತತ್ತ್ವವೆಂದು ಹೇಳುತ್ತವೆಂಬಭಾವವು ಸೂಚಿತವು ಆ ಪ್ರಬಲ ಶಾಸ್ತ್ರಗಳು ಯಾವುವೆಂದರೆ– ಶ್ರುತಿಗಳು, ಸಾತ್ತ್ವಿಕ ಸ್ಮೃತಿಗಳು ಭಾರತ ರಾಮಾಯಣಾದಿ ಇತಿಹಾಸಗಳು, ಪಾದ್ಮ ವೈಷ್ಣವ ಭಾಗವತ, ನಾರದೀಯ ಮಾರ್ಕಂಡೇಯ ವರಾಹ, ವಾಮನ ಮತ್ಸ್ಯ ಗಾರುಡ, ಬ್ರಹ್ಮಾಂಡ ನಾರಸಿಂಹ ಪುರಾಣಗಳು, ಇವುಗಳಿಗೆ ಅನ್ಯೋನ್ಯ ಸಾಮ

ರಸ್ಯವುಂಟೆಂದು ಭಾವಿಸತಕ್ಕದ್ದು. ಆಗಲಿ, ಹೀಗೆ ಪುರಾಣಗಳನ್ನು ಸಾತ್ವಿಕ ರಾಜಸ ತಾಮಸ ವೆಂದು ವಿಭಾಗಿಸಿ ಕೊಂಡಿರುವುದೂ ನಿಮ್ಮ ಕಲ್ಪನೆಯಲ್ಲವೋ? ಎಂದರೆ ಹಾಗಲ್ಲವು; ಮಾತ್ಸ್ಯ ಕೂರ್ಮಾದಿ ಪುರಾಣಗಳಲ್ಲಿ ಈ ವಿಭಾಗವು ಮಹರ್ಷಿ ಯಿಂದಲೇ ಮಾಡಲ್ಪಟ್ಟಿರುತ್ತದೆ.

(೪) ಹೀಗೆ ಶಾಸ್ತ್ರಗಳ ಬಲದಿಂದ ಶ್ರಿಯಃಪತಿಯೇ ಪರತತ್ವವೆಂಬುದು ಸಿದ್ಧವಾದರೂ "**ಮಹಾಜನೋ ಯೇನ ಗತಸ್ಸಪನ್ಥಾಃ**" ಎಂಬಲ್ಲಿ ಹೇಳಿರುವ ಹಾಗೆ, ಬಹಳ ಪ್ರಸಿದ್ಧರಾದ ಮಹಾಭಾಗವತೋತ್ತಮರ ಅಭಿಪ್ರಾಯವೂ ಅತ್ಯಾ ವಶ್ಯಕ ವೆಂದೂ, ಅಂತವರೂಕೂಡ ಶ್ರಿಯಃಪತಿಯೇ ಪರತತ್ವವೆಂದು ಹೇಳುವ ರೆಂದೂ "**ಪ್ರಖ್ಯಾತ ದೈವ ಪರಮಾರ್ಥವಿದಾಂ ಮತೈಶ್ಚ**" ಇದೂಕೂಡ ಮೇಲಿನ (೩)ನೆಯದರಲ್ಲೇ ಸೇರಿದುದಾದರೂ ಕೆಲವು ಮಹರ್ಷಿಗಳ ಮತ್ತು ಪರಮಾಚಾರ್ಯ ರವರ ದಿವ್ಯ ಸೂಕ್ತಿಗಳಲ್ಲಿ ಪರತತ್ವಯಾಥಾರ್ಥ್ಯವು ಅತಿವಿಶದ ವೆಂಬ ಭಾವನೆಯಿಂದ ಪೃಥಕ್ಕಾಗಿ ಇಲ್ಲಿ ಹೇಳಲ್ಪಟ್ಟಿತು. ಇವರುಗಳ ಮತದ ಉಪಪಾದನೆಯಲ್ಲಿ ಪರತತ್ವ ನಿರ್ಣಯವು ಅತಿಸುಲಭ ವೆಂಬ ಭಾವನೆಯಿಂದ ಪೃಥಕ್ಕರಿಸಿ ಹೇಳಿರುತ್ತಾರೆ. ಪ್ರಖ್ಯಾತ ವೆಂದರೆ ಪ್ರಸಿದ್ಧರು; ಹೇಗೆ ಎಂದರೆ- ವೇದಾದಿ ಶಾಸ್ತ್ರಗಳಿಗೆ ಪ್ರಾಮುಖ್ಯತೆ ಯನ್ನು ಕೊಟ್ಟ ಪ್ರಾಜ್ಞರಾದುದರಿಂದ, ಅವರ ಮತಗಳು ಎಂದರೆ ಅಭಿಪ್ರಾ ಯಗಳು ಆಪ್ತತಮವಾದುವೆಂಬ ಭಾವವು. **ಮತೈಃ** ಎಂಬ ಬಹುವಚನದಿಂದ ಒಂದೇ ವಿಷಯದಲ್ಲಿ ಬಹುಪ್ರಕಾರವಾದ ಅಭಿಪ್ರಾಯವೆಂಬ ಭಾವವಲ್ಲವು. ಶಾಸ್ತ್ರ ಪಂಕ್ತಿಗಳ ಬಾಹುಳ್ಯವೂ ಅವುಗಳ ಉಪಪಾದನೆಯೂ ವಿವಕ್ಷಿತವು. ಪಿತಾಮಹನಿಂದ ವರವನ್ನೂ ಹೊಂದಿ ಮಹಾಪ್ರಾಜ್ಞರಾದ ನಾರದ ಮಹರ್ಷಿ ಯಿಂದ ದೇವತಾ ಪಾರ ಮಾರ್ಥ್ಯವನ್ನೂ ಕೇಳಿ ತಿಳಿದ **ಶ್ರೀವಾಲ್ಮೀಕಿ ಭಗವಾನ್** ರವರು ಹೇಳಿರುವದೇನೆಂದರೆ-

"**ಸಹಿದೇವೈ ರುದೀರ್ಣಸ್ಯ ರಾವಣಸ್ಯ ವಧಾರ್ಥಿಭಿಃ।**
**ಅರ್ಥಿತೋಮಾನುಷೇ ಲೋಕೇ ಜಜ್ಞೇ ವಿಷ್ಣುಸ್ಸನಾತನಃ॥**"

ರಾವಣ ವಧಾಕಾಂಕ್ಷೆಗಳಿಂದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟು ಸನಾತನನಾದ ವಿಷ್ಣುವು ಶ್ರೀರಾಮನಾಗಿ ಮನುಷ್ಯ ಲೋಕದಲ್ಲಿ ಜನಿಸಿದನು. ಮತ್ತೂ **ಅಧಿಕಂ ಮೇನಿರೆ ವಿಷ್ಣುಮ್** ರುದ್ರ ಮೊದಲಾದವರಿಗಿಂತ ಈತನೇ ಸರ್ವೋತ್ಕೃ ಷ್ಟನು. "**ವ್ಯಕ್ತಮೇಷ ಮಹಾಯೋಗೀ ಪರಮಾತ್ಮಾ ಸನಾತನಃ**" ವಿಷ್ಣುವಿನ ಅವತಾರಿಯಾದ ಶ್ರೀ ರಾಮಚಂದ್ರನೇ ಪರಮಾತ್ಮನೆಂಬುದು ವ್ಯಕ್ತವೆಂದು ಹೇಳ ಲ್ಪಟ್ಟಿರುತ್ತದೆ. "**ಬ್ರಹ್ಮಾ ಸ್ವಯಂಭೂ ಶ್ಚತುರಾಸನೋವಾ**" ಎಂಬ ಶ್ಲೋಕದಲ್ಲಿ ಬ್ರಹ್ಮ ರುದ್ರೇಂದ್ರಾದಿಗಳಿಗಿಂತ ಶ್ರೇಷ್ಠನೆಂದೂ ಹೇಳಲ್ಪಟ್ಟಿದೆ. ಸಮುದ್ರ ಮಥನ

ಉಪಾಖ್ಯಾನದಲ್ಲಿ ವಿಷ್ಣುವಿಗೆ "**ದೇವ ದೇವೇಶ್ವರಃ ಪ್ರಭುಃ। ಪ್ರಾದು ರಾಸೀತ್ತ ತೋಽತ್ರೈವ ಶಂಖ ಚಕ್ರಧರೋ ಹರಿಃ**" ಎಂಬಲ್ಲಿ **ದೇವ ದೇವೇಶ್ವರಃ** ಎಂಬ ವಿಶೇಷಣವೂ, ರುದ್ರನಿಗೆ **ಸುರಶ್ರೇಷ್ಠ ಸುರಾಣಾಮುಗ್ರಜೋಸಿಯತ್, ಸುರ ಶ್ರೇಷ್ಠ** ಎಂದಿಷ್ಟು ಮಾತ್ರವೇ ಪ್ರಯೋಗವೂ ಇರುವದರಿಂದ ಪರತತ್ವವು ವಿಷ್ಣುವೇ ವಿನಾ ರುದ್ರನಲ್ಲವೆಂಬುದು ವ್ಯಕ್ತವು, (ಬಾಲ. ೪೫. ೨೨-೨೪) ಹಾಗೆಯೇ **ಯೇನಾ ಕ್ಷರಂ ಪುರುಷಂ ವೇದಸತ್ಯಂ ಪ್ರೋವಾಚತಾಂ ತತ್ವತೋ ಬ್ರಹ್ಮ ವಿದ್ಯಾಂ**" (　　　) ಎಂಬ ಶ್ರುತಿಯನ್ನನುಸರಿಸಿ, ಶ್ರೀರಾಮನನ್ನು ಕುರಿತು "**ಅಕ್ಷರಂ ಬ್ರಹ್ಮಸತ್ಯಂ ತ್ವಂ**" ಎಂದು ಹೇಳಲ್ಪಟ್ಟಿರುತ್ತದೆ. **ತ್ವಂ ತ್ರಯಾಣಾಂ ಹಿ ಲೋಕಾನಾಂ ಆದಿಕರ್ತಾ ಸ್ವಯಂ ಪ್ರಭುಃ** ಎಂದು ಜಗತ್ಕರ್ತೃತ್ವವು ಹೇಳಲ್ಪಟ್ಟಿರುತ್ತದೆ. **ಜಗತ್ಸರ್ವಂ ಶರೀರಂತೇ** ಎಂದು ಸರ್ವಶರೀರತ್ವ ಸರ್ವಾತ್ಮಕತ್ವಗಳು ಹೇಳಲ್ಪಟ್ಟಿವೆ. "**ಅಹಂ ತೇ ಹೃದಯಂ ರಾಮ**" ಎಂಬ ಬ್ರಹ್ಮೋಕ್ತಿಯೂ ಇರುತ್ತದೆ. "**ಪುತ್ರೋಹಿ ಹೃದಯಂ** ಎಂಬ ಶ್ರುತಿ ಪ್ರಸಿದ್ಧಿಯಿಂದ ಚತುರ್ಮುಖನು ಶ್ರೀರಾಮಾವತಾರಿ ಯಾಗಿರುವ ಭಗವಂತನ ಪುತ್ರನು.

ಮುಂದೆ ಶ್ರೀ ವ್ಯಾಸಮಹರ್ಷಿಯ ಮತವೇನೆಂಬುದನ್ನು ಪರಿಶೀಲನ ಮಾಡೋಣ. ಇವರನ್ನು ಅವರ ತಂದೆಯೇ

"**ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಮ್।**
**ಕೋಹ್ಯನ್ಯೋ ಭುವಿ ಮೈತ್ರೇಯ ಮಹಾಭಾರತಕೃದ್ಭವೇತ್॥**"

ವ್ಯಾಸಮಹರ್ಷಿಯನ್ನು ಪ್ರಭುವಾದ ನಾರಾಯಣಾವತಾರವೆಂದೇ ಭಾವಿಸಿ. ಏಕೆಂದರೆ ಆತನಲ್ಲದೆ ಇನ್ನಾರು ಮಹಾಭಾರತ ಗ್ರಂಥವನ್ನು ಬರೆಯಲು ಶಕ್ತರು ಎಂದು ಶ್ಲಾಘಿಸಿರುತ್ತಾರೆ. ಅವರು ಹೇಳಿರುವುದೇನೆಂದರೆ—

"**ಕಾಲಸ್ಯ ಚ ಹಿ ಮೃತ್ಯೋಶ್ಚ ಜಙ್ಗಮ ಸ್ಥಾವರಸ್ಯಚ।**
**ಈಶತೇ ಭಗವಾ ನೇಕ ಸ್ಸತ್ಯಮೇತದ್ಬ್ರವೀಮಿತೇ॥**
**ಕೃಷ್ಣ ಏವಹಿ ಲೋಕಾನಾಂ ಉತ್ಪತ್ತಿ ರಪಿ ಚಾವ್ಯಯಃ।**
**ಕೃಷ್ಣಸ್ಯಹಿ ಕೃತೇ ಭೂತ ಮಿದಂ ವಿಶ್ವಂ ಚರಾಚರಮ್॥**"

**ಜ್ಯೋತೀಂಷಿ ಶುಕ್ಲಾನಿ ಚ ಯಾನಿಲೋಕೇ ತ್ರಯೋಲೋಕಾ ಪಾಲಾಸ್ತ್ರಯೀಚ। ತ್ರಯೋಗ್ನಯಶ್ಚಾ ಹುತಯಶ್ಚ ಪಂಚ ಸರ್ವೇ ದೇವಾ ದೇವಕೀ ಪುತ್ರ ಏವ।** "

ಮತ್ತೂ　"**ತತ್ವಮೇಕೋ ಮಹಾಯೋಗೀ ಹರಿರ್ನಾರಾಯಣಃ ಪರಃ।**
**ಸತ್ಯಂ ಸತ್ಯಂ ಪುನಸ್ಸತ್ಯಂ ಉದ್ಧೃತ್ಯಭುಜ ಮುಚ್ಯತೇ।**

**ವೇದಾ ಚ್ಛಾಸ್ತ್ರಂ ಪರಂ ನಾಸ್ತಿ ನದೈವಂ ಕೇಶವಾತ್ಪರ್ಮ್ ||**
**ಇದಮೇಕಂ ಸು ನಿಷ್ಪನ್ನಂ ಧ್ಯೇಯೋ ನಾರಾಯಣಸ್ಸದಾ||"**

ಅರ್ಥವು ಸ್ಪಷ್ಟವು.

ಭಗವದ್ಗೀತೆಯಲ್ಲೂ ಅನುಗೀತೆಯಲ್ಲೂ, ಮೋಕ್ಷ ಧರ್ಮದಲ್ಲೂ ಶ್ರೀ ಕೃಷ್ಣನೇ ವಿಷ್ಣುವಿನ ಅವತಾರಿಯಾಗಿ ಪರತತ್ವವೆಂದು ಹೇಳಲ್ಪಟ್ಟಿರುತ್ತದೆ.

**ಶ್ರೀ ಶೌನಕ ಮಹರ್ಷಿಯೂ** ಅವರ ಗ್ರಂಥವಾದ ವಿಷ್ಣುಧರ್ಮದಲ್ಲಿ ವಿಷ್ಣುವೇ ಪರತತ್ವವೆಂದು ಸ್ಥಾಪಿಸಿರುತ್ತಾರೆ. ಮೋಕ್ಷೋಪಾಯ ವಿಧಾನದಲ್ಲಿ ಯಾವುದು ಗ್ರಾಹ್ಯ ಯಾವುದು ತ್ಯಾಜ್ಯವೆಂಬುದನ್ನು ಈ ಮುಂದಿನ ಶ್ಲೋಕದಲ್ಲಿ ಹೇಳಿರುತ್ತಾರೆ.

**"ಆ ಬ್ರಹ್ಮ ಸ್ಥಂಬ ಪರ್ಯನ್ತ ಜಗದಂತರ್ವ್ಯವಸ್ಥಿತಾಃ|**
**ಪ್ರಾಣಿನಃ ಕರ್ಮ ಜನಿತ ಸಂಸಾರ ವಶವರ್ತಿನಃ||**
**ಯತಸ್ತತೋ ನತೇ ಧ್ಯಾನೇ ಧ್ಯಾನಿನಾ ಮು ಪಕಾರಕಾಃ|**
**ಅವಿದ್ಯಾನ್ತರ್ಗತಾಸ್ಸರ್ವೇ ತೇಹಿ ಸಂಸ್ಕಾರ ಗೋಚರಾಃ||"**
**"ಯ ಸ್ಮಾತ್ತದಮಲಂ ಬ್ರಹ್ಮ ನಿಸರ್ಗಾ ದೇವ ಭೋದವತ್|**
**ಧ್ಯೇಯಂ ಧ್ಯಾನವಿದಾಂ ಸಮ್ಯಕ್ತದ್ವಿಷ್ಣೋಃಪರಮಂ ಪದಮ್||'**

ಬ್ರಹ್ಮರುದ್ರಾದಿಗಳೆಲ್ಲಾ ಜಗತ್ತಿನಲ್ಲಿರುವ ಪ್ರಾಣಿಗಳು, ಕರ್ಮ ಮೂಲಕ ಜನಿಸಿದವರಾಗಿ ದಿವ್ಯ ಮಙ್ಗಳ ವಿಗ್ರಹಯುಕ್ತರಲ್ಲವಾದುದರಿಂದ ಉಪಾಸ್ಯರಲ್ಲವು. ಶ್ರೀ ಮಹಾವಿಷ್ಣುವೇ ಧ್ಯೇಯವಸ್ತುವು ಎಂದು ಉಪದೇಶಿಸಿರುತ್ತಾರೆ. ಹಾಗೆಯೇ

**ಶ್ರೂಯತಾಂತು ನರವ್ಯಾಘ್ರ ವೇದ ವೇದಾಂತ ನಿಶ್ಚಯಃ|**
**ಯಜ್ಞೇಶೋ ಯಜ್ಞ ಪುರುಷಃ ಪುಂಡರೀಕಾಕ್ಷ ಸಂಜ್ಞಿತಃ|**
**ಸ ವಿಷ್ಣುಃ ಪರಮಂ ಬ್ರಹ್ಮ ಯತೋ ನಾವರ್ತತೇ ಪುನಃ||**

ಎಂಬಲ್ಲಿ ವಿಷ್ಣುವೇ ಪರಬ್ರಹ್ಮವೆಂದು ಹೇಳಿರುತ್ತಾರೆ.

ಅರ್ಚಾವತಾರದ ಮಹಾತ್ಮೆಯನ್ನು ವರ್ಣಿಸುವ ಪ್ರಕರಣದಲ್ಲಿ,

**ಯಾದೃಶೇತು ಮನಸ್ಥೈರ್ಯಂ ರೂಪೇ ಬಧ್ನಾತಿ ಚಕ್ರಿಣಃ|**
**ನೃಸಿಂಹ ವಾಮನಾದೀನಾಂ ತಾದೃಶಂ ಕಾರಯೇ ದ್ಬುಧಃ|**
**ಸುರೂಪಾಂ ಪ್ರತಿಮಾಂ ವಿಷ್ಣೋಃ ಪ್ರಸನ್ನ ವದನೇಕ್ಷಣಾಮ್|**
**ಕೃತ್ವಾ ತ್ಮನಃ ಪ್ರೀತಿಕರೀಂ ಸುವರ್ಣ ರಜತಾದಿಭಿಃ|**
**ತಸ್ಯಾಂ ಬ್ರಹ್ಮ ಸಮಾರೋಪ್ಯ ಮನಸಾ ತನ್ಮಯೋ ಭವೇತ್**
**ತಾಮರ್ಚಯೇ ತ್ತಾಂ ಪ್ರಣಮೇ ತ್ತಾಂ ಯಜೇತ್ತಾಂ ವಿಚಿಂತ ಯೇತ್|**

**ವಿಶತ್ಯಪಾಸ್ತದೋಷಸ್ತು ತಾಮೇವ ಬ್ರಹ್ಮರೂಪಿಣೀಮ್॥**

ಎಂದು ಹೇಳಿರುತ್ತಾರೆ. ತಾತ್ಪರ್ಯವೇನೆಂದರೆ ಶ್ರೀಮಹಾವಿಷ್ಣುವಿನ ಅವತಾರ ರೂಪ ವಾದ ನೃಸಿಂಹ ವಾಮನ ರಾಮಕೃಷ್ಣಾದ್ಯವತಾರ ಕಾಲಗಳ ಮೂರ್ತಿಯ ಹಾಗೆ ತನಗೆಇಷ್ಟವಾಗಿರುವ ಚಿನ್ನ, ಬೆಳ್ಳಿ, ಪಂಚಲೋಹ ಮುಂತಾದುವುಗಳಿಂದ ಪ್ರತಿಮೆ ಯನ್ನು ಮಾಡಿ, ಆಗಮಪ್ರೋಕ್ತ ರೀತಿಯಲ್ಲಿ ಪ್ರತಿಷ್ಠೆಯನ್ನು ಮಾಡಿದರೆ, ಶ್ರೀ ಮಹಾವಿಷ್ಣುವು ಆಪ್ರತಿಮೆ ರೂಪದಲ್ಲೇ ಅದರಲ್ಲಿ ಪ್ರವೇಶಿಸಿ, ತನ್ನ ದಿವ್ಯ ಮಙ್ಗಳ ವಿಗ್ರಹದೊಂದಿಗೆ ಸೇವೆಯನ್ನೀಯುವನಾದುದರಿಂದ, ಅಂತಹ ಬಿಂಬವನ್ನು ಅರ್ಚಿಸತಕ್ಕದ್ದು, ನಮಸ್ಕರಿಸತಕ್ಕದ್ದು ಇತ್ಯಾದಿ. ಇಲ್ಲಿಯೂ ವಿಷ್ಣುವೇ ಪರತತ್ವ ವೆಂದು ಹೇಳಿರುತ್ತದೆ.

ಜಿತನ್ತಾಸ್ತೋತ್ರದಲ್ಲೂ ವಿಷ್ಣುವಿಗೇ ಜಗತ್ಕಾರಣತ್ವ ಮೋಕ್ಷಪ್ರದತ್ವಾದಿಗಳು ಹೇಳಲ್ಪಟ್ಟಿವೆ. "**ಏಕಸ್ತ್ವಮಸಿ ಲೋಕಸ್ಯ ಸೃಷ್ಟಾ ಸಂಹಾರಕಸ್ತಥಾ**" ಎಂಬು ದಾಗಿ. ಶ್ರೀ ಪರಾಶರರು ವಿಷ್ಣು ಪುರಾಣದಲ್ಲಿ

**ವಿಷ್ಣೋ ಸ್ಸಕಾಶಾದುದ್ಭೂತಂ ಜಗತ್ತತ್ರೈವ ಚಸ್ಥಿತಮ್।**
**ಸ್ಥಿತಿ ಸಂಯಮ ಕರ್ತಾಸೌ ಜಗತೋಽಸ್ಯ ಜಗಚ್ಚಸಃ॥**

ಎಂದು ತಮ್ಮಶಿಷ್ಯರಾದ ಮೈತ್ರೇಯರ ಸುಮಾರು ೨೦ ಪ್ರಶ್ನೆಗಳಿಗೆ ಉತ್ತರವಾಗಿ ಶ್ರೀ ಮಹಾವಿಷ್ಣುವೇ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣ ಭೂತನು ಎಂದು ಸಙ್ಗ್ರಹ ವಾಗಿ ತಿಳಿಸಿ ಇದನ್ನೇ ನಿಪುಣತರವಾಗಿ ಉಪಪಾದಿಸಿರುತ್ತಾರೆ.

ಧರ್ಮ ಶಾಸ್ತ್ರವನ್ನೂ ರಚಿಸಿ ಮಹಾ ಪ್ರಸಿದ್ಧರಾದ ಮನುವೂ "**ಯದ್ವೈ ಕಿಂಚನ ಮನುರವದತ್ತದ್ಭೇಷಜಮ್**" ಯಾವ ಸ್ವಲ್ಪ ಭಾಗವನ್ನು ಮನುವು ಹೇಳಿರುತ್ತಾರೋ ಅದು ಪರಮ ಔಷಧವು ಎಂದು ಕೊಂಡಾಡಲ್ಪಟ್ಟಿರುತ್ತದೆ. ಅವರೂ ಶ್ರೀಮನ್ನಾರಾಯಣನೇ ಪರತತ್ವವೆಂದು ಜಗತ್‌ಸೃಷ್ಟಿಯನ್ನು ಬೋಧಿಸುವ ಏಳು ಶ್ಲೋಕಗಳಲ್ಲಿ ಉಪಪಾದಿತವು. ಅವುಗಳಲ್ಲಿ ಒಂದೆರಡು ಶ್ಲೋಕಗಳು ಹಿಂದೆಯೇ ಉದಾಹೃತವು.

ಈ **ಪರಮಾರ್ಥವಿವರಲ್ಲಿ** ನಮ್ಮಾಳ್ವಾರ್ ತಿರುಮಂಗೈಯಳ್ವಾರ್ ಪೆರಿಯಾ ಳ್ವಾರ್ ನಾಥಮುನಿ ಮೊದಲಾದವರಗಳ ದಿವ್ಯ ಸೂಕ್ತಿಗಳಿಂದಲೂ ಪರತತ್ವವು ಶ್ರೀಮನ್ನಾರಾಯಣನೇ.

ಹೀಗೆ ಒಂದೊಂದು ಸಹಕಾರಿ ಕಾರಣಗಳಾದ; ಶೀಲ ರೂಪ ಚೇಷ್ಠಿತ ಗಳಿಂದಲೇ ಪರತತ್ವವು ಯಾವುದೆಂಬುದನ್ನು ನಿರ್ಣಯ ಮಾಡಿಕೊಳ್ಳಬಹುದು. ಹೀಗಿರುವಾಗ ಇಂತಹ ಸಾಧನಗಳ ಬಾಹುಳ್ಯವೇ ಇರುವಾಗಲೂಕೂಡ ಪರತತ್ವ ನಿರ್ಣಯವಾಗಲಿಲ್ಲವೆಂದರೆ ಪ್ರಾರಬ್ಧ ಕರ್ಮವಶಾತ್ ಉಂಟಾದ ಆಸುರ ಸ್ವಭಾವದ

ಮಾಹಾತ್ಮ್ಯ ಎಂದು ತಿಳಿಯಬೇಕೇವಿನಾ ಅನ್ಯಥಾ ಇಲ್ಲವೆಂದು **'ನೈವಾಸುರ ಪ್ರಕೃತಯಃ ಪ್ರಭವನ್ತಿ ಬೋದ್ಧುವ್'** ಎಂದು ಆಸುರ ಪ್ರಕೃತಿಯು ತತ್ವ ನಿರ್ಣಯಕ್ಕೆ ಅಷ್ಟು ಪ್ರಬಲ ಪ್ರತಿಬಂಧಕವು ಎಂದುಹೇಳಿದರು. ಜೀವ ಸೃಷ್ಟಿಯು ದೈವ ಸರ್ಗವೆಂದೂ ಆಸುರ ಸರ್ಗವೆಂದೂ ಎರಡು ವಿಧವೆಂದು ಗೀತಾದಿಗಳಲ್ಲಿ ಸುವ್ಯಕ್ತವೆಂದು ಮೆಲೆಯೇ ಹೇಳಲ್ಪಟ್ಟಿದೆ. ಶೌನಕರು ಹಾಗೆಯೇ **'ದ್ವಿವಿಧೋ ಭೂತ ಸರ್ಗೋಯಂ ದೈವ ಆಸುರ ಏವಚ! ವಿಷ್ಣು ಭಕ್ತಿ ಪರೋ ದೈವೋ ವಿಪರೀತ ಸ್ತಥಾಸುರಃ॥** ಎಂದು ಹೇಳಿರುತ್ತಾರೆ. **ನಪ್ರಭವನ್ತಿ ಬೋದ್ಧುಂ** ಎಂಬುದರಿಂದ ಆಸುರ ಪ್ರಕೃತಿಯು ಶ್ರೇಯಸ್ಸಂಪಾದನೆಗೆ ಪ್ರಬಲ ವಿರೋಧವೆಂಬ ಭಾವವು ತೋರಿ ಬರುವುದರಿಂದ, ಶ್ರಿ ಗೀತಾಚಾರ್ಯರು–**"ಕ್ಷಿಪಾಮ್ಯ ಜಸ್ರಮಾಸುರೇಷ್ವೇವ ಯೋನಿಷು"** ಎಂದು ಹೇಳಿದುದನ್ನು ಸ್ಮರಿಸುವಹಾಗೆ ಮಾಡುತ್ತದೆ. ಅಂತವರು ತಮ್ಮ ದುರವಸ್ಥೆಯನ್ನು ಕಳೆದುಕೊಳ್ಳುವುದನ್ನು ಅತಿ ದುಸ್ತರವಾಗಿ ತಾವೇ ಮಾಡಿಕೊಂಡಿರುತ್ತಾರೆ. ಇಂತವರನ್ನು ಮನಸ್ಸಿನಲ್ಲಿಟ್ಟೇ

**"ನಗಾಧಾಗಾಯಿನಂ ಶಾಸ್ತಿ ಬಹು ಚೇದಪಿ ಗಾಯತಿ।**
**ಪ್ರಕೃತಿಂ ಯಾನ್ತಿ ಭೂತಾನಿ ಕುಳಿಂಗ ಶಕುನಿರ್ಯಥಾ॥** ಎಂದೂ,
**ಜನ್ಮಾಂತರ ಸಹಸ್ರೇಷುಯಾಬುದ್ಧಿ ರ್ಭಾವಿತಾ ಪುರಾ।**
**ತಾಮೇವ ಭಜತೇ ಜನ್ತುರು ಪದೇಶೋ, ನಿರರ್ಥಕಃ"**

ಆಸುರ ಸ್ವಭಾವದವರಿಗೆ ಎಷ್ಟು ಉಪದೇಶಿಸಿದರೆ ಏನು ಫಲವು? ಪ್ರಾರಬ್ಧವು ಅಷ್ಟು ಬಲಿಷ್ಟವಾಗಿವರುದರಿಂದ ಆ ಆಸುರಸ್ವಭಾವದ ಪ್ರಕಾರ ಪ್ರವೃತ್ತಿಯುಂಟಾಗುತ್ತೆವೆಂದು ಹೇಳಲ್ಪಟಿರುತ್ತದೆ. ಈ ಅಭಿಪ್ರಾಯವನ್ನೇ ಲೀಲಾಸಾರಥಿಯು,

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇ ಜ್ಞಾನವಾನಪಿ।**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ?॥**

ಎಂಬಲ್ಲಿ ಉಪಪಾದಿಸಿರುತ್ತಾರೆ,

ಇದಕ್ಕೆ ರಾವಣ ದುರ್ಯೋಧನಾದಿಗಳೇ ನಿದರ್ಶನರು. ಇವರಿಗೆ ವಿವೇಕವನ್ನು ಹೇಳಿದೇ ಇರುವವರೇ ಇಲ್ಲವು. ತಿಳಿದವರೆಲ್ಲಾ ಉಪದೇಶಿಸಿರುತ್ತಾರೆ. ಆದರೂ ಆ ಪ್ರಕೃತಿಯು ಬದಲಾಯಿಸಲಿಲ್ಲವು. ಶ್ರೀಕೃಷ್ಣ ಭಗವಾನ್ ಪರತತ್ವವೆಂಬಂಶವನ್ನು ಮಾರ್ಕಂಡೇಯೋಪದಿಷ್ಟರಾದ ಪಾಂಡವರು ದೈವ ಪ್ರಕೃತಿಗಳಾದುದರಿಂದ ಗ್ರಹಿಸಿದರು. ದುರ್ಯೋಧನಾದಿ ದುಷ್ಟ ಚತುಷ್ಟಯವು ಆಸುರ ಪ್ರಕೃತಗಳಾದುದರಿಂದ ಎಷ್ಟುಹೇಳಿದರೂ ಪರತತ್ವವೆಂದು ತಿಳಿಯದೇ ಹೋದರು ಎಂಬ ಭಾವವು. ಇವರೇ ಮೊದಲಾದವವರು ಶ್ರೀಕೃಷ್ಣನ ಶೀಲ ರೂಪಚರಿತಗಳಿಂದ ಊಹಿಸ ಬಹುದಾಗಿತ್ತು.

ದುರ್ಯೋದನಾದಿಗಳು ಮಾಡಿದ ಸಹಸ್ರಾಪರಾಧಗಳನ್ನೆಲ್ಲಾ ಗಮನಿಸದೆ ಯುದ್ಧಕ್ಕೆ ಸಹಾಯಮಾಡಬೇಕೆಂತ ಕೇಳಿದರೆ ಸೈನ್ಯವಿಲ್ಲದೆ ನಾನೊಬ್ಬನೇ ಸಹಾಯಕ್ಕೆ ಬರಲೇ **ಅಥವಾ** ನನ್ನ ಸೈನ್ಯವನ್ನೆಲ್ಲಾ ಕಳುಹಿಸಲೇ? ಎಂದು ಪರಮ ಪ್ರಕೃಷ್ಟ ಸಾತ್ವಿಕ ಭಾವ **ದಿಂದ ಕೇಳಿದ** ಮಹನೀಯನು. ಇದರಿಂದಲಾದರೂ ಶ್ರೀಕೃಷ್ಣನೇ ಪರತತ್ವವೆಂದು **ಭಾವಿಸಬಹುದಾಗಿತ್ತು.** ತನ್ನ ಶತ್ರುಗಳಾದ ಪಾಂಡವರಿಗೆ ತಾನು ಮಾಡಿದ ದ್ರೋಹ **ಗಳನ್ನೆಲ್ಲಾ** ಶ್ರೀಕೃಷ್ಣನ ಪ್ರಭಾವದಿಂದ ನಿವಾರಿತವಾದುದರಿಂದಲಾಗಲಿ ಗ್ರಹಿಸ **ಬಹುದು. ತ**ನಗೆ ತುಂಬಾ ಆಪ್ತರಾದ ನಾರದ, ವ್ಯಾಸ, ಸಂಜಯ, ಧೃತರಾಷ್ಟ್ರಾದಿ **ಗಳ ಪ್ರಖ್ಯಾತ** ದೈವ ವಿದರಾದವರ ಅಭಿಪ್ರಾಯಗಳಿಂದಲಾದರೂ,ಶ್ರೀಕೃಷ್ಣನು ಪರ **ತತ್ವವೆಂದು** ಈ ದುಷ್ಟ ಚತುಷ್ಟಯವೂ ಗ್ರಹಿಸಬಹುದಾಗಿತ್ತು. ಆದರೆ **ಆಸುರ ಪ್ರಕೃತಿ**ಗಳಾಗಿರುವಾಗ ಹೇಗೆ ತಿಳಿಯುವರು? **ನಪ್ರಭವನ್ತಿ ಬೋದ್ಧುಮ್** ಎಂದು ಆಕಾರಣದಿಂದ ಹೇಳಲ್ಪಟ್ಟಿತು.

ಹಾಗೆಯೇ ರಾವಣನೂ ಆಸುರ ಪ್ರಕೃತಿಯಾದುದರಿಂದ ತಿಳಿಯದೇ ಹೋದನು.ರಾಮನು ಪರತತ್ವವೆಂದು ತಿಳಿಯದೆ **'ನನಮೇಯಂ'** ನಾನು ಯಾರಿಗೂ ಬಗ್ಗುವನಲ್ಲಎಂದು ಹೇಳಿದನು.ಅದು ದೋಷವೆಂದು ತಿಳಿದರೂ ಆಸುರಪ್ರಕೃತಿಯಿಂದ ಹಾಗೆಯೇ ನಡೆದಿರುತ್ತಾನೆ. ರಾಜ್ಯವನ್ನು ತ್ಯಾಗಮಾಡಿ ವಾನರ ಸೇನೆಯೊಂದಿಗೆ ಬಂದ ಶ್ರೀ ರಾಮನ ಶೀಲದಿಂದಲೂ, ಆತನ **"ರೂಪೌದಾರ್ಯ ಗುಣೈಃ ಪುಂಸಾಂ ದೃಷ್ಟಿ ಚಿತ್ತಾಪ ಹಾರಿಣಮ್"** ಎಂಬಲ್ಲಿ ರೂಪದಿಂದಲೂ, ಹದಿನಾಲ್ಕು ಸಹಸ್ರ ರಾಕ್ಷಸರಿಂದಕೂಡಿದ ಖರ ದೂಷಣರನ್ನು ಮೂರೂಮುಕ್ಕಾಲು ಘಳಿಗೆಯಲ್ಲಿ ನಾಶ ಮಾಡಿದ ರಿಂದಲೂ, ಅತಿ ಪ್ರಬಲನಾದ ಮಾರೀಚನನ್ನು ವಾಯುವ್ಯಾಸ್ತ್ರದಿಂದ ಸಮುದ್ರಕ್ಕೆ ಓಡಿಸಿದ ಪ್ರಭಾವವವುಳ್ಳವನಾದುದರಿಂದಲೂ, ಮತ್ತು ತನಗಿಂತ ಪರಾಕ್ರಮಿಯಾದ ವಾಲಿ ಸಂಹಾರಮಾಡಿದ ಪ್ರಭಾವವುಳ್ಳ ದಿವ್ಯ ಚೇಷ್ಟತೆಗಳಿಂದಲೂ ಶ್ರೀರಾಮನು ಪರತತ್ವವೆಂದು ಭಾವಿಸಬಹುದಾಗಿತ್ತು. ತನಗೆ ಸಾತ್ವಿಕ ತಮ್ಮ ನಿದ್ದರೂ ಆತನನ್ನೂ ಕೂಡ ಪರಿಗ್ರಹಿಸದ ಪ್ರಕೃಷ್ಟ ಆಸುರುಗುಣದಿಂದ ಊಹಿಸಲಿಲ್ಲವು. ತಾನೇ ವೇದವೇದಾಂತ ಪಾರಂಗತೆಯನ್ನುಹೊಂದಿ ಬ್ರಹ್ಮನಿಗೆ ಶಿಷ್ಯನಾಗಿ ಹೀಗೆಲ್ಲಾ ಇರುವದರಿಂದ ಸಚ್ಛಾಸ್ತ್ರಗಳಿಂದಲೂ ತಿಳಿಯಬಹುದಿತ್ತು. ಲೋಕಮಾತೆಯ ಹಿತೋಪದೇಶದಿಂದಲಾಗಲಿ, **"ವಿದಿತಸ್ಸಹಿ ಧರ್ಮಜ್ಞಶ್ಶರಣಾಗತ ವತ್ಸಲಃ"** ಇತ್ಯಾದಿಗಳಿಂದಲೂ ರಾವಣನು ಶ್ರೀರಾಮನ ಪರತತ್ವ ಭಾವವನ್ನು ಅರಿಯಬಹುದಿತ್ತು. ಏಕೆಂದರೆ ಆತನ ಆಸುರ ಪ್ರಕೃತಿಯು ಅಷ್ಟುಬಲವತ್ತರವಾದು **ದೆಂಬ** ಭಾವವು. **"ದ್ವಾವಿಮೌ ಪುರುಷೌ ಮೂಢೌ ದುರ್ಯೋಧನ ದಶಾನನೌ"** ಎಂಬಲ್ಲಿ ಇವರಿಬ್ಬರೂ ಪ್ರಬಲ ಆಸುರ ಪ್ರಕೃತಿಗಳೆಂದು ಋಷಿವಾಕ್ಯವಿರುತ್ತದೆ.

ಉಲ್ಲಂಘಿತ ತ್ರಿವಿಧಸೀಮ ಸಮಾತಿ ಶಾಯಿ।
ಸಂಭಾವನಂ ತವ ಪರಿಬ್ರಢಿಮ ಸ್ವಭಾವಮ್।
ಮಾಯಾ ಬಲೇನ ಭವತಾಪಿ ನಿಗೂಹ್ಯಮಾನಮ್।
ಪಶ್ಯನ್ತಿ ಕೇಚಿದ ನಿಶಂ ತ್ವದನನ್ಯ ಭಾವಾಃ ॥೧೬॥

---

**ಅವತಾರಿಕೆಯು**–ಹಿಂದಿನ ಶ್ಲೋಕದಲ್ಲಿ "**ನೈವಾಸುರ ಪ್ರಕೃತಯಃ ಪ್ರಭವನ್ತಿ ಬೋದ್ಧುಮ್**" ಆಸುರ ಪ್ರಕೃತಿಗಳು ನಿನ್ನ ನೈಜಸ್ವರೂಪಾದಿಗಳನ್ನು ತಿಳಿಯಲಾರರೆಂದು; ಹೇಳಿದರು. ಹಾಗಾದರೆ ತಿಳಿಯುವವರು ಯಾರು? ಎಂದರೆ, ಎಲ್ಲೋ ಕೆಲವರುಮಾತ್ರ **ತ್ವದನನ್ಯ ಭಾವಾಃ**–ನಿನ್ನನ್ನೇ ಯಾವಾಗಲೂ ಧ್ಯಾನಿಸುವವರು ನಿನ್ನನ್ನು ಯಥಾರ್ಥವಾಗಿ ತಿಳಿಯುವರು. ಇದಕ್ಕೆ ನಿದರ್ಶನವು ದಶರಥನನ್ನು ಕುರಿತು ವಿಶ್ವಾಮಿತ್ರೋಕ್ತಿಯು:-

**"ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯ ಪರಾಕ್ರಮಮ್**
**ವಸಿಷ್ಠೋಽಪಿ ಮಹಾತೇಜಾ ಯೇಚೇಮೇತಪಿಸಿಸ್ಥಿತಾಃ"**

ಐಹಿಕದಲ್ಲೇಮಗ್ನರಾಗಿ ವಿಷಯೋಪಭೋಗರತಿಯುಳ್ಳವರು ರಾಮನನ್ನು ಯಥಾರ್ಥವಾಗಿ ತಿಳಿಯಲಾರರು. ನಾನಾದರೋ ಆ ಮಹಾತ್ಮನು ಯಾರೆಂಬುದನ್ನು ಬಲ್ಲೆನು. ಹಾಗೆಯೇ ಜ್ಞಾನದೀಪ್ತಿಯುಳ್ಳ ವಸಿಷ್ಟರೂ ಮತ್ತೂ ಇತರ ತಪೋನಿಷ್ಠರೂ ವಿಭೀಷಣ,ಗುಹಾಂಜನೆಯಾದಿಗಳೂ ತಿಳಿಯುವರು.ದಶಗ್ರೀವಾದಿ ರಾಕ್ಷಸರುತಿಳಿಯಲಾರರು. ಹಾಗೆಯೇ ದುರ್ಯೋಧನಾದಿ ದುಷ್ಟಚತಷ್ಟಯ, ಕಂಸ ಜರಾಸಂಧಾದಿಗಳೂ, ಶಿಶುಪಾಲನೂ, ಶ್ರೀಕೃಷ್ಣನು ಯಾರೆಂಬುದನ್ನು ತಿಳಿಯಲಾರರು. ಪಾಂಡವರೂ, ಅಕ್ರೂರ ಸಂಜಯಾದಿಗಳೂ, ಕುಚೇಲರೂ ಮಾಲಾಕಾರಾದಿಗಳೂ ವ್ರಜಾಂಗನೆಯರೂಸಹ ಶ್ರೀಕೃಷ್ಣ ಮಹಿಮೆಯಂ ಬಲ್ಲರು. ಹೀಗೆ ದೈವ ಪ್ರಕೃತಿಗಳು ಪೂರ್ವ ಜನ್ಮ ಸುಕೃತದಿಂದ ಜನನ ಕಾಲದಲ್ಲಿ ಸ್ವಾಮಿಯ ಕಟಾಕ್ಷವೀಕ್ಷಿತರಾಗಿ ಜ್ಞಾನತಿರೋಹಿತತ್ವನಿಲ್ಲದೆ ಸಾತ್ವಿಕ ವೃದ್ಧಿಯುಳ್ಳವರಾಗಿ, ಸಾತ್ವಿಕ ಸಂಭಾಷಣೆ ಗುರೂಪ ಸದನಾದಿಗಳ ಮಹಿಮೆಯಿಂದ ಅನನ್ಯ ಭಾವರಾಗುತ್ತಾರೆ ಅಂತಹ ಕೆಲವರು ಮಾತ್ರ ನಿನ್ನ ಮಹಿಮೆಯನ್ನು ತಿಳಿಯುವರಾಗುತ್ತಾರೆಂದು ಈ ಶ್ಲೋಕದಲ್ಲಿ ಹೇಳುತ್ತಾರೆ.

**ತ್ರಿಭಿರ್ಗುಣ ಮಯೈರ್ಭಾವೈ ರೇಭಿ ಸ್ಸರ್ವ ಮಿದಂ ಜಗತ್।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್॥**

ಎಂದರೆ ಹಿಂದೆ ಹೇಳಿದ ಸಾತ್ವಿಕ ರಾಜಸ ತಾಮಸ ಗುಣಗಳುಳ್ಳ ವಸ್ತುಗಳಿಂದ ಮೋಹಿತರಾದ ಪ್ರಾಣಿ ವರ್ಗವುಳ್ಳ ಈ ಸಮಸ್ತ ಜಗತ್ತು, ಇವುಗಳಿಗಿಂತ ತಾನು

ವಿಲಕ್ಷಣನು, ಎಂಬುವನ್ನು ಜ್ಞಾನತಿರೋಹಿತವಾಗುವುದರಿಂದ ನನ್ನನ್ನು ತಿಳಿಯು ಲಾರರೆಂದು, ಹೀಗೆ ಭಗವಂತನೇ ಹೇಳಿರುವಾಗ ಕೆಲವರು ಮಾತ್ರ ನನ್ನನ್ನು ಸರಿಯಾಗಿ ಹೇಗೆ ತಿಳಿಯುವರು ಎಂಬುದನ್ನು ತಿಳಿಸುತ್ತಾರೆ.–

**ಅರ್ಥವು:– ಉಲ್ಲಂಘಿತ ...... ಸಂಭಾವನಂ,** ಒಂದೇ ಪದವು, **ಉಲ್ಲಂಘಿತ–** ನಿರಾಕರಿಸಲ್ಪಟ್ಟ, **ತ್ರಿವಿಧ ಸೀಮ–**ಮೂರು ವಿಧವಾದ ಎಲ್ಲೆ ಎಂದರೆ ದೇಶತಃ ಕಾಲತಃ, ವಸ್ತುತಃ ಹೀಗೆ ಮೂರರ ಪರಿಚ್ಛಿತ್ತಿಯೇನು, **ಸಮಾತಿಶಾಯಿ–**ಸಮತ್ವವೇನು, ಅತಿಶಯತ್ವವೇನು, ಇವುಗಳ **ಸಂಭಾವನಂ–**ಮರ್ಯಾದೆ ಅಥವಾ ಮಹಿಮೆಯುಳ್ಳ, ಎಂದರೆ ಹೀಗೆ ಮೂರು ವಿಧ ಪರಿಚ್ಛೇದವಿಲ್ಲದವನೆಂದು ಶ್ರುತಿಯಲ್ಲಿ ಸ್ವರೂಪನಿರೂಪಕಶ್ರುತಿಯಾದ **'ಸತ್ಯಂ ಜ್ಞಾನ ಮನಂತಂ ಬ್ರಹ್ಮ'** ಎಂಬಲ್ಲಿ ಹೇಳಿರುವ ಹಾಗೆ **ಅನಂತನು,** ಮತ್ತು ತನಗೆ ಸಮರೂ ಅಧಿಕರೂ ಇಲ್ಲದಿರುವ ಸ್ವರೂಪವುಳ್ಳ ಎಂಬ ಅರ್ಥವು, **ಭವತಾಪಿ–**ನಿನ್ನಿಂದಲೂ ಕೂಡ, **ಮಾಯಾಬಲೇನ–**ಜೀವಾತ್ಮರಿಗಿರುವ ಪ್ರಕೃತಿ ಸಂಬಂಧ ಶಕ್ತಿಯಿಂದ, **ನಿಗೂಹ್ಯ ಮಾನಂ-** ತಿರೋಹಿತ ಜ್ಞಾನರಾದ ಪ್ರಯುಕ್ತ ತಿಳಿಯಲಶಕ್ಯವಾಗಿ ಗೂಢವಾಗಿರುವ, **ತವ–** ಸರ್ವಾಧಿಕನಾದ ನಿನ್ನ **ಪರಿಬ್ರಢಿಮ ಸ್ವಭಾವಂ–** ಎಲ್ಲವೂ ನಿನ್ನ ಸ್ವತ್ತಾಗಿ ಎಲ್ಲಾವಕ್ಕೂ ಆತ್ಮವಾಗಿ ಹೀಗೆ ಸರ್ವೇಶ್ವರನಾಗಿ ಸರ್ವ ನಿಯಾಮಕನಾಗಿರುವ ಸ್ವಭಾವವನ್ನು, **ಕೇಚಿತ್ –**ಎಲ್ಲೋ ಕೆಲವು ದೈವೀ ಸಂಪದ್ಯುಕ್ತರಾದ, **ಅನನ್ಯ ಭಾವಾಃ–**ಐಹಿಕಗಳನ್ನೆಲ್ಲಾ ತೊರೆದು ನಿನ್ನಲ್ಲೇ ಸಕ್ತವಾದ ಚಿತ್ತವೃತ್ತಿಯುಳ್ಳವರು, **ಅನಿಶಂ–** ಯಾವಾಗಲೂ, ಇಂತಹ ಕಲಿಕಾಲದಲ್ಲೂ, **ಪಶ್ಯನ್ತಿ–** ಉಪಾಯಾನುಷ್ಠಾನ ಮಹಾತ್ಮ್ಯೆಯಿಂದ ತಿಳಿಯುವರು. **ಉಪಪಾದನೆಯು–**ಉಲ್ಲಂಘಿತವಾದುದು, ನಿರಾಕರಿಸಲ್ಪಟ್ಟಿದುದು ಮೂರು ಎಂದು ಹೇಳುತ್ತಾರೆ. ಯಾವುವೆಂದರೆ-- (೧) **ತ್ರಿವಿಧ ಸೀಮ–**ಮೂರು ವಿಧವಾದ ಪರಿಚ್ಛೇದವು,ಸ್ವರೂಪಶೋಧಕ ವಾಕ್ಯದಲ್ಲಿನ **ಅನಂತಂ** ಎಂಬುದರಅರ್ಥವು.(೨)ಸಮತ್ವ (೩) **ಅತಿಶಯತ್ವ.** ಈ ದೇಶದಲ್ಲಿ ಉಂಟು, ಆ ದೇಶದಲ್ಲಿಲ್ಲವೆಂಬುದಿಲ್ಲವು. ಈ ಕಾಲದಲ್ಲುಂಟು, ಬೇರೇ ಕಾಲದಲ್ಲಿಲ್ಲವೆಂಬುದಿಲ್ಲವು; ಈ ವಸ್ತುವಿನಲ್ಲುಂಟು, ಆ ವಸ್ತುವಿನಲ್ಲಿಲ್ಲವೆಂಬುದಿಲ್ಲವು; ಹೀಗೆ ಸರ್ವ ದೇಶ, ಕಾಲ, ಸರ್ವ ವಸ್ತುಗಳಲ್ಲೂ ಇರುವವನು ಎಂಬ ಅರ್ಥವು. ಇಲ್ಲಿನ ರಾಜರುಗಳ ಪ್ರಭುತ್ವಕ್ಕೆ ಈ ಮಹಾತ್ಮ್ಯೆ ಇಲ್ಲವು. ಈ ಮೂರು ವಿಧವಾದ ಪರಿಚ್ಛಿತ್ತಿಯೂ ಉಂಟು. ಹಾಗೆಯೇ ಆತನಿಗೆ ಸಮರೂ ಇಲ್ಲವು ಅಧಿಕರೂ ಇಲ್ಲವು. ಆದುದರಿಂದಲೇ ಉಲ್ಲಂಘಿತ........**ಸಮಾತಿಶಾಯಿ ಸಂಭಾವನಂ** ಎಂದು ಹೇಳಲ್ಪಟ್ಟಿತು. **"ಸತ್ಯಂ ಜ್ಞಾನ ಮನಂತಂ ಬ್ರಹ್ಮ" "ನ ಸಮೋನೇನ ಕಶ್ಚನ" "ನ ತತ್ಸಮಶ್ಚಾಭ್ಯಧಿ ಕಶ್ಚ ದೃಶ್ಯತೇ", "ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯಃ" "ನಾಸ್ತಿ ನಾರಾಯಣ ಸಮಃ"** ಇತ್ಯಾದಿ

ಪ್ರಮಾಣಗಳು ಶ್ರೀಮನ್ನಾರಾಯಣನಿಗೆ ಸಮರೂ ಇಲ್ಲವು, ಅದರಿಂದ ಅಧಿಕರೂ ಇಲ್ಲವು ಎಂದು ಹೇಳುತ್ತವೆ.

**ಪರಿಬೃಢಿಮಸ್ವಭಾವಂ**– ಪ್ರಭುತ್ವರೂಪವು, ಅದು ಪರಮಾತ್ಮನ ಸ್ವರೂಪಕ್ಕೆ ಸೇರಿದುದಾಗಿ ಶಾಶ್ವತವಾದುದು ಇದು ವಿಚಿತ್ರವಾದ **ಮಾಯಾ ಬಲೇನ**– ತನ್ನ ಸ್ವತ್ತಾದ ಮಾಯಾಬಲದಿಂದ ಗೂಡವಾಗಿದೆ ಎಂದು ಹೇಳಲ್ಪಟಿರುತ್ತದೆ. **ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್। ತಸ್ಮಿಂಶ್ಚಾನ್ಯೋ ಮಾಯಯಾ ಸನ್ನಿರುದ್ಧಃ।** ಇಲ್ಲಿ ಮಾಯೆ ಎಂದರೆ "**ಮಾಯಾಂತು ಪ್ರಕೃತಿಂ ವಿದ್ಧಿ ಮಾಯಿನಂತು ಮಹೇಶ್ವರಮ್**" ಎಂಬಲ್ಲಿ ಪ್ರಕೃತಿ ಎಂಬುದಾಗಿ ಶ್ರುತಿಯೇ ಅರ್ಥವನ್ನು ಹೇಳಿರುತ್ತದೆ. ಈ ಪ್ರಕೃತಿ ಸಂಬಂಧವು ಚೇತನರಿಗೆ ಜ್ಞಾನತಿರೋಹಿತತ್ವವನ್ನುಂಟು ಮಾಡುವುದರಿಂದ, ಸ್ವಾಮಿಯ **ಪರಿಬೃಢಿಮಸ್ವಭಾವವನ್ನು** ಯಥಾರ್ಥವಾಗಿ ತಿಳಿಯಲಾರರು; ಏಕೆಂದರೆ **ಮಾಯಾಬಲದಿಂದ ನಿಗೂಹ್ಯಮಾನಂ** ಎಂದು ಹೇಳಿದರು. ಶ್ರೀಕೃಷ್ಣಭಗವಾನರವರೂ '**ದೈವೀ ಹ್ಯೇಷಾಗುಣಮಯೀ ಮಮ ಮಾಯಾ ದುರತ್ಯಯಾ**' (ಗೀ ೭. ೧೪) ಎಂದು ಈ ಪ್ರಕೃತಿಯಿಂದ ಬಿಡುಗಡೆಯು ಕಷ್ಟತರವಾದುದೆಂದು ಹೇಳಿರುತ್ತಾರೆ. ಜಿತಂತಾ ಸ್ತೋತ್ರದಲ್ಲೂ '**ಗುಣ ಮಾಯಾ ಸಮಾವೃತಃ**" ತ್ರಿಗುಣಾತ್ಮಕವಾದ ಪ್ರಕೃತಿಯಿಂದ ಸೇರಿದವನೆಂದು ಹೇಳಲ್ಪಟ್ಟಿರುತ್ತದೆ. ಶ್ರೀಯಾಮುನಮುನಿಗಳ ಚತುಶ್ಶ್ಲೋಕಿಯಲ್ಲೂ "**ಯವನಿಕಾ ಮಾಯಾ ಜಗನ್ಮೋಹಿನೀ**" ಪ್ರಕೃತಿಯನ್ನು ಮರೆಸುವ ತೆರೆಯೆಂದೂ, ಜಗತ್ತಿಗೆ ಮೋಹ ಬುದ್ಧಿಯನ್ನುಟು ಮಾಡುವಂಥಾದ್ದೆಂದೂ, ಹೇಳಲ್ಪಟ್ಟಿರುತ್ತದೆ. **ಮಾಯಾ** ಪರಮಾತ್ಮನ ಸ್ವತ್ತು ಹೇಗೋ ಹಾಗೆಯೇ ಅದು ಲಕ್ಷ್ಮಿಯ ಸ್ವತ್ತೂ ಹೌದು.

ಇಲ್ಲಿ **ಮಾಯಾ ಬಲೇನ ನಿಗೂಹ್ಯ ಮಾನಂ** ಎಂಬುದಕ್ಕೆ ಇನ್ನೊಂದು ವಿಧವಾಗಿಯೂ ಅರ್ಥವನ್ನು ಹೇಳಬಹುದು; ಅಪ್ರಾಕೃತವಾದ, ತನಗೇನೇ ಅಸಾಧಾರಣವಾದ, ದಿವ್ಯ ಮಙ್ಗಳ ವಿಗ್ರಹವಿದ್ದರೂ, ಅದನ್ನು ವಂಚನೆಯಿಂದ ಮರೆಸಿಕೊಂಡು, ಪ್ರಾಕೃತ, ಮತ್ಸ್ಯ, ಕೂರ್ಮ, ವರಾಹ, ಮನುಷ್ಯ ರೂಪಗಳನ್ನು ತಾಳಿ, ತನ್ನ **ಸ್ವರೂಪವನ್ನು ಮರೆಸಿ ಕೊಳ್ಳುವ** ಎಂಬರ್ಥವೂ ಆಗಲಿ ಆಗಬಹುದು. ಗೀತೆಯಲ್ಲಿ ಹಾಗೆಯೇ, (ಗೀ. ೯. ೧೧)

**ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನು ಮಾಶ್ರಿತಮ್।**
**ಪರಂ ಭಾವ ಮಜಾನಂತೋ ಮಮ ಭೂತ ಮಹೇಶ್ವರಮ್॥**

ಎಲ್ಲಕ್ಕೂ ಕಾರಣ ಭೂತನಾಗಿ, ಸರ್ವಜ್ಞನಾಗಿ ಸತ್ಯ ಸಙ್ಕಲ್ಪನಾಗಿ ಕಲ್ಯಾಣ ಗ ಣಾಕರನಾಗಿ ಎಲ್ಲರೂ ನನ್ನನ್ನಾಶ್ರಯಿಸಿ ಪರಮಶ್ರೇಯಸ್ಸನ್ನು ಹೊಂದಲಿ ಎಂದು ಮನುಷ್ಯರೊಂದಿಗೆ ಸೇರಿ ಮನುಷ್ಯನಾಗಿ ಹುಟ್ಟಿದರೂ, ನನ್ನ ಸರ್ವೋತ್ಕೃಷ್ಟ ಭಾವವನ್ನು

ಪರಿಶೀಲಿಸಿತಿಳಿಯದ ಮೂಢರು (ದುರ್ಯೋಧನಾದಿಗಳು) ನನ್ನನ್ನು ಕೇವಲ ಮನುಷ್ಯ ನೆಂದೇ ಭಾವಿಸುವರು. ಇವರು ಆಸುರ ಸ್ವಭಾವವುಳ್ಳವರು. ಹಾಗೆಯೇ ಇನ್ನೊಂದು ಕಡೆಯಲ್ಲೂ "**ನಾಹಂ ಪ್ರಕಾಶ ಸ್ಸರ್ವಸ್ಯ ಯೋಗಮಾಯಾ ಸಮಾವೃತಃ**" ಎಂದು ಹೇಳಲ್ಪಟ್ಟಿರುತ್ತದೆ. (ಗೀ. ೭. ೨೫) ದೈವೀ ಸ್ವಭಾವವುಳ್ಳ ಕೆಲವರಾದರೋ (ಅಕ್ರೂರೋದ್ಧವ ಸಂಜಯರು) "**ಮಹಾತ್ಮಾನಸ್ತು ಮಾಂಪಾರ್ಥ ದೈವೀ ಪ್ರಕೃತಿ ಮಾಶ್ರಿತಾಃ। ಭಜನ್ತ್ಯನನ್ಯ ಮನಸೋ ಜ್ಞಾತ್ವಾ ಭೂತಾದಿ ಮವ್ಯಯಮ್**" ಸತ್ವ ಗುಣಾಧಿಕ್ಯದಿಂದ ದೈವೀ ಸ್ವಭಾವಯುಕ್ತರಾಗಿ, ನಾನು ಜಗತ್ಕಾರಣನು, ದುಷ್ಟನಿಗ್ರಹ, ಸಾಧು ಪರಿತ್ರಾಣಾದಿಗಳಿಗಾಗಿ ಅವತರಿಸಿರುವನೆಂದು ತಿಳಿದು, ನನ್ನನ್ನೇ ಆಶ್ರಯಿಸಿ ಸೇವಿಸುವರು ಎಂದು ಹೇಳಲ್ಪಟ್ಟಿರುತ್ತದೆ.

ಹಾಗೆಯೇ, "**ಈಶನ್ನಪಿ ಮಹಾಯೋಗೀ ಸರ್ವಸ್ಯ ಜಗತಃ ಪ್ರಭುಃ। ಕರ್ಮಾಣ್ಯಾರಭತೇ ಕರ್ತುಂ ಕೀನಾಶ ಇವದುರ್ಬಲಃ। ತೇನ ವಂಚಯತೇ ಲೋಕಾನ್ ಮಾಯಾಯೋಗೇನ ಕೇಶವಃ**" ಮಹತ್ತಾದ ಐಶ್ವರ್ಯಯೋಗವನ್ನು ಹೊಂದಿ ಸರ್ವಕ್ಕೂ ನಿಯಾಮಕನಾಗಿ ಸಮಸ್ತ ಜಗತ್ತಿಗೂ ಪ್ರಭುವಾಗಿದ್ದರೂ ಅವತಾರ ಕಾಲಗಳಲ್ಲಿ ದುರ್ಬಲನಾದ ಕ್ಷುದ್ರ ಮನುಷ್ಯನಹಾಗೆ ಕೆಲಸಗಳನ್ನು ಮಾಡಲು ಉದ್ಯುಕ್ತನಾಗಿ ಅವುಗಳನ್ನು ಆರಂಭಿಸುವನು; ಇದರಿಂದ ಶ್ರೀ ಬ್ರಹ್ಮ ರುದ್ರಾದಿಗಳಿಗೂ ಈಶನಾದವನು ಹೀಗೆ ಪ್ರಕೃತಿ ಎಂಬ ಶಕ್ತಿಯ ಮೂಲಕ ಜಗತ್ತಿನವರನ್ನೆಲ್ಲಾ ವಂಚಿಸುವನು ಎಂದು ಹೇಳಲ್ಪಟ್ಟಿರುತ್ತದೆ.

ಸುಗ್ರೀವ ಸಖ್ಯವನ್ನು ಶ್ರೀರಾಮಚಂದ್ರ ಪ್ರಭುವು ಬಯಿಸಿದಾಗ ಮಹರ್ಷಿಯು ಹೇಳುತ್ತಾರೇನೆಂದರೆ "**ಲೋಕನಾಥಃ ಪುರೋಭೂತ್ವಾ ಸುಗ್ರೀವಂ ನಾಥ ಮಿಚ್ಛತಿ**" ಎಲ್ಲಾಲೋಕಗಳಿಗೂ ಸ್ವಾಮಿಯಾಗಿರುವವನು ಸುಗ್ರೀವನಾದ ಒಬ್ಬ ವಾನರನನ್ನು ಸ್ವಾಮಿಯಾಗಬೇಕೆಂದು ಅಪೇಕ್ಷಿಸುತ್ತಾನೆಂದೂ, '**ಯಸ್ಯ ಪ್ರಸಾದೇ ಸತತಂ ಪ್ರಸೀದೇಯು ರಿಮಾ ಪ್ರಜಾಃ। ಸ ರಾಮೋ ವಾನರೇಂದ್ರಸ್ಯ ಪ್ರಸಾದ ಮಭಿಕಾಂಕ್ಷತೇ**' (ರಾ. ಕಿಷ್ಕಿಂಧಾ ೪. ೧೮–೨೧) ಯಾವ ಸರ್ವೇಶ್ವರನ ಪ್ರಸನ್ನತೆಯಿಂದ ಈ ಲೋಕವೆಲ್ಲಾ ಧನ್ಯತೆಯನ್ನು ಹೊಂದಬಹುದೋ ಅಂತಹ ಲೋಕನಾಯಕನು ಸುಗ್ರೀವನ ಪ್ರಸನ್ನತೆಯನ್ನು ಅಪೇಕ್ಷಿಸಿ ಎದುರು ನೋಡುತ್ತಾನೆಂದು ಹೇಳಲ್ಪಟ್ಟಿರುತ್ತದೆ.

**ಭವತಾಪಿ:–** ಇತರರು ಈ ಮಾಯಾಬಲದಿಂದ ವಂಚಿಸಲ್ಪಡುವದು ಹಾಗಿರಲಿ; ಅವರುಗಳು ನಿನ್ನ ಅತಿ ಮಾನುಷ ಚೇಷ್ಟೆಗಳನ್ನು ನೋಡಿ, ಈತನು ಪರಮ ಪುರುಷನೋ ಏನೋ! ಎಂದು ಸಂದೇಹ ಪಟ್ಟರೂ, ಅಂತವರನ್ನೂ ಕೂಡ

**ಭವತಾಪಿ ನಿಗೂಹ್ಯಮಾನಂ** ನೀನು ವಂಚಿಸಿರುತ್ತಿಯೇ. ನೀನು ರಾಮಾವತಾರಿಯಾಗಿ ಸಮುದ್ರ ಸೇತು ಬಂಧನ, ರಾವಣವಧೆ ಮೊದಲಾದ ಅತಿ ಮಾನುಷ ಕೃತ್ಯಗಳಿಂದ ನೀನೇ ಪರಮ ಪುರುಷನೆಂದು ಭಾವಿಸಿ, ಕುಬೇರ, ಯಮ, ವರುಣ, ಇಂದ್ರ, ರುದ್ರ ಮೊದಲಾದವರೆಲ್ಲಾ ಸೀತೆಯ ಅಗ್ನಿ ಪ್ರವೇಶ ಕಾಲದಲ್ಲಿ ಬಂದು, **ಕರ್ತಾ ಸರ್ವಸ್ಯ ಲೋಕಸ್ಯ**" ಎಂದೂ, "**ಅಂತೇ ಚಾದೌಚ ಲೋಕಾನಾಂ ದೃಶ್ಯಸೇ ತ್ವಂ ಪರಂತಪ**" ಎಂದೂ ನಿನ್ನ ಪರತತ್ವವನ್ನು ಕೊಂಡಾಡಿದರೂ, "**ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ**" ಎಂದು ಹೇಳಿಕೊಂಡಿದುದರಿಂದ ನಿನ್ನ ಮಹಾತ್ಮೆಯು "**ಭವತಾಪಿ ನಿಗೂಹ್ಯಮಾನ**" ವಾದುದು. ಪುನಃ ಕೃಷ್ಣಾವತಾರ ಕಾಲದಲ್ಲೂ, ಪೂತನ ಶಕಟ ಕಂಸವಧಾ ಮತ್ತು ಗೋವರ್ಧನೋದ್ಧಾರಣ ಮೊದಲಾದ ಅದ್ಭುತ ಚೇಷ್ಟೆಗಳಿಂದ ನೀನು ಪರತತ್ವವೆಂದು ಭಾವಿಸಿದರೆ, ಅವರನ್ನು ವಂಚಿಸಿ ನೀನು "**ಅಹಂವೋ ಬಾಂಧವೋ ಜಾತಃ**" ನಾನು ನಿಮ್ಮ ಬಂಧುವಲ್ಲವೇ? ಎಂದು ಸ್ವವಾಕ್ಯದಿಂದ ಮೋಹಗೊಳಿಸಿದುದರಿಂದ **ಭವತಾಪಿ ನಿಗೂಹ್ಯಮಾನ**ವಾದುದು ನಿನ್ನ ಸ್ವರೂಪವು.

ಇಲ್ಲಿ **ಭವತಾಪಿ** ಎಂಬಲ್ಲಿರುವ ಅಪಿ ಶಬ್ದಸ್ವಾರಸ್ಯದಿಂದ ಹೀಗೆ **ಸಾಮಾನ್ಯರನ್ನು** ನೀನು ವಂಚಿಸಿದರೂ ಆ ದೈವೀಸ್ವಭಾವದ ಮಹಾನುಭಾವರು ಎಂದಿಗೂ ನಿನ್ನ ಮಾಹಾತ್ಮ್ಯೆಯನ್ನು ತಿಳಿಯದೇ ಇರುವದಿಲ್ಲವೆಂಬ ಭಾವವು ವ್ಯಕ್ತವು. ದುರ್ಯೋಧನನಿಗೆ ಸೈನ್ಯವನ್ನೆಲ್ಲಾ ಕೊಟ್ಟು ಬಿಟ್ಟು, ಆಗಲೂ ಯುದ್ಧ ಸಹಾಯಕ್ಕಾಗಿ ಬರಬೇಕೆಂದು ಅರ್ಜುನನು ಪ್ರಾರ್ಥಿಸಲು; ನಾನು ಸುಮ್ಮನೆ ಯುದ್ಧಕ್ಕೆ ಬರುತ್ತೇನೆ; ಸಾಕ್ಷೀಭೂತನಾಗಿ ಬರುವೆನು ಎನ್ನಲು; ಶ್ರೀಕೃಷ್ಣ ಮಹಾತ್ಮ್ಯೆಯನ್ನು ತಿಳಿದವನಾದುದರಿಂದ, ಹಾಗೆ ಆಗಲಿ, ಅಗತ್ಯ ಬರಬೇಕೆಂದು ಪ್ರಾರ್ಥಿಸಿ ಕರೆದುಕೊಂಡು ಹೋಗಿರುತ್ತಾನೆ. ಹಾಗೆಯೇ ಅಕ್ರೂರರು ಶ್ರೀಕೃಷ್ಣನನ್ನು ಮನೆಗೆ ಬರಬೇಕೆಂದು ಬಹುಕಾಲದಿಂದ ಪ್ರಾರ್ಥಿಸಿದುದನ್ನು ಶ್ರೀಕೃಷ್ಣನು ಮನಸ್ಸಿನಲ್ಲಿಟ್ಟು ಒಂದು ದಿವಸ ಆತನ ಮನೆಗೆ ಹೋಗಲು; ಆಗ ಅಕ್ರೂರರು ವಿಶೇಷವಾಗಿ ಶ್ರೀಕೃಷ್ಣನನ್ನು ಆರಾಧಿಸಿ ಉಪಚರಿಸಿದರು. ನಾನು ತುಂಬಾ ಪ್ರೀತನಾದೆನು; ನಿನಗೇನು ಬೇಕೋ ಆ ವರಗಳನ್ನು ಕೇಳು ಎಂದು ಶ್ರೀಕೃಷ್ಣನು ಕೇಳಲು; ಅದಕ್ಕೆ ಅಕ್ರೂರನು ನಕ್ಕು ನೀನು ಒಳ್ಳೇ ಮಾಯಾವಿಯು; ಏನಾದರೂ ಐಹಿಕ ಭೋಗಗಳನ್ನು ಪ್ರಾರ್ಥಿಸಿದರೆ ಇಲ್ಲೇ ಬಂಧದಲ್ಲಿರುವಹಾಗೆ ಮಾಡಬೇಕೆಂಬುದು ನಿನ್ನ ಉದ್ದೇಶ್ಯವೋ? ನನಗೆ ಏನೊಂದೂ ಬೇಕಾಗಿಲ್ಲವು; ನಿನ್ನ ಕೃಪೆಯು, ನನಗೆ ಇದು ಬೇಕು, ಅದುಬೇಕು ಎಂದು ಪ್ರಾರ್ಥಿಸುವ ಆಶೆಯನ್ನು ಕತ್ತರಿಸಿ ಬಿಟ್ಟು, ಅದನ್ನು ದೂರಹೋಗುವಹಾಗೆ ಮಾಡು ಎಂದು ಅಕ್ರೂರರು ಪ್ರಾರ್ಥಿಸಿರುತ್ತಾರೆ. ಹೀಗೆ ಅನನ್ಯಭಾವರಿಗೆ ನಿನ್ನ

ಮಹಿಮೆಯು ತಿಳಿಯುವದು. ಹಾಗೆಯೇ ಗುಹ, ಸುಗ್ರೀವ, ಹನುಮಾನ್ ವಿಭೀಷಣಾದಿಗಳೂ ತಿಳಿಯುವರು. ಸ್ವಾಮಿಯು ಹೆಂಡತಿಯನ್ನು ಕಳೆದುಕೊಂಡು **ಕೀನಾಶ ಇವ ದುರ್ಬಲಃ** ಎನ್ನುವಹಾಗೆ ದೈನ್ಯವಾದ ಸ್ಥಿತಿಯಲ್ಲೂಕೂಡ, ಸ್ವಾಮಿಯ ಮಹಾತ್ಮ್ಯೆಯನ್ನು ತಮ್ಮ ದೈವೀಸ್ವಭಾವದ ಮೂಲಕ **ಪಶ್ಯಂತಿ**— ಇವರೆಲ್ಲಾ ತಿಳಿಯುವರು ಹಾಗೆಯೇ ಮಾರ್ಕಂಡೇಯರು ಪುಂಡರೀಕಾಕ್ಷದ ಸೊಬಗಿನಿಂದ ಶ್ರೀಕೃಷ್ಣನ ಮಹಾತ್ಮ್ಯೆಯನ್ನು ತಿಳಿದರು; ಸಂಜಯಾದಿಗಳೂ ಸಹ ಹಾಗೆಯೇ ತಮ್ಮ ಜ್ಞಾನ ಚಕ್ಷುಸ್ಸಿನಿಂದ ಪರಮಾತ್ಮನೆಂಬುದನ್ನರಿತರು.

**ನಿಗೂಹ್ಯಮಾನಂ** ಎಂದರೆ **ನಿತರಾಂ ಪ್ರಚ್ಛಾದ್ಯಮಾನಂ**- ಸಂಪೂರ್ಣವಾಗಿ ಮರೆಸಲ್ಪಟ್ಟಿದುದು ಎಂಬಭಾವವು. ಹೀಗಿದ್ದರೂ ದೈವೀ ಸ್ವಭಾವವುಳ್ಳ ಸುಕೃತಿಗಳು, **ಪಶ್ಯಂತಿ** ಎಂದು ಹೇಳಲ್ಪಟ್ಟಿತು. ಶಾಸ್ತ್ರ ಮುಖೇನ ಮೊದಲು ವಿಶದವಾದ ಜ್ಞಾನ ವನ್ನು ಹೊಂದಿ ಸ್ವಾಮಿಯ ಐಶ್ವರ್ಯ ಮಹಾತ್ಮ್ಯೆಯನ್ನು ತಿಳಿಯುವರು; ಅನಂತರ ಯೋಗಬಲದಿಂದ ಸಾಕ್ಷಾತ್ಕರಿಸುವರು ಎಂಬ ತಾತ್ಪರ್ಯವು. ಹಾಗೆಯೇ ಸನತ್ಸು ಜಾತರು **"ಯೋಗಿನ ಸ್ತಂ ಪ್ರಪಶ್ಯನ್ತಿ ಭಗವಂತಂ ಸನಾತನಮ್"** ಎಂದು ಹೇಳಿರುವದರಿಂದ ಪಶ್ಯಂತಿ ಎಂಬುದಕ್ಕೆ ಯೋಗಬಲದಿಂದ ಸಾಕ್ಷಾತ್ಕರಿಸುವ ರೆಂಬುದೇ ಅರ್ಥವು.

ಇಲ್ಲಿ **ಕೇಚಿತ್** ಎಂದು ಎಲ್ಲೋ ಕೆಲವರು ಮಾತ್ರವೇ ಎಂದು ಹೇಳಿರುವದ ರಿಂದ, ಹಿಂದಿನ ಶ್ಲೋಕದಲ್ಲಿ ಹೇಳಿದ್ದ ಆಸುರ ಸ್ವಭಾವವುಳ್ಳವರೇ ಅನೇಕರೆಂದೂ, ದೈವೀ ಸ್ವಭಾವವುಳ್ಳ ಸುಕೃತಿಗಳು ಅತ್ಯಲ್ಪರೆಂದೂ ಹೇಳಿದಂತಾಯಿತು. ಈ ಅಭಿಪ್ರಾಯವೂ ಗೀತೆಯಲ್ಲೇ ಶ್ರೀಭಗವಾದ್ವಾಕ್ಯವಾದ **"ಸ ಮಹಾತ್ಮಾ ಸುದು ರ್ಲಭಃ"** (ಗೀ. ೭. ೧೯) ಎಂಬುದರಿಂದಲೇ ವ್ಯಕ್ತವು. ಹಾಗೆಯೇ **"ಮಾಂತು ವೇದ ನಕಶ್ಚನ"** ಎಂದೂ ಹೇಳಲ್ಪಟ್ಟಿರುತ್ತದೆ. ಶ್ರೀಪೌಷ್ಕರದಲ್ಲಿ ಹೇಳಿರುತ್ತಾರೇ ನೆಂದರೆ—

**"ದುರ್ಲಭಾ ಭಗವದ್ಯೋಗ ಭಾವಿನೋ ಭುವಿ ಮಾನವಾಃ**
**ತದ್ದರ್ಶನಾತ್ತದಾಲಾಪಾತ್ಸು ಲಭಂ ಶಾಶ್ವತಂ ಪದಮ್"**

ಸರ್ವೇಶ್ವರನನ್ನು ಯೋಗಬಲದಿಂದ ಸಾಕ್ಷಾತ್ಕಾರ ಮೊದಲಾದುವುಗಳಿಂದ ಶಾಶ್ವತ ವಾದ ದಿವ್ಯ ವೈಕುಂಠವೆಂಬುದು ಸುಲಭವಾಗಿದ್ದರೂ, ಲೋಕದಲ್ಲಿ ಮಾನವರು ಯೋಗವನ್ನು ಅನನ್ಯಭಾವನೆಯಿಂದ ಅವಲಂಬಿಸುವವರು ತುಂಬಾ ದುರ್ಲಬರು ಎಂದರೆ ಅತಿವಿರಳರೆಂದು ಹೇಳಲ್ಪಟ್ಟಿರುತ್ತದೆ. ಅವರ ದರ್ಶನ, ಸಲ್ಲಾಪಗಳಿಂದ ಶಾಶ್ವತ ಪದವಾದ ದಿವ್ಯ ವೈಕುಂಠವು ಅತಿಸುಲಬವು.

**ಅನಿಶಂ** ಎಂದರೆ ಎಲ್ಲಾಕಾಲದಲ್ಲೂ ಎಂಬರ್ಥವು; ಹಾಗಾದರೆ ಇಂತಹ

ಪಾಪಿಷ್ಠ ಕಲಿಯುಗದಲ್ಲೂ ಅಂತಹ ಅನನ್ಯ ಭಾವರಾಗಿರುವ ಸುಕೃತಿಗಳುಂಟೋ? ಎಂದರೆ ಯಾವಾಗಲೂ ಉಂಟು ಎಂಬುದನ್ನು ತಿಳಿಸುವದಕ್ಕಾಗಿ ಈ **ಅನಿಶಂ** ಎಂಬ ಪ್ರಯೋಗವು. ಹಾಗೆಯೇ ಶ್ರೀವ್ಯಾಸರು "**ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾದ ಧರ್ಮಶೀಲಸ್ಯ ಸುದುಃಖಿತಸ್ಯ। ಅನುಗ್ರಹಾಯೇಹ ಚರಂತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ**" ಎಂದು ಹೇಳಿರುತ್ತಾರೆ. ತಮ್ಮ ಪ್ರಾರಬ್ಧಕರ್ಮಬಲದಿಂದ ಪರತನ್ತ್ರದಿಂದ ವಿಮುಖರಾಗಿ, ಆ ಕಾರಣದಿಂದ ಅಧರ್ಮ ಶೀಲರಾಗಿಯೂ ತುಂಬಾ ದುಃಖಾನುಭವವನ್ನು ಮಾಡುವವರಾಗಿಯೂ ಇರು ವವರಿಗೆ ಅನುಗ್ರಹವನ್ನು ಉಪದೇಶಾದಿಗಳ ಮೂಲಕವಾಡಿ ಉಪಾಯಾನುಷ್ಠಾನ ವನ್ನು ಮಾಡಿಸುವದಕ್ಕಾಗಿ ಎಲ್ಲಾ ಕಾಲದಲ್ಲೂ ಪೃಥಿವಿಯಲ್ಲಿ ಮಹಾಭಾಗವತೋ ತ್ತಮರು ಸಂಚರಿಸುವಹಾಗೆ ಕರುಣಾಕರನು ಸಙ್ಕಲ್ಪಿಸಿರುತ್ತಾನೆಂದು ಹೇಳಿರುತ್ತಾರೆ. ಶ್ರೀ ಶೌನಕಮಹರ್ಷಿಯು, "**ಕಲೌ ಕೃತಯುಗಂ ತಸ್ಯ ಕಲಿಸ್ತಸ್ಯ ಕೃತೇಯುಗೇ। ಯಸ್ಯ ಚೇತಸಿ ಗೋವಿಂದೋ ಹೃದಯೇ ಯಸ್ಯ ನಾಚ್ಯುತಃ**" ಇದು ಕ್ರಮಾಲಂಕಾರವು, ಯಾವನಿಗೆ ಮನಸ್ಸಿನಲ್ಲಿ ಗೋವಿಂದನೇ ಇರುತ್ತಾನೋ ಅವನಿಗೆ ಈ ಕಲಿಯುಗದಲ್ಲೂ ಕೃತಯುಗವೇ. ಯಾವನ ಹೃದಯದಲ್ಲಿ ಕೇಶವನಿರುವದಿ ಲ್ಲವೋ, ಎಂದರೆ ಯಾವನು ಕೇಶವನನ್ನು ಚಿನ್ತಿಸುವುದಿಲ್ಲವೋ, ಅವನಿಗೆ ಕೃತ ಯುಗದಲ್ಲೂ ಕಲಿಯುಗವೇ." ಎಂದು ಹೇಳಿರುತ್ತಾರೆ.

**ತ್ವದನಸ್ಯ ಭಾವಾಃ**– ನಿನ್ನ ವಿಷಯವಾದ ಚಿತ್ತವೃತ್ತಿಯನ್ನೇ ವುಳ್ಳವರೆಂಬ ರ್ಥವು; ಪ್ರಯೋಜನಾಂತರ ಶರಣ್ಯಾಂತರ ಶೂನ್ಯರು ಎಂಬರ್ಥವು. ವೈರಾಗ್ಯ ಶಿಖಾಮಣಿಗಳಾಗಿ ಭಗವಂತನನ್ನೇ ನಂಬಿದವರು; ಅನ್ಯ ದೇವತಾ ಸಂಬಂಧ ಶೂನ್ಯರು. ಇಂತವರು ಶ್ರುತಿಯಲ್ಲಿ ಉಪಪಾದಿನಲ್ಪಟ್ಟಿರುತ್ತಾರೆ.– "**ಯಮ್ಭೂತ ಯೋನಿಂ ಪರಿಪಶ್ಯಂತಿ ಧೀರಾಃ**" ಧೀರರು ಯಾರೆಂದರೆ **ಧಿಯಾರಮನ್ತೇ** ಎಂಬ ವ್ಯುತ್ಪತ್ತಿಯಿಂದ ಮನಸ್ಸಿನಿಂದ ರಮಿಸುವವರು, ಇಂತಹ ಮಹನೀಯರು ಭೂತ ಸಂಘಾತವಾದ ಈ ಜಗತ್ತಿಗೆ ಕಾರಣಭೂತನಾದವನನ್ನು ಯೋಗದಶೆಯಲ್ಲಿ ಸತತ ಯುಕ್ತರಾಗಿ ಧ್ಯಾನಿಸಿ ಸಾಕ್ಷಾತ್ಕರಿಸುವರೆಂದು ಹೇಳಲ್ಪಟ್ಟಿದೆ. ಹಾಗೆಯೇ "**ಜ್ಞಾನ ಪ್ರಸಾದೇನ ವಿಶುದ್ಧ ಸತ್ತ್ವ ಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ**" (ಮುಂ ೧೮-೩) "**ಜ್ಞಾನವೈಶದ್ಯದಿಂದ ಶುದ್ಧವಾದ ಸತ್ತ್ವೋದ್ರೇಕವುಳ್ಳವರು ಪರಮ ಪುರುಷನನ್ನು ಧ್ಯಾನಿಸಿ ಸಾಕ್ಷಾತ್ಕರಿಸುವರು**" "**ನಾಯ ಮಾತ್ಮಾ ಪ್ರವಚನೇನ ಲಭ್ಯೋ ನಮೇಧಯಾ ನ ಬಹುನಾ ಶ್ರುತೇನ। ಯಮೇ ವೈಷ ವೃಣುತೇ ತೇನ ಲಭ್ಯ ಸ್ತಸ್ಯೈಷ ಆತ್ಮಾ ವಿವೃಣತೇತನೂಂ ಸ್ವಾಂ**" ಎಂದೂ ಮತ್ತು "**ನಾಹಂ ವೇದೈರ್ನತಪಸಾ ನದಾನೇನ ನಚೇಜ್ಯಯಾ। ಶಕ್ಯಏವಂ**

**ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂಯಥಾ। ಭಕ್ತ್ಯಾತ್ವನನ್ಯಯಾ ಶಕ್ಯೋಹ್ಯಹ ಮೇವಂ ವಿಧೋರ್ಜುನ"** ಎಂದೂ ಹೇಳಿರುವದರಿಂದ ಬರೀ ಅಂಗಗಳಾದ ಕರ್ಮಯೋಗಾದಿಗಳಿಂದಲೂ ಶ್ರವಣ ಮನನಾದಿಗಳಿಂದಲೂ ಸ್ವಾಮಿಯು ಲಭ್ಯನಲ್ಲವೆಂದೂ, ಅನನ್ಯ ಭಕ್ತಿಯಿಂದಲೇ ಲಭ್ಯನೆಂದು ಹೇಳಲ್ಪಟ್ಟಿರುತ್ತದೆ. "**ತಂ ದುರ್ದರ್ಶಂ ಗೂಢ ಮನು ಪ್ರವಿಷ್ಟಂ ಗುಹಾಹಿತಂ ಗಹ್ವರೇಷ್ಠಂ ಪುರಾಣಮ್। ಅಧ್ಯಾತ್ಮಯೋಗಾಧಿಗಮೇನ ದೇವಂ ಮತ್ವಾ ಧೀರೋ ಹರ್ಷ ಶೋಕೌಜಹಾತಿ"** (ಕಠ ೧.೨.೧೨) ಪರಮಾತ್ಮನು ನೋಡಲ್ಪಡಲು ಅಶಕ್ಯನು, ಆದುದರಿಂದ **ಗೂಢಂ**–ಕರ್ಮದಿಂದ ತಿರೋಹಿತ ಜ್ಞಾನವುಳ್ಳವರಿಗೆ ಗೂಢನು, **ಗುಹಾಹಿತಂ**– ಹೃದಯಾಸ್ತಸ್ಥಿತಿಯಾದವನು, **ಗಹ್ವರೇಷ್ಠಂ**–ಆತ್ಮಾವಿಗೂ ಅಂತರ್ಯಾಮಿಯು ಅಥವಾ ಪರಮವ್ಯೋಮ ನಿಲಯನು, ಇಂತಹ ಸನಾತನನಾದ ಪರಮಪುರುಷನನ್ನು **ಅಧ್ಯಾತ್ಮ ಯೋಗಾಧಿಗಮೇನ**– ಜೀವೋಪಾಸನವು ಅಂಗವಾಗಿವುಳ್ಳ ಪರಮಾತ್ಮೋಪಾಸನ ಯುಕ್ತವಾದ ನಿರತಿಶಯ ಭಕ್ತಿಯಿಂದ ಪ್ರಾಜ್ಞನಾದವನು ಸಾಕ್ಷಾತ್ಕರಿಸಿ, ಈ ಲೋಕದ ಬಂಧದಲ್ಲುಂಟಾಗುವ ಹರ್ಷ ಶೋಕಗಳನ್ನು ತ್ಯಜಿಸುವನು ಎಂದು ಹೇಳಲ್ಪಟ್ಟಿರುತ್ತದೆ. ಇಂತವರೆಲ್ಲಾ **ತ್ವದನನ್ಯಭಾವಾಃ** ಎಂಬುದರಿಂದ ಹೇಳಲ್ಪಟ್ಟರು.

ಇದರಿಂದ ಈ **ತ್ವದನನ್ಯಭಾವಾಃ** ಎಂದು ಹೇಳಲ್ಪಟ್ಟವರು ಪರಮಾತ್ಮೋಪಾಸಕರೇ ಆಗಿರಬೇಕೆಂಬ ನಿಯಮವಿಲ್ಲವು. ಭರಸಮರ್ಪಣ ಮಾಡಿದವರೂ ಸಹ **ತ್ವದನನ್ಯಭಾವರೇ**. "**ಯೇ ತಮೇವ ಪ್ರಪದ್ಯನ್ತೇ ನತೇಮುಹ್ಯನ್ತಿ ಮಾನವಾಃ"** ಎಂದೂ, "**ಅಪಿಚೇತ್ಸು ದುರಾಚಾರೋ ಭಜನ್ತೇ ಮಾಮನನ್ಯಭಾಕ್। ಸಾಧುರೇವ ಸಮನ್ತವ್ಯಃ ಸಮ್ಯಗ್ವ್ಯ ವಸಿತೋ ಹಿ ಸಃ"** ಎಂದೂ "**ಮಾಂಹಿಪಾರ್ಥ ವ್ಯಪಾಶ್ರಿತ್ಯಯೇ ಪಿಸ್ಯುಃ ಪಾಪಯೋನಯಃ। ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ ತೇಪಿ ಯಾನ್ತಿ ಪರಾಂಗತಿಮ್"** ಎಂದು ಹೇಳಿ,ಕೊನೆಗೆ "**ಮನ್ಮನಾಭವ ಮದ್ಭಕ್ತೋ"** ಎಂದು ಹೇಳಿರುವದರಿಂದ ಎರಡು ವಿಧ ಉಪಾಯದಲ್ಲೂ, ಮನ್ಮನಸ್ತ್ವವೂ ಮದ್ಭಕ್ತಿಯೂ ಅವ್ಯಭಿಚರಿತವಾಗಿ ಇರಬೇಕಾದುದು ಅವಶ್ಯಕವು. ಆದುದರಿಂದ "ತ್ವದನನ್ಯಭಾವತ್ವವು" ಎರಡುವಿಧ ಉಪಾಯಕ್ಕೂ ಅವಶ್ಯಕವು. ಆದುದರಿಂದ ಶ್ರೀಯತಿವರ್ಯರು ಭರನ್ಯಾಸನಿಷ್ಠರಾದರೂ ತದೇಕಧ್ಯಾನರಾಗಿದ್ದು, **ಪರಭಕ್ತಿ ಪರಜ್ಞಾನ ಪರಮ ಭಕ್ತಿಯುತಂ ಮಾಂ ಕುರುಷ್ವ ಎಂದು ಪ್ರಾರ್ಥಿಸಿರುತ್ತಾರೆ.** ಶ್ರೀ ನಮ್ಮಾಳ್ವಾರವರೂಸಹ ಅಂತಹ ಚಿತ್ತವೃತ್ತಿಯನ್ನು ಹೊಂದಿದ್ದರೆಂಬುದು ಅವರ ಪಾಶುರಗಳಿಂದಲೇವ್ಯಕ್ತವು. ||೧೬||

**ಅವತಾರಿಕೆಯು**– ಹಿಂದಿನ ಶ್ಲೋಕದಲ್ಲಿ ದೈವೀಪ್ರಕೃತಿಗಳಾದ **ತ್ವದನನ್ಯ**

**ಯದಂಡ ಮಂಡಾಂತರ ಗೋಚರಂ ಯತ್।**
**ದಶೋತ್ತರಾಣ್ಯಾವರಣಾನಿ ಯಾನಿಚ।**
**ಗುಣಾಃ ಪ್ರಧಾನಂ ಪುರುಷಃ ಪರಂ ಪದಮ್।**
**ಪರಾತ್ಪರಂ ಬ್ರಹ್ಮಚ ತೇ ವಿಭೂತಯಃ ॥೧೭॥**

---

**ಭಾವರು** ನಿನ್ನ ಮಹಾಪ್ರಭುತ್ವ ಮಹಿಮೆಯನ್ನು ತಿಳಿಯುವರು ಎಂದು ಹೇಳಿದರು. ಆ ಪರಿಬೃಢಿಮತ್ವವು ಎಂತಾದ್ದೆಂಬುದನ್ನು ಈಗ ವರ್ಣಿಸುವವರಾಗಿ ಅತ್ಯದ್ಭುತವಾಗಿ ವರ್ಣಿಸಲು ಅಶಕ್ಯವಾಗಿರುವ **ಉಭಯ ವಿಭೂತಿ ನಾಯಕತ್ವವೆಂದು ಹೇಳುತ್ತಾರೆ** ಸರ್ವೇಶ್ವರನಾಗಿ ಆತನಿಗೆ **ಪರಿಬೃಢಿಮ ಸ್ವಭಾವ** ಮಾಹಾತ್ಮ್ಯೆ ಇದ್ದರೆ, ಅಂತಹ ಸ್ವಾಮಿಗೆ ನಿಯಾಮ್ಯವಾಗಿ **ಸ್ವಂ** ಯಾವುವು? ಎಂದರೆ ಉಭಯ ವಿಭೂತಿಯು; ಲೀಲಾ ವಿಭೂತಿಯೂ ಮತ್ತು ನಿತ್ಯ ವಿಭೂತಿಯೂ. **ವಿಭೂತಿ** ಎಂದರೆ ಸ್ವಾಮಿಯ ನಿಯಾಮ್ಯವರ್ಗವು. ಅದನ್ನೆಲ್ಲಾ ವಿವರಿಸಿ ಈ ಶ್ಲೋಕದಲ್ಲಿ ಹೇಳುತ್ತಾರೆ.

ಈ ಶ್ಲೋಕವು ಅದ್ವೈತಾಭಿಪ್ರಾಯವನ್ನು ದೂರೀಕರಿಸುವ ಶ್ಲೋಕವು ಏಕಾತ್ಮವಾದಿಗಳಿಗೆ ಈ ಜಗತ್ತೂ, ನಿತ್ಯ ವಿಭೂತಿಯೂ, ಎಲ್ಲವೂ ಮಿಥ್ಯೆಯು, ಮೋಕ್ಷವು ಸ್ವರೂಪೈಕ್ಯರೂಪವಾದುದೆನ್ನುವವರಿಗೆ ದಿವ್ಯ ವೈಕುಂಠವೂಕೂಡ ಕಾರ್ಯದಲ್ಲಿ ಸೇರಿದುದಾಗಿ ಅನಿತ್ಯವು. ಶ್ರೀ ನಿಗಮಾನ್ತ ದೇಶಿಕರವರು ಈ ಶ್ಲೋಕ ಭಾಷ್ಯದಲ್ಲಿ ನಿಪುಣತರವಾಗಿ ಆ ಅಭಿಪ್ರಾಯಗಳನ್ನೆಲ್ಲಾ ನಿರಾಕರಿಸಿರುತ್ತಾರೆ. ನಮಗಾದರೋ, ಲೀಲಾ ವಿಭೂತಿಯು ಅಶಾಶ್ವತವಾದುದ್ದಾದರೂ ಪ್ರವಾಹತಃ ನಿತ್ಯವು. ನಿತ್ಯ ವಿಭೂತಿಯಾದರೋ ಜಗತ್ಸೃಷ್ಟಿಲಯಾದಿಗಳಿಗೆ ಸಿಕ್ಕದೆ ಶಾಶ್ವತವಾಗಿ ಅಲ್ಲಿಗೆ ಹೋಗಿ ಸೇರಿದವರು ಪರಮ ಪುರುಷಸಾಯುಜ್ಯವನ್ನು ಹೊಂದಿ ನಿತ್ಯ ಮುಕ್ತರೊಂದಿಗೆ ಪರಿಪೂರ್ಣ ಬ್ರಹ್ಮಾನುಭವವನ್ನು ಮಾಡುತ್ತಾ ಪುನರಾವೃತ್ತಿಯಿಲ್ಲದೆ ಶಾಶ್ವತ ಸುಖಾನುಭವವನ್ನು ಹೊಂದಿ ಸ್ವಾಮಿಗೆ ನಿತ್ಯ ಕೈಂಕರವನ್ನೆಸಗುತ್ತಾ ಇರುವರೆಂಬುದು ನಮ್ಮ ಸಿದ್ಧಾನ್ತವು.

**ಅರ್ಥವು.** ಪರಿಬೃಢನಾದ ಸರ್ವೇಶ್ವರನಿಗೆ ನಿಯಾಮ್ಯವರ್ಗಗಳು ಯಾವುವೆಂದರೆ, ಹೇಳುತ್ತಾರೆ; **ಯದಂಡಂ**–ಸ್ವಾಮಿಯು ಸೃಷ್ಟ್ಯುನ್ಮುಖನಾಗಿ ಸಙ್ಕಲ್ಪಿಸಿದ ಒಡನೆಯೇ ಎರಡುವಿಧ ಸೃಷ್ಟಿಗಳಾಗುತ್ತವೆ :– (೧) **ಸಮಷ್ಟಿ ಸೃಷ್ಟಿ**– ಇದನ್ನು ವ್ಯಷ್ಟಿಸೃಷ್ಟಿಗೆ ಅನುಕೂಲವಾಗುವಹಾಗೆ ಸರ್ವೇಶ್ವರನೇ ಸ್ವತಃ ನಡೆಸಿ, ಅನಂತರ ಅಂಡ ಸೃಷ್ಟಿಯನ್ನುಮಾಡಿ ಮುಂದಿನ ವ್ಯಷ್ಟಿಸೃಷ್ಟಿಯನ್ನೆಲ್ಲಾ ಚತುರ್ಮುಖನ ಮೂಲಕ ನಡೆಸುವನು; ಹೀಗೆ ವ್ಯಷ್ಟಿಸೃಷ್ಟ್ಯುನ್ಮುಖನಾದಾಗ ಕೋಟಿ ಬ್ರಹ್ಮಾಂಡಗಳು ಉತ್ಪನ್ನವಾಗುತ್ತವೆ. ಆದುದರಿಂದ ಇಲ್ಲಿ ಅಂಡ ಶಬ್ದವು ಜಾತ್ಯೇಕ ವಚನವು. ಸರ್ವೇ

ಶ್ವರನು ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನು; ಆದುದರಿಂದ **ಯದಂಡಂ**- ಯಾವಹೈಮವಾದ ಹಿರಣ್ಯರೂಪವಾದ ಬ್ರಹ್ಮಾಂಡ ಉಂಟೋ, ಮತ್ತು **ಯತ್ ಅಂಡಾಂತರಗೋಚರಂ**- ಈ ಅಂಡದೊಳಗೆ ತೋರಿಬರುವ, ಭೋಗ್ಯ ಭೋಗೋಪಕರಣ ಭೋಗಸ್ಥಾನದ ರೂಪದಲ್ಲಿ ನಮಗೆ ಗೋಚರವಾಗುವ ಲೀಲಾ ವಿಭೂತಿ ಯಾವುದೋ, ಆ ಅಂಡದ ಒಳಗೆ ತೋರಿಬರುವವನ್ನೆಲ್ಲಾ ನಿರೂಪಿಸುತ್ತಾರೆ.- **ಯಾನಿ ದಶೋತ್ತರಾಣಿ ಆವರಣಾನಿ**- ಪೃಥಿವೀ ಅಪ್ಪುತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ತತ್ವ ಇವೇ ಮೊದಲಾದ ಹತ್ತು ಹತ್ತರಷ್ಟಾದ ಆವರಣಗಳೆಂದು ಶಾಸ್ತ್ರದಲ್ಲಿ ಹೇಳಲ್ಪಡುವುವು ಯಾವುವೋ, ಮತ್ತು **ಯಾಗುಣಾಃ**- ಮೂಲ ಪ್ರಕೃತಿಗೆ ಕಾರಣಭೂತವಾದ ಸತ್ವರಜಸ್ತಮೋ ಗುಣಗುಳು ಯಾವುವೋ, **ಯತ್ ಪ್ರಧಾನಂ**- ಇವೆಲ್ಲಾಕ್ಕೂ ಕಾರಣ ಭೂತವಾಗಿರುವ ಈ ಗುಣಗಳಿಂದ ಯುಕ್ತವಾದ ಅಚಿತ್ತತ್ವವೆಂಬುದು ಯಾವುದೋ, **ಯಃ ಪುರುಷಃ**- ಇವುಗಳಿಂದ ಬಂಧಿಸಲ್ಪಟ್ಟಿದ್ದರೂ ಈ ಪ್ರಧಾನಕ್ಕಿಂತ ವಿಲಕ್ಷಣನಾಗಿ ಪರಾಪ್ರಕೃತಿ ಎಂದು ಹೇಳಿಸಿಕೊಳ್ಳುವ ಬದ್ಧ ಚೇತನವರ್ಗವೇನು, ಇದೂ ಜಾತ್ಯೇಕ ವಚನವು; ಇವಿಷ್ಟೂ ಲೀಲಾ ವಿಭೂತಿಗೆ ಸೇರಿದವು; ಮುಂದೆ ನಿತ್ಯ ವಿಭೂತಿಗೆ ಸೇರಿದವನ್ನು ಹೇಳುತ್ತಾರೆ. **ಯತ್ ಪರಂಪದಮ್**- ದಿವ್ಯವೈಕುಂಠವೆಂಬುದು ಯಾವುದುಂಟೋ, **ಪರಾತ್ಪರಮ್, ಪರಾತ್**- ಶ್ರೇಷ್ಠ ಪ್ರಕೃತಿಯಾದ ಬದ್ಧ ಜೀವ ವರ್ಗಕ್ಕಿಂತ, ಪರಮ್ ಶ್ರೇಷ್ಠವಾದ ಮುಕ್ತ ನಿತ್ಯ ಜೀವ ವರ್ಗವೆಂಬುದು ಯಾವುದುಂಟೋ, **ಯತ್‌ಬ್ರಹ್ಮ ಚ**- ಯಾವ ನಿನ್ನ ದಿವ್ಯ ಮಂಗಳ ವಿಗ್ರಹವಾಗಿ ವಾಸುದೇವ ಮೊದಲಾದ ರೂಪವೆಂಬುದು ಯಾವುದುಂಟೋ, ಇವೆಲ್ಲವೂ, **ತೇ**- ಅಪರಿಮಿತ ಸತ್ಯವಾದ ವಿಭೂತಿಗಳನ್ನೆಲ್ಲಾ ಅಪ್ರಥಕ್ಸಿದ್ಧ ವಿಶೇಷವಾಗಿರುವ ಪರಿಪೂರ್ಣ ಬ್ರಹ್ಮವಾದ ನಿನ್ನ, **ವಿಭೂತಯಃ**- ನಿಯಾಮ್ಯ ವರ್ಗವು. ಹೀಗೀಗ ಅನಂತಾದ್ಭುತವಾದ ವಿಭೂತಿಯೋಗವುಳ್ಳವನಾಗಿರುವಾಗ ನಿನ್ನ ಐಶ್ವರವನ್ನುವರ್ಣಿಸಲು ಸಾಧ್ಯವೇ ಎಂಬ ಭಾವವು ತೋರಿಬರುತ್ತದೆ.

**ಉಪಪಾದನೆಯು**- ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಪರಿಬೃಢತ್ವವನ್ನು ತನಗೇನೇ ಅಸಾಧಾರಣವಾದ ವಿಭೂತಿಯ ನಿರತಿಶಯ ಮಾಹಾತ್ಮ್ಯಯ ಮೂಲಕ ಸಮರ್ಥಿಸುತ್ತಾರೆ. **"ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗ ಮೈಶ್ವರಮ್"** ಎಂದು (ಗೀ. ೧೧. ೮.) ಶ್ರೀಕೃಷ್ಣಭಗವಾನರವರು ಅರ್ಜುನನಿಗೆ ವಿಭೂತಿಗಳ ಮಹಿಮೆಯನ್ನು ಸ್ವಲ್ಪಮಟ್ಟಿಗೆ ಪ್ರದರ್ಶಿಸಿರುತ್ತಾರೆ. **ಯದಂಡಂ**- ಇಲ್ಲಿ ಯಚ್ಛಬ್ದವು ಪ್ರಸಿದ್ಧಾರ್ಥವುಳ್ಳದು. ಪಿತಾಮಹ ಮೊದಲುಗೊಂಡು ಚತುರ್ದಶ ಭುವನಗಳಾದ ಸರ್ವಜಗತ್ಸೃಷ್ಟಿಗೂ ಕಾರಣ ಭೂತವಾಗಿ ಪ್ರಸಿದ್ಧವು. ಇಲ್ಲಿ **ಅಂಡ** ಶಬ್ದವು ಸಮುದಾಯಾರ್ಥವಾಗಿ ಏಕವಚನವು. **"ಅಂಡಾನಾಂತು**

**ಸಹಸ್ರಾಣಾಂ ಸಹ ಸ್ರಾಣ್ಯಯುತಾನಿಚ|| ಈದೃಶಾನಾಂ ತಥಾ ತತ್ರ ಕೋಟಿ ಕೋಟ್ಯೆಯುತಾನಿಚ"** ಎಂಬ ಪುರಾಣೋಕ್ತಿ ಇರುತ್ತದೆ. **"ಯ ದಂಡ ಹೈಮ ಮಭವತ್"** ಎಂಬ ಮನೂಕ್ತಿಯು ಅದು ಹೇಮ ವರ್ಣವೆಂದು ಹೇಳುತ್ತದೆ.

**ಅಂಡಾಂತರ ಗೋಚರಂ ಯತ್-** ಒಂದು ಅತ್ತಿಮರದಲ್ಲಿ ಅತ್ತಿ ಹಣ್ಣು ಗಳು ಹೇಗೋ ಹಾಗೆ ಅಂಡಗಳು. ಒಂದು ಅತ್ತಿಹಣ್ಣನ್ನು ಒಡದರೆ ಹೇಗೆ ಅಸಂಖ್ಯಾಕವಾದ ಹುಳಗಳೂ, ಕುಸುಮಗಳೂ ಇರುತ್ತವೋ ಹಾಗೆ ಅಂಡದಲ್ಲಿ ರುವ ಚತುರ್ವಿಧಗಳಾದ ವಿವಿಧ ವಿಚಿತ್ರಪ್ರಾಣಿಗಳು. ಅವುಗಳಿಗೆ ಭೋಗ್ಯವಾದವು, ಭೋಗೋಪಕರಣಗಳು, ಭೋಗಸ್ಥಾನಗಳು. ಇವೆಲ್ಲವೂ ಅಂಡಾಂತರದಲ್ಲಿ ಎಂದರೆ ಅಂಡವಲ್ಲಿ ಗೋಚರವಾಗುವುವು ತೋರಿಬರುವುವು.

**ದಶೋತ್ತರಣಾ ನ್ಯಾವರಣಾನಿಚಯಾನಿ-** ತೋಯ, ವಹ್ನಿ, ವಾಯು ಆವರಣಗಳು. ಹಾಗೆ ವಿಷ್ಣು ಪುರಾಣದಲ್ಲಿ ಹೇಳಲ್ಪಟ್ಟಿವೆ.—

**ದಶೋತ್ತರೇಣ ಪಯಸಾ ಮೈತ್ರೇ ಯಾಂಡಂಚ ತದ್ವೃತಮ್|**
**ಸರ್ವೋಂಬು ಪರಿಧಾನೌಸೌ ವಹ್ನಿನಾ ವೇಷ್ಟಿತೋ ಬಹಿಃ|**
**ವಹ್ನಿ ಶ್ಚವಾಯುನಾ ವಾಯು ರ್ಮೈತ್ರೇಯ ನಭಸಾ ವೃತಃ**
**ಭೂತಾದಿನಾ ನಭಸ್ಸೋಪಿ ಮಹತಾ ಪರಿವೇಷ್ಟಿತಃ|**
**ದಶೋತ್ತರಾಣ್ಯ ಶೇಷಾಣಿ ಮೈತ್ರೇಯೈತಾನಿ ಸಪ್ತವೈ||**

ಇತ್ಯಾದಿ ಪ್ರಮಾಣವನ್ನನುಸರಿಸಿ ಪಂಚಭೂತಾದಿಗಳ ಆವರಣಗಳು ಹೇಳ ಲ್ಪಟ್ಟವು.

**ಯಾಃಗುಣಾಃ-** ಎಂದು ಹೇಳಲ್ಪಟ್ಟಿರುವುವು ಯಾವುವು? ಎಂದರೆ, ಗೀತೆಯು ೧೪ನೆಯ ಅಧ್ಯಾಯದಲ್ಲಿ ಉಪಪಾದಿತಗಳಾದ ಸಾತ್ವಿಕ ರಾಜಸ ತಾಮಸ ಗುಣಗಳು. ಇವುಗಳ ಅಸಮತ್ವದಿಂದ ಪಂಚೀಕರಣ ತ್ರಿವೃತ್ಕರಣಗಳು ಹೇಳ ಲ್ಪಟ್ಟ ಅಸಂಖ್ಯೇಯಗಳಾದ **ದ್ರವ್ಯೋತ್ಪತ್ತಿ**ಗಳೆಂದು ಹೇಳಲ್ಪಟ್ಟಿವೆ.

**ಯತ್ ಪ್ರಧಾನಮ್-** ಮಹದಾದಿ ವಿಕಾರಗಳಿಲ್ಲದ ತ್ರಿಗುಣ ದ್ರವ್ಯಕ್ಕೆ ಪ್ರಧಾನಮ್ ಎಂದು ಹೆಸರು. ಇದಕ್ಕೆ ಪ್ರಕೃತಿ ಎಂಬ ಹೆಸರೂ ಉಂಟು. **ಯಃಪುರುಷಃ-** ಇಲ್ಲಿ ಪ್ರಕೃತಿಯ ವಿಕಾರವಾದ ದೇಹವೆಂಬ ಪುರಿಯಲ್ಲಿ ಶಯನಿ ಸಿರುವವನು ಎಂಬ ವ್ಯುತ್ಪತ್ತಿಯ ಮೂಲಕ ಪ್ರಕೃತಿಯುಕ್ತನಾದ ಜೀವಾತ್ಮ ವರ್ಗವು ಇಲ್ಲಿ ಹೇಳಲ್ಪಟ್ಟಿತು. **ಅಂಡಾಂತರಗೋಚರಂ** ಎಂಬಲ್ಲೇ ಈ ಪ್ರಧಾನ ಪುರುಷರು ಅಂತರ್ಗತರಾದರು. ಅಲ್ಲಿ ಎಲ್ಲವನ್ನೂ ಒಟ್ಟುಕೂಡಿಸಿ ಹೇಳಿದುದಾ ಗಿಯೂ ಇಲ್ಲಿ ವಿವೇಕಿಸಿಹೇಳಿದುದಾಗಿಯೂ ಭಾವಿಸಬಹುದು. **ಪ್ರಕೃತಿಂ ಪುರುಷಂ**

**ಚೈವ ವಿದ್ಧ್ಯನಾದಿ ಉಭಾವಪಿ** (ಗೀ. ೧೩. ೧೯.) ಇವೆರಡೂ ಅನಾದಿಯಾಗಿ, ಸರ್ವೇಶ್ವರನಿಗೆ **"ಸೂತ್ರೇಮಣಿಗಣಾವಿವ"** ಎಂಬಲ್ಲಿ ಹೇಳಿರುವಹಾಗೆ ಅಪ್ರಥಕ್ಸಿದ್ಧ ವಿಶೇಷಣಗಳಾಗಿರುವದರಿಂದ ಮಿಥ್ಯಾವಾದವು ದೂರೋತ್ಸಾರಿತವು. ಅಂಡಾಂತರ ಗೋಚರ ಶಬ್ದದಲ್ಲೇ ಇವು ಹೇಳಲ್ಪಟ್ಟರೂ ಪೃಥಕ್ಕಾಗಿ ಇವುಗಳಿರುವುವು ಎಂಬರ್ಥ ಉಂಟಾಗಬಹುದು. ಆದರೆ **ಪ್ರಕೃತಿಂ ಪುರುಷಂ ಚೈವ** ಎಂದು ಒಟ್ಟಿಗೆ ಹೇಳಿ, ಪುರುಷ ಶಬ್ದ ವ್ಯುತ್ಪತ್ತಿಯಿಂದ **"ದಾರುಣ್ಯಗ್ನಿರ್ಯಥಾ ತೈಲಂ ತಿಲೇ ತದ್ವತ್ಪು ಮಾನಪಿ| ಪ್ರಧಾನೇವಸ್ಥಿತೋವ್ಯಾಪೀ"** ಎಂಬಿವೇ ಪ್ರಮಾಣಗಳಿಂದ ದಾರುವಿನಲ್ಲಿ ಅಗ್ನಿಯೂ, ಎಳ್ಳಿನಲ್ಲಿ ಎಣ್ಣೆಯೂ ಹೇಗೆ ಒಟ್ಟಿಗಿವೆಯೋ ಹಾಗೆ ಇವೂ ಒಟ್ಟಿಗಿವೆ ಎಂಬ ಭಾವವು ಇಲ್ಲಿಸೂಚಿತವು. **"ಅನೇನ ಜೀವೇನಾತ್ಮ ನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ"** ಎಂದು ಶ್ರುತಿಯು ಹೇಳುವ ಹಾಗೆ ಹೀಗೆ ಅಚಿತ್ತತ್ವವೂ ಚಿತ್ತತ್ವವೂ ಒಟ್ಟಿಗೆ ಸೇರಿ ಕೊಂಡಿದ್ದು ಪರಮಾತ್ಮನ ಅನುಪ್ರವೇಶವಿರುವದರಿಂದಲೇ ನಾಮ ರೂಪಗಳನ್ನು ಹೊಂದಲು ಅರ್ಹತೆಯುಂಟಾಯಿತೆಂದು ತಿಳಿಯತಕ್ಕದ್ದು. ಹೀಗೆ ಪರಮ ಪುರುಷನು ಯಾವಾಗಲೂ ಈ ಚಿದಚಿತ್ತುಗಳೊಂದಿಗೆ ವಿಶಿಷ್ಟನಾಗಿ ಇದ್ದಾನೆ. ಪ್ರಳಯದಲ್ಲಿ ಸೂಕ್ಷ್ಮಚಿದಚಿದ್ವಿಶಿಷ್ಟನಾಗಿ ಇರುತ್ತಾನೆ. ಪ್ರಮಾಣವು. **"ತಮಸಾಗೂಢ ಮಗ್ರೇ ಪ್ರಕೇತಮ್"** ಎಂಬ ಶ್ರುತಿಯು; ಸೃಷ್ಟಿಯಲ್ಲಿ ಸ್ಥೂಲಚಿದ ಚಿದ್ವಿಶಿಷ್ಟನಾಗಿರುವನು; ಪ್ರಮಾಣವು "ಅನೇನ ಜೀವೇನಾತ್ಮ ನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" ಎಂಬ ಶ್ರುತಿಯು.

ಇಲ್ಲಿವರೆಗೂ ಲೀಲಾ ವಿಭೂತಿಯನ್ನೆಲ್ಲಾ ಹೇಳಿದರು. ಮುಂದೆ ನಿತ್ಯ ವಿಭೂತಿಯನ್ನು ವಿವರಿಸುತ್ತಾರೆ. ಏಕಪಾದ್ವಿಭೂತಿಯು ಸೃಷ್ಟಿಲಯಗಳಿಗೆ ಸೇರಿದ ಲೀಲಾ ವಿಭೂತಿಯು; ತ್ರಿಪಾದ್ವಿಭೂತಿಯು, ನಿತ್ಯ ವಿಭೂತಿಯು; ಇದು ಸೃಷ್ಟಿ ಲಯಗಳಿಗೆ ಸೇರದೇ ಇರುವುವು. ಅವು ಯಾವುವೆಂದರೆ.

**ಪರಂಪದಂಯತ್- ಪದ್ಯತೇ ಇತಿಪದಂ** ಎಂಬ ವ್ಯುತ್ಪತ್ತಿಯ ಮೂಲಕ ಪ್ರಪನ್ನರ ಪ್ರಾಪ್ಯಸ್ಥಾನವಾದ ದಿವ್ಯ ವೈಕುಂಠವು. ಪುನರಾವೃತ್ತಿಯಿಲ್ಲದ ಶಾಶ್ವತವಾದ ಮುಕ್ತರ ಸ್ಥಾನವು. ಇದ **ಕೌಷೀತಿಕೀ ಬ್ರಾಹ್ಮಣದಲ್ಲಿ** ಉಪಪಾದಿತವು. ಆದುದರಿಂದ ಸ್ವರೂಪೈಕ್ಯವಾದವು ದೂರೀಕೃತವು. ಮೋಕ್ಷವೆಂಬುದು ಪರಮ ಪುರುಷ ಸಾಯುಜ್ಯವು. ಪರಿಪೂರ್ಣಬ್ರಹ್ಮಾನುಭವವೂ, ತದ್ದ್ವಾರಾ ಬ್ರಹ್ಮಾನಂದವೂ ಆತನಿಗೆ ಕೈಂಕರ್ಯವೂ. ಹೀಗೆ ಹೇಳಲು ಶ್ರುತಿ ಪ್ರಮಾಣಗಳಿವೆ.— **"ಯೋಅಸ್ಯಾಧ್ಯಕ್ಷಃ ಪರಮೇವ್ಯೋಮನ್, ಹಿರಣ್ಮಯೇ ಪರೇಲೋಕೇ ವಿರಜಂ ಬ್ರಹ್ಮ ನಿಷ್ಕಳಮ್|" "ಪಾದೋಸ್ಯವಿಶ್ವಾಭೂತಾನಿ ತ್ರಿಪಾದಸ್ಯಾಮೃತಂದಿವಿ" "ತೇಹನಾಕಂಮಹಿಮಾನ ಸ್ಸಚನ್ತೇಯತ್ರ ಪೂರ್ವೇ ಸಾಧ್ಯಾ ಸ್ಸಂತಿದೇವಾಃ"**

(ತೈ. ಉಪ) ಈ ಪ್ರಮಾಣಗಳಲ್ಲೆಲ್ಲಾ ದಿವ್ಯವೈಕುಂಠವು **"ಪರಮ ವ್ಯೋಮ್"** ಎಂದು ಹೇಳಲ್ಪಟ್ಟಿರುತ್ತದೆ. ಈ ಲೀಲಾವಿಭೂತಿಯನ್ನು ಏಕಪಾದ್ವಿಭೂತಿಯೆಂದೂ, ನಿತ್ಯವಾದ ಸೃಷ್ಟಿ ಪ್ರಳಯಗಳಿಗೆ ಸಿಕ್ಕದ ನಿತ್ಯವಿಭೂತಿಯನ್ನು ತ್ರಿಪಾದ್ವಿಭೂತಿ ಎಂದೂ, ಹೇಳಲ್ಪಟ್ಟಿರುತ್ತದೆ. **ನಾಕ** ಶಬ್ದದಿಂದಲೂ ದಿವ್ಯ ವೈಕುಂಠವೇ ಹೇಳಲ್ಪಟ್ಟಿರುತ್ತದೆ. ಸ್ವರ್ಗವಲ್ಲವು. **"ತೇ ಬ್ರಹ್ಮಲೋಕೇತು ಪರಾನ್ತಕಾಲೇಪರಾಮೃತಾತ್ಪರಿ ಮುಚ್ಯಂತಿ ಸರ್ವೇ"** ಎಂಬಲ್ಲಿ **ಬ್ರಹ್ಮಲೋಕೇ** ಎಂಬುದರಿಂದ ಚತುರ್ಮುಖ ಲೋಕವು ಹೇಳಲ್ಪಡಲಿಲ್ಲವು. ಭಗವಲ್ಲೋಕವಾದ ದಿವ್ಯ ವೈಕುಂಠವು ಹೇಳಲ್ಪಟ್ಟಿತು. ಸತ್ಯವಾದ ದಿವ್ಯ ವೈಕುಂಠಲೋಕವಿಲ್ಲವು ಎಂದೂ, ಮುಕ್ತಿ ಎಂದರೆ ಸ್ವರೂಪೈಕ್ಯವೆಂದೂ ಹೇಳುವವಾದಗಳು ಈ ಶ್ರುತಿಗಳಿಗೆ ಪರಮ ವಿರುದ್ಧವು. **ಸದಾ ಪಶ್ಯಂತಿ ಸೂರಯಃ** ಎಂಬ ನಿತ್ಯಸೂರಿಗಳ ವಿಷಯದಲ್ಲಿ ಪಶ್ಯಂತಿ ಎಂದು ಹೇಳಿರುವದರಿಂದ ಮುಕ್ತಿ ಎಂದರೆ ಸಾಯುಜ್ಯವೆಂಬುದೇ ಅರ್ಥವು. **ಪಶ್ಯಂತಿ** ಎಂಬ ಬಹುವಚನದಿಂದಲೂ ಏಕಾತ್ಮವಾದವೂ ನಿರಸ್ತವು. ಹೀಗೆ ಇನ್ನೂ ಅನೇಕ ಶ್ರುತಿ ಪ್ರಮಾಣಗಳುಂಟು:— **ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ, ಏವಂ ಹವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿ ರುನ್ನೀಯತೇ ಬ್ರಹ್ಮಲೋಕಮ್"** ಪ್ರಾಕೃತ ಶರೀರವು ತೊಲಗಿ ಪಾಪಗಳಿಂದ ಬಿಡಲ್ಪಟ್ಟವನಾಗಿ ಸಾಮಗಾನದೊಂದಿಗೆ ದಿವ್ಯ ವೈಕುಂಠ ಲೋಕವನ್ನು ಕುರಿತು ಕರಿದುಕೊಂಡು ಹೋಗಲ್ಪಡುವನು ಎಂದು ಹೇಳಲ್ಪಟ್ಟಿರುತ್ತದೆ. ಇಲ್ಲಿಯೂ **ಬ್ರಹ್ಮಲೋಕಂ** ಎಂದರೆ ವೈಕುಂಠವು. **"ವಿಜ್ಞಾನ ಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ। ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್"** (ಕಠ೧.೩.೯.) ಯಾವ ಐಹಿಕಗಳಲ್ಲಿ ರಮಿಸದೇ ಇರುವ ನರವುಂಟೋ ಅಂತಹ ಯಾವನಿಗೆ ವಿವೇಕ ಬುದ್ಧಿಯೇ ತನ್ನ ಶರೀರವೆಂಬ ರಥವನ್ನು ನಡೆಸುವ ಸಾರಥಿಯೋ, ಮತ್ತು ಇಂದ್ರಿಯಗಳೆಂಬ ದುಷ್ಟ ಹಯಗಳಿಗೆ ಮನಸ್ಸೆಂಬುದೇ ಲಗಾಮೋ, ಅಂತವನು ಬಹುದೂರವಲ್ಲಿರುವ ದಿವ್ಯ ವೈಕುಂಠವೆಂದೆನಿಸುವ ಶಾಶ್ವತವಾಗಿ ಸರ್ವೋತ್ಕೃಷ್ಟವಾದ ಶ್ರೀ ಮಹಾವಿಷ್ಣುವಿನ ಸ್ಥಾನವನ್ನು ಹೋಗಿಸೇರುವನು. **ಸಖಲ್ವೇವಂ ವರ್ತಯನ್ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ** (ಇದು ಛಾಂದೋಗ್ಯದ ಕೊನೆಯವಾಕ್ಯವು) ಉಪಾಸನವನ್ನು ದೇಹಾವಸಾನದವರೆಗೂ ಮಾಡಬೇಕಾಗಿರುವದರಿಂದ ಆಯುಸ್ಸು ಇರುವವರೆಗೂ ಹೀಗೆಯೇ ಉಪಾಸನೆಯನ್ನು ಮಾಡುತ್ತಿದ್ದರೆ ದಿವ್ಯ ವೈಕುಂಠವನ್ನು ಹೋಗಿ ಸೇರುವನು. ಆತನು ಪುನಃ ಜನ್ಮವನ್ನು ಹೊಂದುವದಿಲ್ಲವು; ಏಕೆಂದರೆ ಆತನಿಗೆ ಕರ್ಮ ಶೇಷವಿಲ್ಲವು; ಅಲ್ಲಿಗೆ

ಹೋಗಿಸೇರಿದವನು ಈ **ದುಃಖಾಲಯ ಮಶಾಶ್ವತವಾದ** ಭೂಲೋಕಕ್ಕೆ ಹೋಗಬೇಕೆಂದು ಸಙ್ಕಲ್ಪಿಸುವದಿಲ್ಲವು. ಪರಮಾತ್ಮನಿಗೂ ಈತನು ಅತ್ಯರ್ಥ ಪ್ರಿಯನಾದುದರಿಂದ ಅಂತವನು ತನ್ನನ್ನು ಎಂದಿಗಾದರೂ ಬಂದು ಸೇರುವನೇ ಎಂದು ಅವಸರ, ಪ್ರತೀಕ್ಷೆಯಲ್ಲಿರುವವನು, ಈ ಹೇಯವಾದ ಲೋಕಕ್ಕೆ ಹೋಗುವದನ್ನು ಎಂದಿಗಾದರೂ ಸಮ್ಮತಿಸುವನೋ? ಆದುದರಿಂದ ದಿವ್ಯ ವೈಕುಂಠ ಸೇರಿದ ನಂತರ, ಪುನಃ ಭೂಲೋಕಕ್ಕೆ ಬರುವದಿಲ್ಲವು ಎಂಬುದು ಶ್ರುತ್ಯರ್ಥವು. ಮಹಾಭಾರತದಲ್ಲಿ ಈ ದಿವ್ಯ ವೈಕುಂಠವು **ಪರಂಪದಂ** ಎಂದುಹೇಳಲ್ಪಟ್ಟು, ಆದುದರಿಂದಲೇ ಇದಕ್ಕೆ ಮಿಕ್ಕ ಲೋಕಗಳನ್ನು ಹೋಲಿಸಿದರೆ **"ಏತೇ ವೈ ನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ"** ನರಕಕ್ಕೆ ಸಮಾನವಾದವೆಂದು ಶ್ರೀ ಪರಾಶರರು ತಮ್ಮ ಶಿಷ್ಯರಾದ ಮೈತ್ರೇಯರಿಗೆ ಉಪದೇಶಿಸಿರುತ್ತಾರೆ. **ಪರಂಪದಂ** ಏಕೆ ಎಂದರೆ ಅಲ್ಲಿ ಹೋಗಿ ಸೇರಿದವರಿಗೆ ಶೋಕಾದಿಗಳು ಯಾವುವೂ ಇಲ್ಲವೆಂದೂ ಅವರು ಪುನಃ ಹಿಂದಕ್ಕೆ ಬರುವದಿಲ್ಲವೆಂದೂ **"ಯತ್ರಗತ್ವಾನಶೋಚನ್ತಿನಚ್ಯವಂತಿ ವ್ಯಥನ್ತಿಚ"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. **"ತೇತುತದ್ಬ್ರಹ್ಮಣಸ್ಸ್ಥಾನಂ ಪ್ರಾಪ್ನುವಂತೀಹ ಸಾತ್ವಿಕಾಃ। ನೈವತೇ ಸ್ವರ್ಗ ಮಿಚ್ಛನ್ತಿನ ಯಜನ್ತಿಯಶೋಧನಾಃ।"** ಎಂದೂ, **"ಬ್ರಹ್ಮಣಸ್ಸದನಾತ್ತಸ್ಯಪರಂ ಸ್ಥಾನಂ ಪ್ರಕಾಶತೇ"** (ಅರಣ್ಯ ಪರ್ವ) ಈ ವೈಕುಂಠವು ಚತುರ್ಮುಖನ ಲೋಕಕ್ಕಿಂತಲೂ ವಿಲಕ್ಷಣವಾಗಿ ಪ್ರಕಾಶಿಸುವ ಸ್ಥಾನವೆಂದು: ಹೇಳಲ್ಪಟ್ಟಿರುತ್ತವೆ. ಭಗವಂತನನ್ನು ಕುರಿತು ದೇವತೆಗಳು ಹೇಳುತ್ತಾರೇನೆಂದರೆ– **"ದಿವ್ಯಂ ಸ್ಥಾನ ಮಜರಂ ಚಾ ಪ್ರಮೇಯಂ ದುರ್ವಿಜ್ಞೇಯಂ ಚಾ ಗಮ್ಯೈರ್ಗಮ್ಯ ಮಾದ್ಯಮ್। ಗಚ್ಛ ಪ್ರಭೋ ರಕ್ಷ ಚಾಸ್ಮಾನ್ಪ್ರಪನ್ನಾನ್ ಕಲ್ಪೇಕಲ್ಪೇ ಜಾಯಮಾನ ಸ್ಸ್ವಮೂರ್ತ್ಯಾ"** ದಿವ್ಯ ವೈಕುಂಠ ಲೋಕಕ್ಕೆ ಹೋಗಬೇಕೆಂದು ಪ್ರಾರ್ಥಿಸಿರುತ್ತಾರೆ. **"ಅತ್ಯರ್ಕಾನಲ ದೀಪ್ತಂತತ್ ಸ್ಥಾನಂ ವಿಷ್ಣೋರ್ಮಹಾತ್ಮನಃ। ಯಶಯ ಸ್ತತ್ರ ಗಚ್ಛನ್ತಿ ದೇವಂ ನಾರಾಯಣಂಹರಿಮ್। ಪರೇಣ ತಪಸಾಯುಕ್ತಾ ಭಾವಿತಾಃ ಕರ್ಮಭಿಶ್ಶುಭೈಃ। ಯೋಗಸಿದ್ಧಾ ಮಹಾತ್ಮಾನ ಸ್ತಮೋಮೋಹ ವಿವರ್ಜಿತಾಃ। ತತ್ರಗತ್ವಾಪುನರ್ನೇಮಂ ಲೋಕ ಮಾಯಾನ್ತಿ ಭಾರತ॥** ಎಂದೂ ಈ ವಿಷ್ಣುವಿನ ವೈಕುಂಠ ಲೋಕವು ಸೂರ್ಯಾಗ್ನಿಗಳ ತೇಜಸ್ಸಿಗಿಂತಲೂ ವಿಲಕ್ಷಣ ತೇಜಸ್ಸಿನಿಂದ ಕಂಗೊಳಿಸುವಂತಾದ್ದು; ಯಜ್ಞದಾನ ತಪಸ್ಸುಗಳಿಂದ ಅನುಗೃಹೀತವಾದ ಉಪಾಯಾನುಷ್ಠಾನದಿಂದ ಮಹಾತ್ಮರು ತಮೋಗುಣ ಮೋಹ ಇವುಗಳಿಂದ ಬಿಡಲ್ಪಟ್ಟವರಾಗಿ ಅದನ್ನು ಹೋಗಿ ಸೇರುವರು; ಅಲ್ಲಿಗೆ ಹೋದವರು ಪುನಃ ಈ ಲೋಕಕ್ಕೆ ಬರುವದಿಲ್ಲವು; ಹೀಗೆ ಶ್ರೀ ವೇದವ್ಯಾಸರು ಯುಧಿಷ್ಠಿರಾದಿಗಳಿಗೆ ಉಪದೇಶಿಸಿರುತ್ತಾರೆ. ಇಲ್ಲಿ

ಹೇಳಿರುವ ಲೋಕವು ದಿವ್ಯ ವೈಕುಂಠವಲ್ಲವೆಂದೂ ಅಂಡದೊಳಗಿರುವ ಪ್ರಕೃತಿ ಮಂಡಲದೊಳಗೇ ಇರುವ ಒಂದು ಲೋಕವೆಂದು ಕೆಲವರು ಹೇಳುವರು, ಆದರೆ ಪುನಃ ಈ ಲೋಕಕ್ಕೆ ಬರ-ವದಿಲ್ಲವೆಂದು ಹೇಳಿರುವದರಿಂದ ದಿವ್ಯ ವೈಕುಂಠ ಲೋಕವೆಂದೇ ಅರ್ಥಮಾಡಲು ಏನೊಂದು ವಿರೋಧವಿಲ್ಲವು. ಆಗಲಿ ಯುಧಿಷಿ ರಾದಿಗಳಿಗೆ ಅದನ್ನು ಪ್ರಕಾಶಪಡಿಸಿದುದು ಹೇಗೆ? ಎಂದರೆ **"ವ್ಯಾಸಪ್ರಸಾದಾಚ್ಛ್ರುತವಾ೯"** ಎಂದು ಸಂಜಯರಿಗೆ ಹೇಗೆ ಋಷಿ ಪ್ರಭಾವದಿಂದ ಲಭಿಸಿತೋ ಹಾಗೆಯೇ ಯುಧಿಷ್ಠಿರಾದಿಗಳಿಗೂ ಎಂದು ಭಾವಿಸುವದರಲ್ಲಿ ಏನೊಂದೂ ದೋಷವಿಲ್ಲವು.

**ಯಾಜ್ಞವಲ್ಕ್ಯ ಸ್ಮೃತಿಯಲ್ಲಿ– "ಓಂಕಾರ ರಥಮಾರುಹ್ಯ, ಮನಃ ಕೃತ್ವಾತು ಸಾರಥಿಮ್। ಬ್ರಹ್ಮಲೋಕ ಪದಾನ್ವೇಷೀ ಯಾತಿ ವಿಷ್ಣೋಃ ಪರಂಪದಮ್"** ಓಂಕಾರೋಚ್ಚಾರಣವನ್ನೇ ರಥವನ್ನಾಗಿಯೂ, ನಿರ್ಮಲ ಮನಸ್ಸನ್ನೇ ಸಾರಥಿಯನ್ನಾಗಿಯೂ, ಮಾಡಿಕೊಂಡು, ಭಗವಂತನ ಲೋಕವನ್ನು ಸೇರಬೇಕೆಂದಿರುವವನು ವಿಷ್ಣುವಿನ ದಿವ್ಯ ವೈಕುಂಠವನ್ನು ಹೋಗಿ ಸೇರುವನು. ಹಾಗೆಯೇ ಶ್ರುತಿಯಲ್ಲೂ **"ಪ್ರಣವೋ ಧನುಶ್ಶರೋ ಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯ ಮುಚ್ಯತೇ ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್"** ಇಲ್ಲಿ ತನ್ಮಯತ್ವವು ಪರಮಾತ್ಮಸಾಯುಜ್ಯವು ದಿವ್ಯ ವೈಕುಂಠದಲ್ಲಿ **"ಅಕ್ಷಂದಶ ಪ್ರಾಣಮುಧರ್ಮಧತ್ವಾ ಚಕ್ರೇಽಭಿಮಾನಂ ರಥನಂ ಚ ಜೀವಮ್। ಧನುರ್ಹಿ ತಸ್ಯ ಪ್ರಣವಂ ಪರಸ್ತಿ ಶರಂತು ಜೀವಮ್ ಪರಮೇವ ಲಕ್ಷ್ಯಮ್"** ಇದು ಮೇಲಿನ ಶ್ರುತಿಯ ಉಪಪಾದನೆಯು.

ಪ್ರವಾಹತಃ ನಿತ್ಯವಾಗಿಯೂ ಮತ್ತು ಇಲ್ಲೆಲ್ಲಾ ಸ್ಥಾನವನ್ನು ಬೋಧಿಸುವ ಶಬ್ಧಗಳಿದ್ದರೂ, ಸ್ಥಾನ ಶಬ್ದದಿಂದ ಸ್ವಾಮಿಯ ಸ್ವರೂಪವು ಹೇಳಲ್ಪಟ್ಟಿತೆಂದೂ ಅದನ್ನು ಹೋಗಿ ಸೇರುವರೆಂದು ಅರ್ಥಮಾಡಿರುತ್ತಾರೆ. ಇದು ಸರಿಯಲ್ಲವೆಂದು **ಷಡರ್ಥ ನಿರ್ಣಯದಲ್ಲಿ** ಸ್ಥಾನ ಶಬ್ದದಿಂದ ನಿವಾಸ ಸ್ಥಾನವೇ ಹೇಳಲ್ಪಟ್ಟಿದುದು ಎಂದು ಸ್ಥಾಪಿಸಿರುತ್ತಾರೆ. ಆ ಸ್ಥಾನವು ಎಂತಾದ್ದು? ಎಲ್ಲಿರುತ್ತದೆ? ಎಂಬ ವಿಷಯದಲ್ಲಿ **"ಕ್ಷಯನ್ತ ಮಸ್ಯರಜಸಃ ಪರಾಕೇ" "ಆದಿತ್ಯ ವರ್ಣಂ ತಮಸಃ ಪರಸ್ತಾತ್** ಎಂಬ ಶ್ರುತಿಗಳಿಂದ ರಜಸ್ತಮೋಗುಣಗಳುಳ್ಳ ಪ್ರಕೃತಿಯ ಲೋಕಕ್ಕಿಂತಲೂ ಆಚೆಗೆ ಇದೆ ಎಂದು ಹೇಳಿರುತ್ತದೆ. ಇದು ಭಗವಚ್ಛಾಸ್ತ್ರದಲ್ಲೂ ವ್ಯಕ್ತವು. ಇದು ಪ್ರಕೃತಿಯಾದ ಅಕ್ಷರವೆಂಬ ಪರಿಣಾಮ ವಿಶೇಷವೇ ಈಶ್ವರನಿಗೂ ಮುಕ್ತರಿಗೂ ನಿತ್ಯರಿಗೂ ಸಹ ಭೋಗಸ್ಥಾನವೆಂದು ಕೆಲವರು ಹೇಳುವರು. ಈ ಶ್ಲೋಕದಲ್ಲಿ ಮೊದಲು ಪ್ರಧಾನ ಪುರುಷ ಶಬ್ದದಿಂದ ಪ್ರಕೃತಿ ಮಂಡಲವನ್ನು ಮೊದಲುಹೇಳಿ" ಅನಂತರ **ಪರಂಪದಂ** ಎಂದು

ಪೃಥಕ್ಕರಿಸಿ ಹೇಳಿರುತ್ತದೆ. ಇದೂ ಅಲ್ಲದೆ **"ಕಾಲಂ ನ ಪಚತೇ ತತ್ರ ನ ಕಾಲ ಸ್ತತ್ರವೈ ಪ್ರಭುಃ"** "ಆ ಪರಮ ಪದದಲ್ಲಿ ಅಥವಾ ನಿತ್ಯ ವಿಭೂತಿಯಲ್ಲಿ ಕಾಲವು ಇಲ್ಲಿನ ಹಾಗೆ ಪರಿಣಾಮ ಉಂಟು ಮಾಡಲಾರದು. ಅಲ್ಲಿ ಕಾಲವು ಅಸ ಮರ್ಥವಾದುದು" ಎಂದು ಹೇಳಿರುವದರಿಂದಲೂ ನಿತ್ಯ ವಿಭೂತಿಯು ಒಂದು ಸ್ಥಾನ ವಿಶೇಷವು, ಪರಿಣಾಮ ರಹಿತವಾದ ಪ್ರದೇಶವು.

ಸರ್ವೇಶ್ವರನ ಭಗವತ್ಸ್ವರೂಪದ ವಿಚಿತ್ರ ಶಕ್ತಿಯಿಂದಲಾಗಲಿ ಅಥವಾ ಆತನ ಷಾಡ್ಗುಣ್ಯ ಶಕ್ತಿಯಿಂದಲಾಗಲಿ ದಿವ್ಯ ಲೋಕದ ಹಾಗೆ ತೋರಿ ಬರುತ್ತದೆಂದು ಕೆಲವರು ಹೇಳುವರು. ಇದನ್ನು ನಿರಾಕರಿಸುವದಕ್ಕಾಗಿ ಪ್ರದಾಹತಃ ನಿತ್ಯವಾಗಿರುವ ಸತ್ಯವಾಗಿರುವ ಅಂಡ ಆವರಣಗಳು ಪ್ರಧಾನ ಪುರುಷ ಪರಮ ಪದ ಮೊದ ಲಾದವನ್ನೆಲ್ಲಾ ಹೇಳಿ, ಪರಮ ಪುರುಷನಾದ ನಿನ್ನ **"ತೇ ವಿಭೂತಯಃ"** ಎಂದು ಹೇಳಿರುತ್ತಾರೆ. ಹಾಗೆ ಅವೆಲ್ಲವೂ ಸ್ವರೂಪತಃ ಪರಮಾತ್ಮನೇ ಯಾಗಿದ್ದ ಪಕ್ಷದಲ್ಲಿ **ನೀನೇ ವಿಭೂತಿಯು ತ್ವಂ ವಿಭೂತಿಃ** ಎಂದು ಹೇಳಬೇಕಾಗಿತ್ತು. **ನಿನ್ನ ವಿಭೂತಿ** ಎಂದು ವ್ಯತಿರೇಕದಿಂದ ಹೇಳಿದರೆ ನೀನೇ ಬೇರೆ ವಿಭೂತಿಗಳೇ ಬೇರೆ ಎಂಬರ್ಥ ಉಂಟಾಗುವದರಿಂದ ಅವರುಗಳು ಅಭಿಪ್ರಾಯವು ಸರಿಯಲ್ಲ ವೆಂದು ಹೇಳಿದಂತಾಯಿತು.

**ಪರಾತ್ಪರಂ-** ಎಂಬುದರಿಂದ ಮುಕ್ತಜೀವ ವರ್ಗವು ಹೇಳಲ್ಪಟ್ಟಿತು. ಪ್ರಧಾನಕ್ಕಿಂತ ಪರವಾದುದು ಶ್ರೇಷ್ಠವಾದುದು ಬದ್ಧ ಜೀವ ಕೋಟಿಯು; ಅದಕ್ಕೂ ಶ್ರೇಷ್ಠವಾದುದು ಮುಕ್ತ ಜೀವ ಕೋಟಿಯು.

**ಬ್ರಹ್ಮ** ಶಬ್ದದಿಂದ ಸರ್ವೇಶ್ವರನ ದಿವ್ಯ ಮಙ್ಗಳ ವಿಗ್ರಹವು ಬೋಧಿತವು. ಇದಕ್ಕೆ ಚಕಾರ ಶಬ್ದವು ಸೇರಿರುವದರಿಂದ ಆ ದಿವ್ಯ ಮಙ್ಗಳ ವಿಗ್ರಹಕ್ಕೆ ಸೇರಿದ ದಿವ್ಯ ಭೂಷಣಾಯುಧಗಳ ಸಙ್ಗ್ರಹವು ಹೇಳಲ್ಪಟ್ಟಿತು. ಹಾಗೆಯೇ ಚತು ಶ್ಲೋಕಿಯಲ್ಲಿ **ಮೂರ್ತಂ ಬ್ರಹ್ಮತತೋಪಿ ಯತ್ಪ್ರಿಯತರಂ ರೂಪಂ ಯದತ್ಯದ್ಭುತಮ್,** ಎಂಬಲ್ಲಿ ಮೂರ್ತಂ ಬ್ರಹ್ಮ ಎಂಬುದರಿಂದ ಸರ್ವೇಶ್ವರನ ದಿವ್ಯ ಮಂಗಳ ವಿಗ್ರಹವು ಬೋಧಿತವು. **ವಿಭೂತಯಃ-** ವಿಭೂತಿ ಶಬ್ದದಿಂದ ನಿಯಾಮ್ಯ ವರ್ಗವೂ ಶೇಷ ಭೂತವಾದವೂ ಹೇಳಲ್ಪಟ್ಟವು. ಇಲ್ಲಿ ಬ್ರಹ್ಮ ಶಬ್ದ ಪ್ರಯೋಗ ಹೇಗೆ? ಎಂದರೆ ಮುಖ್ಯ ವೃತ್ತಿಯಲ್ಲಿ ಬೃಹತ್ವ ಬೃಂಹಣತ್ವ ಗಳಲ್ಲೇ ಅನ್ವಯವಿದ್ದರೂ ದಿವ್ಯ ಮಙ್ಗಳ ವಿಗ್ರಹವು ಪುರುಷ ಸೂಕ್ತ, ವಿಶ್ವ ರೂಪಾದಿಗಳಲ್ಲಿ ಈ ಗುಣಗಳಿರುವದರಿಂದ ಔಪಚಾರಿಕವಾಗಿ ದಿವ್ಯ ಮಙ್ಗಳ ವಿಗ್ರ ಹಕ್ಕೂ ಅನ್ವಯಿಸುತ್ತದೆ. ಶ್ರೀ ಯತಿವರ್ಯರು, ಪ್ರಥಮ ಸೂತ್ರ ಭಾಷ್ಯದಲ್ಲಿ **"ಸರ್ವತ್ರ ಬೃಹತ್ವ ಗುಣಯೋಗೇನ ಹಿ ಬ್ರಹ್ಮ ಶಬ್ದಃ, ಬೃಹತ್ವಂ ಚ ಸ್ವರೂಪೇಣ ಗುಣೈಶ್ಚ ಯತ್ರಾ ನವಧಿಕಾತಿಶಯಂ ಸೋಸ್ಯ ಮುಖ್ಯಾರ್ಥಃ,**

**ಸಚ ಸರ್ವೇಶ್ವರ ಏವ....ತಸ್ಮಾದನ್ಯತ್ರತದ್ಗುಣ ಲೇಶಯೋಗಾ ದೌ ಪಚಾರಿಕಃ"** ಎಂದು ಹೇಳಿರುತ್ತಾರೆ. ಇಲ್ಲಿ ಸ್ವರೂಪಕ್ಕೂ ರೂಪಕ್ಕೂ ಸಹ ಮುಖ್ಯ ವೃತ್ತಿಯಿಂದಲೇ ಅನ್ವಯಿಸಿದರೂ ಏನೊಂದು ವಿರೋಧವಿಲ್ಲವು.

ಹೀಗೆ ವಿಭೂತಿ ದ್ರವ್ಯಗಳೆಲ್ಲಾ ಪರಮ ಪುರುಷನಿಗೆ ಅಪೃಥಕ್ಸಿದ್ಧ ವಿಶೇಷಣಗಳಾಗಿ ಪರಮಾತ್ಮನ ದಿವ್ಯ ಮಂಗಳ ವಿಗ್ರಹಗಳು ಹೇಗೆ ಶರೀರವೊ, ಹಾಗೆಯೇ ಇವೂ ಶರೀರವು. ನಮ್ಮ ಶರೀರವು ನಮಗೆ ನಿಯಾಮ್ಯ ವರ್ಗವಾಗಿ ನಮ್ಮ ವಿಭೂತಿಯು. ಅದೂ ಪರಮ ಪುರುಷನ ವಿಭೂತಿಗೇ ಸೇರಿದುದು. ಅದ್ರವ್ಯಗಳ ವಿಷಯ ಹೇಗೇ? ಎಂದರೆ ಆ ವಿಭೂತಿಗಳಿಗೆ ಸಂಬಂಧಿಸಿರುವದರಿಂದ, ಆ ವಿಭೂತಿಗಳ ಮೂಲಕ ನಿಯಾಮ್ಯವರ್ಗಕ್ಕೆ ಸೇರಿದುದೆಂದೇ ಭಾವಿಸಕ್ಕದ್ದು. ಈ ವಿಭೂತಿಗಳನ್ನು ಮೂರಾಗಿ ವಿಭಾಗಿಸಿ, ಈ ಲೀಲಾ ವಿಭೂತಿಯ ಸೃಷ್ಟಿ, ಸ್ಥಿತಿ ಪ್ರಳಯಗಳಿಗೆ ಉಪಯುಕ್ತಗಳಾಗಿ ಹೇಳಲ್ಪಟ್ಟಿವೆ.—

**ಬ್ರಹ್ಮಾ ದಕ್ಷಾದಯಃ ಕಾಲ ಸ್ತಥೈವಾಖಿಲ ಜನ್ತವಃ।**
**ವಿಭೂತಿಯೋ ಹರೇರೇತಾ ಜಗತ ಸ್ಸೃಷ್ಟಿಹೇತವಃ॥**
**ವಿಷ್ಣುರ್ಮನ್ವಾದಯೋಃ ಕಾಲಃ ಸರ್ವಭೂತಾನಿಚ ದ್ವಿಜ।**
**ಸ್ಥಿತೇ ರ್ನಿಮಿತ್ತ ಭೂತಸ್ಯ ವಿಷ್ಣೋರೇತಾ ವಿಭೂತಯಃ॥**
**ರುದ್ರಃ ಕಾಲಾಂತಕಾದ್ಯಾಶ್ಚ ಸಮಸ್ತಾಶ್ಚೈ ವ ಜನ್ತವಃ।**
**ಚತುರ್ಥಾ ಪ್ರಳಯಾಯೈತಾ ಜನಾರ್ದನ ವಿಭೂತಯಃ॥**

ಇಲ್ಲಿ ವಿಷ್ಣುವಿಗೆ ವಿಷ್ಣುವೂ ವಿಭೂತಿಯೆಂದು ಹೇಳಿರುವದರ ಭಿಪ್ರಾಯವೇನೆಂದರೆ ವಿಷ್ಣುವಿನ ಸಜಾತೀಯವಾದ ಸ್ವಾವತಾರ ರೂಪವಾದುದೆಂಬುದು ತಾತ್ಪರ್ಯವು. **ತೇ ವಿಭೂತಯಃ** ಎಂದು ಹೇಳಿರುವದರಿಂದ ಸರ್ವೇಶ್ವರ ನಿಗೇನೆ ಈ ವಿಭೂತಿ ವರ್ಗವು ಸ್ವಾಭಾವಿಕವಾಗಿ ನಿಯಾಮ್ಯವು. ಆ ಸ್ವಾಮಿ ವಿಭೂತಿಯೇ ಇತರರ ನಿಯಾಮ್ಯ ವರ್ಗಕ್ಕೆ ಸೇರಿದುದಾಗಿ ತೋರುತ್ತದೆಯಲ್ಲಾ? ಒಬ್ಬರಾಜನಿಗೇನೇ ಅಸಂಖ್ಯೇಯ ನಿಯಾಮ್ಯ ವರ್ಗ ಉಂಟಲ್ಲಾ ಎಂದರೆ, ತನ್ನ ವಿಭೂತಿಯನ್ನೇ ಸರ್ವೇಶ್ವರನ ಅನುಮತಿಯಿಂದ ಇತರರಿಗೂ ನಿಯಾಮ್ಯವಾಗಿರುತ್ತದೆ. ಅವತಾರ ಕಾಲಗಳಲ್ಲಿ ತಾನೂ ಕೂಡ ಇತರರ ನಿಯಾಮ್ಯ ವರ್ಗಕ್ಕೆ ಸೇರಿದ ಹಾಗೆ ವಿಡಂಬನ ಉಂಟು. ದಶರಥನ ಮಗನಾಗಿ ಪಿತೃವಾಕ್ಯಪರಿಪಾಲನ ಮಾಡಿದುದೂ ವಸುದೇವ ಪುತ್ರನಾದುದೂ, ಯಶೋದೆಯ **"ಕಣ್ಣಿಮುಣ್ ಶಿರತ್ತಾಂಬಿನ್‌ಲ್"** ಕಟ್ಟಲ್ಪಟ್ಟು ಕಣ್ಣಿನಲ್ಲಿ ನೀರು ಸುರಿಸಿದುದೂ ಕಾಲಯವನನಿಗೆ ಅಂಜದ ಹಾಗೆ ಓಡಿಹೋದುದೂ, ಸೀತೆಯ ಅನ್ವೇಷಣಕ್ಕಾಗಿ ಶ್ರೀ ರಾಮನು ಸುಗ್ರೀವನಿಗೆ ಅಧೀನವಾದುದೂ ಇವೆಲ್ಲವೂ ಅಂತಹ ಸ್ವಸಙ್ಕಲ್ಪಾಯತ್ತ ವಿಡಂಬನದ ನಿದರ್ಶನಗಳು :—

**ವಶೀವದಾನ್ಯೋ ಗುಣವಾ ನೃಜು ಶ್ಶುಚಿ।**
**ರ್ಮೃದು ರ್ದಯಾಳು ರ್ಮಧುರ ಸ್ಸ್ಥಿರ ಸ್ಸಮಃ॥**
**ಕೃತೀಕೃತಜ್ಞಸ್ತ್ವಮಸಿ ಸ್ವಭಾವತ।**
**ಸ್ಸಮಸ್ತ ಕಲ್ಯಾಣ ಗುಣಾ ಮೃತೋದಧಿಃ॥ ೧೮ ॥**

---

**"ಲೋಕನಾಥಃ ಪುರೋಭೂತ್ವಾ ಸುಗ್ರೀವಂ ನಾಥಮಿಚ್ಛತಿ।"**
**ಅಹಂ ಚೈವ ಹಿ ರಾಮಶ್ಚ ಸುಗ್ರೀವಂ ಶರಣಾಗತೌ"॥**

ಇತ್ಯಾದಿಗಳು ಇಲ್ಲಿ ಅನುಸಂಧೇಯಗಳು.

**ಅವತಾರಿಕೆಯು**– ಹಿಂದಿನ ಶ್ಲೋಕದಲ್ಲಿ ಪರಮ ಪುರುಷನ ವಿಭೂತಿ ಯೋಗದ ಮಾಹಾತ್ಮ್ಯೆಯನ್ನು ಪ್ರದರ್ಶಿಸಿದರು. ಈ ಶ್ಲೋಕದಲ್ಲಿ, ಪರಮ ಪುರುಷನ ಕಲ್ಯಾಣ ಗುಣಯೋಗ ಮಾಹಾತ್ಮ್ಯೆಯನ್ನು ಪ್ರದರ್ಶಿಸುತ್ತಾರೆ. ಆದುದರಿಂದ ಸಮಸ್ತ **ಕಲ್ಯಾಣಗುಣಾ ಮೃತೋ** ಎಂದು ತಿಳಿಸುತ್ತಾರೆ. ಗೀತೆಯ ೧೧-ಆನೆಯ ಶ್ಲೋಕದಲ್ಲಿ ಶ್ರೀ ಕೃಷ್ಣಭಗವಾನ್ ರವರು ಅರ್ಜುನನನ್ನು ಕುರಿತು **"ಪಶ್ಯಮೇ ಯೋಗ ಮೈಶ್ವರಮ್"** ಎಂಬುದರ ಭಾಷ್ಯದಲ್ಲಿ **"ಮಮಾಸ ನ್ತ್ರಜ್ಞಾನಾದಿ ಯೋಗಂ ಅನನ್ತ ವಿಭೂತಿಯೋಗಂ ಚ ಪಶ್ಯೇತ್ಯರ್ಥಃ"** ಕಲ್ಯಾಣಗುಣ ಯೋಗ ಮತ್ತು ವಿಭೂತಿ ಯೋಗವೆಂದು ಎರಡರ ಯೋಗ ಮಾಹಾತ್ಮ್ಯೆಯನ್ನು ಹೇಳಬೇಕಾಗಿರುವದರಿಂದ ಹಿಂದಿನ ಶ್ಲೋಕದಲ್ಲಿ ವಿಭೂತಿ ಯೋಗವನ್ನು ಹೇಳಿದರು; ಈ ಶ್ಲೋಕದಲ್ಲಿ ಜ್ಞಾನಾದಿ ಕಲ್ಯಾಣಗುಣಯೋಗ ವನ್ನು ತಿಳಿಸುತ್ತಾರೆ ಎಂಬುದು ಸಂಗತಿಯು.

**ಅರ್ಥವು**:- **ಸ್ವಭಾವತಃ**- ಅಸಾಧಾರಣವಾಗಿ ಸ್ವಾಭಾವಿಕವಾಗಿಯೇ, **ತ್ವಂ**-ನೀನು ಇಂತಹ ಅದ್ಭುತ ವಿಭೂತಿಯೋಗವುಳ್ಳ ನೀನು, **ವಶೀ**- ಬ್ರಹ್ಮ ರುದ್ರೇಂದ್ರಾದಿ ಸಮಸ್ತರನ್ನು ವಶಮಾಡಿಕೊಳ್ಳುವ ಸ್ವಭಾವವುಳ್ಳವನು; ಹಾಗೆಯೇ ತನ್ನ ಆಶ್ರಿತರನ್ನೂ ವಶಮಾಡಿಕೊಳ್ಳುವವನು; ಹೀಗೆ ಎಲ್ಲರೂ ಅಧೀನರಾದುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಿದ ವಿಭೂತಿನಾಯಕತ್ವ ಅಥವಾ ಪ್ರಭುತ್ವ ಉಂಟಾಯಿತೆಂಬ ಭಾವವು (೨) **ವದಾನ್ಯಃ**- ಅರ್ಥಿಗಳ ವಿಷಯದಲ್ಲಿ ಪ್ರಿಯ ವಾಕ್ಕಿನೊಂದಿಗೆ ಪ್ರಾರ್ಥಿಸಿದುದನ್ನೆಲ್ಲಾ ಕೊಡುವ ಉದಾರಶೀಲನು, (೩) **ಗುಣವಾನ್–ಗುಣ್ಯತೇ ಇತಿಗುಣಃ** ಎಂಬ ವ್ಯುತ್ಪತ್ತಿಯಿಂದ, ಅನುಕೂಲವಾದ ಶೀಲವುಳ್ಳವನು; ಸೌಶೀಲ್ಯಾದಿಗಳನ್ನುಳ್ಳವನೆಂಬರ್ಥವು. (೪) **ಋಜುಃ** – ಆಶ್ರಿತರ ವಿಷಯದಲ್ಲಿ ಮನೋವಾಕ್ಕಾಯವೃತ್ತಿಗಳಲ್ಲೆಲ್ಲಾ ವಂಚನೆಯಿಲ್ಲದೆ ಏಕರೂಪವಾಗಿ ವರ್ತಿಸುವವನು. ಆಶ್ರಿತರ ಇಷ್ಟಾನುಸಾರ ನಡೆಯುವವನು. (೫) **ಶುಚಿಃ**- ಅಪಹತಪಾಪ್ಮತ್ವಾದಿ ಗುಣಕನು, ಹೇಯ ಪ್ರತ್ಯನೀಕನು; ಅಥವಾ

ಪಾವನರೂಪನು; ಅಥವಾ ಭಾವಶುದ್ಧಿಯುಳ್ಳವನು; (೬) **ಮೃದುಃ**- ಅಪರಾಧಿಗಳಾಗಿದ್ದರೂ, ಭಯವನ್ನೀಗಿ ಆಶ್ರಯಿಸಲು ಯೋಗ್ಯವಾದ ಮೃದುಸ್ವಭಾವನು; ಮೃದುವಾದ ವಾಕ್ಕುಳ್ಳವನು; (೭) **ದಯಾಳುಃ**- ತನಗೆ ಏನೊಂದು ಪ್ರಯೋಜನ ವಿಲ್ಲದಿದ್ದರೂ ಇತರರ ದುಃಖವನ್ನು ಹೋಗಲಾಡಿಸಬೇಕೆಂಬ ಕರುಣೆಯುಳ್ಳವನು; (೭) **ಮಧುರಃ**- ಆಕರ್ಷಿಸುವ ನಿರತಿಶಯಾನಂದ ಸ್ವರೂಪನು; (೮) **ಸ್ಥಿರಃ**- ಸ್ಥಿರವಾದ ಸಙ್ಕಲ್ಪವುಳ್ಳವನು; ಆಶ್ರಿತನು ಎಂತವನೇ ಆಗಲಿ ಅತನು ದಯನೀಯನೆಂಬ ಸ್ಥಿರ ಮನಸ್ಕನು (೯) **ಸಮಃ**- ಜಾತಿಗುಣ ವೃತ್ತಿ ಮೊದಲಾದವುಗಳನ್ನು ಪರಿಗಣಿಸದೆ ಆಶ್ರಿತರನ್ನೆಲ್ಲಾ ಸಮಭಾವದಿಂದ ನೋಡುವವನು. (೧೦) **ಕೃತೀ**- ಸ್ವಪ್ರಯೋಜನ ವಿಲ್ಲದಿದ್ದರೂ ತನಗೆ ಸೇರಿದವರಿಗಾಗಿ ಯಾವಾಗಲೂ ಕೆಲಸಮಾಡುವವನು ಅಥವಾ ಭಕ್ತರನ್ನು ಕೃತ ಕೃತ್ಯನೆಂದು ಭಾವಿಸುವವನು; (೧೧) **ಕೃತಜ್ಞಃ**- ಪ್ರಾಣಿಗಳು ಮಾಡಿರುವನೆಲ್ಲಾ ಸರ್ವಜ್ಞತೆಯಿಂದ, ತಿಳಿಯುವವನು; ಅವರುಗಳಿಗೆ ನಿಗ್ರಹಾನು ಗ್ರಹಗಳನ್ನೆಸಗುವದಕ್ಕಾಗಿ ಚೇತನರುಮಾಡಿದನ್ನು ತಿಳಿಯುವವನು. ಈ ಪರಿಯಾಗಿ **ತ್ವಂ**- ನೀನು **ಸ್ವಭಾವತಃ**- ಏನೊಂದೂ ಉಪಾಧಿಯ ಮೂಲಕವಲ್ಲದೆ ಸ್ವಾಭಾವಿಕವಾಗಿಯೇ **ಸಮಸ್ತ ಕಲ್ಯಾಣ ಗುಣಾ ಮೃತೋದಧಿಃ**– ಸಮಸ್ತ ಕಲ್ಯಾಣ ಗಣಗಳೆಂಬ ಅಮೃತಕ್ಕೆ ಸಾಗರನು, **ಅಸಿ**– ಆಗಿದ್ದೀಯೇ. ಹೀಗೆ ನಿರವಧಿಕ ನಿರತಿಶಯ ಕಲ್ಯಾಣ ಗುಣ ಸಾಗರನೆಂದು ಹೇಳಲ್ಪಟ್ಟಿತು. ಇಲ್ಲಿ ಹನ್ನೊಂದು ಗುಣಗಳು ಹೇಳಲ್ಪಟ್ಟಿರುವದು, ಸ್ವಾಮಿಗೆ ಇರುವ ಗುಣಗಳಿಷ್ಟೇ ಎಂಬ ಭಾವನೆಯಿಂದ ಹೇಳಲಿಲ್ಲವು. ಅವುಗಳಲ್ಲಿ ಕೆಲವನ್ನಾದರೂ ಹೇಳಿ ಸ್ತುತಿಸಬೇಕೆಂಬ ಆಶೆಯಿಂದ ನಿರೂಪಣೆಯೆಂದು ಭಾವಿಸತಕ್ಕದ್ದು.

**ಉಪಪಾದನೆಯು**- ಸತ್ಯವಾದ ವಿಭೂತಿ ಮಹದೈಶ್ವರವನ್ನೂ ಹೊಂದಿರುವ ಹಾಗೆಯೇ ಸತ್ಯವಾದ, ನಿರವಧಿಕಾತಿಶಯ ಕಲ್ಯಾಣ ಗುಣಯೋಗವನ್ನೂ ಈ ಶ್ಲೋಕದಲ್ಲಿ ಹೇಳಲು ಹೊರಟು ಅವುಗಳಲ್ಲಿ ಮುಖ್ಯವಾದ ಕೆಲವು ಗುಣಗಳ ಯೋಗವನ್ನು ಮಾತ್ರ ತಿಳಿಸುತ್ತಾರೆ. ಈ ಕಲ್ಯಾಣ ಗುಣಗಳ ಆನಂತ್ಯವೂ ವೇದವೂ ಕೂಡ ಸಮಗ್ರವಾಗಿ ಉಪಪಾದಿಸಿ ಹೇಳಲಾರದೆಂದು **"ಯತೋ ವಾಚೋನಿವರ್ತಂತೇ ಅಪ್ರಾಪ್ಯಮನಸಾ ಸಹ"** ಎಂದು ಹೇಳಿರುವಾಗ, ಮನುಷ್ಯರಿಗೆ ವರ್ಣಿಸಲು ಸಾಧ್ಯವೇ ಇಲ್ಲನೆಂಬೂ ಅರ್ಥಪಂಚಕಾಧಿಕಾರದಲ್ಲಿ ಶ್ರೀ ದೇಶಿಕರವರಿಂದ ಉಪಪಾದಿತವು (೩೩೩ರಿಂದ ೩೩೮ನೇ ಪುಟಗಳನು ಪರಾಂಬರಿಸಿ.) ಅಲ್ಲಿ ಉದಾಹರಿಸಿರುವ ಕೆಲವು ಪ್ರಮಾಣಗಳನ್ನು ಇಲ್ಲಿ ಜ್ಞಾಪಕಕೊಡುವೆವು.

**"ಬಹವೋ ನೃಪ ಕಲ್ಯಾಣ ಗುಣಾಃ ಪುತ್ರಸ್ಯಸನ್ತಿತೇ"** (ರಾ. ಅಯೋಧ್ಯಾ. ೨. ೨೬) ನನ್ನ ಬದಲಾಗಿ ಶ್ರೀ ರಾಮನನ್ನು ರಾಜನಾಗಿಟ್ಟುಕೊಳ್ಳಿ ಎಂದು ದಶರಥನು ಹೇಳಿದ ಒಡನೆಯೇ, ಪೌರ ಜನರು ವಿಶೇಷಸಮ್ಮತಿಸಿದುದರಿಂದ ದಶರಥನು ಅವರನ್ನು ಕುರಿತು ನನ್ನ ಆಡಳಿತವು ನಿಮಗೆ ರುಚಿಸಲಿಲ್ಲವೇ ಎಂದು ಪ್ರಶ್ನಿಸಿನುದಕ್ಕೆ, ಪೌರ ಜನರ ಉತ್ತರವು ಈ ವಾಕ್ಯವು. ಪರತತ್ವವಾದ ಶ್ರೀ ರಾಮನಲ್ಲಿರುವ ಕಲ್ಯಾಣ ಗುಣಗಳು ಬಹುವಾದುವು, ಗಣನೆಮಾಡಲು ಸಾಧ್ಯ ವಿಲ್ಲವು. ಅಂತಹ ಕಲ್ಯಾಣ ಗುಣಾಕರನೆಂದು ಹೇಳಿರುತಾರೆ.– ಮುಂದೆ **"ಆನೃಶಂಸ್ಯ ಮನುಕ್ರೋಶಶ್ಶ್ರುತಂ ಶೀಲಂ ದಮಶ್ಶಮಃ। ರಾಮಂ ಶೋಭ ಯಂತ್ಯೇತೇ ಷಡ್ಗುಣಾಃ ಪುರುಷೋತ್ತಮಮ್"** (ರಾ. ಅಯೋ ೩೧೨) ಎಂದು ಹೇಳಲ್ಪಟ್ಟಿರುತ್ತದೆ. **ವಾಮನಪುರಾಣದಲ್ಲಿ** (೭೪- ೭೦) **"ಯಥಾರತ್ನಾನಿಜ ಲಧೇಃ ಅಸಂಖ್ಯೇಯಾನಿ ಪುತ್ರಕ। ತಥಾಗುಣಾಶ್ಚದೇವಸ್ಯತ್ವ ಸಂಖ್ಯೆಯಾ ಹಿ ಚಕ್ರಿಣಃ॥"** ಸಮುದ್ರದಲ್ಲಿ ರತ್ನಗಳು ಹೇಗೆ ಅಸಂಖ್ಯೇಯಗಳೋ, ಹಾಗೆಯೇ ಶಂಖ ಚಕ್ರಧರನಾದ ಶ್ರಿಯಃ ಪತಿಯಗುಣಗಳು. ಭಾರತ ಭೀಷ್ಮಪರ್ವದಲ್ಲಿ ಶ್ರೀ ಕರ್ಣನ ಉಕ್ತಿಯು:— **"ವರ್ಷಾಯುತೈರ್ಯಸ್ಯಗುಣಾ ನ ಶಕ್ಯಾವಕ್ತು ಸಮೇತೈರಪಿ ಸರ್ವದೇವೈಃ। ಚತುರ್ಮುಖಾಯುರ್ಯದಿಕೋಟಿ ವಕ್ತ್ರೋಭವೇ ನ್ನರಃಕ್ವಾಪಿ ವಿಶದ್ಧ ಚೇತಾಃ॥"** ಚತುರ್ಮುಖನ ಆಯುಸ್ಸನ್ನು ಹೊಂದಿ ಒಂದು ಕೋಟಿ ಮುಖಗಳನ್ನುಳ್ಳವನಾಗಿ ಪರಿಶುದ್ಧ ಮನಸ್ಕನಾಗಿ ನಿನ್ನನ್ನು ವರ್ಣಿಸಬೇಕೆಂಬುವನು ನಿನ್ನ ಕಲ್ಯಾಣಗುಣಗಳ ೧೦ ಸಾವಿರ ಭಾಗದ ಒಂದಂಶ ವನ್ನಾದರೂ ಹೇಳಲು ಯೋಗ್ಯನಾಗುವನೋ ಇಲ್ಲವೋ ತಿಳಿಯದು ಆದುದ ರಿಂದ ದೇವತೆಗಳಿಗಿಂತಲೂ ಶ್ರೇಷ್ಠನಾದವನೇ ಪ್ರಸನ್ನನಾಗು.

**"ತವಾ ನನ್ತ ಗುಣಸ್ಯಾಪಿ ಷಡೇಕ ಪ್ರಥಮಾ ಗುಣಾಃ।**
**ಯೈಸ್ತ್ವಯೈವ ಜಗತ್ಕುಕ್ಷಾವನ್ಯೇಷ್ವಂತ ರ್ನಿವೇಶಿತಾಃ॥**

**"ಇಷುಕ್ಷಯಾನ್ನಿವರ್ತನ್ತೇ ನಾಂತರಿಕ್ಷಕ್ಷಿತಿಕ್ಷಯಾತ್। ಮತಿಕ್ಷಯಾನ್ನಿ ವರ್ತನ್ತೇ ನ ಗೋವಿಂದ ಗುಣಕ್ಷಯಾತ್"** ಇತ್ಯಾದಿಗಳು. ಇವುಗಳ ಅರ್ಥಕ್ಕೆ ಅರ್ಥ ಪಂಚಕಾಧಿಕಾರದ ೩೫೬ ಅನೆಯ ಪುಟಗಳನ್ನು ಪರಾಂಬರಿಸಿ.

ಹೀಗೆ ಆ ಕಲ್ಯಾಣಗುಣಗಳ ನಿರೂಪಣೆ, ಉಪಪಾದನೆಗಳು ಸಾಧ್ಯವಿಲ್ಲ ದಿದ್ದರೂ ಅವುಗಳಲ್ಲಿ ಕೆಲವು ಶಾಸ್ತ್ರಪ್ರತಿಪಾದ್ಯವಾದವುಗಳನ್ನೂ ಉದಾಹರಿ ಸುತ್ತಾರೆ.—

(೧) **ವಶೀ**– ಎಲ್ಲಕ್ಕೂ ಪ್ರಭುವಾಗಿ **ಎಲ್ಲವನ್ನೂ ತನ್ನ ವಶದಲ್ಲಿಟ್ಟು** ಕೊಂಡಿರುವ ಸಾಮರ್ಥ್ಯವು. ಇದು ನಿಘಂಟಿನಿಂದ **ತೋರಿ ಬರುವ ಅರ್ಥವೂ**

ಅಲ್ಲದೆ **"ಸರ್ವಸ್ಯವಶೀ ಸರ್ವಸ್ಯೇಶಾನಃ"** (ಬೃ. ೬. ೪. ೨೨) ಎಂದೂ ಶ್ರುತಿಯಲ್ಲೂ ಉಪಪಾದಿತವು. **"ಜಗದ್ವಶೇವರ್ತತೇದಂ ಕೃಷ್ಣಸ್ಯ ಸಚರಾಚರಮ್"** ಸಚರಾಚರವಾದ ಜಗತ್ತೆಲ್ಲಾ ಶ್ರೀ ಕೃಷ್ಣಭಗವಾನ್ರವರ ವಶದಲ್ಲಿವೆ ಎಂದು ಹೇಳಲ್ಪಟ್ಟಿರುತ್ತದೆ. ಹೀಗೆ ಎಲ್ಲಾ ಭಗವಂತನಿಗೆ ವಶವೆಂದು ಹೇಳಿದುದರಿಂದ **ಆಶ್ರಿತರನ್ನೆಲ್ಲಾ** ವಶಮಾಡಿಕೊಳ್ಳುವ ಸೌಲಭ್ಯವು ಹೇಳಲ್ಪಟ್ಟಿತು. **ಈ ಅರ್ಥವೇ "ಯೇ ಭಜಂತಿತು ಮಾಂ ಭಕ್ತ್ಯಾಮಯಿತೇ ತೇಷುಚಾಪ್ಯಹಮ್"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. (ಗೀ. ೯. ೨೯) ಜಾತಿಗುಣ ಪ್ರವೃತ್ತಿಗಳಿಂದ ಉತ್ಕೃಷ್ಟ ನಿಕೃಷ್ಟಭಾವಗಳಿಂದ ಇರುವವರಲ್ಲಿ ನನಗೆ ಪ್ರೀತಿಯಲ್ಲಿ ಏನೂ ವ್ಯತ್ಯಾಸವಿಲ್ಲವು, ಎಲ್ಲರೂ ನನಗೆ ಸಮರೇ; ಯಾರು ನನ್ನನ್ನು ಭಕ್ತಿಯಿಂದ ಸೇವಿಸುತ್ತಾರೋ ಅವರು **ನಾನೇ** ಸಮಸ್ತವೆಂದು ಭಾವಿಸಿ ನನ್ನ ವಿಷಯದಲ್ಲಿ ಮಮತೆಯಿಂದ ನಡೆದುಕೊಳ್ಳುವರು; ಆದುದರಿಂದ ನಾನೂ ಕೂಡ ಅವರ ವಿಷಯದಲ್ಲಿ ಅಭಿಮಾನವನ್ನು ಇಟ್ಟಿರುವೆನು. ಇಲ್ಲಿ ಸೌಲಭ್ಯಾತಿಶಯವು ವೇದ್ಯವು. ಹಾಗೆಯೇ ಶ್ರೀರಾಮಚಂದ್ರ ಪ್ರಭುವು ವಿಶ್ವಾಮಿತ್ರ ಋಷಿಯನ್ನು ಹಿಂಬಾಲಿಸಿ ತನ್ನ ತಮ್ಮನೊಂದಿಗೆ ಹೋಗುತ್ತಿರುವಾಗ ಒಂದು ದಿನ ಪ್ರಾತರಾಹ್ನಿಕವನ್ನು ತೀರಿಸಿ ಕೊಂಡು ಋಷಿಯ ಎದುರಿಗೆ ನಿಂತು ಹೇಳುತ್ತಾರೆ.—

**ಇಮೌಸ್ಮ ಮುನಿಶಾರ್ದೂಲ ಕಿಂಕ ತಾ ಸಮುಪಸ್ಥಿತಾ।**
**ಆಜ್ಞಾಪಯ ಯಥೇಷ್ಟಂವೈ ಶಾಸನಂ ಕರವಾಮ ಕಿಮ್॥**

ಓ ಮುನಿಶ್ರೇಷ್ಠರೇ ಇಗೋ ನಾವಿಬ್ಬರೂ ತಮ್ಮ ಎದುರಿಗೆ ನಿಂತಿರುವೆವು. ನೀವು ಪರಮಾತ್ಮನಾದ ನನಗೆ ದಾಸರೆಂದು ತಿಳಿದು, ನಮಗೆ ಶೇಷತ್ವವನ್ನು ಯಾವಾಗ ಪ್ರದರ್ಶಿಸಿದರೋ, ನಾವೂ ನಿಮಗೆ ಕಿಂಕರರೇ. ನೀವು ಯಾವಾಗ ನಮ್ಮನ್ನೇ ಧ್ಯಾನಿಸಿದರೋ, ನಾವು, ನೀವು ಇರುವಲ್ಲಿಗೆ ಅಭಿಮುಖರಾಗಿ ಬರತಕ್ಕವರು, **ಸಮುಪಸ್ಥಿತಾ.** ನೀವು ನಮ್ಮನ್ನು ಹುಡುಕಿಕೊಂಡು ಬರಬೇಕಾದುದಿಲ್ಲವು. ಗಜೇಂದ್ರ ಧ್ರುವ ಪ್ರಹ್ಲಾದರು ಎಲ್ಲಿದ್ದರೋ ಅಲ್ಲಿಗೆ ನಾವು ಹೋಗಿರುವೆವು. ನೀವು ಹುಡುಕಿಕೊಂಡು ಬರುವ ಕೆಲಸವಿಲ್ಲವು. **ಆಜ್ಞಾಪಯ**– ನೀವು ನನ್ನ ಶಾಸ್ತ್ರರೂಪ ಆಜ್ಞೆಗಳಿಗೆ ಅನುಸಾರವಾಗಿ ವರ್ಣಾಶ್ರಮ ಧರ್ಮಗಳನ್ನನುಸರಿಸಿ ಯಾವಾಗ ನಡೆಸಿದರೋ, ಆಕಾರಣದಿಂದ ತಮ್ಮ ಅಪೇಕ್ಷೆಯ ಅನುಗುಣವಾಗಿ ನಡೆಸಿ ಕೊಡಲು ನಾವು ಬದ್ಧರು; ಆದುದರಿಂದ ಆಜ್ಞಾಪಿಸಿ. **ಯಥೇಷ್ಟಂವೈ**– ನೀವು ನನ್ನ ಪ್ರಸನ್ನತೆಗಾಗಿ ನನ್ನ ಇಷ್ಟಾನುಸಾರವಾದ ಧರ್ಮ ಪ್ರವರ್ತನೆಯಲ್ಲಿ ಇದ್ದುದರಿಂದ ಈಗ ನಮಗೆ ಪರಮ ಭಕ್ತರಾದುದರಿಂದ ನಿಮ್ಮ ಇಷ್ಟಾನುಸಾರವಾಗಿಯೇ ನಡೆಯುವವರು. ಆದುದರಿಂದ

ಪರಮ ಭಾಗವತರಾಗಿಯೂ ಮುನಿಗಳಾಗಿಯೂ ನಿಮ್ಮ ಇಷ್ಟವೇ, ನಮಗೆ **ಶಾಸನವು.** ನಾವು ಭಕ್ತಪರಾಧೀನರಾದುದರಿಂದ **ಕರವಾವಕಿಮ್-** ಏನು ಮಾಡಬೇಕೆಂಬುದನ್ನು ದಯವಿಟ್ಟು ತಿಳಿಸಬೇಕು ಎಂದು ರಾಮ ಲಕ್ಷ್ಮಣರಿಬ್ಬರೂ ವಿಶ್ವಾಮಿತ್ರರನ್ನು ಕುರಿತು ಪ್ರಾರ್ಥಿಸಿರುತ್ತಾರೆ. ಆದುದರಿಂದಲೇ ಪಾಂಡವರಿಗೆ ಸಂಧಿಗಾಗಿ ದೂತನಾಗಿಯೂ, ಅರ್ಜುನನಿಗೆ ಸಾರಥಿಯಾಗಿಯೂ, ಸುಗ್ರೀವನಿಗೆ ಪರಮ ಸಖನಾಗಿಯೂ ವಿಭೀಷಣನಿಗೆ ರಕ್ಷಕನಾಗಿಯೂ ಪ್ರವರ್ತಿಸಿದ ವೃತ್ತಾಂತಗಳು ಭಗವಂತನು ವಶಿಯಾಗಿ ಭಕ್ತರಿಗೆತೋರಿದ ಪರಮ ಸೌಲಭ್ಯವನ್ನು ಪ್ರಕಟಿಸುತ್ತವೆ.

(೨) **ವದಾನ್ಯಃ-** ಎಂಬುದು ಪ್ರಿಯವಾದವಾಕ್ಕನ್ನು ಹೊಂದಿದ ದಾನ ಶೀಲತ್ವವನ್ನು ಬೋಧಿಸುತ್ತದೆ. ಯಾರು ಪುರುಷಾರ್ಥಗಳನ್ನು ತನ್ನ ಮೂಲಕವಾಗಿ ಆಶಿಸುತ್ತಾರೋ, ಅವರುಗಳ ವಿಷಯದಲ್ಲಿ ಪ್ರಿಯವಾದ ವಾಕ್ಕನ್ನು ಹೊಂದಿ **"ಉದಾರಾ ಸ್ಸರ್ವ ಏವೈತೇಜ್ಞಾನೀತ್ವಾತ್ಮೈವ ಮೇ ಮತಮ್"** ಎಂದು ಹೇಳಿದವನು. ಈ ಅರ್ಥಿಗಳು ನನ್ನ ದಾತೃತ್ವವನ್ನು ತಿಳಿದು ನನ್ನನ್ನು ಪ್ರಾರ್ಥಿಸಿ ಪಡೆಯುವದರಿಂದ ನಾನು ಉದಾರನೆಂಬ ಕೀರ್ತಿಯನ್ನು ಧರೆಯಲ್ಲಿ ಹರಡುವವರಾದ ಪ್ರಯುಕ್ತ ತುಂಬಾ ಉದಾರಿಗಳೆಂದು ಹೇಳಿ, ಹಾಗೆ ಪ್ರಾರ್ಥಿಸುವವನು ಜ್ಞಾನಿಯಾದ ಮೋಕ್ಷಾರ್ಥಿಯೇ. ಆದರೆ ಅಂತವನು ನನಗೂಕೂಡ ಸತ್ತೆಯನ್ನು ಕೊಡುವ ಆತ್ಮಾ ಎಂದೇ ಭಾವಿಸುವನೆಂದು ಶ್ರೀ ಕೃಷ್ಣಭಗವಾನರವರು ಹೇಳಿರುತ್ತಾರೆ. ಮುಕ್ತನಿಗೆ ತನ್ನನ್ನೇ ಕೊಟ್ಟು ಕೊಂಡು ಆತನಿಗೆ ಪರಮಾನಂದವನ್ನುಂಟು ಮಾಡುವವನೆಂಬ ಭಾವವು. ಅಂತಹ ಭಕ್ತರೇ ತನಗೆ ಸತ್ತೆಯನ್ನೂ ಬಲವನ್ನೂ ಕೊಡುವವರೆಂದು ಸರ್ವೇಶ್ವರನು ಹೇಳಿಕೊಂಡಿರುತ್ತಾನೆ. **"ಏಕೋ ಬಹೂನಾಂ ಯೋ ವಿದಧಾತಿಕಾಮಾನ್"** (ಶ್ವೇ. ೬. ೧೩) (ಕಠ. ೨. ೫. ೧೩) ಆಶ್ರಯಿಸುವ ಅನೇಕ ಜೀವಾತ್ಮರಿಗೆಲ್ಲಾ ಅವರ ಅಭೀಷ್ಟಗಳನ್ನೆಲ್ಲಾ ದಯಪಾಲಿಸುವ **ಉದಾರನು** ಸ್ವಾಮಿಯು. ಎಷ್ಟು ಮಟ್ಟಿಗೆ ದಾನ ಶೀಲನೆಂಬುದನ್ನು ಕುಚೇಲೋಪಾಖ್ಯಾನ ಹಣ್ಣುಮಾರುವವಳ ಇತಿಹಾಸಾದಿಗಳೂ, ರಾಮಾವತಾರಿಯಾಗಿ ವನವಾಸಕ್ಕಾಗಿ ಹೊರಟಾಗ ಮಾಡಿದ ದಾನ ಸಹಸ್ರಗಳೆಲ್ಲಾ ನಿದರ್ಶನಗಳು. ಶ್ರೀ ನಾರದರು ಪುಂಡರೀಕರನ್ನು ಕುರಿತು ಹೇಳುತ್ತಾರೆ.—

**ತಸ್ಮಾತ್ತ್ವಮಪಿ ವಿಪ್ರೇಂದ್ರ ನಾರಾಯಣ ಪರೋಭವ।**
**ತದನ್ಯಃ ಕೋ ಮಹೋದಾರಃ ಪ್ರಾರ್ಥಿತಂ ದಾತುಮೀಶ್ವರಃ॥**

ಆದುದರಿಂದ ಓ ವಿಪ್ರಶ್ರೇಷ್ಠನೇ ನಾರಾಯಣ ಭಕ್ತನಾಗು; ಆತನಿಗಿಂತ ಬೇರೆ ಯಾರು ಸರ್ವಸಮರ್ಥನಾಗಿ ನಿಯಾಮಕನಾಗಿದ್ದುಕೊಂಡು ಉದಾರನಾದವನು ಇದ್ದಾನೆ.

**ವಿಷ್ಣುಧರ್ಮದಲ್ಲಿ "ಸಕಲ ಫಲಪ್ರದೋಹಿ ವಿಷ್ಣುಃ"** ಎಂದು ಹೇಳಲ್ಪಟ್ಟಿರುತ್ತದೆ. ಇತಿಹಾಸೋತ್ತಮದಲ್ಲಿ **"ಯಥಾಕಲ್ಪ ದ್ರುಮಾತ್ಸರ್ವಂ ಪ್ರಾಪ್ಯತೇ ಮಾನಸೇ ಪ್ಸಿತಮ್। ತಥಾ ಸಂಪ್ರಾಪ್ಯತೇ ವಿಷ್ಣೋರಪಿ ಸ್ಯಾದ್ದುರ್ಲಭಂ ದ್ವಿಜ॥"** ಮನಸ್ಸಿನ ಅಭೀಷ್ಟವನ್ನೆಲ್ಲಾ ಹೇಗೆ ಕಲ್ಪವೃಕ್ಷದಿಂದ ಹೊಂದಬಹುದೋ, ಹಾಗೆಯೇ ಶ್ರೀ ಮಹಾವಿಷ್ಣುವಿನಿಂದ ಅತಿದುರ್ಲಭವಾದ ಅಭೀಷ್ಟವಾದ ಮೋಕ್ಷವನ್ನೂ ಕೂಡ ಹೊಂದಬಹುದು. **"ರತ್ನ ಪರ್ವತಮಾರುಹ್ಯ ಯಥಾ ರತ್ನಂ ನರೋ ಮುನೇ। ಸತ್ವಾನು ರೂಪ ಮಾಧತ್ತೇ ತಥಾ ಕೃಷ್ಣಾ ನ್ಮನೋರಥಾನ್"** ಓ ಮುನಿಯೇ ಒಬ್ಬ ಮನುಷ್ಯನು ರತ್ನಗಳಿಂದ ತುಂಬಿದ ಪರ್ವತವನ್ನು ಹತ್ತಿ ತನಗೆ ಶಕ್ತಿ ಇರುವಷ್ಟು ರತ್ನಗಳನ್ನು ತರುವನೋ, ಹಾಗೆಯೇ ಶ್ರೀ ಕೃಷ್ಣಭಗವಾನನಿಂದ ತನ್ನ ಶಕ್ತ್ಯನು ಸಾರವಾಗಿ ಅಭೀಷ್ಟಗಳನ್ನು ಹೊಂದುವನು. **ಇತಿಹಾಸೋತ್ತಮ ದಲ್ಲಿ "ಯಥಾಕಲ್ಪದ್ರುಮಾತ್ಸರ್ವಂ ಪ್ರಾಪ್ಯತೇಮಾನಸೇಪ್ಸಿತಮ್। ತಥಾ ಸಂಪ್ರಾಪ್ಯತೇ ವಿಷ್ಣೋ ರಪಿಸ್ಯಾದ್ದುರ್ಲಭಂದ್ವಿಜ"** ಕಲ್ಪವೃಕ್ಷದ ಮೂಲಕ ಮನಸ್ಸಿನ ಇಷ್ಟಾರ್ಥಗಳೆಲ್ಲವನ್ನು ಹೇಗೆ ಹೊಂದ ಬಹುದೋ, ಹಾಗೆ ವಿಷ್ಣುವಿನಿಂದ ತುಂಬಾ ದುರ್ಲಭವಾದದ್ದನ್ನು ಎಂದರೆ ಮೋಕ್ಷವನ್ನೂ ಕೂಡ ಹೊಂದಬಹುದು. **ಕಲ್ಪವೃಕ್ಷಕ್ಕೆ** ಅಂತಹ ಶಕ್ತಿಯಿಲ್ಲವೆಂಬುದು ಗೂಢಾರ್ಥವು. **"ಅಶ್ವಮೇಧ ಸಹಸ್ರಾಣಾಂ ಸಹಸ್ರಂ ಯ ಸ್ಸ ಮಾಚರೇತ್। ನಾಸೌಪದ ಮವಾಪ್ನೋತಿ ಮದ್ಭಕ್ತೈರ್ಯದವಾಪ್ಯತೇ"** ಅನೇಕ ಅಶ್ವಮೇಧಗಳನ್ನು ಅನುಷ್ಠಿಸಿದವನು, ನನ್ನ ಭಕ್ತರುಹೊಂದುವ ನಿರತಿಶಯ ಫಲವನ್ನು ಹೊಂದಲಾರನು. **"ತಸ್ಮಿನ್ ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ"** ಆತನು ಪ್ರಸನ್ನನಾದರೆ ಯಾವ ಅಭೀಷ್ಟವು ಅಲಭ್ಯವು. **"ಸಮಾಶ್ರಿತಾತ್ಬ್ರಹ್ಮತರೋ ರನನ್ತಾನ್ನಿಸ್ಸಂಶಯೋ ಮುಕ್ತಿ ಫಲ ಪ್ರಪಾತಃ"** ಹೀಗೆ ದುರ್ಲಭವಾದ ಫಲವನ್ನೂ ಕೊಡುವವನು, ಹಾಗೆಯೇ **"ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋದ ದಾಮ್ಯೇತದ್ವ್ರತಂ ಮಮ"** ಇದಕ್ಕಿಂತ ಮೇಲಾದ ವದಾನ್ಯತ್ವವು ಎಲ್ಲಿಯದು? ಇತ್ಯಾದ್ಯನೇಕ ಪ್ರಮಾಣಗಳು ವದಾನ್ಯತ್ವವನ್ನು ಪ್ರಕಟಿಸುತ್ತವೆ.

(೩) **ಗುಣವಾನ್**– ಎಂಬುದರಿಂದ ಸಾಮಾನ್ಯವಾದ ಗುಣಗಳುಳ್ಳವನೆಂಬರ್ಥವಲ್ಲವು; ಏಕೆಂದರೆ ಇತರ ಉತ್ಕೃಷ್ಟ ಗುಣಗಳ ಮಧ್ಯೆಯೇ ಗುಣವಾನ್ ಎಂದು ಹೇಳಿರುವದರಿಂದ ಮುಂದೆ ಒಟ್ಟುಕೊಡಿಸಿ **"ಸಮಸ್ತ ಕಲ್ಯಾಣ ಗುಣಾಮೃತೋದಧಿಃ"** ಎಂದು ಮುಗಿಸಿರುವದರಿಂದಲೂ. ಸತ್ವಾದಿಗುಣ ಶೇಷವೆಂದರ್ಥ ಮಾಡುವದೂ ಸರಿಹೋಗುವದಿಲ್ಲವು; ಏಕೆಂದರೆ ಅದು ಅಸಂಗತವಾದು

ದಾಗುತ್ತದೆ. ಆದುದರಿಂದ ಇಲ್ಲಿ ಉಚಿತವಾದ ಅರ್ಥವು **ಗುಣ್ಯತ ಇತಿಗುಣಃ** ಎಂಬವ್ಯುತ್ಪತ್ತಿ ಮೂಲಕವಾಗಿ, ಅನುಕೂಲ ತಮವಾಗಿರುವ ಶೀಲವುಳ್ಳವನೆಂದು ಅರ್ಥಮಾಡ ಬಹುದು. ಅಂತಹ ಗುಣವು **ಸೌಶೀಲ್ಯವು;** ಇಂತಹ ಉತ್ಕೃಷ್ಟ ಗುಣವುಳ್ಳವನು. ನಿಕೃಷ್ಟವಾದ ಜಾತಿ ಮೊದಲಾದವರು ಆಶ್ರಯಿಸಿದರೂ ಅಂತವರೊಂದಿಗೂ ಕೂಡ ಸೇರಿರುವ ಸ್ವಭಾವವು ಹೇಳಲ್ಪಟ್ಟಿತು. ಈ ಸ್ವಭಾವವು **"ನಿಷಾದಾನಾಂನೇತಾ ಕಪಿಕುಲ ಪತಿಃ ಕಾಪಿಶಬರೀ ಕುಚೇಲಃ ಕುಬ್ಜಾಸಾ ವ್ರಜಯುವತಯೋ ಮಾಲ್ಯಕೃದಿತಿ"** ಒಬ್ಬ ಬೇಡರ ರಾಜನಾದ ಗುಹನು, ಕಪಿಗಳಿಗೆ ರಾಜನಾದ ಸುಗ್ರೀವನು, ಬೇಡರವಳಾಗಿ ಸ್ತ್ರೀಯಾದ ಶಬರಿಯು, ಹರಕು ಬಟ್ಟೆಯನ್ನುಟ್ಟ ಬ್ರಾಹ್ಮಣನಾದ ಕುಚೇಲನು, ವಕ್ರವಾದ ಶರೀರವನ್ನು ಹೊಂದಿದ ಸ್ತ್ರೀಯಾದ ಕುಬ್ಜೆಯು, ಗೋವುಗಳನ್ನು ಮೇಯಿಸಿ ಸಲಹುವವರ ಸ್ತ್ರೀಗಳು, ಹೂವುಮಾರುವ ಒಬ್ಬ ಸ್ತ್ರೀ, ರಾಕ್ಷಸನ ತಮ್ಮನಾದ ವಿಭೀಷಣ, ಇವೇ ಮೊದಲಾದವರು ತನ್ನನ್ನು ಆಶ್ರಯಿಸದರಲ್ಲಾ ಎಂಬ ಪ್ರೀತಿಯಿಂದ ಅವರೊಂದಿಗೆ ಸೇರಿ ಸರಸಸಲ್ಲಾಪಾದಿಗಳ ಮೂಲಕ ಅವರಿಗೆ ನಿರತಿಶಯಾನಂದವನ್ನಿತ್ತವನು.

(೪) **ಋಜುಃ**– ಆಶ್ರಿತರ ವಿಷಯವಲ್ಲಿ ಮನೋವಾಕ್ಕಾಯಗಳ ವ್ಯಾಪಾರಗಳೆಲ್ಲಾ ಒಂದೇ ಸಮನಾಗಿ ಕಾಪಟ್ಯವಿಲ್ಲದಿರುವವನು. ಮತ್ತು ಆಡಿದ ಮಾತಿಗೆ ತಪ್ಪದಿರುವವನು. ದಂಡ ಕಾರಣ್ಯದಲ್ಲಿ ಋಷಿಗಳೆಲ್ಲಾ ಬಂದು ಶ್ರೀ ರಾಮನಲ್ಲಿ ಶರಣಾಗತರಾಗಿ ರಾಕ್ಷಸರಿಂದ ಉಂಟಾಗಿರುವ ವಿಪತ್ತುಗಳನ್ನೆಲ್ಲಾ ಪರಿಹರಿಸಬೇಕೆಂದು ಪ್ರಾರ್ಥಿಸಲು; ಅದಕ್ಕೆ ಶ್ರೀ ರಾಮಚಂದ್ರ ಪ್ರಭುವು ಅವರಿಗೆ ಅಭಯವನ್ನಿತುದನ್ನು ಕಂಡು, ಸೀತೆಯು, ನಿನಗೇನೊಂದೂ ಅಪರಾಧವನ್ನು ಮಾಡದಿರುವಾಗ ರಾಕ್ಷಸರನ್ನೆಲ್ಲಾ ಕೊಲ್ಲುವೆನೆಂದು ಸಂಕಲ್ಪಿಸಿದುದು ಯಾವ ನ್ಯಾಯವೆಂದು ತನ್ನ ಪತಿಯೊಂದಿಗೆ ಆಕ್ಷೇಪಿಸಿದಾಗ ಹೇಳುತ್ತಾರೆನೆಂದರೆ.

**"ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂವಾ ಸೀತೇ ಸಲಕ್ಷಣಾಮ್।**
**ನ ಹಿ ಪ್ರತಿಜ್ಞಾಂ ಸಂಶ್ರುತ್ಯ ಬ್ರಹ್ಮಣೇಭ್ಯೋ ವಿಶೇಷತಃ"**

ಈ ಬ್ರಾಹ್ಮಣರು ರಾಕ್ಷಸರಿಂದ ಪೀಡಿತರಾಗಿ ಕ್ಷತ್ರಿಯನಾದ ನನ್ನನ್ನು ಆ ಕಷ್ಟದಿಂದ ಬಿಡಿಸಬೇಕೆಂದು ಪ್ರಾರ್ಥಿಸಿ ಶರಣಾಗತರಾದರೆ ಅವರ ಕಷ್ಟವನ್ನು ತಪ್ಪಿಸಿಸುವದು ನನಗೆ ಅತ್ಯವಶ್ಯಕವಾದ ಧರ್ಮವು; ಆದುದರಿಂದ ಅವರಿಗೆ ಅಭಯವನ್ನಿತ್ತಿದ್ದಾಯಿತು. ಓ ಸೀತೆಯೇ ನಿನ್ನನ್ನಗಲಿ ಒಂದು ಕ್ಷಣಾರ್ಧ ಕೂಡ ಇರಲಾರೆನು. ಲಕ್ಷ್ಮಣನೂ ನನಗೆ ಪ್ರಾಣಕ್ಕಿಂತ ಪ್ರಿಯನಾದವನು; ಇಂತಹ ನಿಮ್ಮಿಬ್ಬರನ್ನಾಗಲಿ ತ್ಯಜಿಸುವೆನು. ಪ್ರತಿಜ್ಞೆಮಾಡಿದ ಮಾತನ್ನು ಎಂದಿಗೂ ಬಿಡ

ಲಾರನು. ಅದರಲ್ಲೂ ಬ್ರಹ್ಮವಿತ್ತುಗಳಲ್ಲಿ ಮಾಡಿದ ಪ್ರತಿಜ್ಞೆಯು ಇನ್ನೂ ವಿಶೇಷವು, ಅದನ್ನು ಎಂದಿಗೂ ಪರಿತ್ಯಾಗ ಮಾಡಲಾರರೆನೆಂದು ಹೇಳಿದರು.

ದ್ರೌಪದಿಗೆ ಕೌರವ ಸಭೆಯಲ್ಲಿ ದುಶ್ಶಾಸನ ದುರ್ಯೋಧನರುಗಳಿಂದುಂಟಾದ ಮಾನ ಭಂಗವನ್ನು ಕುರಿತು ಶ್ರೀ ಕೃಷ್ಣನಲ್ಲಿ ಆಕೆಯು ಹೇಳಿಕೊಂಡು, ಒಳ್ಳೇ ಕುಲದಲ್ಲಿ ಹುಟ್ಟಿ ಮಹಪರಾಕ್ರಮಿಗಳಾದ ಪಂಚಪಾಂಡವರುಗಳಿಗೆ ಪತ್ನಿಯಾಗಿ ಪತಿವ್ರತಾ ಧರ್ಮವನ್ನು ಕಾಪಾಡಿಕೊಂಡು, ನೀನೂ ಹತ್ತಿರ ಬಂಧುವಾಗಿ ಹೀಗಿದ್ದರೂ ಪಾಪಿಗಳಿಂದ ಮಾನ ಭಂಗವನ್ನು ಹೊಂದಿದೆನೇ ಎಂದು ಎರಡು ಕೈಗಳಿಂದಲೂ ಮುಖವನ್ನು ಮುಚ್ಚಿಕೊಂಡು ಶ್ರೀ ಕೃಷ್ಣನ ಮುಂದೆ ಅಳುತ್ತಾ ಹೇಳುತ್ತಾಳೇನೆಂದರೆ, ನಿನ್ನಲ್ಲಿ ಶರಣಾಗತಿಯನ್ನು ಮಾಡಿದುದರಿಂದ ಮಾನವು ಕಾಪಾಡಲ್ಪಟ್ಟಿತು. ಇದಕ್ಕೆ ಶ್ರೀ ಕೃಷ್ಣಭಗವಾನರು **"ಮಾಶುಚಃ"** ಅಳ ಬೇಡವೆಂದು ಹೇಳಿ ಆ ದುರಳರನ್ನು ಸಂಹರಿಸಿ, ನಿನ್ನ ಗಂಡಂದಿರಿಗೆ ರಾಜ್ಯವು ಬರುವ ಹಾಗೆ ಮಾಡಿ, ನಿನ್ನನ್ನು ಆ ರಾಜ ಮಹಿಷಿಯನ್ನಾಗಿ ಮಾಡುವೆನೆಂದು ಪ್ರತಿಜ್ಞೆಯನ್ನು ಮಾಡಿ ಹೇಳುತ್ತಾರೇನೆಂದರೆ:—

**"ಪತೇದ್ದ್ಯೌರ್ಹಿಮವಾನ್ ಶೀರ್ಯೇತ್ ಪೃಥಿವೀಶಕಲೀ ಭವೇತ್।**
**ಶುಷ್ಯೇತ್ತೋಯನಿಧಿಃ ಕೃಷ್ಣೇ ನಮೇ ಮೋಘಂ ವಚೋಭವೇತ್॥**

ಸ್ವರ್ಗವು ಕೆಳಗೆ ಬೀಳಬಹುದು; ಹಿಮವತ್ಪರ್ವತವು ಶೀಳಿ ಹೋಗಬಹುದು. ಭೂಮಿಯು ಚೂರು ಚೂರಾಗಿ ಒಡೆದು ಹೋಗ ಬಹುದು; ಸಮುದ್ರವು ಬತ್ತಿ ಹೋಗ ಬಹುದು; ಇವೆಲ್ಲಾ ಆಗ ತಕ್ಕದ್ದಲ್ಲವು; ಒಂದು ವೇಳೆ ಅವರೂ ಆಗ ಬಹುದು. ಓ ದ್ರೌಪದಿಯೇ ನನ್ನ ಪ್ರತಿಜ್ಞಾರೂಪ ವಾಕ್ಯವು ಎಂದಿಗೂ ವ್ಯರ್ಥವಾಗಲಾರದು ಎಂದುನಂಬು ಎಂಬದಾಗಿ ಸಮಾಧಾನ ಮಾಡಿದ ವಾಕ್ಯವು. ಇದೂ ಋಜುತ್ವವನ್ನು ಪ್ರಕಟಿಸುವ ಸಂದರ್ಭವು ಅಥವಾಆಶ್ರಿತರ ಇಚ್ಛಾನುಸಾರ ನಡೆಯೋಣವೇ ಋಜುತ್ವವೆಂದು ಅರ್ಥಹೇಳ ಬಹುದು. ಆದರೆ ಸ್ವಾಮಿಗೆ ದುರುಳರ ವಿಷಯದಲ್ಲಿ ಋಜತ್ವವಿಲ್ಲವು. ಇದನ್ನು ಕಾಲ ಯವನ ವೃತ್ತಾಂತ, ಭಸ್ಮಾಸುರನ ಇತಿಹಾಸ, ಮೋಹಿನ್ಯಾವತಾರ ಇತ್ಯಾದಿಗಳಿಂದ ಗ್ರಹಿಸ ಬಹುದು. ಈ ಋಜುತ್ವವು ಭಕ್ತನಿಗೆ ತನ್ನಲ್ಲಿ ಅತ್ಯಂತ ವಿಶ್ವಾಸವನ್ನಿಡಲು ಹೇತು ವಾಗುತ್ತದೆ. ಹಾಗೆಯೇ **"ರಾಮೋ ದ್ವಿರ್ನಾಭಿಭಾಷತೇ"** ಎಂದು ಹೇಳ ಲ್ಪಟ್ಟಿರುತ್ತದೆ. ಆಶ್ರಿತನ ಇಚ್ಛಾನು ಗುಣವಾಗಿ ಪ್ರವೃತ್ತಿಯು ಋಜತ್ವವೆಂದಾಗಲಿ ಹೇಳಬಹುದು.

(೫) **ಶುಚಿಃ**— ಅಪಹತ ಪಾಪ್ಮತಾದಿ ಗುಣ ವಿಶಿಷ್ಟನು ಅಥವಾ ಭಾವ ಶುದ್ಧಿಯುಳ್ಳವನು; ಈ ಭಾವ ಶುದ್ಧಿಯಿಂದಲೇ ಆಶ್ರಿತ ರಕ್ಷಣೆಯಲ್ಲಿ ಪ್ರತ್ಯು

ಪಕಾರಾದಿಗಳನ್ನು ಅಪೇಕ್ಷಿಸದೆ ಇರುವವನು; ಭಕ್ತಿಮಾತ್ರದಿಂದ ಅನುಗ್ರಹ ಮಾಡುವ ಭಾವ ಶುದ್ಧಿ ಇರುವವನು; **"ಅಣ್ವಪ್ಯುಪಾಹೃತಂ ಭಕ್ತ್ಯೈಃ ಪ್ರೇಮ್ಣಾಭೂರ್ಯೇವ ಮೇ ಭವೇತ್। ಭೂರಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ"** ಪ್ರೇಮದಿಂದ ಭಕ್ತರು ಅಲ್ಪವನ್ನು ತಂದು ಸಮರ್ಪಿಸಿದರೂ ಅದೇ ನನಗೆ ಅನಂತವಾಗುತ್ತದೆ. ಅಭಕ್ತರ ವಿಶೇಷ ಸಮರ್ಪಣೆಯೂ ನನಗೆ ತುಷ್ಟಿಯನ್ನುಂಟು ಮಾಡುವದಿಲ್ಲವು"; ಇದು ಕುಚೇಲರು ತಂದು ಸಮರ್ಪಿಸಿದ ಅವಲಕ್ಕಿಯ ವಿಷಯದಲ್ಲಿ ಶ್ರೀ ಕೃಷ್ಣರ ಹೇಳಿಕೆಯು. **"ಪೃಥಿವೀಂ ರತ್ನಸಂಪೂರ್ಣಾಂ ಯಃ ಕೃಷ್ಣಾಯ ಪ್ರಯಚ್ಛತಿ। ತಸ್ಯಾಪ್ಯನ್ಯಮನಸ್ಕಸ್ಯ ಸುಲಭೋ ನ ಜನಾರ್ದನಃ॥"** ರತ್ನಗಳಿಂದ ತುಂಬಿರುವ ಪೃಥಿವಿಯನ್ನು ಯಾವನು ಶ್ರೀ ಕೃಷ್ಣನಿಗೆ ಕೊಡುತ್ತಾನೋ ಅವನು ಭಕ್ತಿಯಿಲ್ಲದೆ ಅನ್ಯಮನಸ್ಕನಾಗಿದ್ದರೆ ಅಂತಹವನಿಗ ಸರ್ವೇಶ್ವರನು ಸುಲಭನಲ್ಲವು. ಮತ್ತು **"ಅನ್ಯತ್ಪೂರ್ಣಾದ ಪಾಂಕುಂಭಾತ್ ಅನ್ಯತ್ಪಾದಾವನೇಜನಾತ್। ಅನ್ಯತ್ಕುಶಲ ಸಂಪ್ರಶ್ನಾನ್ನ ಚೇಚ್ಛತಿ ಜನಾರ್ದನಃ॥"** ಮರ್ಯಾದೆಗಾಗಿ ಪೂರ್ಣಕುಂಭವನ್ನು ತಂದು ಬರಮಾಡಿಕೊಳ್ಳುವದೇನು, ಪಾದಗಳನ್ನು ತೊಳೆದು ಸಂಪ್ರೋಕ್ಷಣೆ ಮಾಡಿಕೊಳ್ಳುವದೇನು, ಅಥವಾ ಕುಶಲ ಪ್ರಶ್ನೆಯನ್ನು ಮಾಡುವದೇನು, ಇವುಗಳನ್ನಲ್ಲದೆ ಇನ್ನೂ ಯಾವುವೂ ಶ್ರೀ ಕೃಷ್ಣನಿಗೆ ಬೇಕಿಲ್ಲವು. ದ್ರವ್ಯಾನುಕೂಲ ಬೇಕಾಗಿಲ್ಲದ ಮತ್ತು ತುಂಬಾ ಶ್ರಮ ಸಾಧ್ಯವಿಲ್ಲದ ಈ ಅಲ್ಪೋಪಚಾರಗಳಿಂದಲೇ ಸಂತುಷ್ಟನಾಗುವನೆಂಬ ಭಾವವು.

ಅಥವಾ **ಶುಚಿಃ-** ಎಂದರ ಪಾವನವನ್ನುಂಟು ಮಾಡುವ ಪ್ರಭಾವವು. ಆತನ ಪಾದ ಸ್ಪರ್ಶದಿಂದುಂಟಾದುದರಿಂದ ಗಂಗೆಯು ತುಂಬಾ ಪವಿತ್ರವು, ಮತ್ತು ಪಾವನತ್ವವೂ. ತನ್ನ ಪಾದಸ್ಪರ್ಶದಿಂದ ಅಹಲ್ಯೆಯು ಪವಿತ್ರಳಾದಳು. ಧ್ರುವನು ಆತನ ಸ್ಪರ್ಶದಿಂದ ಸುಜ್ಞಾನಿಯಾದನು. **"ಪಾವನಸ್ಸರ್ವಭೂತಾನಾಂ ತ್ವಮೇವ ರಘುನಂದನ"** ಓ ರಘುನಂದನನೇ ನೀನೇ ಸರ್ವ **ಪ್ರಾಣಿಗಳಿಗೂ** ಪಾವನ ರೂಪನು. **"ಪವಿತ್ರಾಣಾಂಹಿ ಗೋವಿಂದಃ ಪವಿತ್ರಂ ಪರಮುಚ್ಯತೇ"** ಎಂಬುದೂ ಅನುಸಂಧೇಯವು. ಹಾಗೆಯೇ **"ಪವಿತ್ರಾಣಾಂ ಪವಿತ್ರಂಯೋ ಮಂಗಳಾನಾಂಚ ಮಂಗಳಮ್। ಶುಚಿರ್ಭವತಿ ಸಂಸ್ಮೃತ್ಯ ಸ್ನಾತೋ ಭವತಿ ದರ್ಶನಾತ್॥"** ಪವಿತ್ರವಾಗಿ ಮಾಡುವ ಶಕ್ತಿಯುಳ್ಳವುಗಳಲ್ಲೆಲ್ಲಾ ಸರ್ವಶ್ರೇಷ್ಠವಾದ ಪವಿತ್ರ ಮಾಡುವ ವಸ್ತುವು. ಮಂಗಳಕರವಾದವುಗಳಲ್ಲೆಲ್ಲಾ ಸರ್ವಶ್ರೇಷ್ಠ ಮಂಗಳಕರನು. ಆತನನ್ನು ಸ್ಮರಿಸಿದ ಮಾತ್ರದಿಂದಲೇ ಸ್ನಾನ ಮಾಡಿದ ಹಾಗೆ ಪವಿತ್ರನಾಗುವನು. **"ಸ್ನಾತೋ ವಾ ಯದಿ ವಾ ಸ್ನಾತ ಶ್ಶುಚಿರ್ಸ್ನಾಯದಿ ವಾ ಶುಚಿಃ। ಯಃ ಸ್ಮರೇತ್ಪುಂಡರೀಕಾಕ್ಷಮ್**

**ಸ ಬಾಹ್ಯಾಂತರ ಶ್ಶುಚಿಃ||"** ಸ್ನಾನ ಮಾಡಿಯೋ ಅಥವಾ ಸ್ನಾನ ಮಾಡದೆಯೋ, ಶುಚಿಯಾಗಿಯೋ ಅಥವಾ ಅಶುಚಿ ಯಾಗಿಯೋ ಪುಂಡರೀಕಾಕ್ಷನನ್ನು ಸ್ಮರಿಸಿ ದರೆ, ಅವನು ಒಳಗೂ ಹೊರಗೂ ಶುಚಿಯಾಗುವನು. "ಅಪವಿತ್ರಃ ಪವಿ **ತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ| ಯಃ ಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಂತರ ಶ್ಶುಚಿಃ||"** ಇದರ ಅಭಿಪ್ರಾಯವೂ ಮೇಲಿನದರ ಹಾಗೆಯೇ, ಆದುದರಿಂದಲೇ ಶ್ರೀ ಪಾಣಾಳ್ವಾರ್, ನಮ್ಮಾಳ್ವಾರ್, ತಿರುಮಂಗೈಯಾಳ್ವಾರ್ ತಿರುಮೊಳಿಶಿಯಾಳ್ವಾರ್ ಮೊದಲಾದವರುಗಳೆಲ್ಲಾ ಪರಮಪಾವನರೂಪರು. ಹೀನ ಕುಲದಲ್ಲಿ ಜನಿಸಿದರೂ ಪರಮ ಪವಿತ್ರರು. **"ಚಕ್ಷುಷಾ ತವ ಸೌಮ್ಯೇನ ಪೂತಾಽಸ್ಮಿ ರಘುನಂದನ| ಗಮಿಷ್ಯಾಮ್ಯಕ್ಷಯಾನ್ ಲೋಕಾಂ ಸ್ತ್ವತ್ಪ್ರಸಾ ದಾದ ರಿಂದಮ||"** (ಆರಣ್ಯ. ೭೩. ೧೩.) ಶಬರಿಯು ತನ್ನ ಹೀನಾವಸ್ಥೆಯನ್ನು ಕಳೆದುಕೊಂಡು ಶ್ರೀ ರಾಮಕಟಾಕ್ಷದಿಂದ ಪವಿತ್ರಳಾಗಿ ವೈಕುಂಠ ಲೋಕವನ್ನು ಹೊಂದುವೆನೆಂದು ಹೇಳಿಕೊಂಡಿರುತ್ತಾಳೆ.

(೬) **ಮೃದುಃ**– ಅಪರಾಧಿಗಳಾಗಿ ಬಹು ಭಯ ಯುಕ್ತರಾಗಿರುವ ರಿಂದಲೂ ಕೂಡ ಆಶ್ರಯಿಸಲು ಯೋಗ್ಯವಾದ ಮೃದು ಸ್ವಭಾವನು. ಇದನ್ನೇ ರಾವಣನ ಬಳಿಯಲ್ಲಿ ಸೀತೆಯು ಶ್ಲಾಘಿಸುತ್ತಾಳೆ. **ವಿದಿತ ಸ್ಸಹಿ ಧರ್ಮಜ್ಞ ಶ್ಶರಣಾಗತ ವತ್ಸಲಃ"** ಎಂಬದಾಗಿ. ಶ್ರೀ ರಾಮಚಂದ್ರ ಪ್ರಭುವಿನ ಗುಣ ಗಳನ್ನು ವರ್ಣಿಸುವ ಸಂದರ್ಭದಲ್ಲಿ **"ಸ ಚ ನಿತ್ಯಂ ಪ್ರಶಾಂತಾತ್ಮಾ ಮೃದು ಪೂರ್ವಂ ತು ಭಾಷತೇ| ಉಚ್ಯಮಾನೋಽಪಿ ಪರುಷಂ ನೋತ್ತರಂ ಪ್ರತಿ ಪದ್ಯತೇ||"** (ರಾಮಾ. ಅಯೋಧ್ಯಾ. ೧. ೧೦.) ಈ ಶ್ರೀ ರಾಮನಾದರೋ ಯಾವಾಗಲೂ ಶಾಂತವಾದ ಮನಸ್ಸನ್ನುಳ್ಳವನು, ಮೃದುವಾಗಿಯೇ ಮಾತಾಡುವ ವನು, ದಶರಥ ಮಹಾರಾಜನಿಗಿಂತ ವೈಲಕ್ಷಣ್ಯವು ತು ಶಬ್ದದಿಂದ ಹೇಳಲ್ಪಟ್ಟಿತು, ಯಾರಾದರೂ ಹಿರಿಯರು ಕಠಿಣೋಕ್ತಿಯನ್ನು ಹೇಳಿದರ ಅದಕ್ಕೆ ಪ್ರತ್ಯುತ್ತರ ವನ್ನೇ ಕೊಡದ ಮಹಾನುಭಾವನು. ಶತ್ರುವಿಗೇನೇ ಈ ಮುಂದಿನ ಮೃದು ವಾಕ್ಯವನ್ನಾಡಿದನು.– **"ಅರಾಕ್ಷಸ ಮಿಮಂ ಲೋಕಂ ಕರ್ತಾಸ್ಮಿ ನಿಶಿತೈ ಶ್ಶರೈಃ| ನ ಚೇ ಚ್ಛರಣಮಭ್ಯೇಷಿ ಮಾ ಮುಪಾದಾಯ ಮೈಥಿಲೀಮ್||"** ನನ್ನನ್ನು ಶರಣುಹೊಂದಿ ಮೈಥಿಲಿಯನ್ನು ತಂದು ಒಪ್ಪಿಸು; ಹಾಗಿಲ್ಲದಿದ್ದರೆ ನನ್ನ ಕ್ರೂರಬಾಣಗಳಿಂದ ಲೋಕದಲ್ಲಿ ರಾಕ್ಷಸರೇ ಇಲ್ಲದ ಹಾಗೆ ಮಾಡುವೆನು; ಉತ್ತರಾರ್ಧವು ಮೃದು ವಾಕ್ಯವು. ಹೀಗೆ ದಂಡಿಸುವವೃತ್ತಿಯಲ್ಲಿಯೂ ಸಾಮ ವಾಕ್ಯವುಳ್ಳವನು; **"ಶಮ ಮಿಚ್ಛತಿ ದಾಶಾರ್ಹಃ"** (ಉದ್ಯೋಗ. ೮೯. ೧೬) ಎಂಬ ವಿದುರನು ಧೃತರಾಷ್ಟ್ರನಿಗೆ ಸಂಧಿಗೆ ಶ್ರೀ ಕೃಷ್ಣನು ಬಂದ ಕಾಲದಲ್ಲಿ ಹೇಳುತ್ತಾರೆ. ಹಾಗೆಯೇ ಸಂಧಿಗೆ ಹೋದಾಗ ಶ್ರೀ ಕೃಷ್ಣ ಪ್ರಭುವು ದುರ್ಯೋ

ಧನನಿಗೆ ಭೋಧಿಸಿದ ಮೃದು ಪೂರ್ವವಾದ ಅಮೋಘವಾಕ್ಕಿಗೆ ಉದ್ಯೋಗ ಪರ್ವದ ೧೨೪ನೆಯ ಅಧ್ಯಾಯವನ್ನು ಅವಲೋಕಿಸ ಬಹುದು ಅಲ್ಲಿ ಶ್ರೀ ಕೃಷ್ಣನು ದುರ್ಯೋಧನನ್ನು ಕುರಿತು **"ಅಬ್ರವೀ ನ್ಮಧುರಾಂ ವಾಚಂ ಸರ್ವಧರ್ಮಾರ್ಥ ತತ್ವವಿತ್"** ಎಂದು ಹೇಳಿದನೆಂದು ಮಹರ್ಷಿಯೋಕ್ತಿಯು ಇರುತ್ತದೆ. **"ಪಾಂಡವೈಃ ಸುಂಶಮಂ ಕೃತ್ವಾಕೃತ್ವಾ ಚ ಸುಹೃದಾಂ ವಚಃ। ಸಂಪ್ರೀಯಮಾಣೋ ಮಿತ್ರೈಶ್ಚ ಚಿರಂ ಭದ್ರಾಣ್ಯವಾಪ್ಸ್ಯತಿ"** ಎಂಬುದು ಅಧ್ಯಾಯಾಂತ್ಯ ಶ್ಲೋಕವು.

(೨) **ದಯಾಳುಃ**– ತನಗೊಂದು ಪ್ರಯೋಜನಾಪೇಕ್ಷೆಯಿಲ್ಲದೆ ಇತರರ ದುಃಖ ಸಂಕಟಗಳನ್ನು ಹೋಗಲಾಡಿಸುವವನು. ಆಗಲಿ, ಇಷ್ಟೆಲ್ಲಾ ದುಃಖಸಂಕಟಗಳನ್ನು ಲೋಕದಲ್ಲಿ ನಿರ್ಮಾಣಿಸಿರುವವನು ಹೇಗೆ ದಯಾಳುವು? ಎಂದರೆ ಅವರವರ ದುಷ್ಕರ್ಮಾನುಸಾರವಾಗಿ ಅವರವರಿಗೆ ಸುಖ ದುಃಖ, ಆನಂದಕ್ಲೇಶಾದಿಗಳಾಗುವದರಿಂದ ಸರ್ವೇಶ್ವರನ ದೋಷವೇನೂ ಇಲ್ಲವು. ಲೋಕದಲ್ಲಿ ತೋರಿಬರುವ ಸುಖದುಃಖ ವೈಷಮ್ಯಗಳಿಗೆ ಸರ್ವೇಶನು ಕಾರಣವಲ್ಲವು. ಆತನಿಗೆ ಆ **"ವೈಷಮ್ಯನೈರ್ಘೃಣ್ಯೇನ, ಸಾಪೇಕ್ಷತ್ವಾತ್ ತಥಾಹಿ ದರ್ಶಯತಿ** (          ) ಎಂಬ ಬ್ರಹ್ಮ ಸೂತ್ರದಲ್ಲಿ ಪರಮ ಪುರುಷನಿಗೆ ವೈಷಮ್ಯನೈರ್ಘೃಣ್ಯ ದೋಷವಿಲ್ಲವು; ಏಕೆಂದರೆ ವೈಷಮ್ಯಕ್ಕೆ ಕಾರಣವು ಚೇತನ ಸುಕೃತ ದುಷ್ಕೃತಗಳು. ಬೃಹದಾರಣ್ಯಕದಲ್ಲಿ **"ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೋಭವತಿ"** (ಬೃಹ. ೬. ೪. ೫) ಎಂದು ಹೇಳಲ್ಪಟ್ಟಿರುತ್ತದೆ. ಯುದ್ಧದಲ್ಲಿ ಮಡಿದು ಬಿದ್ದಿರುವ ತನ್ನ ಪತಿಯನ್ನು ಕುರಿತು ಮಂಡೋದರಿಯು ಹೀಗೆಯೇ ಹೇಳಿರುತ್ತಾಳೆ.- **"ಶುಭಕೃಚ್ಛುಭ ಮಾಪ್ನೋತಿ ಪಾಪಕೃತ್ಪಾಪ ಮಶ್ನುತೇ। ವಿಭೀಷಣ ಸ್ಸುಖಂ ಪ್ರಾಪ್ತಸ್ತ್ವಂ ಪ್ರಾಪ್ತಃ ಪಾಪ ಮೀದೃಶಮ್"** ಎಂಬದಾಗಿ. ಶ್ರೀ ಪರಾಶರರು ಹಾಗೆಯೇ ತಮ್ಮ ಶಿಷ್ಯರಾದ ಮೈತ್ರೇಯರಿಗೆ ಉಪದೇಶಿಸಿರುತ್ತಾರೆ.- **"ನೀಯತೇ ತಪತಾಂ ಶ್ರೇಷ್ಠ ಸ್ವಶಕ್ತ್ಯಾವಸ್ತುವಸ್ತುತಾಮ್"** (ವಿ. ಪು. ೧. ೪. ೫೨) ಓ ತಪೋನಿಷ್ಠರಲ್ಲಿ ಶ್ರೇಷ್ಠರಾದ ಮೈತ್ರೇಯರೇ, ಚೇತನನು ತನ್ನ ದೇಹ ಪ್ರಾಪ್ತಿಯನ್ನೂ ಹೊಂದುವದು ಸ್ವಕರ್ಮಾ ಎಂದರೆ ತನ್ನ ಪೂರ್ವಕರ್ಮಾನುಸಾರವಾಗಿಯೇ ಎಂದು ಭಾವಿಸಿ.

ಆಗಲಿ ಕರ್ಮಾನು ಗುಣವಾಗಿ ಸರ್ವೇಶ್ವರನು ನಡೆಸಿದರೆ **ದಯಾಳು** ಹೇಗೆ? ಎಂದರೆ, ಸರ್ವೇಶ್ವರನು ನಮಗಾಗಿ ಮಾಡಿರುವ ಉಪಕಾರವು ಇಷ್ಟೆಂದು ಹೇಳಲು ಅಳವಲ್ಲವು.- ನಮಗೆ ದುರ್ಲಭವಾದ ಮಾನುಷಾದಿ ಜನ್ಮಗಳನ್ನುಂಟು ಮಾಡಿ ತನ್ನನ್ನು ಬಂದು ಸೇರಿ ಸರ್ವಕ್ಲೇಶಗಳಿಂದಲೂ ವಿಮುಕ್ತರಾಗಲೆಂದು ಕರಣ ಕಳೇಬರವ, ಜ್ಞಾನ ವಿವೇಕಾದಿಗಳನ್ನು ಕೊಟ್ಟು, ಸಚ್ಛಾಸ್ತ್ರವನ್ನು

ಕೊಟ್ಟು ಅವುಗಳ ಉಪಬ್ರಹ್ಮಣಗಳನ್ನೇರ್ಪಡಿಸಿ, ಅವುಗಳನ್ನು ಪದೇಶಿಸುವ ಯೋಗ್ಯತೆಯುಳ್ಳವರು ಎಲ್ಲಾ ಕಾಲದಲ್ಲೂ ಏರ್ಪಡಿಸಿ, ತನ್ನನ್ನು ಹೊಂದುವ ಮಾರ್ಗಗಳನ್ನು ಅವರು ಉಪದೇಶಿಸುವ ಹಾಗೆ ಮಾಡಿ, ಉಪಾಯಾನು ಷ್ಠಾನದಿಂದ ಕೃತಕೃತ್ಯರಾದವರನ್ನು ತನ್ನ ಲೋಕಕ್ಕೆ ಕರೆಮ ಕೊಂಡು, ಹೇಯ ಸಂಬಂಧ ತೊಲಗಿಸಿ, ಪರಿಪೂರ್ಣ ಬ್ರಹ್ಮಾನು ಭವರೂಪವಾದ ಆನಂದವನ್ನು ಉಂಟುಮಾಡುವದೆಲ್ಲವೂ ದಯಾಳುತ್ವದ ಮಹಿಮೆಯಲ್ಲವೇ? ಆದರೆ, ತಮಗೆ ಮೊದಲು ಕೊಟ್ಟ ಶರೀರೇಂದ್ರಿಯಗಳನ್ನು ದುರುಪಯೋಗ ಮಾಡಿ ಕ್ಲೇಶಗಳನ್ನು ಸಂಪಾದಿಸಿ ಕೊಂಡಿರುತ್ತಾರೆ. ಈ ಕ್ಲೇಶಗಳು ಉಂಟಾಗುವದರಲ್ಲಿಯೂ ಸರ್ವೇಶ್ವರನು ದಯಾಳುವೇ; ಹೇಗೆಂದರೆ ಆ ಕ್ಲೇಶಗಳ ಮೂಲಕ ಸ್ವಾಮಿ ಯನ್ನು ಸ್ಮರಿಸಿ ಆ ಕ್ಲೇಶಗಳ ನಾಶಕ್ಕಾಗಿಯೂ ಶ್ರೇಯಃ ಪ್ರಾಪ್ತಿಗಾಗಿಯೂ ಉಪಾಯಾನುಷ್ಠಾನವನ್ನು ಸ್ವಾಮಿಯು ಮಾಡಿಸುವನು. ಆದುದರಿಂದ ಪರಮ ಭಾಗವತರಾದ ಕುಚೇಲರು ದಾರಿದ್ರ್ಯವನ್ನು ದಿವ್ಯ ವೈಕುಂಠದಲ್ಲಿ ಪರಮ ಪುರುಷ ನನ್ನು ತೋರಿಸುವ ಅಂಜನವನ್ನಾಗಿ ಭಾವಿಸಿ ಹೇಳುತ್ತಾರೆ. **"ಅಧನೋಽಯಂ ಧನಂ ಪ್ರಾಪ್ಯ ಮಾದ್ಯನ್ನುಚ್ಚೈರ್ನಮಾಂ ಸ್ಮರೇತ್। ಇತಿ ಕಾರುಣಿಕೋ ನೂನಂ ಧನಂ ಮೇ ಭೂರಿ ನಾದದಾತ್॥"** ಈ ಭಕ್ತನೀಗ ದರಿದ್ರನಾಗಿ ದ್ದಾನೆ. ಆತನಿಗೆ ಹೆಚ್ಚು ದ್ರವ್ಯವನ್ನು ಕೊಟ್ಟರೆ ಮದಾಂಧನಾಗಿ ನನ್ನನ್ನು ಸ್ಮರಿಸದೇ ಹೋದಾನು; ಆದುದರಿಂದ **ಪರಮ ಕಾರುಣಿಕನಾದುದರಿಂದ** ದಾರಿದ್ರ್ಯವನ್ನು ಅನುಭವಿಸುತ್ತಿರುವ ನನಗೆ ದ್ರವ್ಯವನ್ನು ಕೊಡಲಿಲ್ಲವು" ಎಂಬ ದಾಗಿ. ಕಾಕಾಸುರನಿಗೆ ಕಣ್ಣುಕಿತ್ತಿದ್ದೂ ಸಹ ಆತನ ಶ್ರೇಯಸ್ಸಿಗಾಗಿ. ಪಾಂಡವ ರಿಗೆ ಒದಗಿದ ತೊಂದರೆಗಳೆಲ್ಲಾ ಶ್ರೀ ಕೃಷ್ಣನಲ್ಲಿ ಭಕ್ತಿಯನ್ನು ವೃದ್ಧಿಗೊಳಿಸಿ ದವು. ದ್ರೌಪದಿಗೆ ಉಂಟಾದ ಕ್ಲೇಶವು ಶ್ರೀ ಕೃಷ್ಣನ ಸಂಪೂರ್ಣಾನು ಗ್ರಹವನ್ನು ಹೊಂದಲು ಕಾರಣವಾಯಿತು. ಆದುದರಿಂದ ಶ್ರೀನಿಗಮಾಂತ ದೇಶಿಕರವರು ದಯಾಶತಕದಲ್ಲಿ ದಯಾ ಗುಣವನ್ನು ವಿಶೇಷವಾಗಿ ಕೊಂಡಾಡುವ ಸಂದರ್ಭದಲ್ಲಿ **"ದೋಷಾಭವೇಯು ರೇತೇ ಯದಿ ನಾಮ ತ್ವಯಾವಿನಾ ಭೂತಾಃ"** ದಯೆಯೊಂದಿಲ್ಲದಿದ್ದರೆ ಸ್ವಾಮಿಯ ಮಿಕ್ಕ ಕಲ್ಯಾಣಗುಣಗಳೆಲ್ಲಾ ದೋಷಯುಕ್ತಗಳಾಗುತ್ತಿದ್ದವೆಂದು ಹೇಳಿರುತ್ತಾರೆ. ಸ್ವಾಮಿಯ ದಯಾಳುತ್ವ ವನ್ನು ಪ್ರಕಟಿಸುವ ಸಂದರ್ಭಗಳು ಇತಿಹಾಸಗಳಲ್ಲಿ ತುಂಬಿರುತ್ತವೆ. ಸ್ವಾಮಿ ಯನ್ನು ಆಶ್ರಯಿಸಿ ತಮ್ಮ ದುಃಖಗಳನ್ನು ಆತನ ಕೃಪಾ ಮೂಲಕ ನೀಗಿ ಕೊಂಡು ಸುಖಿಗಳಾಗಿರುವ ನಿದರ್ಶನಗಳು ಅನೇಕರ ಜೀವಮಾನ ಕಾಲದಲ್ಲೂ ಇರುತ್ತವೆ.

(೮) **ಮಧುರಃ– "ರಸೋವೈಸಃ" "ಆನಂದೋ ಬ್ರಹ್ಮ"** ಇತ್ಯಾದಿ ಶ್ರುತಿಗಳಲ್ಲಿ ಹೇಳಿರುವ ಹಾಗೆ ಆನಂದ ಸ್ವರೂಪನು; ಆದುದರಿಂದಲೇ ಆಶ್ರಿತರನ್ನೂ **"ಆನಂದಯಾತಿ"** ಆನಂದ ಗೊಳಿಸುವವನು. ಇಂತಹ ಮಾಧುರ್ಯವು ಸಿದ್ಧೋಪಾಯನಾಗಿರುವ ಸ್ಥಿತಿಯಲ್ಲೂ ಉಂಟೆಂಬುದು **"ಪ್ರಿಯೋಹಿಜ್ಞಾನಿನೋತ್ಯರ್ಥಮಹಂ ಸಚ ಮಮಪ್ರಿಯಃ"** ಎಂಬ ಗೀತಾ ಹೇಳಿಕೆಯು ಪ್ರಕಟಿಸುತ್ತದೆ. ಸರ್ವೇಶ್ವರನು ತನ್ನ ಭಕ್ತಜನರಲ್ಲಿ ಆಡಿದ ವಾಕ್ಯಗಳೆಲ್ಲಾ ಮಧುರವಾದವೆಂದೇ ಹೇಳಲ್ಪಟ್ಟಿರುತ್ತದೆ. **"ಸಕೃದೇವ ಪ್ರಪನ್ನಾಯ" "ನತ್ಯಜೇಯಂ ಕಥಂಚನ" "ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್"** ಇತ್ಯಾದಿವಾಕ್ಯಗಳೆಲ್ಲಾ ಅಮೃತಸದೃಶವಾದವು. **"ದುಗ್ಧಂ ಗೀತಾಮೃತಂ ಮಹತ್"** ಎಂಬುದು ಅನುಸಂಧೇಯವು.

(೯) **ಸ್ಥಿರಃ–** ಸ್ಥಿರ ಸಙ್ಕಲ್ಪನು. ಮಹಾಪರಾಧಿಯು ಆಶ್ರಯಿಸಿಬಿಟ್ಟರೂ ತನ್ನ ರಕ್ಷಣೆಯ ಸಙ್ಕಲ್ಪವನ್ನು ತ್ಯಜಿಸದೇ ಇರುವವನು. ವಿಭೀಷಣಾದಿಗಳನ್ನು ಕುರಿತು **"ಮಿತ್ರ ಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಚನ! ದೋಷೋಯದ್ಯಪಿತಸ್ಯಸ್ಯಾತ್ ಸತಾಮೇತದ ಗರ್ಹಿತಮ್।."** ನಾನು ಜಗದ್ರಕ್ಷಕನೆಂಬ ಭಾವದಿಂದ ಚನ್ನಾಗಿ ಉಪಾಯಾನುಷ್ಠಾನವನ್ನು ಮಾಡಿ ಬಂದವನು ವಿಭೀಷಣನು. ಅಂತವನನ್ನು ನಾನು ಎಂದಿಗೂ ಬಿಡೆನು. ಆ ವಿಷಯದಲ್ಲಿ ನನಗೆ ಸ್ವಾತಂತ್ರ್ಯವೂ ಇಲ್ಲವು, ಶಕ್ತಿಯೂ ಇಲ್ಲವು. ಆಗಲಿ ಆತನು ದೋಷಯುಕ್ತನಲ್ಲವೇ? ಎಂದರೆ ದೋಷವಿದ್ದರೇನು. ನಾನು ಅವುಗಳನ್ನು ಸ್ಮರಿಸುವನಲ್ಲವು. ಅಂತಹ ದೋಷಿಯನ್ನೂ ರಕ್ಷಿಸುವುದು ಸತ್ಪುರುಷರಿಗೆ ನಿಂದ್ಯವಲ್ಲವು" ಎಂದು ಶ್ರೀ ರಾಮವಾಕ್ಯವು. ಹೀಗೆ ಸ್ಥಿರ ಸಙ್ಕಲ್ಪನಾದುದರಿಂದಲೇ, ಶ್ರೀ ರಾಮಚಂದ್ರ ಪ್ರಭುವು ತನ್ನನ್ನು ಆಶ್ರಿಸಿದ ವಿಭೀಷಣನಿಗೆ ಇನ್ನೂ ಸಮುದ್ರತರಣಕ್ಕೆ ಮುಂಚೆಯೇ, ಇನ್ನೂ ತಮ್ಮ ಮತ್ತು ರಾವಣನ ಬಲಾಬಲಗಳನ್ನು ಪರಿಶೀಲಿಸದೆ, ರಾವಣನನ್ನು ಕೊಲ್ಲದೆ, ಲಂಕಾರಾಜ್ಯಾಭಿಷೇಕವನ್ನು ಲಕ್ಷ್ಮಣನ ಮೂಲಕ ನಡೆಸಿಬಿಟ್ಟು, ಅನಂತರ ಅದು ನಡೆಯಬೇಕೆಂದು ಕಾದಿದ್ದು, ಪುನಃ ಲಂಕಾರಾಜ್ಯದಲ್ಲಿ ಅಭಿಷೇಕ ಮಾಡಿಸಿ **"ವಿಜ್ವರಃ ಪ್ರಮುಮೋದಹ"** ಎಂಬಲ್ಲಿ ಹೇಳಿರುವ ಹಾಗೆ ಸಂತೋಷ ಪಟ್ಟನೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಸತ್ಯ ಸಙ್ಕಲ್ಪನು. ಹಾಗೆಯೇ ದ್ರೌಪದಿಗೆ ಪ್ರತಿಜ್ಞೆಮಾಡಿ **"ಸತ್ಯಂತೇ ಪ್ರತಿ ಜಾನಾಮಿ ಕೃಷ್ಣೇ ಬಾಷ್ಪೋ ನಿಗೃಹ್ಯತಾ ಮ್।" ಹತಾಮಿತ್ರಾಂಛ್ರಿಯಾಯುಕ್ತಾ ನಚಿರಾದ್ದ್ರಕ್ಷ್ಯಸೇಪತೀಂ** ಎಂದು ಹೇಳಿದುದನ್ನು ನಡೆಸಿಕೊಟ್ಟ ಸತ್ಯ ಸಂಕಲ್ಪನು. ಓ ದ್ರೌಪದಿಯೇ

ಕಣ್ಣೀರನ್ನು ಒರಸಿಕೋ, ಅಳ ಬೇಡ; ಶತ್ರುಗಳೆಲ್ಲಾ ಯುದ್ಧದಲ್ಲಿ ಮಡಿಯುವ ಹಾಗೆ ಮಾಡಿ ನಿನ್ನ ಪತಿಗಳು ಸರ್ವಶ್ರೇಯಸ್ಸನ್ನು ಹೊಂದುವ ಹಾಗೆ ಮಾಡುವೆನೆಂದು ಪ್ರತಿಜ್ಞೆಮಾಡಿ ಹೇಳಿ ಅದನ್ನು ನಡೆಸಿಕೊಟ್ಟಿರುತ್ತಾರೆ.

(೧೦) **ಸಮಃ**– ಚೇತನರಲ್ಲಿ ಜಾತಿ ಗುಣ ವೃತ್ತಗಳ ವ್ಯತ್ಯಾಸವಿದ್ದರೂ, ಅವುಗಳನ್ನು ಪರಿಗಣಿಸಿಸದೇ ಯಾವಾಗ ಅವರುಗಳು ಆಶ್ರಯಿಸಿದರೋ ಆಗ ಎಲ್ಲರನ್ನೂ ಸಮವಾಗಿ ಭಾವಿಸುವವನು. ಆದುದರಿಂದಲೇ ಶ್ರುತಿಯು **ಸರ್ವಸ್ಯ ಶರಣಂ ಸುಹೃತ್** ಎಂದು ಸಮಭಾವನ್ನು ಪ್ರಕಟಿಸುತ್ತದೆ. ಆದುದರಿಂದಲೇ **"ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ!"** ಎಂದು ವಿಭೀಷಣನೂ ಹೇಳಿರುತ್ತಾನೆ. **ಭಗವಂತನೂ "ಸಮೋಽಹಂ ಸರ್ವಭೂತೇಷು"** ಎಂದು (ಗೀ. ೯. ೨೯. ) ಹೇಳಿಕೊಂಡಿರುತ್ತಾನೆ. ಹಾಗೆಯೇ **"ಸ್ತ್ರಿಯೋ ವೈಶ್ಯಾ ಸ್ತಥಾ ಶೂದ್ರಾಸ್ತೇಽಪಿಯಾನ್ತಿ ಪರಾಂಗತಿಮ್"** ಎಂಬಲ್ಲಿ ಜಾತಿ ಮೊದಲಾದ ವೈಷಮ್ಯವು ಭಗವಂತನಿಗಿಲ್ಲವೆಂಬುದು ವ್ಯಕ್ತವು. (ಗೀ. ೯ ೩೨) **"ಅಪಿಚೇತ್ಸುದುರಾಚಾರೋ ಭಜತೇಮಾಮನನ್ಯಭಾಕ್। ಸಾಧುರೇವ ಸಮನ್ತವ್ಯಃ"** (ಗೀ. ೨೯) ಎಂಬುದರಿಂದ ವೃತ್ತದಲ್ಲಿ ನೀಚತ್ವವಿದ್ದರೂ ಪರಿಗಣಿಸುವ ನಲ್ಲನೆಂಬುದು ವ್ಯಕ್ತವು. ಹೀಗೆ ಸಮತ್ವವನ್ನು ಹೇಳಿರುವದು ಅಪ್ರಪನ್ನ ಪ್ರಪನ್ನರಿಬ್ಬರನ್ನೂ ಒಂದೇ ವಿಧವಾಗಿ ಸಮಭಾವವನ್ನು ನೋಡುವನು ಎಂಬರ್ಥವು ಸುತರಾಂ ಅಲ್ಲವು. ಏಕೆಂದರೆ **"ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ"** ಎಂದು ತಾವೇ ಹೇಳಿಕೊಂಡಿರುತ್ತಾರೆ. **"ಅಹಂ ಭಕ್ತಪರಾಧೀನಃ"** ಎಂದು ಹೇಳಿಕೊಂಡಿರುತ್ತಾರೆ. ವಿಭೀಷಣನನ್ನು ನಾಲ್ಕನೆಯ ತಮ್ಮನ ಹಾಗೆ ಲಕ್ಷ್ಮಣಾದಿಗಳಿಗೆ ಸಮನಾಗಿ ಭಾವಿಸಿದರು. ರಾವಣನನ್ನು ವಧ್ಯನನ್ನಾಗಿ ಭಾವಿಸಿದರು. **ಮಮಪ್ರಾಣಾಹಿ ಪಾಂಡವಾಃ** ಎಂದು ಹೇಳಿದರು. ದುರ್ಯೋಧನಾದಿಗಳನ್ನು ಅಮಿತ್ರರೆಂದು ಭಾವಿಸಿ, ತನಗೆಂದೇ ಮಹತ್ತಾಗಿ ಏರ್ಪಡಿಸಿದ ರಾಜಾರ್ಹವಾದ ಊಟ, ಉಪಚಾರಗಳನ್ನು ತ್ಯಾಗಮಾಡಿ ವಿದುರಾನ್ನವನ್ನು ತಮಗೆ ಅರ್ಹವಾದುದಾಗಿ ಭಾವಿಸಿದರು. ಆದುದರಿಂದ ಸಮತ್ವವು ಎಲ್ಲಿ ಎಂದರೆ (೧) ಆಶ್ರಿತರಲ್ಲಿ (೨) ಎಲ್ಲರೂ ತನ್ನನ್ನು ಆಶ್ರಯಿಸಲಿ ಎಂದು ಅದಕ್ಕೆ ಬೇಕಾದ ಸಕಲ ಸಾಮಗ್ರಿಗಳನ್ನು ಒದಗಿಸಿ ಕೊಡುವವರಲ್ಲಿ. ರಾಜನೂ ಹಾಗೆಯೇ ವಿದ್ಯಾಭ್ಯಾಸ, ರೋಗ ಚಿಕಿತ್ಸೆ, ಬೇಕಾದ ಆಹಾರಗಳ ಉಪಪತ್ತಿಯನ್ನುಂಟುಮಾಡುವದರಲ್ಲೂ ಪ್ರಯಾಣಕ್ಕೆ ಅನುಕೂಲ್ಯತೆ ಮುಂತಾದವುಗಳನ್ನು ಒದಗಿಸುವದು, ಶತ್ರುಗಳಿಂದ ಕಾಪಾಡುವದು ಇವೇ ಮೊದಲಾದವುಗಳಲ್ಲಿ ಹೇಗೆ ಉಚ್ಚನೀಚರೆಂಬ ವೈಷಮ್ಯವಿಲ್ಲದೆ ಸಮನೋ, ಹಾಗೆಯೇ ಸ್ವರೇಶ್ವರನು. ಆದರೆ, ರಾಜನು ತನ್ನ

ರಾಜ್ಯಾಡಳತಕ್ಕೆ ಮಾತ್ರ ತನಗೆ ಯೋಗ್ಯರೆಂದು ತಿಳಿದವರನ್ನು ಮಾತ್ರವೇ ಸನ್ಮಾನಿಸುವನೋ, ಹಾಗೆಯೇ ರಾಜಾಧಿರಾಜನು.

(೧೧) **ಕೃತೀ**– ತನ್ನ ಪ್ರಯೋಜನಕ್ಕಾಗಿ ಏನನ್ನೂ ಮಾಡದೆ ಚೇತನರ ಹಿತಕ್ಕಾಗಿ ಯಾವಾಗಲೂ ಪ್ರವೃತ್ತಿಯುಳ್ಳವನು. **"ನಮೇಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ। ನಾನವಾಪ್ತಮವಾಪ್ತವ್ಯಂ ವರ್ತ ಏವಚ ಕರ್ಮಣಿ॥"** (ಗೀ. ೩. ೨೨.) ಅದನ್ನು ಹೇಗೆ ಮಾಡುವನೆಂದರೆ, ತುಂಬಾ ಆತನು ಕಷ್ಟಪಡುವದಿಲ್ಲವು. ಸಙ್ಕಲ್ಪ ಮಾತ್ರದಿಂದಲೇ **"ಏಷಏವ ಸಾಧು ಕರ್ಮಕಾರಯತಿಯಮೇಭ್ಯೋಲೋಕೇಭ್ಯ ಉನ್ನಿನೀಷತಿ"** (ಕೌಷೀ. ೩. ೮) ಆತನನ್ನು ಸಾಧು ಕರ್ಮಮಾಡುವ ಹಾಗೆ ಮಾಡಿ ಆತನನ್ನು ಉದ್ಧಾರಮಾಡುವನೆಂದು ಹೇಳಲ್ಪಟ್ಟಿದೆ.

ಅಥವಾ ಆಶ್ರಿತರಕ್ಷಣೆಯನ್ನು ಮಾಡಿಬಿಟ್ಟ ಕೃತಕೃತ್ಯನು ತಾನು ಎಂದು ಭಾವಿಸುವವನು; ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಅಭೀಷಿಕ್ತನಾಗಬೇಕೆಂದು ಸಙ್ಕಲ್ಪಿಸಿದನಲ್ಲಾ, ಅದು ನಡೆಯಬೇಕೆಂದು ಕಾತರನಾಗಿದ್ದು ಅದು ನಡೆದ ನಂತರ ತಾನು ಕೃತಕೃತ್ಯನೆಂದು ಭಾವಿಸಿದವನು. **"ಅಭಿಷಿಚ್ಯ ಚ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಮ್। ಕೃತಕೃತ್ಯಸ್ತದಾರಾಮೋ ವಿಜ್ವರಃ ಪ್ರಮುಮೋದಹ॥"** ಎಂದು ಮಹರ್ಷಿಯು ಹೇಳಿರುತ್ತಾರೆ. ಅಥವಾ ಸರ್ವಜ್ಞನಾದುದರಿಂದ ಮಾಡಿದ ಸುಕೃತವನ್ನು ತಿಳಿದುನಡೆಯುವನೆಂಬುದು **"ಕೃತಜ್ಞಃ"** ಎಂಬಲ್ಲಿ ತೋರಿಬರುವದರಿಂದ ಧರ್ಮಪ್ರವರ್ತನ ರೂಪಾನುಷ್ಠಾನವನ್ನು ಅವತಾರ ಕಾಲಗಳಲ್ಲಿ ಹೊಂದಿರುವವನು. **"ಯೋಗಕ್ಷೇಮಂ ವಹಾಮ್ಯಹಮ್" "ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿಯುಗೇ ಯುಗೇ" "ದದಾಮಿ ಬುದ್ಧಿಯೋಗಂತಂ"** ಇತ್ಯಾದಿ ಪ್ರಮಾಣಗಳಲ್ಲಿ ಇದನ್ನು ಕಾಣಬಹುದು. **"ನಮೇ ಪಾರ್ಥಾಸ್ತಿಕರ್ತವ್ಯಂ ತ್ರಿಷುಲೋಕೇಷು ಕಿಂಚನ। ನಾನವಾಪ್ತಮವಾಪ್ತವ್ಯಂವರ್ತಏವ ಚ ಕರ್ಮಣಿ।"** (ಗೀ. ೩. ೨೨) ಮೂರು ಲೋಕದಲ್ಲೂ ನನಗೋಸ್ಕರವಾಗಿ ಮಾಡತಕ್ಕದ್ದು ಓ ಅರ್ಜುನನೇ ಯಾವದೂ ಇಲ್ಲವು. ನಾನು ಹೊಂದದೇ ಇರುವದಾಗಿ ನನಗೆ ಅಪೇಕ್ಷಿತವಾಗಿ ಯಾವುದೂ ಇಲ್ಲವು. ಆದರೂ ಚೇತನರ ಹಿತಾರ್ಥವಾಗಿ ನಾನು ಕಾರ್ಯವನ್ನು ಮಾಡುತ್ತಲೇ ಇರುವೆನು. ಎಂದು ಹೇಳಿಕೊಂಡಿರುತ್ತಾರೆ.

(೧೨) **ಕೃತಜ್ಞಃ**– ಯಾರು ಯಾರು ತನ್ನನ್ನೂ ಆಶ್ರಯಿಸಿದರೆಂಬುದನ್ನು ತನ್ನ ಸರ್ವಜ್ಞತೆಯಿಂದ ತಿಳಿದು, ಅವರಿಗೆ ಫಲವನ್ನು ಪ್ರಾರ್ಥನಾನುಗುಣವಾಗಿ ಕೊಡುವವನು. "ಕಥಂಚಿದು ಪಕಾರೇಣ ಕೃತೇನೈಕೇನತುಷ್ಯತಿ"

(ರಾಮಾ. ಅಯೋಧ್ಯಾ. ) ಎಂಬಲ್ಲಿ ಇದು ವಿದಿತವು. ತಾನೇ ಹೇಳಿಕೊಂಡಿರುತ್ತಾನೆ ಹೇಗೆಂದರೆ:– **"ಗೋವಿಂದೇತಿ ಯದಾಕ್ರಂದತ್ಕೃಷ್ಣಾ ಮಾಂ ದೂರವಾಸಿನಮ್। ಋಣಂ ಪ್ರವೃದ್ಧಮಿವಮೇ ಹೃದಯಾನ್ನಾಪಸರ್ಪತಿ"** ದ್ರೌಪದಿಯು ಅಸುರುಳ ದುರ್ಯೋಧನನ ಸಭೆಯಲ್ಲಿ ನನ್ನಲ್ಲಿ ಶರಣಾಗತಳಾದಾಗ ದೂರದಲ್ಲಿದ್ದು ಬಿಟ್ಟೆನು. ಇಲ್ಲದಿದ್ದರೆ ಆಗಲೇ ಅವರನ್ನೆಲ್ಲಾ ನಿರ್ಮೂಲ ಮಾಡುತ್ತಿದ್ದೆನೆಂಬ ಭಾವವು. ತುಂಬಾ ಹೆಚ್ಚಾಗಿ ಬೆಳೆದು ಹೋದ ಸಾಲವು ಹೃದಯವನ್ನು ಬಾಧಿಸುವ ಹಾಗೆ ಬಾಧಿಸುತ್ತಾ ನನ್ನ ಹೃದಯವನ್ನು ಬಿಟ್ಟು ಆ ಪ್ರಪನ್ನಳ ಋಣವು ಹೋಗಲೇ ಇಲ್ಲವೆಂದು ಶ್ರೀ ಕೃಷ್ಣಭಗವಾನರವರು ಹೇಳಿರುತ್ತಾರೆ.

ಅಥವಾ **ಕೃತಜ್ಞಃ**– ಎಂದರೆ ತನ್ನ ಆಶ್ರಿತನ ಪ್ರಾರ್ಥನೆಗೆ ವಿಘ್ನಗಳು ಒದಗಿದರೆ ಅದನ್ನು ತಿಳಿದು ಪೂರ್ತಿಮಾಡಿ ಕೊಡುವ ಶಕ್ತಿದಯೆಗಳನ್ನುಳ್ಳವನು. ಭರತನು ಬಂದು ಅಯೋಧ್ಯೆಗೆ ಬರಬೇಕೆಂದು ಬಹುವಾಗಿ ಪ್ರಾರ್ಥಿಸಿದಾಗ, ಅದಕ್ಕೆ ವಿಘ್ನವಾಗಿ ಪಿತೃವನ್ನು ಸತ್ಯಸಂಧನನ್ನಾಗಿ ಮಾಡಬೇಕಾಗಿ ೧೪ ವರುಷಗಳಕಾಲ ವನವಾಸಮಾಡಬೇಕಾಗಿದ್ದುದರಿಂದ, ಆ ಹದಿನಾಲ್ಕು ವರುಷಗಳು ಕಳೆದ ಮಾರನೆಯ ದಿನವೇ ಶ್ರೀ ರಾಮ ಪ್ರಭುವು ನಡೆಸಿಕೊಟ್ಟಿರುತ್ತಾರೆ. ಆ ಸಂದರ್ಭದಲ್ಲಿ ಒಂದು ದಿನ ಸಾವಕಾಶವಾಗುವ ಹಾಗೆ, ವಿಭೀಷಣನು ಒಂದು ದಿನ ಲಂಕೆಯಲ್ಲಿದ್ದು ವಿಶ್ರಮಿಸಿಕೊಂಡು ಹೋಗಬೇಕೆಂದು ಪ್ರಾರ್ಥಿಸುತ್ತಾನೆ. ಅದಕ್ಕೆ ಶ್ರೀ ರಾಮನು ಉತ್ತರವನ್ನೀಯುತ್ತಾನೇನೆಂದರೆ.– **"ತಂತು ಮೇ ಭ್ರಾತರಂ ದ್ರಷ್ಟುಂ ಭರತಂ ತ್ವರತೇಮನಃ। ಮಾಂ ನಿವರ್ತಯಿತುಂ ಯೋ ಸೌ ಚಿತ್ರಕೂಟ ಮುಪಾಗತಃ॥ ಶಿರಸಾಯಾಚಿತ ಸ್ತಸ್ಯ ವಚನಂ ನಕೃತಂ ಮಾಯಾ"** ನನ್ನನ್ನು ಪ್ರಾರ್ಥಿಸಿ ಅಯೋಧ್ಯೆಗೆ ಹಿಂತಿರುಗಿ ಕರೆದುಕೊಂಡು ಹೋಗಬೇಕೆಂದು ಶಿರಬಾಗಿ ಶರಣಾಗತಿಯನ್ನನುಷ್ಠಿಸಿದ ಭರತನ ವಾಕ್ಯವನ್ನು ನಡೆಸಿಕೊಡಲಿಲ್ಲವು. ಆದುದರಿಂದ ಆತನನ್ನು ಒಡನೆ ಹೋಗಿ ನೋಡಬೇಕೆಂದು ನನ್ನ ಮನಸ್ಸು ಕಾತರಗೊಂಡು ತ್ವರಿತಗೊಳಿಸುತ್ತದೆ. ಆದುದರಿಂದ ನಿಲ್ಲಲು ಸಾಧ್ಯವಿಲ್ಲವೆಂದು ಅಪ್ಪಣೆಕೊಡಿಸಿರುತ್ತಾರೆ.

**ತ್ವಮಸಿ**– ಆ ದಿವ್ಯಗುಣಗಳಿಂದ ಶೋಭಿಸುವವನು ನೀನು ಎಂಬ ಭಾವವು. ಆ ಗುಣಗಳು ಸ್ವಾಮಿಯನ್ನಾಶ್ರಯಿಸಿರುವುದರಿಂದ ಅವುಗಳಿಗೂ ಮಾಹಾತ್ಮ್ಯೆಯು. ಪರಿಮಳದಿಂದ ಹೂವಿಗೂ, ಹೂವಿನಿಂದ ಪರಿಮಳಕ್ಕೂ, ಹೇಗೆ ಉತ್ಕರ್ಷವೋ, ಹಾಗೆಯೇ ಇಲ್ಲಿಯೂ ಇಂತಹ ಸರ್ವೋತ್ಕೃಷ್ಟ ಗುಣಗಳು ಉಂಟು. ಅವು ಇಲ್ಲದಿರುವವನೆಂದು ಹೇಳಲು ಹೇಗೆ ನಿರ್ಗುಣವಾದಿಗಳಿಗೆ

ಮನಸ್ಸು ಬರುತ್ತದೋ ತಿಳಿಯದು. ಉಪಾಸನೆಯ ಪ್ರಕ್ರಿಯೆಯಲ್ಲಿ ಆತನ ದಿವ್ಯ ಮಂಗಳ ವಿಗ್ರಹವೂ, ಆತನ ಸರ್ವಶರೀರತ್ವ, ಆತ್ಮತ್ವಗಳೂ, ಕಲ್ಯಾಣ ಗುಣಾಕರ ತ್ವವೂ, ಸಹ ಉಪಾಸ್ಯವೆಂದು ಹೇಳಲ್ಪಟ್ಟಿರುತ್ತದೆ. **ತಸ್ಮಿನ್ಯದನ್ತಸ್ತದುಪಾಸಿತವ್ಯಮ್** ಎಂದಿರುತ್ತದೆ. ಇಲ್ಲಿ ತ್ವಂ ಎಂಬ ಪ್ರಯೋಗವು ಅಂತಹ ಕಲ್ಯಾಣ ಗುಣ ರೂಪವಾದ ಐಶ್ವರಯುಕ್ತನೆಂದು ತಿಳಿಸುತ್ತದೆ. ಅಸ್ತಿ ಎಂಬ ಮಧ್ಯಮ ಪುರುಷವನ್ನು ಸೂಚಿಸುವ ಕ್ರಿಯಾಪದದಿಂದಲೇ, **ತ್ವಂ** ಎಂಬುದು ಬೋಧಿತ ವಾಗಿದ್ದರೂ, ಪೃಥಕ್ಕಾಗಿ ಅದನ್ನು ಉಪಯೋಗಿಸಿರುವುದು ಈ ಮೇಲಿನ ಅಭಿಪ್ರಾಯದಿಂದಲೆಂದು ಭಾವಿಸಬಹುದು. ಆದುದರಿಂದ ಹೇಮಾರವಿಂದಕ್ಕಿಂತ ಪರಿಮಳಯುಕ್ತಾರವಿಂದಕ್ಕೆ ಹೇಗೆಯೋ ಹಾಗೆಯೇ ಕಲ್ಯಾಣಗುಣಗಳಿಂದ ಪರಮಾತ್ಮನಿಗೆ ಮಾಹಾತ್ಮ್ಯೆಯೂ. ಹಾಗೆಯೇ ನಿತ್ಯರಿಗೂ ಮುಕ್ತರಿಗಾದರೋ ಕೆಲವು ಕಲ್ಯಾಣಗುಣಗಳು ನಿನ್ನ ಅಧೀನವಾದವು. ನಿನಗಾದರೋ ಇತರರಿಂದ ಉಂಟಾಗದೇ ಸ್ವಾಭಾವಿಕವಾದವು. ಅದುದರಿಂದಲೇ ಶ್ರುತಿಯು "**ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ**" ಎಂದು ಹೇಳಿರುತ್ತದೆ. ನಿನ್ನಲ್ಲಿ ಇಲ್ಲದಿರುವ ಕಲ್ಯಾಣ ಗುಣಗಳು ಬೇರೆ ಎಲ್ಲಿಯೂ ಇಲ್ಲವೆಂದು ಹೇಳಲು ಆ ಗುಣಗಳು ಪರಮಪುರುಷನನ್ನೇ ಆಶ್ರಯಿಸಿರುವುದರಿಂದ ಅವುಗಳಿಗೂ ಮಾಹಾತ್ಮ್ಯೆಯೂ ಏರ್ಪಟ್ಟಿತು. ಅಭಿಯುಕ್ತರು "**ಗುಣಾಯತ್ತಂ**" ಎಂದಾರಂಭಿಸಿ, "**ಗುಣಾಯತ್ತಂ ಲೋಕೇ ಗುಣಿಷುಹಿಮತಂ ಮಂಗಳಪದಮ್। ವಿಪರ್ಯಸ್ತಂ ಹಸ್ತಿಕ್ಷಿತಿಧರಪತೇ ತತ್ತ್ವಯಿ ಪುನಃ॥**" ಎಂದು ಗುಣಗಳನ್ನು ಹೊಂದಿರುವುದರಿಂದಲೇ ಆ ಗುಣಗಳಿಗೆ ಅನುಗುಣವಾಗಿ ಮಂಗಳವಾದವೆಂಬುದು ಈ ಲೋಕದಲ್ಲಿ ವಾಡಿಕೆಯು, ಓ ಹಸ್ತಿಗಿರಿನಾಥನಾದ ವರದನೇ ನಿನ್ನಲ್ಲಾದರೋ ಇದು ವ್ಯತ್ಯಸ್ತವು ನಿನ್ನಿಂದಲೇ ಆ ಗುಣಗಳಿಗೆ ಮಾಹಾತ್ಮ್ಯೆಯು ಎಂದು ಹೇಳುತ್ತಾರೆ. "**ಗುಣಾಸ್ಸತ್ಯಜ್ಞಾನ ಪ್ರಭೃತಯ ಉತ ತ್ವದ್ಗತತಯಾ ಶುಭೀಭೂಯಂ ಯಾತಾ ಇತಿ ಹಿ ನಿರಣೈಷ್ಮ ಶ್ರುತಿವಶಾತ್**" ಸತ್ಯಜ್ಞಾನ ಮೊದಲಾದ ಗುಣಗಳು ಮಹನೀಯನಾದ ನಿನ್ನನ್ನು ಆಶ್ರಯಿಸಿದುದರಿಂದ ಅವು ಕಲ್ಯಾಣತ್ವವನ್ನು ಹೊಂದಿದವೆಂದು ಶ್ರುತಿಮೂಲಕವಾಗಿ ನಿರ್ಣಯಿಸಿರುವೆವು ಎಂದು ಹೇಳಿರುತ್ತಾರೆ. ಹಾಗೆಯೇ ವಾಲ್ಮೀಕಿ ಮಹರ್ಷಿಯೂ ಕೂಡ, "**ಶುಭಾಂನಿಮಿತ್ತಾನಿ ಶುಭಾ ನಿಭೇಜಿರೆ**" (ಸುಂದರ) ಶುಭ ಶಕುನಗಳು ಸೀತೆಗೆ ಪ್ರಾಣತ್ಯಾಗ ಮಾಡುವನೆಂಬ ಕಷ್ಟ ದೆಶೆಯಲ್ಲಿ ಆಕೆಯನ್ನು ಹೊಂದಿದುದರಿಂದ ಅವುಗಳು ಶುಭತ್ವವನ್ನು ಹೊಂದಿದವೆಂದು ಹೇಳಿರುತ್ತಾರೆ; ಅದು ಹೇಗೆ? ಎಂದರೆ ಮುಂದೆ "**ನರಂಶ್ರಿಯಾಜುಷ್ಟಮಿವೋಪಜೀವಿನಃ**" ಎಂದಿದೆ; ಐಶ್ವರ್ಯಯುಕ್ತನಾದ ರಾಜನೇ ಮೊದಲಾದವರನ್ನು ಆಶ್ರಯಿಸಿದವರಿಗೂ ಹೇಗೆ ಮಾಹಾತ್ಮ್ಯೆಯೋ ಹಾಗೆಯೇ.

**ಅಸಿ**– ಎಂಬ ವರ್ತಮಾನ ಕ್ರಿಯಾ ನಿರ್ದೇಶದಿಂದ ಪರಮ ಪುರುಷನಿಗೆ ಈ ಕಲ್ಯಾಣ ಗುಣಯೋಗವು ಯಾವಾಗಲೂ ಉಂಟೆಂಬುದನ್ನು ಸೂಚಿಸುವದಕ್ಕಾಗಿ **ಸ್ವಭಾವತಃ** ಎಂಬ ಪ್ರಯೋಗವು. ಇಲ್ಲಿ **ಸ್ವಭಾವತಃ** ಎಂದರೆ ನಮ್ಮ ಹಾಗೆ ಕರ್ಮವಶ್ಯವಾದ ಸ್ವಭಾವವೆಂಬ ಅರ್ಥವಲ್ಲವು. ಆತನಿಗೆ ಆ ಯೋಗವು ನೈಜವಾದುದು ಅಸಾಧಾರಣವಾದುದು ಎಂಬರ್ಥವು. ಕೆಲವರಿಗೆ ಒಂದೆರಡು ಕಲ್ಯಾಣಗಳಿರ ಬಹುದು. ಅವುಗಳಿಗೂ ಹೇಯಗುಣದ ಸಂಬಂಧವಿರ ಬಹುದು. ಇನ್ನು ಕೆಲವರಾದ ನಿತ್ಯಮುಕ್ತರುಗಳಿಗೆ ಕಲ್ಯಾಣ ಗುಣಗಳಲ್ಲಿ ಕೆಲವು ನಿನ್ನ ಸಙ್ಕಲ್ಪಾಧೀನವಾಗಿರ ಬಹುದು. ನಿನಗಾದರೋ ಹಾಗಲ್ಲವು; ಹೇಯಗುಣ ಸಂಬಂಧವೇ ಇಲ್ಲವೆಂದು **"ನಿಷ್ಕಳೋನಿರಂಜನೋ ನಿರಾಖ್ಯಾತೋ ಶುದ್ಧೋ"** ಎಂದು ಹೇಳಲ್ಪಟ್ಟಿರುತ್ತದೆ. ಈ **ಸ್ವಭಾವತಃ** ಎಂಬ ಪದವು ಶ್ರೀ ಪರಾಶರ ಮುನಿಗಳ ವಾಕ್ಯವಾದ **"ಸ್ವಾಭಾವಕೀ ಜ್ಞಾನ ಬಲಕ್ರಿಯಾ ಚ"** ಎಂಬುದನ್ನು ಸ್ಮೃತಿಪಥಕ್ಕೆತರುತ್ತದೆ. ಹೀಗೆ ಸರ್ವೇಶ್ವರನ ಕಲ್ಯಾಣ ಗುಣಗಳಿಗೆ ಹೇಯ ಸಂಬಂಧವಿಲ್ಲವು. ಇದು ಬ್ರಹ್ಮಸೂತ್ರದಲ್ಲಿ ವ್ಯಕ್ತವಾಗಿ **"ನ ಸ್ಥಾನತೋಽಪಿ ಪರಸ್ಯೋಭಯ ಲಿಂಗಂ ಸರ್ವತ್ರಹಿ"** (೩. ೨. ೧೧) ಎಂದು ಹೇಳಲ್ಪಟ್ಟಿರುತ್ತದೆ. ಹೇಯಸ್ಥಾನಗಳಾದ ಚಿದಚಿತ್ತುಗಳಲ್ಲಿ ಅಂತರ್ವ್ಯಾಪ್ತಿಯಿದ್ದರೂ ಕೂಡ, ಹೇಯ ಸಂಬಧವಿಲ್ಲವು. ಆದುದರಿಂದ ಆತನಿಗೆ **ಉಭಯಲಿಙ್ಗವು**, ಹೇಯಪ್ರತ್ಯನೀಕನು ಕಲ್ಯಾಣ ಗುಣಾಕರನು. ಅದೇನು ಹಾಗೆ ಎಂದರೆ ಶ್ರುತಿ ಸ್ಮೃತಿ ಇತಿಹಾಸ ಪುರಾಣಾದಿಗಳಲ್ಲಿ ಎಲ್ಲಾ ಕಡೆಯಲ್ಲೂ ಹಾಗೆಯಲ್ಲವೇ ಹೇಳಲ್ಪಟ್ಟಿರುತ್ತಾನೆ ಎಂಬುದು ಅರ್ಥವು.

ಈ ಕಲ್ಯಾಣ ಗುಣಗಳಿಗೆ ಆತನು ಸಮುದ್ರಪ್ರಾಯನೆಂದು **"ಸಮಸ್ತ ಕಲ್ಯಾಣಗುಣಾ ಮೃತೋದಧಿಃ"** ಎಂಬ ಪ್ರಯೋಗವು. **"ಸಮಸ್ತ ಕಲ್ಯಾಣ ಗುಣಾತ್ಮಕೋಽ ಸೌ ತೇಜೋಬಲೈಶ್ವರ್ಯ ಮಹಾವಬೋಧಃ"** ಎಂಬ ವಿಷ್ಣು ಪುರಾಣೋಕ್ತಿಯು ಇರುತ್ತದೆ. ಹಾಗೆಯೇ **"ತೇಜೋಬಲೈಶ್ವರ್ಯ ಮಹಾವಬೋಧ ಸುವೀರ್ಯ ಶಕ್ತ್ಯಾದಿಗುಣೈಕರಾಶಿಃ। ಪರಃಪರಾಣಾಂ ಸಕಲಾ ನ ಯತ್ರಕ್ಲೇಶಾದಯಃಸ್ಸನ್ತಿ ಪರಾವರೇಶೇ॥"** (ವಿ. ಪು. ೬. ೫. ೮೫) ಎಂಬಲ್ಲಿ ಹೇಯ ಪ್ರತ್ಯನೀಕತ್ವ ಕಲ್ಯಾಣಗುಣಾಕರತ್ವ ರೂಪಲಕ್ಷಣಗಳು ಪರಮ ಪುರುಷನಿಗೆ ಹೇಳಲ್ಪಟ್ಟಿವೆ. ಹೀಗೆಲ್ಲಾ ಎಲ್ಲಾ ಕಡೆಯಲ್ಲೂ ಹೇಳಿರುವದರಿಂದ ಅದ್ವೈತಿಗಳ ನಿರ್ಗುಣವಾದಕ್ಕೆ ಅವಕಾಶವಿಲ್ಲವು.

**ಅಮೃತೋದಧಿ** ಶಬ್ದದಿಂದ ಆ ಗುಣಗಳು ಅಪರಿಚ್ಛಿನ್ನವಾದುವೆಂದೂ, ತೈತ್ತರೀಯ ಆನಂದವಲ್ಲಿ ಉಪಪಾದಿತವಾಗಿರುವ ಹಾಗೆ ಅಪರಿಚ್ಛಿನ್ನವೆಂದೂ, ಅನಂತವೆಂದೂ, ವರ್ಣಿಸಲು ಸಾಧ್ಯವಿಲ್ಲವೆಂದೂ, ಮನಸ್ಸಿಂದಲೂ ಕೂಡ

**ಉಪರ್ಯು ಪರ್ಯಬ್ಜ ಭುವೋಪಿಪೂರುಷಾನ್**
**ಪ್ರಕಲ್ಪ್ಯತೇ ಯೇ ಶತಮಿತ್ಯನು ಕ್ರಮಾತ್।**
**ಗಿರಸ್ತ್ವದೇ ಕೈಕಗುಣಾವಧೀಪ್ಸಯಾ**
**ಸದಾಸ್ಥಿತಾ ನೋದ್ಯಮತೋತಿ ಶೇರತೇ॥೧೯॥**

---

ಭಾವಿಸಲು ಸಾಧ್ಯವಿಲ್ಲವೆಂದೂ, **"ಯತೋವಾಚೋನಿವರ್ತನ್ತೇ ಅಪ್ರಾಪ್ಯ ಮನಸಾ ಸಹ"** ಎಂದು ಶ್ರುತಿಯು ಹೇಳಿರುತ್ತದೆ. ಅನ್ಯೈತ ಶಬ್ದದಿಂದ ಭೋಗ್ಯತಮತ್ವವು ಬೋಧಿತವು. **"ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ"** ಎಂಬಲ್ಲೂ ಮತ್ತು **"ಯ ಇಹಾತ್ಮಾನಂ ಮನು ವಿದ್ಯವ್ರಜನ್ತ್ಯೇತಾಂಶ್ಚ ಸತ್ಯಾನ್ ಕಾಮಾನ್"** ಎಂಬಲ್ಲೂ ಕಾಮಾನ್ ಶಬ್ದವು ಮನೋಹರಗಳಾದ ಕಲ್ಯಾಣಗುಣಗಳನ್ನು ಭೋಧಿಸುತ್ತದೆ; ಪರಿಪೂರ್ಣ ಬ್ರಹ್ಮಾನುಭವವು ಈ ಕಲ್ಯಾಣಗುಣಗಳ ಸಮೃದ್ಧಿಯಿಂದ ಬೋಗ್ಯತಮವೆಂದು ಭಾವಿಸತಕ್ಕದ್ದು. ಇದನ್ನೇ ಮುಂದಿನ ಶ್ಲೋಕದಲ್ಲಿ, ಆನಂದ ಗುಣ ಒಂದನ್ನು ಕುರಿತು ಉಪಪಾದಿಸುತ್ತಾರೆ.

ಅವತಾರಿಕೆಯು ಹಿಂದಿನ ಶ್ಲೋಕದಲ್ಲಿ ಶ್ರೀಮನ್ನಾರಾಯಣನು **"ಸಮಸ್ತ ಕಲ್ಯಾಣಗುಣಾ ಮೃತೋದಧಿಃ"** ಎಂದು, ಸರ್ವೇಶ್ವರನ ಕಲ್ಯಾಣ ಗುಣಾಕರಯೋಗ ಮಾಹಾತ್ಮ್ಯೆಯನ್ನು ಪ್ರಶಂಸಿದರು. ಹೀಗೆ ಅಸಂಖ್ಯಾತ ಗಳಾದ ಗುಣಗಳಲ್ಲಿ ಪ್ರತಿಯೊಂದೂ ಅನವಧಿಕವಾದ ಅತಿಶಯವುಳ್ಳದೆಂದು ತೈತ್ತರೀಯ ಆನಂದವಲ್ಲಿಯಲ್ಲಿ ಅನಂದಗುಣ ಒಂದನ್ನು ನಿದರ್ಶನವಾಗಿ ತೆಗೆದು ಕೊಂಡು ಅದರ ಪರಿಮಿತಿ ಎಷ್ಟು ಎಂದು ಊಹಿಸಲು ಕೂಡ ಸಾಧ್ಯವಿಲ್ಲ ಎಂಬುದು ಬಹು ಸ್ವಾರಸ್ಯವಾಗಿ ಪ್ರತಿವಾದಿಸಲ್ಪಟ್ಟಿರುವುದನ್ನು ತಿಳಿಸುತ್ತಾರೆ. ಅಲ್ಲಿ, ಪರಮಾತ್ಮನ ಸ್ವರೂಪವೂ ಗುಣವೂ ಸಹ ಆನಂದಮಯವೆಂದು ಹೇಳಿ ಆ ಆನಂದದ ಇಯತ್ತೆಯು ಇಷ್ಟೆಂದು ಹೇಳಲು ಸಾಧ್ಯವೇ ಎಂದು ಹೇಳಲು ಹೊರಟು, ಒಂದಕ್ಕಿಂತ ಇನ್ನೊಂದರ ಆನಂದವು ನೂರರಷ್ಟೆಂದೂ, ಅದಕ್ಕಿಂತ ಇನ್ನೊಂದರ ಅನಂದವು ನೂರರಷ್ಟು ಎಂದು ಮೇಲೆ ಮೇಲೆ ಹೇಳುತ್ತಾ ಹೋಗಿ, ಕೊನೆಗೆ ಅದರ ನೂರರಷ್ಟಾನಂದವು ಚತುರ್ಮುಖನದಾಗುತ್ತದೆಂದೂ, ಅದರ ನೂರರಷ್ಟು ಆನಂದವು ಪರಮಾತ್ಮನದೆಂದು ಒಂದುವೇಳೆ ಹೇಳಿದರೂ ಹೇಳಬಹುದು, ಎಂದು ತಿಳಿಸಿ, ಹೀಗೆ ಹೇಳಿದರೂ ಪರಮ ಪುರುಷನಾನಂದವೂ ಇಷ್ಟೆಂದು ಹೇಳಿದಂತೆ ಆಗಲಿಲ್ಲವೆಂದು ಭಾವಿಸಿ, ಕೊನೆಗೆ **"ಯತೋ ವಾಚೋನಿವರ್ತನ್ತೇ ಅಪ್ರಾಪ್ಯ ಮನಸಾಸಹ"** ಹೀಗೆ ಹೇಳುತ್ತಾ ಹೋಗುವದರಲ್ಲಿ ವಾಕ್ಕೇ ಹಿಂತಿರುಗುತ್ತದೇವಿನಾ, ಆನಂದದ ಪರಿಮಿತಿ ಇಷ್ಟೆಂದು ಬೋಧಿ

ಸಲು ಸಾಧ್ಯವಿಲ್ಲವೆಂದು ತಿಳಿಸಿ ಶ್ರುತಿಯು ವಿರಾಮವನ್ನು ಹೊಂದಿತು. ಈ ಅಭಿಪ್ರಾಯವನ್ನು ಈ ಶ್ಲೋಕದಲ್ಲಿ ಉಪಪಾದಿಸುತ್ತಾರೆ.

ಅರ್ಥವು **ಉಪರ್ಯುಪರಿ**– ಒಂದರ ಮೇಲೆ ಒಂದು ಹೇಗೆಂದರೆ, ವೇದಾಧ್ಯಯನಾದಿಗಳ ಮೂಲಕ ಅಧಿಕ ಜ್ಞಾನವುಳ್ಳ ಅಧ್ಯಾಪಕನಾಗಿ ಸಂಪೂರ್ಣಾರೋಗ್ಯವುಳ್ಳವನಾಗಿ ಮನೋಬಲ ಶರೀರಬಲಗಳುಳ್ಳವನಾಗಿ ಯವ್ವನಸ್ಥನಾಗಿ ರಾಜ್ಯವನ್ನಾಳುವವನಾಗಿ ಪೂರ್ಣಕಾಮನಾಗಿರುವವನ ಆನಂದವನ್ನು ಒಂದು ಮಾನುಷ ಆನಂದವೆಂದೂ, ಅದಕ್ಕೆ ನೂರರಷ್ಟು ಮನುಷ್ಯ ಗಂಧರ್ವಾನಂದವೆಂದೂ, ಅದಕ್ಕೆ ನೂರರಷ್ಟು ದೇವಗಂಧರ್ವಾನಂದವೆಂದೂ, ಹೀಗೆಯೇ ಹೇಳುತ್ತಾ ಹೋಗಿ ಕಡೆಗೆ ಇದರ ನೂರರಷ್ಟು ಇಂದ್ರನ ಆನಂದವೆಂದೂ, ಇಂದ್ರನ ನೂರರಷ್ಟು ನಂದವು ಬ್ರಹ್ಮನ ಆನಂದವೆಂದೂ, ಈತನ ನೂರರಷ್ಟು ಆನಂದವು ಚತುರ್ಮುಖಾನಂದವೆಂದೂ, ಹೀಗೆ ಮೇಲೆ ಮೇಲೆ ಅಧಿಕವೆಂದು ಹೇಳಿರುವ, **ಅಬ್ಜಭವಃ**– ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನ ಅಸಂಖ್ಯಾಕಗಳಾದ ಆಂಡಗಳ ಪ್ರತಿಯೊಂದರಲ್ಲೂ ಇರುವ ಸ್ವಾಮಿಯ ನಾಭೀಕಮಲದಲ್ಲಿ ಜನಿಸಿರುವ, **ಪೂರುಷಾನಪಿ**– ಪುರುಷರಾದ ಚತುರ್ಮುಖರನ್ನೂ ಕೂಡ, **ಪ್ರಕಲ್ಪ್ಯ**– ಹಿಂದಿನ ಪರಿಪೂರ್ಣ ಕಾಮ ಮನುಷ್ಯನಸ್ಥಾನದಲ್ಲಿಟ್ಟು **ತೇಽಯೋಽಶತಮಿತ್ಯನುಕ್ರಮಾತ್**– ಅದಕ್ಕೆ ನೂರರಷ್ಟಾದುದು ಯಾವುದೋ ಅಂತಹ ಆನಂದವೆಂದು ತೈತ್ತರೀಯದಲ್ಲಿ **"ತೇಯೇಽಶತಂ ಪ್ರಜಾಪತೇರಾನಂದಾಃ ಸ ಏಕೋ ಬ್ರಹ್ಮಣ ಆನಂದಃ"** ಎಂದು **ಅನುಕ್ರಮಾತ್**– ಅನುಸರಿಸಿ ಕ್ರಮವಾಗಿ ಹೇಳಿರುವದರಿಂದ, **ಗಿರಃ**– ವಾಕ್ಯಗಳು ಎಂದರೆ ತೈತ್ತರೀಯ ಶ್ರುತಿವಾಕ್ಯಗಳು **"ತ್ವದೇಕೈಕ ಗುಣಾವಧೀಪ್ಸಯಾ**– ನಿನ್ನ ಒಂದೊಂದು ಗುಣಗಳಲ್ಲೂ, ಈಗ ಪ್ರಕೃತದಲ್ಲಿ ಆನಂದ ಗುಣ ಒಂದರ **ಅವಧಿ**– ಎಲ್ಲೆಯನ್ನೂ **ಈಪ್ಸಯಾ**– ಕಂಡು ಹಿಡಿಯುವ ಆಶೆಯಿಂದ, **ಉದ್ಯಮತಃ**– ಪ್ರಯತ್ನಸುತ್ತಲೇ **ಸದಾಸ್ಥಿತಾಃ**– ಯಾವಾಗಲೂ ಇರುವುವುಗಳಾಗಿ **ನಾತಿ ಶೇರತೇ**– ಇನ್ನೂ ಉದ್ಯೋಗವನ್ನು **ತ್ಯಜಿಸಿ ಮಲಗಲೇ** ಇಲ್ಲವು. ಆದುದರಿಂದ ಪ್ರತಿಯೊಂದು ಕಲ್ಯಾಣಗುಣಾಕರನ ಗುಣಗಳೂ ಅವಧಿಯಿಲ್ಲದೆ ನಿರತಿಶಯವಾದವು ಎಂಬ ಭಾವವು. ಭಗವಂತನ ಆನಂದವು ಇಷ್ಟೆಂದು ಹೇಳಲು ಸಾಧ್ಯವೇ ಎಂದು ಪ್ರಯತ್ನಪಟ್ಟು ಆ ಪ್ರಯತ್ನವು ನೆರವೇರದೆ ಮುಂದಿನ ಅನುವಾಕದಲ್ಲಿ **"ಯತೋ ವಾಚೋ ನಿವರ್ತಂತೇಽಪ್ರಾಪ್ಯ ಮನಸಾಸಹ"** ಎಂದು ಹೇಳಿ, ವೇದ ಪುರುಷನ ವಾಕ್ಕುಗಳೂ ಕೂಡ, ಮನಸ್ಸೂ, ಆನಂದದ ಇಯತ್ತೆಯನ್ನು ಕಂಡು ಹಿಡಿಯಲಾರದು ಎಂದು ಹೇಳಿ ವಿರಾಮವನ್ನು ಹೊಂದಿದವು ಎಂದು ಮುಗಿಸಿರುತ್ತವೆ.

**ಉಪಪಾದನೆಯು- ಉಪರ್ಯುಪರಿ** ಎಂಬದಾಗಿ ಎರಡು ಸಲ ಹೇಳಿರುವದು ಮನುಷ್ಯಾನಂದವನ್ನು ಒಂದಾಗಿ ಇಟ್ಟು ಕೊಂಡು ಹೆಚ್ಚಿನ ಆನಂದವುಳ್ಳ ಚೇತನರ ಆನಂದವನ್ನು ಕ್ರಮವಾಗಿ ಗುಣಿಸುತ್ತಾ ಹೋದರೆ ಎಂಬ ಅರ್ಥವನ್ನು ಸೂಚಿಸುತ್ತದೆ **ಅಬ್ಜಭುವಃ**- ಎಂಬುದು ದ್ವಿತೀಯಾಂತ ಪದವು, ಇವರ ವಿಶೇಷ್ಯವಾದ ಪೂರುಷಾನ್ ಎಂಬುದರಿಂದ ಗ್ರಹಿಸಬಹುದು. ಬಹುವಚನವು ಏತಕ್ಕೆಂದರೆ ಬ್ರಹ್ಮಾಂಡಗಳು ಅನೇಕವು. ಪ್ರತಿಯೊಂದು ಅಂಡದಲ್ಲೂ ಒಬ್ಬೊಬ್ಬ ಬ್ರಹ್ಮ ಒಬ್ಬೊಬ್ಬ ರುದ್ರರಿದ್ದಾರೆ. ಇವರುಗಳಿಂದ ವ್ಯಷ್ಟಿ ಸೃಷ್ಟಿಲಯಗಳು ನಡೆಯುತ್ತವೆ. ಎಲ್ಲಾ ಅಂಡಕ್ಕೂ ಪಾಲಕನು ಒಬ್ಬನೇ. ಆತನೇ ಮಹಾವಿಷ್ಣುವು. ವಿಷ್ಣುವು ಪರದೇವತೆಯು; ಚತುರ್ಮುಖರೂ ರುದ್ರರೂ ಜೀವಕೋಟಿಗೆ ಸೇರಿದವರು. ಆ ಕಾರಣದಿಂದ **ಅಬ್ಜಭುವಃ**- ಎಂಬುದು ದ್ವಿತೀಯಾ ಬಹುವಚನವು; ಪಂಚಮಿ ಷಷ್ಠೀ ವಿಭಕ್ತಿಗಳು, ಉಪರ್ಯುಪರಿ ಎಂದಿರುವದರಿಂದ ಸರಿ ಹೋಗುವದಿಲ್ಲವು; **ಪೂರುಷಾನ್ ಪ್ರಕಲ್ಪ್ಯ** ಎಂದಿರುವದರಿಂದ ದ್ವಿತೀಯಾಂತ ಪದವೇ ಆಗಿರಬೇಕು. ಇಲ್ಲಿ **ಅಬ್ಜಭುವಃ**- ಎಂಬ ಪ್ರಯೋಗದಿಂದ ತೈತ್ತರೀಯದಲ್ಲಿ **"ಸ ಏಕಃ ಪ್ರಜಾಪ್ರತೇರಾನಂದಃ"** ಎಂದು ಪ್ರಜಾಪತಿ ಶಬ್ದದಿಂದ ಹೇಳಲ್ಪಟ್ಟವನು ಚತುರ್ಮುಖನೆಂದು ವ್ಯಾಖ್ಯಾನ ಮಾಡಿದರು. ಈ ಸಂದರ್ಭದಲ್ಲಿ **"ಪೃಷ್ಟಃ ಪ್ರೋವಾಚ ಭಗವಾನ್ ಅಬ್ಜಯೋನಿಃ ಪಿತಾಮಹಃ"** ಎಂಬ ಪ್ರಮಾಣಾನುಸಾರ, **ಅಬ್ಜಭೂಃ** ಪಿತಾಮಹನೆನಿಸುವ ಚತುರ್ಮುಖನು. ರುದ್ರಪರವಾಗಿ ಹೇಳುವ ಅರ್ಥವು ಸರಿಯಲ್ಲವೆಂದೂ ಹೇಳಿದಂತಾಯಿತು. ಮತ್ತು ಬ್ರಹ್ಮ ಶಬ್ದದಿಂದ ಪರಬ್ರಹ್ಮನೇ ಹೇಳಲ್ಪಟ್ಟನೆಂದೂ ಆಯಿತು. **ಅಪಿ** ಶಬ್ದಸ್ವಾರಸ್ಯದಿಂದ ಚತುರ್ಮುಖನನ್ನೂ ಕೂಡ ಮನುಷ್ಯ ಸ್ಥಾನದಲ್ಲಿ ಇಡುತ್ತಾ ಇಡುತ್ತಾ ಎಣಿಸಿದರೂ ಆನಂದದ ಎಲ್ಲೆಯು ದೊರೆಯುವದಿಲ್ಲವೆಂಬ ಭಾವವು ಸೂಚಿತವು. **ಪ್ರಕಲ್ಪ್ಯ** ಶಬ್ದಕ್ಕೆ **ಪ್ರಕರ್ಷೇಣ ಕಲ್ಪಯಿತ್ವಾ** ಎಂಬ **ಅರ್ಥವು**. ಅದನ್ನೇ ಮುಂದೆ **"ತೇಯೇ ಶತಮಿತ್ಯ ನುಕ್ರಮಾತ್"** ಎಂದು ವಿವರಿಸಲ್ಪಟ್ಟಿರುತ್ತವೆ. ಹಿಂದೆ ಹೇಳಿದವರ ಆನಂದಕ್ಕಿಂತ ಮುಂದೆ ಹೇಳುವವರ ಆನಂದವು ನೂರರಷ್ಟು ಪ್ರಕರ್ಷವಾದುದು ಶ್ರುತಿಯು ಕಲ್ಪಿಸುತ್ತಾ ಹೋಗಿದೆ ಎಂಬ ತಾತ್ಪರ್ಯವು. **ಗಿರಃ** ಎಂಬುದರಿಂದ ಅಪೌರುಷೇಯಗಳಾದ ಯಥಾರ್ಥಗಳಾದ ಹಿತಬೋಧಕಗಳಾದ ವಾಕ್ಯಗಳು ಎಂಬರ್ಥವು. ಉದಾತ್ತವಾಗಿಯೂ ಅನುಕ್ತವಾಗಿಯೂ ಇರುವುವು ವೇದ ವಾಕ್ಯಗಳು. ಆದುದರಿಂದಲೇ ಅಪೌರುಷೇಯವು. ಸರ್ವೇಶ್ವರನು ಚತುರ್ಮುಖನಿಗ ಆದಿಯಲ್ಲಿ ಉಚ್ಚಾರಣ ಮತ್ತು ಅನೂಚ್ಚಾರಣರೂಪದಲ್ಲ ಹೇಳಿ, ಅತನಿಂದ ಆತನ ಮಕ್ಕಳಿಗೆ; **ಹೀಗೆ** ಕ್ರಮ

ವಾಗಿ ಬಂದಿರುವದರಿಂದ ವೇದಕ್ಕೆ ಅನಾದಿತ್ವವೂ, ನಿತ್ಯತ್ವವೂ, ಅಪೌರುಷೇಯತ್ವವೂ. ಅಪೌರುಷೇಯವೆಂದು ಹೇಳಿರುವದರಿಂದ ಪರನು ಪುರುಷನೂ ಪುರುಷನಾದುದರಿಂದ ಆತನೂ ಅದಕ್ಕೆ ಕಾರಣನಲ್ಲವು ಎಂಬ ಅಭಿಪ್ರಾಯವು ಸಮಂಜಸವಲ್ಲವು. ಏಕೆಂದರೆ ಪುರುಷ ಸೂಕ್ತವು ವೇದಸಾರವೆಂದು ಎಲ್ಲರೂ ಒಪ್ಪುವರು. ಅಲ್ಲಿ ಹೇಳಿರುವನೇನೆಂದರೆ. **"ತಸ್ಮಾದ್ಯಜ್ಞಾತ್ ಸರ್ವಹುತಃ ಋಚಸ್ಸಾಮಾನಿಜಜ್ಞಿರೇ। ಛಂದಾಂಸಿಜಜ್ಞಿರೇ। ಯಜು ಸ್ತಸ್ಮಾದಜಾಯತ"** ಎಂದು ಸೃಷ್ಟಿಕರ್ತನಾದ ಅನಿರುದ್ಧನೆಂಬ ನಾರಾಯಣನಿಂದ ಈ ವೇದಗಳೆಲ್ಲಾ ಚತುರ್ಮುಖನಿಗೆ ಉಪದೇಶಿಸುವದಕ್ಕಾಗಿ ಉತ್ಪನ್ನವಾದವು. ಹೀಗೆ ಪರಮಪುರುಷನಿಂದ ಉತ್ಪತ್ತಿಯಾದರೆ, ಅದಕ್ಕೆ ನಾಶವೂ ಉಂಟು ಎಂದು ಒಪ್ಪಬೇಕಲ್ಲವೇ? ಎಂಬುದು ಅವರ ಆಕ್ಷೇಪವು. ಇದು ಶಾಸ್ತ್ರಜ್ಞಾನದಿಂದ ದೂರೀಕೃತವಾದ ಆಕ್ಷೇಪವು. ಸೃಷ್ಟಿಯೆಲ್ಲವೂ ಸ್ವಾಮಿ ಸಙ್ಕಲ್ಪಾನುಸಾರ ನಡೆಯುವುವು. ಸೃಷ್ಟಿ ಎಂದರೆ ಇಲ್ಲದಿರುವುದು ಉಂಟಾಯಿತು ಎಂಬರ್ಥವಲ್ಲವು. ಸೂಕ್ಷ್ಮಾವಸ್ಥೆಯು ಹೋಗಿ ಸ್ಥೂಲಾವಸ್ಥೆಯ ಪ್ರಾಪ್ತಿಯು. ಇದು ಸ್ವಾಮಿಯ ಸಙ್ಕಲ್ಪದಿಂದ ನಿತ್ಯವಾಗಿರಲಿ ಎಂದು ಸೃಷ್ಟಿ ಯಾದರೆ ಅದು ನಿತ್ಯವಾಗುತ್ತದೆ. ನಿತ್ಯ ವಿಭೂತಿ, ನಿತ್ಯರೂ, ವೇದಗಳೂ, ಹಾಗೆಉಂಟಾದವು. ಇವೆಲ್ಲಾ ನಿತ್ಯಗಳು, ಮತ್ತು ಅನಾದಿಯಾಗಿ ಇರುವವು. ಅವಸ್ಥೆಯು ಅನಿತ್ಯವಾಗಿರಲಿ ಎಂದು ಸಙ್ಕಲ್ಪಿಸಿ ಉಂಟಾದವು ಈ ಭುವನಗಳು, ಅದರ ಅನಿತ್ಯವೆಂದರೆ ದ್ರವ್ಯವೇ ಇಲ್ಲದೆ ಹೋಗುವದಿಲ್ಲವು; ದ್ರವ್ಯವು ನಿತ್ಯವು. ಅದಕ್ಕೆ ಸ್ವರೂಪ ಸ್ವಭಾವಗಳಲ್ಲಿ ಪರಿಣಾಮ ಉಂಟೆಂಬ ಭಾವವು. ಆದುದರಿಂದ ವೇದಗಳನ್ನು ಇಂತನರು ಮಾಡಿದರೆಂಬ ಹೆಸರಿಲ್ಲವು. ಹೀಗೆ ಉಚ್ಚಾರಣಾನೂಚ್ಚಾರಣರೀತ್ಯಾ ಬಂದುದನ್ನು ತಿಳಿಸುವವಕ್ಕಾಗಿಯೇ **ಗಿರಃ**– ಎಂಬ ಪ್ರಯೋಗವು. ಇದಕ್ಕೆ **"ಯೋ ಬ್ರಹ್ಮಾಣಂ ವಿದಾಧಾತಿ ಪೂರ್ವಂ ಹೋ ವೈವೇದಾಂಶ್ಚ ಪ್ರಹಿಣೋತಿತಸ್ಮೈ"** ಎಂಬ (ಶ್ವೇತ. ೬. ೧೮) ಶ್ರುತಿ ವಾಕ್ಯವೇ ಪ್ರಮಾಣವು ವೇದವಾಗಿರುವುದುದರಿಂದಲೇ ಈ ಗುಣಗಳ ನಿರವಧಿಕಾತಿಶಯತ್ವವು ಯಥಾರ್ಥವಾದುದೆಂಬುದು ಸಿದ್ಧವಾಯಿತು. ಈ ಆನಂದ ಗುಣ ಒಂದಕ್ಕೆ ಮಾತ್ರವೇ ಈ ನಿರವಧಿಕಾತಶತ್ವವೂ ಎಂದು ಭಾವಿಸತಕ್ಕದ್ದಲ್ಲವೆಂದೂ, ಎಲ್ಲಾ ಗುಣಗಳೂ ಹಾಗೆಯೇ ಎಂದು ತಿಳಿಸುವದಕ್ಕಾಗಿ **"ಏಕೈಕ ಗುಣಾವಧೀಪ್ಸಯಾ"** ಎಂಬಲ್ಲಿ **ಏಕೈಕ** ಶಬ್ದ ಪ್ರಯೋಗವು. ಈ ಗುಣಸ್ತ ಅವಧಿಯನ್ನು ಕಂಡು ಹಿಡಿಯಬೇಕೆಂಬ ಈ ಪ್ಸಾ, ಅಪೇಕ್ಷೆಯನ್ನು **"ನೈಷಾನಂದ ಸ್ಯ ಮೀಮಾಂಸಾ ಭವತಿ"** ಎಂಬ ಅಸಾಧ್ಯ ಸಙ್ಕಲ್ಪವನ್ನು ಉಪನಿಷತ್ತು ಕೈಕೊಂಡು ವಿಚಾರಮಾಡಿ, ಅಸಾಧ್ಯವೆಂದೇ ಕೂನೆಗೆ ಸ್ಥಾಪಿಸಿತು.

**ಪರಮಾತ್ಮನ ಗುಣ** ವೆಂದು ಧರ್ಮಧರ್ಮಿಗಳನ್ನು ಬೋಧಿಸಿರುವದರಿಂದ, ಆನಂದವು ಸ್ವರೂಪ ಮಾತ್ರವೇ ಗುಣವಲ್ಲವು; ಆದುದರಿಂದ ಪರಮಾತ್ಮನು ನಿರ್ಗುಣನು ಎಂಬವಾದವು ನಿರಸ್ತವು. ಹಾಗೆ ಹೇಳುವವಾದಿಗಳಿಗೆ ಸಾಮಾನಾಧಿಕರಣ್ಯವೂ ಕೊಡುವದಿಲ್ಲವು. ನಮಗಾದರೂ ಧರ್ಮಧರ್ಮಿಗಳನ್ನು ಒಪ್ಪುವದರಿಂದ ಕೂಡುತ್ತದೆ.

ಶ್ಲೋಕದಲ್ಲಿರುವ **ಅಪಿ** ಶಬ್ದವನ್ನು **ಸದಾಸ್ಥಿತಾ ಅಪಿ** ಎಂಬಲ್ಲಿ ಸೇರಿಸಿ ಹೇಳಿದರೂ ಸಾಮಾಂಜಸ್ಯ ಉಂಟೆಂದು ಹೇಳುತ್ತಾರೆ. ಯಾವಾಗಲೂ ಉದ್ಯುಕ್ತವಾಗಿದ್ದರೂ ಕೂಡ ಎಂದು ಆಗ ಅರ್ಥವಾಗುತ್ತದೆ. **ಈ ಗಿರಃ ಸದಾಸ್ಥಿತಾಃ** ಎಂದು ಹೇಳಿದುದರಿಂದ ವೇದ ವಾಕ್ಯಗಳ ನಿತ್ಯತ್ವವನ್ನು ಉಪದೇಶಿಸಿದಂತೆಯೂ ಆಯಿತು. ಅಪೌರುಷೇಯವಾಗಿ ದೋಷರಹಿತವಾದ ವಾಕ್ಯಗಳೆಂದೂ ಹೇಳಿದಂತಾಯಿತು. ಅಥವಾ ಅಪಿ ಎಂಬುದನ್ನು ಪ್ರಕಲ್ಪ್ಯ ಎಂಬುದದೊಂದಿಗೆ ಸೇರಿಸಿ **"ಪ್ರಕಲ್ಪ್ಯಾಪಿ ನೋದ್ಯಮತೋತಿಶೇರತೇ"** ಎಂದೂ ಅನ್ವಯಿಸಬಹುದು. ಪುನಃ ಪುನಃ ಬ್ರಹ್ಮಾನಂದವನ್ನು ಮಾನುಷಾನಂದ ಸ್ಥಾನದಲ್ಲಿಡುತ್ತಾ ಹೋಗಿ ಗುಣಿಸಿದರೂ ಎಲ್ಲೆಯು ಸಿಕ್ಕದೇನೇ ಹೋಗುತ್ತದೆ; ಎಲ್ಲೆಯನ್ನು ಕಂಡು ಹಿಡಿಯಬೇಕೆಂಬ ಪ್ರಯತ್ನಕ್ಕೆ ವಿರಾಮವೇ ಇಲ್ಲವಾಗುತ್ತದೆಂಬ ಭಾವವು. ಅಸಂಭಾವಿತ ಕಲ್ಪನೆಯಿಂದ ಬೇಕಾದರೆ ಸಾಧ್ಯವೆಂದು ಹೇಳಿದರೂ ಅಸಾಧ್ಯವೆಂದೇ ಅಭಿಪ್ರಾಯವು. ಶ್ರೀದೇಶಿಕರವರು ಪಾದುಕಾ ಸಹಸ್ರದಲ್ಲಿ ಶ್ರೀರಙ್ಗನಾಥನ ಪಾದುಕೆಯ ಮಾಹಾತ್ಮ್ಯೆಯನ್ನು ಬರೆಯಲು ಸಾಧ್ಯವೇ ಎಂಬ ಸಂದರ್ಭದಲ್ಲಿ ಅಸಾಧ್ಯವೆಂದು ಹೇಳಲು, ಒಂದು ಅಸಂಭಾವಿತಕಲ್ಪನೆಯಿಂದ ಸಾಧ್ಯವೆಂದು ಹೇಳಿರುತ್ತಾರೆ:—

**ನಿಶ್ಶೇಷ ಮಂಬರತಲಂ ಯದಿ ಪತ್ರಿಕಾಸ್ಯಾತ್।**
**ಸಪ್ತಾರ್ಣವೀಯದಿ ಸಮೇತ್ಯ ಮಷೀಭವಿತ್ರೀ॥**
**ವಕ್ತಾ ಸಹಸ್ರವದನಃ ಪುರುಷಸ್ಸ್ವಯಂಚೇತ್।**
**ಲಿಖ್ಯೇತ ರಂಗಪತಿಪಾದುಕಯೋಃ ಪ್ರಭಾವಃ॥**

ಶ್ರೀ ರಂಗಪತಿ ಪಾದುಕೆಯ ಪ್ರಭಾವವನ್ನು ಯಾವಾಗ ಬರಿಯಲು ಸಾಧ್ಯವೆಂದರೆ ಹೇಳುತ್ತಾರೆ. ಆಕಾಶವೆಲ್ಲಾ ಕಾಗದವಾಗಿ, ಸಪ್ತಸಮುದ್ರವೂ ಮಶಿಯಾಗಿ ಹೇಳುವವನು ಸ್ವಾಮಿಯೇ ಸಹಸ್ರ ಮುಖದಿಂದಲೂ ಹೇಳಿದರೆ ಆಗೀಗ ಶ್ರೀ ರಂಗನಾಥನ ಪಾದುಕೆಯ ಪ್ರಭಾವವನ್ನೂ ಬರೆಯಬಹುದು; ಎಂದರೆ ಈ ಅಸಾಧ್ಯವಿಷಯಗಳು ಸೇರಿ ನಡೆಯುವ ಹಾಗಿಲ್ಲವು. ಆದುದರಿಂದ ಪ್ರಭಾವವು ನಿರವಧಿಕಾತಿಶಯವುಳ್ಳದ್ದು. ಅಂತಾದ್ದನ್ನು ಬರೆಯಲು

ತಾವು ಯತ್ನಿಸಿರುವುದು ಹಾಸ್ಯಾಸ್ಪದವೆಂಬ ಭಾವವು. ಹಿಂದೆ ನಾರಾಯಣನೇ ಪರತತ್ವವೆಂದು ಹಿಂದಿನ ಶ್ಲೋಕಗಳಲ್ಲಿ ಸ್ಥಾಪಿತನಾದವನೇ ಇಲ್ಲಿ **"ಸಏಕೋ ಬ್ರಹ್ಮಣ ಆನಂದಃ"** ಎಂದು ಬ್ರಹ್ಮ ಶಬ್ದ ಬೋಧಿತನೇ ಎಂದು ತಿಳಿಸು ವದಕ್ಕಾಗಿ ಆ ನಾರಾಯಣನನ್ನೇ ಕುರಿತು **ತ್ವದೇಕೈಕ** ಎಂಬಲ್ಲಿರುವ ಧರ್ಮಿ ಯನ್ನು ಬೋಧಿಸುವ ತ್ವಚ್ಛಬ್ದವು. ಆನಂದ ಮಯನೆಂದು ತೈತ್ತರೀಯದಲ್ಲಿ ಹೇಳಿರುವವನೂ ಶ್ರಿಯಃ ಪತಿಯಾದ ನಾರಾಯಣನೇ ಎಂದೂ ಹೇಳಲ್ಪಟ್ಟಿತು.

ಈ ತೈತ್ತರಿಯ ಶ್ರುತಿವಾಕ್ಯಗಳಿಂದ ತಿಳಿಯತಕ್ಕ ಇನ್ನೊಂದು ಮುಖ್ಯ ವಿಷಯ ಉಂಟು. ಅಲ್ಲಿ ಹೇಳಲ್ಪಟ್ಟಿರುವ ಎಲ್ಲರ ಆನಂದವೂ ಮುಕ್ತನಿಗೂ ಉಂಟೆಂದು ಅಲ್ಲಿ **"ಶ್ರೋತ್ರಿಯಸ್ಯಚಾಽಕಾಮಹತಸ್ಯ"** ಎಂಬದನ್ನು ಪಲ್ಲ ವಿಯಾಗಿ ಪ್ರತಿಯೊಬ್ಬರ ಆನಂದವನ್ನೊಂದಿಗೂ ಹೇಳಲ್ಪಟ್ಟಿದೆ. ಮುಕ್ತನಿಗೆ ಪರ ಮಾತ್ಮನ ಆನಂದವೇ ಇರುವಾಗ ಇವೆಲ್ಲರ ಆನಂದವೂ ಶ್ರೋತ್ರಿಯನಾಗಿ ಅಕಾಮಹತನಾಗಿ ಮುಕ್ತನಾಗುವನಿಗೆ ಇಲ್ಲವೇ? ಇದರಿಂದ **"ನಿರಂಜನಃ ಪರ ಮಂಸಾಮ್ಯ ಮುಪೈತಿ"** (ಮುಂ ೩. ೧. ೩) ಎಂಬ ಶ್ರುತಿಗೂ ಐಕಕಂಠ್ಯ ವನ್ನು ಹೇಳಿ, **"ಭೋಗ ಮಾತ್ರ ಸಾಮ್ಯಲಿಂಗಾ ಚ್ಚ"** ಎಂಬ ಬ್ರಹ್ಮ ಸೂತ್ರ ದಲ್ಲಿ (೪. ೪. ೨೧) ಹೇಳಿರುವ ಆನಂದದಲ್ಲಿ ಪರಮಾತ್ಮನಿಗೂ ಮುಕ್ತನಿಗೂ ಸಾಮ್ಯವು ಹೇಳಲ್ಪಟ್ಟಿರುತ್ತದೆ. ಹೀಗೆ ಐಕಕಂಠ್ಯವನ್ನು ಉಪಪಾದಿಸದೆ ದ್ವೈತಿ ಗಳು ಆನಂದ ತಾರತಮ್ಯವನ್ನು ಹೇಳುವರು. ಇದರಿಂದ ಶ್ರುತಿವಾಕ್ಯಗಳಿಗೆ ಪರಸ್ಪರ ವಿರೋಧವು ಏರ್ಪಡುತ್ತದೆ. ಸಾಮ್ಯ ಶಬ್ದವು ಎರಡು ವಸ್ತುಗಳಿಗೆ ಸಮತ್ವವನ್ನು ಹೇಳುವಾಗ ಅದ್ವೈತಿಗಳು ಸ್ವರೂಪೈಕ್ಯವನ್ನು ಹೇಳುವರು. ರಹ ಸ್ಯತ್ರಯಸಾರದ ೧೮೬೪-೧೯೧೦ ಪುಟಗಳನ್ನು ನೋಡಿ.

ಆದುದರಿಂದ ಪರಮಾತ್ಮನು **ಆನಂದ ಮಯ**ನೆಂದು ತೈತ್ತರೀಯ ದಲ್ಲೂ ಸೂತ್ರದ ಆನಂದ ಮಯಾಧಿ ಕರಣದಲ್ಲೂ ಸ್ಥಾಪಿಸಿದ ಅರ್ಥವನ್ನೂ ಉಪದೇಶಿಸುತ್ತಾರೆ. ಆನಂದ ಮಯನೇನು ಜೀವಾತ್ಮನೇ ಎಂಬ ಸಂದೇಹ ದಲ್ಲಿ **"ತಸ್ಯೈಷ ಏವಶಾರೀರಾತ್ಮಾ"** ಎಂದೂ ಛಾಂದೋಗ್ಯದಲ್ಲಿ **"ತತ್ವಮಸಿ ಶ್ವೇತಕೇತೋ"** ಎಂಬ ವಾಕ್ಯಗಳ ಮೂಲಕ ಪೂರ್ವ ಪಕ್ಷಿಯು ಜೀವಾತ್ಮನೆಂದು ಹೇಳಿದುದನ್ನು ನಿರಾಕರಿಸಿ, ಆನಂದಮಯನು ಪರಮಾತ್ಮನೇ ಎಂದು ತಿಳಿಸು ವದಕ್ಕಾಗಿ **ತ್ವದೇಕೈಕ** ಎಂಬಲ್ಲಿ ತ್ವಚ್ಛಬ್ದವನ್ನು ಸಾರಸ್ಯವಾಗಿ ಪ್ರಯೋಗಿಸಿರು ತ್ತಾರೆ. ಶ್ರೀ ಭಾಷ್ಯದಲ್ಲಿ ಶ್ರೀಯತಿವರ್ಯರು ಈ ಪೂರ್ವ ಪಕ್ಷಗಳನ್ನೆಲ್ಲಾ ನಿರಾ ಕರಿಸಿರುತ್ತಾರೆ.

ಹೀಗೆ ಶ್ರೀಮನ್ನಾರಾಯಣನ ಆನಂದವು ನಿರವಧಿಕವಾದುದೆಂದು ತೈತ್ತ ರೀಯದಲ್ಲಿ ಮಾತ್ರವೇ ಉಪಪಾದಿತವೆಂದು ಭಾವಿಸತಕ್ಕದ್ದಲ್ಲವು. ಬೃಹದಾ

**ತ್ವದಾಶ್ರಿತಾನಾಂ ಜಗದುಬ್ಭವಸ್ಥಿತಿ**
**ಪ್ರಣಾಶ ಸಂಸಾರ ವಿಮೋಚನಾದಯಃ।**
**ಭವನ್ತಿ ಲೀಲಾವಿಧಯಶ್ಚ ವೈದಿಕಾ**
**ಸ್ತ್ವದೀಯ ಗಂಭೀರ ಮನೋನುಸಾರಿಣಃ ॥೨೦॥**

---

ರಣ್ಯಕವಲ್ಲೂ (೬. ೩. ೩೩) ರಲ್ಲಿ ಈ ಅಭಿಪ್ರಾಯವೇ ಹೀಗೆಯೇ ಉಪಪಾದಿಸಲ್ಪಟ್ಟಿರುತ್ತದೆ. ಪ್ರಾಜ್ಞರು ಅವಲೋಕಿನಬಹುದು. ಆ ಶ್ರುತಿಗೂ ಛಾಂದೋಗ್ಯ ಶ್ರುತಿಗೂ ಕೆಲವರು ಸಮಂಜಸವಾದ ಅರ್ಥವನ್ನು ಹೇಳಲಿಲ್ಲವು.

**ಅವತಾರಿಕೆಯು.** ಹಿಂದಿನ ಶ್ಲೋಕವಲ್ಲಿ ಶ್ರೀಮನ್ನಾರಾಯಣನೇ ಆನಂದ ಸ್ವರೂಪನು ಆನಂದ ಗುಣಕನೆಂದು ಸ್ಥಾಪಿಸಿದರು. ಹೀಗೆ ಆನಂದಮಯನಾದುದರಿಂದಲೇ ತನ್ನ ಆಶ್ರಿತರನ್ನು "**ರಸೋವೈಸಃ। ರಸಗ್ಂಹ್ಯೇವಾಯಂ ಲಬ್ಧ್ವಾನಂದೀಭವತಿ। ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್। ಯದೇಷ ಆಕಾಶೋ ಆನಂದೋನಸ್ಯಾತ್। ಏಷಹ್ಯೇವಾನಂದಯಾತಿ**" ಎಂಬ ತೈತ್ತರೀಯಾರ್ಥವನ್ನು ಆ ಆನಂದಮಯನನ್ನು ಆಶ್ರಯಿಸಿದ ಬದ್ಧರಿಗೆ ಆನಂದವನ್ನು ಕೊಡುವುದಕ್ಕಾಗಿಯೇ ಕಂಕಣಬದ್ಧನಾಗಿದ್ದಾನೆಂದೂ, ಇಂತಹ ಅನುಗ್ರಹಕ್ಕಾಗಿಯೇ ಈ ಲೀಲಾವಿಭೂತಿಯ ಸರ್ವವ್ಯಾಪಾರಗಳೂ ಎಂದು ತಿಳಿಸುತ್ತಾರೆ.

**ಅರ್ಥವು:– ತ್ವದಾಶ್ರಿತಾನಾಂ**–ನಿನ್ನನ್ನು ಉಪಾಸನೆ ಅಥವಾ ಶರಣಾಗತಿಯ ಮೂಲಕ ಆಶ್ರಯಿಸಿರುವವರ ಪ್ರಯೋಜನಕ್ಕಾಗಿಯೇ, **ಜಗದುದ್ಭವ. ವಿಮೋಚನಾದಾಯಃ, ಜಗತ್**–ಜಗತ್ತಿನ **ಉದ್ಭವ**–ಸೃಷ್ಟಿ, **ಸ್ಥಿತಿ,** ಪ್ರಣಾಶ–ಲಯ ಮತ್ತು **ಸಂಸಾರ**–ಪ್ರಾಣಿಗಳಿಗೆ ಐಹಿಕಗಳಲ್ಲಿ ಪ್ರಿತಿಯೂ, **ವಿಮೋಚನಾದಾಯಃ**–ಆ ಸಂಸಾರದಿಂದ ಬಿಡುಗಡೆ ಮೊದಲಾದವು, **ಆದಿ** ಶಬ್ದದಿಂದ, ಅಂತರ್ಯಾಮಿಯಾಗಿ ಪ್ರೇರಕತ್ವ, ಅವತಾರಿಯಾಗಿ ಶಿಷ್ಟ ಪರಿಪಾಲನೆ, ದುಷ್ಟರ ವಿನಾಶ, ಧರ್ಮ ಸಂಸ್ಥಾಪನಾದಿಗಳುಹೇಳಲ್ಪಟ್ಟವು; ಇವೆಲ್ಲವೂ, **ತವ**–ಕೃಪಾನಿಧಿಯಾದ ನಿನ್ನ, **ಲೀಲಾವಿಧಯಃ ಭವನ್ತಿ**–ಲೀಲಾಕ್ರಮಗಳಾಗಿವೆ. **ವೈದಿಕಾಃ ವಿಧಯಃ**–ವೇದಗಳಲ್ಲಿ ವಿಧಿಸಲ್ಪಟ್ಟಕ್ರಮಗಳೂ, **ತ್ವದೀಯ ಗಂಭೀರ ಮನೋನುದಾರಿಣಃ** ನಿನ್ನ ಸಂಬಂಧವಾಗಿ, **ಗಂಭೀರ** ಆಳವನ್ನು ಕಂಡು ಹಿಡಿಯಲು ಸಾಧ್ಯವಾದ, **ಮನಃ** ಮನಸ್ಸನ್ನು, **ಅನುಸಾರಿಣಃ ಭವಂತಿ**–ಅನುಸರಿಸಿ ಉಂಟಾದವು ಆಗುತ್ತವೆ.

**ಉಪಪಾದನೆಯು.** ಸರ್ವೇಶ್ವರನು ನಿರತಿಶಯಾನಂದಸ್ವರೂಪನು ಎಂದು ಹೇಳಲ್ಪಟ್ಟನು. ಆದುದರಿಂದಲೇ ಈ ಜಗತ್ತಿನ ಸರ್ವವ್ಯಾಪಾರಗಳು ತನ್ನ ಆಶ್ರಿತರ ಐಹಿಕಾಮುಷ್ಮಿಕಗಳ ಉದ್ಧಾರಕ್ಕಾಗಿಯೇ ಎಂದು ಸ್ಥಾಪಿಸುತ್ತಾರೆ. ಆತನು ಪರಿಪೂರ್ಣಕಾಮನಾದುದರಿಂದ ಆತನಿಗೆ ಸ್ವತಃ ಪ್ರಯೋಜನವಿಲ್ಲದಿದ್ದರೂ, ವಿಶ್ವೋದ್ಧಾರಕ್ಕಾಗಿಯೇ ಭಗವಂತನ ಸರ್ವವ್ಯಾಪಾರಗಳೆಂದು ತಿಳಿಸುತ್ತಾರೆ. ಗೀತೆಯಲ್ಲಿ "**ನಮೇಪಾರ್ಥಾಸ್ತಿ ಕರ್ತವ್ಯಂತ್ರಿಷು ಲೋಕೇಷು ಕಿಂಚನ। ನಾನವಾಪ್ತಮವಾಪ್ತವ್ಯಂ ವರ್ತ ಏವಚ ಕರ್ಮಣಿ**" (ಗೀ. ೩. ೨೨) ಓ ಅರ್ಜುನನೇ ನನಗೆ

ನಿನ್ನ ಹಾಗೆ ಶಾಸ್ತ್ರವಶ್ಯತೆಯೂ ಕರ್ಮವಶ್ಯತೆಯೂ ಇಲ್ಲವು. ನಾನು ಪರಿಪೂರ್ಣ ಕಾಮನು; ಈ ಮೂರು ಲೋಕದಿಂದ ನನಗೆ ಆಗತಕ್ಕದ್ದೇನೂ ಇಲ್ಲವು; ಈಗ ಇಲ್ಲದೆ ಮುಂದೆ ಹೊಂದತಕ್ಕದ್ದು ಯಾವುದೂ ಇಲ್ಲವು. ಆದರೂ ಲೋಕರಕ್ಷಣಾರ್ಥ ವಾಗಿ ಯಾವಾಗಲೂ ವ್ಯಾಪಾರಗಳನ್ನುಳ್ಳವನಾಗಿಯೇ ಇರುವೆನೆಂದು ಹೇಳಿ ಕೊಂಡಿರುತ್ತಾರೆ.—ಪೂರ್ವಾರ್ಧದಿಂದ ಜಗತ್ತಿನ ಸರ್ವವಿಧ ವ್ಯಾಪಾರಗಳೂ ಪರಿಪೂರ್ಣಕಾಮನಾದ ನನಗೆ ಲೀಲಾ ರೂಪವಾದವೇ ವಿನಾ ನನಗೆ ಆಗಬೇಕಾದುದು ಏನೂ ಇಲ್ಲವೆನ್ನುತ್ತಾರೆ. ಸರ್ವೇಶ್ವರನಿಗೆ ಇಂತಹ ಅದ್ಭುತವಾದ ಕಲ್ಯಾಣಗುಣ ಯೋಗವನ್ನು ಅನುಭವಿಸುವುದಕ್ಕೆ ಪ್ರಾಣಿಗಳಿರಬೇಕು. ಇಲ್ಲದೆ ಹೋದರೆ ವನಕಾಂತಾರಗಳಲ್ಲಿ ಬಿದ್ದ ಚಂದ್ರಿಕೆಯ ಹಾಗೆ ನಿರರ್ಥಕವಾದವುಗಳಾಗುವುವು. **"ಏಕೋ ಬಹೂನಾಂ ವಿದಧಾತಿ ಕಾಮಾ್ನ್"** ಎಂಬಲ್ಲಿ ಹೇಳಿರುವ ಹಾಗೆ ಅನೇಕರು ಆತನನ್ನು ಆಶ್ರಯಿಸಿ ಅಭೀಷ್ಟಗಳನ್ನು ಕೇಳಿಕೊಂಡರಲ್ಲವೇ, ಪರಮ ಪುರುಷನು ಪರಮೋದಾರಿ ಎಂಬುದು ವ್ಯಕ್ತಪಟ್ಟೀತು ?

ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿಗಳೆಲ್ಲಾ ತ್ವದಾಶ್ರಿತರ ಪ್ರಯೋಜನಕ್ಕಾಗಿಯೇ ಎಂದು ಹೇಳಲ್ಪಟ್ಟಿತಲ್ಲಾ ಅದು ಹೇಗೆ ? ಇವೆಲ್ಲಾ **ಲೀಲಾವಿಧಯಃ** ಎಂದು ಹೇಳ ಲ್ಪಟ್ಟಿತಲ್ಲಾ ಅದು ಹೇಗೆ ? ಅನೇಕ ಜೀವಾತ್ಮರು ಸಂಸಾರದಲ್ಲಿ ಬಿದ್ದು ನರುಳುತ್ತಾ ಇರುವವನ್ನು ಕಂಡಿರುವೆವಲ್ಲಾ ಇಂತಾದ್ದು ಲೀಲೆ ಹೇಗೆ? ಒಬ್ಬನು ಕೆರೆಯಲ್ಲಿ ಬಿದ್ದು ಒದ್ದಾಡುತ್ತಿರುವುದು, ದಡದಲ್ಲಿ ನೋಡುತ್ತಿರುವ ನಿನಗೆ ಲೀಲೆ ಹೇಗಾದೀತು ? ಇತ್ಯಾದಿ ಪೂರ್ವ ಪಕ್ಷಗಳ ಸಮಾಧಾನವಾಗಿ, ಪರಮ ಪುರುಷನ ಆಶ್ರಿತರ ಸಂರಕ್ಷ ಣಾರ್ಥವಾಗಿಯೇ ಎಂದು **ತ್ವದಾಶ್ರಿತಾನಾಂ** ಎಂದೇ ಆರಂಭಿಸುತ್ತಾರೆ. **ಜಗದುದ್ಭವವು** ಹೇಗೆ ಆಶ್ರಿತರ ಉಪಯೋಗಕ್ಕಾಗಿ ಎಂದರೆ ಪ್ರಳಯದಲ್ಲಿ ಕರಣ ಕಳೇಬರಾದಿಗಳು ಯಾವುವೂ ಇಲ್ಲದೆ ಯಾವ ವ್ಯಾಪಾರಗಳೂ ಇಲ್ಲದೆ ದುರವಸ್ಥೆ ಯಲ್ಲಿದ್ದವರನ್ನು ಕರುಣಾನಿಧಿಯು ತನ್ನನ್ನು ಆಶ್ರಯಿಸಲೆಂದು ಪೂರ್ವದಲ್ಲಿ ಅಭುಕ್ತ ಕರ್ಮಗಳಿಗನುಸಾರವಾಗಿ ಕರಣ ಕಳೇಭರಾದಿಗಳನ್ನು ಉಂಟುಮಾಡಿ, ಜ್ಞಾನ ವಿವೇ ಕಾದಿಗಳನ್ನು ಕೊಟ್ಟು, ಸೃಷ್ಟಿಯ ವ್ಯಾಪಾರವನ್ನು ಅವಲಂಬಿಸುವನು—ಆಗಲಿ, ಕೆಲವು ಆತ್ಮರುಗಳಿಗೆ ಹೀನ ಜನ್ಮ ಉಂಟಾಗಿ ಜ್ಞಾನ ವಿವೇಕಾದಿಗಳಿಲ್ಲದ ಜನ್ಮ ಉಂಟಾಗು ತ್ತದಲ್ಲಾ ? ಎಂದರೆ ಅವರುಗಳ ದುಷ್ಕರ್ಮಪರಿಪಾಕಕ್ಕಾಗಿ ಅಂತಹ ಹೀನ ಜನ್ಮವು; ಹಿಂದೆ ಇರುವ ಸುಕೃತ ಮೂಲಕವಾಗಿ ಉತ್ತರೋತ್ತರ ಒಳ್ಳೆಯ ಜನ್ಮ ಉಂಟಾಗ ಬಹುದು; ಅನಂತರ ಜ್ಞಾನ ವಿವೇಕಗಳು ಉದಯಿಸಿ ಆತನನ್ನು ಆಶ್ರಯಿಸ ಬಹುದು. ಇದರಿಂದ ಜಗತ್ತಿನ ಸ್ಥಿತಿಯೂ ಪ್ರಾಣಿಗಳ ಉತ್ತರೋತ್ತರ ರಕ್ಷಣೆಯ ಸಂಕಲ್ಪವನ್ನನುಸರಿಸಿಯೇ ಇರುತ್ತದೆ ಈ ಪ್ರಾಣಿಗಳು ಸ್ವಾಮಿದತ್ತ ಕರಣ ಕಳೇಬರ ಗಳನ್ನು ದುರುಪಯೋಗಪಡಿಸಿ ತುಂಬಾ ಹೀನಸ್ಥಿತಿಗೆ ಬಂದರೆ, ಆಗ ಲಯವನ್ನುಂಟು ಮಾಡಿ ಹೊಸ ಸೃಷ್ಟಿಯ ಮೂಲಕ ಹೊಸ ಕರಣ ಕಳೇಬರ ಕೊಡಬೇಕೆಂಬ

ವತ್ಯ ಸಙ್ಕಲ್ಪವಾದುದರಿಂದ ಲೋಕರಕ್ಷಣಾರ್ಥವೆಂದೇ ಭಾವಿಸತಕ್ಕದ್ದು. ಸಂಸಾರಿಯಾಗಿ ದುಃಖಭಾಕ್ಕಾಗಿ ಆಗಿರುವುದು, ಸ್ವಾಮಿಯ ಸ್ವತಂತ್ರ ಸಙ್ಕಲ್ಪದಿಂದಲ್ಲವು. ಈ ಸಂಸಾರಿಯು ತನ್ನನ್ನಾಶ್ರಯಿಸಲಿ ಎಂಬ ಉದಾರಭಾವದಿಂದ, ಆತನಿಗೆ ಕರಣ ಕಳೇಬರಗಳನ್ನೂ ಜ್ಞಾನವಿವೇಕಗಳನ್ನೂ ಉಂಟು ಮಾಡುವುದು. ಈತನು ಅವುಗಳನ್ನು ದುರುಪಯೋಗ ಪಡಿಸಿರುವುದರಿಂದ ದುಃಖಭಾಕ್ಕಾಗಿರುವನು. ಈಗಲಾದರೂ ತನ್ನನ್ನು ಆಶ್ರಯಿಸಿದರೆ ಸಾಕು, ಸಂಸಾರದಿಂದ ವಿಮೋಚನೆಯನ್ನುಂಟು ಮಾಡುವೆನೆಂದು ಸರ್ವೇಶ್ವರನು ಕಾದಿರುವನು. ಆದುದರಿಂದ ಜಗದ್ವ್ಯಾಪಾರಗಳೆಲ್ಲಾ ಲೋಕಹಿತಾರ್ಥವಾಗಿಯೇ ಎಂದು ಹೇಳಿದರು; **ತ್ವದಾಶ್ರಿತಾನಾಂ ಕೃತೆ** ಎಂದು ಇಟ್ಟುಕೊಳ್ಳತಕ್ಕದ್ದು. ಆಶ್ರಿತರ ಪ್ರಯೋಜನಕ್ಕಾಗಿಯೇ ಎಂದು ಹೇಳಲ್ಪಟ್ಟಿತು.

ಈ ಜಗದ್ವ್ಯಾಪಾರಗಳೆಲ್ಲಾ **ಲೀಲಾಭವಂತಿ** ಎಂದು ಹೇಳಲ್ಪಟ್ಟಿರುತ್ತದೆ. ಲೋಕದಲ್ಲೂ ಕೂಡ, ಸ್ವಲ್ಪವುಟ್ಟಿಗೆ ಊಟ, ಉಪಚಾರ ಸಾಮಗ್ರಿಗಳಿಂದ ಪೂರ್ಣನಾದವನು, ಸಂಗೀತ, ಚಂಡಿನ ಆಟ ಮೊದಲಾದ ಲೀಲೆಗಳಲ್ಲಿ ಪ್ರವರ್ತಿಸುವನು. ಹಾಗೇಯೇ ಈ ಜಗದ್ವ್ಯಾಪಾರಗಳೆಂದೂ ಸರ್ವೇಶ್ವರನಿಗೆ ಲೀಲಾ ವ್ಯಾಪಾರಗಳೆಂದೇ ಅನೇಕ ಸ್ಥಳಗಳಲ್ಲಿ ಹೇಳಲ್ಪಟ್ಟಿವೆ. **"ಲೋಕವತ್ತು ಲೀಲಾಕೈವಲ್ಯಂ"** ಎಂಬ ವ್ಯಾಸಸೂತ್ರದಲ್ಲಿ (೨.೧. ೩೩) ವ್ಯಕ್ತವು. ಅವಾಪ್ತ ಸಮಸ್ತ ಕಾಮನಾದ ಸರ್ವೇಶ್ವರನಿಗೆ ಸೃಷ್ಟಿ ಸ್ಥಿತಿ ಲಯಾದಿಗಳಲ್ಲಿ ಪ್ರವೃತ್ತಿಯು ಏಕೆ? ದುಃಖರೂಪವಾದ ಈ ಜಗತ್ತಿನ ಕಾರಣತ್ವದಲ್ಲಿ ಅನ್ವಯವು ಯೋಗ್ಯವಲ್ಲವಲ್ಲಾ ಎಂದು ಆಕ್ಷೇಪಣೆಯನ್ನು ತಂದರೆ ಈ ಸೂತ್ರವು ಸಮಾಧಾನವನ್ನು ಹೇಳುತ್ತದೆ. ಇಂತಹ ಶಂಕಾ ಪರಿಹಾರಕ್ಕಾಗಿತು ಶಬ್ದವು. **ಲೀಲಾಕೈವಲ್ಯಂ**–ಜಗತ್ತಿನ ಸೃಷ್ಟ್ಯಾದಿ ಸಕಲವ್ಯಾಪಾರಗಳು ಪರಬ್ರಹ್ಮನಿಗೆ ಕೇವಲ ಲೀಲಾರೂಪವಾದುದು. ಹೇಗೆಂದರೆ **ಲೊಕವತ್**–ಲೋಕದಲ್ಲಿ ಪರಿಪೂರ್ಣ ಕಾಮನಾಗಿ ತೋರುವ ರಾಜನಿಗೆ ಕಂತುಕಾದಿ ವ್ಯಾಪಾರಗಳೂ, ಗಿಣಿಗಳನ್ನೂ ಪಂಜರದಲ್ಲಿಟ್ಟು ಸಾಕುವದೂ ಹೇಗೆ ಲೀಲೆಯೋ, ಹಾಗೆಯೇ ಪರಮ ಪುರುಷನಿಗೂ ಜಗತ್ತಿನ ವ್ಯಾಪಾರಗಳೆಲ್ಲಾ ಲೀಲೆಯೇ. ಆದರೆ ಈ ಎರಡು ಲೀಲೆಗಳಿಗೂ ವ್ಯತ್ಯಾಸವುಂಟು. ಪ್ರಕೃತಕ್ಕೆ ಅವು ಅನಾವಶ್ಯಕವು. ಇತಿಹಾಸಪುರಾಣಗಳಲ್ಲೂ ಈ ಅಭಿಪ್ರಾಯವೇ ಉಪಪಾದಿತವು. ೧) **"ಲೀಲಾಜಗತ್ಪತೇ ಸ್ತಸ್ಯ ಛಂದತಸ್ಸಂಪ್ರವರ್ತತೇ"** ೨) **"ಮೋದತೇ ಭಗವಾನ್ ಭೂತೈರ್ಬಾಲಃ ಕ್ರೀಡನಕೈರಿವ"** (ಭಾರ. ಸಭಾ) ಬಾಲನು ಆಟದ ಸಾಮಾನುಗಳೊಂದಿಗೆ ಹೇಗೆ ಕ್ರೀಡಿಸುವನೋ ಹಾಗೆಯೇ ಭಗವಂತನು ಚಿದ ಚಿತ್ತುಗಳೊಂದಿಗೆ ರಮಿಸುವನು. ೩) **"ಕ್ರಿಡಾ ಹರೇರಿಂದಂ ಸರ್ವಮ್"** (ಭಾರ. ಶಾನ್ತಿ) ೪) **ಕ್ರಿಡತೇ ಬಾಲಕಸ್ಯೈವ ಚೆಷ್ಟಾಂತಸ್ಯನಿಶಾಮಯ"** (ವಿ. ಪು. ೧. ೨. ೧೮) ಆಡುವ ಬಾಲಕನ ಚೇಷ್ಟೆಗಳ ಹಾಗೆ ಶ್ರೀಮಹಾವಿಷ್ಣುವಿನ ವ್ಯಾಪಾರಗಳೆಂಬುದನ್ನು ಕೇಳು

ಎಂದರೆ ತಿಳಿ. **ಜ) ಹರೇವಿಹರಿಸಿ ಕ್ರಿಡಾಕನ್ದುಕೈರಿವ ಜನ್ತುಭಿಃ"** ಇತ್ಯಾದಿ ಗಳು ಆನುಸಂಧೇಯುಗಳು ಹಾಗೆಯೇ ಶ್ರೀ ಪರಾಶರ ಭಟ್ಟರವರೂ **"ಹೇಲಾಯಾ ಮಖಿಲಂಚರಾ ಚರ ಮಿದಮ್"** ಎಂದು ಪ್ರಯೋಗಿಸುತ್ತಾರೆ. ಇಲ್ಲಿ **ಹೇಲಾ ಎಂದರೆ** ಲೀಲೆಯು. ಪಾದ್ಮೋತ್ತರದಲ್ಲಿ **"ಭೋಗಾರ್ಥಂ ಪರಮಂ ವ್ಯೋಮ ಲೀಲಾರ್ಥಮಖಿಲಂ ಜಗತ್| ಭೊಗಕ್ರೀಡತಯಾ ವಿಷ್ಣೋರ್ವಿಭೂತಿ ದ್ವಯು ಸಂಸತಿಃ"** ಭೋಗಕ್ಕಾಗಿ ವಿಷ್ಣುವಿಗೆ ನಿತ್ಯವಿಭೂತಿ ಎನ್ನಿಸುವ ದಿವ್ಯ ವೈಕುಂಠ ಲೋಕವು; ಲೀಲೆಗಾಗಿ ಸಮಸ್ತ ಜಗತ್ತೂ ಹೀಗೆ ವಿಷ್ಣುವಿಗೆ ಎರಡು ನಿಯಾಮ್ಯ ವರ್ಗ ಉಂಟು.

**"ಪ್ರಯೋಜನ ಮನುದ್ದಿಶ್ಯ ನಮಂದೋಪಿ ಪ್ರವರ್ತ್ತತೇ"** ಯಾವ ಪ್ರಯೋಜನವೂ ಇಲ್ಲದೆ ಯಾವ ಮಂದಮತಿಯೂ ಯಾವ ವ್ಯಾಪಾರದಲ್ಲೂ ಪ್ರವರ್ತಿಸುವದಿಲ್ಲವು. ಆದುದರಿಂದ ಪರಿಪೂರ್ಣಕಾಮನಿಗೆ ಜಗದ್ವ್ಯಾಪಾರಗಳೆಲ್ಲಾ ಲೀಲೆಯೇ ಆಗಿರಬೇಕು. ಇಂತಹ ಲೀಲೆಯಲ್ಲಿ ಪರಮಾತ್ಮನೊಬ್ಬನೇ ಈ ಲೋಕ ದಲ್ಲಿರುವನೆಂದರೆ, ಅದು ಎಂತಹ ಲೀಲೆಯಾಗುತ್ತದೆ? ನಮ್ಮ ಸಿದ್ಧಾಂತ ರೀತ್ಯಾ ಪತ್ನಿಯೊಂದಿಗೂ ಸೇರಿದವನಾಗಿ ಇತರ ಚೇತನರಿಂದಲೂ ಸೇರಿದವನಾಗಿದ್ದಾನೆಂದರೆ ಲೀಲೆಯು ಸಮಂಜನವಾಗುತ್ತದೆ. ಜಗದ್ವ್ಯಾಪಾರವೆಲ್ಲಾ ಯಾವಾಗ ಲೀಲೆ ಎಂದಾಯಿತೋ ಆಗ ಏಕಾತ್ಮವಾದವು ಕೂಡುವುದಿಲ್ಲವು. ಬರೀ ಅಚೇತನ ವಾಗಿದ್ದರೂ ಈ ಜಗತ್ತಿನಿಂದ ಈ ಲೀಲಾರಸವು ಸರಸವಾಗುವುದಿಲ್ಲವು ತನ್ನ ಪತ್ನಿ ಯೊಂದಿಗೇ ಯಾವಾಗಲೂ ಸೇರಿರುವುದರಿಂದ ವಿಹಾರವು ಸರಸವು. ಅದೂ ಅಲ್ಲದೆ ಕೇವಲ ಚೇತನರಿಗೆ ಜ್ಞಾನ ವಿವೇಕಗಳನ್ನು ಕೊಟ್ಟು, ತನ್ಮೂಲಕ ಅವರ ವ್ಯಾಪಾರ ಗಳನ್ನು ನೋಡುವುದರಲ್ಲಿ ಲೀಲೆಯು ಸಾರವತ್ತಾಗುತ್ತದೆ. ಲಕ್ಷ್ಮಿಯೊಂದಿಗೆ ರಮಿಸು ವನು ಎಂಬುದಕ್ಕೆ ಅನೇಕ ಪ್ರಮಾಣಗಳುಂಟು. ದಾಸನು ಬರೆದಿರುವ ಚತುಶ್ಲೋಕೀ ಶ್ರೀಸ್ತುತಿ, ಶ್ರೀಸೂಕ್ತವ್ಯಾಖ್ಯಾನಗಳನ್ನು ಪರಾಂಬರಿಸಬಹುದು. **"ಏಕಾಕೀ ವಿದ್ಯಾಯಾಸಾರ್ಥಂ ವಿಹರಿಷ್ಯೇ ದ್ವಿಜೋತ್ತಮ| ತತೋ ಭೂಯೋ ಜಗಸ್ಸೃಷ್ಟಿರಂ ಕರಿಷ್ಯಾ ಮೀಹ ವಿದ್ಯಯಾ"** ಎಂಬ ವ್ಯಾಸೋಕ್ತಿಯು ಇರುತ್ತದೆ. ಇಲ್ಲಿ ವಿದ್ಯಾ ಎಂದರೆ ಲಕ್ಷ್ಮಿಯು, ಹಾಗೆಯೇ ಲಕ್ಷ್ಮಿಯ ಅವತಾರವಾದ ಸೀತೆಯೂ ಹಾಗೆಯೇ **"ವಿಹರಂಸ್ತ್ಯೇತ್ವಯಾ ವೀರವನೇಷು ಮಧುಗಂಧಿಷು"** ಎಂದೂ **"ಯಸ್ತ್ವಯಾ ಸಹ ಸ ಸ್ವರ್ಗೋ ನಿರಯೋಯಂತ್ವಯಾವಿನಾ** ಎಂದೂ ನಿನ್ನೊಂದಿಗಿರುವದೇ ನನಗೆ ಸ್ವರ್ಗವು, ನಿನ್ನನ್ನು ಅಗಲಿರುವದೇ ನರಕವೆಂದೂ, ಸೀತೆಯು ತನ್ನ ಪತಿಯನ್ನು ಕುರಿತು ಹೇಳಿಕೊಂಡಿರುತ್ತಾಳೆ. **ಸಂಸಾರ ವಿಮೋಚನಾದಯಃ**–ಚೇತನರಿಗೆ ಕೃಪಾಜಲಧಿಯು ಕರಣ ಕಳೇಬರಾದಿಗಳನ್ನೂ ಶಾಸ್ತ್ರವನ್ನೂ ಶಾಸ್ತ್ರಬೋಧಕರನ್ನೂ ಕೊಟ್ಟಿರುವದು ಚೇತನರು ತನ್ನನ್ನಾಶ್ರಯಿಸಿ ತನ್ನನ್ನು ದಿವ್ಯ ವೈಕುಂಠವಲ್ಲಿ ಬಂದು ಸೇರುವದಕ್ಕಾಗಿ ಸಂಸಾರ ವಿಮೋಚನವನ್ನು ಮಾಡಿಕೊಳ್ಳಲಿ ಎಂಬ ಉದಾರ ಭಾವದಿಂದ. ಈ ಸಂಸಾರ ವಿಮೋಚನಕ್ಕೆ ಸಿದ್ಧೋ ಪಾಯನಾಗಿ ಪ್ರಾಪಕನೂ ಅವನೇ. ಪ್ರಾಪ್ಯನೂ ಅವನೇ. ಬ್ರಹ್ಮರುದ್ರೇಂದ್ರೇದಾದಿ

ಗಳಿಗೆಲ್ಲಾ ನಮ್ಮ ಹಾಗೆಯೇ ಬದ್ಧರು. ಅವರೇ ಬದ್ಧ ದೆಶೆಯಲ್ಲಿರುವಾಗ ನಮಗೆ ಸಂಸಾರ ವಿಮೋಚನ ಮಾಡುವ ಶಕ್ತಿಯು ಎಲ್ಲಿಯದು? ಇದಕ್ಕಾಗಿ ಅವರುಗಳನ್ನು ಆಶ್ರಯಿಸುವದು ಸರಿಯಲ್ಲದ. ಅವುಗಳನ್ನು ಪ್ರಾರ್ಥಿಸಿದರೆ ಐಹಿಕ ಫಲಗಳನ್ನು ಕೊಡಬಲ್ಲರು. ಮುಕ್ತಿಯನ್ನು ಕೊಡಲಾರರು. ಇದನ್ನೇ ಪ್ರಾಜ್ಞರಾದ ಶ್ರೀವ್ಯಾಸರು **"ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾಸ್ಸ್ಮೃತಾಃ| ಪ್ರತಿಬುದ್ಧಾ ನಸೇವಂತೇ ಯಸ್ಮಾತ್ಪರಿಮಿತಂ ಫಲಂ"** ಎಂಬಲ್ಲಿ ಹೇಳಿರುತ್ತಾರೆ. ಈ ಸಂಸಾರ ವಿಮೋಚನವು ಹೇಗೆ ಉಂಟಾಗುತ್ತದೆಂಬುದನ್ನು ಮುಂದೆ ಉಪಪಾದಿಸುತ್ತಾರೆ.

ಯಜ್ಞಯಾಗಾದಿಗಳ ಮೂಲಕ ದೇವತೆಗಳಿಗೆ ಹವಿಸ್ಸಮರ್ಪಣೆಯು, ಚೇತನರ ಕ್ಷೇಮಕ್ಕಾಗಿಯೇ ಎಂಬ ಭಾವವು.

**"ಸಹಯಜ್ಞಾಃ ಪ್ರಜಾಸ್ಸೃಷ್ಟ್ವಾಪುರೋವಾಚ ಪ್ರಜಾಪತಿಃ|**
**ಅನೇನ ಪ್ರಸವಿಷ್ಯಧ್ವಂ ಏಷವೋಽಸ್ತ್ವಿಷ್ಟಕಾಮಧುಕ್||**
**ದೇವಾನ್ ಭಾವಯತಾನೇನತೇ ದೇವಾ ಭಾವಯನ್ತುವಃ|**
**ಪರಸ್ಪರಂ ಭಾವಯನ್ತಃ ಶ್ರೇಯಃ ಪರ ಮವಾಪ್ಸ್ಯಥ||**
**ಇಷ್ಟಾನ್ ಭೋಗನ್ ಹಿ ವೋದೇವಾಃ ದಾಸ್ಯನ್ತೇ ಯಜ್ಞಭಾವಿತಾಃ**

ಬ್ರಹ್ಮರುದ್ರಾದಿ ಸರ್ವ ದೇವತೆಗಳಿಗೂ ಸ್ವಾಮಿಯಾದ (ಗೀ. ೩. ೧೦. ೧೨) ಸರ್ವೇಶ್ವರನು ಚತುರ್ಮುಖಾದಿಗಳನ್ನು ಈ ಯಜ್ಞಗಳೊಂದಿಗೆ ಸೃಷ್ಟಿಸಿ, ಆ ಯಜ್ಞಗಳನ್ನು ನೀವು ಅನುಷ್ಠಿಸಿದರೆ ನಿಮಗೆ ಸರ್ವಶ್ರೇಯಸ್ಸುಂಟೆಂದೂ. ಆ ಯಜ್ಞವಿಧಿಗಳಿಗೆ ಅನುಸಾರವಾಗಿ ನಡೆದರೆ ಆ ಯಜ್ಞಾದಿಗಳೇ ನಿಮಗೆ ಸರ್ವಾಭೀಷ್ಟವನ್ನೂ ವರ್ಷಿಸುವ ಕಾಮಧೇನುವಾಗುತ್ತದೆಂದು ಶ್ರೀಕೃಷ್ಣನು ಹೇಳಿರುತ್ತಾನೆ. ಮನುಷ್ಯರು ದೇವತೆಗಳನ್ನು ಯಜ್ಞ ಮೂಲಕ ಆರಾಧಿಸಿದರೆ, ಅವರು ನಿಮಗೆ ಬೇಕಾದ ಪಶ್ವನ್ನ ವೃಷ್ಟಿ ಮುಂತಾದವುಗಳನ್ನು ಕೊಟ್ಟು ನಿಮಗೆ ಶ್ರೇಯಸ್ಸನ್ನುಂಟುಮಾಡುವರು. ಹೀಗೆ ಯಜ್ಞಗಳನ್ನೂ, ಮತ್ತು ವಿಹಿತ ಕರ್ಮಗಳಾದ ಪಂಚಮಹಾ ಯಜ್ಞಗಳನ್ನೂ ಅನುಷ್ಠಿಸಿ ಪರಮಾತ್ಮನಲ್ಲಿ ಸಮರ್ಪಿಸುವವರಿಗೆ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕ ಪಾಪಗಳು ತೊಲಗಿ ಪರಿಶುದ್ಧರಾಗುವರೆಂದೂ ಹೇಳಲ್ಪಟ್ಟಿದೆ. ಆದುದರಿಂದಲೇ **ವೈದಿಕಾಃ ವಿಧಯಃ ಭವಂತಿ** ಎಂದು ಮೂಲದಲ್ಲಿ ಪ್ರಯೋಗವು. **ವಿಧಯಃ ವೈದಿಕಾಃ** ಎಂದು ಹೇಳಿರುವದರಿಂದ ಇವೆಲ್ಲವೂ ಭಗವಂತನಿಂದಲೇ ಉಂಟಾಗಿ ಆತನ ಶಾಸನವೆಂದೇ ಭಾವಿಸತಕ್ಕದ್ದಾಗಿರುತ್ತದೆ. **"ಶ್ರುತಿಸ್ಸ್ಮೃತಿರ್ಮಮೈವಾಜ್ಞಾಯ ಸ್ತಾಮುಲ್ಲಂಘ್ಯವರ್ತತೇ| ಆಜ್ಞಾಛೇದೀ ಮಮದ್ರೋಹೀ ಮದ್ಭಕ್ತೋಽಪಿನವೈಷ್ಣವಃ** (ವಿ.ಧ. ೬.೩.) ಎಂದಿರುತ್ತದೆ. ವಿಹಿತ ವೈದಿಕರ್ಮಗಳನ್ನು ಕರುಣಾ ಸಾಗರನು ಚೇತನರ ಶ್ರೇಯಸ್ಸಿಗಾಗಿಯೇ ಏರ್ಪಡಿಸಿರುತ್ತಾನೆ. ಇಂತಹ ಅಭಿಸಂಧಿಯಿಲ್ಲದೆ ಅವುಗಳನ್ನು ನಿರಾಕರಿಸಿ, ಅಜ್ಞಾನಿಗಳು ತಮ್ಮ ಐಹಿಕಾಮುಷ್ಮಿಕ ಸಕಲ ಶ್ರೇಯಸ್ಸನ್ನೂ ನೀಗಿಕೊಳ್ಳುತ್ತಾರಲ್ಲಾ ಎಂದು ಪರಿತಾಪ ಪಡಬೇಕಾಗಿದೆ. ಈ ವೈದಿಕ ಕರ್ಮಗಳನ್ನು ಫಲಕರ್ತೃತ್ವಮಮತೆಗಳಿಲ್ಲದೆ ತ್ಯಾಗಪೂರ್ವಕವಾಗಿ ಅನು

ಷ್ಠಿಸಿದರೆ ದುಃಖನಿವೃತ್ತಿಯೂ, ಆರೋಗ್ಯಭಾಗ್ಯವೂ, ಆತ್ಮಾವಲೋಕನ ಸಿದ್ಧಿಯೂ ಉಪಾಯಾನುಷ್ಠಾನಕ್ಕೆ ಪ್ರತಿಬಂಧಕಪಾಪಗಳ ನಿವಾರಣೆಯೂ, ತನ್ಮೂಲಕ ಉಪಾಯನುಷ್ಠಾನವೂ, ಮೋಕ್ಷಪ್ರಾಪ್ತಿಯೂ ಎಲ್ಲವೂ ಲಭಿಸುವುವು. ಹಾಗಲ್ಲದೆ ಫಲಾಭಿ ಸಂಧಿಯುಕ್ತವಾಗಿಯಾಗಲಿ ನಡೆಸಿದರೂ ಮೋಕ್ಷಪ್ರಾಪ್ತಿಯಿಲ್ಲದೆ ಸರ್ಗಾಧಿ ಭೋಗವಾದರೂ ದೇವತೆಗಳ ಅನುಗ್ರಹದೊಂದಿಗೆ ಲಭಿಸುತ್ತದೆ.

ಈ ವೈದಿಕ ಕರ್ಮಗಳನ್ನು ಶಾಸ್ತ್ರರೀತ್ಯಾ ಅನುಷ್ಠಿಸತಕ್ಕವರು ಪರಮೈಕಾನ್ತಿಗಳಾದ ಗುರುಗಳು. ಇಂತಹ ಮಹನೀಯರ ಸಂಪ್ರದಾಯವೇ ನಮಗೆ ಮುಖ್ಯವಾಗಿ ಉಪಾದೇಯವು. ಆದುದರಿಂದ ಅಂತವರನ್ನು ಆಶ್ರಯಿಸತಕ್ಕದ್ದು. ಈ ಅಭಿಪ್ರಾಯವೇ ಶಿಕ್ಷಾವಲ್ಲಿಯಲ್ಲಿ "**ಅಥ ಯದಿ ತೇ ಕರ್ಮ ವಾಚಿಕಿತ್ಸಾವಾವೃತ್ತ ವಿಚಿಕಿತ್ಸಾವಾ ಸ್ಯಾತ್**" ಎಂದಾರಂಭಿಸಿ "**ಏಷ ಆದೇಶಃ ಏಷ ಉಪದೇಶಃ**" ಎಂದು ಮುಗಿಸಿರುತ್ತದೆ. ಇದರ ಅರ್ಥವು–ನಿಮಗೆ ಕರ್ಮಗಳಲ್ಲಿಯಾಗಲಿ, ಅವುಗಳ ಆಚರಣೆಯಲ್ಲಾಗಲಿ ಸಂದೇಹ ಉಂಟಾದರೆ, ನೀನು ಆಗ ತುಂಬಾ ವಿಚಾರ ಪರನಾಗಿ, ಪರಬ್ರಹ್ಮನನ್ನು ಅರಿವರಾಗಿ, ಯಥಾರ್ಥವಾದ ವಿಷಯವನ್ನು ನಿರ್ಧರಿಸಿ ಹೇಳುವ ಯೋಗ್ಯತೆಯುಳ್ಳವರಾಗಿ, ಪಕ್ಷಪಾತಶೂನ್ಯರಾಗಿ, ಕ್ರೂರ ಸ್ವಭಾವರಹಿತರಾಗಿ, **ವೇದವಿಧಿಗಳನ್ನು** ಚೆನ್ನಾಗಿ ವಿಮರ್ಶಿಸಿ ತಿಳಿದಿರುತ್ತಾರೋ ಅಂತವರ ಸಂಪ್ರದಾಯಾನುಸಾರವಾಗಿ ನಡೆಯತಕ್ಕದ್ದು. ಇದೀಗ ನಿನಗೆ ಆಜ್ಞೆಯು, ಇದೀಗ ನಿನಗೆ ಉಪದೇಶವು ಎಂದು ಶ್ರುತಿಯು ಶಾಸನ ಮಾಡಿರುತ್ತದೆ. ಆದುದರಿಂದ ಈ **ವೇದವಿಧಿಗಳು ತ್ವದೀಯಗಂಭೀರಮನೋಽನುಸಾರಿಣಃ** ಎಂದು ಹೇಳಲ್ಪಟ್ಟಿತು. ಅಥವಾ ನಿನ್ನ ಸಂಬಂಧವಾದ ಗಂಭೀರ ಸಂಕಲ್ಪವನ್ನು ಅನುಸರಿಸಿ ನಡೆಯುವವರೆಂದಾಗಲಿ ಅರ್ಥ ಮಾಡಬಹುದು.

ಹಿಂದೆ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಗೆಲ್ಲಾ ಶ್ರಿಯಃಪತಿಯೇ ಉಪಾದಾನ ನಿಮಿತ್ತ ಸಹಕಾರಿ ಕಾರಣನೆಂದು ಹೇಳಲ್ಪಟ್ಟಿತು. ಆದರೆ ಶ್ರುತಿಯು, ಪರಮಾತ್ಮನೊಂದಿಗೆ ಮುಕ್ತನು "**ನಿರಂಜನಃ ಪರಮಂಸಾಮ್ಯ ಮುಪೈತಿ**" (ಮುಂಡಕ) ಪರಮ ಸಮ ಭಾವವನ್ನು ಹೊಂದುವನೆಂದು ಹೇಳಿರುವದರಿಂದ ಮುಕ್ತನೂ ಜಗತ್ತಿಗೆ ಕಾರಣನೆಂದು ಏಕೆ ಭಾವಿಸ ಬಾರದು, ಎಂಬ **ಆಕ್ಷೇಪಕ್ಕೆ** ಉತ್ತರವಾಗಿ ಶ್ರೀ ವೇದವ್ಯಾಸರು ಮುಕ್ತನಿಗೆ "**ಜಗದ್ವ್ಯಾಪಾರವರ್ಜಂ**" ಎಂಬ ಸೂತ್ರದಲ್ಲಿ ಮುಕ್ತನಿಗೆ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ಅನ್ವಯವಿಲ್ಲವೆಂದು ನಿರ್ಣಯಿಸಿರುತ್ತಾರೆ. ಆದರೆ ಆತನು ಕೊಟ್ಟ ಸತ್ತೆ, ಶಕ್ತ್ಯಾದಿಗಳ ಮೂಲಕ ಆಶ್ಚರ್ಯವಾದ ವ್ಯಾಪಾರಗಳನ್ನು ನಡೆಸಬಹುದು. ಆಗಲಿ, ಪರಮಸಂಹಿತೆಯಲ್ಲಿ ಚತುರ್ಮುಖನು ಪರಮ ಪುರುಷನನ್ನು ಕೇಳುತ್ತಾನೆ, ಏನೆಂದರೆ "**ಕೇನರೂಪೇಣ ಬಿಧ್ಯೈನ್ತೇ ಮುಕ್ತಾಸ್ತವ ಶರೀರಿಣಃ। ಏತದಾಚಕ್ಷ್ವಮೇದೇವ ಗುಹ್ಯಾದ್ಗುಹ್ಯತರಂ ಪರಮ್**" ಮುಕ್ತರಿಗೂ, ಅವರಿಗೆ ಶರೀರಿ ಎಂದರೆ ಆತ್ಮವಾಗಿರುವ ನಿನಗೂ ಯಾವುದರಲ್ಲಿ ಭೇದವು. ಈ ಪರಮ ರಹಸ್ಯವನ್ನು ದಯಮಾಡಿ ಹೇಳ

ಬೇಕು; ಎನ್ನಲು ಅದಕ್ಕೆ ಉತ್ತರವಾಗಿ **“ಅಹಮೇವ ಭವನ್ತೇತೇ ನಭೇದ ಸ್ತತ್ರಕಶ್ಚನ”** ಅವರುಗಳೂ ನಾನೇ ಎಂದು ಸ್ವರೂಪೈಕ್ಯವನ್ನು ಹೇಳಿರುವ ಹಾಗೆ ತೋರುತ್ತದೆಯಲ್ಲವೇ? ಎಂದರೆ ಹಾಗಲ್ಲವು. **“ರಾಮಸುಗ್ರೀವಯೋರೈಕ್ಯಂ ದೇವ್ಯೇಯಂ ಸಮಜಾಯತ”** ಎಂದು ಆಂಜನೇಯನು ಸೀತಾದೇವಿಗೆ ಹೇಳಿದ ಹಾಗೆ, **“ಯಥಾಹಂ ವಿಹಾರಾಮೇವಂ ತಥಾ ಮುಕ್ತಾಶ್ಚ ದೇಹಿನಃ”** ಎಂದು ಈ ಐಕ್ಯವನ್ನು ವಿಶದೀಕರಿಸಿರುವದರಿಂದ ವಿಹಾರಭೋಗಗಳಲ್ಲಿ ಮಾತ್ರವೇ ವಿನಾ ಸ್ವರೂಪತಃ ಅಲ್ಲವು. ಮುಕ್ತರು ನಮ್ಮ ಹಾಗೆಯೇ ಸ್ವರೂಪತಃ ಅಣುಗಳಾಗಿ ಸ್ವಾಮಿದತ್ತ ದೇಹಗಳನ್ನು ಹೊಂದಿರುತ್ತಾರೆ. ಪರಮಾತ್ಮನು ವಿಭುವು. ಹೀಗಿರುವಾಗ ಸ್ವರೂಪೈಕ್ಯವಾದವು ಹೇಗೆ ಕೂಡುತ್ತದೆ? ಜೀವಲಕ್ಷಣ ಪರಮಾತ್ಮ ಲಕ್ಷಣಗಳನ್ನು ಚನ್ನಾಗಿ ಗ್ರಹಿಸಿದ ತಾರ್ಕಿಕರು ಈ ವಾದವನ್ನು ಹಾಸ್ಯಾಸ್ಪದವಾಗಿ ಭಾವಿಸುವರು. ಆದುದರಿಂದಲೇ ವ್ಯಾಸ ಸೂತ್ರದಲ್ಲಿ, ಐಕ್ಯವಿಲ್ಲವೆಂದೂ, ಸಮತ್ವಮಾತ್ರ ಉಂಟೆಂದೂ, ಆ ಸಮತ್ವವು ಭೋಗದಲ್ಲಿ ಮಾತ್ರವೇ ಎಂದು **“ಭೋಗಮಾತ್ರ ಸಾಮ್ಯಲಿಂಗಾಚ್ಚ”** ಎಂಬ ಸೂತ್ರದಲ್ಲೂ **ಪರಮಂ ಸಾಮ್ಯಮುಪೈತಿ** ಎಂಬ ಶ್ರುತಿಯಲ್ಲೂ, **“ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯ ಮಾಗತಾಃ”** ಎಂದೂ (      ) ಗೀತೆಯಲ್ಲೂ ಹೇಳಲ್ಪಟ್ಟಿರುತ್ತದೆ. **ಮುಕ್ತಾಃ** ಎಂಬಲ್ಲಿರುವ ಬಹುವಚನವು ಜೀವಾತ್ಮರನೇಕರು, ಅವರುಗಳು ಬೇರೆ ಬೇರೆ ಎಂದು **“ನಿತ್ಯೋ ನಿತ್ಯಾನಾಂ** (      ) ಎಂಬ ಶ್ರುತ್ಯರ್ಥವು ಉಪಪಾದಿಸಲ್ಪಟ್ಟಿತು. ಮತ್ತು ಮುಂದೇ **“ಸಾಯುಜ್ಯಂ ಪ್ರತಿಪನ್ನಾ ಯೇ ತೀವ್ರಭಕ್ತಾಸ್ತಪಸ್ವಿನಃ। ಕಿಂಕರಾ ಮಮ ತೇ ನಿತ್ಯಂ ಭವನ್ತಿ ನಿರುಪದ್ರವಾಃ”** ಎಂದು ಇರುವದರಿಂದ ಅವರುಗಳು ಹೊಂದಿದುದು ಸಾಯುಜ್ಯವೆಂದರೆ **ಸಯುಕ್ಕಿನ** ಭಾವವೆಂದೂ, ಸ್ವರೂಪೈಕ್ಯವಲ್ಲವೆಂದೂ, ನಿತ್ಯವಿಭೂತಿಯಲ್ಲಿ ಆ ಮುಕ್ತರು ಲಕ್ಷ್ಮೀವಾಸುದೇವನಿಗೆ ನಿತ್ಯಕೈಂಕರ್ಯವನ್ನೆಸಗುತ್ತಾ, ಅವರುಗಳನ್ನು ಸ್ತುತಿಸುತ್ತಾ ಪರಿಪೂರ್ಣ ಬ್ರಹ್ಮಾನುಭವವನ್ನು ಮಾಡುತ್ತಾ, ಆನಂದಿಸುತ್ತಾ, ಭಗವಂತನ ಆಜ್ಞೆಯನ್ನು ಪಡೆದು ಕಾಮಚಾರಿಗಳಾಗಿ ಸಂಚರಿಸುತ್ತಾ, ಇರುವರೆಂದು ಶ್ರುತಿಗಳಲ್ಲಿ ಹೇಳಲ್ಪಟ್ಟಿರುತ್ತದೆ. ತೈತ್ತರೀಯ, ಛಾಂದೋಗ್ಯ, ಬೃಹದಾರಣ್ಯಕಾದಿ ಉಪನಿಷತ್ತುಗಳನ್ನು ಪರಾಂಬರಿಸಬಹುದು. ಶ್ರೀಭಾಷ್ಯದಲ್ಲಿ ಶ್ರೀಯತಿವರ್ಯರು ಹಾಗೆಯೇ ನಿತ್ಯರಿಗೂ ಕೂಡ ಜಗತ್ಕಾರಣತ್ವದಲ್ಲಿ ಅನ್ವಯವಿಲ್ಲವೆಂದು ಉಪಪಾದಿಸಿರುತ್ತಾರೆ. **“ಜಕ್ಷತ್ಕ್ರೀಡನ್ರಮಮಾಣಃ ಸಙ್ಕಲ್ಪಾದೇವಾಸ್ಯಪಿತರ ಸ್ಸಮುತ್ತಿಷ್ಠತಿ”** ಎಂಬಲ್ಲಿರುವ ಅರ್ಥಕ್ಕೂ ಮತ್ತು **ಕಾಮರೂಪ್ಯನು ಸಂಚರನ್ ಯತ್ರ ಯತ್ರಧಾತಾಗಚ್ಛತಿ”** ಎಂಬಲ್ಲಿ ಹೇಳಿರುವ ಅರ್ಥಕ್ಕೂ ಐಕ್ಯಕಂಠವಿರುವುದರಿಂದ ಭಗವಂತನನ್ನು ಅನುಸರಿಸಿ, ಸರ್ವಭೋಗಗಳನ್ನು ಅನುಭವಿಸುವನೆಂದು ಹೇಳಿದಂತಾಯಿತು. ಹೀಗೆ ಪರಮಾತ್ಮನ ಹಾಗೆ ಮುಕ್ತನಿಗೂ ಇಂತಹ ಕೆಲವು ವ್ಯಾಪಾರಗಳು ಇರುವುದರಿಂದ ಜಗತ್ಸೃಷ್ಟಿಲಯಾ

ದಿಗಳು ಉಂಟೆಂಬ ಪಕ್ಷವು ವಿಚಾರಕ್ಕೆ ಕೂಡ ಅರ್ಹವಲ್ಲವು. ಏಕೆಂದರೆ ಮುಕ್ತನಿಗೆ ಪರಮಾತ್ಮನ ಹಾಗೆ ಸರ್ವಕ್ಕೂ ಆತ್ಮಾವಾಗಿರುವ ಭಾವವು ಶ್ರುತಿಯಲ್ಲಿ ಎಲ್ಲಿಯೂ ಉಪಪಾದಿಸಿಲ್ಲವಾದುದರಿಂದ **"ಬಹುಸ್ಯಾಂ"** ಎಂದು ಮುಕ್ತನು ಸಂಕಲ್ಪಿಸಲು ಶಕ್ತಿಯಿಲ್ಲವು. ಆದುದರಿಂದ ಜಗತ್ತಿನ ಸರ್ವವ್ಯಾಪಾರಗಳು ಭಗವಂತನ ಲೀಲಾವೃತ್ತಿಗಳೆಂದು ಹೇಳಲ್ಪಟ್ಟಿತು.

ಇಲ್ಲಿ **ಭವಂತಿ** ಎಂಬ ವರ್ತಮಾನ ಕ್ರಿಯೆಯಿಂದ ಪ್ರತಿಕಲ್ಪದಲ್ಲೂ ಈ ಜಗತ್ತಿನ ಸೃಷ್ಟ್ಯಾದಿಗಳೂ ಹೀಗೆಯೇ ನಡೆಯುತ್ತವೆಂಬುದು ಸೂಚಿತವು.

**ತ್ವದೀಯ ಗಂಭೀರ ಮನೋನುಸಾರಿಣಃ** ಎಂದು ಹೇಳಿರುವುದರಿಂದ ಕರುಣಾಸಾಗರನ ಸಂಕಲ್ಪ ಮಾತ್ರದಿಂದಲೆ ಇವೆಲ್ಲವು ನಡೆಯುತ್ತವೆಂದು ಹೇಳಲ್ಪಟ್ಟಿವೆ. ಇವುಗಳು ನಡೆಯುವುದಕ್ಕಾಗಿ ತುಂಬಾ ಕಷ್ಟವಡಬೇಕಾದುದಿಲ್ಲವು. ಆ ಸಂಕಲ್ಪವಾದರೋ ಮಿತ ಪ್ರಜ್ಞರಾದ ನಮ್ಮಗಳಿಂದ ಸರಿಯಾಗಿ ತಿಳಿಯಲು ಅಸಾಧ್ಯವಾದುದರಿಂದ **ಗಂಭೀರ** ಶಬ್ದ ಪ್ರಯೋಗವು ಈಗಿನ ಲೋಕಪರಿಸ್ಥಿತಿಯನ್ನು ನೋಡಿದರೆ ತುಂಬಾ ಘೋರವಾಗಿರುತ್ತದೆ. ಯುದ್ಧವು ಲೋಕವನ್ನೆಲ್ಲಾ ಆಕ್ರಮಿಸಿ ಪ್ರಜೆಗಳು ನಾಶವಾಗುತ್ತಿರುವದೂ, ಅವರುಗಳಿಗೆ ಪ್ರಾಪ್ತವಾಗಿರುವ ಕಷ್ಟದೆಶೆಗಳೂ, ಇವೆಲ್ಲಾ ಆತನ ಸಙ್ಕಲ್ಪದಿಂದಲೇ ನಡೆಯುತ್ತಲಿವೆ. ಆದೇಕೆ ಇಂತಹ ದುಸ್ಥಿತಿ ಎಂಬುದನ್ನು ಅಲ್ಪಜ್ಞರಾದ ನಾವು ತಿಳಿಯಲಾರೆವು. ಪರಿಣಾಮದಲ್ಲಿ ಗ್ರಹಿಸುವ ಅಂಶವಾಗಿರುವದರಿಂದ **ಗಂಭೀರ**ವೆಂದು ಹೇಳಲ್ಪಟ್ಟಿತು. ಹಾಗೆಯೆ ಪರಮ ಸಾಧ್ವಿಯಾದ ದೌಪ್ರದಿಗೆ ಸಭೆಯಲ್ಲಿ ಅವಮರ್ಯಾದೆಯುಂಟುಮಾಡಿದ ಭಗವತ್ಸಙ್ಕಲ್ಪವನ್ನು ಆ ಕಾಲದಲ್ಲಿ ನಾವು ತಿಳಿಯಲಾರೆವು. ಆದುದರಿಂದ ಅತಿಗಂಭೀರವು. ದುಷ್ಟರಾದ ದುಶ್ಶಾಸನ ದುರ್ಯೋಧನಾದಿಗಳ ನಾಶಕ್ಕಾಗಿಯೇ ಒಂದು ವ್ಯಾಜವಾಗಿ ಹಾಗೆ ನಡೆಯಿತೋ ಏನೋ ಎಂದು ಊಹಿಸತಕ್ಕದ್ದಾಗಿ **ಅತಿಗಂಭೀರವು.** ತನ್ನ ಕೋಸಲದೇಶದ ಯುವರಾಜ ಪದವಿಗೆ ಭಂಗದ ಉದ್ದೇಶವಾದರೋ **ಅತಿಗಂಭೀರವು.** ಸರ್ವ ಋಷಿಗಳ ಪರಿಪಾಲನಕ್ಕಾಗಿಯೂ ಸರ್ವರಾಕ್ಷಸರ ನಿರ್ಮೂಲಕ್ಕಾಗಿಯೂ ಏನಾದರೂ ಹಾಗೆ ಸಂಕಲ್ಪವೋ ಏನೋ ಎಂದು ಊಹಿಸತಕ್ಕದ್ದಾಗಿರುವದರಿಂದ **ಅತಿಗಂಭೀರವು.** ಹೀಗೆ ಅನೇಕ ವೃತ್ತಾಂತಗಳಿಂದ ಸಙ್ಕಲ್ಪದ ಗಂಭೀರವನ್ನು ಪ್ರದರ್ಶಿಸಬಹುದು. ಬ್ರಹ್ಮವಿತ್ತಾದ ಭೀಷ್ಮರನ್ನು ಕೊಲ್ಲಿಸಿದುದೂ ಪರಮ ಸಾತ್ವಿಕರಾದ ಗಾಂಧಿಯವರ ಕೊಲೆಯೂ **ಅತಿಗಂಭೀರವು.**

**ವೈದಿಕಾಃ ವಿಧಯಃ** ಎಂದಿರುವದರಿಂದ ವಿಹಿತಕರ್ಮಗಳು ವಿಧಿಗಳಾಗಿ ಭಗವದಾಜ್ಞಾನುಸಾರವಾಗಿರುವದರಿಂದ ಉಲ್ಲಂಘನೆಯು ಕೂಡದೆಂದೂ, ಅಂತಹ ಉಲ್ಲಂಘನೆಯಿಂದ ಭಗವನ್ನಿಗ್ರಹಕ್ಕೆ ಗುರಿಯಾಗುವೆನೆಂಬ ಭಾವವು ತೋರಿಬರುತ್ತದೆ.

ಅದುದರಿಂದ ಜಗತ್ತಿನ ಸಮಸ್ತ ವ್ಯಾಪಾರಗಳೆಲ್ಲವೂ ತನ್ನನ್ನು ಆಶ್ರಯಿಸಿವೆ.

**ನಮೋ ನಮೋ ವಾಙ್ಮನಸಾತಿ ಭೂಮಯೇ ।**
**ನಮೋ ನಮೋ ವಾಙ್ಮನಸೈಕ ಭೂಮಯೇ ॥**
**ನಮೋ ನಮೋಽನಂತ ಮಹಾ ವಿಭೂತಯೇ**
**ನಮೋ ನಮೋಽನಂತ ದಯೈಕ ಸಿಂಧವೇ ॥ ೨೦ ॥**

---

ಎಂಬುದನ್ನು ಅಲ್ಪಜ್ಞರಾದ ನಾವು ತಿಳಿಯಲಾರೆವು. ಪರಿಣಾಮದಲ್ಲಿ ಗ್ರಹಿಸುವ ಅಂಶವಾಗಿರುವುದರಿಂದ, **ಗಂಭೀರ** ವೆಂದು ಹೇಳಲ್ಪಟ್ಟಿತು. ಹಾಗೆಯೇ ಪರಮ ಸಾಧ್ವಿಯಾದ ದ್ರೌಪದಿಗೆ ಸಭೆಯಲ್ಲಿ ಅವಮರ್ಯಾದೆಯುಂಟುಮಾಡಿದ ಭಗವತ್ಸಂಕಲ್ಪವನ್ನು ಆ ಕಾಲದಲ್ಲಿ ನಾವು ತಿಳಿಯಲಾರೆವು. ಆದುದರಿಂದ ಅತಿಗಂಭೀರವು. ದುಷ್ಟರಾದ ದುಶ್ಶಾಸನ ದುರ್ಯೋಧನಾದಿಗಳ ನಾಶಕ್ಕಾಗಿಯೇ ಒಂದು ವ್ಯಾಜವಾಗಿ ಹಾಗೆ ನಡೆಯಿತೋ ಏನೋ ಎಂದು ಊಹಿಸತಕ್ಕದ್ದಾಗಿ **ಅತಿಗಂಭೀರವು** ತನ್ನ ಕೋಸಲದೇಶದ ಯುವರಾಜಪದವಿಗೆ ಭಂಗದ ಉದ್ದೇಶವಾದರೋ **ಅತಿಗಂಭೀರವು.** ಸಪ್ತಋಷಿಗಳ ಪರಿಪಾಲನಕ್ಕಾಗಿಯೂ ಸರ್ವರಾಕ್ಷಸ ನಿರ್ಮೂಲಕ್ಕಾಗಿಯೂ ಏನಾದರೂ ಹಾಗೆ ಸಂಕಲ್ಪವೋಏನೋ ಎಂಬಊಹಿಸತಕ್ಕದ್ದಾಗಿರುವುದರಿಂದ **ಅತಿಗಂಭೀರವು.** ಹೀಗೆ ಅನೇಕ ವೃತ್ತಾಂತಗಳಿಂದ ಸಙ್ಕಲ್ಪದ ಗಾಂಭೀರ್ಯವನ್ನು ಪ್ರದರ್ಶಿಸಬಹುದು.

**ವೈದಿಕಾಃ ವಿಧಯಃ** ಎಂದಿರುವದರಿಂದ, ವಿಹಿತಕರ್ಮಗಳು ವಿಧಿಗಳಾಗಿ ಭಗವದಾಜ್ಞಾನುಸಾರವಾಗಿರುವದರಿಂದ ಉಲ್ಲಂಘನೆಯು ಕೂಡದೆಂದೂ, ಅಂತಹ ಉಲ್ಲಂಘನೆಯಿಂದ ಭಗವನ್ನಿಗ್ರಹಕ್ಕೆ ಗುರಿಯಾಗುವನೆಂಬ ಭಾವವೂ ತೋರಿ ಬರುತ್ತದೆ.

ಆದುದರಿಂದ ಜಗತ್ತಿನ ಸಮಸ್ತವ್ಯಾಪಾರಗಳೆಲ್ಲವೂ ತನ್ನನ್ನು ಆಶ್ರಯಿಸಿದವರ ಶ್ರೇಯಸ್ಸಿಗಾಗಿಯೂ, ಭೋಗಕ್ಕಾಗಿಯೂ, ಶುಕಗಳನ್ನು ಪಂಜರದಲ್ಲಿಟ್ಟು ಅವುಗಳಿಗೆ ಯೋಗ್ಯವಾದ ಅನ್ನಪಾನಾದಿಗಳನ್ನು ಕೊಟ್ಟು ಸಲಹಿ ಪರಿಪೂರ್ಣ ಕಾಮನು ಆನಂದಿಸುವ ತೆರದಿ ಸರ್ವೇಶ್ವರನೂ ಆನಂದಿಸಿ ಲೀಲಾರಸವನ್ನು ಅನುಭವಿಸುವನೆಂದೂ ಮತ್ತು ವೈದಿಕ ವಿಧಿಗಳನ್ನನುಸರಿಸಿ ನಡೆಯುವದರಿಂದ ಈ ಆಶ್ರಿತನಿಗೆ ಭಗದನುಗ್ರಹ ದಿಂದ ಇಹದಲ್ಲೂ ಪರದಲ್ಲೂ ಶ್ರೇಯಸ್ಸನ್ನು ಹೊಂದಿಸಿ ಆನಂದಿಸುವನೆಂದೂ ಈ ಶ್ಲೋಕದಲ್ಲಿ ಹೇಳಲ್ಪಟ್ಟಿದುದರಿಂದ ಸರ್ವೇಶ್ವರನ ಕಲ್ಯಾಣಗುಣಗಳ ಮಹಾತ್ಮ್ಯೆಯೇ ಸಮರ್ಥನೆ ಮಾಡಲ್ಪಟ್ಟಿತು.

**ಅವತಾರಿಕೆಯು:** ಹಿಂದೆ ೧೬ ನೆಯ ಶ್ಲೋಕದಲ್ಲಿ ಸರ್ವೇಶ್ವರನಾದ ಶ್ರಿಯಃಪತಿಯ ಐಶ್ವರ್ಯವನ್ನೂ, ಅನಂತರ ನಾಲ್ಕು ಶ್ಲೋಕಗಳಲ್ಲಿ ಆತನ ಕಲ್ಯಾಣ ಗಣಯೋಗ ಮಹಾತ್ಮ್ಯೆಯನ್ನು ಉಪಪಾದಿಸಿ, ಅಂಹತ ಮಹೋಪಕಾರಿಯಾಗಿ ಮಹೋದಾರಿಯಾಗಿ ಸರ್ವಸ್ವವನ್ನೂ ದಯಪಾಲಿಸುವ ಮಹನೀಯನಿಗೆ ತಾವು

ದಾಸ ಭೂತರಾಗಿ ಕೈಂಕರ್ಯವನ್ನು ಎಸುಗುವ ಪರಮ ಸುಕೃತವು ತಮಗೆ ಲಭಿಸಿದುದ ಕ್ಕಾಗಿ ಕೃತಜ್ಞತಾಭಾವದಿಂದ ಪುನಃ ಪುನಃ ನಮಸ್ಕರಿಸುತ್ತಾ ಸ್ತುತಿಸುತ್ತಾರೆ.

**ಅರ್ಥವು:— ವಾಙ್ಮನಸಾತಿಭೂಮಯೇ—** ಸಾಧಾರಣರಾದವರ ವಾಕ್ಕಿಗೂ ಮನಸ್ಸಿಗೂ ಮೀರಿದ ಆಧಿಕ್ಯವುಳ್ಳ ಎಂದರೆ ಗೋಚರನಲ್ಲದ ಪರಮ ಪುರುಷನಿಗೆ, **ನಮೋ ನಮಃ**—ಪುನಃ ಪುನಃ ನಮಸ್ಕಾರವು.

**ವಾಙ್ಮನಸೈಕಭೂಮಯೇ:—** ವೇದವಾಕ್ಕುಗಳಿಗೂ ಮತ್ತು ಪರಮ ಭಾಗವತರಾದ ಸನಕಾದಿಗಳ ಮತ್ತು ಪರಾಶರವ್ಯಾಸಾದಿಗಳ ವಾಕ್ಕಿಗೂ ಮನಸ್ಸಿಗೇನೆ ಮುಖ್ಯವಾಗಿ ಗೋಚರವಾದ ಮಹಾತ್ಮ್ಯೆಯುಳ್ಳ ಪರಮಪುರುಷನಿಗೆ, ನಮೋನಮಃ; **ಅನಂತಮಹಾ ವಿಭೂತಯೇ—** ಕೊನೆಗಾಣದ ಮಹತ್ತಾದ ನಿತ್ಯವಿಭೂತಿ ಮತ್ತು ಲೀಲಾವಿಭೂತಿ ಎಂಬ ನಿಯಾಮ್ಯವರ್ಗವನ್ನುಳ್ಳ ಪರಮಪುರುಷನಿಗೆ **ನಮೋನಮಃ** ಮತ್ತು **ಅನಂತ ದಯೈಕಸಿಂಧವೇ—** ಅಪಾರವಾದ ದಯಾಗುಣಕ್ಕೇ ಮುಖ್ಯ ವಾದ ಸಮುದ್ರಪ್ರಾಯನಿಗೆ. ನಮೋ ನಮಃ— ಪುನಃಪುನಃ ನಮಸ್ಕಾರವು.

**ಉಪಪಾದನೆಯು:—** ನಿರುಪಾಧಿಕಸ್ವಾಮಿಯಾಗಿ ನಿರಪೇಕ್ಷಸ್ವತಂತ್ರನಾಗಿ ನಿರವಧಿಕ ಸೌಲಭ್ಯವನ್ನು ಹೊಂದಿರುವ ಭಗವಂತನಲ್ಲಿ ತಮಗೆ ಸ್ವರೂಪಾನುಗುಣ ವಾಗಿಯೂ, **"ಗುಣೈರ್ದಾಸ್ಯಮುಪಾಗತಃ"** ಎಂಬಲ್ಲಿ ಹೇಳಿರುವ ಹಾಗೆ ಗುಣತಃ ದಾಸ್ಯವೃತ್ತಿಯುವನ್ನು ಅನುಭವಿಸುವವರಾಗಿ ಅದಕ್ಕೆ ಉಚಿತ ವೃತ್ತಿಯಾದ ನಮಸ್ಕಾರವನ್ನು ಆಚರಿಸುತ್ತಾರೆ. **ನಮ** ಶಬ್ದಕ್ಕೆ ನಿರುಕ್ತಿಯು ಹೇಗೆಂದರೆ— **"ಯೋಽಕಾಶ್ಚನ ಕೃತಯೋಮಮ, ಭಗವತಿ, ನಮಮ, ನಮಮತಾಸ್ತಿ ತಾಸು, ಭಗವತಿ ಏವತಾಃ, ಅಮನೋಽಹಂ ಭಗವತಿ ಅಹಮಪಿ ನಮಮ ಭಗವತ ಏವಾಹಮಸ್ಮೀತ್ಯೇವ ಮನ ಮಮತಾಂ ಯೋಜಯತೀತ್ಯತೋ ನಮಃ"** ಎಂಬಲ್ಲಿ ಹೇಳಿರುವ ಹಾಗೆ, **ನಮಃ** ಎಂಬ ಶಬ್ದವು ಅಖಂಡವಾದಾಗ ಈ ಆತ್ಮವನ್ನು ಆತನಲ್ಲಿ ಸಮರ್ಪಿಸತಕ್ಕದ್ದೆಂಬ ಅರ್ಥವಾಗುತ್ತದೆ; ಸಖಂಡವಾದಾಗ ನಮಃ ಎಂಬ ಎರಡು ಪದಗಳಾಗಿ **ಮಃ** ಎಂದರೆ ಮಮ, ನ ಎಂದಾಗಿ ಆ ಸಮರ್ಪಣೆ ಯಲ್ಲಿ ನನಗೆ ಕರ್ತೃತ್ವದ ಫಲದ ಯಾವ ವಿಧವಾದ ಸಂಬಂಧವು ಇಲ್ಲವೆಂದಾಗುತ್ತದೆ. ಹಾಗೆಯೇ ಈತನು ಮಾಡುವ ಸರ್ವವಿಧವ್ಯಾಪಾರಗಳಲ್ಲೂ ತನಗೆ ಕರ್ತೃತ್ವವಾಗಲಿ ಮಮತೆಯಾಗಲಿ ಇಲ್ಲವು; ಸರ್ವವೂ ಪರಮಾತ್ಮನಿಗಾಗಿಯೇ ಎಂಬ ಭಾವವು ಉಂಟಾಗುತ್ತದೆ. ಮುಂದೆ ಈ ಅಭಿಪ್ರಾಯವನ್ನೇ **"ಮಮನಾಥಯದಸ್ತಿ"** ಎಂಬ ಶ್ಲೋಕದಲ್ಲೂ (೫೩) ಉಪಪಾದಿಸುತ್ತಾರೆ. ಮಹಾಭಾರತದಲ್ಲಿ ಈ ಅಭಿಪ್ರಾಯವು **"ದ್ವ್ಯಕ್ಷರಸ್ತು ಭವೇನ್ಮೃತ್ಯುಸ್ತ್ರ್ಯಕ್ಷರಂಬ್ರಹ್ಮಣಃ ಪದಮ್। ಮಮೇತಿ ದ್ವ್ಯಕ್ಷರಂ ಮೃತ್ಯುರ್ನಮಮೇತಿಚಶಾಶ್ವತಮ್"** ಎರಡಕ್ಷರ ವಾದರೋ ಸಂಸಾರವನ್ನುಂಟುಮಾಡುವದಾಗಿ ಬಂಧಕವು; ಮೂರಕ್ಷರವು ಪರಬ್ರಹ್ಮನ

ಸ್ಥಾನವಾದ ವೈಕುಂಠವನ್ನು ಹೊಂದಿಸುವಂತಾದ್ದು; ಅದು ಹೇಗೆಂದರೆ **ಮಮ** ನನ್ನದು ಎಂದು ಹೇಳುವ ಎರಡಕ್ಷರವು ಬಂಧಕವು; ಏಕೆಂದರೆ ಐಹಿಕಮಮತೆಯಿರು ವದರಿಂದ; **ನಮಮ**, ನನ್ನದು ಯಾವುದೂ ಇಲ್ಲವೆಂದು ವೈರಾಗ್ಯ ಉಂಟಾಗೋಣವು ಶಾಶ್ವತವಾದ ಪರಮ ಪದವನ್ನು ಹೊಂದಿಸಲು ಕಾರಣವು. **ಈ ನಮೋನಮಃ** ಎಂಬ ಪ್ರಯೋಗದಲ್ಲಿ ಮೊದಲನೆಯ ನಮಃ ಎಂಬುದನ್ನು ಅಖಂಡವಾಗಿ ಭಾವಿಸಿದರೆ ಶರಣಾಗತ್ಯರ್ಥವುಳ್ಳದೆಂದೂ, ಎರಡನೆ ಯನಮಃ ಎಂಬುದನ್ನು ಸಖಂಡವಾಗಿ ಭಾವಿಸಿದರೆ, ಅದರ ಫಲಮಮತಾದಿಗಳ ತ್ಯಾಗಾರ್ಥ ಉಳ್ಳದೆಂದೂ ಭಾವಿಸಬಹುದು.

ನಮಃ ಎಂದು ಸ್ವಾಮಿಯ ಪಾದದಲ್ಲಿ ನಮಸ್ಕರಿಸುವುದರಲ್ಲಿ ಮುಖ್ಯಾರ್ಥವು, ಈ ಆತ್ಮಾ ನನ್ನ ಸ್ವತ್ತು ಅಲ್ಲವು; ಪರಮಾತ್ಮನದೇ ಯಾದುದರಿಂದ ಅದನ್ನು ರಕ್ಷಿಸಿ ಕೊಳ್ಳುವ ಭಾರವು ಆತನವೇ ಎಂಬುದು. ಇದನ್ನು ವನಪರ್ವದಲ್ಲಿ ಕಾಣಬಹುದು. ಮಾರ್ಕಂಡೇಯರು ಪದ್ಮಪತ್ರವಿಶಾಲಾಕ್ಷನಾದ ಶ್ರೀಕೃಷ್ಣನ ಕಣ್ಣಿನ ಸೊಬಗನ್ನು ನೋಡಿ ಪಾಂಡವರಿಗೆ ಹೇಳುತ್ತಾರೇನೆಂದರೆ—"**ಯಃ ಸದೇವೋ ಮಯಾದೃಷ್ಟಃ ಪುರಾ ಪದ್ಮಾಯತೇಕ್ಷಣಃ। ಸಏವ ಪುರುಷವ್ಯಾಘ್ರ ಸಂಬಂಧೀತೇ ಜನಾರ್ದನಃ** (ವನಪ. ೧೯೨. ೫೧) ಪ್ರಳಯದಲ್ಲಿ ಹಿಂದೆ ಯಾವ ಭಗವಂತನು ಕಮಲ ಪತ್ರದಹಾಗೆ ವಿಶಾಲವಾದ ಕಣ್ಣುಳ್ಳವನಾಗಿದ್ದನೋ ಈಗಲೂ ಹಾಗೆಯೇ ಕಣ್ಣುಳ್ಳವನಾಗಿರುವ ನಿನ್ನ ಸಂಬಂಧಿಯಾಗಿರುವ ಶ್ರೀಕೃಷ್ಣನೆಂದು ಅವತರಿಸಿರುವನು. ಆದುದರಿಂದ **ಆತನೇ ಶ್ರಿಯಃಪತಿಯು.** ಆತನನ್ನು ನೀವೆಲ್ಲರೂ ಆಶ್ರಯಿಸಿ ಶರಣಾ ಗತಿಯನ್ನು ಮಾಡಿರಿ ಎಂದು "**ಸರ್ವೇಷಾಮೇವ ಭೂತಾನಾಂ ಪಿತಾಮಾತಾಚ ಮಾಧವಃ। ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ। ದ್ರೌಪದ್ಯಾಸಹಿತಾ ಸರ್ವೇ ನಮಶ್ಚಕ್ರುರ್ಜನಾರ್ದನಮ್**" ಹಾಗೆಯೇ ಪಂಚ ಪಾಂಡವರೂ ದ್ರೌಪದಿಯೊಂದಿಗೆ **ನಮಶ್ಚಕ್ರುಃ** ಎಂದು ಹೇಳಿರುವದರಿಂದ, ನಮಶ್ಶಬ್ದಕ್ಕೆ ಪರಮಾತ್ಮನಲ್ಲಿ ತನ್ನ ಆತ್ಮವನ್ನು ಸಮರ್ಪಿಸಿ ಶರಣಾಗತಿಯನ್ನು ಮಾಡುವದೇ ಮುಖ್ಯಾರ್ಥವು. ಒಬ್ಬ ಗುರುವಿನ ಮೂಲಕ ಹೀಗೆ ಶರಣಾಗತಿಯನ್ನು ಅನುಷ್ಠಿಸತಕ್ಕದ್ದಾಗಿರುತ್ತದೆ. ಅದಲ್ಲದೆ ಮಿಕ್ಕ ಕಾಲಗಳಲ್ಲಿ ಪರಮಾತ್ಮನಲ್ಲಿ ಪ್ರಣಾಮವು ಅಂತಹ ರಕ್ಷಣೆಯ ಅನುವಾದನೆಂದು ಭಾವಿಸಬಹುದು. ಇದು ಮುಖ್ಯವಾಗಿ ಪರಮಾತ್ಮನಿಂದ ತಾನು ಪಡೆಯುವ ಅಥವಾ ಪಡೆದುದಕ್ಕಾಗಿ ಕೃತಜ್ಞತೆಯನ್ನು ಸೂಚಿಸುವಂತಾದ್ದು. ಈ ಅಭಿಪ್ರಾಯವೇ ಮಹಾಭಾರತದಲ್ಲಿ "**ದ್ವ್ಯಕ್ಷರಸ್ತು ಭವೇನ್ಮೃತ್ಯುಸ್ತ್ರ್ಯಕ್ಷರಂ ಬ್ರಹ್ಮಣಃ ಪದಮ್। ಮಮೇತಿ ದ್ವ್ಯಕ್ಷರೋಮೃತ್ಯುರ್ನಮಮೇತಿಚ ಶಾಶ್ವತಮ್**" ಎಂಬಲ್ಲೂ ಉಪಪಾದಿತವು. ನಮ್ಮಲ್ಲಿ ಕೆಲವರಿಗೆ ಏಕಪ್ರಣಾಮದಲ್ಲಿ ತಾತ್ಪರ್ಯವು. ಇನ್ನು ಕೆಲವರಿಗೆ ಶಾಸ್ತ್ರ ಪ್ರಮಾಣವು **ಯುಗ್ಮೇನೈವ ಕುರ್ಯಾತ್** ಎಂದಿರುವದರಿಂದ ಎರಡು, ನಾಲ್ಕು, ಸಲ

ಮಾಡತಕ್ಕದ್ದೆಂಬ ತಾತ್ಪರ್ಯವು. ಕೃತಜ್ಞತಾಭಾವಕ್ಕೆ ಒಂದು ಸಲದಲ್ಲಿ ತೃಪ್ತಿ ಇಲ್ಲದೆ ಅಸಕೃತಮಾಡತಕ್ಕದ್ದೆಂದು ಸೂಚಿಸುವದಕ್ಕಾಗಿ ಎರಡುಸಲ ನಮೋನಮಃ ಎಂದು ಹೇಳಲ್ಪಟ್ಟು, ಈ ಶ್ಲೋಕದಲ್ಲಿ ಎಂಟುಸಲ ಪ್ರಯೋಗಿಸಲ್ಪಟ್ಟಿತು. ಕೃತಜ್ಞತಾಭಾವದಿಂದ ಅರ್ಜುನನು ಪ್ರಣಾಮವನ್ನು **"ಸಹಸ್ರಕೃತ್ವಃ"** ಎಂದರೆ ಅನೇಕ ಸಲ ಮಾಡುತ್ತೇನೆಂದು ವಿಶ್ವರೂಪಾಧ್ಯಾಯದಲ್ಲಿ ಹೇಳಿಕೊಂಡಿರುತ್ತಾನೆ. ಸಂಪ್ರದಾಯವು ಹೇಗೆ? ಶ್ರೀಯತಿವರ್ಯರಿಗೆ ಏಕಪ್ರಣಾಮದಲ್ಲಿ ತಾತ್ಪರ್ಯವೇ ಅಥವಾ ಪುನಃಪುನಃ ಪ್ರಣಾಮದಲ್ಲಿ ತಾತ್ಪರ್ಯವೇ ಎಂಬ ಚರ್ಚೆಯನ್ನು ದಾಸನು ಬರೆದಿರುವ ಗುರುಪರಂಪರಾಸಾರದ ೭-೯ ನೆಯ ಪುಟಗಳನ್ನು ನೋಡಿ.

ಪ್ರಣಾಮದ ಮಹಾತ್ಮ್ಯೆಯನ್ನು ಹೇಳುವ ಪ್ರಮಾಣಗಳು ಅನೇಕ ಉಂಟು. **ಪ್ರಣಮ್ಯಕೃಷ್ಣಂ ಸಹಸಾ ಪಾಂಸುಕ್ಲಿಷ್ಟೋಮಹೀತಲೇ । ನಿಷ್ಕಲ್ಮಷೋ ಭವೇತ್ಸದ್ಯೋಲಲಾಟೇಪಾಂಸುಮುಂಡನಾತ ॥** ಕೃಷ್ಣನನ್ನು ಕಂಡರೆ ಒಡನೇ ನಮಸ್ಕರಿಸತಕ್ಕದ್ದು, ನೆಲವು ಕೆಸರಾಗಿದ್ದರೂ ಚಿಂತೆಯಿಲ್ಲವು. ಹಣೆಗೆ ನೆಲದ ದೂಳು ಅಂಟಿರುವ ಅಲಂಕಾರದಿಂದ ಒಡನೇ ಪಾಪಗಳೆಲ್ಲಾ ತೊಲಗಿ ಪವಿತ್ರನಾಗುವನೆಂದು ಹೇಳಲ್ಪಟ್ಟಿದೆ ಇಲ್ಲಿ ನಮಸ್ಕರಿಸುವ ಪ್ರಕಾರವು ಬೋಧಿತವು. ಹೀಗೆ ಭಗವದುತ್ಸವಾದಿಗಳೂ ಮತ್ತು ತುಂಬಾ ಶಿಷ್ಟರೂ ಬಂದರೆ ಮಾಡತಕ್ಕ ಕ್ರಮವಾಗಿರುತ್ತದೆ. **"ದುರ್ಗಸಂಸಾರಕಾಂತಾರ ಮಪಾರವಭಿಧಾವತಾಮ್ ಏಕಃ ಕೃಷ್ಣನಮಸ್ಕಾರೋ ಮುಕ್ತಿತೀರಸ್ಯ ದೇಶಿಕಃ"** ಇಲ್ಲಿ ಸಂಸಾರವು ಒಂದು ಮರುಕಾಂತಾರವೆಂದೂ ಅದನ್ನು ದಾಟಿಸತಕ್ಕದ್ದು ಒಂದು ನಮಸ್ಕಾರವೆಂದು ಹೇಳಿತು. ಇಲ್ಲಿ ಏಕಶಬ್ದವಿರುವದರಿಂದ ಒಂದೇ ಸಲ ನಮಸ್ಕಾರಿಸಬೇಕೆಂದು ಹೇಳಲಿಲ್ಲವು. ಒಂದು ನಮಸ್ಕಾರದ ಮಹಾತ್ಮ್ಯೆಯು ಹೇಳಲ್ಪಟ್ಟಿತು; ಏಕೆಂದರೆ ಅದೇ ಸಕೃತ್ ಶರಣಾಗತಿಯಾಗುವದರಿಂದ ಹಾಗೆಯೇ ಇನ್ನೊಂದು ಪ್ರಮಾಣ ಉಂಟು: **ಏಕೋಪಿ ಕೃಷ್ಣೇ ಸುಕೃತಃಪ್ರಣಾಮೋ ದಶಾಶ್ವಮೇಧಾವಭೃಥೇನ ತುಲ್ಯಃ । ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣ ಪ್ರಣಾಮೀ ನಪುನರ್ಭವಾಯ** ಸಕೃತ್ಪ್ರಣಾಮ ಮಾಡಿ ಶರಣು ಹೊಂದಿದರೆ, ಪುನರ್ಜನ್ಮವಿಲ್ಲದೆ ಮೋಕ್ಷಪ್ರಾಪ್ತಿಯುಂಟು. ಹತ್ತು ಅಶ್ವಮೇಧಗಳನ್ನು ನಡೆಸಿದರೂ ಪುನರ್ಜನ್ಮಪುಂಟಾಗಬಹುದು. **" ಅತಸೀಗುಚ್ಛ ಸಂಕಾಶಂ ಪೀತವಾಸಸಮಚ್ಯುತಮ್ । ಯೇ ನಮಸ್ಯನ್ತಿ ಗೋವಿನ್ದಂ ನತೇಷಾಂ ವಿದ್ಯತೇ ಭಯಮ್ "** ಇಲ್ಲಿ ಪೀತಾಂಬರಧಾರಿಯನ್ನು ನಮಸ್ಕರಿಸುವವರಿಗೆ ಸಂಸಾರದ ಯಾವ ಭಯವೂ ಇರುವದಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಪ್ರಣಾಮವು **ಪಂಚಾಂಗ**ವಾದುದೆಂದೂ **ಅಷ್ಟಾಂಗ**ವೆಂದೂ ಹೇಳಲ್ಪಟ್ಟಿರುತ್ತದೆ.

(೧) "**ಪಾದಾಂಗುಳಿಭ್ಯಾಂ ಜಾನುಭ್ಯಾಂ ಶಿರಸಾ ಚಾವನೀಂ ಸ್ಪೃಶನ್। ಬದ್ಧಾಂಜಲಿ ರ್ನಮಸ್ಕುರ್ಯಾ ತ್ಪಂಚಾಂಗಸ್ಸ ಉದೀರ್ಯತೇ**" ಅರ್ಥವು ವ್ಯಕ್ತವು.

(೨) "**ನಿಧಾಯದಂಡವದ್ದೇಹಂ ಪ್ರಸಾರ್ಯ ಚರಣೌಕತಾ । ಬಧ್ವಾ ಮುಕುಳವತ್ಪಾಣೀ ಪ್ರಣಾಮೋ ದಂಡ ಸಂಜ್ಞಿತಃ ।**" "ಪಾದೌ ಶಿರಸ್ತಥಾ ಹಸ್ತೌ ನಿಕುಂಚ್ಯ **ಮುಕುಳಾಕೃತಿ । ಮನೋ ಬುದ್ಧ್ಯಭಿಮಾನೈಶ್ಚ ಪ್ರಣಾಮೋಷ್ಟಾಂಗ ಸಂಜ್ಞಿತಃ**" ಎಂದಿರುತ್ತದೆ. **ಪ್ರಣಾಮ** ವಿಷಯದಲ್ಲಿ ಹೆಚ್ಚು ತಿಳುವಳಿಕೆ ಎಂಬುವರು ಧರ್ಮಸಾರ ಮುಚ್ಚಯವನ್ನು ಅವಲೋಕಿಸಬಹುದು.

"**ಪ್ರಣಮ್ಯ ದಂಡವತ್ಭೂಮೌ ನಮಸ್ಕಾರೇಣಯೋಽರ್ಚಯೇತ್ ಸ ಯಾಂ ಗತಿ ಮವಾಪ್ನೋತಿ ನತಾಂಕ್ರತುಶತೈರಪಿ**" ಭೂಮಿಯಲ್ಲಿ ದಂಡ ವತ್ಪ್ರಣಾಮ ಮಾಡಿ ಶ್ರಿಯಃ ಪತಿಯನ್ನು ಯಾವನು ಪೂಜಿಸುವನೋ ಅಂತವನು ಹೊಂದುವ ಸದ್ಗತಿಯನ್ನು ನೂರು ಯಜ್ಞಗಳನ್ನು ಅನುಷ್ಠಿಸಿದವನೂ ಕೂಡ ಹೊಂದ ಲಾರನು, ಹೀಗೆ ಪ್ರಣಾಮದ ಮಾಹಾತ್ಮ್ಯೆಯು ಉಪಪಾದಿತವು. "**ನಮ ಇತ್ಯೇವ ಯೋಬ್ರೂಯಾ ನ್ಮದ್ಭಕ್ತ ಶ್ಶ್ರದ್ಧಯಾನ್ವಿತಃ । ತಸ್ಯಾಕ್ಷಯೋ ಭವೇ ಲ್ಲೋಕ ಶ್ಶ್ವಪಾಕ ಸ್ಯಾಪಿನಾರದ**" ಇದು ನಾರದರನ್ನು ಕುರಿತ ಭಗವ ದ್ವಾಕ್ಯವು. ಓನಾರದ ಮುನಿಗಳೇ! ಯಾವನನ್ನ ಭಕ್ತನಾದವನು ಶ್ರದ್ಧಾನ್ವಿತನಾಗಿ, **ನಮಃ** ಎಂದು ಹೇಳಿ ಶರಣಾಗತಿಯನ್ನು ಅನುಷ್ಠಿಸುವನೋ ಅವನು ಶ್ವಪಾಕನಾದ **ಚಂಡಾಲನಾದರೂ**, ಚ್ಯುತಿ ಎಂಬುದಿಲ್ಲದೆ ದಿವ್ಯವೈಕುಂಠ ಲೋಕವನ್ನು ಹೊಂದುವನು. "**ಹರಿಮಮರಗಣಾರ್ಚಿತಾಂಪದ್ಮಾಂಘ್ರಿಯಃ ಪ ರ ಮಾ ರ್ಥ ತೋ ಮನುಷ್ಯಃ । ತ ಮುಪಗತ ಸಮಸ್ತಪಾಪ ಬಂಧಂ ವ್ರಜ ಪರಿಹೃತ್ಯ ಯಥಾಗ್ನಿ ಮಾಜ್ಯ ಸಿಕ್ತಮ್**" ವಿ. ಪು. ಇದು ಯಮನು ತನ್ನ ಭಟರಿಗೆ ವಿಷ್ಣು ಭಕ್ತರ ತಂಟೆಗೆ ಹೋಗಬೇಡಿ; ಪಾಪಿಗಳನ್ನು ಮಾತ್ರ ಶಿಕ್ಷೆಗಾಗಿ ಎಳೆಕೊಂಡು ಬನ್ನೀ ಎಂದು ಹೇಳುವ ಸಂದರ್ಭವು. ಯಾವ ಮನುಷ್ಯನು ಸತ್ಯವಾಗಿ ದೇವಗಣದಿಂದ ಆರಾಧಿಸಲ್ಪಟ್ಟ ಶ್ರೀ ಹರಿಯನ್ನು ನಮಸ್ಕರಿಸಿ ಪಾದಪದ್ಮಯುಗಳವನ್ನು ಆಶ್ರಯಿಸಿ ದುದರಿಂದ ಸಮಸ್ತಪಾಪ ಬಂಧಗಳಿಂದ ಬಿಡುಗಡೆಯನ್ನು ಹೊಂದಿರುವನೋ ಅಂತವನ ತಂಟೆಗೆ ಹೋಗದೆ ತುಪ್ಪದಿಂದ ಜ್ವಲಿಸುತ್ತಿರುವ ಅಗ್ನಿಯ ಹತ್ತಿರಕ್ಕೆ ಹೇಗೆ ಪ್ರಾಜ್ಞನು ಹೋಗದೇ ಇರುವನೋ ಹಾಗೆ ನೀವೂ ಹೋಗತಕ್ಕದ್ದು, "**ಏಕೋಽಬಹೂನಿ ದುರಿತಾನಿ** ಸುದುಸ್ತರಾಣಿ ಭಕ್ತ್ಯಾ ಪ್ರಯುಕ್ತ **ಇಹ ಚಕ್ರಧರೇ** ಪ್ರಣಾಮಃ ।" ಭಕ್ತಿಯಿಂದ ಇಲ್ಲಿ ಚಕ್ರಪಾಣಿಯಲ್ಲಿ ಮಾಡಿದ ಒಂದೇ ಪ್ರಣಾಮವು ಅನೇಕಗಳಿಂದ ಕಳೆದುಕ್ಕೊಳ್ಳಲು ತುಂಬಾ ಅಸಾಧ್ಯಗಳಾದ ಪಾಪಗಳೂ ಸಹ

ತೋರುತ್ತವೆ. ಪ್ರಣಾಮದ ಫಲವು ಹೀಗೆ ಮಹತ್ತಾದುದು ಎಂದು ಹೇಳಲ್ಪಟ್ಟಿರುತ್ತದೆ.

ಇಲ್ಲಿ **ನಮೋನಮಃ** ಎಂದು ಎರಡುಸಲ ಹೇಳಿರುವವರಿಂದ ಇನ್ನೊಂದು ಅಭಿಪ್ರಾಯವೂ ತೋರುತ್ತದೆ. ಪರತ್ವ, ಸೌಲಭ್ಯ, ಸಾರಸ್ಯ ಕಾರುಣ್ಯಾದಿಗಳಿಂದ ಕೂಡಿದ ವಿಭೂತಿಯೋಗದ, ಅನುಭವಗಳಿಂದುಂಟಾದ ಭಕ್ತಿಯ ಆಧಿಕ್ಯವನ್ನು ಸೂಚಿಸುತ್ತದೆ. **ನಿತ್ಯಾಂಜಲಿಪುಟಾ ಹೃಷ್ಟಾಃ ನಮ ಇತ್ಯೇವವಾದಿನಃ** ಎಂಬುದು ಇಲ್ಲಿ ಅನುಸಂಧೇಯವು

ಹೀಗೆ ಎರಡುಸಲ ಹೇಳುವದರಲ್ಲಿ ಪ್ರಥಮ ನಮಸ್ಸು ಅಖಂಡವಾಗಿ ಭರನ್ಯಾಸವನ್ನು ಸೂಚಿಸುತ್ತದೆ. ಎರಡನೆಯ ನಮಸ್ಸು ಸಖಂಡವಾಗಿ **ಮಃ ನ** ಎಂದಾಗುವದರಿಂದ ತನಗೆ ತನ್ನ ರಕ್ಷಣೆಯಲ್ಲಿ ಈಷದಪಿ ಸ್ವಾತಂತ್ರ್ಯವಿಲ್ಲವೆಂದೂ, ಕರ್ತೃತ್ವಮಮತಾ ಫಲಗಳಲ್ಲಿ ತನಗೆ ಈಷದಪಿ ಅನ್ವಯವಿಲ್ಲವೆಂದೂ, ಹೇಳಿದಂತಾಯಿತು.

ಹೀಗೆ ಎರಡು ನಮಸ್ಸುಗಳಿಗೂ ಭಿನ್ನಾರ್ಥಗಳನ್ನು ಹೇಳದೆ ಸುಮ್ಮನೆ ವೀಪ್ಸಾ (ಪುನರುಕ್ತಿ) ಎಂದೂ ಭಾವಿಸಬಹುದು. ಶ್ರುತ್ಯಾದಿಗಳಲ್ಲಿ ಈ ವೀಪ್ಸೆಯನ್ನು ಕಾಣಬಹುದು: "**ನಾರಾಯಣ ಸಾಯುಜ್ಯಮವಾಪ್ನೋತಿ, ನಾರಾಯಣ ಸಾಯುಜ್ಯಮವಾಪ್ನೋತಿ**" "ನಚಪುನರಾವರ್ತತೇ, **ನಚಪುನರಾವರ್ತತೇ** ಇತ್ಯಾದಿ, ಹಾಗೆಯೇ ರಾಮಾಯಣದಲ್ಲಿ "**ನಾರಾಜಕೇ ಜನಪದೇ**" "**ಶಿತೋಭವಹನೂಮತಃ**" "**ಯಸ್ಯಾರ್ಥ್ಯೇಸುಮತೇಗತಃ**" ಎರಡುಸಲ ಮಾತ್ರವೇ ಅಲ್ಲದೆ ಅನೇಕ ಸಲ ಹೇಳಲ್ಪಟ್ಟಿರುತ್ತವೆ. ಹೀಗೆ ಪುನಃ ಪುನಃ ಹೇಳತಕ್ಕ ಸಂದರ್ಭಗಳು "**ಪ್ರಶಂಸಾಯಾಂ ಪ್ರತಿಜ್ಞಾಯಾಂ ಪ್ರಲಾಪೇ ತರ್ಜನೇ ಪಿಚ | ಭಯೇಚವಿ (ಸ್ಮಯೇ) ಜಯೇಚೈವ ತ್ವಾಸಃ ಪುನ್ಯ ಮಲಂಕೃತಿಃ**" ಎಂಬಲ್ಲಿ ಹೇಳಲ್ಪಟ್ಟಿವೆ.

ನಾಲ್ಕು ಪಾದಗಳಲ್ಲೂ ಶ್ರಿಯಃ ಪತಿಯ ಮಹಿಮೆಯನ್ನು ಕೊಂಡಾಡಿ ನಮಸ್ಕರಿಸುತ್ತಾರೆ. **ವಾಙ್ಮನಸಾತಿಭೂಮಯೇ** — "**ಯತೋವಾಚೋ ನಿವರ್ತನ್ತೇ ಅಪ್ರಾಪ್ಯಮನಸಾ ಸಹ**" (ತೈ) ಎಂಬಲ್ಲಿ ಹೇಳಿರುವ ಹಾಗೆ ವಾಕ್ಕಿಗೂ ಮನಸ್ಸಿಗೂ ಅಗೋಚರನೆಂದು ಹೇಳಲ್ಪಟ್ಟಿತು. ಅವನೆ ಎಲ್ಲರಿಗೂ ಅಗೋಚರವೋ ಎಂದರೆ, ಪರಮಯೋಗಿಗಳಿಗಾದರೋ ಸಾಕ್ಷಾತ್ಕಾರದಿಂದ ವೇದ್ಯನಾದುದರಿಂದ ಸ್ವಲ್ಪಮಟ್ಟಿಗೆ ಗೋಚರನಾದರೂ, ಅವರಿಂದಲೂ ಕೂಡ ಚನ್ನಾಗಿ ತಿಳಿಯದೆ ಅಪರಿಚ್ಛೇದ್ಯ ಮಾಹಾತ್ಮ್ಯಯುಳ್ಳವನೆಂಬ ಭಾವವು. ಆದುದರಿಂದ **ವಾಙ್ಮನಸ್ಯೈಕ ಭೂಮಯೇ** ಎಂದು ಹೇಳಲ್ಪಟ್ಟಿತು. ಇಲ್ಲಿ ವಾಕ್ಕು ಎಂದರೆ ವೇದ ವಾಕ್ಕು "**ಯಂಯೇವಂವೇದ**" ಎಂಬ ಪ್ರಯೋಗವನ್ನು ಕಾಣಬಹುದು.

ವೇದವು ಸರ್ವೇಶ್ವರನಿಂದಲೇ ಬಂದುದರಿಂದ ವೇದಬಲ್ಲದು ಆತನ ಮಾಹಾತ್ಮ್ಯ ಯನ್ನು. ಹಾಗೆಯೇ ವೇದವಿತ್ತುಗಳಾದ ಪರಾಶರವ್ಯಾಸ ಶುಕ ವಾಲ್ಮೀಕಾದಿಗಳು ಬಲ್ಲರು. " **ಸರ್ವೇವೇದಾಯತ್ಪದ ಮಾಮನನ್ತಿ** " ಎಂಬುದರಿಂದ ಗ್ರಹಿಸ ಬಹುದು. ಗೀತೆಯಲ್ಲೂ **ವೆದೈಶ್ಚಸರ್ವೈರಹ ಮೇವ ವೇದ್ಯಃ** ಎಲ್ಲಾ ವೇದ ಗಳಿಂದಲೂ ನಾನೇ ತಿಳಿಯಲ್ಪಡತಕ್ಕವನೆಂದು ಶ್ರೀಕೃಷ್ಣ ಭಗವಾನರವರೇ ಹೇಳಿ ಕೊಂಡಿರುತ್ತಾರೆ. ಹಾಗೆಯೇ " **ನತಾಸ್ಮಿ ಸರ್ವವಚಸಾಂ ಪ್ರತಿಷ್ಠಾ ಯತ್ರ ಶಾಶ್ವತೀ** " ಎಂದರೆ ಸಮಸ್ತವಾಕ್ಕೂ ಎಲ್ಲಿ ಶಾಶ್ವತವಾಗಿ ಪ್ರತಿಷ್ಠಿತವಾಗಿ ನಿಲ್ಲು ತ್ತದೋ, ಅಂತವನಲ್ಲಿ ನಾವು ಪ್ರಣಾಮವನ್ನು ಎಸೆಗುವೆವು, ಎಂದೂ ಹೇಳಲ್ಪಟ್ಟಿರು ತ್ತದೆ. ಅಥವಾ ತನ್ನ ಅನುಗ್ರಹವನ್ನು ಹೊಂದಿದ ಗೋಪಗೋಪಿಯರೇ ಮೊದ ಲಾದವರುಗಳಿಗೆ ಸ್ವಲ್ಪಮಟ್ಟಿಗೆ ಗೋಚರನೆಂದಾಗಲಿ, ತನ್ನ ಅನುಗ್ರಹವನ್ನು ಹೊಂದಿದ ಅರ್ಜುನಾಕ್ರೂರೋದ್ಧವಾದಿಗಳಿಗೆ ಸ್ವಲ್ಪಮಟ್ಟಿಗೆ ತನ್ನ ಮಹಿಮೆಯನ್ನು ತೋರಿಸಿದುದರಿಂದಾಗಲಿ **ವಾಙ್ಮನಸ್ಸೈಕ ಭೂಮಿಯೇ** ಎಂದು ಹೇಳಲ್ಪಟ್ಟಿತು. ಇಲ್ಲಿ ಏಕ ಶಬ್ಧ ಸ್ವಾರಸ್ಯದಿಂದ ಅಂತಹ ಭಕ್ತರೂ ಪರಮಯೋಗಿಗಳೂ ವಿಷಯಾಂತರ ವೈಮುಖ್ಯವುಳ್ಳವರಾಗಿ ವಿರಳರೆಂದು ತಿಳಿಸಲ್ಪಟ್ಟಿತು.

ಪ್ರಥಮ ಪಾದವಲ್ಲಿ ಹೇಳಿದ ವಾಙ್ಮನಸಾತಿಭೂಮತ್ವಕ್ಕೆ ಕಾರಣವನ್ನು ತಿಳಿಸು ವನರಾಗಿ ಈ ಮೂರನೆಯ ಪಾದವಲ್ಲಿ " **ಅನಂತ ಮಹಾ ವಿಭೂತಯೇ** — ಎಂದು ಸಮರ್ಥಿಸುತ್ತಾರೆ. ಶ್ರಿಯ: ಪತಿಯ ವಿಭೂತಿಯು ಬ್ರಹ್ಮರುದ್ರಾಗಳಿಗೆ ಸ್ವಾಮಿಯೇ ಕೊಟ್ಟಿರುವ ವಿಭೂತಿಗಳಿಗಿಂತಲೂ ಅನಂತವಾಗಿ ಅನವಧಿಕವಾದುದಾಗಿ ಮಹತ್ತಾದುದು ಎಂಬುದನ್ನು ಇಲ್ಲಿ ತಿಳಿಸಿರುತ್ತಾರೆ. ಇಲ್ಲಿ ಹೇಳಿರುವ ಆನಂತ್ಯವು ಉಪಲಕ್ಷಣ ರೂಪದಲ್ಲಿ ಆತನ ಕಲ್ಯಾಣ ಗುಣಯೋಗಕ್ಕೂ ಸೇರಿದುದೆಂದು ಭಾವಿಸ ತಕ್ಕದ್ದು. ಅಥವಾ ಮುಂದಿನ ಪಾದದಲ್ಲಿ **ಅನಂತ ದಯೈಕನಿಂಧವೇ** ಎಂಬಲ್ಲಿ ದಯೆಯೊಂದರ ವಿಷಯವಾಗಿ ಆದಂತ್ಯವನ್ನು ಹೇಳಿದುದು ಉಪಲಕ್ಷಣವಾಗಿ ಸರ್ವಕಲ್ಯಾಣ ಗುಣಗಳ ವಿಷಯದಲ್ಲೂ ಹೇಳಿದುದು ಎಂದೂ ಭಾವಿಸಬಹುದು. ಹೀಗೆ ದಯಾನಂತ್ಯವಿರುವದರಿಂದಲೇ ವಾಙ್ಮನಸ್ಸೈಕಭೂಮಿತ್ವಕ್ಕೆ ಹೇತುವೆಂದು ತಿಳಿಯತಕ್ಕದ್ದಾಗಿರುತ್ತದೆ.

**ಅನಂತ ದಯೈಕನಿಂಧವೇ** ಎಂಬಲ್ಲಿ ಸಿಂಧುಶಬ್ದವನ್ನು ಉಪಯೋಗಿ ಸಿರುವದು ದಯೆಯ ಅಕ್ಷೋಭ್ಯತ್ವವನ್ನು ಸೂಚಿಸುತ್ತದೆ. ಆ ದಯೆಗೆ ಯಾವ ಸಂದರ್ಭವಲ್ಲೂ ಚ್ಯುತಿಯಿಲ್ಲವೆಂಬ ಭಾವವು ಪ್ರದರ್ಶಿತವು. ಆ ದಯೆಯೊಂದು ಸರ್ವೇಶ್ವರನಲ್ಲಿ ಇರುವದರಿಂದಲೇ ಮಹಾಪರಾಧಿಗಳಾದ ಸರ್ವರೂ ಆತನನ್ನು ಆಶ್ರಯಿಸಬಹುದಾಗಿವೆ. ಅದು ಇಲ್ಲದೇ ಇದ್ದರೆ ಯಾರೂ ಆಶ್ರಯಿಸಲು ಸಾಧ್ಯ ವಿಲ್ಲದೆ ಹೋಗುತ್ತಿತ್ತು. ಇದನ್ನೇ ಶ್ರೀ ನಿಗಮಾಂತರು ಮನಸ್ಸಿನಲ್ಲಿಟ್ಟು " **ದೋಷಾಭವೇಯುಃ ರೇತೇಯದಿ ನಾಮ ದಯೇತ್ವಯಾವಿನಾಭೂತಾಃ** "

ಓ ಶ್ರೀನಿವಾಸನ ದಯಯೇ ನೀನು ಮಾತ್ರವಿಲ್ಲದೆ ಹೋಗಿದ್ದರೆ, ಸರ್ವೇಶ್ವರನ ಇತರ ಗುಣಗಳೆಲ್ಲಾ ದೋಷಯುಕ್ತಗಳಾಗಿ ನಿಷ್ಫಲವಾಗಿ ಆಗುತ್ತಿದ್ದವೆಂದು ಹೇಳಿರುತ್ತಾರೆ ( ದಯಾ ಶತಕ. ೧೬ )

ಹೀಗೆ ಈ ಮೇಲಿನ ನಾಲ್ಕು ಚತುರ್ಥ್ಯಂತ ಪದಗಳಿಂದಲೂ ಸ್ವಾಮಿಯ ಪರತ್ವ, ಸೌಲಭ್ಯ, ಪ್ರಾಪ್ಯತ್ವ ಶರಣ್ಯತ್ವಗಳು ಉಪಪಾದಿತಗಳು. ಇಲ್ಲಿನ ನಮಶ್ಶಬ್ದಗಳಿಂದ ಅನನ್ಯಪ್ರಯೋಜನನಾಗಿ ಶರಣಾಗತ್ಯಾಧಿಕಾರಿಯಾಗಿರುವ ಪ್ರಾಪ್ತಾವಿನ ಭಗವಂತನಿಗೇನೇ ಶೇಷಿತ್ವವು ಬೋಧಿತವೆಂದು ಭಾವಿಸಬಹುದು. ಈ ಪ್ರಾಪ್ತಾವಿಗೆ ಬೇಕಾದ ಫಲದಲ್ಲಿ ಈ ಪದಪಿ ಸಂದೇಹವಿಲ್ಲವೆಂಬುದು ನಾಲ್ಕನೇ ಪಾದದ ಚತುರ್ಥ್ಯನ್ತ ಪದದಿಂದ ಸಿದ್ಧವು. ಈ ನಾಲ್ಕು ಚತುರ್ಥ್ಯಂತ ಪದಗಳಿಂದ ಕೂಡಿದ ನಮಶ್ಶಬ್ದಗಳಿಂದ, ಉಪಾಯಾನುಷ್ಠಾನಕ್ಕೆ ಬೇಕಾದ ತತ್ವಜ್ಞಾನವೂ ನಿರ್ಮಮತ್ವವೂ ಲಭಿಸುತ್ತವೆ. ಪ್ರಾಪ್ತಾರಾದ ತಾನು ಅನುಕೂಲನಾಗಿಯೂ ಪ್ರತಿಕೂಲ ರಹಿತನಾಗಿಯೂ ಇರುವಿಕೆಯು ಇಲ್ಲಿ ತೋರಿಬರುವದರಿಂದ ಇವುಗಳು ಅಂಗವಾಗಿರುವ ಶರಣಾಗತಿಯೂ ಕೂಡ ಈ ಶ್ಲೋಕದಲ್ಲಿ ಉಪಪಾದಿತವೆಂದು ಭಾವಿಸಬಹುದು. ಹಿಂದೆಯೇ ಪ್ರಥಮ ನಮಸ್ಸಿಗೆ ಶರಣಾಗತಿಯಲ್ಲಿ ಮುಖ್ಯಾನ್ವಯ ವೆಂದೂ ಹೇಳಲ್ಪಟ್ಟಿತು. ಹೀಗೆ ಅಭಿಪ್ರಾಯವಾದರೆ, ಸಕೃತ್ತಾಗಿ ಹೇಳುವದು ಸಾಕಾಗಿ ಮೇಲಿನ ನಮಸ್ಸುಗಳು ಅದರ ಸ್ಥಿರೀ ಕರಣಾರ್ಥವಾಗಿ, "ಸತ್ಯಂ ಸತ್ಯಂ ಪುನಸ್ಸತ್ಯ ಮುಧೃತ್ಯ ಭುಜಮುಚ್ಯತೇ" ಎಂಬಲ್ಲಿ ಹೇಳಿರುವ ಹಾಗೆ ಎಂದು ತಿಳಿಯತಕ್ಕದ್ದು. ನಮಶ್ಶಬ್ದಕ್ಕೆ ಶರಣಾಗತಿಯಲ್ಲೇ ಮುಖ್ಯಾನ್ವಯವೆಂಬುದನ್ನು ಹಿಂದೆ ಪಾಂಡವರ ವೃತ್ತಾಂತದಿಂದ ಸ್ಥಾಪಿಸಲ್ಪಟ್ಟಿತು. ದಮಯಂತೀ ವೃತ್ತಾಂತ ದಲ್ಲೂ ವ್ಯಕ್ತವೆಂದು ಶ್ರೀ ದೇಶಿಕರವರು "**ಶರಣಂ ಪ್ರತಿದೇವಾನಾಂ ಪ್ರಾಪ್ತ ಕಾಲ ಮಮನ್ಯತೇ**" ಎಂಬ ಅರ್ಥದಲ್ಲಿ "**ವಾಚಾಚ ಮನಸಾ ಚೈವ ನಮಸ್ಕಾರಂ ಪ್ರಯುಜ್ಯಸೇ**" ಈ ನಮಶ್ಶಬ್ದ ಪ್ರಾಶಸ್ತ್ಯವು ಅಹಿರ್ಬುಧ್ನ್ಯ ಸಂಹಿತೆಯಲ್ಲಿ "**ಸಮಿತ್ಸಾಧನಕಾದೀನಾಂ ಯಜ್ಞಾನಾಂ ನ್ಯಾಸಮಾತ್ಮನಃ । ನಮಸಾ ಯೋ ಕರೋದ್ದೇವೇ ಸಸ್ವಧ್ವರ ಇತೀರಿತಃ**" "ಸಮಿತ್ತೇ ಮೊದಲಾದ ಸಾಧನಗಳಿಂದ ಮಾಡುವ ಯಜ್ಞಗಳಿಗಿಂತಲೂ ತುಂಬಾ ಶ್ರೇಷ್ಠವಾದ ಯಜ್ಞವು ಯಾವುದೆಂದರೆ, ಸರ್ವೇಶ್ವರನವಸ್ತುವಾದ ಈ ಜೀವಾತ್ಮನ ರಕ್ಷಣೆಯ ಭರವನ್ನು ಸ್ವಾಮಿಯಲ್ಲೇ ನಮಸ್ಸಿನ ಪೂರ್ವಕವಾಗಿ ಯಾವುದು ಸಮರ್ಪಿಸಲ್ಪಡುವದೋ ಅದೇ" ಎಂದು ಹೇಳಲ್ಪಟ್ಟಿರುತ್ತದೆ. ಇದು "**ಯಸ್ಸಮಿಧೋ ಯ ಅಹುತಯೋ ವೇದೇನದದಾಶಮರ್ತ್ಯೋ ಅಗ್ನಯೇ ಯೋ ನಮಸಾಸಸ್ವಧ್ವರಃ**" ಎಂಬ ಶ್ರುತಿಯ ಉಪಬೃಹ್ಮಣವು. ಅಥವಾ ಪ್ರಯೋಜನ, ಕರ್ತೃತ್ವ, ಭೋಕ್ತೃತ್ವಗಳು ತನ್ನ ಆಧೀನವೆಂಬ ಭ್ರಮೆಯಿಲ್ಲದೆ ಸ್ವಾಮಿಯಿಂದ ಕೊಡಲ್ಪಡುವ ಪರಮಫಲವನ್ನು

**ನ ಧರ್ಮ ನಿಷ್ಠೋಽಸ್ಮಿ ನ ಚಾತ್ಮವೇದೀ**
**ನ ಭಕ್ತಿಮಾಂ ಸ್ತ್ವಚ್ಚರಣಾರ ವಿಂದೇ ।**
**ಅಕಿಂಚನೋಽ ನನ್ಯಗತಿ ಶ್ಶರಣ್ಯ**
**ತ್ವತ್ಪಾದಮೂಲಂ ಶರಣಂ ಪ್ರಪದ್ಯೇ** ॥ ೨೨ ॥

---

ಸಾಧಿಸಿಕೊಡುವ ಫಲವುಳ್ಳದ್ದು ಈ ನಮಶ್ಶಬ್ದವೆಂದಾಗಲಿ ಭಾವಿಸಬಹುದು. **ನಮೋ ನಮಃ** ಎಂದಾದ ನಂತರ **ಭವತು** ಉಂಟಾಗಲಿ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬಹುದು. ಇಂತಹ ಉಪಾಯಾನುಷ್ಠಾನವು ಮುಂದಿನ ಶ್ಲೋಕದಲ್ಲಿ ಮಾಡಲ್ಪಡುತ್ತದೆ. ಅದಕ್ಕೆ ಪೂರ್ವಭಾವಿಯಾಗಿಯೇ ಫಲಾಪೇಕ್ಷೆಯಿರ ಬೇಕಾದುದರಿಂದ ಅದು ಇಲ್ಲಿ ಹೇಳಲ್ಪಟ್ಟಿತೆಂದು ಭಾವಿಸಬಹುದು. ಈ ನಮಶ್ಶಬ್ದದ ಆವೃತ್ತಿಯಿಂದ ತೀವ್ರವಾದ ಭಕ್ತಿಯೂ ಉಪಾಯಾನುಷ್ಠಾನಕ್ಕೆ ಬೇಕಾದ ತ್ವರಾತಿಶಯವೂ ಈ ಶ್ಲೋಕದಲ್ಲಿ ಸೂಚಿಸಲ್ಪಟ್ಟವು. ॥ ೨೧ ॥

**ಅವತಾರಿಕೆ:**—ಹಿಂದಿನ ಶ್ಲೋಕದಲ್ಲಿ ಪರಮಪುರುಷನು, ವಿಭೂತಿಯೋಗ ಕಲ್ಯಾಣ ಗುಣಯೋಗ ಮೊದಲಾದವುಗಳಿಂದ ಪರಿಪೂರ್ಣನೆಂದೂ ಆನಂದಮಯ ನೆಂದೂ ಕೃಪಾಮಹೋದಧಿ ಎಂದೂ ಹೇಳಿಕೊಂಡರು. ಮತ್ತು ತಾವಾದರೋ ಆ ಮಹಾನುಭಾವನ ಸತ್ತಾಸ್ಥಿತಿನಿಯಮನಾದಿಗಳಿಗೆ ಒಳಗಾಗಿ, ಸಂಪೂರ್ಣ ಪರತಂತ್ರರಾಗಿ, ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಅಶಕ್ತತೆಯನ್ನು ತಿಳಿದವರಾದರು. ತಮ್ಮ ಸಂಸಾರ ಬಂಧನನ್ನು ನೀಗಿಕೊಳ್ಳಲು ಉಪಾಯವು ಒಂದು ಗುರುವಾದ ಕರ್ಮಯೋಗಾದಿ ಅಂಗಗಳಿಂದ ಅನುಗೃಹೀತವಾದ ಭಕ್ತಿಯೋಗವು. ಇನ್ನೊಂದು ಲಘುವಾಗಿರುವ ಭರನ್ಯಾಸವು. ಆದುದರಿಂದ ಗುರೂಪಾಯವನ್ನು ಅನುಷ್ಠಿಸಲು ತಮ್ಮ ಅಶಕ್ಯತೆಯನ್ನು ಪೂರ್ವಾರ್ಧದಿಂದ ತೋರಿಸಿ, ತಮಗಿರುವ ಆಕಿಂಚನ್ಯವನ್ನು ಸರ್ವೇಶ ನಿಲ್ಲದೆ ಇನ್ನು ಯಾರೂ ತನಗೆ ಗತಿಯಿಲ್ಲವೆಂದೂ ಪ್ರಕಟಿಸಿ, ಶ್ರಿಯ : ಪತಿಯ ವಾದಾರವಿಂದದಲ್ಲಿ ಶರಣಾಗತಿಯನ್ನು ಅನುಷ್ಠಿಸುತ್ತಾರೆ.

**ಅರ್ಥವು:**— **ಧರ್ಮನಿಷ್ಠಃ**—ಕರ್ಮಯೋಗದಲ್ಲಿ ನಿಷ್ಠೆಯುಳ್ಳವನು, **ನಾಸ್ಮಿ**-ನಾನು ಅಲ್ಲವು ಎಂದರೆ ಆ ನಿಷ್ಠೆಗೆ ಅಶಕ್ತನೆಂಬ ಭಾವವು. **ಆತ್ಮವೇದೀ**—ಜ್ಞಾನ ಯೋಗದ ಮೂಲಕ ಆತ್ಮಸ್ವರೂಪಾವಲೋಕನವನ್ನು ಹೊಂದತಕ್ಕವನು. ನಾಸ್ಮಿ ಅಲ್ಲವು; ಅದಕ್ಕೂ ಶಕ್ತಿ ಇಲ್ಲವು. **ತ್ವಚ್ಚರಣಾರವಿಂದೇ** ನಿನ್ನ ಪಾದಕಮಲದಲ್ಲಿ, **ಭಕ್ತಿಮಾನ್**—ಅನನ್ಯಭಕ್ತಿಯೊಂದಿಗೆ ಕೂಡಿದ ಉಪಾಸನದ್ವಾರಾ ಸಾಕ್ಷಾತ್ಕರಿಸಲು ಯೋಗ್ಯತೆಯುಳ್ಳವನು, **ನಾಸ್ಮಿ**—ನಾನು ಅಲ್ಲವು. ಆದುದರಿಂದ, **ಅಕಿಂಚನಃ** ಹೀಗೆ ನಿನ್ನನ್ನು ಆಶ್ರಯಿಸಲು ಬೇಕಾದ ಉಪಾಯಕ್ಕೆ ಯೋಗ್ಯತೆಯಿಲ್ಲದೆ ಪರಮ ದೈನ್ಯವನ್ನು ಹೊಂದುವನಾಗಿದ್ದೇನೆ; ಅದರಿಂದಲೇ **ಅನನ್ಯಗತಿಃ**—ಬೇರೆ ಇನ್ನು

ಯಾವಗತಿ ಇಲ್ಲದವನೂ ಆಗಿದ್ದೇನೆ. ಅಥವಾ ಇನ್ನು ಯಾರನ್ನಾಗಲಿ ರಕ್ಷಿಸಲು ಅರ್ಹರನ್ನಾಗಿ ಇಲ್ಲದಿರುವವನು, (ಇದರಿಂದ ಮಹಾವಿಶ್ವಾಸವು ಬೋಧಿತವು.) **ತ್ವತ್ಪಾದಮೂಲಂ**—ನಿನ್ನ ಪಾದಗಳ ಮೂಲವನ್ನು, **ಶರಣಂ**—ರಕ್ಷಣೆಗೆ ವರವೋ ಪಾಯವಾಗಿ, **ಪ್ರಪದ್ಯೇ**—ಹೊಂದಿರುತ್ತೇನೆ, ಇದರಿಂದ ತಮ್ಮ ಆತ್ಮನನ್ನು ರಕ್ಷಿಸಿಕೊಳ್ಳಲು ತಾವು ಸಂಪೂರ್ಣ ಅಶಕ್ತರಾದುದರಿಂದ ಅದನ್ನು ರಕ್ಷಿಸುವ ಉಪಾಯವಾದ ಉಪಾಸನೆಗೆ ತಮಗೆ ಶಕ್ತಿಯಿಲ್ಲದುದರಿಂದ, ರಕ್ಷಣೆಯ ಸರ್ವಭರವನ್ನು ಸ್ವಾಮಿಯ ಪಾದದಲ್ಲಿ ಸಮರ್ಪಿಸಿರುತ್ತೇನೆಂದು ಹೇಳಿ ಭರನ್ಯಾಸವನ್ನು ಅನುಷ್ಠಿಸಿರುತ್ತಾರೆ.

**ಉಪಪಾದನೆಯು:**—ಸರ್ವೇಶ್ವರನ ಪರತ್ವವನ್ನು, ಸರ್ವಶಕ್ತತೆಯನ್ನು ಕರುಣಾಕರತ್ವವನ್ನು ಆನಂದಮಯತ್ವವನ್ನು ವಿಮರ್ಶಿಸಿ ತಿಳಿದು, ತಮಗೆ ಪ್ರಾಪ್ತ ವಾಗಿರುವ ಸಂಸಾರ ಬಂಧದಿಂದುಂಟಾದ ದೈನ್ಯತೆಯನ್ನು, ಅದನ್ನು ಪರಿಹರಿಸಿ ಕೊಳ್ಳುವ ಶಕ್ತ್ಯಭಾವವನ್ನು ಪರಿಶೀಲಿಸಿ, ತಮಗೆ ಭಗವತ್ಪ್ರಾಪ್ತಿಗೆ ವಿರೋಧಿ ವರ್ಗವನ್ನೆಲ್ಲಾ ಕಳೆದುಕೊಳ್ಳಲು ಆತನ ಪಾದಾರವಿಂದದಲ್ಲಿ ಮಾಡುವ ಶರಣಾಗತಿ ಯಲ್ಲದೆ ಬೇರೆ ಉಪಾಯಕ್ಕೆ ತಮಗೆ ಯೋಗ್ಯತೆಇಲ್ಲವಾದುದರಿಂದ ಪ್ರಪತ್ತ್ಯನು ಷ್ಠಾನವನ್ನು ಮಾಡಿರುತ್ತೇನೆಂದು ಹೇಳುತ್ತಾರೆ.

ಪ್ರಥಮತಃ ತಮಗೆ ಇನ್ನೊಂದು ಉಪಾಯವಾದ ಭಗವದುಪಾಸನದಿಂದ ಪರಮಾತ್ಮ ಸಾಕ್ಷಾತ್ಕಾರ ಹೊಂದಲು, ಅದಕ್ಕೆ ಬೇಕಾದ ಅಂಗಾಂಗಿಗಳಿಗೆ ಯೋಗ್ಯತೆ ಇಲ್ಲವೆಂದೂ, ಆದುದರಿಂದ ಅದರಲ್ಲಿ ತಮಗೆ ಶಕ್ತಿಯಿಲ್ಲದುದರಿಂದ, ಅಶಕ್ತರಿಗೆ ಏರ್ಪಟ್ಟ ಲಘೂಪಾಯವನ್ನು ಅನುಷ್ಠಿಸುವದಾಗಿ ತಿಳಿಸುತ್ತಾರೆ. **ನ ಧರ್ಮ ನಿಷ್ಠೋಽಸ್ಮಿ**–ಎಂಬುದರಿಂದ ಉಪಾಸನೆಗೆ ಬೇಕಾದ ಮೊದಲು ಅಂಗಕ್ಕೇ ಯೋಗ್ಯತೆ ಯಿಲ್ಲವೆಂದು ಹೇಳಿಕೊಳ್ಳುತ್ತಾರೆ. ಧರ್ಮಶಬ್ದಕ್ಕೆ ಬಗವದಾಜ್ಞಾ ರೂಪಗಳಾದ ವಿಧಿ ನಿಷೇಧ ವಾಕ್ಯಗಳಿಗನುಗುಣವಾದ ಆಚರಣೆಯು, **ಧರ್ಮನಿಷ್ಠಃ** ಎಂಬುವಕ್ಕೆ ಮೂರು ವಿಧವಾಗಿ **ವ್ಯುತ್ಪತ್ತಿ**ಯನ್ನು ತೋರಿಸಿರುತ್ತಾರೆ (೧) ಧರ್ಮದಲ್ಲಿ, ನಿಷ್ಠಾ ಎಂದರೆ ಸ್ಥಿತಿಯು ಯಾರಿಗೋ ಆತನು **ಧರ್ಮನಿಷ್ಠನು.** ಅಥವಾ (೨) ಧರ್ಮರೂಪ ವಾದ ನಿಷ್ಠೆಯು ಯಾರಿಗೋ ಆತನು. (೩) **ಧರ್ಮೇನಿತಿಷ್ಠತಿ**—ಭಗವದಾಜ್ಞಾ ರೂಪ ಧರ್ಮದಲ್ಲೇ ವಿಶೇಷವಾಗಿ ಇರುವವನು. ಕರ್ಮಯೋಗವನ್ನು ಹೇಗೆ ಯಾವ ಪರಿಕರಜ್ಞಾನಗಳೊಂದಿಗೆ ಅನುಷ್ಠಿಸತಕ್ಕದ್ದೆಂದು ಅರಿತು ನಡೆಸುವ ಶಕ್ತಿಯಿಲ್ಲದವನು. ಕರ್ಮಯೋಗವೆಂದರೆ—ನಿತ್ಯನೈಮಿತ್ತಿಕ ಅನುಷ್ಠಾನಗಳೊಂದಿಗೆ ಗೀತೆಯಲ್ಲಿ "ದೈವ ಮೇವಾಪರೇ" ಎಂದಾರಂಭಿಸಿ ಹೇಳಿದ ಹತ್ತುವಿಧ ನಿಷ್ಠೆಗಳಲ್ಲಿ ಯಾವುದಾದರೂ ಒಂದನ್ನು ನಿತ್ಯವೂ ಅನುಷ್ಠಿಸೋಣವು. ಇದರಿಂದಲೇ ಮೋಕ್ಷವಿಲ್ಲವು ಆದರೆ ಮೋಕ್ಷೋಪಾಯಕ್ಕೆ ಸಹಕಾರಿಯಾಗುತ್ತದೆ. ಇದರಿಂದುಂಟಾಗುವ ಫಲವು:—

(೧) ಉಪಾಯಾನುಷ್ಠಾನವಾದ ಭಕ್ತಿಯೋಗಕ್ಕೆ ಪ್ರತಿ ಬಂಧಕವಾದ ಪಾಪಗಳೆಲ್ಲಾ ಪರಿಹಾರವಾಗಿ ಉಪಾಯಾನುಷ್ಠಾನಕ್ಕೆ ಯೋಗ್ಯತೆಯುಂಟಾಗುತ್ತದೆ. (೨) ತನ್ನ ಆತ್ಮವು ತನ್ನ ದೇಹಕ್ಕಿಂತ ಹೇಗೆ ವಿಲಕ್ಷಣವೆಂಬ ಜ್ಞಾನದ ಮೂಲಕ ತನ್ನ ಆತ್ಮ ಸ್ವರೂಪದ ಜ್ಞಾನವುಂಟಾಗುತ್ತದೆ. ಇಂತಹ ಕರ್ಮಯೋಗಾನುಷ್ಠಾನದಿಂದ ಮುಂದೆ ಜ್ಞಾನಯೋಗಕ್ಕಾಗಲಿ ಅದಕ್ಕೆ ಶಕ್ತಿಯಿಲ್ಲದಿದ್ದರೆ, ಅದನ್ನು ತ್ಯಜಿಸಿ ಭಕ್ತಿಯೋಗಕ್ಕಾಗಲಿ ಅಧಿಕಾರ ಉಂಟಾಗುತ್ತದೆ. ಇದಕ್ಕೆ ಪ್ರಮಾಣವು " **ಕಷಾಯೇ ಕರ್ಮಭಿಃ ಪಕ್ವೇ ತತೋಜ್ಞಾನಂ ಪ್ರವರ್ತತೇ** " ಕರ್ಮಯೋಗದಿಂದ ಪ್ರತಿಬಂಧಕ ಪಾಪಗಳು ಕಳೆದು ಮನಸ್ಸು ಪರಿಶುದ್ಧವಾದರೆ ಅನಂತರ ಪರಮಾತ್ಮನನ್ನು ಸಾಕ್ಷಾತ್ಕರಿಸುವ ಜ್ಞಾನರೂಪ ಉಪಾಸನವು ನಡೆಯುತ್ತದೆ. ಹಾಗೆಯೇ " **ಕಷಾಯ ಪಕ್ತಿಃ ಕರ್ಮಾಣಿ ಜ್ಞಾನಂತು ಪರಮಾಗತಿಃ** " ಎಂದು ಇನ್ನೊಂದು ಕಡೆಯಲ್ಲಿ ಹೇಳಲ್ಪಟ್ಟಿರುತ್ತದೆ. ಇಲ್ಲಿ **ಚರಣಾರವಿಂದ** ಶಬ್ದದಿಂದ ಅಹಲ್ಯಾ ಶಾಪ ವಿಮೋಚನದ ಹಾಗೆ ಪಾಪಹರರೂಪ ಪವಿತ್ರತೆಯೂ ಭೋಗ್ಯತ್ವವೂ ತೋರಿಬರುತ್ತವೆ.

ಆದುದರಿಂದ ಭಕ್ತಿಯೋಗದ ಪ್ರಥಮ ಸಾಧನಕ್ಕೇ ತಮಗೆ ಯೋಗ್ಯತೆಯಿಲ್ಲವೆಂದು ಹೇಳಿಕೊಂಡರು. ಆಗಲಿ ಒಂದುವೇಳೆ ಇದಕ್ಕೆ ಯೋಗ್ಯತೆಯನ್ನು ಕಷ್ಟಪಟ್ಟು ಸಂಪಾದಿಸಿದರೂ, ಬಹು ಕಷ್ಟವಾದ ಎರಡನೆಯ ಮೆಟ್ಟಲನ್ನು ಹತ್ತಲೂ ತಮಗ ಯೋಗ್ಯತೆಯಿಲ್ಲವೆಂದು " **ನಚಾತ್ಮವೇದೀ** " ಎಂದು ಹೇಳಿಕೊಂಡರು. ಸಂಪೂರ್ಣ ವೈರಾಗ್ಯದಿಂದ, ಒಂದಕ್ಕಿಂತ ಒಂದು ಶ್ರೇಷ್ಠವಾದ ನಾಲ್ಕು ಅವಸ್ಥೆಯು ಪ್ರಾಪ್ತವಾಗಿ ಆತ್ಮಾವಲೋಕನ ಸಿದ್ಧಿಯುಂಟಾಗುತ್ತದೆಂದು ಅರ್ಜುನನಿಗೆ ಶ್ರೀಕೃಷ್ಣ ಭಗವಾನರವರು ಉಪದೇಶಿಸಿ, ಇಂತಹ ಅವಸ್ಥೆಯನ್ನು ಹೊಂದುವದು ಕಷ್ಟವಾದುದರಿಂದ ಈ ಜ್ಞಾನಯೋಗವು ನಿನಗೆ ಬೇಡವೆಂದೂ, ಜನಕಾದಿಗಳ ಹಾಗೆ ಕರ್ಮಯೋಗದಿಂದಲೇ ಭಕ್ತಿಯೋಗಕ್ಕೆ ಅಧಿಕಾರವು ಸಿದ್ಧಿಸುವದರಿಂದ ನೀನು ನನ್ನ ಉಪಾಸನೆಯನ್ನೇ ಅನುಷ್ಠಿಸು ಎಂದು ಹೇಳಿರುತ್ತಾರೆ

ಹೀಗೆ ಈ ಅಂಗಗಳನ್ನು ಸಾಧಿಸಲು ಯೋಗ್ಯತೆ ಇಲ್ಲವು. ಒಂದುವೇಳೆ ಕಷ್ಟಪಟ್ಟು ಸಾಧಿಸಿದರೂ, ಭಕ್ತಿಯೋಗಕ್ಕೆ ಯೋಗ್ಯತೆಯು ತಮಗೆ ಸರ್ವಾತ್ಮನಾ ಇಲ್ಲವೆಂದು, **ನಭಕ್ತಿಮಾಂಸ್ತ್ವಚ್ಚರಣಾರವಿಂದೇ** ನಿನ್ನ ಪಾದಕಮಲದಲ್ಲಿ ಅನನ್ಯ ಭಕ್ತಿಯನ್ನು ತೋರಿ ಚಿತ್ತೈಕಾಗ್ರತೆಯಿಂದ ನಿನ್ನನ್ನೇ ಉಪಾಸಿಸುವ ಯೋಗ್ಯತೆಯೂ ನನಗಿಲ್ಲವು. ಆದುದರಿಂದ ಉಪಾಸನರೂಪ ಬ್ರಹ್ಮವಿದ್ಯೆಯ ಅಂಗಾಂಗಿಗಳು ಯಾವುದನ್ನು ಅನುಷ್ಠಿಸಲು ತಮಗೆ ಯೋಗ್ಯತೆ ಇಲ್ಲವೆಂದು ಹೇಳಿಕೊಂಡರು. ಈ ಮೇಲಿನ ಪ್ರಮಾಣಗಳ ಮೂಲಕ ನಾವು ಗ್ರಹಿಸತಕ್ಕ ಮುಖ್ಯಾಂಶವೇನೆಂದರೆ ? ಈ ಕರ್ಮಜ್ಞಾನ ಯೋಗಗಳು ಅಂಗಗಳು. ಆದುದರಿಂದ ಸಾಕ್ಷಾತ್ತಾಗಿ ಮುಕ್ತಿದಾಯಿಕಗಳಲ್ಲವು. ಇದನ್ನೇ ಬಹು ವ್ಯಕ್ತವಾಗಿ ಶ್ರೀ ಗೀತಾಚಾರ್ಯರು ಅರ್ಜುನನಿಗೆ

“ **ನಾಹಂವೇದೈರ್ನತಪಸಾ ನದಾನೇನ ನಚೇಜ್ಯಯಾ । ಶಕ್ಯ ಏವಂ ವಿಧೋ ದ್ರಷ್ಟುಂ** ದೃಷ್ಟವಾನಸಿ ಮಾಂ ಯಥಾ ” ಎಂಬುದರಿಂದ ತಿಳಿಸಿದರು.

ಹೀಗೆ ಭಕ್ತ್ಯುಪಾಯದ ಅಶಕ್ತತೆ ಇರುವದರಿಂದಲೇ “ **ಶರಣಂತಾಂ ಪ್ರಪನ್ನಾಯೇ ಧ್ಯಾನಯೋಗ ವಿವರ್ಜಿತಾಃ । ತೇಪಿ ಮೃತ್ಯು ಮತಿ ಕ್ರಮ್ಯಯಾನ್ತಿತದ್ವಿಷ್ಣೋಃ ಪರಮಂಪದಮ್** ” ಎಂಬಲ್ಲಿ ಹೇಳಿರುವ ಹಾಗೆ ಅಂತಹ ಅಶಕ್ತರಿಗಾಗಿ ವಿಧಿಸಲ್ಪಟ್ಟಿರುವ ಶರಣಾಗತಿಯನ್ನು ಅನುಷ್ಠಿಸಲು ಬೇಕಾದ ಅಂಗಗಳು ತಮ್ಮಲ್ಲಿ ಉಂಟೆಂದು ಉತ್ತರಾರ್ಧದಲ್ಲಿ ಹೇಳಿ, ಶರಣಾಗತಿಯನ್ನು ಅನುಷ್ಠಿಸುತ್ತಾರೆ.

ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಭಕ್ತಿಯೋಗಕ್ರಮವು ಸಂಕ್ಷೇಪವಾಗಿ ಹೇಗೆ? ಎಂದರೆ ಶಾಸ್ತ್ರಾರ್ಥ ಮತ್ತು ತತ್ವಜ್ಞಾನಗಳ ಮೂಲಕ ಪ್ರಥಮತಃ ಕರ್ಮಯೋಗವು. ಆ ಕರ್ಮಯೋಗದಿಂದ ಜಿತಮನಸ್ಕನಾಗಿ ಪರಿಶುದ್ಧನಾದವನಿಗೆ ತನ್ನ ಆತ್ಮ ಪರಿಶುದ್ಧವಾದುದೆಂಬ ಭಾವನೆಯಿಂದ ಕೂಡಿದ ಜ್ಞಾನಯೋಗಾನುಷ್ಠಾನವು, ಅನಂತರ **ಈ ಜ್ಞಾನಯೋಗ ಮೂಲಕವಾಗಿಯಾಗಲಿ**, ಅಥವಾ ಅದಕ್ಕೆ ಅಶಕ್ತನಾದವನಿಗೆ, **ಜ್ಞಾನಯೋಗವನ್ನು** ತ್ಯಜಿಸಿ, ಸಾಕ್ಷಾತ್ಕರ್ಮಯೋಗಮಾತ್ರದಿಂದಲಾಗಲಿ, ಭಕ್ತಿ ಯೋಗದಲ್ಲಿ ಅಧಿಕಾರವು. ಇದರಿಂದ ಪರಮಾತ್ಮಸಾಕ್ಷಾತ್ಕಾರಪ್ರಾಪ್ತಿಯೂ ತನ್ಮೂಲಕ ಪರಬ್ರಹ್ಮಸಾಯುಜ್ಯವೂ, ಇದೀಗ ಕ್ರಮವು. ಹೀಗೆ ಅಂಗಾಂಗಿಗಳು ಕೂಡಿದರೇನೇ ಫಲ ನಿಷ್ಪತ್ತಿಯು.

ಹೀಗೆ ಕರ್ಮಯೋಗವು ಅಂಗವಾದರೆ, ಅದರ ಅನುಷ್ಠಾನಕ್ಕೆ ಶಕ್ತಿಯು ತಮಗಿಲ್ಲ ವೆಂದು ಇಷ್ಟುಮಾತ್ರ ಹೇಳಿದರೆ, ಇನ್ನು ಜ್ಞಾನಯೋಗ ಭಕ್ತಿಯೋಗಗಳಿಗೆ ಶಕ್ತಿಯಿಲ್ಲ ಎಂಬುದು ವ್ಯಕ್ತವಾಗಿರುವಾಗ, ಮೂರಕ್ಕೂ ಶಕ್ತಿ ಇಲ್ಲವೆಂದು ಹೇಳುವದು ನಿರರ್ಥಕ ವಲ್ಲವೋ? ಮೂರೂ ಪ್ರತ್ಯೇಕ ಉಪಾಯಗಳೇ? ಎಂದರೆ ಮೂರೂ ಉಪಾಯವಲ್ಲವು. ಮೂರೂ ಉಪಾಯಗಳಲ್ಲವೆಂಬುದು ಗೀತೆಯಲ್ಲೂ, ವ್ಯಾಸಸೂತ್ರಗಳಲ್ಲೂ, ಶ್ರೀ ಭಾಷ್ಯಾದಿ ಗ್ರಂಥಗಳಲ್ಲೂ ಶ್ರುತಪ್ರಕಾಶಿಕೆಯಲ್ಲೂ ವ್ಯಕ್ತವು. ಹಾಗಾದರೆ ಮೂರನ್ನೂ ಪ್ರಾಜ್ಞರಲ್ಲಿ ಅಗ್ರಗಣ್ಯರಾದ ಇವರು ಹೇಳಲು ಕಾರಣವೇನು ? ಎಂದು ತಿಳಿಸುವದು ನಮ್ಮ ಕರ್ತವ್ಯವು.

ಈ ಸಂದರ್ಭದಲ್ಲಿ ಕೆಲವರು ಹೇಳುವರು ಏನೆಂದರೆ, ಪೂರ್ವಜನ್ಮದಲ್ಲಿ ಕರ್ಮ ಯೋಗವನ್ನು ಅನುಷ್ಠಿಸಿದ್ದರೆ, ಈ ಜನ್ಮದಲ್ಲಿ ಆ ಕರ್ಮಯೋಗವಿಲ್ಲದೆ ಜ್ಞಾನಯೋಗ ವನ್ನು ಅನುಷ್ಠಿಸು ಎಂದರೆ ಅದಕ್ಕೆ ತನಗೆ ಶಕ್ತಿಯಿಲ್ಲವೆಂದು ತಿಳಿಸುವದಕ್ಕಾಗಿ, “ **ನಚಾತ್ಮವೇದೀ** ” ಎಂದು ಎರಡನೆಯ ವಾಕ್ಯವನ್ನು ಹೇಳಿದರೆಂದೂ, ಮತ್ತು “ **ಜನ್ಮಾಂತರ ಸಹಸ್ರೇಷು ತಪೋಧ್ಯಾನ ಸಮಾಧಿಭಿಃ । ನರಾಣಾಂ ಕ್ಷೀಣ ಪಾಪಾನಾಂ ಕೃಷ್ಣೇಭಕ್ತಿಃ ಪ್ರಜಾಯತೇ** ” ಎಂದು ಪಾಂಚರಾತ್ರೆಯಲ್ಲಿ ಹೇಳಿರುವ ಹಾಗೆ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಯೋಗ ಜ್ಞಾನಯೋಗಗಳಿಂದ ಅವುಗಳಿಲ್ಲದೆ

ಬರೀ ಭಕ್ತಿಯೋಗವನ್ನಾಗಲಿ ನಡೆಸು ಎಂದರೆ ಆವಕ್ಕೊ ತನಗೆ ಶಕ್ತಿಯಿಲ್ಲವೆಂದೂ ಹೇಳುವದಕ್ಕಾಗಿ ಮೂರೂ ಹೇಳಲ್ಪಟ್ಟಿವೆಂಪು ಕೆಲವರ ಅಭಿಪ್ರಾಯವು. ಈ ಅಭಿಪ್ರಾಯವು ಶ್ರೀ ನಿಗಮಾಸ್ತ ದೇಶಿಕರವರಿಗೂ ಉಂಟೆಂದು ಶ್ರೀವಿರ್ನಾ ಶೆಟ್ಟಿ ಲೂರು ನರಸಿಂಹಾಚಾರ್ ಸ್ವಾಮಿಗಳವರು ತಮ್ಮ ವ್ಯಾಖ್ಯಾನದಲ್ಲಿ ತೋರ್ಪಡಿಸಿರು ತ್ತಾರೆ. ಮೊದಲು ಸ್ವಾಮಿ ದೇಶಿಕರವರು ಅಂಗಾಂಗಗಳ ಸಮುಚ್ಚಯವಿದ್ದರೇ ಫಲನಿಷ್ಪತ್ತಿ ಎಂದು ಉಪಪಾದಿಸಿ, ಈ ಮೇಲಿನ ಅಭಿಪ್ರಾಯವನ್ನು ಪೂರ್ವಪಕ್ಷ ರೂಪದಲ್ಲಿ " ಸ್ಯಾತ್, ಸ್ಯಾತ್ " ಎಂದು ಉಪಪಾದಿಸಿ, ಹೀಗೆ ಪೂರ್ವ ಪೂರ್ವ ನಿಷೇಧವನ್ನು ಹೇಳಿ, " ಇತಿ, ಉತ್ತರೋತ್ತರ ನಿಷೇದ ಇತ್ಯಪಿ ಗಮನಿಕಾ " ಎಂದು, ಭಕ್ತಿಯೋಗವಿಲ್ಲದೆ ಜ್ಞಾನಯೋಗವೂ ಭಕ್ತಿಯೋಗವಿಲ್ಲದೆ ಕರ್ಮಯೋಗವೂ ಎಂದರೆ ಅಂಗಿಯಿಲ್ಲದೆ ಬರೀ ಅಂಗಗಳಿಂದ ಫಲನಿಷ್ಪತಿಯೂ ಉಂಟು ಎಂದು ಏಕೆ ಹೇಳಕೂಡದೆಂದು ಮೂದಲಿಸಿರುತ್ತಾರೆ. ಹೀಗೆ ಪೂರ್ವ ಪೂರ್ವ ನಿಷೇಧವೂ, ಉತ್ತರೋತ್ತರ ನಿಷೇಧವೂ ಕೂಡ ಗಮನಿಕಾ—ಗಮನಿಸತಕ್ಕದ್ದಾಗಿವೆ, ಎಂದರೆ ಹೇಳತಕ್ಕದ್ದಲ್ಲವು. ಬರೀ ಊಹೆಯಿಂದ ಶಾಸ್ತ್ರವನ್ನು ಬಿಟ್ಟು ಹೇಳತಕ್ಕದ್ದಾಗಿರುತ್ತದೆ ಎಂಬ ಭಾವವು. ಈಮೇಲಿನ ಅಭಿಪ್ರಾಯವು ಶಾಸ್ತ್ರವಿರುದ್ಧವಾಗಿ ಲೋಕವಿರುದ್ಧವಾಗಿ ಸರಿಯಲ್ಲವು. ಹೇಗೆಂದರೆ (೧) ಹಿಂದಿನ ಜನ್ಮಗಳಲ್ಲಿ ಕರ್ಮಯೋಗಾದಿಗಳನ್ನು ಅನುಷ್ಠಿಸಿರುವ ಜ್ಞಾನವು ಯಾರಿಗೂ ಇಲ್ಲವು. ಅಥವಾ ಯಾರಿಗಾದರೊ ಒಬ್ಬೊಬ್ಬ ರಿಗೆ ಉಂಟೆಂದು ವಾದಿಸಿದರೆ ಆತನು ಕರ್ಮಯೋಗವನ್ನು ತ್ಯಾಗ ಮಾಡಿದುದನ್ನು ಕಂಡು, ಇನ್ನೊಬ್ಬನೂ ಹಿಂದಿನ ಜನ್ಮದಲ್ಲಿ ಅನುಷ್ಠಿಸದೇ ಕರ್ಮಯೋಗವನ್ನು ಶಾಸ್ತ್ರ ವಿರುದ್ಧವಾಗಿ ತ್ಯಜಿಸಬಹುದು. (೨) ನಾಂದೀ ಪ್ರತಿ ಸರಗಳು ಉಪನಯನಕ್ಕೆ ಅಂಗವು. ಹಾಗೆಯೇ ವಿವಾಹಕ್ಕೂ ಅಂಗವು. ಇವೇ ಜನ್ಮದಲ್ಲೇ ಉಪನಯನದಲ್ಲಿ ನಡೆಸಿದುದೇ ವಿವಾಹಕ್ಕೆ ಅನುಪಯುಕ್ತವಾಗಿ ಪುನಃ ವಿವಾಹಕ್ಕೆ ಅವಶ್ಯಕವಾದರೆ, ಹಿಂದಿನ ಜನ್ಮದ ಕರ್ಮಯೋಗದ ಅಂಗವು ಈ ಜನ್ಮದ ಭಕ್ತಿಯೋಗಕ್ಕೆ ಹೇಗೆ ಅಂಗವಾದೀತು ? ಅಂಗಾಂಗಿಗಳ ಸಂಯೋಗದಿಂದಲೇ ಫಲ ನಿಷ್ಪತ್ತಿಯು. ಒಬ್ಬನು ಯಜ್ಞವನ್ನು ಆರಂಭಿಸಿ ಕೆಲವನ್ನೆಲ್ಲಾ ಅನುಷ್ಠಿಸಿ ಪ್ರಧಾನಹೋಮಕ್ಕೆ ಮೊದಲು ವಿಘ್ನ ಉಂಟಾಗಿ, ವಿಚ್ಛೇದವು ಪ್ರಾಪ್ತವಾದ ನಂತರ, ಪುನಃ ಆಯಜ್ಞವನ್ನು ನಡಿಸಲೇಬೇಕೆಂಬ ಸಂಕಲ್ಪಯುತನಾದರೆ, ಮೊದಲಿನಿಂದ ಆರಂಭಿಸಬೇಕೇ ? ಅಥವಾ ಅಂಗಗಳನ್ನೆಲ್ಲಾ ಬಿಟ್ಟು, ವಿಘ್ನವಾದ ಭಾಗದಿಂದ ಮುಂದಕ್ಕೆ ನಡೆಸ ಬಹುದೇ ? ಆದುದರಿಂದ ಪೂರ್ವಜನ್ಮದಲ್ಲಿ ಮಾಡಿದ ಕರ್ಮಯೋಗಾದಿ ಅಂಗಗಳು ಈ ಜನ್ಮದ ಭಕ್ತಿಯೋಗಕ್ಕೆ ಅಂಗಗಳಾಗಲಾರವಾದುದರಿಂದ, ಈಗಲೂ ಕರ್ಮ ಯೋಗವನ್ನು ಆರಂಭಿಸಿಯೇ ಭಕ್ತಿಯೋಗಕ್ಕೆ ಅಧಿಕಾರವನ್ನು ಸಂಪಾದಿಸತಕ್ಕ ದ್ದಾಗಿರುತ್ತದೆ. ಹಾಗಾದರೆ ಹಿಂದೆ ಮಾಡಿದ ಕರ್ಮಯೋಗಾದಿಗಳೆಲ್ಲಾ ನಿರರ್ಥಕ

ಗಳೋ ? ಎಂನಾಕ್ಷೇಪಿಸಿದರೆ ನಿರರ್ಥಕಗಳಲ್ಲವು. ಅದರ ಸಂಸ್ಕಾರಬಲದಿಂದಲೂ ತನ್ಮೂಲಕ ಉಂಟಾದ ಭಗವತ್ಕೃಪೆಯಿಂದಲೂ ಕರ್ಮಯೋಗವು ಬಹು ಶ್ರೀಘ್ರವಾಗಿ ಫಲಿಸಿ, ಪ್ರತಿಬಂಧಕ ಪಾಪನಿವೃತ್ತಿಯುಂಟಾಗುವದರಿಂದ ಭಕ್ತಿಯೋಗಕ್ಕೆ ಅಧಿಕಾರವು ಬಹು ಶೀಘ್ರವಾಗಿ ಲಭಿಸುತ್ತದೆ.

(೩) ಶ್ರೀಯತಿವರ್ಯರ ದಿವ್ಯಸೂಕ್ತಿಗೂ ವಿರೋಧವು. ಈ ವಿಷಯವು ಗೀತೆಯಲ್ಲಿ ಅರ್ಜುನನಿಂದ ಚರ್ಚಿಸಲ್ಪಟ್ಟಿದೆ. ಆತನ ಪ್ರಶ್ನೆಯು “ **ಯೋಗಾಚ್ಚಲಿತಮಾನಸಃ । ಅಪ್ರಾಪ್ಯಯೋಗಸಂಸಿದ್ಧಿಂ ಕಾಂಗತಿಂ ಕೃಷ್ಣಗಚ್ಛತಿ** ” ( ಗೀ ೬. ೩೭ ) ಕರ್ಮಯೋಗದಿಂದ ಚ್ಯುತನಾದವನಿಗೆ ಗತಿ ಏನು ಎಂದು ಕೇಳುತ್ತಾನೆ. ಇದಕ್ಕೆ ೪೦ನೆಯ ಶ್ಲೋಕದಲ್ಲಿ ಶ್ರೀಕೃಷ್ಣ ಭಗವಾನ್‌ರನರು, ಅಂತವನಿಗೆ ಎಂದಿಗೂ ದುರ್ಗತಿ ಇಲ್ಲವೆಂದು ಹೇಳಿ, ಯೋಗಾರಂಭ ದೆಶೆಯಲ್ಲಿ ಯೋಗಭ್ರಷ್ಟನಾದವನಿಗೆ, ಕರ್ಮಯೋಗವನ್ನು ಪುನಃ ಅನುಷ್ಠಿಸುವುದಕ್ಕೆ ಅನುಕೂಲವಾಗುವ ಧರ್ಮಿಷ್ಠನಾದ ಶ್ರೀಮಂತನ ಮನೆಯಲ್ಲಿ ಹುಟ್ಟುವನೆಂದು ೪೧ನೆಯ ಶ್ಲೋಕದಲ್ಲಿ ಹೇಳಿ, ಅಥವಾ ಆತನು “ **ಪರಿಪಕ್ವಯೋಗಸ್ಖಲಿತಶ್ಚೇತ್** ” ಎಂದು ಶ್ರೀಯತಿವರ್ಯರು ೪೨ನೆಯ ಶ್ಲೋಕದಲ್ಲಿ ವಿಕಲ್ಪಿಸಿ, ಪರಿಪಕ್ವವಾದ ಕರ್ಮಯೋಗ ನಿಷ್ಠನಿಗೆ ವಿಘ್ನ ಉಂಟಾದರೆ “ **ಯೋಗಂ ಕುರ್ವತಾಂ ಸ್ವಯಮೇವ ಯೋಗೋಪದೇಶಕ್ಷಮಾಣಾಂ ಕುಲೇಭವತಿ** ” ಎಂದು ವ್ಯಾಖ್ಯಾನವಿರುವದರಿಂದ, ಕರ್ಮಯೋಗವನ್ನು ತಾವೇ ಅನುಷ್ಠಿಸಿ, ಅದನ್ನೇ ತನ್ನ ಪುತ್ರಾದಿಗಳಿಗೆ ಉಪದೇಶಿಸಲು ಯೋಗ್ಯತೆಯಿರುವವರ ಮನೆಯಲ್ಲಿ ಜನ್ಮವೆತ್ತುತ್ತಾನೆಂದು ಹೇಳಿರುವದರಿಂದ, ಪರಿಪಕ್ವಕರ್ಮಯೋಗಿಯೂ ಮುಂದಿನ ಜನ್ಮದಲ್ಲಿ ಕರ್ಮಯೋಗವನ್ನೇ ಅನುಷ್ಠಿಸತಕ್ಕದ್ದೆಂದು ಹೇಳಲ್ಪಟ್ಟಿತು. “ **ಯೋಗಂ ಕುರ್ವತಾಂ** ” ಎಂದರೆ ಕರ್ಮಯೊಗವೆಂದು ಏಕೆ ಅರ್ಥಮಾಡುತ್ತೀರಿ ? ಭಕ್ತಿಯೋಗವೆಂದೇ ಅರ್ಥಮಾಡಿ, ಎಂದರೆ ಈ ಆರು ಅಧ್ಯಾಯಗಳಲ್ಲೂ ಯೋಗ ಶಬ್ದಕ್ಕೆ ಕರ್ಮಯೋಗವೆಂದು ಅರ್ಥ ಹೇಳಿ, ಇಲ್ಲಿ ಮಾತ್ರ ಭಕ್ತಿಯೋಗವೆಂದು ಅರ್ಥವನ್ನು ಹೇಳಬಹುದೋ ? ಎಂದು ಕೇಳುವೆವು, ಹಿಂದಿನ ಶ್ಲೋಕದ ವ್ಯಾಖ್ಯಾನದಲ್ಲಿ ಯೋಗಶಬ್ದಕ್ಕೆ ಕರ್ಮಯೋಗವೆಂಬುದು ಸ್ಪಷ್ಟವು.

(೪) ಇದೂ ಅಲ್ಲದೆ ಹಾಗೆ ಹೇಳುವದು ಲೋಕವಿರುದ್ಧವಾದ ಅಭಿಪ್ರಾಯವುಂಟಾಗುತ್ತದೆ. ಹೋದ ಜನ್ಮದಲ್ಲಿ ಕರ್ಮಯೋಗನಿಷ್ಠನಾಗಿದ್ದರೂ. ಈ ಜನ್ಮದಲ್ಲಿ ಬಾಲನಾಗಿ ಹುಟ್ಟಿ ಅಕ್ಷರಾಭ್ಯಾಸ ಉಪನಯನಾದಿಗಳು ಎಲ್ಲಾ ಬೇಕಾಗಿರುವಾಗ ಈ ಕರ್ಮಯೋಗಾನುಷ್ಠಾನ ಮಾತ್ರ ಬೇಡವೆಂದು ಹೇಳಬಹುದೋ ?

(೫) ಅಂಗಾಂಗಿಗಳ ಸಮುಚ್ಚಯವೇನೂ ಅವಶ್ಯಕವಿಲ್ಲವು. ಅಂಗಗಳನ್ನು ತ್ಯಜಿಸಿ, ಅಂಗಿಯಿಂದಲೇ ಫಲನಿಷ್ಪತ್ತಿ ಎಂದರೆ, ಅಂಗಿಯೂ ಬೇಡ ಬರೀ ಅಂಗದಿಂದಲೇ ಫಲನಿಷ್ಪತ್ತಿಯುಂಟಾಗಲೆಂಬ ವಾದಕ್ಕೆ ಆಸ್ಪದವಾಗುತ್ತದೆ. ಆದುದ

ರಿಂದ ಮೇಲಿನ ಅಭಿಪ್ರಾಯದಿಂದ ಈ ಮೂರೂ ಹೇಳಲ್ಪಡಲಿಲ್ಲವು. ಹಾಗಾದರೆ, ಇನ್ನು ಯಾವ ಕಾರಣಗಳಿಂದ ಮೂರೂ ಹೇಳಲ್ಪಟ್ಟವು? ಎಂದು ಕೇಳಿದರೆ ತಿಳಿಸುವೆವು.

೧. ಮೊದಲು ತಮಗೆ ಕರ್ಮಯೋಗಕ್ಕೆ ಶಕ್ತಿಯಿಲ್ಲವೆಂದು ಹೇಳಿಕೊಂಡರು. ಒಂದುವೇಳೆ ತುಂಬಾ ಕಷ್ಟಪಟ್ಟು ಅದನ್ನು ಸಾಧಿಸಿದರೂ, ಮುಂದಿನ ಅನುಷ್ಠಾನ ವಾದ ಜ್ಞಾನಯೋಗಕ್ಕೂ ನನಗೆ ಶಕ್ತಿಯಿಲ್ಲವೆಂದು **ನಚಾತ್ಮವೇದೀ** ಎಂದು ಹೇಳಿದರು. ಹಾಗೆಯೇ ಕಷ್ಟಪಟ್ಟಾದರೂ ಕರ್ಮಯೋಗ ಜ್ಞಾನಯೋಗಗಳನು ಸಂಪಾದಿಸಿದರೆ ಭಕ್ತಿಯೋಗಕ್ಕಂತೂ ಸುತರಾಂ ಅರ್ಹತೆಯಿಲ್ಲವೆಂದು ಮೂರನೆಯ್ನು ವಾಕ್ಯವನ್ನು ಹೇಳಿದರೆಂದು ಭಾವಿಸಬಹುದು.

೨. ಮತ್ತು ಈ ಗುರೂಪಾಯವು ಎಷ್ಟು ಕಷ್ಟತರವಾದುದು? ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಾನುಷ್ಠಾನಗಳೆಲ್ಲಾ ಕ್ರಮವಾಗಿ ನಡೆಸತಕ್ಕದೆಂಬ ಶಾಸ್ತ್ರವಿಧಿ ಇರುತ್ತದೆ. ಇವುಗಳಿಗೆ ತಮಗೆ ಶಕ್ತಿಯಿಲ್ಲದುದರಿಂದ, ಎರಡನೆಯ ಲಘೂಪಾಯವಾದ ಭರನ್ಯಾಸಕ್ಕೆ ಇಂತಹ ಕಷ್ಟತರ ಅನುಷ್ಠಾನಗಳು ಯಾವುವೂ ಅಂಗಾಂಗ ಭಾವಗಳಿಂದ ಬೇಕಾಗಿಲ್ಲವಾದುದರಿಂದ, ಈ ಲಘೂಪಾಯದಲ್ಲೇ ತಮಗೆ ಅಧಿಕಾರವೆಂದೂ ತಿಳಿಸುವದಕ್ಕಾಗಿಯೂ ಈ ಮೂರು ಯೋಗಗಳೂ ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು. ಈ ಅಭಿಪ್ರಾಯವನ್ನೇ ಸ್ವಾಮಿನಿಗಮಾಂತ ದೇಶಿಕರು ಅಡೈಕ್ಕಲ ಪತ್ತಿನ ಪ್ರಥಮವಾಕ್ಯದಲ್ಲಿ ಉಪದೇಶಿಸಿರುತ್ತಾರೆ.

ಹೀಗೆ ಈ ಕರ್ಮಯೋಗಾದಿ ಅಂಗಗಳ **ಅನುಷ್ಠಾನಕ್ಕೆ** ತನಗೆ ಅಶಕ್ತತೆಯಿರುವದರಿಂದಲೇ ತಾವು "**ಅಕಿಂಚನೋಽನನ್ಯಗತಿಃ**" ಎಂದು ಹೇಳಿಕೊಂಡು **ಕಾರ್ಪಣ್ಯವನ್ನು** ಪ್ರದರ್ಶಿಸಿರುತ್ತಾರೆ. ಶರಣಾಗತಿಯ ಐದು ಅಂಗಗಳಲ್ಲಿ ಇಲ್ಲಿ ಕಾರ್ಪಣ್ಯರೂಪ ಅಂಗವು ಹೇಳಲ್ಪಟ್ಟಿತು. ಆಗಲಿ ಸರ್ವೇಶ್ವರನಿಂದೇನು? ಇನ್ನು ಯಾರೂ ರಕ್ಷಿಸಲಾರರೋ? ಎಂದರೆ, ಮಿಕ್ಕಾದ ಅನ್ಯದೇವತೆಗಳು ಆ ವಿಷಯ ದಲ್ಲಿ ಅಸಮರ್ಥರೆಂದು **ಅನನ್ಯಗತಿಃ** ಎಂದು ಹೇಳಲ್ಪಟ್ಟಿತು ಇದರಿಂದ **ಮಹಾ** ವಿಶ್ವಾಸರೂಪ ಅಂಗವೂ ಏರ್ಪಟ್ಟಿತು. ಆದುದರಿಂದಲೇ **ಹೇಶರಣ್ಯ** ಎಂಬ ಸಂಬೋಧನೆಯು. ಇಲ್ಲಿ ಹೇಶರಣ್ಯ ಎಂಬ ಸಂಬೋಧನೆಯಿಂದ "**ಮಾಮೇಕಂ ಶರಣಂವ್ರಜ**" ಗೀತಾಚರಮಶ್ಲೋಕದ ಮತ್ತು "**ಮಾಮೇಕ ಮೇವ ಶರಣ ಮಾತ್ಮಾನಂ ಸರ್ವದೇಹಿನಾಂ। ಯಾಹಿ ಸರ್ವಾತ್ಮಭಾವೇನ ಯಾಸ್ಯಸಿ ಕುತೋಭಯಮ್**" ಎಂಬ ಉದ್ಧವರಿಗೆ ಉಪದೇಶಿಸಿದ ಭಗವದ್ವಾಕ್ಯಗಳು ಸೂಚಿತವು. ಹಾಗೆಯೇ ಮಹರ್ಷಿಗಳೂ ಕೂಡ "**ಸರ್ವಲೋಕ ಶರಣ್ಯಾಯ**" ಎಂದೂ, **ಶರಣ್ಯಂ ಶರಣಂಚತ್ವಾ ಮಾಹುರ್ದಿವ್ಯಾ ಮಹರ್ಷಯಃ?** ಎಂದು ಆತನೇ ಶರಣ್ಯನೂ ಮತ್ತು ಸಿದ್ಧೋಪಾಯನು ಎಂದು ಹೇಳಿರುತ್ತಾರೆ. ಪುರಾಣ

ಸಾರ ಸಮುಚ್ಚಯದಲ್ಲಿ " **ನಾನ್ಯಂ ದೇವ ಮುಪಾಸೀತ ವಿಷ್ಣೋಃ ಪರಮ ಕಾರಣಾತ್ | ಮಾಯಯಾ ಮುತ್ತರುತ್ತ ಕಾಮೋನ್ಯೆ ಮಾಯೀಯೋದೇವ ತಾಗಣಃ | ನ ಚಾನ್ಯ ಜ್ಞಾನ ಕರ್ಮಭ್ಯಾಂ ನಾನ್ಯ ಭಕ್ತ್ಯಾಪರಂಪದವ್ | ಪ್ರಾಪ್ನೋತಿ ಪುರುಷಸ್ತಸ್ಮಾತ್ತಮೇವ ಶರಣಂವ್ರಜ** " ಸರ್ವಕಾರಣ ಭೂತನು ವಿಷ್ಣುವು. ಅವನನ್ನಲ್ಲದೆ ಇನ್ನು ಯಾವ ಅನ್ಯದೇವತೆಯನ್ನು ಕರ ಜ್ಞಾನ ಭಕ್ತಿಗಳಿಂದ ಉಪಾಸಿಸತಕ್ಕದ್ದಲ್ಲವು ; ಏಕೆಂದರೆ ಆ ಅನ್ಯದೇವತೆಗಳೆಲ್ಲಾ ಮಾಯಿಯಾದ ಸರ್ವೇಶ್ವರನಿಂದ ಸತ್ತೆಯನ್ನು ಹೊಂದಿದವರು. ಅವರ ಮೂಲಕ ಪರಮಪದವು ಸಿಕ್ಕುವದಿಲ್ಲವು. ಆದುದರಿಂದ ವಿಷ್ಣುವನ್ನೇ ಶರಣಹೊಂದು ಎಂಬರ್ಥವು.

ಇವರಿಂದ ತಮಗೆ ಶ್ರಿಯಃ ಪತಿಯಲ್ಲದೆ ಶರಣ್ಯಾಂತರವೂ ಪ್ರಾಪ್ಯಾಂತರವೂ ಇಲ್ಲವೆಂದು ಹೇಳದಂತಾಯಿತು. ಹಾಗಾದರೆ ತಮಗೆ ಪ್ರಾಪ್ಯವು ಯಾವುದು ? ಎಂದರೆ ದಿವ್ಯವೈಕುಂಠದಲ್ಲಿರುವ ಶ್ರೀ ಪರವಾಸುದೇವನ ಪಾದ ಮೂಲವೇ ಎಂಬ ಭಾವವು. ಆ ಪರರೂಪದ ಪಾದ ಮೂಲಪ್ರಾಪ್ತಿಗಾಗಿ ಶ್ರೀರಂಗ ಕಾಂಚೀ ಮೊದಲಾದ ದಿವ್ಯದೇಶಗಳಲ್ಲಿ ಬಿಜ ಮಾಡಿಸಿರುವ ವಿಭವಾವತಾರಗಳಿಗೆ ಸಮವಾದ ಅರ್ಚಾ ವಿಗ್ರಹಗಳ **ಪಾದಮೂಲಂ ಪ್ರಪದ್ಯೇ** ಎಂದು ಹೇಳಿಕೊಂಡಿರುತ್ತಾರೆ.

**ಪಾದಮೂಲಂ ಪ್ರಪದ್ಯೇ** ಎಂಬಲ್ಲಿ ಏತಕ್ಕಾಗಿ ಆ ಪ್ರಪದನವು ಎಂದು ವಿಚಾರ ಮಾಡಿದರೆ ಕರ್ಮಯೋಗಾದಿಗಳಿಂದ ಅನುಗ್ರಹೀತವಾದ ಬ್ರಹ್ಮವಿದ್ಯೆಯಿಂದು ವುಂಟಾಗುವ ಫಲವನ್ನು ಆ ಬ್ರಹ್ಮವಿದ್ಯೆಯ ಸ್ಥಾನದಲ್ಲಿ ತಾನೇ ನಿಂತು ಆ ಫಲವನ್ನು ದಯೆಗೈವನೆಂಬ **ಮಹಾವಿಶ್ವಾಸ**ದಿಂದ ಹಾಗೆ ಭರನ್ಯಾಸವನ್ನು ಮಾಡಿರುತ್ತೇನೆಂಬ ಭಾವದಿಂದ ಹೇಳಿರುತ್ತಾರೆ. ಈ ಪಾದ ಮೂಲ ಪ್ರಾಪ್ತಿರೂಪ ನಿಶ್ರೇಯಸ್ಸಿಗಾಗಿ ಭರನ್ಯಾಸವೆಂದು ಹೇಳಿದುದರಿಂದ **ಗೋಪ್ತೃತ್ವವರಣ** ರೂಪ ಅಂಗವೂ ಹೇಳಲ್ಪಟ್ಟಿತು. ಹೀಗೆ **ಪಾದಮೂಲಂ ಪ್ರಪದ್ಯೇ** ಎಂದು ಹೇಳಿದರೆ ತಾವು ಅನುಕೂಲವಾಗಿಯೇ ವಿನಾಪ್ರತಿಕೂಲವಾಗಿ ಇರುವದಿಲ್ಲವೆಂಬುದು ಅರ್ಥಾತ್ಸಿದ್ಧವಾದುದರಿಂದ **ಆನುಕೂಲ್ಯ ಸಙ್ಕಲ್ಪಃ ಪ್ರಾತಿಕೂಲ್ಯಸ್ಯವರ್ಜನಮ್** " ಎರಡು ಅಂಗಗಳೂ ಅರ್ಥಾತ್‌ಸಿದ್ಧವು. ಹಿಂದಿನ ಶ್ಲೋಕದಲ್ಲಿ ಎಂಟುಸಲ ಹೇಳಲ್ಪಟ್ಟಿರುವ ನಮಶ್ಶಬ್ದದಿಂದ ಪ್ರಹ್ವೀಭಾವವೂ, ಹಾಗೆಯೇ ಈ ಶ್ಲೋಕದಲ್ಲೂ ಪ್ರಪದ್ಯೇ ಎಂಬಲ್ಲಿ ತೋರಿಬರುವ ಪ್ರಹ್ವೀಭಾವದಿಂದಲೂ ಈ ಎರಡು ಅಂಗಗಳು ವ್ಯಕ್ತವು.

ಹೀಗೆ **ಪ್ರಪದ್ಯೇ** ಎಂಬುದರಿಂದ ಮಹಾವಿಶ್ವಾಸವೂ ಕಾರ್ಪಣ್ಯವೂ ತೋರಿ ಬರುವದು ಮಾತ್ರವಲ್ಲದೆ **ಅಕಿಂಚನೋಽ ನನ್ಯಗತಿಃ** ಎಂಬುದರಿಂದಲೂ ತೋರ್ಪಡಿಸಿರುತ್ತಾರೆ. **ಆತ್ಮನಿಕ್ಷೇಪ**ವೂ ಈ **ಪ್ರಪದ್ಯೇ** ಎಂಬಲ್ಲೇ ದ್ಯೋತಿತವು. ಆದುದರಿಂದ ಈ ಶ್ಲೋಕವು ಸಾಙ್ಗ ಪ್ರಪದಾನುಷ್ಠಾನವನ್ನು ಪ್ರಕಟಿಸುವಂತಾದ್ದಾಗಿರುತ್ತದೆ.

ಅದನ್ನೇ ಮುಂದೆ ೫೨ನೆಯ ಶ್ಲೋಕದಲ್ಲಿ ಉಪಪಾದಿಸಿ ಹೇಳುತ್ತಾರೆ.

ಇದು ಸುಲಭವಾದ ಉಪಾಯವೆಂದು ಎಲ್ಲಿ ಗ್ರಹಿಸಿದಿರಿ ? ಎಂದರೆ ಸ್ವಾಮಿಯೇ ಲೀಲಾಸಾರಥಿಯಾಗಿ ತಮ್ಮ ಅಮೋಘವಾದ ಉಪದೇಶದಿಂದ "ಶರಣಂವ್ರಜ" ಎಂಬ ಮತ್ತು **ಮಾಮೇಕಮೇವ ಶರಣ ಮಾತ್ಮಾನಂ ಸರ್ವದೇಹಿನಾಮ್ | ಯಾಹಿ ಸರ್ವಾತ್ಮಭಾವೇನ ಯಾಸ್ಯಸ್ಯಕುತೋಽಭಯಮ್** " ಎಂಬ ಭಗವಂತನ ಉಕ್ತಿಗಳಿಂದಸಿದ್ಧವು. ಹಾಗೆಯೇ **ವ್ಯಾಸವಾಲ್ಮೀಕಾದಿಗಳೂ** ಉಪಪಾದಿಸಿರುತ್ತಾರೆ. "**ಸರ್ವೇಷಾಮೇವ ಭೂತಾನಾಂ ಪಿತಾ ಮಾತಾಚ ಮಾಧವಃ | ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ**" ಹೀಗೆ ಶರಣಾಗತಿಯನ್ನು ಅನುಷ್ಠಿಸಿ ಎಂದು ಶ್ರೀ ಮಾರ್ಕಂಡೇಯರು ಪಂಚಪಾಂಡವರಿಗೂ ದ್ರೌಪದಿಗೂ ಉಪದೇಶಿಸಿರುತ್ತಾರೆ (ಭಾರ. ವನ ೧೯೨-೫೬) **ರಾಮಾಯಣದಲ್ಲಿ** "ವಿದಿತಸ್ಸ ಹಿ ಧರ್ಮಜ್ಞ ಶ್ಶರಣಾಗತ ವತ್ಸಲಃ | ತೇನ ಮೈತ್ರೀ ಭವತು ತೇ ಯದಿ ಜೀವಿಚತು ಮಿಚ್ಛಸಿ " ಇದು ರಾವಣನಿಗೆ ಹಿತವನ್ನು ಉಪದೇಶಿಸಿದ ಲೋಕ ಮಾತೆಯ ವಾಕ್ಯವು. ಮತ್ತು "**ಸಕೃದೇವ ಪ್ರಪನ್ನಾಯ** ತವಾಸ್ಮೀತಿ**ಚಯಾಚತೇ | ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ**" ಎಂದು ಶ್ರೀರಾಮಚಂದ್ರ ಪ್ರಭುವು ಶರಣಾಗತರಿಗೆ ಅಭಯವನ್ನು ಎಂದರೆ ಮೋಕ್ಷ ವನ್ನು ಕೊಡುತ್ತೇನೆಂಬುದೇ ತಮ್ಮ ವ್ರತವೆಂಬ ದೃಢಸಙ್ಕಲ್ಪವನ್ನು ಸುಗ್ರೀವಾದಿ ಗಳಿಗೆ ತಿಳಿಸಿರುತ್ತಾರೆ. (ರಾ. ಯುದ್ಧ ೧೮.೩೩) "**ನಚಾನ್ಯ ಜ್ಞಾನಕರ್ಮಾಭ್ಯಾಂ ನಾನ್ಯಭಕ್ತ್ಯಾಪರಂಪದಮ್ | ಪ್ರಾಪ್ನೋತಿ ಪುರುಷ ಸ್ತಸ್ಮಾತ್ತಮೇವಂ ಶರಣಂವ್ರಜೇತ್**" ಶರಣಾಗತಿಯೇ ಮೋಕ್ಷಾರ್ಥಿಗೆ ಸುಕರೋಪಾಯವೆಂದು ಪುರಾಣಸಾರ ಸಮುಚ್ಚಯದಲ್ಲಿ ಹೇಳಿರುತ್ತದೆ. "ತಾವದಾರ್ತಿಸ್ತಥಾ ವಾಂಛಾ" ಎಂಬ ವಿಷ್ಣುಪುರಾಣದ ಅಮೋಘ ಶ್ಲೋಕವು ಹಿಂದೆಯೇ ಉದಾಹೃತವು. ಸ್ವಾಮಿ ಯಲ್ಲಿ ಶರಣಾಗತಿಯನ್ನನುಷ್ಠಿಸುವತನಕವೇ ಆರ್ತಿ, ವಾಂಛಾ, ಮೋಹ, ದುಃಖ ಮೊದಲಾದವು ಭಾದಿಸುತ್ತವೆ. ಅನುಷ್ಠಿಸಿದ ನಂತರ ಇವು ಯಾವುವೂ ಇರುವದಿಲ್ಲ ವೆಂದು ಈ ಶ್ಲೋಕವು ಉಪದೇಶಿಸುತ್ತದೆ. ಹಾಗೆಯೇ ಉಪನಿಷತ್ತುಗಳಲ್ಲೂ ವ್ಯಕ್ತವು:—

1. ತೈತ್ತರೀಯದಲ್ಲಿ—"**ವಸುರಣ್ಯೋವಿಭೂರಿಸಿ**"—ಎಂದಾರಂಭಿಸಿದ ಮನ್ತ್ರವನ್ನು ಹೇಳುತ್ತಾ "**ಓಮಿತ್ಯಾತ್ಮಾನಂಯುಂಜೀತ**"-ಓಂ ಎಂದು ಪ್ರಣವ ವನ್ನು ಉಚ್ಚರಿಸುತ್ತಾ ಆತ್ಮಾವನ್ನು ಪರಮಾತ್ಮನಲ್ಲಿ ಸಮರ್ಪಿಸತಕ್ಕದ್ದೆಂದೂ, ಇದಕ್ಕೇ ನ್ಯಾಸವಿದ್ಯೆ ಎಂಬ ಹೆಸರೆಂದೂ ಹೇಳಿ, ಇದರ ಫಲವು "ಬ್ರಹ್ಮಣೋ ಮಹಿಮಾನ ಮಾಪ್ನೋತಿ" ಎಂದು ಪರಬ್ರಹ್ಮ ಸಾಯುಜ್ಯವೆಂದು ಹೇಳಲ್ಪಟ್ಟಿರುತ್ತದೆ.

2. **ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ**-ಎಂದು ಶ್ವೇತಾಶ್ವತರದಲ್ಲಿ ಹೇಳಿರುತ್ತದೆ. ಇದು ಚತುರ್ಮುಖನ ವಾಕ್ಯವು.

3. " **ಪ್ರಣವೋಧನುಃ ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯ ಮುಚ್ಯತೇ। ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋಭವೇತ್** "-(ಮುಂಡಕ) ಎಂದು ತೈತ್ತರೀಯ ಶ್ರುತ್ಯರ್ಥವೇ ಇಲ್ಲಿಯೂ ಉಪಪಾದಿತವು. ಓಂ ಎಂದು ಶರಣಾಗತಿಯನ್ನು ಮಾಡತಕ್ಕದ್ದು ಪ್ರಣವೇ ಧನಸ್ಸು, ತದ್ದ ಆತ್ಮಾವೇ ಬಾಣವು, ಪರಬ್ರಹ್ಮವೇ ಗುರಿಯು. ಈ ಬಾಣವು ಗುರಿಯನ್ನು ಹೊಂದಿ, ಪರಬ್ರಹ್ಮ ಸಾಯುಜ್ಯವನ್ನು ಹೊಂದತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ.

4. ಕಠಶ್ರುತಿಯಲ್ಲಿ ದ್ವಯವೇ ಮೋಕ್ಷೋಪಾಯವಾಗಿ ಉಪದೇಶಿಸಲ್ಪಟ್ಟು " **ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ** "-ಎಂದು ಹೇಳಲ್ಪಟ್ಟಿರುತ್ತದೆ.

ಪ್ರಪತ್ತಿಯು ಲಘೂಪಾಯವೆಂಬುದಕ್ಕೆ ಅನೇಕ ಸಂಹಿತಾ ವಚನಗಳುಂಟು:—

1. **ಸಂಕರ್ಷಣ ಸಂಹಿತೆಯಲ್ಲಿ:-" ಸರ್ವಧರ್ಮಾನ್ಪರಿತ್ಯಜ್ಯತಮೇವಂ ಶರಣಂವ್ರಜೇತ್ । ಭಗವಂತಂ ವಾಸುದೇವಂ ಪರಾನಂದ ವಿಭೂತಿದಮ್ ॥** " ಎಂದಿರುತ್ತದೆ.

2. **ಜಯಾಖ್ಯ ಸಂಹಿತೆಯಲ್ಲಿ—" ತಮೇವ ಸರ್ವಭಾವೇನ ಪ್ರಯಾಹಿತ್ವಂ ಮಹಾಮುನೇ । ಅನ್ಯತ್ಸರಂ ಪರಿತ್ಯಜ್ಯತಮೇವ ಶರಣಂ ವ್ರಜ ।** " ಎಂದು ಶರಣಾಗತಿಯನ್ನು ವರಿಸಿ ಅನ್ಯಸಾಧನಗಳು ನಿಷೇಧಿಸಲ್ಪಟ್ಟಿವೆ.

3. **ವಿಷ್ವಕ್ಸೇನ ಸಂಹಿತೆಯಲ್ಲಿ–ಸರ್ವಧರ್ಮಾನ್ ಸರ್ವಕಾಮಾನೈಹಿಕಾಮುಷ್ಮಿಕಾನಪಿ । ಸಂತ್ಯಜ್ಯವಿಧಿನಾ ನಿತ್ಯಂ ಷಡ್ವಿಧಾಂ ಶರಣಾಗತಿಮ್ ಆಚಾರ್ಯಾನುಜ್ಞಯಾ ಕುರ್ಯಾಚ್ಛಾಸ್ತ್ರದೃಷ್ಟೇನವರ್ತ್ಮನಾ** "–ಎಂದು ಪ್ರಪತ್ತಿಯನ್ನು ಅನುಷ್ಠಿಸುವ ಕ್ರಮವು ಹೇಳಲ್ಪಟ್ಟಿರುತ್ತದೆ. ಇತರ ಮೋಕ್ಷೋಪಾಯ ಸಾಧನಗಳನ್ನು ಐಹಿಕ ಫಲವನ್ನು ಸ್ವರ್ಗಭೋಗ ಫಲವನ್ನು ಕೊಡುವವುಗಳೆನ್ನೆಲ್ಲಾ ತ್ಯಾಗವಿಧಿಯಿಂದ ತ್ಯಜಿಸಿ, ಈ ಐದು ಅಂಗಗಳಿಂದಲೂ ಒಂದು ಅಂಗಿಯಾದ ಆತ್ಮನಿಕ್ಷೇಪದಿಂದಲೂ ಕೂಡಿದ ಶರಣಾಗತಿಯನ್ನು ಒಬ್ಬ ಸದಾಚಾರ್ಯನನ್ನು ಆಶ್ರಯಿಸಿ ನಡೆಸಬೇಕೆಂದು ತಿಳಿಸುತ್ತದೆ.

4. ಪಶ್ನಸಂಹಿತೆಯಲ್ಲಿ—ದ್ವಯಮನ್ತ್ರವು ಶ್ಲಾಘಿಸಲ್ಪಟ್ಟು **ದ್ವಯಾತ್ಪರತರೋ ಮನ್ತ್ರೋನಾಸ್ತಿ ಸರ್ವಪ್ರದೋನೃಣಾಮ್ । ಯಸ್ಯೋಚ್ಚಾರಣಮಾತ್ರೇಣ ಪರಾಂಸಿದ್ಧಿ ಮವಾಪ್ನುಯಾತ್ ॥** ಎಂದಿರುತ್ತದೆ.

5. ಸನತ್ಕುಮಾರ ಸಂಹಿತೆಯಲ್ಲಿ—" **ಕುಯೋನಿಷ್ವಪಿಸಂಜಾತೋ ಯಸ್ಸಕೃಚ್ಛರಣಂಗತಃ। ತಂಮಾತಾಪಿತೃಹಂತಾರಮಪಿಪಾತಿ ಭವಾರ್ತಿಹಾ**" ಶರಣಾಗತಿಯು ಒಂದೇ ಸಲ ಅನುಷ್ಠಿಸತಕ್ಕದ್ದೆಂದು, ಎಂತಹ ಗುರುತರಪಾತಕಗಳಿದ್ದರೂ ಹೋಗಲಾಡಿಸಿ ಸಂಸಾರ ಬಂಧವನ್ನು ಕಳೆದು ರಕ್ಷಿಸುತ್ತ ದೆಂದು ಹೇಳಲ್ಪಟ್ಟಿರುತ್ತದೆ.

6. **ಅಹಿರ್ಬುಧ್ನ ಸಂಹಿತೆಯಲ್ಲಿ**—" **ತ್ವಮೇವೋಪಾಯಭೂತೋ ಮೇ ಭವೇತಿ ಪ್ರಾರ್ಥನಾ ಮತಿಃ। ಶರಣಾಗತಿರಿತ್ಯುಕ್ತಾ ಸಾದೇವೇಽಸ್ಮಿನ್ ಪ್ರಯುಜ್ಯತಾಮ್**" ಇಲ್ಲಿ ಶರಣಾಗತಿ ಎಂದರೆ ಭಗವಂತನನ್ನು ನೀನೇ ಉಪಾಯ ಭೂತನಾಗು ಎಂಬ ಭಾವವೆಂದು ಹೇಳಲ್ಪಟ್ಟಿರುತ್ತದೆ. ಮತ್ತು

" **ಅನನ್ಯ ಸಾಧ್ಯೇ ಸ್ವಾಭೀಷ್ಟೇ ಮಹಾ ವಿಶ್ವಾಸ ಪೂರ್ವಕಮ್ ।**
**ತದೇಕೋಪಾಯತಾ ಯಾಚ್ಞಾಪ್ರಪತ್ತಿ ಶ್ಶರಣಾಗತಿಃ ॥**

ಇದರ **ಅರ್ಥಕ್ಕೆ** ದಾಸನು ಬರೆದಿರುವ ಶ್ರೀಮದ್ರಹಸ್ಯತ್ರಯಸಾರಾರ್ಥದ ೧೦೫೨ ಪುಟವನ್ನು ನೋಡಿ. ಮತ್ತು

**ಯದ್ಯೇನ ಕಾಮಕಾಮೇನ ನಸಾಧ್ಯಂಸಾಧನಾನ್ತರೈಃ।**
**ಮುಮುಕ್ಷುಣಾಯತ್ಸಾಂಖ್ಯೇನ, ಯೋಗೇನಚ ನ ಚಭಕ್ತಿತಃ।**
**ಪ್ರಾಪ್ಯತೇ ಪರಮಂಧಾಮ ಯತೋ ನಾವರ್ತತೇ ಯತಿಃ।**
**ತೇನ ತೇನಾಪ್ಯತೇ ತತ್ತ್ವನ್ನ್ಯಾಸೇನೈವ ಮಹಾ ಮುನೇ॥**

ಇಲ್ಲಿ ಕರ್ಮಜ್ಞಾನ ಭಕ್ತಿಯೋಗಗಳಿಗೂ ಕೂಡ ಕಷ್ಟಸಾಧ್ಯವಾದ ದಿವ್ಯವೈಕುಂಠವನ್ನೂ ಮತ್ತು ಇತರ ಪುರುಷಾರ್ಥಗಳನ್ನು ಈ ನ್ಯಾಸವೆಂದರೆ ಶರಣಾಗತಿಯೇ ಸಾಧಿಸಿ ಕೊಡುತ್ತದೆಂದು ಹೇಳಲ್ಪಟ್ಟಿದೆ.

7. ಸಂಕರ್ಷಣ ಸಂಹಿತೆಯಲ್ಲಿ-" **ಸರ್ವಧರ್ಮಾನ್ಪರಿತ್ಯಜ್ಯ ತಮೇವ ಶರಣಂ ವ್ರಜೇತ್। ಭಗವಂತಂ ವಾಸುದೇವಂ ಪರಾನಂದವಿಭೂತಿದಂ** ಎಂದಿರುತ್ತದೆ, ಅರ್ಥವು ವ್ಯಕ್ತವು. ಸ್ಮೃತಿಗಳಲ್ಲೂ ಉಪಾಯವೆಂದು ಉಪಪಾದಿತವು:—

1. **ದಕ್ಷಸ್ಮೃತಿಯಲ್ಲಿ**-" **ಸರ್ವೋಪಾಧಿ ವಿನಿರ್ಮುಕ್ತಂ ಕ್ಷೇತ್ರಜ್ಞಂ ಬ್ರಹ್ಮಣಿನ್ಯಸೇತ್। ಏತತ್ಧ್ಯಾನಂಚಯೋಗಶ್ಚ ಶೇಷೋಽನ್ಯತ್ ಗ್ರಂಥ ವಿಸ್ತರಃ** ಎಂದು ಇದೆ.

2. **ವ್ಯಾಸಸ್ಮೃತಿಯಲ್ಲಿ**—" **ನಿವೇದಯೀತ ಸ್ವಾತ್ಮಾನಂ ವಿಷ್ಣಾ ವಮಲತೇಜಸಿ। ತದಾತ್ಮಾತನ್ಮನಶ್ಶಾನ್ತಸ್ತದ್ವಿಷ್ಣೋರಿತಿಮನ್ತ್ರತಃ**" ಇಲ್ಲಿ

" **ತದ್ವಿಷ್ಣೋಃ ಪರಿಮಂಪದಂ ಸದಾಪಶ್ಯನ್ತಿ** " ಎಂಬ ಮನ್ತ್ರವನ್ನು ಹೇಳಿಯೂ ಶರಣಾಗತಿಯನ್ನು ಅನುಷ್ಠಿಸಬಹುದೆಂದು ತಿಳಿಸುತ್ತದೆ.

3. ಶ್ರೀ ಶೌನಕಸ್ಮೃತಿಯಲ್ಲಿ–" **ವಾಚಃಪರಂ ಪ್ರಾರ್ಥಯೇತಾ ಪ್ರಪ್ಯದೇನ್ನಿಯತಂ ಶ್ರಿಯಮ್** " ಎಂದು ಹೇಳಿ ಪುರುಷಕಾರತ್ವೇನ ಲಕ್ಷ್ಮಿಯಲ್ಲಿ ಶರಣಾಗತಿಯನ್ನು ಅನುಷ್ಠಿಸಿ, ಅನಂತರ ನಾರಾಯಣನಲ್ಲಿ ಅನುಷ್ಠಿಸತಕ್ಕದ್ದೆಂದು ಹೇಳಿರುತ್ತದೆ.

4. ಇತಿಹಾಸ ಸಮುಚ್ಚಯದಲ್ಲಿ ಭಗವಂತನನ್ನು ಕುರಿತು ಲಕ್ಷ್ಮಿಯು ಹೇಳುತ್ತಾಳೇನೆಂದರೆ " **ಪ್ರಾಣೈರಪಿತ್ವಯಾನಿತ್ಯಂ ಸಂರಕ್ಷ್ಯಶ್ಶರಣಾಗತಃ** "

5. ಭಗವದ್ಗೀತೆಯು ಸ್ಮೃತಿಯು ; ಅದರಲ್ಲಿ " **ಸರ್ವಧರ್ಮಾ ಪರಿತ್ಯಜ್ಯ** " ಎಂಬ ಶ್ಲೋಕವು ಶರಣಾಗತಿಯನ್ನು ವಿಧಿಸುತ್ತದೆ. ಪುರಾಣಗಳಲ್ಲಿ—

1. ಪಾದ್ಮದಲ್ಲಿ-ಶ್ರೀಭಗವದ್ವಾಕ್ಯವು ಚತುರ್ಮುಖನನ್ನು ಕುರಿತು,

**"ಸರ್ವೇಷಾಮೇವ ಮನ್ತ್ರಾಣಾಂ ಮನ್ತ್ರರತ್ನಂ ಶುಭಾಹ್ವಯಮ್ |**
**ಸಕೃತ್ಸ್ಮರಣಮಾತ್ರೇಣ ದದಾತಿಪರಮಂ ಪದಮ್ |**
**ಮನ್ತ್ರರತ್ನಂ ದ್ವಯಂನ್ಯಾಸಃ ಪ್ರಪತ್ತಿಶ್ಶರಣಾಗತಿಃ |**
**ತಸ್ಯೋಚ್ಚಾರಣ ಮಾತ್ರೇಣ ಪರಿತುಷ್ಟೋಽಸ್ಮಿ ನಿತ್ಯಶಃ ||**

ಇಲ್ಲಿ ದ್ವಯವೇ ಮನ್ತ್ರರತ್ನವೆಂದೂ ತತ್ಪಠನ ಮಾತ್ರದಿಂದ ಪರಮಪದ ಪ್ರಾಪ್ತಿ ಎಂದೂ, ಉಕ್ತಿನಿಷ್ಠೆಯು ಹೇಳಲ್ಪಟ್ಟಿತು.

2. ಬ್ರಾಹ್ಮಪುರಾಣದಲ್ಲಿ—

" **ಶರಣಂ ತ್ವಾಂಪ್ರಪನ್ನಾಯೇ ಧ್ಯಾನಯೋಗವಿವರ್ಜಿತಾಃ |**
**ತೇಽಪಿ ಮೃತ್ಯುಮತ್ರಿಕಮ್ಯಯಾನ್ತಿ ತದ್ವೈಷ್ಣವಂಪದಮ್ ||**

ಅರ್ಥವು ವ್ಯಕ್ತವು.

3. ವರಾಹ ಪುರಾಣದಲ್ಲಿ-ಭೂಮಿದೇವಿಗೆ ಭಗವಂತನ- ವಾಕ್ಯವು. " **ಮತ್ಪದದ್ವಂದ್ವಮೇಕಂ ಯೇ ಪ್ರಪದ್ಯನ್ತೇ ಪರಾಯಣಮ್ | ಉದ್ಧರಿಷ್ಯಾಮ್ಯಹಂದೇವಿ ಸಂಸಾರಾತ್ಸ್ವಯಮೇವ ತಾ** "-ಜಿತನ್ತಾಸ್ತೋತ್ರದಲ್ಲಿ " **ತ್ವತ್ಪಾದ ಕಮಲಾದನ್ಯನ್ನಮೇ ಜನ್ಮಾನ್ತರೇಷ್ವಪಿ | ನಿಮಿತ್ತಂ ಕುಶಲಸ್ಯಾಸ್ತಿ ಯೇನ ಗಚ್ಛಾಮಿ ಸದ್ಗತಿಮ್** "–ಸದ್ಗತಿಗೆ ನಿನ್ನ ಪಾದಕಮಲಕ್ಕಿಂತ ಬೇರೇ ಉಪಾಯವೇ ಇಲ್ಲವೆಂದು ಹೇಳಲ್ಪಟ್ಟಿರುತ್ತದೆ. ಹೀಗೆ ಈ ಲಘೂಪಾಯ ವಿಷಯದಲ್ಲಿ ಸಾವಿರಾರು ಪ್ರಮಾಣಗಳಿದ್ದರೂ, ಅನೇಕರಿಗೆ ಇದು ಒಂದು ಉಪಾಯವೆಂಬ ಜ್ಞಾನವೇ ಇಲ್ಲವು. ಇದ್ದರೂ ಅದರಲ್ಲಿ ವಿಶ್ವಾಸವೂ ಇಲ್ಲವು. ಶಾಸ್ತ್ರಗಳಲ್ಲಿ

ವಿಶ್ವಾಸವಿಲ್ಲದೆ, ಸ್ವಾಮಿಯ ಸ್ವತ್ತಾದ ಈ ಆತ್ಮವನ್ನು ನೀನೇ ರಕ್ಷಿಸು ಎಂದು ಆತನಲ್ಲೇ ಸಮರ್ಪಿಸುವದು ಹೇಗೆ ಉಪಾಯವಾದೀತು? ಇತ್ಯಾದ್ಯನೇಕಗಳಾದ ಶಾಸ್ತ್ರವನ್ನು ಬಿಟ್ಟು ಮಾಡುವ ಕುತರ್ಕಗಳೆಲ್ಲಾ ಈ ಪ್ರಮಾಣ ಬಾಹುಳ್ಯದಿಂದ ನಿರಸ್ತವು. ಶ್ರೀ ನಿಗಮಾನ್ತದೇಶಿಕರವರು ಶ್ರೀ ಮದ್ರಹಸ್ಯತ್ರಯಸಾರದ ಪ್ರಭಾವ ರಕ್ಷಾಧಿಕಾರದಲ್ಲೂ, ಸಾಙ್ಗಪ್ರಪದನಾಧಿಕಾರದಲ್ಲೂ ಈ ಆಕ್ಷೇಪಣೆಗಳಿಗೆಲ್ಲಾ ಸಮಂಜಸವಾದ ಸಮಾಧಾನಗಳನ್ನು ಹೇಳಿರುತ್ತಾರೆ. ಇದಕ್ಕೆ ತ್ರೈವರ್ಣಿಕರು ಮಾತ್ರವೇ ಅಧಿಕಾರಿಗಳೆಂದು ಭಾವಿಸತಕ್ಕದ್ದಲ್ಲವು. **ಸರ್ವಸ್ಯಶರಣಂಸುಹೃತ್ತೆಂಬ**-ಶ್ರುತಿಯೇ "**ಸರ್ವಲೋಕಶರಣ್ಯಾಯ ರಾಘವಾಯ ಮಹಾತ್ಮನೇ**"-ಎಂಬಲ್ಲೂ "**ಮಿತ್ರಭಾವೇನ ಸಂಪ್ರಾಪ್ತಂನತ್ಯಜೇಯಂ ಕಥಂಚನ**"-ಎಂಬಲ್ಲೂ ಉಪಪಾದಿತವಾಗಿರುವದರಿಂದ, ಇದಕ್ಕೆ ಪಂಚಮ ಮೊದಲುಗೊಂಡು ಎಲ್ಲಾ ಅಶಕ್ತರಿಗೂ ಅಧಿಕಾರ ಉಂಟು.

ಅದನ್ನು ತಿಳಿಸುವದಕ್ಕಾಗಿಯೂ, **ಹೇ ಶರಣ್ಯ**-ಎಂದರೆ-ಓ ಸರ್ವಲೋಕ ಶರಣ್ಯನೇ ಎಂಬ ಭಾವವು. ಇಲ್ಲಿ "**ಶರಣಂ**"-ಎಂಬ ಶಬ್ದಕ್ಕೆ ಉಪಾಯವೆಂಬರ್ಥವೆಂದು ಅಹಿರ್ಬುಧ್ನ ಸಂಹಿತೆಯಲ್ಲಿ "**ಉಪಾಯೇಗೃಹರಕ್ಷಿತ್ರೋಃಶಬ್ದಶರಣ ಇತ್ಯಪಿ**"-ಎಂಬಲ್ಲಿ ಶರಣಶಬ್ದಕ್ಕೆ ಉಪಾಯ, ಮನೆ, ರಕ್ಷಿತಾ ಎಂಬ ಮೂರು ಅರ್ಥಗಳಲ್ಲಿ, ಇಲ್ಲಿ ಶರಣಶಬ್ದಕ್ಕೆ "**ವರ್ತತೇ ಸಾಂಪತ್ರಂತ್ವೇಷ ಉಪಾಯಾರ್ಥೈಕವಾಚಕಃ**"-ಉಪಾಯವೆಂದೇ ಅರ್ಥವೆಂದು ಹೇಳಲ್ಪಟ್ಟಿರುತ್ತದೆ. ಆ ಉಪಾಯವು ಯಾವುದೆಂದರೆ ಆತನ **ಪಾದಮೂಲ**ವೆಂದು ಇಲ್ಲಿ ಹೇಳಲ್ಪಟ್ಟಿತು. ಆ ಪಾದದ ಮಾಹಾತ್ಮ್ಯೆಯು ಇಷ್ಟೆಂದು ಹೇಳಲಸಾಧ್ಯವು. ಸ್ವಾಮಿದೇಶಿಕರವರು "**ಶಿಲಾದೇಃ**"-ಎಂಬ ಶ್ರೀಮದ್ರಹಸ್ಯತ್ರಯಸಾರದ ಪ್ರಭಾವ ರಕ್ಷಾಧಿಕಾರದ ಪ್ರಥಮ ಶ್ಲೋಕದಲ್ಲಿ (೨೭೭ನೆಯ ಪುಟವನ್ನು ನೋಡಿ) ಉಪಪಾದಿಸಿರುತ್ತಾರೆ. ಸ್ವಾಮಿ ಪಾದಾಂಗುಷ್ಟದಿಂದುತ್ಪನ್ನಳಾದ ಗಂಗಾಮಹಿಮೆಯೂ, ಮತ್ತೂ ಅಹಲ್ಯಾಶಾಪ ಶಮನವೇ ಮೊದಲಾದವುಗಳು ಇದಕ್ಕೆ ನಿದರ್ಶನಗಳು. ಆದುದರಿಂದ **ತತ್ಪಾದ ಮೂಲಂ ಶರಣಂ ಪ್ರಪದ್ಯೇ**-ಎಂದು ಶರಣಾಗತಿಯನ್ನು ಅನುಷ್ಠಿಸಿದುದರಿಂದ ದ್ವಯಮನ್ತ್ರದ ಪೂರ್ವಖಂಡದ ಅಭಿಪ್ರಾಯವು ಪ್ರಕಟಿಸಲ್ಪಟ್ಟಿತು.

ಹೀಗೆ ಶರಣಾಗತಿಯನ್ನು ಅನುಷ್ಠಿಸುವದರ ಮಾಹಾತ್ಮ್ಯವೂ, ಮತ್ತು ಫಲವೂ ಏನು ಎಂಬುದು

**"ಅನೇನೈವಂ ಪ್ರಪನ್ನಸ್ಯ ಭಗವಂತಂ ಸನಾತನಮ್ ।**
**ತಸ್ಯಾನು ಬಂಧಾಃ ಪಾಪ್ಮಾನ ಸ್ಸರ್ವೇ ನಶ್ಯನ್ತಿ ತತ್ಕ್ಷಣಾತ್ ॥**
**ಕೃತಾನ್ಯನೇನ ಸರ್ವಾಣಿ ತಪಾಂಸಿ ತಪತಾಂವರ ।**

**ಸರ್ವತೀರ್ಥಾ ಸ್ಸರ್ವಯಜ್ಞಾ. ಸ್ಸರ್ವದಾನಾನಿ ತತ್ಕ್ಷಣಾತ್ ॥**
**ಕೃತಾನ್ಯನೇನ ಮೋಕ್ಷಶ್ಚ ತಸ್ಯಹಸ್ತೇ ನಸಂಶಯಃ "**

ಇಲ್ಲಿ ಈ ಪ್ರಪನ್ನನು ಮಾಡುವ ಶರಣಾಗತಿಯ ಮೂಲಕ ತನ್ನ ಮತ್ತು ತನ್ನ ಅನುಬಂಧಿಗಳ ಪಾಪಗಳೆಲ್ಲಾ ನಾಶವಾಗುತ್ತದೆಂದೂ ಸಮಸ್ತ ಯಜ್ಞದಾನ ತಪಸ್ಸುಗಳು ಸಾಧಿಸುವ ಮಾಹಾತ್ಮ್ಯೆಯೆಲ್ಲಾ ಈ ಶರಣಾಗತಿಯಲ್ಲಿಯೇ ಇದೆ ಎಂದೂ, ಅಂತವನಿಗೆ ಮೋಕ್ಷವು ಹಸ್ತಗತವೆಂದೂ ಹೇಳಲ್ಪಟ್ಟಿರುತ್ತದೆ.

ಇಲ್ಲಿ ಶ್ರೀ ಯಾಮುನಮುನಿಗಳು ಮಾಡಿರುವ ಶರಣಾಗತಿಯೂ, ಹಾಗೆಯೇ ಅವರ ಶಿಷ್ಯರಾದ ಶ್ರೀಯತಿವರ್ಯರು ಶರಣಾಗತಿ ಗದ್ಯದಲ್ಲಿ ಮಾಡಿರುವ ಶರಣಾಗತಿಯೂ ಕೆಲವರು ಭಕ್ತಿಯೋಗದ ಅಂಗ ಶರಣಾಗತಿಯೆಂದು ಭ್ರಮಿಸುವರು. ಇದು ಸರಿಯಲ್ಲವು. ಏಕೆಂದರೆ ತಮಗೆ ಕರ್ಮಯೋಗ ಜ್ಞಾನಯೋಗ ಮತ್ತು ಭಕ್ತಿಯೋಗಗಳಿಗೆ ಅಶಕ್ತತೆಯೆಂದು ಹೇಳಿರುವದರಿಂದ. ಆಗಲಿ ಶ್ರೀ ಯತಿವರ್ಯರು ಗದ್ಯದಲ್ಲಿ **" ಪರಭಕ್ತಿ, ಪರಜ್ಞಾನ ಪರಮಭಕ್ತಿಯುತಂ ಮಾಂಕುರುಷ್ವ "**-ಎಂದು ಹೇಳಿರುವದರಿಂದ ಈ ಭಕ್ತಿವೃದ್ಧಿ ಪರಾಕಾಷ್ಠಾದೆಶೆಯು ಭಕ್ತಿಯೋಗದಲ್ಲಿ ಉಂಟಾಗುವದರಿಂದ ಅಂಗಶರಣಾಗತಿಯಲ್ಲವೋ ? ಎಂದರೆ, ಈ ಭಕ್ತಿಯ ಪರಾಕಾಷ್ಠಾದೆಶೆಯು ಭರನ್ಯಾಸನಿಷ್ಠನಲ್ಲೂ ಉಂಟಾಗುವದರಲ್ಲಿ ಸಂದೇಹವಿಲ್ಲವು, ಶರಣಾಗತಿಯು ಸ್ವತಂತ್ರೋಪಾಯವೆಂದು ಭಾವಿಸದ ಪಕ್ಷದಲ್ಲಿ,

**" ಮಾಂಹಿ ಪಾರ್ಥವ್ಯ ಪಾಶ್ರಿತ್ಯಯೇ ಪಿಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾಶೂದ್ರಾಃ ತೇಪಿಯಾನ್ತಿ ಪರಾಂಗತಿಮ್ "**

(ಗೀ, 9. 32) ಎಂಬಲ್ಲಿ ಭಕ್ತಿಯೋಗಕ್ಕೆ ಅಧಿಕಾರವಿಲ್ಲದ ಸ್ತ್ರೀ ಶೂದ್ರಾದಿಗಳಿಗೂ ಮೋಕ್ಷ ಉಂಟೆಂದು ಹೇಳುವ ಭಗವದ್ವಾಕ್ಯಕ್ಕೆ ಗತಿ ಏನು ? ಹಾಗೆಯೇ ಭಾಗವತದಲ್ಲೂ ಪ್ರಮಾಣಗಳುಂಟು. ಆದುದರಿಂದ ಇದು ಅಂಗಶರಣಾಗತಿಯಲ್ಲವು.

ಆಗಲಿ, ಹಾಗಾದರೆ ಈ ಶರಣಾಗತಿಯು ಅಂಗವೂ ಅಂಗಿಯೂ ಎರಡು ಆಗುವದು ಎಲ್ಲಾದರೂ ಉಂಟೋ? ಸ್ವತಂತ್ರೋಪಾಯವಾಗಿಯೂ, ಉಪಾಯಕ್ಕೆ ಸಾಧನವಾಗಿ ಹೀಗೆ ಅದ್ವಾರಕವಾಗಿಯೂ ಸದ್ವಾರಕವಾಗಿಯೂ ಎಲ್ಲಾದರೂ ಉಂಟೋ ಎಂದರೆ ಶ್ರೀ ನಿಗಮಾಂತರವರು ಪ್ರಣವದೃಷ್ಟಾಂತವನ್ನು ಕೊಟ್ಟು ರಹಸ್ಯಗಳ ಉಪಪಾದನೆಯಲ್ಲಿ ಸಮರ್ಥಿಸಿರುತ್ತಾರೆ:—

**ಪ್ರಣವಾದಿ ನಯಾದತ್ರ ಪ್ರಪತ್ತ್ಯೈಸ್ತತ್ವ ವೇದಿಭಿಃ ।**
**ಯಥಾಧಿಕಾರ ಮಂಗತ್ವಂ ಸ್ವತಂತ್ರತ್ವಂಚದರ್ಶಿತಮ್ ॥**

ಆದುದರಿಂದ ಶರಣಾಗತಿಯು ಅಂಗವಾಗಿ ಸದ್ವಾರಕವೆನಿಸಿ, ಮತ್ತು ಅದ್ವಾರಕವಾಗಿ ಅಂಗಿಯಾಗಿಯೂ ಹೀಗೆ ಎರಡು ವಿಧವಾಗಿ ಅನುಷ್ಠಿಸಲ್ಪಡುತ್ತದೆ. ಹೀಗೆ

**ನನಿಂದಿತಂ ಕರ್ಮ ತದಸ್ತಿ ಲೋಕೇ**
**ಸಹಸ್ರಶೋಯನ್ನ ಮಯಾವ್ಯಧಾಯಿ ।**
**ಸೋ ಹಂ ವಿಪಾಕವಸರೇ ಮುಕುಂದ**
**ಕ್ರಂದಾಮಿ ಸಂಪ್ರತ್ಯಗತಿ ಸ್ತವಾಗ್ರೇ** ॥೨೩॥

---

ಎರಡುವಿಧ ಉಪಾಯಗಳಿಗೂ ಶರಣಾಗತಿಯು ಆವಶ್ಯಕವೆಂದು ಉಪದೇಶಿಸುವದಕ್ಕಾಗಿ ಒಟ್ಟು ಕೂಡಿಸಿ ಶ್ರೀ ಎಂಬೆರಮಾನಾರ್ರು " **ತಸ್ಯ ಚವಶೀಕರಣಂತಚ್ಛರಣಾಗತಿರೇವ** "-ಎಂದು ಶ್ರೀ ಭಾಷ್ಯದಲ್ಲಿ ಉಪದೇಶಿಸಿರುತ್ತಾರೆ. ಈ ಶ್ಲೋಕದಲ್ಲಿ ತೋರುವ ಶರಣಾಗತಿಯಾದರೋ ಮುಮುಕ್ಷುವು ಮಾಡುವ ಸ್ವತಂತ್ರ ಪ್ರಪತ್ತಿಯು ಎಂದರೆ ಅದ್ವಾರಕಪ್ರಪತ್ತಿಯು. ಎಂದು ಗ್ರಹಿಸತಕ್ಕದ್ದು ॥ ೨೨ ॥

**ಅವತಾರಿಕೆಯು:**—ಹಿಂದಿನ ಶ್ಲೋಕದಲ್ಲಿ ತಾವು ಅಗುಷ್ಠಿಸಿದ ಉಪಾಯದ ಸ್ಥಿರೀಕರಣಾರ್ಥವಾಗಿ ಮುಂದಿನ ಏಳು ಶ್ಲೋಕಗಳಲ್ಲಿ ಕ್ರಮವಾಗಿ

1. ಈ ಶರಣಾಗತಿಯಿಂದ ತಮ್ಮಲ್ಲಿರುವ ಸಹಸ್ರಾಪರಾಧಗಳನ್ನು ಕೋಗಲಾಡಿಸುವ ಕಾರುಣ್ಯಾದಿ ಕಲ್ಯಾಣ ಗುಣಗಳಿರುವದರಿಂದ ಆಕ್ರಂದನ ಮಾಡಿ ಪರಿಹಾರ ಪ್ರಾರ್ಥನೆಯೂ, (23)

2. ಈಶ್ವರನೇ ಸರಿಯಾದ ರಕ್ಷಕನು, ತಾವೇ ಸರಿಯಾದ ರಕ್ಷ್ಯವಸ್ತು ಇದು ಪರಮ ಲಾಭವು ಎಂದೂ, (24)

3. ಶರಣಾಗತ ಪರಿತ್ಯಾಗವು ಸರ್ವೇಶ್ವರನಿಗೆ ಅನುರೂಪವಾದುದಲ್ಲವೆಂದೂ, (25)

4. ಶರಣಾಗತನಾದ ತನ್ನನ್ನು ಪರಿತ್ಯಾಗ ಮಾಡಿದರೂ ತಾನು ಸ್ವಾಮಿ ಪಾದವನ್ನು ಬಿಡುವನಲ್ಲವೆಂದೂ (26)

5. ಶರಣಾಗತನಿಗೆ ಸರ್ವೇಶ್ವರನ ಪಾದಕಮಲವೇ ತುಂಬಾ ಭೋಗ್ಯವಾಗಿರುವಾಗ ಅನ್ಯಗಳಾದ ತುಚ್ಛ ವಿಷಯಗಳಲ್ಲಿ ಆಶೆಯಿಲ್ಲವೆಂದೂ (27)

6. ಶರಣಾಗತಿಯೇ ನಿರತಶಯ ಸುಖಕ್ಕೆ ಪರಮ ಸುಕರವಾದ ಸುಲಭವಾದ ಉಪಾಯವೆಂದೂ, (28)

7. ಅನಿಷ್ಟನಿವೃತ್ತಿ ಮತ್ತು ಇಷ್ಟಪ್ರಾಪ್ತಿಯನ್ನು ಕೊಡುವ ಮಾಹಾತ್ಮ್ಯೆಯುಳ್ಳದೆಂದೂ, ಹೇಳುತ್ತಾರೆ. (29)

ಹಿಂದಿನ ಶ್ಲೋಕದಲ್ಲಿ ಉಪಾಯಾಂತರದಲ್ಲಿ, ಅಂಗಗಳಾದ ಕರ್ಮಯೋಗ ಜ್ಞಾನಯೋಗಗಳನ್ನಾಗಲಿ, ಅನುಷ್ಠಿಸುವದಕ್ಕೂ ಅಂಗಿಯಾದ ಉಪಾಸನವನ್ನು ಅನುಷ್ಠಿಸುವದಕ್ಕೂ ತಮಗೆ ಯೋಗ್ಯತೆಯಿಲ್ಲದುದರಿಂದ ಆಕಿಂಚನ್ಯವು ಉಂಟಾಗಿ

ಸ್ವಾಮಿಪಾದದಲ್ಲಿ ಶರಣಾಗತಿಯನ್ನು ಅನುಷ್ಠಿಸಿ, ಆ ಉಪಾಸನವು ಕೊಡುವ ಫಲವನ್ನು ತಾವು ಅಕಿಂಚನಾದುದರಿಂದ ತಾವೇ ಉಪಾಯಭೂತರಾಗಿ ಕೊಡತಕ್ಕದ್ದೆಂದು ಪ್ರಾರ್ಥಿಸಿದರು. ಶರಣಾಗತಿ ಎಂದರೇನೆಂದರೆ " **ತದೇಕೋಪಾಯತಾಯಾಚ್ಞಾ** " "**ತ್ವಮೇವೋಪಾಯ ಭೂತೋಮೇ**"-ಎಂದು ನೀನೇ ಉಪಾಯಭೂತನಾಗಿ ನಿಂತು ತನ್ನ ಆತ್ಮವನ್ನು ರಕ್ಷಿಸಿಕೊಳ್ಳಲು ತನಗೆ ಶಕ್ತಿಯಿಲ್ಲದೆ, ಸ್ವಾಮಿಯಲ್ಲಿ ಐದು ಅಂಗಗಳಿಂದಲೂ ದ್ವಯೋಚ್ಚಾರಣೆಯ ಮೂಲಕ ಸಮರ್ಪಿಸಿ, ನೀನೇ ರಕ್ಷಿಸಿಕೋ ಎಂದು ಸರ್ವಭರವನ್ನು ಆತನಲ್ಲಿಟ್ಟು ತಾನು ನಿರ್ಭರನಾಗಿಯೂ ನಿರ್ಭಯನಾಗಿಯೂ ಹೃಷ್ಟಮನಸ್ಕನಾಗಿಯೂ, ಇರೋಣವು.

ಆಗಲಿ ಹೀಗೆ ಆತನೇ ಉಪಾಯಭೂತನಾದ ಬಳಿಕ, ಆತನನ್ನು ಆಶ್ರಯಿಸಿ, ಕರ್ಮಯೋಗಾದಿಗಳನ್ನು ಅನುಷ್ಠಿಸುವ ಶಕ್ತಿಯನ್ನು ಕೊಡೆಂದು ಏಕೆ ಪ್ರಾರ್ಥಿಸಕೂಡದು ? ಆತನು ಪರಮದಯಾಳುವಲ್ಲವೇ ? ಪ್ರಾರ್ಥಿಸಿದ ಭಕ್ತನ ಕೋರಿಕೆಯನ್ನು ಗಮನಿಸದೇ ಇರುವನೇ ? ಎಂದರೆ ತಾವು ಮಾಡಿರುವ ಪಾಪ ಪರಂಪರೆಗಳು ಅಸಂಖ್ಯೇಯವಾದುವು. ಅವು ಹೋಗುವದು ಎಂದಿಗೆ ? ಅವುಗಳು ಪ್ರಬಲ ಪ್ರತಿಬಂಧಕಗಳಾಗಿರುವಾಗ ಭಕ್ತಿಯೋಗಕ್ಕೆ ಸರ್ವಾತ್ಮನಾ ಅಧಿಕಾರವೇ ಇಲ್ಲವಾಗಿದೆ; ಅರ್ಜುನನು ಶ್ರೀಕೃಷ್ಣ ಭಗವಾನ್ ಎದುರಿನಲ್ಲಿ ನಿಂತು ಶೋಕಿಸಿದ ತೆರದಿ ತಾವು ಶೋಕಿಸುತ್ತಿರುವೆನು ಎಂದು ಹೇಳಿ, ತನಗೆ ಪರಮಾಕಿಂಚನ್ಯವೆಂದು, ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನೇ ಸ್ಥಿರೀಕರಿಸುತ್ತಾರೆ.

**ಅರ್ಥವು:— ಲೋಕೇ**-ಈ ಲೋಕದಲ್ಲಿ, ಅಥವಾ ಧಾತು ವ್ಯುತ್ಪತ್ತಿ ಮೂಲಕ **ಲೋಕೇವೇದೇಚ**-ಎಂಬಲ್ಲಿ ಶ್ರೀ ಭಾಷ್ಯದಲ್ಲಿ ಶ್ರೀಯತಿವರ್ಯರು ಸ್ಮೃತಿ ಶ್ರುತಿಗಳಲ್ಲೂ ಎಂದು ಅರ್ಥಮಾಡಿರುವ ಹಾಗೆ ಸ್ಮೃತಿರೂಪಶಾಸ್ತ್ರಗಳಲ್ಲಿ, **ನಿಂದಿತಂ ಕರ್ಮ**-ಅಧರ್ಮಗಳೆಂದೂ ಬಂಧಕಗಳಾಗಿ ಅಶಾಶ್ವತ ಫಲಗಳನ್ನು ಕೊಡುವುವು ಎಂದೂ, ನಿಂದಿಸಲ್ಪಟ್ಟ ಕರ್ಮ, **ಯದಸ್ತಿ**-ಯಾವುದು ಇದೆಯೋ **ತತ್**-ಅದು **ಸಹಸ್ರಶಃ**-ಅನೇಕಸಲ, **ಮಯಾ**-ನನ್ನಿಂದ, **ನವ್ಯಧಾಯಿ**-ಮಾಡಲ್ಪಡಲಿಲ್ಲವೆಂಬುದು, ನ-ಇಲ್ಲವು ; ಮಾಡಲ್ಪಡಲಿಲ್ಲವೆಂಬುದು ಇಲ್ಲವೆಂದು ವ್ಯತಿರೇಕದಿಂದ ಹೇಳಿದುದರಿಂದ, ಅವೆಲ್ಲಾ ಅಧರ್ಮ ಮತ್ತು ಕಾಮ್ಯಕರ್ಮಗಳನ್ನೂ, ಅನೇಕಸಲ ಮಾಡಿಯೇ ಮಾಡಿರುತ್ತೇನೆಂಬ ಭಾವವು. ಆದುದರಿಂದಲೇ, **ಸೋಹಮ್**-ಅಂತಹ ಅಪರಾಧ ಚಕ್ರವರ್ತಿಯಾದ ನಾನು, **ವಿಪಾಕಾವಸರೇ**-ಕರ್ಮಪರಿಪಾಕವು ಬಲಿಷ್ಠವಾಗಿರುವ ಸಮಯದಲ್ಲಿ. **ಹೇಮುಕುಂದ**-ಓ ಮುಕ್ತಿದಾಯಕನಾದ ಶ್ರಿಯ : ಪತಿಯೇ, **ತವಾಗ್ರೇ**-ಮಹಾ ಸಮರ್ಥನಾಗಿ. ಆಶ್ರಿತನ ವಿಷಯದಲ್ಲೂ ಕಾರುಣ್ಯವಾತ್ಸಲ್ಯಾದಿ ಗುಣಯುಕ್ತನಾದ ನಿನ್ನ ಎದುರಿಗೆ, **ಸಂಪ್ರತಿ** ಇಂತಹ ಕಷ್ಟವೂ ದೈನ್ಯವೂ ನನಗೆ ಪ್ರಾಪ್ತವಾಗಿ, ನನಗೆ ಗತಿ ಹೇಗೆ ಎಂದು ಚಿಂತಿಸುತ್ತಿರುವ ವೇಳೆಯಲ್ಲಿ, **ಅಗತಿಃ**-ಬೇರೆ ಇನ್ನು

ಯಾವ ಗತಿಯೂ ಇಲ್ಲದವನಾಗಿ, **ಕ್ರಂದಾಮಿ**-ಅಳುತ್ತಿದ್ದೇನೆ. ಹೀಗೆ ತಮ್ಮ ಆಕಿಂಚನ್ಯವನ್ನು, ಅನನ್ಯಗತಿಕತ್ವವನ್ನೂ ಪುನಃ ಸಮರ್ಥಿಸಿ, ಆ ಕಾರಣದಿಂದಲೇ ಹಿಂದಿನ ಶ್ಲೋಕದಲ್ಲಿ ಭರನ್ಯಾಸಕ್ಕೆ ತಮಗೆ ಅಧಿಕಾರವೆಂದು ಹೇಳಿ ಅದನ್ನೇ ಪುನಃ ಸಮರ್ಥಿಸಿ ಹೇಳಿದನು.

**ಉಪಪಾದನೆಯು—ನಿಂದಿತಕರ್ಮವು**-ಯಾವುದು ಎಂದರೆ “ **ಯತ್ತ್ವಾರ್ಯಾಃ ಕ್ರಿಯಮಾಣಂ ಪ್ರಶಂಸನ್ತಿ ಸಧರ್ಮಃ । ಯದ್ಗರ್ಹನ್ತೇ ಸೋಧರ್ಮಃ** ”-ಎಂದು ಆಪಸ್ತಂಭರು ಹೇಳಿರುವ ಹಾಗೆ ಅನುಷ್ಠಿಸಲ್ಪಟ್ಟ ಯಾವ ಕರ್ಮವನ್ನು ಶಾಸ್ತ್ರಾನುಮತಿಯಿರುವದರಿಂದ ಪೂಜ್ಯರು ಶ್ಲಾಘಿಸುತ್ತಾರೋ ಅದೇ ಧರ್ಮವು; ಯಾವುದನ್ನು ನಿಂದಿಸುವರೋ ಅದು ಅಧರ್ಮವು. ಆದುದರಿಂದ ಶಾಸ್ತ್ರಾನುಮತಿ, ಮತ್ತು ಮಹಾ ಭಾಗವತಾನುಮತಿ ಎರಡೂ ಆವಶ್ಯಕವು. ಕಾಮ್ಯಕರ್ಮಗಳಿಗೆ ಶಾಸ್ತ್ರಾನುಮತಿಯುಂಟು; ಮಹಾ ಭಾಗವತರಿಗೆ ಅವು ಮೋಕ್ಷಪ್ರತಿ ಬಂಧಕವಾದುದರಿಂದ ನಿಂದಿತವಾದವೇ. ಆದುದರಿಂದ **ನಿಂದಿತ**ಕರ್ಮ ಶಬ್ದದಲ್ಲಿ ಕಾಮ್ಯಕರ್ಮಗಳೂ ಸೇರಿದವು. ಇಂತಹ ಕರ್ಮಗಳು ಎಷ್ಟು ಉಂಟೋ, ಅವುಗಳಲ್ಲಿ ಪ್ರತಿಯೊಂದನ್ನೂ ಅನೇಕಾವರ್ತಿ ತಾವು ಪೂರ್ವಜನ್ಮಗಳಲ್ಲಿ ಅನುಷ್ಠಿಸಿರಬಹುದೆಂದು ಹೇಳಿಕೊಂಡರು. ಸಂಶಯ ಏತಕ್ಕೆ? ನಾವು ಪೂರ್ವಜನ್ಮಗಳಲ್ಲಿ ಮಾಡಿದುದರ ಸ್ಮೃತಿಯೇ ಇಲ್ಲದಿರುವಾಗ ಸಂದೇಹವೇತಕ್ಕೆ? ಈಗ ಬದ್ಧಾವಸ್ಥೆಯಲ್ಲಿ ಇನ್ನೂ ಜಗನ್ನಿರ್ಮಾಣ ಕಾಲ ಮೊದಲುಗೊಂಡು ಇದುವರೆಗೂ ಈ ಲೋಕದಲ್ಲೇ ದುಃಖಿಸುತ್ತಿರುವದೇ ಸಾಕ್ಷಿಯಲ್ಲವೇ? ಆದುದರಿಂದಲೇ ಸೀತೆಯು ಆಂಜನೇಯನನ್ನು ಕುರಿತು “ **ನಕಶ್ಚಿನ್ನಾಪರಾಧ್ಯತಿ** ”-(ರಾ. ಯುದ್ಧ) ಈ ಲೋಕದಲ್ಲಿ ಅಪರಾಧಿಯಲ್ಲದವನು ಯಾರು ತಾನೇ ಇದ್ದಾರೆಂದು ಕೇಳಿರುತ್ತಾಳೆ. ಪ್ರತ್ಯಕ್ಷಕ್ಕೆ ಬೇರೆ ಪ್ರಮಾಣ ಬೇಕೆ ಎಂಬ ಭಾವವು. ಆದುದರಿಂದಲೇ **ಲೋಕೇ**-ಎಂಬ ಪ್ರಯೋಗವು. ಲೋಕೇ ಎಂದರೆ ಲೋಕದಲ್ಲಿ ಎಂದು ಸಾಮಾನ್ಯವಾಗಿ ಅರ್ಥವಾದರೂ **ಲೋಕ್ಯತೇ ಅನೇನ**-ಎಂಬ ವ್ಯುತ್ಪತ್ತಿಯ ಮೂಲಕ ಲೋಕವೆಂದರೆ ಪ್ರಮಾಣವು. ಈ ಸಂದರ್ಭದಲ್ಲಿ ಅಪ್ರಮಾಣಿಕವಾದುದು ಏನೂ ಇಲ್ಲವೆಂದಾಗಬಹುದು. ಅಥವಾ ಶಾಸ್ತ್ರರೂಪ ಸ್ಮೃತಿಪ್ರಮಾಣ ವಿಶೇಷಗಳಿಂದಲೂ ನಿಂದಿತವಾದಕರ್ಮಗಳನ್ನೇ ಅನುಷ್ಠಿಸಿರುವೆನೆಂಬ ಭಾವವು. **ಸಹಸ್ರಶಃ**-ಎಂದು ಹೇಳಿರುವದು ಆನಿಂದಿತಕರ್ಮಗಳನ್ನೇ ಅನೇಕ ಸಲ ಮಾಡಿರುತ್ತೇನೆ ಎಂಬ ಭಾವವನ್ನು ತೋರಿಸುತ್ತದೆ. “ **ಶತಂಸಹಸ್ರಮಯುತಂ ಸರ್ವಮಾನಂತ್ಯವಾಚಕಮ್** ”-ಎಂಬ ನಿಘಂಟುವಿನ ಪ್ರಕಾರ ಆನಂತ್ಯವನ್ನು ಬೋಧಿಸುತ್ತದೆ.

ಈ ಪಾಪಗಳಲ್ಲಿ ಕೆಲವು ಪ್ರಾಯಶ್ಚಿತ್ತದಿಂದ ನಿವರ್ತಿಸುತ್ತವೆ. ಇನ್ನು ಕೆಲವಕ್ಕೆ

ಪ್ರಾಯಶ್ಚಿತ್ತವೇ ಇಲ್ಲವೆಂದು ಹೇಳಲ್ಪಟ್ಟಿವೆ. ಕಿಷ್ಕಿಂಧಾಕಾಂಡದಲ್ಲಿ ( ) **ಬ್ರಹ್ಮಘ್ನೇಚ ಸುರಾಪೇಚ ಚೋರೇ ಭಗ್ನವ್ರತೇ ತಥಾ | ನಿಷ್ಕೃತಿರ್ವಿಹಿತಾ ಸದ್ಭಿಃಕೃತಘ್ನೇ ನಾಸ್ತಿ ನಿಷ್ಕೃತಿಃ** "-ಎಂದು ಹೇಳಲ್ಪಟ್ಟಿರುತ್ತದೆ. ಮನುವು " **ಬಾಲಘ್ನಾಂಶ್ಚ ಕೃತಘ್ನಾಂಶ ವಿಶುದ್ಧಾನಪಿ ಧರ್ಮತಃ | ಶರಣಾಗತ ಹಂತ್ಯಂಶ್ಚಸ್ತ್ರೀ ಹಂತ್ಯಾಶ್ಚನ ಸಂವಸೇತ್** "-ಬಾಲಕರನ್ನು ಕೊಲ್ಲುವವರು, ಉಪಕಾರಸ್ಮರಣೆ ಇಲ್ಲದವರು, ಶರಣಾಗತರನ್ನು ಕೊಲ್ಲುವವರು, ಸ್ತ್ರೀಗಳನ್ನು ಸಂಹಾರ ಮಾಡುವವರು ಇಂತವರು ನಿತ್ಯನೈಮಿತ್ತಿಕಾದಿಗಳನ್ನು ಶಾಸ್ತ್ರರೀತ್ಯಾ ಅನುಷ್ಠಿಸುವರಾದರೂ ಕೂಡ, ಅಂತವರೊಂದಿಗೆ ಸೇರಕೂಡದು. ಸೇರಿದರೆ ಪತಿತರಾಗುವರು ಎಂಬ ಅಭಿಪ್ರಾಯದಿಂದ ಹೇಳಿರುತ್ತಾರೆ. ರಘು ಮಹಾರಾಯನು ರಾಕ್ಷಸನನ್ನು ಕುರಿತು ಹೇಳುತ್ತಾನೇನೆಂದರೆ—" **ಶಕ್ತೋಽಪಿ ರಕ್ಷಣೇ ಲೋಭಾದ್ಭಯಾದ್ವಾ ಶರಣಾಗತಮ್ | ಯಸ್ತ್ಯಜೇತ್ಪುರುಷೋ ಲೋಕೇ ಬ್ರಹ್ಮಹತ್ಯಾ ಸವಿಂದತಿ** "-ಶರಣಾಗತನಾದವನನ್ನು ರಕ್ಷಿಸುವದರಲ್ಲಿ ಶಕ್ತನಾಗಿದ್ದರೂ, ಯಾವುದಾದರೂ ಆಶೆಯಿಂದಾಗಲಿ, ಭಯದಿಂದಾಗಲಿ, ಯಾವ ಪುರುಷನು, ಈ ಲೋಕದಲ್ಲಿ ತ್ಯಜಿಸಿಬಿಡುವನೋ, ಅವನು, ಬ್ರಹ್ಮಹತ್ಯದೋಷವು ಎಷ್ಟು ಪ್ರಬಲವೋ ಅಂತಹ ದೋಷವನ್ನು ಹೊಂದುವನು. ಮುಂದಕ್ಕೆ

" **ಪ್ರಾಯಶ್ಚಿತ್ತೇನ ಶುಧ್ಯನ್ತಿ ಮಹಾಪಾತಕಿನೋ ಹಿಯೇ |**
**ಶರಣಾಗತ ಹಂತ್ಯಣಾಂ ಶುದ್ಧಿಃಕ್ವಾಪಿನವಿಂದತೇ ||**
**ಪೂಯನ್ತೇ ಹಯಮೇಧೇನ ಮಹಾ ಪಾತಕಿನೋಹಿ |**
**ಶರಣಾಗತಿ ಹಂತಾರೋ ನತ್ವೇವ ರಜನೀಚರ ||** "

ಯಾವ ಮಹಾ ಪಾತಿಕಗಳೂ ಕೂಡ ಪ್ರಾಯಶ್ಚಿತ್ತದಿಂದ ಶುದ್ಧಿಯನ್ನು ಹೊಂದಬಹುದು. ಶರಣಾಗತರನ್ನು ಕೊಲ್ಲುವ ಪಾಪಿಗಳಾದವರಿಗೆ ಶುದ್ಧಿಯು ಎಂದಿಗೂ ಎಲ್ಲಿಯೂ ದೊರಕದು. ಮಹಾಪಾತಕಿಗಳಾದವರು ಅಶ್ವಮೇಧ ಯಜ್ಞದಿಂದ ಪರಿಶುದ್ಧರಾಗಬಹುದು. ಶರಣಾಗತರನ್ನು ಕೊಲ್ಲುವ ಮಹಾ ಪಾತಿಕಗಳಾದರೋ ಓ ರಾಕ್ಷಸನೇ ಎಂದಿಗೂ ಪರಿಶುದ್ಧರಾಗುವದಿಲ್ಲವು. ಇಂತಹ ಮಹಾ ಪಾತಕಗಳಾದ ನಿಂದಿತ ಕರ್ಮಗಳನ್ನು ಪೂರ್ವಜನ್ಮದಲ್ಲಿ ಮಾಡಿದ್ದರೂ ಮಾಡಿರಬಹುದೆಂದು ಹೇಳಿಕ್ಕೊಂಡರು. **ಯತ್**-ಎಂಬ ಪದದಲ್ಲಿ ಇಂತಹ ಮಹಾಪಾತಕಗಳೆಲ್ಲಾ ಸೇರಿದವು. ಹೀಗೆಯೇ ಇನ್ನೂ ಅನೇಕ ಪ್ರಮಾಣಗಳನ್ನು ಶ್ರೀ ನಿಗಮಾಂತರು ಉದಾಹರಿಸಿರುತ್ತಾರೆ. ಆವುಗಳಲ್ಲಿ ಇನ್ನು ಕೆಲವು ಯಾವುವೆಂದರೆ—" **ಶಾಸ್ತ್ರೇಷು ನಿಷ್ಕೃತಿರ್ದೃಷ್ಟಾ ಮಹಾ ಪಾತಕಿನಾ ಮಪಿ | ಶರಣಾಗತಹಂತುಸ್ತು ನ ದೃಷ್ಟಾ ನಿಷ್ಕೃತಿಃಕ್ವಚಿತ್** - ಮಹಾಪರಾಧ ಮಾಡಿದವರಿಗೂ ಕೂಡ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತಗಳು ಹೇಳಲ್ಪಟ್ಟಿವೆ. ಶರಣಾಗತನನ್ನು ಕೊಂದವನಿ

ಗಾದರೋ ಎಲ್ಲಿಯೂ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತವು ವಿಧಿಸಿರುವದಿಲ್ಲವು.

**" ಲೋಭಾದ್ದ್ವೇಷಾದ್ಭಯಾದ್ವಾಪಿ ಯಸ್ತ್ಯಜೇಚ್ಛರಣಾಗತಮ್ |**
**ಬ್ರಹ್ಮಹತ್ಯಾ ಸಮಂ ತಸ್ಯ ಪಾಪ ಮಾಹು ರ್ಮನೀಷಿಣಃ "**

ಲೋಭದಿಂದಲಾಗಲಿ, ದ್ವೇಷದಿಂದಲಾಗಲಿ, ಭಯದಿಂದಲಾಗಲಿ ಶರಣಾಗತನನ್ನು ಕೊಲ್ಲುವದು ಹಾಗಿರಲಿ, ಸುಮ್ಮನೆ ತ್ಯಜಿಸುವನೋ ಆತನ ಆ ಪಾಪವು ಬ್ರಹ್ಮ ಹತ್ಯಕ್ಕೆ-ಸಮಾನವಾದುದೆಂದು ಶಾಸ್ತ್ರಜ್ಞರು ಹೇಳುವರು.

ಶ್ರೀರಾಮಚಂದ್ರ ಪ್ರಭುವು, ವಿಭೀಷಣನು ಶರಣಾಗತನಾದ ಸಂದರ್ಭದಲ್ಲಿ ಹೇಳುತ್ತಾರೇನೆಂದರೆ-**"ಋಷೇಃ ಕಣ್ವಸ್ಯಪುತ್ರೇಣ ಕಂಡುನಾ ಪರಮರ್ಷಿಣಾ | ಶೃಣುಗಾಥಾಂ ಪುರಾಗೀತಾಂ ಧರ್ಮಿಷ್ಠಾಂ ಸತ್ಯವಾದಿನಾ | ಬದ್ಧಾಂಜಲಿ ಪುಟಂ ದೀನಂ ಯಾಚಂತಂ ಶರಣಾಗತಮ | ನಹನ್ಯಾಚ್ಚಾ ನೃಶಂಸ್ಯಾರ್ಥಮಪಿ ಶತ್ರುಂ ಪರಂತಪ | ಆರ್ತ್ತೋವಾ ಯದಿವಾದೃಪ್ತಃ ಪರೇಷಾಂ ಶರಣಾಗತಃ | ಅಪಿ ಪ್ರಾಣಾನ್ ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ | ಸಚೇದ್ಭಯಾದ್ವಾ ಲೋಭಾದ್ವಾ ಕಾಮಾದ್ವಾ ಪಿ ನ ರಕ್ಷತಿ | ಸ್ವಯಾಶಕ್ತ್ಯಾ ಯಥಾಸತ್ವಂ ತತ್ಪಾಪಂ ಲೋಕಗರ್ಹಿತಮ್ | ವಿನಷ್ಟಃ ಪಶ್ಯತ ಸ್ತಸ್ಯಾ ರಕ್ಷಿಣಶ್ಶರಣಾಗತಃ | ಆದಾಯ ಸುಕೃತಂತಸ್ಯ ಸರ್ವಂಗಚ್ಛೇದ ರಕ್ಷಿತಃ || ಆಸ್ವರ್ಗ್ಯಂ ಚಾಯಶಸ್ಯಂಚ ಬಲವೀರ್ಯವಿನಾಶನಮ್ "** -ಕಣ್ವಋಷಿಯ ಮಗನಾದ ಕಂಡು ಮಹರ್ಷಿಯು ತುಂಬಾ ಸತ್ಯವಾದಿಯು ಅವರಿಂದ ಕೊಂಡಾಡಲ್ಪಟ್ಟ, ಧರ್ಮಪ್ರತಿಪಾದಿಸುವ ದಿವ್ಯಸೂಕ್ತಿಯನ್ನು ಹೇಳುವೆನು ಕೇಳು. ಕೈಯನ್ನು ಮುಗಿದು, ದೈನ್ಯವನ್ನು ಹೊಂದಿ ಶರಣಾಗತಿಯ ಮೂಲಕ ರಕ್ಷಿಸು ಎಂದು ಪ್ರಾರ್ಥಿಸಿದರೆ, ಅವನು ಶತ್ರುವಾದರೂ ಕೂಡ, ಅಥವಾ ಆತನು ಲೋಕ ಹಿಂಸಕನಾದರೂ ಕೂಡ, ಲೋಕ ಹಿಂಸೆಯನ್ನು ಇನ್ನು ಮುಂದೆ ತ್ಯಜಿಸು ಎಂದು ಹೇಳಿ, ರಕ್ಷಿಸಲ್ಪಡ ತಕ್ಕದ್ದು; ಶರಣಾಗತನು ಆರ್ತನೇಯಾಗಲಿ, ಅಥವಾ ದೃಪ್ತನೇಯಾಗಲಿ, ರಕ್ಷಿಸಲು ಯೋಗ್ಯನು, ಇದೀಗ ಧರ್ಮಶೀಲನ ವೃತ್ತವು. ಅಂತಹ ಶರಣಾಗತನನ್ನು ಭಯದಿಂದಲೋ, ಭ್ರಮಜ್ಞಾನದಿಂದಲೋ, ಶಾಸ್ತ್ರವನ್ನು ತಿರಸ್ಕರಿಸಿ ಇಷ್ಟಬಂದ ರೀತಿಯಿಂದಲೋ, ಅಥವಾ ಅರ್ಥಾಪೇಕ್ಷೆಯಿಂದಲೋ, ತನಗಿರುವ ಶಕ್ತಿಗೆ ಅನುಗುಣವಾಗಿ ರಕ್ಷಿಸದೇ ಹೋದರೆ, ಆದರಿಂದುಂಟಾಗುವ ಪಾಪವು ಬಲಿಷ್ಠವು; ಹಿಂದೆ ಹೇಳಿದ ಹಾಗೆ ಭಗವನ್ನಿಗ್ರಹಕ್ಕೆ ಪಾತ್ರವಾಗುವುದು ಮಾತ್ರವೇ ಅಲ್ಲದೆ ಈ ಲೋಕದಲ್ಲೇ ಲೋಕಾಪವಾದಕ್ಕೆ ಗುರಿಯಾಗುವನು. ಇಷ್ಟು ಮಾತ್ರವೇ ಅಲ್ಲದೆ ಶರಣಾಗತನನ್ನು ರಕ್ಷಿಸದೇ ಹೋದವನು, ಆತನು ನೋಡುತ್ತಿದ್ದ ಹಾಗೆಯೇ ತನ್ನ ಶತ್ರುವಿನಿಂದ ನಷ್ಟನಾಗಿ ಹೋಗುವನು. ಆ ಶರಣಾಗತನನ್ನು ರಕ್ಷಿಸದೇ ಹೋದವನ ಪೂರ್ವಜನ್ಮಾದಿ ಸರ್ವಸುಕೃತಗಳನ್ನು ರಕ್ಷಿಸದವನು ಕೊಂಡುಹೋಗುವನು. ಹೀಗೆ ಈ

ನಾಲ್ಕು ಶ್ಲೋಕಗಳಿಂದ ಹೇಳಲ್ಪಟ್ಟ ಕಂಡು ಮಹರ್ಷಿ ವಾಕ್ಯದಿಂದ ಶರಣಾಗತ ರಕ್ಷಣೆಯನ್ನು ಮಾಡದವನಿಗೆ ಸ್ವರ್ಗವು ತಪ್ಪಿ ನರಕ ಪ್ರಾಪ್ತಿಯುಂಟಾಗುವುದು ; ಯಶಸ್ಸು ನಾಶವಾಗುವುದು; ಬಲವೀರ್ಯಗಳು ನಷ್ಟವಾಗುವುವು. ಹೀಗೆ **"ನಿಂದಿತ ಕರ್ಮ"** ಗಳಲ್ಲಿ ಶರಣಾಗತನನ್ನು ರಕ್ಷಿಸದಿರುವದು ತುಂಬಾ ಪ್ರಬಲವಾದ ಅಪ ರಾಧವು ; ಹಾಗೆ ಮಾತಾ ಪಿತೃಗಳನ್ನೂ ಗುರುಗಳನ್ನೂ ಕೊಲ್ಲುವುದು ಪರಸ್ತ್ರೀ ಗಮನ, ಕೃತಘ್ನನಾಗಿರುವಿಕೆ ಇವೇ ಮೊದಲಾದ ಅಪರಾಧಗಳನ್ನು ಪೂರ್ವಜನ್ಮ ಗಳಲ್ಲಿ ಅನೇಕಸಲ ಮಾಡಿರಬಹುದೆಂದು ಹೇಳಿಕೊಂಡರು. ಇವುಗಳಿಗೆ ಪ್ರಾಯ ಶ್ಚಿತ್ತಗಳನ್ನು ತಮ್ಮಿಂದ ಅನುಷ್ಠಿಸಲು ಸಾಧ್ಯವೇ ಇಲ್ಲವೆಂಬ ಭಾವದಿಂದ ಹೇಳಿ ಕೊಂಡರು.

**ಯನ್ನಮಯಾ ವ್ಯಧಾಯೀತಿನ**– ನನ್ನಿಂದ ಮಾಡಲ್ಪಡದೇ ಇರದ ಅಪ ರಾಧಗಳೇ ಇಲ್ಲವೆಂದು ಹೇಳಿದುದರಿಂದ, ಜಗತ್ಸೃಷ್ಟಿ ಮೊದಲು ಇದುವರೆಗೂ ಎಷ್ಟೆಷ್ಟು ಅಪರಾಧಗಳು ಎಷ್ಟೆಷ್ಟು ಸಲ ಮಾಡಲ್ಪಟ್ಟವೆಂದು ಹೇಳಲು ಸಾಧ್ಯವೇ ಇಲ್ಲವು. ಏಕೆಂದರೆ ಹಿಂದೆ ಮಾಡಿದ ದುಷ್ಕರ್ಮಗಳ ಸ್ಮೃತಿಯು ಈ ಲೋಕದಲ್ಲಿ ಉಂಟಾಗುವದು ಅತಿ ದುಸ್ತರವು. ಸಾಧಾರಣವಾಗಿ ಇಲ್ಲವೇ ಇಲ್ಲವೆಂಬ ಭಾವವು. **ಮಯಾ** ಎಂಬುದರಿಂದ ಅನಾದಿಯಾಗಿ ಬಂದ ಸಂಸಾರವೆಂಬ ಕಾದ ಮರಳು ಕಾಡಿನಲ್ಲಿ ಸಂಚರಿಸಿ ಕಾಲೆಲ್ಲಾ ಬೆಂದುಹೋಗಿರುವನೆಂಬುದು ಸೂಚಿತವು. ದುಷ್ಟೇಂ ದ್ರಿಯಗಳ ಹಾವಳಿಗೆ ಸಿಕ್ಕಿ ಕಾಮ ಕ್ರೋಧ ಲೋಭಗಳಿಗೆ ವಶನಾಗಿ ಸಹಸ್ರಾಪ ರಾಧಗಳನ್ನು ಎಸೆಗಿದ **ಮಯಾ** ಎಂಬ ಭಾವವು. ಆ ಕಾರಣದಿಂದ **ಕ್ರಂದಾಮಿ** ಘಟ್ಟಿಯಾಗಿ ಕೂಗಿ ಅಳುತ್ತಿದ್ದೇನೆಂಬ ಭಾವವು.

**ಸೋಹಂ**– ಅಂತಹ ನಾನು ಎಂಬುದರಿಂದ ಲೆಖ್ಖ ಮಾಡಲು ಕೂಡ ಸಾಧ್ಯವಿ ಲ್ಲದ ಹಾಗೆ ಅಪರಾಧಗಳನ್ನು ಎಸೆಗಿ, ಅವುಗಳ ಜ್ಞಾನವೂ ಇಲ್ಲದೆ ಆ ಪಾಪಗಳಿಗಾಗಿ ಯಾವ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸಬೇಕೆಂಬ ಜ್ಞಾನವೂ ಇಲ್ಲದೆ ಮತ್ತೂ ಈ ಒಂದು ಜನ್ಮದಲ್ಲಿ ಅವುಗಳಿಗಾಗಿ ಪ್ರಾಯಶ್ಚಿತ್ತವನ್ನು ಅನುಷ್ಠಿಸುವದು ಅಸಾ ಧ್ಯವಾದ ಇಂತಹ ದುಸ್ಥಿತಿಯಲ್ಲಿರುವವನು ನಾನು ಎಂಬ ಭಾವವು ತೋರಿಬರುತ್ತದೆ.

**ವಿಪಾಕಾವಸರೇ**- ಎಂಬುದರಿಂದ ಪ್ರಾಯಶ್ಚಿತ್ತಗಳಲ್ಲಿ ಯಾವುದನ್ನು ಅನು ಷ್ಠಿಸತಕ್ಕವು ಎಂಬುದು ತಿಳಿಯದೆ ಕಾಲಾತಿಕ್ರಮವಾಗಿ ಈಗ ಅವು ಸಾಧ್ಯವೇ ಇಲ್ಲದಿರುವ ಸಂದರ್ಭದಲ್ಲೂ ಮತ್ತು ಅವುಗಳ ಫಲವನ್ನು ಅನುಭವಿಸಿಯೇ ತೀರ ಬೇಕಾಗಿರುವ ಈ ದುಸ್ಥಿತಿಯಲ್ಲಿ ಎಂಬ ಭಾವವು. ಸಂಪ್ರತಿ ಎಂಬುದು ವಿಪಾಕಾವಸರೇ ಎಂಬುದರೊಂದಿಗೆ ಅನ್ವಯಿಸಕ್ಕಾದ್ದು. **ಸಂಪ್ರತಿ** ಶಬ್ದಾಭಿಪ್ರಾಯವೇನೆಂದರೆ, ನನ್ನ ಅನುಗ್ರಹದಿಂದುಂಟಾದ ಸಾಧು ಸಮಾಗಮ ಆಚಾರ್ಯ ಪ್ರಾಪ್ತಿಗಳ ಮೂಲಕ

**ಪ್ರಾಪ್ತವಾದ ಶಾಸ್ತ್ರಜ್ಞಾನಗಳ ಮೂಲಕ** ಇಷ್ಟು ಅಪರಾಧಗಳು ತೊಲಗುವ ಬಗೆ ಹೇಗೆ ಎಂಬ ಯೋಚನೆಯುಂಟಾಗಿ ದಿಕ್ಕು ತೋಚದೇ ಇರುವ ಅವಸ್ಥೆಯು ಒದಗಿರುವಾಗ ಎಂಬ ಭಾವವನ್ನು ಸೂಚಿಸುತ್ತದೆ.

ಇಂತಹ ಪರಿಸ್ಥಿತಿಯಲ್ಲಿ **ಮುಕುಂದ** ಎಂದು ಭಗವಂತನನ್ನು ಸಂಬೋಧಿಸುತ್ತಾರೆ. ಆತನನ್ನು ಶರಣಾಗತಿಯ ಮೂಲಕ ಆಶ್ರಯಿಸಿದರೆ ಸಾಕು, ಅನಾದಿ ಕಾಲದಿಂದ ಪ್ರವೃತ್ತವಾದ ಅಪರಾಧ ಸಮೂಹಗಳನ್ನೆಲ್ಲಾ ಪರಿಗಣಿಸದೆ ಆಶ್ರಿತ ವಾತ್ಸಲ್ಯಯುಕ್ತನಾಗಿ ಮುಕ್ತಿಯನ್ನು ಕೊಡುವವನು ಎಂಬರ್ಥವು. "**ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ। ನ ಸ್ಮರತ್ಯಪರಾಧಾನಾಂ ಶತಮಪ್ಯಾತ್ಮವತ್ತಯಾ**" ಸಕೃಚ್ಛರಣಾಗತಿಯನ್ನು ಕಥಂಚಿದುಪಕಾರವನ್ನಾಗಿ ಭಾವಿಸಿ, ಅಂತಹ ಪ್ರಪನ್ನನು ಶತಾಪರಾಧವನ್ನು ಮಾಡಿದ್ದರೂ ಅವುಗಳನ್ನು ಶ್ರೀ ರಾಮಚಂದ್ರ ಪ್ರಭುವು ಸ್ಮರಿಸುವನಲ್ಲವೆಂದು ಹೇಳಲ್ಪಟ್ಟಿರುತ್ತದೆ. ಸಹಸ್ರ ನಾಮದಲ್ಲಿ ಶ್ರೀ ವಿಷ್ಣುವಿಗೆ "**ಅವಿಜ್ಞಾತಾ**" ಎಂಬ ನಾಮದಲ್ಲೂ, **ಅವಿಜ್ಞಾತಾ ಹಿ ಭಕ್ತಾನಾಂ ಆಗಸ್ಸು ಕಮಲೇಕ್ಷಣಃ** ಎಂಬಲ್ಲಿ ಹೇಳಿರುವ ಹಾಗೆ ಪ್ರಪನ್ನರ ಅಪರಾಧಗಳನ್ನು ತಿಳಿಯದೇ ಇರುವನೆಂಬ ಭಾವದಿಂದ ಸಂಬೋಧನೆಯು. ಹಾಗೆಯೇ ಗೀತೆಯಲ್ಲೂ (9–30) ಹೇಳಿರುತ್ತದೆ–"**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್। ಸಾಧುರೇವ ಸ ಮಂತವ್ಯಸ್ಸಮ್ಯಗ್ವ್ಯವಸಿತೋ ಹಿ ಸಃ**" ಈಗ ಆಶ್ರಯಿಸಿದವನು ಹಿಂದೆ ಎಷ್ಟು ದುರಾಚಾರನಾಗಿದ್ದರೂ ಆತನು ಸಾಧುವಾದವನೆಂದೇ ತಿಳಿಯತಕ್ಕದು; ಏಕೆಂದರೆ ಇನ್ನು ಮುಂದಕ್ಕೆ ಹಾಗಿರುವುದಿಲ್ಲವೆಂಬ ದೃಢಸಂಕಲ್ಪವುಳ್ಳವನಾಗಿರುತ್ತಾನಲ್ಲವೇ. ಶ್ರೀ ಪುಂಡರೀಕೋಪಾಖ್ಯಾನದಲ್ಲಿ

**ಅಶ್ವಮೇಧ ಶತೈರಿಷ್ಟ್ವಾ ವಾಜಪೇಯ ಶತೇನ ಚ.**
**ನ ಪ್ರಾಪ್ನುವಂತಿ ಸುಗತಿಂ ನಾರಾಯಣ ಪರಾಙ್ಮುಖಾಃ**
**ಯೇ ನೃಶಂಸಾ ದುರಾತ್ಮಾನಃ ಪಾಪಾಚಾರರತಾಸ್ತಥಾ**
**ತೇಪಿ ಯಾಂತಿ ಪರಂಧಾಮ ನಾರಾಯಣಸಮಾಶ್ರಯಾಃ**

ಶತಾಶ್ವಮೇಧಗಳಿಂದಲೂ ವಾಜಪೇಯ ಶತದಿಂದಲೂ, ನಾರಾಯಣನನ್ನು ಆಶ್ರಯಿಸದವರಿಗೆ ಒಳ್ಳೇಗತಿ ಯಿಲ್ಲವು, ಎಷ್ಟು ಪಾಪಿಷ್ಠನಾಗಿ ದುರಾಚಾರಿಯಾಗಿದ್ದರೂ ಶ್ರೀಮನ್ನಾರಾಯಣನನ್ನು ಆಶ್ರಯಿಸಿದವನು ದಿವ್ಯ ವೈಕುಂಠವನ್ನು ಹೊಂದುವನೆಂದು ಹೇಳಿರುತ್ತದೆ.

**ಮಯಾ** ಎಂದು ಹೇಳಿಕೊಂಡ ಭಾವವೇನೆಂದರೆ, ಶರೀರದ ಇಂದ್ರಿಯ ಹಾವಳಿಗೆ ಸಿಕ್ಕಿ, ಕಾಮ ಕ್ರೋಧ ಲೋಭಾದಿಗಳಲ್ಲೇ ಪ್ರವೃತ್ತಿಯು ಬಹು ಬಲಿಷ್ಠವಾಗಿರುವ ನನ್ನಿಂದ ಎಂಬ ಭಾವವು. ಅಶಾಶ್ವತಗಳಾದ ಅಲ್ಪಕಾಲಿಕ ಸುಖೋಪಭೋಗಗಳಲ್ಲೇ ಆಸಕ್ತಿಯಿರುವ ನನ್ನಿಂದ ಎಂಬ ಭಾವವು ತೋರಿಬರುತ್ತದೆ.

ಭೋಗಗಳೆಂಬ ಮರಳುಕಾಡಿನಲ್ಲಿ ಸಂಚರಿಸುತ್ತಿರುವ ಮಯಾ ಎಂಬರ್ಥವು. ಕ್ರಂದಾಮಿ ಎಂಬಲ್ಲಿ ತೋರಿಸಿರುವ ಅಳೋಣವು ಎರಡು ಕಾರಣಗಳಿಂದುಂಟಾಗ ಬಹುದು. ಅಶ್ರೇಯಸ್ಸು ಎಲ್ಲಿ ಉಂಟಾಗುತ್ತದೋ ಎಂಬ ಭಯದಿಂದಾಗಲಿ ಅಥವಾ ಪರಮ ಶ್ರೇಯಸ್ಸು ತಪ್ಪಿ ಬಂಧನದಲ್ಲೇ ಎಲ್ಲಿ ಇರಬೇಕಾಗುತ್ತದೋ ಎಂಬು ದರಿಂದಾಗಲಿ ಪ್ರಾಪ್ತವು. ಇಲ್ಲಿ ಎರಡೂ ಉಂಟೆಂಬ ಭಾವವು.

**ಸೋಽಹಮ್**– ಅಂತಹ ನಾನು ಎಂಬುದರಿಂದ ಅಂತಹ ಸಹಸ್ರಾಪರಾಧಗ ಳನ್ನು ಹೇಗೆ ಕಳೆದುಕೊಳ್ಳಬೇಕೆಂಬ ಜ್ಞಾನವೇ ಇಲ್ಲದವನು; ಮತ್ತು ಯಾವ ಅಪರಾಧಗಳನ್ನು ಮಾಡಿದೆನೆಂಬುದೇ ತಿಳಿಯದಿರುವ ಸಂದರ್ಭದಲ್ಲಿ ಯಾವ ಪ್ರಾಯ ಶ್ಚಿತ್ತಗಳನ್ನು ಅನುಷ್ಠಿಸತಕ್ಕದ್ದು ಎಂಬುದರ ಜ್ಞಾನವೇ ಇಲ್ಲಸ, **ಅಂತಹನಾನು** ಎಂಬರ್ಥವು.

**ವಿಪಾಕಾವಸರೇ**– ಈಗಲಾದರೋ ನಿನ್ನ ಅನುಗ್ರಹದಿಂದುಂಟಾದ ಸಾಧು ಸಮಾಗಮ ಆಚಾರ್ಯಪ್ರಾಪ್ತಿ ಶಾಸ್ತ್ರಜ್ಞಾನ ಮೂಲಕವಾಗಿ ಈ ಅಪರಾಧಗಳಿ ಗಾಗಿ ಯಾವ ಉಪಾಯವನ್ನು ಹುಡುಕಿ ಪ್ರಾಯಶ್ಚಿತ್ಯಗಳನ್ನು ಅನುಷ್ಠಿಸಿ ತಪ್ಪಿ ಸಿಕೊಳ್ಳಲಿ, ಇಲ್ಲವಾದರೆ ಪಾರಬ್ಧರೂಪದಲ್ಲಿ ಎಷ್ಟು ದುಃಖಗಳನ್ನು ಅನುಭವಿಸ ಬೇಕಾಗುತ್ತದೆ, ಇತ್ಯಾದಿ ಯೋಚನೆಗಳು ಪ್ರಾಪ್ತವಾಗಿ ದಿಕ್ಕುತೋಚದೇ ಇರುವ ಸಂದರ್ಭದಲ್ಲಿ ಎಂಬ ತಾತ್ಪರ್ಯವು. ಆದುದರಿಂದ **ಕ್ರಂದಾಮಿ** ಘಟ್ಟಿಯಾಗಿ ಕೂಗಿ ಅಳುತ್ತೇನೆಂಬ ಭಾವವು.

**ಮುಕುಂದ** ಎಂಬ ಸಂಬೋಧನೆಯಿಂದ ಆಶ್ರಿತರ ವಿಷಯದಲ್ಲಿ ಅನಾದಿ ಕಾಲದಿಂದಲೂ ಪ್ರವೃತ್ತವಾದ ಸಹಸ್ರಾಪರಾಧಗಳನ್ನೂ ಪರಿಗಣಿಸದೆ "**ಅವಿಜ್ಞಾತಾ**" ಎಂದು ಸಹಸ್ರನಾಮದಲ್ಲಿ ಹೇಳಿರುವ ಹಾಗೆ ರಕ್ಷಿಸುವವನು ಆಶ್ರಿತ ವಾತ್ಸಲ್ಯ ಜಲಧಿಯು ಎಂಬುದು ಹೇಳಲ್ಪಟ್ಟಿತು; **ದುರಾಚಾರೋಽಪಿ ಸರ್ವಾಶೀ ಕೃತಘ್ನೋ ನಾಸ್ತಿಕಃ ಪುರಾ । ಸಮಾಶ್ರಯೇದಾದಿದೇವಂ ಶ್ರದ್ಧಯಾಶರಣಂ ಯದಿ ॥ ನಿರ್ದೋಷಂ ವಿದ್ಧಿತಂ ಜಂತುಂಪ್ರಭಾವಾತ್ಪರಮಾತ್ಮನಃ** ಮೊದಲು ದುರಾಚಾರನಾಗಿಯೂ ದೋಷ ದುಷ್ಟಾನ್ನವನ್ನು ತಿಂದವನಾದರೂ ಕೃತಘ್ನನಾದರೂ, ನಾಸ್ತಿಕನಾದರೂ ಸರ್ವೇಶ್ವರನನ್ನು ಶ್ರದ್ಧೆಯಿಂದ ಉಪಾಯವನ್ನಾಗಿ ಭಾವಿಸಿ ಆಶ್ರಯಿಸತಕ್ಕದ್ದು. ಪರಮಾತ್ಮನ ಕೃಪಾಪ್ರಭಾವದಿಂದ ಅಂತಹ ಆಶ್ರಯಿಸಿ ದವನನ್ನು ದೋಷರಹಿತನೆಂದು ತಿಳಿ.

**ತವಾಗ್ರೇ** – ನಿನ್ನ ಸಮ್ಮುಖದಲ್ಲಿ, ನೀನು ಎಂತವನೆಂದರೆ, ಮೇಲೆ ಹೇಳಿದ ಹಾಗೆ "**ಸಕೃದೇವ**" ಎಂಬ **ಅಮೋಘೋಕ್ತಿ**ಯಿಂದ ಶರಣಾಗತರ ರಕ್ಷಣೆಯೇ ತನ್ನ ವ್ರತ ಸಂಕಲ್ಪವೆಂದೂ, ಆತನು ಎಂತಹ ಅಪರಾಧಿಯೇ ಆಗಲಿ, "**ಯದಿ**

**ವಾರಾವಣಸ್ಸಯಂ**" ಎಂದು ಹೇಳಿ, ಆತನ ಕುಲಗೋತ್ರ ಉಚ್ಚಾವಚ ಗುಣ ಬೇಧಗಳೊಂದನ್ನೂ ಅಪೇಕ್ಷಿಸದೆ, ನೋಡದೆ, ಮಾಡಿದ ಸಹಸ್ರಾಪರಾಧಗಳನ್ನೂ ಪರಿಗಣಿಸದೆ, "**ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ**" ಎಂದು ಹೇಳಿರುವನು. ಮತ್ತು "**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ**" ವೆಂದೂ ಹೇಳಿದವನು. ಶರಣಾಗತ ರಕ್ಷಣೆಗೆ ಬೇಕಾದ ಸಾಮರ್ಥ್ಯ ದಯಾ ಸೌಶೀಲ್ಯ ಸೌಲಭ್ಯಾದಿ ಮಹಾಗುಣಗಳನ್ನುಳ್ಳವನು; ಇಂತವನ ಎದುರಿಗೆ ಅಳುವುದು ಪ್ರಯೋಜನಕರವೆಂದು ಕ್ರಂದಾಮಿ. ಏತಕ್ಕೆಂದರೆ "**ಮಾಶುಚಃ**" ಅಳಬೇಡವೆಂದು ಹೇಳಿ ಅನುಗ್ರಹಿಸುವನು ಎಂಬ ದೃಢನಂಬಿಕೆಯುಳ್ಳವನಾದುದರಿಂದಲೇ ನಾನು **ಕ್ರಂದಾಮಿ** ಅಳುತ್ತಾ ಇರುವೆನು- ಅಂತವನ ಪಾದಕಮಲವನ್ನು ಘಟ್ಟಿಯಾಗಿ ಹಿಡಿದುಕ್ಕೊಂಡರೆ "**ಸಭ್ರಾತುಶ್ಚರಣೌಗಾಢಂ ನಿಪೀಡ್ಯ ರಘುನಂದನಃ**" ಎಂಬಲ್ಲಿ ಲಕ್ಷ್ಮಣನಿಗೆ ಅನುಗ್ರಹಿಸಿದ ಹಾಗೆ ನನಗೂ ಅನುಗ್ರಹಿಸುವನು ಎಂಬ ಭಾವನೆಯಿಂದ ಅಳುತ್ತೇನೆ. "**ಹಾ ಕೃಷ್ಣ ದ್ವಾರಕಾ ವಾಸಿನ್ ಕ್ವಾಸಿ ಯಾದವ ನಂದನ**" ಎಂದು ಹೇಳಿದುದನ್ನು ಸ್ಮರಿಸಿ ಶ್ರೀಕೃಷ್ಣನು ಇವರುಗಳ ಕಷ್ಟವನ್ನು ವಿಚಾರಿಸುವದಕ್ಕಾಗಿ ಬಂದಾಗ,

> **"ಕುಲೇ ಮಹತಿ ಜಾತಾಸ್ಮಿ ದಿವ್ಯೇನ ವಿಧಿನಾ ಕಿಲ |**
> **ಪಾಂಡವಾನಾಂ ಪ್ರಿಯಾ ಭಾರ್ಯಾಸ್ನುಷಾ ಪಾಂಡೋರ್ಮಹಾತ್ಮನಃ |**
> **ಕೇಶಗ್ರಹ ಮನುಪ್ರಾಪ್ತಾ ಕಾನು ಜೀವೇನ ಮಾದೃಶೀ |**
> **ಪಂಚಾನಾ ಮಿಂದ್ರಕಲ್ಪಾನಾಂ ಪ್ರೇಕ್ಷತಾಂ ಮಧುಸೂದನ"**
> **ಇತ್ಯುಕ್ತ್ವಾ ಪ್ರಾರುದತ್ಕೃಷ್ಣಾ ಮುಖಂ ಪ್ರಚ್ಛಾದ್ಯ ಪಾಣಿನಾ" ||**

ದ್ರೌಪದಿಯು ಹೇಳುತ್ತಾಳೇನೆಂದರೆ- "ನಾನು ಒಳ್ಳೇ ಕುಲದಲ್ಲೇ ಹುಟ್ಟಿದೆನು. ಅಗ್ನಿ ಸಾಕ್ಷಿಯಾಗಿ ಪಾಂಡವರಿಗೆ ಪ್ರಿಯಭಾರ್ಯೆ ಆದೆನು, ಮಹಾತ್ಮನಾದ ಪಾಂಡುವಿನ ಸೊಸೆಯು. ಹೀಗಿದ್ದರೂ ದುರುಳ ದುಶ್ಶಾಸನನಿಂದ, ಕೂದಲನ್ನು ಹಿಡಿದು ಸೆಳೆಯಲ್ಪಟ್ಟೆನು. ಇಂದ್ರಸಮರಾದ ಐದು ಜನ ಪತಿಗಳು ನೋಡುತ್ತಾ ಇಂತಹ ಅವಸ್ಥೆಯನ್ನು ಹೊಂದಿದೆನು. ಇಂತಹ ನಾನು ಜೀವಿಸಿದ್ದು ಫಲವೇನು ಎಂದು ಹೇಳಿ ಘಟ್ಟಿಯಾಗಿ ಮುಖವನ್ನು ಮುಚ್ಚಿಕ್ಕೊಂಡ ಅತ್ತಳು. ಆಗ ಶ್ರೀ ಕೃಷ್ಣನು **ಮಾಶುಚಃ** ಎಂದು ಹೇಳಿ, ಅವರೆಲ್ಲರನ್ನೂ ಕೊಂದು ನಿನ್ನನ್ನು ಪಾಂಡವರ ಪಟ್ಟಮಹಿಷಿಯಾಗಿ ಮಾಡುವೆನೆಂದು ಅನುಗ್ರಹಿಸಿದ ಹಾಗೆ ತಮಗೂ ಅನುಗ್ರಹವು ಸಿದ್ಧವೆಂದು **ಕ್ರಂದಾಮಿ** ಎಂದು ಹೇಳಿಕ್ಕೊಡರು. ಈ **ಕ್ರಂದಾಮಿ** ಎಂಬ ಪದವು "**ಗೋವಿಂದೇತಿ ಯದಾ ಕ್ರಂದತ್ಕೃಷ್ಣಾ ಮಾಂದೂರವಾಸಿನಮ್ | ಋಣಂ ಪ್ರವೃದ್ಧಮಿವಮೇ ಹೃದಯಾ ನ್ನಾಪಸರ್ಪತಿ**" ಎಂಬ ಶ್ಲೋಕವನ್ನು ಸೂಚಿಸುತ್ತದೆ.

ಕೃಷ್ಣನ ಎದುರಿಗೆ ದ್ರೌಪದಿಯ ಅಳೋಣವು ಹೇಗೆ ವ್ಯರ್ಥವಾಗಲಿಲ್ಲವೋ, ಹಾಗೆಯೇ ಗಜೇಂದ್ರನ ರೋದನವೂ ವ್ಯರ್ಥವಾಗಲಿಲ್ಲವೋ, ಹಾಗೆಯೇ ನನ್ನ ಆಕ್ರಂದನವೂ ವ್ಯರ್ಥವಾಗಲಾರದೆಂದು ನಂಬಿರುತ್ತೇನೆಂಬ ಭಾವವು ತೋರಿಬರುತ್ತದೆ. ತನ್ನ ಇಷ್ಟವನ್ನು ನಡೆಸಿಕೊಡಲು ಸಾಮರ್ಥ್ಯವೂ ಕರುಣೆಯೂ ಎರಡೂ ಇದ್ದವನ ಎದುರಿಗೆ ಅತ್ತರೆ ಫಲವುಂಟು. ಇಲ್ಲದವನ ಎದುರಿಗೆ ಪ್ರಾಜ್ಞನು ಅಳುವನೋ ? ಎಂದಿಗೂ ಇಲ್ಲವು. ಈ ತತ್ವವನ್ನು ಶ್ರೀ ರಘುವರ್ಯನೇ ಸ್ವತಃ ಪ್ರದರ್ಶಿಸಿರುತ್ತಾನೆ. ಈ ಎರಡು ಗುಣಗಳಿಲ್ಲದೇ ಇರುವ ಸಮುದ್ರರಾಜನನ್ನು ತಾನು ಆಗ್ರಹಿಸಿದ ಹಾಗೆ ಆಶ್ರಯಿಸಿದರೆ, ನಿರರ್ಥಕವಾಗುವುದರಲ್ಲಿ ಸಂದೇಹವಿಲ್ಲವು. ಸಂಸಾರ ಬಂಧವನ್ನು ತಪ್ಪಿಸಲು ಯೋಗ್ಯತೆ ಇಲ್ಲದಿರುವ ಬ್ರಹ್ಮ ರುದ್ರೇಂದ್ರಾದಿಗಳ ಎದುರಿಗೆ ಅತ್ತರೆ ಏನುಫಲವು? ಆದುದರಿಂದ ಇಲ್ಲಿ ಪರಮಪುರುಷನು ರಕ್ಷಿಸನೇ ಇರುವವನಲ್ಲವೆಂಬ ಮಹಾ ವಿಶ್ವಾಸವೂ, 'ಅಂತನರಲ್ಲಿ ಪರಮಾತ್ಮನ ಪರಮ ವಾತ್ಸಲ್ಯಾದಿಗಳೂ ಎರಡೂ ಈ ಶ್ಲೋಕದಲ್ಲಿ ಉಪಪಾದಿತವು.

ಹೀಗೆ **ಕ್ರಂದಾಮಿ** ಎಂದು ಹೇಳುವುದರಲ್ಲಿ ತಮಗೆ ಎಲ್ಲಿ ಪುನರ್ಜನ್ಮಪ್ರಾಪ್ತಿಯೋ ಎಂದು **ಭೀತೋಸ್ಮಿ** ಎಂದು ಹೇಳಿದಂತಾಯಿತು. ಇದನ್ನು ಶ್ರೀ ನಿಗಮಾಂತದೇಶಿಕರು ಚರಮಶ್ಲೋಕಾಧಿಕಾರದಲ್ಲಿ ಉಪಪಾದಿಸಿರುತ್ತಾರೆ "**ಅಹಂ ಭೀತೋಸ್ಮಿ ದೇವೇಶ ಸಂಸಾರೇಸ್ಮಿನ್ ಭಯಾವಹೇ | ತ್ರಾಹಿಮಾಂ ಪುಂಡರೀಕಾಕ್ಷ ನಜಾನೇ ಶರಣಂಪರಮ್।** " ಎಂಬುದೂ ಮತ್ತು "**ಅಥಪಾತಕ ಭೀತಸ್ತ್ವಂ ಸರ್ವಭಾವೇನ ಭಾರತ | ವಿಮುಕ್ತಾನ್ಯಸಮಾರಂಭೋ ನಾರಾಯಣ ಪರೋಭವ | ಸರ್ವಯೋಗ್ಯ ಮನಾಯಾಸ ಮಪ್ರಮಾದ ಮನೂಪಮಮ್ | ಪ್ರಣತಾರ್ತಿಹರಂ ವಿಷ್ಣುಂ ಶರಣಂ ಗನ್ತು ಮರ್ಹಸಿ** ನೀನು ಪಾಪಗಳಿಂದ ಭೀತನಾಗಿರುವದರಿಂದ ಶ್ರೀಮನ್ನಾರಾಯಣನನ್ನು ಆಶ್ರಯಿಸು. ಶರಣಾಗತಿಯೇ ಎಲ್ಲರಿಗೂ ಯೋಗ್ಯವಾಗಿ ಅನಾಯಾಸವಾಗ ಪ್ರಮಾದವಿಲ್ಲದೆಯೂ, ಅದಕೆ ಸಮನಾದ ಉಪಾಯವಿಲ್ಲದಿರುವುದರಿಂದ ಶ್ರೀ ಮಹಾವಿಷ್ಣುವನ್ನು ಶರಣ ಹೊಂದ್ಸು ಎಂಬ ಉಪದೇಶವು.

**ಅವತಾರಿಕೆಯು-** ಆಗಲಿ, ಈಸಂಸಾರವು ಸೃಷ್ಟಿ ಮೊದಲುಗೊಂಡು ಅನುಸರಿಸಿ ಬಹುಕಾಲದಿಂದ ಬಂದು, ಲೆಖ್ಖವಿಲ್ಲದ ಜನ್ಮಗಳನ್ನು ಎತ್ತಿರುವ ನಿನಗೆ ಈಗ ಏಕೆ ರೋದನವು ? ಎಂದರೆ ಈಗಲಾದರೋ ನಿನ್ನ ಕೃಪಾ ಮಹಿಮೆಯಿಂದ, ಸತ್ಕುಲವೂ, ಸಾಧುಸಮಾಗಮವೂ, ಸದುಪದೇಶವೂ ಎಲ್ಲವೂ ದೊರೆತು ಈಗಿರುವ ಸುಸ್ಥಿತಿಯು ಜ್ಞಾನವು ಲಭಿಸಿರುವ ಸಂಧರ್ಭದಲ್ಲಿ ನಾನು ಅನನ್ಯಗತಿಕನೆಂದೂ ನೀನೇ ಶರಣ್ಯನೆಂದೂ ನಾನು ತುಂಬಾ ಅಪರಾಧಿ ಎಂದು ಭಾವಿಸಿ ಅಳುತ್ತಾ ಇರುತ್ತೇನೆ. ಇಂತಹ ಸುಸಮಯವು ದೊರೆತಿರುವುದು ನಿನಗೆ ಮಾತ್ರವೇ ಪರಮ ಲಾಭವೆಂದೆನಿಸ

**ನಿಮಜ್ಜತೋಽನಂತ ಭವಾರ್ಣವಾಂತ |**
**ಶ್ಚಿರಾಯಮೇ ಕೂಲ ಮಿವಾಸಿ ಲಬ್ಧಃ ||**
**ತ್ವಯಾಪಿ ಲಬ್ಧಂ ಭಗವನ್ನಿದಾನೀ |**
**ಮನುತ್ತಮಂ ಪಾತ್ರಮಿದಂ ದಯಾಯಾಃ || ೨೪**

---

ಬೇಡ; ನಿನಗೂ ಸಹ ಪರಮ ಲಾಭವು; ನನ್ನಂತಹ ಅಪರಾಧ ಚಕ್ರವರ್ತಿಯು ನಿನ್ನ ಅಮೋಘವಾದ ಕೃಪೆಗೆ ವಿಷಯವಾಗಿ ಲಭಿಸುವದು ತುಂಬಾ ದುರ್ಲಭವು. ಆದುದರಿಂದ ಇಬ್ಬರೂ, ಹೀಗೆ ರಕ್ಷಕರಕ್ಷ್ಯಭಾವದಿಂದ ದೊರೆಯುವದು ಇಬ್ಬರಿಗೂ ಪರಮ ಲಾಭವೆನ್ನುತ್ತಾರೆ.

**ಅರ್ಥವು - ಹೇ ಭಗವನ್**– ಓಹೇಯ ಪ್ರತ್ಯನೀಕನಾಗಿ ಕಲ್ಯಾಣ ಗುಣಾ ಕರನಾಗಿರುವ ಲೋಕಗುರುವೇ, **ಅನಂತ ಭವಾರ್ಣವಾಂತಃ**;– ಅಪಾರವಾದ ಸಂಸಾರಸಮುದ್ರದ ಒಳಗೆ, ಮೇಲಕ್ಕೆ ಬರುವ ಸಂಭವವಾಗಲಿ ತೀರವನ್ನು ಹೊಂದುವ ಸಂಭವವಾಗಲಿ ಇಲ್ಲದೆ ಒಳಗೆ, **ನಿಮಜ್ಜತಃ**--ಚನ್ನಾಗಿ ಮುಳುಗಿ ಹೋಗಿರುವ, **ಮೇ**- ಹೀಗೆ ಮುಳುಗಿ ಒದ್ದಾಡುತ್ತಾ ಇದ್ದು ಇನ್ನು ಯಾವ ಗತಿ ಯೂ ಇಲ್ಲದೆ ಈ ಭವಸಮುದ್ರವನ್ನು ದಾಟುವ ಉಪಾಯ ತೋಚದಿರುವ ನನಗೆ, **ಚಿರಾಯ**- ಸೃಷ್ಟಿಮೊದಲು ಇದುವರೆಗೂ ಹೀಗೆ ಬಹುಕಾಲ ಮುಳಿಗಿ ಹೋದ ನಂತರ, **ಕೂಲಮಿವ**-ದಡದೋಪಾದಿಯಲ್ಲಿ, **ತ್ವಂ**- ದಯಾ ಸಾಮರ್ಥ್ಯವಾ ತ್ಸಲ್ಯಾದಿ ಗುಣಯುಕ್ತನಾಗಿ ಶರಣಾಗತರಕ್ಷಣೆಯಲ್ಲಿ ಕಂಕಣಬದ್ಧನಾಗಿರುವ ನೀನು **ಲಬ್ಧಃ**:-- ಸಿಕ್ಕಿದವನು, **ಅಸಿ**– ಆಗಿದ್ದೀ. ನನಗೆ ಮಹತ್ತಾದ ಶ್ರೇಯಸ್ಸನ್ನುಂಟು ಮಾಡುವ ಪ್ರಯೋಜನವು ಉಂಟಾಗಿರುವದೇನೋ ಸರಿಯೇ; ಇದರಿಂದ ನಿನಗೇನೂ ಪ್ರಯೋಜನವಿಲ್ಲವೋ ಎಂದರೆ ನಿನಗೂ ಉಂಟೆಂದು ಸಮರ್ಥನೆಮಾಡಿ ಹೇಳುತ್ತಾರೆ–

ಓ ಭಗವಂತನೇ, **ಇದಾನೀಂ**- ಈಗ, ಎಂದರೆ ನಾಥಮುನಿಗಳಾದ ಜ್ಞಾನಾ ಗ್ರೇಸರರ ಕುಲದಲ್ಲಿ ಹುಟ್ಟಿ, ಸದ್ಗುರುಗಳಾದ ಅವರ ದಿವ್ಯಕಟಾಕ್ಷವು ಒದಗಿ, ಅವರ ಪ್ರಶಿಷ್ಯರಾದ ಮಣಕ್ಕಾಲ್‌ನಂಬಿಯವರ ದಿವ್ಯೋಪದೇಶವು ದೊರೆತು ತತ್ವತ್ರಯಗಳ ಜ್ಞಾನವು ದೊರೆತಿರುವ ಕರ್ಮಪರಿಪಾಕವಾಗುವ ಸುಸಮಯದಲ್ಲಿ, **ದಯಾಯಾಃ**– ನಿನ್ನ ನಿರತಿಶಯ ನಿರವಧಿಕ ದಯೆಗೆ, **ಅನುತ್ತಮಂ**– ಬೇರೆ ಇನ್ನು ಯಾವುದು ಶ್ರೇಷ್ಠವಲ್ಲದ, **ಇದಂ**-ಈಹೇಯ ಶರೀರದಲ್ಲಿರುವ ಸಹಸ್ರಾ ಪರಾಧಿಯಾಗಿರುವ, ಈ ನಿಕೃಷ್ಟವಸ್ತುವಾದ ನಾನು, **ಪಾತ್ರಂ**- ಯೋಗ್ಯವಾದ ವಸ್ತುವು. ನಿನ್ನ ದಯೆಯ ಮಾಹಾತ್ಮ್ಯೆಯ ಪರಿಶೀಲನೆಗೆ ನನ್ನಂತಹ ಅಪರಾಧ ಚಕ್ರವರ್ತಿಯೇ ಸರಿಯಾದಪಾ ತ್ರವು. ನನ್ನನ್ನು ಬಿಟ್ಟರೆ, ನನಗಿಂತಲೂ, ಹೆಚ್ಚಾದ ಪಾಪಿಯು ನಿನ್ನ ದಯೆಗೆ

ವಿಷಯವಾಗಲು ಸಿಕ್ಕುವುದಿಲ್ಲವೆಂಬ ಭಾವವು.

**ಉಪಪಾದನೆಯು**– ರಕ್ಷ್ಯವಸ್ತುವಾದ ತಮಗೂ ರಕ್ಷಕನಾದ ಭಗವಂತನಿಗೂ ಈಗ ಪರಮಲಾಭವೆಂದು ಹೇಳುತ್ತಾರೆ. ಹೀಗೆ ಶರಣಾಗತನಾಗಿ ನಿನ್ನವನು ನಾನು ಎಂದು ಹೇಳಿಕೊಂಡಿರುವದು ತಮಗೆ ಪರಮ ಪ್ರಯೋಜನವು. ಭಗವಂತನಾದ ನಿನಗಾದರೋ ನಿನ್ನ ದಯೆಯ ಮಹಾತ್ಮೆಯನ್ನು ಪ್ರಕಟಿಸುವ, ರಕ್ಷ್ಯವಸ್ತುವು ತಮಗಿಂತ ಹೆಚ್ಚಾದ ಅಪರಾಧಿಯು ಸಿಕ್ಕಲಾರನಾದುದರಿಂದ, ಇಂತಹ ಪಾತ್ರವು ದೊರೆತಿರುವದು ಭಗವಂತನಿಗೂ ವಿಶೇಷ ಪ್ರಯೋಜನವೆನ್ನುತ್ತಾರೆ.

**ನಿಮಜ್ಜತಃ**:– ಎಂಬಲ್ಲಿ ವರ್ತಮಾನ ನಿರ್ದೇಶದ ಅಭಿಪ್ರಾಯವು. ಅನಾದಿಕಾಲದಿಂದಲೂ, ಸೃಷ್ಟಿಮೊದಲುಗೊಂಡು ಈವರೆವಿಗೂ ಈ ಭವಾರ್ಣವದಲ್ಲಿ ಮುಳುಗಿರುವದು ತಮಗೆ ಪ್ರಾಪ್ತವಾಗಿದೆ ಎಂಬುದನ್ನು ಸೂಚಿಸುತ್ತದೆ.

ಹೀಗೆ **ಚಿರಾಯ**–ಬಹುಕಾಲದಿಂದ ಎಂಬ ಪ್ರಯೋಗದಿಂದ, ಅಂತಹ ಬಹುಕಾಲದಿಂದ ಬಂದ ದುಸ್ಥಿತಿಯು ಈಗ ತನ್ನ ಪಿತಾಮಹರ ಮತ್ತು ಆಚಾರ್ಯರ ಅನುಗ್ರಹದಿಂದ ಪರಿಪಾಕಾವಸ್ಥೆಯನ್ನು ಹೊಂದುವ ಸುಕೃತ ಕಾಲವು ಒದಗಿದೆ ಎಂಬುದನ್ನು ಸೂಚಿಸುತ್ತದೆ. ಆದುದರಿಂದ ಆಚಾರ್ಯಾನುಗ್ರಹದಿಂದಲೇ ಉಪಾಯಾನುಷ್ಠಾನವು ಲಭಿಸುತ್ತದೆಂಬ ವಿಶೇಷಾಭಿಪ್ರಾಯವನ್ನು ಇಲ್ಲಿ ಗ್ರಹಿಸಬಹುದು. ಆದುದರಿಂದ “**ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ । ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್**” ಎಂಬ ಮಹತ್ತಾದ ಉಪದೇಶವು. ಹೀಗೆ ಬಹು ಕಾಲವು ಕಳೆದು ಹೋಗಿರುವುದರಿಂದ **ಚಿರಾಯ** ಎಂಬ ಪ್ರಯೋಗವು **ಅನಂತ** ವೆಂಬುದು ಪರಮಾತ್ಮನಿಗೆ ಸಂಬೋಧನವೆಂದು ಭಾವಿಸಬಹುದು ; ಆಗ ಸ್ವರೂಪ ರೂಪ ಗುಣವಿಭೂತ್ಯಾದಿಗಳಿಂದ ಅಪರಿಚ್ಛೇದ್ಯನು ; ಈ ದೇಶದಲ್ಲಿ ಉಂಟು ಅಲ್ಲಿ ಇಲ್ಲ ; ಈ ಕಾಲದಲ್ಲಿ ಉಂಟು ಆ ಕಾಲದಲ್ಲಿಲ್ಲ ; ಈ ವಸ್ತುವಿನಲ್ಲಿ ಉಂಟು ಆ ವಸ್ತುವಿನಲ್ಲಿ ಇಲ್ಲ ; ಇಂತಹ ಸಂದರ್ಭವಿಲ್ಲದ ಸರ್ವದೇಶ ಕಾಲವಸ್ತುಗಳಲ್ಲೂ ಇದ್ದುಕೊಂಡಿರುವ ಅಪರಿಚ್ಛೇದ್ಯ ಸ್ವರೂಪನೆಂಬ ಭಾವವು. ಅಥವಾ **ಅನಂತ**ನೆಂಬುದನ್ನು **ಭವಾರ್ಣವಕ್ಕೆ ವಿಶೇಷಣ**ವಾಗಿ ಭಾವಿಸಿ, ತೀರವೇ ಕಾಣದಿರುವ ಸಂಸಾರ ಸಾಗರವೆಂದು ಭಾವಿಸಬಹುದು. ಸಂಸಾರವನ್ನು ಅಂತಹ ಸಮುದ್ರವಾಗಿ ಭಾವಿಸಿರುವ ಅನೇಕ ಪ್ರಯೋಗಗಳುಂಟು;

**ಸಂಸಾರ ಸಾಗರಂ ಘೋರ ಮನಂತಕ್ಲೇಶಭಾಜನಮ್ ।**
**ತ್ವಾಮೇವ ಶರಣಂ ಪ್ರಾಪ್ಯ ನಿಸ್ತರಂತಿ ಮನೀಷಿಣಃ ।** (ಜಿತನ್ತಾ)

ಇಂತಹ ಸಾಗರವನ್ನು ದಾಟಿ ಆಚೆಯ ದಡವನ್ನು ಹೊಂದಲು ಭಗವಂತ ನಾದ ನಿನ್ನನ್ನೇ ಉಪಾಯವಾಗಿ ಹೊಂದಿ ಪ್ರಾಜ್ಞರು ದಾಟುವರು ಎಂದು ಹೇಳ ಲ್ಪಟ್ಟಿರುತ್ತವೆ. **"ಸಂಸಾರಾರ್ಣವ ಮಗ್ನಾನಾಂ ವಿಷಯಾಕ್ರಾಂತ ಚೇತ ಸಾಮ್ । ವಿಷ್ಣುಪೋತಂ ವಿನಾ ನಾನ್ಯತ್ಕಿಂಚಿದಸ್ತಿ ಪರಾಯಣಮ್"** ಸಂಸಾರವೆಂಬ ಸಮುದ್ರದಲ್ಲಿ ಮುಳುಗಿ ವಿಷಯಂಗಳೆಂಬ ಮೊಸಳೆಗೆ ಸಿಕ್ಕಿದ ಮನಸ್ಸುಳ್ಳವರಿಗೆ ಶ್ರೀ ಮಹಾವಿಷ್ಣುವೆಂಬ ತೆಪ್ಪವಲ್ಲದೆ ಬೇರೆ ಇನ್ನು ಯಾವ ಶ್ರೇಷ್ಠವಾದ ಗತಿಯೂ ದೊರೆಯಲಾರದು. ಈ ಅಭಿಪ್ರಾಯವನ್ನೇ ಶ್ರೀ ಕುಲ ಶೇಖರಾಳ್ವಾರವರು ಮುಕುಂದ ಮಾಲೆಯಲ್ಲಿ

**ಭವಜಲಧಿಗತಾನಾಂ ದ್ವಂದ್ವವಾತಾಹತಾನಾಂ ।**
**ಸುತದುಹಿತೃಕಳತ್ರ ತ್ರಾಣ ಭಾರಾರ್ದಿತಾನಾಮ್ ।**
**ವಿಷಮ ವಿಷಯತೋಯೇ ಮಜ್ಜತಾಮಪ್ಲವಾನಾಮ್ ।**
**ಭವತುಶರಣಮೇಕೋ ವಿಷ್ಣು ಪೋತೋ ನರಾಣಾಮ್ ।**

ಎಂದು ಹೇಳಿರುತ್ತಾರೆ. ಸಂಸಾರ ಸಾಗರದಲ್ಲಿ ಮುಳುಗಿ, ಸುಖ ದುಃಖಗ ಳೆಂಬ ವಾಯುವಿನಿಂದುಂಟಾದ ಅಲೆಗಳಿಂದ ಬಡಿಯಲ್ಪಟ್ಟವರಾಗಿ ಮಗ ಮಗಳು ಕಳತ್ರಪೋಷಣೆಯ ಭಾರದಿಂದ ಸಂಪೂರ್ಣವಾಗಿ ವಿಷಯೋಪಭೋಗವೆಂಬ ಕೆಟ್ಟ ನೀರಿನಲ್ಲಿ, ಮುಳುಗಿಹೋಗಿ ಮೇಲಕ್ಕೆ ಬರಲು ಆಗದೇ ಇರುವ ದುಸ್ಥಿತಿಯಲ್ಲಿರುವ ವರಿಗೆ ಸಿದ್ಧೋಪಾಯನಾದ ಶ್ರೀ ಮಹಾವಿಷ್ಣುವೆಂಬ ತೆಪ್ಪವೇ ಉಪಾಯವಾಗಲಿ ಎಂಬರ್ಥವು. ಹಾಗೆಯೇ ಮುಂದಿನ ಎರಡು ಶ್ಲೋಕಗಳಲ್ಲೂ ವರ್ಣಿಸುತ್ತಾರೆ:-- **"ಸಂಸಾರಾಖ್ಯೇಮಹತಿ ಜಲಧೌಮಜ್ಜತಾಂ ನಸ್ತ್ರಿಧಾಮನ್ಪಾದಾಂಭೋ ಜೇ ವರದ ಭವತೋ ಭಕ್ತಿ ನಾವಂ ಪ್ರಯಚ್ಛ"** ಹೀಗೆ ಇನ್ನೂ ಅನೇಕ ಪ್ರಮಾಣಗಳನ್ನು ಉದಾಹರಿಸಬಹುದ.

ಇಲ್ಲಿ **ಭವಾರ್ಣವಾಂತಃ**- ಎಂಬ ಪ್ರಯೋಗವಿರುವುದರಿಂದ ಸನಕಾದಿಗಳ ಹಾಗೆ ತೀರದ ಸಮೀಪದಲ್ಲಿಲ್ಲದೆ, ಅಗಾಧ ಸಮುದ್ರಮಧ್ಯದಲ್ಲಿ ಸಂಪೂರ್ಣವಾಗಿ ಮುಳುಗಿ ಹೋಗಿರುವ ಅವಸ್ಥೆಯನ್ನು ಸೂಚಿಸುತ್ತದೆ. ಐಹಿಕದಲ್ಲೇ ಸಂಪೂರ್ಣ ವಾಗಿ ಲಿಪ್ತರಾಗಿ ವಿಷಯೋಪಭೋಗಗಳಿಂದ ಮನಸ್ಸನ್ನು ನಿವರ್ತಿಸಲು ಅಸಾಧ್ಯ ವಾದ ದುಸ್ಥಿತಿಯನ್ನು ಈ **ಅಂತಃ** ಎಂಬ ಶಬ್ದವು ಸೂಚಿಸುತ್ತದೆ.

**ಲಬ್ಧೋಽಸಿ**- ಎಂದು ಹೇಳುವುದರಿಂದಲೇ, ತವುಗೆ ಲಬ್ಧೋಽಸಿ ಎಂಬರ್ಥ ವಾಗುವಾಗ, **ಮೇ** ಎಂದು ಪ್ರಯೋಗಿಸಿರುವುದರ ಅಭಿಪ್ರಾಯವೇನೆಂದರೆ- ಕರ್ಮಾ ವಿದ್ಯಾದಿಗಳ ಪ್ರವಾಹಕ್ಕೆ ಸಿಕ್ಕಿ ಈ ಸಂಸಾರ ಸಮುದ್ರತರಣೋಪಾಯ ತಿಳಿಯದೇ ಇದ್ದು ಕೊಂಡಿದ್ದೆ, ಈಗ ಭಗವದ್ಭಾಗವತಾನುಗ್ರಹವು ದೊರೆತಿರುವ ನನಗೆ ಎಂಬ ಭಾವವು ಸೂಚಿತವು.

ಇತರ ಪ್ರಮಾಣಗಳಲ್ಲಿ ಭವ ಸಮುದ್ರದ ಆಚೆಯ ದಡವನ್ನು ಸೇರಲು ಭಗವಂತನು ನಾವೆಯೆಂದೂ ಪೋತವೆಂದೂ ಪ್ಲವವೆಂದೂ ಹೀಗೆಲ್ಲಾ ವರ್ಣಿಸಿ ರುತ್ತಾರೆ. ಆದರೆ ನಾವೆ ಪ್ಲವ ಮೊದಲಾದವುಗಳನ್ನು ಉಪಯೋಗಿಸದೆ ಇಲ್ಲಿ ಯಾದಗೋ ಮಹಾ ವಿಶ್ವಾಸದ್ಯೋತಕವಾಗಿ ಭಗವಂತನನ್ನು ತೀರ ಪ್ರಾಪಕನೆಂದು ಹೇಳದೆ, ತೀರವೇ ಎಂದು ವರ್ಣಿಸಿರುತ್ತಾರೆ. ಅದೂ ಅಲ್ಲದೆ ಹಿಂದೆ ' **ನಧರ್ಮ ನಿಷ್ಠೋಸ್ಮಿ** " ಎಂಬ ಶ್ಲೋಕದಲ್ಲಿ ಶರಣಾಗತಿಯನ್ನು ಅನುಷ್ಠಿಸಿರುವುದರಿಂದ ತಮಗೆ ಭಗವದನುಗ್ರಹವು ಸಿದ್ಧವೆಂದು ಹೇಳುವದಕ್ಕಾಗಿ, ತಾವು ಭವಾರ್ಣ ವವನ್ನು ದಾಟಿ ತೀರವನ್ನು ಮುಟ್ಟಿದ ಕೃತಕೃತ್ಯರೆಂಬ ಭಾವನೆಯೂ ಸಹವೇದ್ಯವು. ಹೀಗೆ ಭಗವಂತನೇ ತೀರವೆಂಬುದರ ಅಭಿಪ್ರಾಯವೇನೆಂದರೆ ಪ್ರಪನ್ನನಲ್ಲಿರುವ ವಿಶೇಷಾಭಿಮಾನದಿಂದ ನೀನೇ ಅನುಗ್ರಹಿಸಬೇಕೆಂದು ಸಂಕಲ್ಪಿಸಿ ನೀನೇ ಸಿದ್ಧೋ ಪಾಯನು, ನೀನೇ ಹೀಗೆ ಮುಳುಗಿ ನರಳುತ್ತಿರುವವನನ್ನು ಕೈ ಹಿಡಿದೆತ್ತಿ ತೀರವನ್ನು ಹೊಂದುವ ಹಾಗೆ ಮಾಡತ್ತೀ ಎಂದೂ, ಅದಕ್ಕಾಗಿ ನೀನು ಇನ್ನು ಏನನ್ನೂ ಮಾಡತಕ್ಕದ್ದಿಲ್ಲವೆಂದೂ ಹೇಳಿದಂತೆ ಆಯಿತು "**ಯಮೇವೈಷ ವೃಣುತೇತೇನ ಲಭ್ಯಃ**" ಎಂಬ ಶ್ರುತ್ಯರ್ಥವು ಬೋಧಿತವು. " **ಪರಾತ್ತು ತಚ್ಛ್ರುತೇಃ**" ಎಂಬ ಸೂತ್ರಾರ್ಥವೂ ಗರ್ಭಿತವು.

ಇಲ್ಲಿ **ಲಬ್ಧಃ** ಎಂದು ಹೇಳಿರುವದು "**ವಸುರಣ್ಯೋವಿಭೂರಸಿ**" ಎಂಬ ಆತ್ಮನಿವೇದನರೂಪನ್ಯಾಸ ಮಂತ್ರದಲ್ಲಿ ಹೇಳಿರುವ "**ಉಪಯಾಮ ಗೃಹೀತೋಸಿ ಬ್ರಹ್ಮಣೇತ್ವಾಮಹಸ ಓ ಮಿತ್ಯಾತ್ಮಾನಂ ಯುಂಜೀತ**" ಎಂದರೆ ನಿನ್ನನ್ನು ಶರಣ ಹೊಂದುವೆವು, ಬಹು ಕಾಲಕ್ಕೆ ದೃಷ್ಟಿಪಥಕ್ಕೆ ಸಿಕ್ಕಿರುವಿ ; ಓ ಮಹತ್ತಾದ ಪರಬ್ರಹ್ಮನೇ, ನಾನು ಶೇಷಭೂತನಾದುದರಿಂದ ನಿನ್ನ ಪ್ರಯೋ ಜನಕ್ಕಾಗಿ ನಿನಗೆ ಕೈಂಕರ್ಯವನ್ನು ಮಾಡುವುದಕ್ಕಾಗಿ, ಆ ಭಗವಚ್ಛೇಷತ್ವವನ್ನು ಪ್ರತಿಪಾದಿಸುವ ಪ್ರಣವಮನ್ತ್ರವನ್ನು ಹೇಳಿ, ತನ್ನ ಆತ್ಮವನ್ನು ಸ್ವಾಮಿಯಲ್ಲಿ ಸಮರ್ಪಿಸತಕ್ಕದ್ದೆಂದು" ಹೇಳಿರುವದರ ಉಪಬ್ರಹ್ಮಣವಾಗಿರುತ್ತದೆ. ಇದೇ ಉಪ ನಿಷತ್ತುಗಳಲ್ಲಿರುವ ಪರಮರಹಸ್ಯವಾದ ಉಪದೇಶವೆಂದು ಮುಂದೆ ಹೇಳಲ್ಪಟ್ಟಿರುತ್ತದೆ.

ಹೀಗೆ ನನಗೆ ಪ್ರಯೋಜನವು ಯಾವುದೆಂದರೆ, ಸಮಸ್ತ ದುಃಖಗಳಿಗೂ ಆಕರವಾಗಿ, ಜ್ಞಾನತಿರೋಹಿತತ್ವವನ್ನುಂಟುಮಾಡುವ ಅನಿಷ್ಟ ದೇಹದ ನಿವೃತ್ತಿಯೂ ; ಹಾಗೆಯೇ ನಿನಗೆ ಶೇಷಭೂತನಾಗಿ ನಿನಗೆ ಕೈಂಕರ್ಯವನ್ನು ಮಾಡುತ್ತಾ ಪರಮಾನಂದದಿಂದ ಶಾಶ್ವತವಾಗಿರೋಣವೂ. ನನಗೊಬ್ಬನಿಗೆ ಮಾತ್ರವೇ ಇದರಿಂದ ಪ್ರಯೋಜನವೆಂದು ಎಣಿಸಬೇಡ. ನಿನಗೂ ಸಹ ಪ್ರಯೋಜನವುಂಟು ಏಕೆಂದರೆ ನಾನು ಶೇಷಭೂತನಾಗಿರುವದು ನಿನ್ನ ಪ್ರಯೋಜನಕ್ಕಾಗಿ ನಿನಗೆ

ಸತತ ಕೈಂಕರ್ಯ ಮಾಡುವುದಕ್ಕಾಗಿ. ಇನ್ನೊಂದು ಹೆಚ್ಚು ವಿಶೇಷ ಉಂಟು ; ಅದೇನೆಂದರೆ ಹಿಂದಿನ ಅಸಂಖ್ಯೇಯಗಳಾದ ಜನ್ಮಗಳಲ್ಲಿ ಮಾಡಿದ ಅಪರಾಧಗಳನ್ನು ಗಣನೆ ಮಾಡಲು ಕೂಡ ಸಾಧ್ಯವಿಲ್ಲದಿರುವ " **ಅಪರಾಧಚಕ್ರವರ್ತಿ** " ಯಾದ ರಕ್ಷ್ಯವಸ್ತುವು ನನಗಿಂತ ಬೇರೆ ಯಾರೂ ನಿನಗೆ ಸಿಕ್ಕಲಾರರು. ಆದುದರಿಂದ ಇಂತಹ ಪರಮದೋಷಿಯಾದ ನನ್ನನ್ನು ರಕ್ಷಿಸಿದರೆ ನಿನಗೆ ಉಂಟಾಗುವ ಔದಾರ್ಯವೂ, ಕೃಪೆಯೂ, ವಾತ್ಸಲ್ಯವೂ, ಮಹಾತ್ಮ್ಯೆಯೂ ಲೋಕಪ್ರಸಿದ್ಧವಾಗಿ ನಿನ್ನ ಕೀರ್ತಿಯೂ, ನಿರತಿಶಯವಾಗುವದು ಎಂದು ಉತ್ತರಾರ್ಧದಿಂದ ತಿಳಿಸಿರುತ್ತಾರೆ—

**ತ್ವಯಾಪಿಲಬ್ಧಂ**– ಎಂದು ತಮಗೂ ಕೂಡ ಪ್ರಯೋಜನವೆಂದು ಹೇಳುವದಕ್ಕಾಗಿ ಲಬ್ಧ ಶಬ್ದದ ಪುನರುಕ್ತಿಯು. **ಅಪಿ** ಶಬ್ದದಿಂದ ನೀನು ಪರಿಪೂರ್ಣಕಾಮನಾದರೂ ಇಂತಹ ಪ್ರಯೋಜನವನ್ನೇ ನೀನು ನಿರೀಕ್ಷಿಸುತ್ತೀ ಎಂಬ ಭಾವವು ತೋರಿಬರುತ್ತದೆ. ತಾನು ಪರಮಕಾರುಣಿಕನೆಂದೂ, ತಾನು "**ಸಮೋಽಹಂ ಸರ್ವಭೂತೇಷು**" ಎಂಬುದನ್ನು ಪ್ರಕಟಿಸುವುದಕ್ಕೂ, ಮತ್ತು ತಾನು ಶಾಸ್ತ್ರಗಳಲ್ಲಿ ಹೇಳಿರುವ, ವರ್ಣಾಶ್ರಮಧರ್ಮಪಾಲನ, ಸಾಧು ಸಮಾಗಮ, ಆಚಾರ್ಯವರಣ ಮುಂತಾದವರಿಗೇನೆ ಅನುಗ್ರಹವೆಂಬುದನ್ನು ಸ್ಥಿರಪಡಿಸುವುದಕ್ಕೂ ಪ್ರಪನ್ನರಾದ ತಾವೇ ಸರಿಯಾದ ಪಾತ್ರವಾಗುವ ದರಮೂಲಕ, ನಿಮಗೂ ಸಹ ಪ್ರಯೋಜನವೇ? ಏಕೆಂದರೆ " **ಉದಾರಾ ಸರ್ವಏವೈತೇ ಜ್ಞಾನೀತ್ವಾತ್ಮೈವಮೇ ಮತಂ** " ಎಂದು ಹೇಳಿದ ಪರಮಕೃಪಾಳುವಲ್ಲವೇ ಎಂಬ ಭಾವವು.

**ಭಗವರ್** ಎಂಬ ಸಂಬೋಧನದಿಂದ, ತನ್ನವನೆಂದು ಶೇಷವೃತ್ತಿಯನ್ನು ಅರಿತವರ ವಿಷಯದಲ್ಲಿ ಪರಮಪುರುಷನು ಪರಮಹಿತಚಿಂತಕನು ; "**ಯದ್ಧಿತಂ ಮಮ ದೇವೇಶ ತದಾಜ್ಞಾಪಯ ಮಾಧವ** " ಎಂಬಲ್ಲಿ ತೋರಿಬರುವಹಾಗೆ, ಪರಮಹಿತವು ಯಾವುದು ಎಂದು ತಿಳಿಯದ ಅಜ್ಞನಿಗೆ ಹಿತಪ್ರವೃತ್ತಿಯಲ್ಲಿ ಪ್ರೇರಿಸುವ ಅಘಟನ ಘಟನಾಶಕ್ತಿಯೇ ಮೊದಲಾದ ಕಲ್ಯಾಣ ಗುಣಾಕರನೆಂಬ ಭಾವವು ವ್ಯಕ್ತಪಡುತ್ತದೆ. ಹೀಗೆ ಹಿತಪ್ರವೃತ್ತಿಯನ್ನುಂಟುಮಾಡಿ ಸಾಧನಾನುಷ್ಠಾನವನ್ನು ಮಾಡಿಸಿ ಅನುಗ್ರಹಿಸುವ ಶಕ್ತಿಯು ಇದರಿಂದ ಬೋಧಿತವು.

**ಇದಾನೀಂ**– ಎಂದು ಹೇಳಿರುವದರಿಂದ, ಹಿಂದೆ ಲೆಕ್ಕವಿಲ್ಲದ ಜನ್ಮಸಂತತಿಗಳು ಕಳೆದುಹೋದರೂ ಭಗವದನುಗ್ರಹವು ದೊರೆಯದೇ ಇರುವುದಕ್ಕೂ, ಈಗ ಅದು ಪರಮಕೃಪೆಯು ಲಭಿಸಿರುವುದಕ್ಕೂ, ಕಾರಣವು ವ್ಯಕ್ತಪಡುತ್ತದೆ. "**ನಾಥಮುನಿಂ ವಿಲೋಕ್ಯ ಪ್ರಸೀದ**" ವೆಂದು ಮುಂದೆ ಗ್ರಂಥಕರ್ತರೇ ಹೇಳಿರುವ ಹಾಗೆ, ನಾಥಮುನಿಗಳೇ ಮೊದಲಾದ ಮಹಾಪ್ರಾಜ್ಞರ ಕುಲದಲ್ಲಿ ಜನ್ಮವೂ, ಯಮುನಾತಟದಲ್ಲಿ ಬಿಜಮಾಡಿಸಿರುವ ಯಮುನೈತ್ತುರುವರೈಯವರ ಕಟಾಕ್ಷ ವೀಕ್ಷಣ, ಮಹಾಭಾಷ್ಯ

ಭಟ್ಟರ ಅಮೋಘೋಪದೇಶವು, ಮಣಕ್ಕಾಲ್ ನಂಬಿ ಎಂಬ ಮಹಾ ಗುರುಪ್ರಾಪ್ತಿ ಯೂ, ಇಂತಹ ಮಹೋದಯವೆಲ್ಲಾ ಸ್ವಾಮಿಯ ದಯೆಯಿಂದ ಲಭಿಸಿದ ಸುಸಮ ಯದಲ್ಲಿ ಎಂಬ ಭಾವವನ್ನು **ಇದಾನೀಂ** ಎಂಬ ಪದವು ಸೂಚಿಸುತ್ತದೆ. ಹೀಗೆ ಸರ್ವಾನುಕೂಲೋಪಪತ್ತಿಯು ಲಭಿಸಿ, ನೀನು ಶಾಸ್ತ್ರಗಳಲ್ಲಿ ಹೇಳಿರುವ ಸರ್ವಸಂಪತ್ತಿ ಯೂ ಒದಗಿರುವ ಕಾಲದಲ್ಲಿ ಎಂದರ್ಥವಾಗುವದರಿಂದ, ಈಗ ನೀನು ಯಾವು ದಾದರೂ ಒಂದು ವ್ಯಾಜಮೂಲಕ ಈತನು ಅನರ್ಹನೆಂದು ತಿರಸ್ಕರಿಸಲು ಸಾಧ್ಯವೇ ಇಲ್ಲದ ಸಮಯದಲ್ಲಿ ಎಂಬ ಭಾವವೂ ತೋರಿಬರುತ್ತವೆ.

**ಅನುತ್ತಮಂ ಪಾತ್ರಂ** ಎಂದು ಹೇಳಿರುವದರಿಂದ, ನಿಸ್ಸಮಾಭ್ಯಧಿಕತ್ವದಲ್ಲಿ ಶ್ರೀಶನೂ ತಾವೂ ಇಬ್ಬರು ಸಮವೆಂದು ಹೇಳಿಕೊಂಡಿರುತ್ತಾರೆ. ಹೇಗೆಂದರೆ ಸ್ವರೂಪರೂಪಗುಣ ವಿಭವೈಶ್ವರ್ಯಗಳಿಂದ ಸ್ವಾಮಿಗೆ ನಿಸ್ಸಮಾಭ್ಯಧಿಕತ್ವವಾದರೆ, ಅಪರಾಧಗಳನ್ನೆಸಗಿದವರ ಮಧ್ಯದಲ್ಲಿ ತಮಗೆ ನಿಸ್ಸಮಾಭ್ಯಧಿಕತ್ವವೆಂದು ಈ **ಅನುತ್ತಮಂ ಪಾತ್ರಂ** ಎಂಬುದರಿಂದ ತಿಳಿಸಿರುತ್ತಾರೆ. ಸ್ವಾಮಿಯು ಕರುಣಾಗು ಗಳಲ್ಲಿ ಚಕ್ರವರ್ತಿ ಎಂದೆನಿಸಿದರೆ, ತಾವು ಅಪರಾಧ ಚಕ್ರವರ್ತಿಯು. ಹೀಗೆ ರಕ್ಷಕ ರಕ್ಷ್ಯ ಸಂಬಂಧವು ಅನುತ್ತಮವಾಗಿ ನಮ್ಮಲ್ಲಿ ತೋರಿಬರುತ್ತದೆಂಬ ಭಾವವು ನಾಥಮುನಿಗಳ ವಂಶದಲ್ಲಿ ಜನಿಸಿದರೆ ಅಪರಾಧ ಚಕ್ರವರ್ತಿತ್ವವು ಹೇಗೆ? ಎಂದರೆ ಯಾವಾಗ ಇನ್ನೂ ಮೋಕ್ಷವಿಲ್ಲದೆ ಈ ಪೃಥಿವಿಯಲ್ಲೇ ಜನ್ಮಗಳನ್ನು ಎತ್ತುತ್ತಿರು ವದರಿಂದ ಬಂಧಕಕ್ಕೆ ಹೇತುವಾಗಿ ಅಲ್ಪಸ್ವಲ್ಪ ಅಪರಾಧಗಳು ಯದ್ಯಪಿ ಇದ್ದರೂ ಇರಬಹುದು. ಆದರೆ ಅಪರಾಧ ಚಕ್ರವರ್ತಿ ಪದವಿಗೆ ಬೇಕಾದಷ್ಟು ಅಪರಾಧಗಳು ಇಲ್ಲವು. ಮಹಾನುಭಾವರುಗಳೆಲ್ಲಾ ಸ್ವಾಮಿಯನ್ನು ಸ್ತುತಿಸುವಾಗ ತಮ್ಮ ನಿಕೃಷ್ಟ ಭಾವವನ್ನು ಪ್ರಕಟಿಸಿ ನೈಚ್ಯಾನುಸಂಧಾನವನ್ನು ಮಾಡುವ ಪದ್ಧತಿಯುಂಟು ಶ್ರೀ ದೇಶಿಕರವರೂ ಹಾಗೆಯೇ "**ಅಹಮಸ್ಮ್ಯಪರಾಧ ಚಕ್ರವರ್ತೀ**" ಎಂದು ಹೇಳಿ ಕೊಂಡಿರುತ್ತಾರೆ.

**ಇದಂ** ಎಂಬ ಪದದಿಂದ, ಪಾಪಗಳ ಬಾಹುಳ್ಯದಿಂದ ಅತಿ ನಿಕೃಷ್ಟದೆಸೆ ಯನ್ನೂ ಹೊಂದಿದವನು ನಾನು ಎಂದು ತನ್ನನ್ನೇ ಬೆರಳಿನಿಂದ ಗುರ್ತಿಸಿ, ತಮ್ಮ ನಿಕೃಷ್ಟದೆಶೆಯನ್ನೂ, ಪರಮಪುರುಷನ ಪರತ್ವವನ್ನೂ ಸೂಚಿಸುತ್ತಾರೆ. ಮಹಾ ಪ್ರಾಜ್ಞರಾದವರು ಹೀಗೆ ನೈಚ್ಯಾನುಸಂಧಾನವನ್ನು ಮಾಡಿರುವದಕ್ಕೆ ಅನೇಕ ನಿದರ್ಶನಗಳುಂಟು. ಶ್ರೀ ನಿಗಮಾಂತದೇಶಿಕರವರು ಅನೇಕ ಕಡೆಗಳಲ್ಲಿ ಇಂತಹ ನೈಚ್ಯಾನುಸಂಧಾನವನ್ನು ಪ್ರಕಟಿಸಿರುತ್ತಾರೆ (ಪಾದುಕಾಸಹಸ್ರ ನೆಯ ಶ್ಲೋಕ ಗಳು). ನಿನ್ನ ದಯೆಗೆ ಅನುತ್ತಮವಾದ ಪಾತ್ರವೆಂದು ಹೇಳಿದುದರಿಂದ ನನ್ನ ನಿಕೃಷ್ಟದೆಶೆಯನ್ನು ಅವಲೋಕಿಸಿ ಪರಿತ್ಯಾಗಮಾಡಿದುದಾದರೆ, ನಿನಗೇ

ಬೇರೆ ಇನ್ನು ಯಾವ ಪಾತ್ರವು ನಿನ್ನ ಕರುಣೆಯನ್ನು ಪ್ರಕಟಿಸುವಂತಾದ್ದು **"ದಯನೀಯಸ್ತ್ವನಾಥ ದುರ್ಲಭಃ"** ಎಂಬಲ್ಲಿ ಹೇಳಿರುವ ಹಾಗೆ ದೊರೆಯ ಲಾರದೆಂಬ ಭಾವವು ಸೂಚಿತವು. ನನ್ನನ್ನು ಬಿಟ್ಟುಬಿಟ್ಟರೆ ಸ್ವಾಮಿಗೆ ಸರ್ವಶಕ್ತಿ ತ್ವದಿಂದ ಮಹೋನ್ನತೆಯು ಉಂಟಾಗಲಾರದು. ಮಹಾಪರಾಧಿಯನ್ನು ತನ್ನ ಕ್ಷಮಾಗುಣದಿಂದ ಕ್ಷಮಿಸಿ, ಕರುಣೆಯಿಂದ ಪಾಲಿಸುವದರಿಂದ ಸರ್ವೇಶ್ವರನಿಗೆ ನಿರತಿಶಯ ಮಹೋನ್ನತೆಯೆಂದು ತಿಳಿಸುವದಕ್ಕಾಗಿ **ದಯಾಯಾಃ** ಎಂಬ ಪ್ರಯೋಗವು. ದಯಾ ಶತಕದಲ್ಲಿ ಕರುಣೆ ಮಾತ್ರ ಭಗವಂತನಲ್ಲಿ ಇಲ್ಲದಿದ್ದ ಪಕ್ಷದಲ್ಲಿ ಸಮಸ್ತಗಳಾದ ಇತರ ಕಲ್ಯಾಣಗುಣಗಳೂ ವ್ಯರ್ಥವಾಗುತ್ತಿದ್ದವೆಂದು ಉಪಪಾದಿಸಿರುತ್ತಾರೆ. ಈ ಸಂದರ್ಭದಲ್ಲಿ ಕ್ಷಮಾಷೋಡಶಿಯ—

**ಪುಣ್ಯಂ ಯತ್ತವ ಪೂಜನಂ ಭವತಿ ಚೇತ್ ತತ್ಕರ್ತುರಿಷ್ಟೇಕೃತೇ |**
**ತಸ್ಯಾದ್ರಂಗ ಪತೇ ಕೃತ ಪ್ರತಿಕೃತಂ ಸರ್ವೇಪಿ ತತ್ಕುರ್ವತೇ |**
**ಪಾಪಂ ಚೇ ದಪರಾಧಮೇವ ಭವತ ಸ್ತತ್ಕರ್ತ್ರು ಸಂರಕ್ಷಣೇ |**
**ಕ್ಷಾಂತಿಸ್ತೇ ನಿರುಪಾಧಿಕಾ ನಿರುಪಮಾ ಲಕ್ಷ್ಯೇತತತ್ಕ್ಷ್ಮಾಮ್ಯತಾಮ್ |**

ಎಂಬ ಶ್ಲೋಕವು ಅನುಸಂಧೇಯವು.

ಆದುದರಿಂದ ನಿನ್ನ ಕೃಪೆಯನ್ನು ಸಂಪಾದಿಸುವುದಕ್ಕೆ ಏನನ್ನು ಮಾಡು ಬೇಕೋ, ಅದನ್ನು ಮಾಡಿದ್ದಾಯಿತು. ಆದರೂ ಇನ್ನೂ ಈ **ಜನ್ಮದಲ್ಲೇ** ಇರುವದರಿಂದ ನಿನ್ನ ಕೃಪೆಯು ಒದಗಲಿಲ್ಲವಾಗಿ, ನಾನು ಮಾಡತಕ್ಕದ್ದು ಇನ್ನು ಯಾವುದೂ ಇಲ್ಲದುದರಿಂದ ದುರ್ಬಲನಾದ ಬಾಲನ ವೃತ್ತಿಯನ್ನೇ ಅವಲಂಬಿಸ ಬೇಕಾಗಿದೆ ಎಂದು ಹಿಂದಿನ ಶ್ಲೋಕದಲ್ಲೇ **'ಕ್ರಂದಾಮಿ ಸಂಪ್ರತ್ಯಗತಿಸ್ತವಾಗ್ರೇ** ಎಂದು ಹಿಂದೆ ಹೇಳಿಕ್ಕೊಂಡೆನು : ಇಂತಹ ಅಳುವವನನ್ನು ನೀನು ಬಿಟ್ಟುಬಿಡು ವನಲ್ಲವು : ಏಕೆಂದರೆ ನೀನು **ಮೋಕ್ಷಯಿಷ್ಯಾಮಿಮಾಶುಚಃ** ಎಂದು ನೀನು ಲೀಲಾಸಾರಥಿಯಾಗಿ ಹೇಳಿದ ಅಮೋಘವಾದ ವಾಗ್ದಾನವನ್ನು ಸ್ಮರಿಸುತ್ತಾ ಇದ್ದೇನೆ. ಏಕೆಂದರೆ ನೀನು **ಮುಕುಂದ**ನು ಎಂದರೆ ಮುಕ್ತಿದಾಯಕನಲ್ಲವೊ? ಎಂದು ತಿಳಿಸುವದಕ್ಕಾಗಿ **ಮುಕುಂದ** ಎಂಬ ಪ್ರಯೋಗವು. ಇದರಿಂದ ತಮ್ಮಲ್ಲಿರುವ ಮಹಾವಿಶ್ವಾಸವು ವ್ಯಕ್ತಗೊಳಿಸಲ್ಪಟ್ಟಿತು.

**ಅವತಾರಿಕೆಯು**:— ನನ್ನಂತಹ ಮಹಾಪರಾಧಿಯು ದೊರೆಯುವದು ಅಪರೂಪವಾದುದು, ನನ್ನ ರಕ್ಷಣೆಯು, ನೀನು ತುಂಬಾ ಉದಾರನೆಂಬ ಖ್ಯಾತಿಯು ನೆಲಗೊಳ್ಳುವದರಿಂದ ನಿನಗೂ ಪ್ರಯೋಜನವು ; ಆದುದರಿಂದ ನನ್ನನ್ನು ರಕ್ಷಿಸು ಎಂದು ಪ್ರಾರ್ಥಿಸಿದರು. ಸರ್ವೇಶ್ವರನು ಹೇಳಬಹುದು ಏನೆಂದರೆ ನನಗುಂಟಾ ಗುವ ಖ್ಯಾತಿ ರೂಪ ಪ್ರಯೋಜನ ಮಾತು ಹಾಗಿರಲಿ ನೀನು **"ಅನುತ್ತಮಂ**

**ಅಭೂತಪೂರ್ವಂ ಮಮಭಾವಿಕಿಂವಾ ।**
**ಸರ್ವಂಸಹೇ ಮೇ ಸಹಜಂಹಿದುಃಖಮ್ ।**
**ಕಿಂತುತ್ವದಗ್ರೇ ಶರಣಾಗತಾನಾಂ ।**
**ಪರಾಭವೋ ನಾಥನತೇನು ರೂಪಃ ॥ ಶ್ಲೋ ೨೫**

---

ಪಾತ್ರ" ವೆಂದು ಅಪರಾಧಚಕ್ರವರ್ತಿ ಎಂದು ಹೇಳಿಕೊಂಡಿರುವ ಇಂತವನನ್ನು ರಕ್ಷಿಸಿಬಿಟ್ಟರೆ ಲೋಕದವರು ನನ್ನನ್ನು ಹೀಯಾಳಿಸರೇ- ಸ್ವಾಮಿಗೆ ಸುಕೃತಿಯೂ ಒಂದೇ, ದುಷ್ಕೃತಿಯೂ ಒಂದೇ. ತಾರತಮ್ಯವನ್ನು ತಿಳಿಯದವನೆಂದು ಹೇಳಲಾರರೇ? ಎಂದರೆ ಅದಕ್ಕೆ ಸಮಾಧಾನವನ್ನು ಹೇಳುತ್ತಾರೇನೆಂದರೆ- ಅನೇಕ ಜನ್ಮಗಳು ನನಗೆ ಕಳೆದುಹೋದವು. ಆ ಜನ್ಮಗಳಲ್ಲಿ ಮಾಡಿದ ಅಪರಾಧಗಳಿಗಾಗಿ ನಾನು ಅನುಭವಿಸದೇ ಇರುವ ದುಃಖಗಳೇ ಇಲ್ಲವು. ಅವುಗಳನ್ನು ಅನುಭವಿಸಿದ ಹಾಗೆ ಈಗಲೂ ಅನುಭವಿಸಲೇಬೇಕು. ಅನುಭವಿಸುತ್ತೇನೆ. ಆದರೆ ನಿನ್ನಲ್ಲಿ ಶರಣಾಗತಿಯನ್ನು ಅನುಷ್ಠಿಸಿದರೂ ನನ್ನ ಕಷ್ಟವು ತಪ್ಪಲಿಲ್ಲನೆಂದರೆ, ನಿನ್ನ ಯಶಸ್ಸಿಗೆ ತುಂಬಾ ಕುಂದಕವು. ನೀನೇ ರಾಮಾವತಾರಿಯಾಗಿ ಶರಣಾಗತನನ್ನು ರಕ್ಷಿಸದೇ ಇರುವದು ಮಹತ್ತಾದ ದೋಷವೆಂದು ಹೇಳಿರುತ್ತೀಯೇ ಎಂದು ತಿಳಿಸುತ್ತಾರೆ.

**ಅರ್ಥವು.** ಮಮ-- ಜ್ಞಾನಶೂನ್ಯವಾಗಿ ಹಿತವು ಯಾವುದು ಎಂದು ತಿಳಿಯದೆ ದುಸ್ಥಿತಿಯನ್ನು ಹೊಂದಿ, ಗರ್ಭಜನ್ಮಜರಾಮರಣಾದಿಗಳಿಗೆ ಸಿಲುಕಿ ದುಃಖಭಾಕ್ಕಾಗಿಯೂ, ಮತ್ತು ದಾಸಭೂತನಾಗಿ, ಅಕಿಂಚನನಾಗಿರುವ ನನಗೆ **ಭಾವಿ**–ಮುಂದೆ ಉಂಟಾಗುವುದು ಎಂದರೆ ದುಃಖ ಸಂತತಿಯು, **ಅಭೂತಪೂರ್ವಂ**- ಹಿಂದಿನ ಜನ್ಮಗಳಲ್ಲಿ ಉಂಟಾಗದಿರುವುದು ಅನುಭವಿಸದಿರುವದು **ಕಿಂವಾ**--ಏನಾದರೂ ಉಂಟೇ ಏನು? ಮುಂದೆ ಬರುವ ದುಃಖಗಳನ್ನೇ ಹಿಂದೆ ಎಷ್ಟು ಸಲ ಅನುಭವಿಸಿದ್ದಾಯಿತೋ, ಹಾಗೆಯೇ ಈಗಲೂ ಅನುಭವಿಸಿ ಹೋಗುವೆನುಎಂಬ ಭಾವವು.

**ಮೇ**--ಮಹಾಪರಾಧಿಯಾದ ನನಗೆ **ದುಃಖಂ**--ದುಃಖವು, **ಸಹಜಂಹಿ**--ಸಹಜವಾದುದು ನ್ಯಾಯವೇ ಸರಿ, **ಕಿಂತು**--ಮತ್ತೇನೆಂದರೆ **ತ್ವದಗ್ರೇ**- ಆಶ್ರಿತ ವಾತ್ಸಲ್ಯ, ದಯಾ, ಸೌಲಭ್ಯ, ಸೌಶೀಲ್ಯಾದಿ ಗುಣಾಕರನಾದ ಪ್ರಭುವಾದ ನಿನ್ನ ಎದುರಿಗೆ ಬಂದು, **ಶರಣಾಗತಾನಾಂ**–ಸಪರಿಕರವಾದ ಶರಣಾಗತಿಯನ್ನು ಅನುಷ್ಠಿಸಿದವರ, **ಪರಾಭವಃ**- ತಿರಸ್ಕಾರವು, **ಹೇನಾಥ**- ಸರ್ವ ಶೇಷಿಯಾದ ಸ್ವಾಮಿಯೇ, **ತೇ**- ಪರಮೋದಾರನಾದ ನಿನಗೆ, **ನಾನುರೂಪಃ**- ಯೋಗ್ಯವಾದುದಲ್ಲವು.

**ಉಪಪಾದನೆಯು**- ಮುಂದೆ ಬರುವ ದುಃಖಃ ಮೊದಲಾದವು ಏನೂ ಹೊಸದಾದುವಲ್ಲವು; ಹಿಂದೆ ಅನೇಕಸಲ ಅನುಭವಿಸಿದುದೇ ಎಂದು **ಅಭೂತಪೂರ್ವಂ ಕಿಂ** ಎಂಬುದರಿಂದ ಹೇಳಲ್ಪಟ್ಟಿತು.

**"ಅವಶ್ಯ ಮನುಭೋಕ್ತವ್ಯಂ ಕೃತಂಕರ್ಮಶುಭಾಶುಭಮ್"** ಶುಭಾಶುಭಕರ್ಮಗಳಿಗನುಗುಣವಾದ ಫಲವನ್ನು ಎಂದರೆ ಸುಖದುಃಖಗಳನ್ನು ಅನುಭವಿಸಲೇ ಬೇಕೆಂದು ಹೇಳಲ್ಪಟ್ಟಿತು. ಅದು ಭಗವದನುಗ್ರಹನಿಗ್ರಹರೂಪವಾದುದು. ಸುಖವೇನೋ ಸ್ವಾಮಿಯ ಕೃಪಾ **ಪ್ರಭಾವಕ್ಕೆ** ಸರಿಹೋಯಿತು; ದುಃಖವನ್ನುಂಟು ಮಾಡುವುದು ಸರ್ವೇಶ್ವರನಿಗೆ ಉಚಿತವೊ? ಎಂದರೆ, ಹಾಗೆ ಮಾಡದಿದ್ದರೆ ಸರ್ವೇಶ್ವರನು ವೈಷಮ್ಯನೈರ್ಘೃಣ್ಯ ದೋಷಗಳಿಗೆ ಗುರಿಯಾಗುವನು. ಇಂತಹ ನಿಗ್ರಹರೂಪ ಭಯವಿಲ್ಲದಿದ್ದರೆ ಸನ್ಮಾರ್ಗಿಗಳು ತುಂಬಾ ವಿರಳರಾಗಬಹುದು. ಅದೂಅಲ್ಲದೆ ಅಂತಹ ದುರ್ಮಾರ್ಗಿಗಳ ನಿಗ್ರಹವನ್ನೂ ಅನುಗ್ರಹವೆಂದೇ ಭಾವಿಸತಕ್ಕದ್ದಾಗಿರುತ್ತದೆ **"ಹರಿ ರ್ದುಃಖಾನಿ ಹಿತಬುದ್ಧ್ಯಾ ಕರೋತಿ ಹಿ। ಶಸ್ತ್ರಕ್ಷಾರಾಗ್ನಿ ಕರ್ಮಾಣಿ ಸ್ವಪುತ್ರಾಯ ಯಥಾ ಪಿತಾ"**ಭಕ್ತರ ಪಾಪಗಳಿಗೆಲ್ಲಾ ಸರ್ವೇಶ್ವರನು ಅಲ್ಪ ದಂಡನೆಯನ್ನು ಕೊಡುವನು. ಹಾಗೆ ಕೊಡುವುದು **ಹಿತಬುದ್ಧ್ಯಾ** ಹಿತಮಾಡಬೇಕೆಂಬ ಮನಸ್ಸಿನಿಂದ ತಂದೆಯಾದವನು ಮಗನಿಗೆ ಅಲ್ಪದಂಡನೆಯನ್ನುಕೊಟ್ಟು ಹಿತಬುದ್ಧಿಯಿಂದ ಸರಿಯಾದ ಮಾರ್ಗಕ್ಕೆ ಹೇಗೆ ತರುವನೋ ಹಾಗೆಯೇ ಸರ್ವೇಶ್ವರನೂ ಎಂದು ಭಾವಿಸ ತಕ್ಕದ್ದು ; ಅದೂಅಲ್ಲದೆ ತಂದೆಯು ಮಗನಿಗೆ ಡಾಕ್ಟರುಮೂಲಕ ಆಯುಧರಿಂದ ಆಪರೇಷರ್, ಗುರುವಿನಮೂಲಕ ಚಕ್ರಾಂಕನವೂ, ಚೌಲೋಪನಯನಾದಿ ಸಂಸ್ಕಾರ ಗಳುಇವುಗಳು ಸ್ವಲ್ಪದು:ಖಕರವಾಗಿದ್ದರೂ ಹಿತಬುದ್ಧಿಯಿಂದ ಹೇಗೆಮಾಡುತ್ತಾನೋ ಹಾಗೆಯೇ ಸರ್ವೇಶ್ವರನೂ ಎಂದು ಭಾವಿಸತಕ್ಕದ್ದು. ಮತ್ತು **"ಪರೀಕ್ಷಾಂಚ ಜಗನ್ನಾಥಃ ಕರೋತ್ಯ ದೃಢಚೇತಸಾಮ್।"** ಸ್ಥಿರಮನಸ್ಕರಲ್ಲದಿರುವವರನ್ನು ಜಗನ್ನಾಥನು ಪರೀಕ್ಷಿಸುತ್ತಾನೆ. **"ಯಸ್ಯಾನುಗ್ರಹ ಮಿಚ್ಛಾಮಿ ತಸ್ಯವಿತ್ತಂ ಹರಾಮ್ಯಹಮ್"** ಯಾರಿಗೆ ಅನುಗ್ರಹ ಕೊಡಬೇಕೆಂದು ಅಪೇಕ್ಷಿಸುವನೋ ಅಂತವನ ತುಂಬಾ ಪ್ರೀತಿಯುಳ್ಳ ವಸ್ತುವಾದ ಧನ ಮೊದಲಾದುವುಗಳನ್ನು ಆತನು ಅದರಿಂದ ಆರ್ತನಾಗಿ ನನ್ನನ್ನು ಸ್ಮರಿಸಲೆಂದು ಅವುಗಳನ್ನು ಅಪಹರಿಸಿಬಿಡುವೆನೆಂದು ಹೇಳಲ್ಪಟ್ಟಿರುತ್ತದೆ. ಮತ್ತು

**ಬಾಂಧವೈಶ್ಚ ವಿಯೋಗೇನ ಸದಾ ಭವತಿ ದುಃಖಿತಃ।**
**ತೇನದುಃಖೇನ ಸಂತಪ್ತೋಯದಿಮಾಂ ನಪರಿತ್ಯಜೇತ್॥**
**ತಂಪ್ರಸಾದಂ ಕರಿಷ್ಯಾಮಿ ಯಸ್ಸುರೈರಪಿ ದುರ್ಲಭಃ॥**

ಅಂತವರು ಮಾತಾಪಿತಾಸುತ ಸುಹೃತ್ಮಿತ್ರ ಮೊದಲಾದ ಬಂಧುಗಳ ವಿಯೋಗಗಳಿಂದ ಸದಾ ದುಃಖಿತರಾಗುವರು; ಆ ದುಃಖದಿಂದ ಅವರು ನನ್ನನ್ನು ತ್ಯಾಗಮಾಡದೆ ಸದಾ ಸ್ಮರಿಸುತ್ತಿರುವರು. ದೇವತೆಗಳಿಗೂ ಕೂಡ ದುರ್ಲಭವಾದ ಅನುಗ್ರಹವನ್ನು ಅವರಿಗೆ ಮಾಡುವೆನು. ಹೀಗೆಲ್ಲಾ ಪ್ರಮಾಣಗಳಿರುವವರಿಂದ

ನಮಗೆ ಪ್ರಾಪ್ತವಾಗುವ ದುಃಖಗಳನ್ನೆಲ್ಲಾ ಕರುಣಾಸಾಗರನು ಹಿತಬುದ್ಧಿಯಿಂದ ಉಂಟುಮಾಡುವನೆಂದು ಭಾವಿಸತಕ್ಕದಾಗಿವೆ.

ಮುಂದೆ ಬರುವ ದುಃಖಗಳೂ ಹಿಂದೆ ಅನುಭವಿಸದೇ ಇರುವವೇನು ಅಲ್ಲವು, ಎಂದು **ಅಭೂತಪೂರ್ವಂ** ಎಂಬ ಪ್ರಯೋಗದಿಂದ ಹಿಂದೆ ಅನುಭವಿಸಿದಷ್ಟು ಕ್ರೂರವಾದವು ಮುಂದೆ ಇಲ್ಲವೆಂಬುದು ತೋರಿಬರುತ್ತದೆ. ಈಗ ಶರಣಾಗತನಾದುದರಿಂದ ಹಿಂದೆಮಾಡಿದ ಪಾಪಗಳೆಲ್ಲವೂ ನಾಶವಾದವು.ಮುಂದೆ ಬುದ್ಧಿಪೂರ್ವಕವಾಗಿ ಮಾಡುವ ಪಾಗಳೆಲ್ಲವೂ ಲೇಪಿಸುವದಿಲ್ಲವು. ಈದೇಹಮೂಲಕ ಅನುಭವಿಸಬೇಕಾದವುಮಾತ್ರ ಉಳಿದಿರುವುವು. ಮುಂದಿನ ಜನ್ಮದಲ್ಲಿ ಅನುಭವಿಸಬೇಕಾಗಿದ್ದ ಪ್ರಾರಬ್ಧಾಂಶವು ತೊಲೆದುಹೋಗುತ್ತದೆ. ಈ ಪ್ರಾರಬ್ಧವು ಕಳೆದುಹೋಗಬೇಕೆಂದು ಶರಣಾಗತನಾದರೆ ಅದೂ ಕಳೆದುಹೋಗುತ್ತದೆ. ಶರಣಾಗತನಾದನಂತರ ಸಾಧಾರಣವಾಗಿ ಬುದ್ಧಿಪೂರ್ವಕವಾಗಿ ಪಾಪಗಳನ್ನು ಪ್ರಪನ್ನನು ಮಾಡುವದಿಲ್ಲವು. ಒಂದುವೇಳೆ ಮಾಡಿದರೆ ಪುನಶ್ಶರಣಾಗತಿಯಿಂದ ನಿವೃತ್ತವು. ಹಾಗೆ ಶರಣಾಗತಿಯನ್ನು ಮಾಡದಿದ್ದರೆ ಅಲ್ಪದಂಡನೆಯನ್ನಿತ್ತು ಕೃಪಾಸಾಗರನು ದೇಹಾಸಾನದಲ್ಲೇ ಮೋಕ್ಷವನ್ನೀಯುವನು. ಇವೆಲ್ಲಾ ಶ್ರೀ ನಿಗಮಾಂತದೇಶಿಕರವರು ಶ್ರೀಮದ್ರಹಸ್ಯತ್ರಯಸಾರದ ಅಪರಾಧಪರಿಹಾರಾಧಿಕಾರದಲ್ಲಿ ಉಪದೇಶಿಸಿರುತ್ತಾರೆ. ಆದುದರಿಂದ ಪ್ರಪನ್ನನಾದವನು **ಭಾವಿ**-ಮುಂದೆ ಪ್ರಪನ್ನನು ಅನುಭವಿಸುವ ದುಃಖವು **ಅಭೂತಪೂರ್ವಂಕಿಂ** ಎಂಬುದರಿಂದ ಲಘುತರವಾದುದೇ ಎಂಬ ಭಾವವೂ ಸೂಚಿತವು. ಆದುದರಿಂದಲೇ ಈ ಭಾವನೆಗಳಿಂದ ಎಂದರೆ ಸರ್ವೇಶ್ವರನು ಹಿತಬುದ್ಧಿಯಿಂದಲೇ ದುಃಖವನ್ನುಂಟುಮಾಡುವನು. ಮತ್ತು ಪ್ರಪನ್ನನಾದ ನನಗೆ ಹಿಂದಿನಜನ್ಮಗಳಲ್ಲಿ ಇದ್ದಷ್ಟು ದುಸ್ಸಹವಾಪುದಲ್ಲವು, ಇಂತಹ ಭಾವನೆಗಳಿಂದ **ಸರ್ವಂಸಹೇ**-ನಮಸ್ತವನ್ನೂ ಸಹಿಸಿಕೊಳ್ಳುತ್ತೇನೆ, ಏಕೆಂದರೆ **ಸಹಜಂಹಿ ದುಃಖಮ್**-ಯಾವಾಗ ಪ್ರಾರಬ್ಧವನ್ನು ಅನುಭವಿಸುವುದಕ್ಕಾಗಿ ಈ ಕ್ಷೇತ್ರವು ನನಗೆ ಉಂಟಾಯಿತೋ ; ಆಗ ಅನುಭವಿಸಬೇಕೆಂಬುದೇ ಸಿದ್ಧವು. ಹೀಗೆ ಅನುಭಾವ್ಯವು ತಪ್ಪದಿರುವ ಸಂದರ್ಭದಲ್ಲಿ ಪರಿತಾಪವೇತಕ್ಕೆ ? ತಾವು ಸಹಿಸಲೇಬೇಕು ಎಂದು ಹೇಳಿಕೊಂಡರು. ಹಿಂದಿನ ಜನ್ಮದಲ್ಲಿ ಅಜ್ಞಾನದಿಂದ ಅಪರಾಧವು ನಡೆದುಹೋಯಿತು. ಆದಕ್ಕಾಗಿ ಶಿಕ್ಷೆಯು ಈ ಜನ್ಮದಲ್ಲಿ ಪ್ರಾಪ್ತವಾಗಿರುವಾಗ, ಈಗ ತಮ್ಮ ಶಾಸ್ತ್ರಜ್ಞಾನವು ಅದರ ನಿವೃತ್ತಿಗೆ ಹೇಗೆ ಉಪಕಾರವಾದೀತೆಂಬ ಭಾವದಿಂದಲೂ "ಸರ್ವಂಸಹೇ" ಎಂದು ಹೇಳಿಕೊಂಡರು. ಈ ಅಭಿಪ್ರಾಯವು "**ಸದೃಶಂಚೇಷ್ಟತೇ ಸ್ವಸ್ಯಾಃ**" ಎಂಬ (ಗೀ. 3-33)ಲ್ಲಿ ಉಪಪಾದಿತವು,

**ಮಮಭಾವಿ** ಎಂಬಲ್ಲಿ **ಮಮ** ಎಂದು ಹೇಳಿರುವುದರಿಂದ ತಮ್ಮ ಹಿಂದಿನ ಜನ್ಮಗಳಲ್ಲಿ ಬುಭುಕ್ಷುವಾಗಿ ಜನ್ಮಜರಾಮರಣಗಳ ಆವೃತ್ತಿಗೆ ಸಿಕ್ಕಿದ ಜ್ಞಾನಶೂನ್ಯ

ದುಸ್ಥಿತಿಯಲ್ಲಿದ್ದ **ಮಮ** ನನ್ನ ಎಂದೂ, ಈಗ ಮುಮುಕ್ಷುವಾಗಿ ಶರಣಾಗತಿಯನ್ನು ಅನುಷ್ಠಿಸಿದ ವೈಲಕ್ಷಣ್ಯವನ್ನು ಹೊಂದಿ ಶಾಸ್ತ್ರಜ್ಞಾನವಿರುವ ಮಮ ನನ್ನ ಎಂಬ ಅರ್ಥವು ಸೂಚಿತವು. ಬುಬುಕ್ಷುದೆಶೆಯಲ್ಲಿ ಜೀವಾತ್ಮನು ಹೇಗಿರುವನು ಎಂದರೆ?

**ಅಜ್ಞೋಜನ್ತು ರನೀಶೋಽಯ ಮಾತ್ಮನ ಸ್ಸುಖದುಃಖಯೋಃ |**
**ಈಶ್ವರಪ್ರೇರಿತೋ ಗಚ್ಛೇತ್ಸ್ವರ್ಗಂವಾಶ್ವಭ್ರಮೇವಚ ||**

ತನಗೆ ಇದು ದುಃಖಕರವು, ಇದು ದುಃಖಕರವಲ್ಲವು ಎಂಬ ಜ್ಞಾನವಿಲ್ಲದೆ "ಕೀನಾಶ ಇವದುರ್ಬಲಃ" ಎಂಬಲ್ಲಿ ಹೇಳಿರುವ ಅತಿದೈನ್ಯವನ್ನು ಹೊಂದಿರುವನಾಗಿ ಸ್ವರ್ಗ ವನ್ನೋ ಪಾತಾಳವನ್ನೋ ಈಶ್ವರ ಪ್ರೇರಿತನಾಗಿ ಹೋಗುವನೆಂದು ಹೇಳಲ್ಪಟ್ಟಿರುತ್ತದೆ.

**ವಾ** ಎಂಬುದು ಹಿಂದಿನ ಜನ್ಮಗಳಲ್ಲಿ ಅನುಭವಿಸಿದುದನ್ನು ವ್ಯಾವರ್ತಿಸಿ ಈ ಜನ್ಮದಲ್ಲಿ ಅನುಭವಿಸಬೇಕಾದುದನ್ನು ತಿಳಿಸುತ್ತದೆ. ಹಿಂದೆ ಅನುಭವಿಸದೇಇರು ವಂತಾದ್ದೇನಾದರೂ ಈಗ ಉಂಟಾಗುತ್ತದೆಯೋ ಎಂದಿಗೂ ಇಲ್ಲವು. ಅವುಗಳನ್ನೂ ಸಹಿಸಿದ್ದಾಯಿತು. ಈಗಲೂ ಸಹಿಸುತ್ತೇನೆ ಎಂದು **ಸರ್ವಂಸಹೇ** ಎಂದು ಹೇಳಿ ಕೊಂಡರು- ಹಿಂದಿನ ಅನುಭವಕ್ಕೂ ಮುಂದಿನ ಅನುಭವಕ್ಕೂ ವೈಲಕ್ಷಣ್ಯ ಉಂಟೆಂಬ ಭಾವನೆಯಿಂದ ಹೇಳಿದವಾಕ್ಯವು, ಹಿಂದಿನದನ್ನೆಲ್ಲಾ ಸಹಿಸಿದನಂತರ ಶರಣಾಗತಿಯನ್ನು ಅನುಷ್ಠಿಸಿದನಂತರ ಸಹಿಸಿಕೊಳ್ಳುವದೊಂದು ಕಷ್ಟವೇ ಎಂಬ ಭಾವವು ಸೂಚಿತವು.

**ಮೇಸಹಜಂಹಿ ದುಃಖಮ್**= ದುಷ್ಕರ್ಮಗಳನ್ನು ಜ್ಞಾನಶೂನ್ಯತೆಯಿಂದ ನಡೆಸಿಬಿಟ್ಟು ಅದರ ಫಲವಾದ ದುಃಖವನ್ನು ಅನುಭವಿಸಲಾರೆನೆಂದರೆ ಸಾಧ್ಯವೇ? ಆದುದರಿಂದ ಅಪರಿಹಾರ್ಯವಾದ ವಿಷಯದಲ್ಲಿ ಪರಿತಾಪವೇಕೆ ಎಂಬ ಭಾವವು, "**ವಿಧಿರ್ನ್ನೂನಮಸಂಹಾರ್ಯಃ**" ವಿಧಿಃ ಎಂದರೆ ಪ್ರಾರಬ್ಧಫಲವು, ತಪ್ಪಲಿಲ್ಲವೆಂಬ ತಾತ್ಪರ್ಯವು. ಗೀತೆಯಲ್ಲೂ "**ತಾಂಸ್ತಿತಿಕ್ಷಸ್ವಭಾರತ**" (೧. ೧೪) ಎಂಬಲ್ಲೂ "**ಸಮದುಃಖ ಸುಖಂಧೀರಂ ಸೋಽಮೃತತ್ವಾಯಕಲ್ಪತೇ**"(೨.೧೫)ಎಂಬಲ್ಲೂ "ತಸ್ಮಾದ ಪರಿಹಾರ್ಯೇರ್ಥೇ ನತ್ವಂ ಶೋಚಿತು ಮರ್ಹಸಿ (೨. ೨೭) ಈ ಅಭಿಪ್ರಾ ಯವು ಉಪಪಾದಿತವು.

**ತ್ವದಗ್ರೇ ಶರಣಾಗತನಾಂ** ಎಂಬುದರಿಂದ ಮೋಕ್ಷಾರ್ಥಿಯಾಗಿ ಪ್ರಪನ್ನ ರಾದ ತಮಗೂ ಮತ್ತು ಇತರರಿಗೂ ಉಂಟಾಗಿರುವ ಸುಕೃತವಿಶೇಷವು ಬೋಧಿಸಲ್ಪ ಟ್ಟಿತು. ನೀನು ಎಂತವನೆಂದರೆ ಪರಮಕಾರುಣಿಕನಾಗಿ, ಮಾಡಿದುದನ್ನು ತಿಳಿಯುವ ಸರ್ವಜ್ಞತೆಯುಳ್ಳವನಾಗಿ, ಸರ್ವರಿಗೂ ಸ್ವಾಮಿಯಾಗಿ, ಸರ್ವಶಕ್ತನಾಗಿರುವ ಇಂತಹ ಮಹನೀಯನ ಸನ್ನಿಧಿಯಲ್ಲಿ ಮಾಡಿದ ಶರಣಾಗತರ ವಿಷಯದಲ್ಲಿ ಎಂಬ ಭಾವವು ಸೂಚಿತವು.

ಇಂತವನಲ್ಲಿ ಮಾಡಿದ ಶರಣಾಗತಿಯು ಎಂದಿಗೂ ವಿತಥವಾಗುವುದಿಲ್ಲವೆಂದು

ವ್ಯತಿರೇಕದಿಂದ ಹೇಳುತ್ತಾರೆ:—ಪರಾಭವವು ಎಂದಿಗಾದರೂಉಂಟೋ? ಏಕೆಂದರೆ ಶರಣಾಗತಶಾಸ್ತ್ರವನ್ನೆಲ್ಲಾ ಚೆನ್ನಾಗಿ ಉಪಪಾದಿಸಿ ಸುಗ್ರೀವಾದಿ ಮಹನೀಯರುಗಳಿಗೆಲ್ಲಾ ಬೋಧಿಸಿ, **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ ದೋಷೋಯದ್ಯಪಿ ತಸ್ಯಸ್ಯಾತ್ ಸತಾ ಮೇತದ ಗರ್ಹಿತವ್"** **"ಸರ್ವಸ್ಯ ಶರಣಂಸುಹೃತ್"** ಎಂದು ವೇದದಲ್ಲಿ ಹೇಳಿರುವಹಾಗೆ ಮಿತ್ರಭಾವದಿಂದ ಅಥವಾ ಸರ್ವಜಗದ್ರಕ್ಷಕನೆಂಬ ಭಾವನೆಯಿಂದ ಶರಣಾಗತನಾದವನನ್ನು ನಾನು ಎಂದಿಗೂ ಪರಿತ್ಯಾಗಮಾಡುವನಲ್ಲವು; ಆತನಲ್ಲಿ ದೋಷವಿದ್ದರೇನಾಯಿತು; ಅಂತಹ ದೋಷಿಯನ್ನು ರಕ್ಷಿಸವದು ಮಹನೀಯರಿಗೆ ನಿಂದಿತವಲ್ಲನೆಂದೂ, ಮತ್ತು

**"ಅಪಿಪ್ರಾಣಾನ್ ಪರಿತ್ಯಜ್ಯರಕ್ಷಿತವ್ಯಃ ಕೃತಾತ್ಮನಾ |**
**ಸಚೇದ್ಭಯಾದ್ವಾ ಲೋಭಾದ್ವಾ ಕಾಮಾದ್ವಾಪಿ ನರಕ್ಷತಿ |**
**ಸ್ವಯಾ ಶಕ್ತ್ಯಾ ಯಥಾಸತ್ವಂ ತತ್ಪಾಪಂ ಲೋಕಗರ್ಹಿತವ್ |**
**ವಿನಷ್ಟಃ ಪಶ್ಯತ ಸ್ತಸ್ಯಾರಕ್ಷಿಣಶ್ಶರಣಾಗತಃ |**
**ಆದಾಯ ಸುಕೃತಂ ತಸ್ಯ ಸರ್ವಂ ಗಚ್ಛೇದರಕ್ಷಿತಃ |**
**ಅಸ್ವರ್ಗ್ಯಂ ಚಾಯಶಸ್ಯಂಚ ಬಲವೀರ್ಯ ವಿನಾಶನವ್"** ಎಂಬದಾಗಿ

ಕಂಡು ಮಹರ್ಷಿಯು ವಚನಗಳನ್ನು ಉಪಪಾದಿಸಿ ಹೇಳಿದ ನಿನ್ನ ಎದುರಿಗೆ ಮಾಡಿದ ಶರಣಾಗತರಿಗೆ **ಪರಾಭವ** ಉಂಟೋ ? ಎಂಬ ಭಾವವು. ಈ ಶ್ಲೋಕಗಳಿಗೆ ೫೫ನೆಯ ಶ್ಲೋಕದ ವ್ಯಾಖ್ಯಾನವನ್ನು ಪರಾಂಬರಿಸಿ. ಆಗಲಿ ಒಂದುವೇಳೆ ಮಹಾಪರಾಧಿಎಂದು ಪರಿತ್ಯಾಗ ಮಾಡಿದುದಾದರೆ ನೀನು ನಮಗೆ ನಾಥನಲ್ಲವೇ ? ಎಂದು "**ನಾಥ**" ಶಬ್ದದಿಂದ ಸಂಬೋಧನೆಯು. ನೀನು ನಾಥನು ಸ್ವಾಮಿಯು, ನಾನು ಶೇಷಭೂತನು: ಹೀಗಿರುವಾಗ ಪರಾಭವಕ್ಕೆ ಅವಕಾಶವು ಎಲ್ಲಿಯದು ಎಂಬ ಭಾವವು ತೋರಿಬರುತ್ತದೆ, **ನಾಥ** ಶಬ್ದದ ಸ್ವಾರಸ್ಯಾರ್ಥವು ಭಾರತವನ ಪರ್ವದಲ್ಲಿ ಉಪಪಾದಿತವು:—

**"ಯೇ ನಾಥವಂತೋಹಿಭವನ್ತಿ ಲೋಕೇ ತೇನಾತ್ಮಕರ್ಮಾಣಿಸಮಾರಭನ್ತೆ| ಕಾರ್ಯೇಷುತೇಷಾಂಪ್ರಭವನ್ತಿನಾಥಾ ಶೈಬ್ಯಾದಯೋ ರಾಮಯಥಾಯಯಾತೇಃ"** ಯುಧಿಷ್ಠಿರನ ಎದುರಿಗೆ ಬಲರಾಮನಿಗೆ ಹೇಳುವ ಸಾತ್ಯಕಿಯ ವಚನವು. ಇದರ ಉಪಪಾದನೆಗೆ ಶ್ರೀಮದ್ರಹಸ್ಯತ್ರಯಸಾರದ ೨೦೬ನೆಯ ಪುಟವನ್ನು ನೋಡಿ. ತಾತ್ಪರ್ಯವು ಇಷ್ಟೇ. ಯಾರು ಶಕ್ತರಾದ ಸ್ವಾಮಿಗಳನ್ನು ಈ ಲೋಕದಲ್ಲಿ ಹೊಂದಿರುವರೋ ಅವರು ತಾವೇ ಸ್ವತಂತ್ರಿಸಿ ಮಹತ್ತಾದ ಕೆಲಸಗಳನ್ನು ಆರಂಭಿಸುವದಿಲ್ಲವು. ಏಕೆಂದರೆ ಆ ಕೆಲಸಗಳಲ್ಲಿ ಸಮರ್ಥರಾದವರು ನಾಥರು ಕಾರ್ಯನಿರ್ವಾಹಕರು ಅವರಿಗೆ ದೊರೆತಿರುವದರಿಂದ ಅವರೊಂದಿಗೆ ಯತ್ನಿಸುವರು; ಇದಕ್ಕೆ ಒಂದು ದೃಷ್ಟಾಂತವನ್ನು ಹೇಳುತ್ತಾರೆ. ಯಯಾತಿಯು ಹೇಗೆ ಸಮರ್ಥರಾದ ಶೈಬ್ಯನೇ

ಮೊದಲಾದ ನಾಲ್ಕುಜನ ದೌಹಿತ್ರರಮೂಲಕ ಸ್ವರ್ಗಾರೋಹಣವನ್ನು ಪುನಃ ಸಾಧಿಸಿದನೋಹಾಗೆ ಎಂಬುದು. ಇದರಿಂದ ತೋರುವ ಅರ್ಥವೇನೆಂದರೆ ಸರ್ವೇಶ್ವರನಾದ ನೀನೂ ಬಹುಸಮರ್ಥನಾಗಿರುವುದರಿಂದ ನಿನ್ನಲ್ಲಿ ಶರಣಾಗತಿಯನ್ನು ಅನುಷ್ಠಿಸಿರುವುದರಿಂದ **ರಕ್ಷಣೆಯು** ನಿಶ್ಚಯವು, ಪರಾಭವವಿಲ್ಲವು ಎಂಬ ನಿರ್ಭರತ್ವವನ್ನು ಈ ಶ್ಲೋಕವು ಪ್ರಕಟಿಸುತ್ತದೆ. ಭಗವಚ್ಛಾಸ್ತ್ರದಲ್ಲಿ ಹೇಳಿರುವದು "**ಪ್ರಪನ್ನಶ್ಚಾತಕೋ ಯದ್ವತ್ಪ್ರಪತ್ತವ್ಯಃ ಕಪೋತವತ್ । ರಕ್ಷ್ಯ ರಕ್ಷಕಯೋ ರೇತಲ್ಲಕ್ಷ್ಯಂ ಲಕ್ಷಣ ಮೇತಯೋಃ**" ಪ್ರಪನ್ನನು, ಚಾತಕಪಕ್ಷಿಯು ಹೇಗೆ ಇತರವನ್ನು ತ್ಯಜಿಸಿ ಮೇಘವನ್ನೇ ಎದುರುನೋಡುತ್ತದೋ ಹಾಗೆ ಭಗವಂತನನ್ನೇ ರಕ್ಷಕನನ್ನಾಗಿ ನಂಬಿ ಆಶ್ರಯಿಸತಕ್ಕದ್ದು. ರಕ್ಷಕನು ಹೇಗಿರಬೇಕೆಂದರೆ ಕಪೋತವತ್-ತನ್ನ ಭಾರ್ಯಾಪಹಾರಿಯಾದ ವ್ಯಾಧನು ಶರ್ಣಾಗತನಾಗಲು ಹೇಗೆ ಕಪೋತವು ಅಂತವನನ್ನೂ ಕೂಡ ಹೇಗೆ ರಕ್ಷಿಸಿತೋ ಹಾಗೆಯೇ ರಕ್ಷ್ಯನಿಗೂ ರಕ್ಷಕನಿಗೂ ಲಕ್ಷಣವಿರತಕ್ಕದ್ದೆಂದು ಶಾಸ್ತ್ರವು ಹೇಳುತ್ತದೆ. ಆದುದರಿಂದ ನೀನೇ ರಾಮಾವತಾರಿಯಾಗಿ ಉದಾಹರಿಸಿದ ಕಪೋತನ ಹಾಗೆ ನೀನು ರಕ್ಷಿಸುತ್ತೀ ಎಂಬ ನಿರ್ಭರತ್ವವೇನೋಉಂಟು.

ಆದರೆ ನೀನು ಸ್ವತಂತ್ರನು, ಅಕರ್ಮವಶ್ಯನು, ಆದುದರಿಂದ ನಾನು ಶರಣಾಗತನಾದುದರಿಂದ ರಕ್ಷಿಸಬೇಕೆಂಬುದೇನು? ಆಗ ಪ್ರಕರಣವಿತ್ತು ; ರಾಮಾವತಾರಿಯಾಗಿ ಏನೋ ಹೇಳಿದ್ದುಂಟು. ಈಗ ದೇಶಕಾಲಾವಸ್ಥೆಗಳೆಲ್ಲಾ ಬದಲಾಯಿಸಿರುವಾಗ ಪರಿತ್ಯಾಗ ಮಾಡಕೂಡದೆಂಬ ನಿಯಮವೇನು? ಎಂದರೆ, **ನತೇನುರೂಪಃ** ಎಂದು ಹೇಳುತ್ತಾರೆ–ನಿನಗೆ ಅದು ಉಚಿತವಲ್ಲವು. ಏಕೆಂದರೆ ನೀನು ನಿನ್ನ ಸಂಕಲ್ಪಕ್ಕೆ ವಿರುದ್ಧವಾಗಿ ನಡೆದರೆ ಸತ್ಯಸಙ್ಕಲ್ಪತ್ವಕ್ಕೆ ಆಗ ಭಂಗವುಂಟು. ನೀನು ಅನೇಕಸಲ ನಿನ್ನ ಸತ್ಯ ಸಙ್ಕಲ್ಪವನ್ನು ಪ್ರಕಟಿಸಿರುವೆ. ಹೇಗೆಂದರೆ—

1. "**ಅಹಂಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂಗತಿಮ್**"ಎಂದೂ
2. "**ಸಕೃದೇವ ಪ್ರಪನ್ನಾಯ ತವಾಸ್ಮೀತಿಚಯಾಚತೇ**। ಅಭಯಂ ಸರಭೂತೇಭ್ಯೋದದಾಮ್ಯೇ ತದ್ವ್ರತಂ ಮಮ" ಎಂದೂ
3. "**ಮಾಮೇಕಂ ಶರಣಂ ವ್ರಜ । ಅಹಂತ್ವಾಸರ್ವಪಾಪೇಭ್ಯೋ** ಮೋಕ್ಷಯಿಷ್ಯಾಮಿ ಮಾಶುಚಃ" ಎಂದೂ,

ಹೀಗೆಲ್ಲಾ ಪ್ರತಿಜ್ಞೆಯನ್ನು ಮಾಡಿದವನಿಗೆ ನನ್ನ ಪರಿತ್ಯಾಗವು ಉಚಿತವೇ ಎಂಬ ಭಾವವು. ಇಷ್ಟುಮಾತ್ರವೇ ಅಲ್ಲದೆ ನಿನ್ನ ಪ್ರತಿಜ್ಞೆಯು ಇನ್ನೂ ಎಂಥಾದ್ದೆಂದರೆ?

"**ರಾಮೋದ್ವಿರ್ನಾಭಿ ಬಾಷತೇ**" ಶ್ರೀರಾಮನಾದ ನಾನು ಪ್ರತಿಜ್ಞೆಯನ್ನು ಮಾಡಿಬಿಟ್ಟು, ಆಮೇಲೆ ಆಗುವುದಿಲ್ಲವೆಂದು ಎರಡುಮಾತಿನವನಲ್ಲವೆಂದೂ, "**ಅನೃತಂ ನೋಕ್ತಪೂರ್ವಂಮೇ ನಚವಕ್ಷ್ಯೇಕದಾಚನ**। ನಾನೆಂದೂ, ಹೀಗೆಲ್ಲಾ ಪ್ರತಿಜ್ಞೆ ಮಾಡಿದವನಿಗೆ ನನ್ನ ಪರಾಭವವು ನಿನಗೆ ಸ್ವರೂಪವಲ್ಲವೆಂದು ಹೇಳಿದರು. ಏಕೆಂದರೆ

ಸ್ವವಚನ ವಿರೋಧವುಂಟಾಗುತ್ತದೆ. ಮತ್ತು ಶ್ರುತಿಯಲ್ಲಿ **"ತಸ್ಯನಾಮಮಹದ್ಯಶಃ"** ಎಂದರೆ ನಿಖಿಲಜಗಜ್ಜನ್ಮಾದಿ ಕಾರಣ ಪ್ರಸಿದ್ಧಿಯೂ ಲೀಲಾಪರನೆಂಬ ಸರ್ವರಕ್ಷಕನೆಂಬ ಬಿರುದೂ ಆತನಿಗೇ ವಿನಾ ಇನ್ನು ಯಾರಿಗೂ ಇಲ್ಲವೆಂದು ಹೇಳಲ್ಪಟ್ಟಿರುವ (ತೈ. ನಾರಾ. ೯) ಪ್ರಮಾಣಕ್ಕೂ ವಿರೋಧವಾಗುತ್ತದೆ.

ಆದುದರಿಂದ, ನನಗಾದರೋ ದುಃಖಗಳನ್ನು ಸಹಿಸುವದು ಸಹಜವಾದುದೇ; ನಿನಗಾದರೋ ನಿತ್ಯನಿರವದ್ಯನಾಗಿರುವವನಿಗೆ ದೋಷಪ್ರಸಂಗವು ಸಹಿಸತಕ್ಕದ್ದಲ್ಲವು; ನನಗುಂಟಾಗುವ ಅನಿಷ್ಟಕ್ಕಿಂತಲೂ, ನನ್ನ ಪರಿತ್ಯಾಗದಿಂದುಂಟಾಗುವ ದೋಷವು ನಿನಗೆ ದುಸ್ಸಹವಾದುದಾಗುತ್ತದೆ; ನನ್ನ ಸ್ವಾಮಿಯಾದ ನಿನಗೆ ಇಂತಹ ಶರಣಾಗತನನ್ನು ತ್ಯಾಗಮಾಡಿದ ಅಪಕೀರ್ತಿಯು ಗುರುತರವಾದುದಾಗುತ್ತದೆಯಾದುದರಿಂದ ಅದು ನನಗೆ ಸುತರಾಂ ಇಷ್ಟವಿಲ್ಲದವಿಷಯವು. ಆದುದರಿಂದ ಇಬ್ಬರಿಗೂ ಇದು ಇಷ್ಟವಲ್ಲದುದರಿಂದ ನೀನೇ ಈ ಎರಡು ಅನಿಷ್ಟಗಳನ್ನು ಶರಣಾಗತನಾದ ನನ್ನ ಪರಿಗ್ರಹಮೂಲಕ ನಿವಾರಿಸತಕ್ಕದ್ದು.

ಆಗಲಿ ಮುಮುಕ್ಷುವಾದ ಶರಣಾಗತನು, ಕೃತಕೃತ್ಯನು, ನಿರ್ಭರನು; ನಿರ್ಭಯನಾಗಿ, ನಿಸ್ಸಂಶಯದಿಂದಿರತಕ್ಕದ್ದು; ಹಾಗಲ್ಲದೆ ಪರಾಭವ ವುಂಟಾದೀತುಎಂದು ಸಂದೇಹಪಡುವುದು ನ್ಯಾಯವೋ? ಆಗ ಮಹಾವಿಶ್ವಾಸರೂಪ ಅಂಗವೇ ಇಲ್ಲದೆ, ನಿರ್ಭರತ್ವವೂ ಇಲ್ಲವಾಗುವುದಿಲ್ಲವೇ? ಎಂದು ಆಕ್ಷೇಪಿಸಬಹುದು. ಅಂತಹ ಆಕ್ಷೇಪಕ್ಕೆ ಕಾರಣವಿಲ್ಲವು. ಹೇಗೆಂದರೆ ಶರಣ್ಯನಿಂದ ಎಂದಿಗೂ ತಮಗೆ ಪರಾಭವವೇ ಇಲ್ಲವೆಂಬ ವಿಶ್ವಾಸದರಾಢ್ಯವನ್ನೂ ನಿರ್ಭರತ್ವವನ್ನೂ ಸ್ಥಾಪಿಸುವದಕ್ಕಾಗಿಯೇ, **"ಪರಾಭವೋನಾಥನತೇನುರೂಪಃ** ಎಂದುಹೇಳಿ, ಹಾಗೆ ಅನುರೂಪವಾದುದನ್ನು ನೀನು ಎಂದಿಗೂ ಮಾಡತಕ್ಕವನೇ ಅಲ್ಲವೆಂಬದಾಗಿ ಮಹಾವಿಶ್ವಾಸ ಮತ್ತು ನಿರ್ಭರತ್ವಗಳನ್ನು ಸ್ಥಾಪಿಸಿರುತ್ತಾರೆ. ಶೇಷಭೂತನಾದ ಪ್ರಪನ್ನನಿಗೆ ಪ್ರಪತ್ತ್ಯನಂತರ ಯಾಚ್ಞಾ ಕೂಡದಾಗಿರುವಾಗ ಇಲ್ಲಿ ಪರಾಭವವು ಬೇಡವೆಂದು ಪ್ರಾರ್ಥಿಸಿದರೆಂದು ಅರ್ಥಮಾಡುವದೂ ಸರಿಯುಲ್ಲವು. ಏಕೆಂದರೆ ಇಲ್ಲಿ ಮುಖ್ಯವಾಗಿ ಹೇಳಬೇಕಾದುದು ಪರಮಾತ್ಮನಿಗೆ ದೋಷ ಪ್ರಸಂಗವಿಲ್ಲವೆಂಬ ಉಕ್ತಿಯು; ತಮ್ಮವಿಷಯವಾದ ಪ್ರಾರ್ಥನೆ ಎಂದಿಗೂ ಅಲ್ಲವು. ಮುಂದೆ **ಮದೇಕ ವರ್ಜಂ ಕಿ ಮಿದಂ ವ್ರತಂತೇ** ಎಂಬಲ್ಲಿಯೂ ಇಂತಹ ಆಕ್ಷೇಪಣೆಯು ಕೂಡುವದಿಲ್ಲವು. ಅಲ್ಲಿಯೂ ಅತನ ಸತ್ಯಸಙ್ಕಲ್ಪತೆಯು ಕೂಡ ನಿರವದ್ಯ.

ವಾದುದೆಂದು ಹೇಳುವದರಲ್ಲೇ ತಾತ್ಪರ್ಯವು (೬೪ನೆಯ ಶ್ಲೋಕವು) ಅಥವಾ ಈ ಉಕ್ತಿಯು ಶರಣಾಗತಿಯನ್ನು ಮಾಡಿದ ಕಾಲದಲ್ಲಿ ಹೇಳಿದುದು ಎಂದಾಗಲಿ ಭಾವಿಸಬಹುದು.

**ನಿರಾಸಕಸ್ಯಾಪಿ ನ ತಾವದುತ್ಸಹೇ |**
**ಮಹೇಶ ಹಾತುಂ ತವ ಪಾದಪಙ್ಕಜಮ್ |**
**ರುಷಾ ನಿರಸ್ತೋಽಪಿ ಶಿಶು ಸ್ತನಂಧಯೋ |**
**ನಜಾತು ಮಾತು ಶ್ಚರಣೌ ಜಿಹಾಸತಿ ||೨೬||**

**ಅವತಾರಿಕೆಯು.** ಹಿಂದಿನ ಶ್ಲೋಕದಲ್ಲಿ ತಮ್ಮ ಮಹಾ ವಿಶ್ವಾಸವನ್ನೂ ನಿರ್ಭರತ್ವವನ್ನೂ ವಿಶೇಷಿಸಿ ಹೇಳಿದರು. ಈ ಶ್ಲೋಕದಲ್ಲಿ ಅನನ್ಯೋಪಾಯತ್ವವನ್ನೂ ಹಿಂದಿನ ಶ್ಲೋಕದಲ್ಲಿ ಅನನ್ಯಪ್ರಯೋಜನವನ್ನೂ ಯುಕ್ತಿಮತ್ತಾಗಿ ನಿದರ್ಶನಮೂಲಕ ಸ್ಥಾಪಿಸಿ ಹೇಳುತ್ತಾರೆ ನೀನು ನನ್ನನ್ನು ಪರಿಗ್ರಹಿಸುವದಕ್ಕೂ ಪರಿತ್ಯಾಗಕ್ಕೂ ಸ್ವತಂತ್ರನಾದರೂ, ನೀನು ನಿನ್ನ ನಿರಪೇಕ್ಷತ್ವವನ್ನು ಮನಸ್ಸಿನಲ್ಲಿಟ್ಟು ನೀನು ಎಂದಿಗೂ ಪರಿತ್ಯಾಗ ಮಾಡುವದಿಲ್ಲವೆಂದು ಹೇಳಿದರು. ಈಗಲಾದರೋ ನೀನು ಆನಂದಮ ಯನು, ಪರಮಶಾಂತನು; ಮಹಾಪಾಪಿಯು ನೀನು ಎಂದು ಕೋಪದಿಂದ ನಿರಾಕರಿಸು ವನೂ ಅಲ್ಲವು, ನಾನು ನಿನ್ನ ಪಾದ ಕಮಲವನ್ನು ಘಟ್ಟಿಯಾಗಿ ಹಿಡಿದಿರುವದರಿಂದ ಬಿಡುವನಲ್ಲವು ; ಏಕೆಂದರೆ ಸ್ತನವನ್ನು ಕಚ್ಚಿತೆಂಬ ಕೋಪದಿಂದ ಬಾಲನನ್ನು ದೂರಾ ದಬ್ಬಿದರೂ ಮಗುವು ಹೇಗೆ ಬಂದು ತಾಯಿಯ ಕಾಲನ್ನು ದೃಢವಾಗಿ ಹಿಡಿದುಕೊಳ್ಳು ತ್ತದೋ ಹಾಗೆ ಎಂದು ಹೇಳುತ್ತಾರೆ. ಅಥವಾ, ಹಿಂದಿನ ಶ್ಲೋಕದಲ್ಲಿ ಭಗವಂತನು ಶರಣಾಗತನನ್ನು ನಿರಾಕರಿಸುವ ನಲ್ಲವೆಂದು ಹೇಳಿದರು. ನಿರಾಕರಿಸದೆ ಅನುಗ್ರಹಿ ಸಿದರೂ ಭಗವಂತನು ಹೇಳಬಹುದು ಏನೆಂದರೆ, ನಾನು ಶರೀರಾವಸಾನದಿಂದ ಮುಕ್ತಿಯನ್ನೀ ಯುವೆನು. ನಿನ್ನ ಅಪರಾಧಗಳಿಗೆಲ್ಲಾ ಶಾಸ್ತ್ರೋಕ್ತ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸಿ ಪಾಪಗಳನ್ನು ಕಳೆದುಕೊಂಡು, ಭೋಗಗಳನ್ನನುಭವಿಸಿ, ನನ್ನನ್ನು ಧ್ಯಾನಿಸಿದ ನಂತರ ರಕ್ಷಿಸುವನೆಂದು ಭಗವಂತನು ಹೇಳಬಹುದೆಂದು ಭಾವಿಸಿ, ತಾವು ಹಿಡಿದ ಪಾದಾರವಿಂದವನ್ನೇ ದೃಢವಾಗಿ ಹಿಡಿದು ಬಿಟ್ಟಿರುವೆನಾದುದರಿಂದ ವಿಳಂಬವನ್ನು ಸಹಿಸುವನಲ್ಲವೆಂದು ಹೇಳಿಕೊಳ್ಳುತ್ತಾರೆಂದೂ ಭಾವಿಸಬಹುದು.

**ಅರ್ಥವು- ಹೇಮಹೇಶ**-ಓ ಈಶ್ವರರುಗಳಿಗೂ ಕೂಡ ಈಶನಾದುದರಿಂದ ಎಂದರೆ ಲೋಕೇಶ್ವರರುಗಳಿಗೂ ಸ್ವಾಮಿಯಾದ ಶ್ರೀಮನ್ನಾರಾಯಣನೇ! **ಈಶ**ನೆಂದರೆ ರುದ್ರನು, ಆತನಿಗೂ ಕಾರಣನಾದುದರಿಂದ **ಮಹೇಶನು. ನಿರಾಸಕಸ್ಯಾಪಿ** ನಿರಾಕರಿ ಸಿದವನಾದರೂಕೂಡ; **ತವ**-ನಿನ್ನ, **ಪಾದಪಂಕಜಂ**-ಪಾದಕಮಲವನ್ನು **ಹಾತುಂ** ಬಿಟ್ಟುಬಿಡುವುದಕ್ಕೆ, **ನತಾವದುತ್ಸಹೇ**-ಎಂದಿಗೂಕೂಡ ಅಪೇಕ್ಷಿಸುವುದೇ ಇಲ್ಲವು. ಶರಣಾಗತಿಯ ಕಾಲದಲ್ಲಿ ಹಿಡಿದಕಾಲವನ್ನು ಭದ್ರವಾಗಿಯೇ ಹಿಡಿದಿರುವನೇ ಹೊರತು ಎಂದಿಗೂ ಬಿಡುವನಲ್ಲವೆಂಬ ಭಾವವು. ಒಂದು ದೃಷ್ಟಾಂತ ಮೂಲಕ ಸ್ಥಾಪಿಸುತ್ತಾರೆ. **ಸ್ತನಂಧಯಃ**-ಸ್ತನ್ಯವನ್ನು ಚನ್ನಾಗಿ ಪಾನಮಾಡುವ **ಶಿಶುಃ**-ಮಗುವು, **ರುಷಾ** ಸ್ತನವನ್ನು ಮಗು ಕಚ್ಚಿತೇ ಎಂಬ ಕೋಪದಿಂದ, **ನಿರಸ್ತೋಽಪಿ**-ತಳ್ಳಿಬಿಟ್ಟರೂಕೂಡ

**ಜಾತು**-ಎಂದಿಗೂ, -ತಾಯಿಯ ಕಾಲುಗಳನ್ನು, **ನಜಿಹಾಸತಿ**-ಬಿಟ್ಟುಬರಲು ಇಷ್ಟ ಪಡುವದಿಲ್ಲವು. ಪುನಃ ತಾಯಿಯ ಕಾಲುಗಳನ್ನು ಬಂದು ಗಟ್ಟಿಯಾಗಿ ಹೇಗೆ ಹಿಡಿದು ಕೊಳ್ಳುತ್ತದೋ, ಹಾಗೆಯೇ, ನಾನೂನಹ ಓ ಶ್ರೀಮನ್ನಾರಾಯಣನೇ ನಿನ್ನ ಪಾದ ಕಮಲಗಳನ್ನೂ ಬಿಡುವದಿಲ್ಲವು. ಎಂಬ ಭಾವವು. ಇದರಿಂದ ಈ ಅವಸ್ಥೆಯಲ್ಲಿ ರುವ, ಶಿಶುವು ಸ್ತನ್ಯಪಾನಮಾಡುವ ಮತ್ತು ಆಗತಾನೇ ನಡೆಯುವ ಸುಮಾರು ೧॥ ವರುಷದ ವೊಗುವೆಂಬುದು ತೋರಿಬರುತ್ತದೆ. ಆ ಕಾಲದಲ್ಲಿ ತಾಯಿಗಳು ೧॥ ಅಥವಾ ೨ ವರುಷಗಳವರೆಗೂ ಮಕ್ಕಳಿಗೆ ಸ್ತನ್ಯವನ್ನು ಕೊಡುತ್ತಿದ್ದರೆಂಬುದು ತೋರಿಬರುತ್ತದೆ.

**ಉಪಪಾದನೆಯು. ನಿರಾಸಕಸ್ಯಾಪಿ** ಎಂಬಲ್ಲಿರುವ ಅಪಿಶಬ್ಧಸ್ವಾರಸ್ಯದಿಂದ, ಮಹಾ ಕರುಣಾಸಾಗರನಾದ ಸರ್ವೇಶ್ವರನು **ನತ್ಯಜೇಯಂ** ಎಂದು ತಾನೇ ಹೇಳಿ ಕೊಂಡಿರುವದರಿಂದ, ಎಂದಿಗೂ ತನ್ನ ಆಶ್ರಿತನನ್ನು ಬಿಡುವನೇ ಅಲ್ಲವು ಎಂಬ ಭಾವವೂ ತೋರಿಬರುತ್ತದೆ. ಇದರಿಂದ **ನಿರಾಸಕಸ್ಯಾಪಿ** ಎಂಬುದಕ್ಕೆ ಅರ್ಥಹೇಗೆ? ಎಂದರೆ ನೀನು ಎಂದಿಗೂ ಸ್ವಾಶ್ರಿತರನ್ನು ಬಿಡುವನೇ ಅಲ್ಲವು, ಒಂದುವೇಳೆ ಅಪ ರಾಧಕ್ರೌರ್ಯದಿಂದ ನೀನು ನಿರಾಕರಣೆಯನ್ನು ಮಾಡುತ್ತೀ ಎಂದು ಇಟ್ಟುಕೊಂಡರೂ ಕೂಡ, ನಾನು ಎಂದಿಗೂ ನಿನ್ನ ಪಾದವನ್ನು ಹಿಡಿದವನು ಬಿಡುವನೇ ಅಲ್ಲವು. ಘಟ್ಟಿಯಾಗಿ ಹಿಡಿದಿದ್ದೇನೆ ಎಂದು ಹೇಳಿಕೊಂಡಿರುತ್ತಾರೆ. ಹೇಗೆ ಎಂದರೆ ಲಕ್ಷ್ಮಣನು "**ಸಭ್ರಾತುಶ್ಚರಣೌ ಗಾಢಂನಿಪೀಡ್ಯ ರಘುನಂದನಃ| ಸೀತಾ ಮುವಾಚಾತಿಯಶಾಃ ರಾಘವಂಚ ಮಹಾವ್ರತಮ್**" (ಅಯೋಧ್ಯಾ, ೩೧.೨) ಎಂಬಲ್ಲಿ **ಗಾಢಂ ನಿಪೀಡ್ಯ**, ಎಂದು ಮಹರ್ಷಿಯು ಹೇಳಿರುವ ಹಾಗೆ **ತವಪಾದ ಪಂಕಜಮ್ ಹಾತು ನೋತ್ಸಹೇ** ಎಂದು ಅದರ ವ್ಯಾಖ್ಯಾನ ರೂಪದಿಂದ ಹೇಳಿ ದರು. ಹೀಗೆ ಹೇಳಿದುದರಿಂದ ತೋರುವ ಭಾವಗಳೇನು ಎಂದರೆ (೧) ತಮಗಿರುವ ಅನನ್ಯಗತಿತ್ವವು (೨) ತುಂಬಾ ಧೃಡವಾದ ಮಹಾ ವಿಶ್ವಾಸವೂ (೩) ತಮಗಿರುವ ಅನ್ಯದೇವತಾ ಸಂಬಂಧರಾಹಿತ್ಸವೂ (೪) ಐಹಿಕ ಜಿಹಾಸೆಯೂ (೫) ಆತನೇ ಅನನ್ಯ ಶರಣನು ಸಿದ್ಧೋಪಾಯನು ಎಂಬಿವು. ಆಗಲಿ ಆಶ್ರಯಿಸಿದರೂ ಕೂಡ ನಿರಾಕರಣೆ ಹೇಗೆ ಎಂದರೆ ಐಹಿಕದಲ್ಲಿ ಅಭಿರುಚಿಯನ್ನು ಹುಟ್ಟಿಸಿ, ನಿನ್ನ ಪಾದಕಮಲವನ್ನೇ ಸದಾ ಸ್ಮರಿಸುತ್ತಾ ಇರುವವನಿಗೆ ಆದಿಜಡಭರತರಿಗೆ ಮೃಗಶಾಬದ ವಿಷಯದಲ್ಲಿ ಆಶೆಯುಂಟಾದಹಾಗೂ, ಸೌಬರಿಗೆ ನೀರಿನಲ್ಲಿ ಮೀನು ತನ್ನ ಪರಿವಾರರೊಂದಿಗೆ ನಲಿಯುತ್ತಿರುವದನ್ನು ಕಂಡು ವಂಚಿಸಿ, ಐಹಿಕೇಚ್ಛೆಯುಂಟುಮಾಡಿ ನಿರಾಕರಿ ಸಿದರೂ, ತಾವು ಅವುಗಳನ್ನೆಲ್ಲಾ ಕಣ್ಣೆತ್ತಿನೋಡದೆ ತಮ್ಮ ಮನಸ್ಸು ಯಾವಾಗಲೂ ಸ್ವಾಮಿಯ ಪಾದಕಮಲದಲ್ಲೇ ನಿನ್ನ ಕೃಪೆಯಿಂದ ಸ್ಥಿರವಾಗಿ ನೆಲಸಿರುಹಾಗೆ ಮಾಡತಕ್ಕವನೆಂದು ಹೇಳಿಕೊಂಡರು. ಸೀತೆಯು ಹೇಗೆ "**ನೈಷಾಪಶ್ಯತಿ**

**ರಾಕ್ಷಸ್ಯೋ ನೇವನಾತ್ಸುಪುಷ್ಪಫಲ ದ್ರುಮಾನ್ | ಏಕಸ್ಥ ಹೃದಯಾನೂನಂ ರಾಮಮೇವಾ** ನುಪಶ್ಯತಿ॥ ಎಂಬಲ್ಲಿ ಹೇಳಿರುವ ಹಾಗೆ ಪ್ರತಿಕೂಲರಾದ ರಾಕ್ಷಸಿಯರನ್ನೂ ಗಮನಿಸದೆ, ತುಂಬಾ ಅನುಕೂಲವಾಗಿ ತೋರುವ ಮೇಲೆ ವೃಕ್ಷಗಳಲ್ಲಿ ಬಿಟ್ಟಿರುವ ಮನೋಹರಗಳಾದ ಫಲಪುಷ್ಪಾದಿಗಳನ್ನೂ ಕಣ್ಣೆತ್ತಿ ನೋಡದೆ, ಹಾಗೆ ಪತಿಯನ್ನೇ ನಿರಂತರವೂ ಸ್ಮರಿಸುತ್ತಾ ಇದ್ದಳೋ, ಹಾಗೆ ತಾವೂ ಕೂಡ ನಿನ್ನ ಪಾದ ಕಮಲವನ್ನೇ ಸದಾ ಸ್ಮರಿಸುತ್ತಲೇ ಇರುವೆನೆಂಬ ಭಾವವು. **ಪತಿವ್ರತಾ** ಧರ್ಮವನ್ನೂ ಪ್ರದರ್ಶಿಸುವ ಸಾಧ್ವಿಯ ಹಾಗೆ ತಮ್ಮ ಪ್ರವೃತ್ತಿಯು ಎಂದು ಹೇಳಿಕೊಂಡರು. ಹೀಗ ಐಹಿಕ ಸಂಸರ್ಗವಿದ್ದರೂ ತ್ರೈವರ್ಗಿಕರೊಂದಿಗೆ ಸೇರದೆ ನಿನ್ನ ಪಾದಕಮಲದಲ್ಲಿಟ್ಟ ಮನಸ್ಸು ಬೇರೇ ಕಡೆ ಚಲಿಸಲಾರದೆಂಬ ಭಾವವು. ಸ್ವಾಮಿಯನ್ನೇ ನಿರಂತರ ಸ್ಮರಿಸುವ ಪ್ರಪನ್ನರನ್ನು ಸ್ವಾಮಿ ನಿಗಮಾಂತ ದೇಶಿಕರವರು **ಶುದ್ಧಾಂತ ಸಿದ್ಧಾಂತಿಗಳೆಂದು** ಹೊಗಳಿರುತ್ತಾರೆ. **ಶುದ್ಧಾಂತ** ವೆಂದರೆ ಅಂತಃಪುರವು. ಅಲ್ಲಿ ವಾಸಮಾಡುವ ಲಕ್ಷ್ಮಿಯ ಸಿದ್ಧಾಂತವು ಯಾವುದೋ, ಅಂತಹ ಸಿದ್ಧಾಂತಿಗಳು. ಅನನ್ಯ ಭೋಗ್ಯತ್ವವು ಬೋಧಿತವು.

**ನಿರಾಸಕಸ್ಯಾಪಿ** ಎಂಬಲ್ಲಿನ **ಅಪಿ** ಶಬ್ದದಿಂದ ಕರುಣಾ ಸಾಗರನಾಗಿ ಆಶ್ರಿತ ವಾತ್ಸಲ್ಯ ಜಲನಿಧಿಯಾದ ನಿನಗೆ ನಿರಾಕರಿಸಬೇಕೆಂಬ ಅಪೇಕ್ಷೆಯು ಎಂದಿಗೂ ಬಾರದೇನೆ ಇರುತ್ತದೆಂಬ ಭಾವವು ತೋರಿಬರುತ್ತದೆ. ಇಲ್ಲಿ ತಾವತ್ ಎಂಬ ಪದವು ಅವಧಾರಣಾರ್ಥವುಳ್ಳದ್ದು ; ಆದರಿಂದ **ನೊ ಹೇ. ನಶಕ್ನೋಮ್ಯೇವ**-ನನಗೆ ಸಾಧ್ಯವೇ ಇಲ್ಲವು ಎಂಬ ಭಾವವು.

**ಮಹೇಶ** ಎಂಬುದಕ್ಕೆ ಮಹತ್ತಾದ ಸ್ವಾಮಿಯೆಂಬುದರಿಂದ ಸ್ವಾಮಿತ್ವ, ಸ್ವಾತಂತ್ರ್ಯ, ಸ್ವಾಶ್ರಿತರನ್ನು ರಕ್ಷಿಸುವ ಕಲ್ಯಾಣ ಗುಣಾಕರತ್ವ ಮೊದಲಾದವುಗಳು ಸೂಚಿತವು. ಇದರಿಂದ ಆತನಿಗಿಂತ ಇತರರನ್ನು ಆಶ್ರಯಿಸುವದಲ್ಲಿ ಇಂತಹ ಗುಣಗಳಿಲ್ಲದೆ, ಅಸೂಯೆಯೂ, ಉಪೇಕ್ಷೆಯೂ, ರಕ್ಷಿಸುವ ಶಕ್ತಿಯೂ, ಇಲ್ಲದೆ, ಇಂದ್ರನು ಯಯಾತಿಯನ್ನೂ ವಸಿಷ್ಠರು ತ್ರಿಶಂಕುವನ್ನೂ ಪರಿತ್ಯಾಗ ಮಾಡಿದ ಹಾಗೆ ಮಾಡತಕ್ಕವನಲ್ಲ ವೆಂಬುದು ಸೂಚಿತವು. ನೀನಾದರೋ ಹಾಗಲ್ಲದೆ **ನತ್ಯಜೇಯಂಕಥಂ** ಎಂಬಲ್ಲಿ ಹೇಳಿದ ಹಾಗೆ ಎಂದಿಗೂ ಆಶ್ರಿತನನ್ನು ಪರಿತ್ಯಾಗ ಮಾಡಲು ಕಾರಣವೇ ಇಲ್ಲವೆಂಬ ಭಾವವು ತೋರಿಬರುತ್ತದೆ. ಏಕೆಂದರೆ ಮುಂದೆ ಹೇಳುವ ಹಾಗೆ ನೀನು **ಪಿತಾತ್ವಂ ಮಾತಾತ್ವಂ. ತಾಯಿಯು** ಎಂದಿಗಾದರೂ ತನ್ನ ಬಾಲನಾದ ಪುತ್ರನನ್ನು ರಕ್ಷಿಸದೆ ಕೈಬಿಡುವಳೇ? ಹಾಗೆಯೇ ಗೀತೆಯಲ್ಲಿ "**ಪಿತಾಹಮಸ್ಯ ಜಗತಃ ಮಾತಾ ಧಾತಾ ಪಿತಾಮಹಃ**" (೯-೧೭ ಎಂದು ಹೇಳಲ್ಪಟ್ಟಿರುತ್ತದೆ.

ನಿನ್ನ ಪಾದಕಮಲವನ್ನು **ಹಾತುಂ ನೋತ್ಸಹೇ** ಎಂಬಲ್ಲಿ ಆಗಾವ ಭಾವ

ದಿಂದ ಬಿಡಲು ಸಾಧ್ಯವಿಲ್ಲವೆಂದರೆ? ಉಪಾಯವಾಗಿಯೂ ಬಿಡಲು ಸಾಧ್ಯವಿಲ್ಲವು. ಉಪೇಯವಾಗಿಯೂ ಬಿಡಲು ಸಾಧ್ಯವಿಲ್ಲವು ಎಂಬ ಭಾವವು. ದ್ವಯಮನ್ತ್ರದಲ್ಲಿ ಹೇಳಲ್ಪಟ್ಟ ಹಾಗೆ, ನೀನೇ ಮಾರ್ಗದರ್ಶಿಯೂ ನಿನ್ನ ಪ್ರಾಪ್ತಿಯೇ ಫಲವೂ; ಹೀಗಿರುವಲ್ಲಿ ಬಿಡಲು ಸಾಧ್ಯವೇ? ಆದುದರಿಂದ ನಿನ್ನ ಪಾದ ಕಮಲವೇ ಉಪಾಯೋಪೇಯಗಳೆರಡೂ ಎಂಬ ಭಾವವು. ಅದೇಕೆ ಬಿಡಲು ಸಾಧ್ಯವಿಲ್ಲವು? ಇನ್ನು ಯಾರಿಗೂ ಅಂತಹ ಶಕ್ತಿಯು ಇಲ್ಲವೇ ಇಲ್ಲವು, ಹೀಗಿರುವಾಗ ಹೇಗೆ ಬಿಟ್ಟಿರಲು ಸಾಧ್ಯವು?

ಆಗಲಿ ಆಶ್ರಿತರಲ್ಲಿ ತಾರತಮ್ಯವಿಲ್ಲವೋ? ಎಂದರೆ "ಅಭಯಂ ಸರ್ವ ಭೂತೇಭ್ಯೋ" ಎಂದು ಒಂದೆಡೆಯಲ್ಲಿ ಎಲ್ಲಾ ಪ್ರಪನ್ನರಿಗೂ ಅಭಯ ಪ್ರದಾನವು ನನ್ನ ವ್ರತವೆಂದು ಹೇಳಿಕೊಂಡಿರುತ್ತೀಯೇ. ಇನ್ನೊಂದು ಕಡೆ ಎಷ್ಟು ಅಪರಾಧಿಯಾಗಿದ್ದರೂ ಮನ್ನಿಸುವನೆಂದು **"ಯದಿವಾ ರಾವಣ ಸ್ಸಯಮ್"** ಎಂದು ಹೇಳಿರುತ್ತೀಯೇ. ಇನ್ನೊಂದು ಕಡೆ "ಸಮೋಹಂ ಸರ್ವ ಭೂತೇಷು" ಎಂದು ಆಶ್ರಿತರನ್ನೆಲಾ ಸಮನಾಗಿ ಕಾಣುವನೆಂದು ಹೇಳಿರುತ್ತೀಯೇ. ಆದುದರಿಂದ ನೀನು ಆಶ್ರಿತರಲ್ಲಿ ತಾರತಮ್ಯವನ್ನು ನೋಡುವನಲ್ಲವೆಂಬ ಅಧ್ಯವಸಾಯವನ್ನು ಹಿತವನಾದುದರಿಂದಲೇ **ಹಾತುಂ ನೋತ್ಸಹೇ** ಎಂದು ಹೇಳಲ್ಪಟ್ಟಿತು. ಸರ್ವಪ್ರಾಣಿಗಳಲ್ಲೂ ಇಂತಹ ಸಮವಾದ ಪ್ರೀತಿಯಿರುವದರಿಂದಲೇ ನೀನು ಶ್ರುತಿಯಲ್ಲಿ ಸರ್ವಸುಹೃತ್ತೆಂದು ಹೇಳಲ್ಪಟ್ಟಿರುವದರಿಂದ ಸಂಸಾರ ನಿವೃತ್ತಿಗೆ ಉಪಾಯ ಭೂತವಾದುದು, ನಿನ್ನ ಪಾದಕಮಲಕ್ಕಿಂತ ಬೇರೆ ಯಾವುದೂ ಇಲ್ಲವಾದುದರಿಂದ ಬಲವಾಗಿ ಹಿಡಿದಿರುತ್ತೀನೆ ಎಂದು ಹೇಳಿದರು. ಅದೇ ನನಗೆ ಪರಮಭೋಗ್ಯ ಭೂತವಾದುದು. ಆದುದರಿಂದ **ನೋತ್ಸಹೇ.**

ಮೇಲೆ ಹೇಳಿದ ಅಭಿಪ್ರಾಯಗಳನ್ನು ಒಂದು ನಿದರ್ಶನ ಮೂಲಕ ಸಮರ್ಥಿಸಿ ಹೇಳುತ್ತಾರೆ, ಜ್ಞಾನಶೂನ್ಯವಾದ ಶಿಶುವೇ ತನ್ನ ತಾಯಿಯ ಪಾದವನ್ನೇ ಬಿಟ್ಟಿರಲಾರದು ಎನ್ನುತ್ತಾರೆ.—**ಶಿಶು ಸ್ತನಂಧಯಃ** ಎಂಬ ಪ್ರಯೋಗದಿಂದ ಜ್ಞಾನಶೂನ್ಯತೆಯುಳ್ಳ ಒಂದು ಶಿಶುವೇ ಸ್ತನ್ಯವನ್ನು ಕೊಟ್ಟು ಕಾಪಾಡಿದ ತಾಯಿಯನ್ನು ಬಿಡದಿರುವಾಗ, ಅದಕ್ಕಿಂತ ಶಾಸ್ತ್ರಜ್ಞಾನ ಮತ್ತು ವಿವೇಕಜ್ಞಾನವುಳ್ಳ ತಾವು ನಿನ್ನ ಪಾದಕಮಲವನ್ನು ಬಿಡಬಹುದೋ? **ಶಿಶು ಸ್ತನಂಧಯಃ** ಎಂಬುದರಿಂದ ಹಾಲು ಕುಡಿದ ಶಿಶುವು ತನ್ನ ರಕ್ಷಕಳಾದ ತಾಯಿಯಲ್ಲದೆ ಇನ್ನು ಯಾರೂ ತನಗೆ ಗತಿಯಿಲ್ಲವೆಂದು ತಾಯಿಯ ಕಾಲನ್ನೇ ಪುನಃ ಬಂದು ಹಿಡಿದುಕೊಳ್ಳುವಾಗ, **"ನಹಿಪಾಲನ ಸಾಮರ್ಥ್ಯಂ ಋತೇ ಸರ್ವೇಶ್ವರಂ ಹರಿಮ್"** ಎಂದು ವಿವೇಕಿಸಿ ತಿಳಿದ ನನಗೆ ಸಾಧ್ಯವೇ? ಎಂಬ ಭಾವವು. **ಶಿಶು ಸ್ತನಂಧಯ** ಪ್ರಯೋಗಗಳಿಂದ ಶಿಶುವಿನ ಸಂಪೂರ್ಣ ಪಾರತಂತ್ರ್ಯ ಶೇಷತ್ವಾದಿಗಳು ಹೇಗೆ ತೋರಿ ಬರುತ್ತವೋ, ಹಾಗೆಯೇ

ತಮ್ಮ ಶೇಷತ್ವ ಪಾರತಂತ್ರ್ಯಗಳೂ ಬೋಧಿತವು, ಹುಟ್ಟುವಾಗ ತಮ್ಮ ಕೃಪಾ ಪ್ರಭಾವದಿಂದ ನೋಡಿ, ಸದ್ವಂಶವಾದ ನಾಥ ಮುನಿಗಳ ಕುಲದಲ್ಲಿ ಹುಟ್ಟಿ, ಶಾಸ್ತ್ರ ಜ್ಞಾನವನ್ನು ಕೊಟ್ಟು, ಸಾಧುಗಳ ಸಮಾಗಮವನ್ನು ಹೊಂದಿಸಿ, ಮಹಾ ಗುರುವನ್ನು ಉಪದೇಶಿಕರನ್ನಾಗಿ ಏರ್ಪಡಿಸಿ, ವಿದ್ವನ್ಮಂಡಲಿಯು ತಲೆ ತೂಗುವ ಗ್ರಂಥ ಗಳನ್ನು ರಚಿಸುವ ಹಾಗೆ ಮಾಡಿ, ಹೀಗೆ ನಾನಾ ವಿಧವಾಗಿ ಸರ್ವರಕ್ಷಕರಾಗಿರುವ ತಮ್ಮ ಪಾದಕಮಲವನ್ನು ಎಂದಿಗಾದರೂ ಬಿಟ್ಟೇನೆ ಎಂಬ ತಾತ್ಪರ್ಯವು. ತಾಯಿಯ ಸ್ಥಾನದಲ್ಲಿ ಪ್ರಜಾರಕ್ಷಕನಾದ ನಿನಗೆ ಕೋಪ ವೆಂಬುವದೇ ಇಲ್ಲವು. ಕ್ಷಮಾದ ಯಾದಿ ಗುಣ ಪ್ರೇರಿತನು ನೀನು. ಅಂತವನನ್ನು ಬಿಡಲು ಸಾಧ್ಯವೇ? ಕೋಪವೆಂಬುದು ಹೇಯ ಗುಣವು. ತಾಯಿಗೆ ಮಗುವು ಸ್ತನವನ್ನು ಕಚ್ಚಿತಲ್ಲಾ ಎಂದು ಕೋಪ ಉಂಟಾಗಬಹುದು. ಸರ್ವೇಶ್ವರನಿಗೆ ಹಾಗೆ ಕೋಪವೆಂದಿಗೂ ಇಲ್ಲವು. ಆಗಲಿ, ಅಧರ್ಮಿಗಳನ್ನು ಶಿಕ್ಷಿಸುತ್ತಾನಲ್ಲಾ ಎಂದರೆ ಹಿತಬುದ್ಧಿಯಿಂದ ತಂದೆಯು ಕುಮಾರ್ಗದಲ್ಲಿ ಪ್ರವರ್ತಿಸುವ ಮಗನನ್ನು ಸನ್ಮಾರ್ಗಕ್ಕೆ ತರುವದಕ್ಕಾ ಹೇಗೆ ಶಿಕ್ಷಿಸುವನೋ ಹಾಗೆ ಎಂದು ಭಾವಿಸತಕ್ಕದ್ದು. **ನಿರಸ್ತೋಽಪಿ** ಎಂಬಲ್ಲಿರುವ ಅಪಿ ಶಬ್ದದಿಂದ ಈ ಲೋಕದ ತಾಯಿಗೂ, ಸರ್ವೇಶ್ವರನಿಗೂ ಇರುವ ವ್ಯತ್ಯಾಸವು ದ್ಯೋತಿತವು. **ಜಾತು** ಶಬ್ದದಿಂದ, ತಾಯಿಯನ್ನು ಕ್ರೋಧವಶೆಯಲ್ಲೂ, ಸಮಾಧಾನ ದಶೆಯಲ್ಲೂ, ಶಿಶುವು ಹೇಗೆ ತಾಯಿಯ ಕಾಲನ್ನು ಬಂದು ಹಿಡಿದುಕೊಳ್ಳುತ್ತದೋ, ಹಾಗೆ ತಾವೂ ಸದಾ ದೃಢವಾಗಿ ಹಿಡಿದಿರುವೆನೆಂದು ಹೇಳುತ್ತಾರೆ. **ಮಾತುಃ** ಎಂಬ ಪದ ಪ್ರಯೋಗದಿಂದ ಸ್ವಾಮಿಯಲ್ಲಿರುವ ಆಶ್ರಿತ ವಾತ್ಸಲ್ಯವು ಸೂಚಿತವು. ತಾಯಿ ಯಾದವಳು ಪ್ರಾಕೃತ ಗುಣಯುಕ್ತಳಾಗಿ ಪಾದಗಳಿಂದಲೇ ಕೋಪದಿಂದ ತನ್ನ ಮಗುವನ್ನೇ ತಡೆಯಬಹುದು. ಆಶ್ರಿತ ವತ್ಸಲನು ಹಾಗಲ್ಲವು. ಯಾರಾ ದರೂ ತನ್ನ ಪಾದವನ್ನು ಆಶ್ರಯಿಸಿದರೆ ಸಾಕು ರಕ್ಷಿಸುವನೆಂದು ಸಮಯ ನಿರೀಕ್ಷಣೆ ಯಲ್ಲಿರುವನೆಂಬ ವೈಲಕ್ಷಣ್ಯವು ತೋರಿಬರುತ್ತದೆ. ಹೀಗಿರುವಾಗ ಹಿಡಿದ ನಿನ್ನ ಪಾದಕಮಲಗಳನ್ನು ತ್ಯಾಗಮಾಡಲು ಇಚ್ಛೆಯೇ ಉಂಟಾಗದಿರುವಾಗ ತ್ಯಾಗ ಮಾಡುವ ಕಾರ್ಯರೂಪ ಮಾತು ಎಲ್ಲಿಯದು ಎಂಬ ಭಾವವೂ ತೋರಿಬರುತ್ತದೆ. ಆಗಲಿ, ಹಸ್ತ ಮೊದಲಾದವುಗಳನ್ನು ತ್ಯಜಿಸಿ ತವ **ಪಾದಪಙ್ಕಜವನ್ನು** ಘಟ್ಟಿಯಾಗಿ ಹಿಡಿದಿರುವದು ಏಕೆ? ಎಂದರೆ ಆ ಪಾದದ ಮಾಹಾತ್ಮ್ಯೆಯನ್ನು ಬಲ್ಲೆನು. ಅದು ಅಹಲ್ಯೆಯನ್ನು ಪವಿತ್ರೀಕರಿಸಿದ ಪಾದವು. ಬಲಿಚಕ್ರವರ್ತಿಗೆ ಶ್ರೇಯಸ್ಸನ್ನುಂಟುಮಾಡಿದುದು. ಗಂಗೆಗೆ ಪಾವನ ಶಕ್ತಿಯನ್ನುಂಟುಮಾಡಿದುದು. ಪರೀಕ್ಷಿತ್ತನ್ನು ಕಾಪಾಡಿದುದು. ಶ್ರೀನಿಗಮಾನ್ತ ದೇಶಿಕರವರು **ಶಿಲಾದೇಃ** ಎಂಬ ಶ್ಲೋಕದಲ್ಲಿ ವಿಶೇಷವಾಗಿ ಕೊಂಡಾಡಿರುತ್ತಾರೆ (ಶ್ರೀರಹಸ್ಯ, ಪ್ರಭಾವ ರಕ್ಷಾಧಿ ಕಾರ). ಶ್ರೀ ಯಾಮುನ ಮುನಿಗಳೇ ಪಾದಪಂಕಜ ಮಾಹಾತ್ಮ್ಯೆಯನ್ನು ಮುಂದಿನ

**ತವಾಮೃತ ಸ್ಯಂದಿನಿ ಪಾದಪಂಕಜೇ |**
**ನಿವೇಶಿತಾತ್ಮಾ ಕಥ ಮನ್ಯ ದಿಚ್ಛತಿ |**
**ಸ್ಥಿತೇಽರವಿಂದೇ ಮಕರಂದ ನಿರ್ಭರೇ**
**ಮಧುವ್ರತೋ ನೇಕ್ಷುರಕಂಹಿ ವೀಕ್ಷತೇ ||೨೭||**

---

ಶ್ಲೋಕದಲ್ಲಿ "ತವಾಮೃತ ಸ್ಯಂದಿನಿ ಪಾದಪಙ್ಕಜೇ" ಎಂದು ಸ್ವಾರಸ್ಯವಾಗಿ ಪ್ರಯೋಗಿಸಿರುತ್ತಾರೆ,

**ಅವತಾರಿಕೆಯು.** ಹಿಂದಿನ ಶ್ಲೋಕದಲ್ಲಿ ಸ್ವಾಮಿಯ ಪಾದಾರವಿಂದವೇ ಪ್ರಾಪಕವೂ ಪ್ರಾಪ್ಯವೂ ಎಂದು ಭಾವಿಸಿ ಅಂತಹ ಪಾದದ್ವಂಧ್ವವನ್ನು "**ಗಾಢಂ ನಿಪೀಡ್ಯ**" ಎಂಬಲ್ಲಿ ಹೇಳಿರುವ ಹಾಗೆ ಘಟ್ಟಿಯಾಗಿ ಹಿಡಿದಿರುತ್ತೇನೆ; ನೀನು ನಿರಾಕರಿಸುವನೇ ಅಲ್ಲವು ; ಒಂದು ವೇಳೆ ನಿರಾಕರಿಸಿದರೂ ನಾನು ಬಿಡುವನಲ್ಲವು ಎಂದು ಹೇಳಿದರು. ಆಗಲಿ, ಹಾಗೆ ಅದೇಕೆ ಅಷ್ಟು ಮುಷ್ಕರವು ; ಈ ಲೋಕದಲ್ಲಾಗಲಿ, ಅಂತಹ ಇತರ ಲೋಕಗಳಲ್ಲಿಯಾಗಲಿ ಬ್ರಹ್ಮರುದ್ರೇಂದಾದಿ ಲೋಕಗಳಲ್ಲಾಗಲಿ, ಅವರಿಗಿಂತ ಮೇಲಾದ ಭೋಗಗಳನ್ನು ನೀನುಪ್ರಪನ್ನನಾದುದರಿಂದ ಕೊಡುವೆನು. ಅವುಗಳನ್ನೆಲ್ಲಾ ಸಾವಕಾಶವಾಗಿ ಅನುಭವಿಸಿ, ಅನಂತರ ನನ್ನನ್ನು ಬಂದು ಸೇರಬಹುದಲ್ಲಾ, ಏಕೆ ಅವಸರಪಡುತ್ತೀಯೇ, ಎಂದು ಸರ್ವೇಶ್ವರನು ಒಂದುವೇಳೆ ಹೇಳಿದರೂ, ತಾವು ಒಪ್ಪುವರಲ್ಲವೆಂದೂ, ನಿರತಿಶಯವಾದ ಪರಿಪೂರ್ಣ ಬ್ರಹ್ಮಾನಂದವನ್ನು ಹೊಂದಿಸುವ ನಿನ್ನ ಪಾದಕಮಲವೆಲ್ಲಿ ? ಅಶಾಶ್ವಗಳಾದ ಅಲ್ಪಗಳಾದ ದುಃಖ ಸಂಬಂಧವಿರುವ ಈ ಭೋಗಗಳೆಲ್ಲಿ ? ಆದುದರಿಂದ ಅವುಗಳನ್ನು ಕಣ್ಣೆತ್ತಿ ಕೂಡ ನೋಡುವನಲ್ಲನೆಂದು ಸದೃಷ್ಟಾಂತವಾಗಿ ಉಪಪಾದಿಸುತ್ತಾರೆ.

**ಪ್ರತಿಪದಾರ್ಥವು—ತವ**—ಪ್ರಪನ್ನರಿಗೆ ನಿರತಿಶಯಾನಂದವನ್ನು ವರ್ಷಿಸುತ್ತಿರುವ ನಿನ್ನ, **ಅಮೃತ ಸ್ಯಂದನಿ**—ಜನ್ಮ ಜರಾಮರಣಾದಿಗಳ ಭಯವಿಲ್ಲದ ಮೋಕ್ಷ ಸುಖವೆಂಬ ಜೇನು ತುಪ್ಪವನ್ನು ಸ್ರವಿಸುತ್ತಿರುವ, **ಪಾದ ಪಂಕಜೇ**—ಪಾದಗಳೆಂಬ ಮಕರಂದ ಪರಿಪೂರ್ಣವಾದ ಕಮಲ ಪುಷ್ಪದಲ್ಲಿ, **ನಿವೇಶಿತಾತ್ಮಾ**—ಇಡಲ್ಪಟ್ಟ ಮನಸ್ಸುಳ್ಳವನು (ಇದರಿಂದ ತಮ್ಮನ್ನು ಹೇಳಿಕೊಂಡರು) **ಅನ್ಯತ್**—ಬೇರೆ ಇತರ ಅಲ್ಪಾಸ್ಥಿರವಾಗಿ ದುಃಖ ಮಿಶ್ರವಾಗಿರುವ ಇಹಲೋಕದ ಐಶ್ವರ್ಯವನ್ನಾಗಲಿ, ಬ್ರಹ್ಮ ರುದ್ರೇಂದ್ರಾದಿ ಲೋಕಗಳ ಸುಖವನ್ನಾಗಲಿ, ಅಥವಾ ಅದಕ್ಕು ಹೆಚ್ಚಾದ ಭೋಗ ಒಂದು ವೇಳೆ ಇದ್ದರೆ ಅದನ್ನಾಗಲಿ, **ಕಥಂ**—ಹೇಗೆ, **ಇಚ್ಛತಿ**—ಅಪೇಕ್ಷಿಸುವನು ; ಹಾಗೆ ಅಪೇಕ್ಷಿಸಿದರೆ ಆತನು ಮಿತ ಪ್ರಜ್ಞನು ಎಂಬ ಭಾವವು ಸ್ವಾಮಿದತ್ತ ಪ್ರಾಜ್ಞತೆ ಇರುವ ತಾವು ಈ ನೀಚ ಸುಖಗಳನ್ನು ಎಂದಿಗೂ

ಬಯಸುವರಲ್ಲವೆಂಬ, ಭಾವವು. ಇಂತಹ ವಿವೇಕವು ಒಂದು ಅಲ್ಪವಾದ ಪ್ರಪುರಕ್ಕೆ ಇರುವಾಗ, ಅಂತಹ ವಿವೇಕವು ತಮ್ಮಂತಹ ಪ್ರಪನ್ನರಿಗೆ ಬೇಡವೇ ಎಂದು ಒಂದು ದೃಷ್ಟಾಂತ ಮೂಲಕ ಉಪಪಾದಿಸುತ್ತಾರೆ.—**ಮಕರಂದ ನಿರ್ಭರೇ**—ಮಧುವಿನಿಂದ ಪರಿಪೂರ್ಣವಾದ, ಅರವಿಂದ—ಕಮಲದಲ್ಲಿ, **ಸ್ಥಿತೇಸತಿ**—ಇರುತ್ತಿರಲಾಗಿ, **ಇಕ್ಷುರಕಂ**–ಅತ್ಯಲ್ಪ ಮಕರಂದವಿರುವ, ಮುಟ್ಟಿದರೆ ಶೀಘ್ರದಲ್ಲಿ ಬಾಡಿಹೋಗುವ ದೇವತಾರ್ಚನೆಗೆ ಅನರ್ಹವಾಗ ಮುಳ್ಳಿನಿಂದ ಸೇರಿ ಕ್ಷುದ್ರ ಪುಷ್ಪವೆನಿಸುವ ಕೋಳವಳಿಕೆ ಎಂಬ ಹೂವನ್ನು, **ನವೀಕ್ಷತೇಹಿ**–ಕಣ್ಣೆತ್ತಿ ಕೂಡ ನೋಡುವದಿಲ್ಲವೆಂಬುದೇ ಸಿದ್ಧವಷ್ಟೆ, ಏಕೆಂದರೆ- ಅದರಲ್ಲಿ ಮಕರಂದವೇ ಇಲ್ಲವಾದುದರಿಂದ.

**ಉಪಪಾದನೆಯು.**—ಹಿಂದಿನ ಶ್ಲೋಕದಲ್ಲಿ, ಸರ್ವೇಶ್ವರನು ಸುಹಾರ್ದ್ಯವಾಳುವು, ತನ್ನ ಪುತ್ರನಾದ ನನ್ನಲ್ಲಿ ವಾತ್ಸಲ್ಯ ಉಂಟೇನಾ ಕೋಪವೆಂಬುದು ಎಂದಿಗೂ ಇಲ್ಲವು. ಒಂದು ವೇಳೆ ಕೋಪ ಉಂಟಾದರೂ ತಾನು ಅತನನ್ನು ಬಿಡುವನಲ್ಲವೆಂದು ಸದೃಷ್ಟಾಂತವಾಗಿ ತಿಳಿಸಿದರು. ಇನ್ನೂ ಜ್ಞಾನ ವಿಕಾಸವಿಲ್ಲದೇ ಇರುವ ಮಗುವು ಉಪಜೀವ್ಯವಾದ ಸ್ತನ್ಯವನ್ನು ಕೊಡುವ ತಾಯಿಯ ಕಾಲನ್ನು ಬಿಡದೆ ಹೇಗೆ ಇರುತ್ತೋ, ಹಾಗೆಯೇ ನಿನ್ನ ಕೃಪೆಯಿಂದ ಜ್ಞಾನ ವಿಕಾಸವನ್ನು ಹೊಂದಿದ ನಾನು ಉಪಜೀವ್ಯವಾದ ಮೋಕ್ಷ ಸುಖವನ್ನು ವರ್ಷಿಸುವ ನಿನ್ನ ಪಾದವನ್ನು ಬಿಡುವೆನೇ ? ಎಂದು ಹೇಳಿಕ್ಕೊಂಡರು. ಈಗಲಾದರೋ "**ದದಾಮಿ ಬುದ್ಧಿಯೋಗಂ**" ಎಂಬಲ್ಲಿ ಹೇಳಿರುವ ಹಾಗೆ, ಸ್ವಾಮಿಯು ಕೊಟ್ಟಬುದ್ಧಿಯೋಗ ಮತ್ತು ವಿವೇಕ ಜನ್ಯ ಜ್ಞಾನದಿಂದ, ಭೋಗ್ಯತಮವಾದ ಸರ್ವೇಶ್ವರನ ಪಾದ ಕಮಲಗಳಲ್ಲಿಟ್ಟ ತಮ್ಮ ಮನಸ್ಸು ಇತರ ಕ್ಷುದ್ರ ವಿಷಯಗಳಲ್ಲಿ ಎಂದಿಗೂಪ್ರವರ್ತಿಸದೆಂದು ಒಂದು ನಿದರ್ಶನ ಮೂಲಕ ಸಮರ್ಥಿಸುತ್ತಾರೆ —

ತಮ್ಮ ಮನಸ್ಸು ಎಲ್ಲಿ ಸಕ್ತವಾಗಿದೆ ಎಂದರೆ. **ತವಾಮೃತಸ್ಯಂದಿನಿ ಪಾದಪಙ್ಕಜೇ**-ನಿನ್ನ ಪಾದಕಮಲದಲ್ಲಿಟ್ಟ ಮನಸ್ಸು. ಪ್ರಾಜ್ಞರಾದ ತಾವು ಅಲ್ಲಿ ಮನಸ್ಸನ್ನು ಇಡಲು ಕಾರಣವೇನು? ಎಂದರೆ ನೀನು ಕೃಪಾದಾಕ್ಷ್ಯ, ಸೌಲಭ್ಯ ವಾತ್ಸಲ್ಯಾದಿಗಳಿಂದ ಪ್ರೇರಿತನಾಗಿ ಸರ್ವಶಕ್ತನಾಗಿ ಆಶ್ರಿತರ ಅಭೀಷ್ಟಗಳನ್ನು ಸಲ್ಲಿಸುವದೇ ತನ್ನ ವ್ರತವೆಂದು ಕಾದಿರುವಂಥಾ ತವ–ನಿನ್ನ, ಪಾದ ಕಮಲ–ಲ್ಲಿಟ್ಟ ಮನಸ್ಸು ಎಂಬ ಭಾವವು. ಮತ್ತು ಆಪಾದ ಪಂಕಜವೆಂಥಾದ್ದೆಂದರೆ? **ಅಮೃತ ಸ್ಯಂದಿನಿ**-ಮೋಕ್ಷ ಸುಖವನ್ನು ವರ್ಷಿಸುವ ಪಾದ ಪಂಕಜವು; ಸರ್ವೇಶ್ವರನು ಸ್ವತಃ ಆನಂದಮಯನಾಗಿ ಆಶ್ರಿತರಿಗೆ ನಿರತಿಶಯವಾದ ಬ್ರಹ್ಮಾನಂದವನ್ನು ವರ್ಷಿಸುವಂಥಾನನು. ಈ ಪ್ರಯೋಗವು "**ರಸೋವೈಸಃ। ರಸಂ ಹ್ಯೇವಾಯಂ ಲಬ್ಧ್ವಾ ನಂದೀ ಭವತಿ**" (ತೈ. ಆನಂದ. ೭ ಅನು) ಸರ್ವೇಶ್ವರನು ಆನಂದಮಯನು, ಅಂತವನನ್ನು ಈ ಜೀವಾತ್ಮನು ಹೊಂದಿ ನಿರತಿಶಯಾನಂದವನ್ನು ಹೊಂದಿದವನಾಗುವನು" ಎಂಬ ಶ್ರುತ್ಯರ್ಥವನ್ನು ಪ್ರಕಟಿಸುತ್ತದ. ಇದು ಸರ್ವ ಪ್ರಕಾರದಿಂದಲೂ ನಿರತಿಶಯ,

ಭೋಗ್ಯವಾದುದರಿಂದ ಆ ಆನಂದದ ಪರಿಮಿತಿಯನ್ನು ಶ್ರುತಿಯೂ ಕಂಡು ಹಿಡಿಯಲು ಸಾಧ್ಯವಿಲ್ಲದೆ **"ಯತೋ ವಾಚೋ ನಿವರ್ತಂತೇ"** ಎಂದು ಹೇಳಿ ಸುಮ್ಮನಾಯಿತು. ಹಾಗೆ ಅಮೃತವನ್ನು ಪಾದವು ವರ್ಷಿಸುವದರಿಂದಲೇ ಶ್ರೀವಿಷ್ಣು ಸಹಸ್ರನಾಮದಲ್ಲಿ ಭಗವಂತನಿಗೆ **"ಅಮೃತ ಶ್ಶಾಶ್ವತಸ್ಥಾಣುಃ"** (೧೩) ೧೨೦ನೆಯ ನಾಮ) ಅಮೃತನೆಂದೇ ಹೆಸರು. **ಅಮೃತಸ್ಯ ಏಷ ಸೇತುಃ** ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿತು. ಮೋಕ್ಷಾನಂದಕ್ಕೆ ಆತನು ಸಿದ್ಧೋಪಾಯನು. ಛಾಂದೋಗ್ಯ ದಲ್ಲೂ (ಛಾಂ. ೩.೧೪. ೨) **"ಸರ್ವಕರ್ಮಾ ಸರ್ವಕಾಮಃ ಸರ್ವಗಂಧ ಸ್ಸರ್ವರಸಃ"** ಎಂದು ಹೇಳಲ್ಪಟ್ಟಿರುತ್ತದೆ. ಸರ್ವಕರ್ಮಾ ಎಂದರೆ ಜಗತ್ತಿನ ಸಮಸ್ತ ಕರ್ಮವು ಯಾವನದ್ದೋ ಅವನು, ಸಮಸ್ತ ಆರಾಧನ ರೂಪಕರ್ಮವೆಲ್ಲಾ ಅವನ ಪೂಜಾರೂಪ ವಾದುದೋ ಅವನು, **ಸರ್ವಕಾಮಃ**-ಭೋಗ್ಯ ಭೋಗೋಪಕರಣಗಳೆಲ್ಲಾ ತುಂಬಾ **ಪರಿಶುದ್ಧ**ವಾದವುಗಳನ್ನಾಗಿ ವುಳ್ಳವನು, **ಸ್ಸರ್ವಗಂಧ ಸರ್ವರಸಃ**—ಅಪ್ರಾಕೃತ ಸ್ವಾಸಾಧಾರಣ ನಿರವದ್ಯ ನಿರತಿಶಯಗಳಾದ ಕಲ್ಯಾಣಗಳಾದ ತನಗೆ ಭೋಗ್ಯ **ಭೂತಗಳಾದ ಸಮಸ್ತ ಗಂಧಗಳನ್ನೂ ಉಳ್ಳವನು.** ಎಂದರೆ ಆನಂದ ಪರಿಪೂರ್ಣ ನೆಂಬ **ಅರ್ಥವು. ಇಂತಹ ನಿರತಿಶಯವಾದ ಆನಂದವನ್ನು ವರ್ಷಿಸುವಂಥಾದ್ದು ನಿನ್ನ** ಪಾದಕಮಲವು. ಇಲ್ಲಿ **ಪಾದಪಂಕಜ** ವೆಂಬ ಪ್ರಯೋಗವು, ಶ್ರಿಯಃ ಪತಿಯಲ್ಲಿ **ರುವ, ಕೋಮಲತ್ವ,** ದಯಾರ್ದ್ರ ಹೃದಯತ್ವ, ಪರಮ ಭೋಗ್ಯತ್ವ, ಕ್ಷಾಮ್ಯತ್ವಾದಿ ಕಲ್ಯಾಣ ಗುಣಯೋಗವನ್ನು ಸೂಚಿಸುತ್ತದೆ. ಭಗವಂತನು **ಆನಂದಯಾತಿ** ಆನಂದವನ್ನುಂಟುಮಾಡುವವನಾಗಿ **ಆನಂದ** ವೆಂಬ ಹೆಸರಿನಿಂದಲೇ ಹೇಗೆ ಬೋಧಿ ತನೋ ಹಾಗೆಯೇ ಅಮೃತಸ್ಯಂದಿಯಾದುದರಿಂದ ಆತನು **ಅಮೃತ**ನೆಂದೇ ಕರೆಯ ಲ್ಪಡುವನು. ಹಾಗೆಯೇ ಶ್ರೀ ವಾಸುದೇವನು ವೈಕುಂಠವನ್ನು ಕೊಡುವದರಿಂದ **ವೈ ಕುಂಠ** ನೆಂಬ ಹೆಸರಿನಿಂದಲೇ ಹೇಳಲ್ಪಡುವನು. **"ವೈಕುಂಠಃ ಪುರುಷಃ ಪ್ರಾಣಃ"** (ಸಹಸ್ರನಾಮ) ಆತನಲ್ಲೇ ಸಕ್ತವಾಗಿರುವ ಮನಸ್ಸು ಬೇರೆ ಕಡೆ ಪ್ರವರ್ತಿ ಸಲು ಎಂದಿಗಾದರೂ ಸಾಧ್ಯವೇ? ಆದುದರಿಂದ **ಕಥಮನ್ಯ ದಿಚ್ಛತಿ** ಎಂದು ಹೇಳಿ **ಕೊಂಡರು.** **ಪಂಚಭಕ್ಷ** ಪರಮಾನ್ನವು ಭಗವನ್ನಿವೇದಿತವಾದುದು ಸಿಕ್ಕಿರುವಾಗ ಮನ ಸ್ಸು ಹಳಸಿದ ಅನ್ನದ ಕಡೆಗೆ ತಿರುಗೀತೇ? ಎಂದಿಗೂ ಸಾಧ್ಯವೇ ಇಲ್ಲವೆಂಬ ಭಾವವು. ಅದೂ ಅಲ್ಲದೆ ಆಶ್ರಿತವಾತ್ಸಲ್ಯೈಕ ಜಲಧಿಯಾಗಿರುವ ನೀನೇ ಸಿದ್ಧೋಪಾಯನಾಗಿ ಪ್ರೇರಕನಾಗಿರುವಾಗ, ಮನಸ್ಸು ಇನ್ನೆಲ್ಲಾದರೂ ಕ್ಷುದ್ರ ವಿಷಯಗಳಲ್ಲಿ ಪ್ರವರ್ತಿಸಲು ನೀನು ಬಿಡುವನೇ ಅಲ್ಲವೆಂಬ ಭಾವವೂ ದ್ಯೋತಿತವು. ನನ್ನ ಪ್ರವರ್ತನೆಗಳಿಗೆಲ್ಲಾ ನೀನೇ ಹೃಷೀಕೇಶನಾದುದರಿಂದ ನಿನಗೇ ಅಧೀನವು. "ಪರಾತ್ತುತಚ್ಛ್ರುತೇಃ" ಎಂಬ ಸೂತ್ರಾರ್ಥವೂ ಇಲ್ಲಿ ಅನುಸಂಧೇಯವು. **ಕಥಮನ್ಯ ದಿಚ್ಛತಿ** ಎಂಬಲ್ಲಿ **ಅನ್ಯತ್** ಎಂಬ ಪ್ರಯೋಗದಿಂದ, ಅಲ್ಪವಾಗಿ, ಅಸ್ಥಿರವಾಗಿ, ಅನರ್ಥದಾಯಿಕವಾಗಿ

ದುಃಖಮಿಶ್ರವಾಗಿರುವವು ಮಿಕ್ಕದ್ದೆಲ್ಲವೂ ಎಂಬ ಭಾವವು ತೋರಿಬರುತ್ತದೆ. ಇಲ್ಲಿ ಹೀಗೆ ತುಚ್ಛವಾದುದನ್ನು ಹೇಗೆ ನನ್ನ ಮನಸ್ಸು ಇಚ್ಛಿಸುತ್ತದೆ? ಎಂಬಲ್ಲಿ ಇಚ್ಛೆಯೇ ಯಾವಾಗ ಇಲ್ಲವೋ ಪ್ರವೃತ್ತಿಯೂ ಎಂದಿಗೂ ಇಲ್ಲಃ ಇಲ್ಲವೆಂದು ಗ್ರಹಿಸತಕ್ಕದ್ದಾಗಿರುತ್ತದೆ.

ಮೇಲೆ ಹೇಳಿದ ಅಭಿಪ್ರಾಯವನ್ನು ಒಂದು ನಿದರ್ಶನ ಮೂಲಕ ನ್ಯಾಸಿಸುತ್ತಾರೆ.—ಮಕರಂದ ಪರಿಪೂರ್ಣವಾಗಿರುವ ಕಮಲ ಪುಷ್ಪವನ್ನು ಆಶ್ರಯಿಸಿರುವ ಭ್ರಮರವು, ನಿರ್ಗಂಧ ಕುಸುಮವನ್ನು ಕಣ್ಣೆತ್ತಿಯಾದರೂ ನೋಡೀತೇ ಎಂದು ಹೇಳುತ್ತಾರೆ. **ಮಧುವ್ರತ** ಶಬ್ದವು ಭ್ರಮರಕ್ಕೆ ಮಧುವೇ ಸತ್ತಾದಾಯಕವೆಂಬುವನ್ನು ತಿಳಿಸುವದರಿಂದ, ಹಾಗೆಯೇ ಸ್ವಾಮಿಯ ಪಾದಕಮಲವೇ ಸ್ವೋಜ್ಜೀವನಕ್ಕೆ ಬೇಕಾದ ಸತ್ತೆಯನ್ನು ಕೊಡುವಂತಾದ್ದೆಂಬುವದನ್ನು ಸೂಚಿಸುತ್ತದೆ. ಅದೂ ಅಲ್ಲದೆ ತಾವೂ ಮಧುವ್ರತದ ಹಾಗೆ ಸಾರತಮ ಗ್ರಾಹಿತ್ವವನ್ನು ಭಗವದ್ಭಾಗವತ ಕಟಾಕ್ಷದಿಂದಲೂ, ತಮ್ಮ ಆಚಾರ್ಯರ ಮತ್ತು ಪಿತಾಮಹರಾದ ನಾಥಮುನಿಗಳ ಕೃಪೆಯಿಂದಲೂ ಸಂಪಾದಿಸದವರೆಂಬ ಭಾವವೂ ತೋರಿಬರುತ್ತದೆ. ಈ ಮಧುವ್ರತ ದೃಷ್ಟಾಂತದಿಂದ ಇನ್ನೊಂದು ಭಾವವೂ ವ್ಯಕ್ತವು. ತಾವು ಈಗ ದೃಢವಾಗಿ ಮನಸ್ಸನ್ನು ಶ್ರಿಯಃಪತಿಯ ಪಾದಕಮಲದಲ್ಲಿಟ್ಟಿರುವದನ್ನು ಇತರ ದುಷ್ಟ ಸಹವಾಸದಿಂದ ವ್ಯತ್ಯಸ್ತವಾಗಿ ಪರಿಣಮಿಸುವ ಭಯವೂ ಕೂಡ ವಿಲ್ಲವು; ಏಕೆಂದರೆ ಒಂದು ಕ್ಷುದ್ರವಾದ ತಿರ್ಯಕ್ಕಿನಲ್ಲೇ ಇಷ್ಟು ವಿವೇಕ ವಿದ್ದು ಸಾರತಮವಾದ ಕಮಲ ಪುಷ್ಪವನ್ನಾಶ್ರಯಿಸಿ ಭಗವದರ್ಚನೆಗೆ ಯೋಗ್ಯವಲ್ಲದ, ಪರಿಮಳವಿಲ್ಲದ, ಭ್ರಮರ ಸ್ಪರ್ಶದಿಂದಲೇ ಮ್ಲಾನತೆಯನ್ನು ಹೊಂದುವ, ಕ್ಷುದ್ರ ಪುಷ್ಪವಾದ ಇಕ್ಷುರಕವನ್ನು ಕಣ್ಣೆತ್ತಿ ನೋಡದೇ ಇರುವಾಗ, ಸ್ವಾಮಿಕೃಪೆಯಿಂದ ವಿವೇಕಜನ್ಯಶಾಸ್ತ್ರಜನ್ಯ ಜ್ಞಾನಗಳನ್ನು ಹೊಂದಿರುವ ನಾನು ಪರಮ ಭೋಗ್ಯ ಭೂತವಾದ ನಿನ್ನ ಪಾದ ಕಮಲಗಳನ್ನು ಬಿಟ್ಟು, ಇತರವಾದ ಕ್ಷುದ್ರವಾದವುಗಳನ್ನು ಕಣ್ಣೆತ್ತಿ ನೋಡುವೆನೋ? ಎಂಬುದೂ ವ್ಯಕ್ತವು. **ನನಾಕಪೃಷ್ಠಂ ನ ಚ ಸಾರ್ವಭೌಮಂ ನಪಾರಮೇಷ್ಠ್ಯಂ ನರಸಾಧಿಪತ್ಯಂ ನಯೋಗಸಿದ್ಧೀ ರಪುನರ್ಭವಂವಾ। ವಾಂಛನ್ತಿಯತ್ಪಾದ ರಜಃ ಪ್ರಪನ್ನಾಃ** (ಭಾಗ.) ಸ್ವರ್ಗಲೋಕ ಭೋಗವನ್ನಾಗಲಿ, ಈ ಲೋಕದ ಚಕ್ರವರ್ತಿತ್ವವನ್ನಾಗಲಿ ಬ್ರಹ್ಮಲೋಕಾಧಿಪತ್ಯವನ್ನಾಗಲಿ, ಕುಬೇರ ಲೋಕದ, ಐಶ್ವರ್ಯವನ್ನಾಗಲಿ, ಕೈವಲ್ಯವನ್ನಾಗಲಿ, ನಿನ್ನ ಪಾದಕಮಲವನ್ನು ಆಶ್ರಯಿಸಿದ ಪ್ರಪನ್ನರು ಅಪೇಕ್ಷಿಸುವದಿಲ್ಲವೆಂದು ಹೇಳಲ್ಪಟ್ಟಿದುತ್ತದೆ. ಹಾಗೆಯೇ ಶ್ರೀದೇಶಿಕರವರು "**ನಾಥೇ ನಸ್ತೃಣ ಮನ್ಯದನ್ಯದ ಪಿವಾ** (ರಹಸ್ಯತ್ರಯ) ಎಂಬಲ್ಲಿರಿ ಎಲ್ಲಾ ಭೋಗಗಳನ್ನು ತೃಣವಾಗಿ ಭಾವಿಸಿರುತ್ತಾರೆ.

**ತ್ವದಂಘ್ರಿ ಮುದ್ದಿಶ್ಯ ಕದಾಪಿ ಕೇನಚಿ |**
**ದ್ಯಥಾ ತಥಾವಾಪಿ ಸಕೃತ್ಕೃತೋಂಜಲಿಃ ||**
**ತದೇವ ಮುಷ್ಣಾತ್ಯ ಶುಭಾನ್ಯ ಶೇಷತಃ |**
**ಶುಭಾನಿ ಪುಷ್ಣಾತಿ ನಜಾತು ಹೀಯತೇ ||೨೮||**

**ಅವತಾರಿಕೆಯು.**—ಹಿಂದಿನ ಎರಡು ಶ್ಲೋಕಗಳಿಂದಲೂ ವಿವೇಕಶಾಲಿಯಾದ ಮೋಕ್ಷಾರ್ಥಿಯಾದ ನಾನು, ನಿನ್ನ ಪಾದ ಪಂಕಜವನ್ನು ಬಿಡಲಾರನೆಂದು ಹೇಳಿದರು. ಹಾಗಾದರೆ ಬಹು ಶ್ರಮಸಾಧ್ಯವಾದ ಕರ್ಮಯೋಗಾದಿಗಳಿಂದ ಸಹ ಕೃತವಾದ ಉಪಾಸನಾದಿಗಳಿಂದ ಬಹುಕಾಲಾನಂತರ ಯೋಗ ನಿಷ್ಪತ್ತಿಯಿಂದ ಸಾಧ್ಯವಾಗುವ ಫಲವನ್ನು ಈ ಲಘುತರವಾದ ಭರನ್ಯಾಸದಿಂದ ಹೇಗೆ ಸಾಧ್ಯವೆಂಬ ವಿಷಯದಲ್ಲಿ, ನಿವೃತ್ತಿ ಧರ್ಮವನ್ನಾಶ್ರಯಿಸಿ ಭಕ್ತಿ ಪುರಸ್ಸರವಾಗಿ ಮಾಡಿದ ಅಂಜಲ್ಯಾದಿಗಳಿಂದಲೇ ಕರುಣಾಸಾಗರನಾದ ಆಶ್ರಿತವಾತ್ಸಲ್ಯನು ಪ್ರೀತನಾಗುವನೆಂದು ಈ ಶ್ಲೋಕದಲ್ಲಿ ಅಂಜಲಿ ಪ್ರಭಾವವನ್ನು ವ್ಯಕ್ತಪಡಿಸುತ್ತಾರೆ. ಶಾಸ್ತ್ರ ಪುರಸ್ಸರವಾಗಿ ಅಷ್ಟಾಂಗ ಪ್ರಣಾಮವನ್ನು ಮಾಡಲು ಅಶಕ್ತನಾಗಿದ್ದ ಪಕ್ಷದಲ್ಲಿ, ಆತನ ಪಾದಾರವಿಂದವನ್ನು ಕುರಿತು ಅಂಜಲಿ ಬಂಧವೇ ಸಾಕೆಂದು ಹೇಳುತ್ತಾರೆ. ಇದರ ಮುಂದಿನ ಶ್ಲೋಕದಲ್ಲಿ, ಇದಕ್ಕೂ ಅಶಕ್ತನಾದ ಪಕ್ಷದಲ್ಲಿ, ಪರಮ ವಿಶ್ವಾಸದಿಂದ ಮನಸ್ಸಿನ ಮೂಲಕ ಭಕ್ತಿಯನ್ನು ಇಟ್ಟರೂ ಸಾಕೆಂದು ಹೇಳುತ್ತಾರೆ. ಅಂತೂ ಇವೂ ಕೂಡ ಉಪಾಯದಲ್ಲೇ ಸೇರಬೇಕಾದರೆ ಪ್ರಪದನಕ್ಕೆ ಬೇಕಾದ ಐದು ಅಂಗಗಳನ್ನೂ ಇವೂ ಅಪೇಕ್ಷಿಸುತ್ತವೆ ಎಂದು ಭಾವಿಸತಕ್ಕದ್ದು.

**ಪ್ರತಿಪದಾರ್ಥವು**—ತ್ವದಂಘ್ರಿಂ—ಸರ್ವಲೋಕ ಶರಣ್ಯನಾದ ನಿನ್ನ ಪಾದ ಕಮಲವನ್ನು, **ಉದ್ದಿಶ್ಯ**-ಉದ್ದೇಶಿಸಿ, **ಕದಾಪಿ**-ಕಾಲನಿಯಮವಿಲ್ಲದೆ ಯಾವಾಗಲಾದರೂ ಕೂಡ, ಕಾಲವನ್ನು ಹೇಳಿದುದು ದೇಶ ಮತ್ತು ಅವಸ್ಥೆಗಳಿಗೂ ಉಪಲಕ್ಷಣವಾದುದರಿಂದ, ದೇಶ ಕಾಲ ಅವಸ್ಥಾನಿಯಮಗಳಿಲ್ಲದೆ, ಯಾವದೇಶ, ಯಾವ ಕಾಲ, ಯಾವ ಅವಸ್ಥೆಯಲ್ಲಾಗಲಿ, **ಕೇನಚಿತ್**-ಸ್ತ್ರೀ ಶೂದ್ರ ಶಬರ ಹೂಣ ಶ್ವಪಾಕ ಮೊದಲಾದ ಪಾಪ ಜೀವರೇ ಮೊದಲಾದ ಯಾರಿಂದಲೇ ಆಗಲಿ, **ಯಥಾ ತಥಾವಾಪಿ**-ಅಂಜಲಿ ಮಾಡುವ ವಿಧಾನವೂ ಕೂಡ ತಿಳಿಯದೆ ಹೇಗೋ ಒಂದು ವಿಧವಾಗಿ, **ಸಕೃತ್ಕೃತೋಂಜಲಿಃ**-ಪುನಃ ಪುನಃ ಮಾಡದೆ ಒಂದೇ ಸಲ ಮಾಡಲ್ಪಟ್ಟ ಅಂಜಲಿ ಬಂಧವು, ಸ್ವಾಮಿಯ ಪಾದದಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಲು ಅಶಕ್ತನಾಗಿ ಒಂದು ಸಲ ಅಂಜಲಿ ಮಾಡೋಣವು ಎಂದರೆ ಎರಡು ಕೈಯನ್ನು ಜೋಡಿಸಿ ಕೈ ಮುಗಿಯೋಣವು. ತದೇವ-ಆ ಕಾಲದಲ್ಲೇ ಎಂದರೆ ಅಂಜಲಿ ಮಾಡಿದ ಒಡನೆಯೇ, **ಅಶೇಷತಃ**- ನಿಶ್ಶೇಷವಾಗಿ, **ಅಶುಭಾನಿ**—ದುಃಖ

ಪ್ರದಗಳಾದ ಅಮಂಗಳಗಳೆಲ್ಲವನ್ನೂ **ಮುಷ್ಣಾತಿ**-ಅಪಹರಿಸುತ್ತದೆ. **ಅಶೇಷತಃ**-ಶೇಷವೊಂದೂ ಇಲ್ಲದೆ ಹಾಗೆ ಸಮಸ್ತಗಳಾದ, ಇಲ್ಲಿ **ಅಶೇಷತಃ**-ಎಂಬುದನ್ನು ಕಾಕಾಕ್ಷಿನ್ಯಾಯದ ಪ್ರಕಾರ ಮಧ್ಯೆ ಇರುವುದರಿಂದ ಎರಡುಕಡೆಗೂ ಅನ್ವಯಿಸ ತಕ್ಕದ್ದು.

**ಶುಭಾನಿ**—ಸುಖಪ್ರದಗಳಾದ ಮಂಗಳಗಳನ್ನೂ **ಪುಷ್ಣಾತಿ**-ವೃದ್ಧಿ ಹೊಂದಿಸುತ್ತದೆ. **ನಜಾತುಹೀಯತೇ**-ಎಂದಿಗಾಗಲಿ ಈ ಅಂಜಲಿಬಂಧವು ವ್ಯರ್ಥವಾಗುವುದಿಲ್ಲವು. ಈ ಅಂಜಲಿ ಮಾಡೋಣವು ಸರಿಯಾದ ಪ್ರಣಾಮಕ್ಕೆ ಬದಲಾಗಿ ಹೇಳಲ್ಪಟ್ಟ ಕಾಯಿಕ ವ್ಯಾಪಾರವೆಂದು ಭಾವಿಸತಕ್ಕದ್ದು. ಇದು ಮೋಕ್ಷಪಾಯಕವಾಗಬೇಕಾದರೆ ಐದು ಅಂಗಗಳಿಂದಲೂ ಕೂಡಿರಬೇಕು. ಇದರಲ್ಲೂ ಆತ್ಮನಿಕ್ಷೇಪವನ್ನು ನಿರ್ದೇಶಿಸುವುದಕ್ಕಾಗಿ **ತ್ವದಂಘ್ರಿಮುದ್ದಿಶ್ಯ** ಎಂದು ಆರಂಭಿಸಿ ಹೇಳಿರುತ್ತಾರೆ. ಹೀಗೆ ಅಂಗಗಳಿಂದ ಕೂಡಿ ಭಕ್ತಿ ಪುರಸ್ಸರ ವಾಗಿ ಅಂಜಲಿಯನ್ನು ಸಕೃತ್ ಮಾಡಿದರೂ ಗುರುತರವಾದ ಉಪಾಸನೆಯು ಕೊಡುವ ಫಲವನ್ನೇ ಕೊಡುತ್ತದೆಂಬ ತಾತ್ಪರ್ಯವು. ಪ್ರಣಾಮಪೂರ್ವಕವಾದ ಶರಣಾಗತಿಗೆ ಹೇಗೆ ದೇಶಕಾಲಾವಸ್ಥಾನಿಯಮಗಳಿಲ್ಲದೆಯೂ ಸ್ತ್ರೀಪುರುಷ ಜಾತಿ ಕುಲಾದಿ ನಿಯಮಗಳಿಲ್ಲದೆಯೂ, ಸರ್ವರಿಂದಲೂ ಸಕೃದನುಷ್ಠೇಯವೋ. ಹಾಗೆಯೇ ಈ ಅಂಜಲಿ ಬಂಧವು ಎಂಬ ತಾತ್ಪರ್ಯವು.

**ಉಪಪಾದನೆಯು — ತ್ವದಂಘ್ರಿಮುದ್ದಿಶ್ಯ**— ನಿನ್ನ ಪಾದಕಮಲವನ್ನು ಉದ್ದೇಶಿಸಿ ಎಂದು ಹೇಳಿರುವುದರಿಂದ, ಸ್ವಾಮಿಯು ಮುಕ್ತಿದಾಯಕನಾದ ಮುಕುಂದನಾದ ಪ್ರಯುಕ್ತ ಆತನ ಪಾದಯುಗ್ಮವನ್ನೇ ಮುಕ್ತಿಗಾಗಿ ಆಶ್ರಯಿಸ ಬೇಕೇವಿನಾ ಬ್ರಹ್ಮ ರುದ್ರೇಂದ್ರಾದಿಗಳನ್ನು ಆಶ್ರಯಿಸತಕ್ಕದ್ದಲ್ಲವೆಂದು ಸೂಚಿತವು. ಮೋಕ್ಷ ಧರ್ಮದಲ್ಲಿ ಹಾಗೆಯೇ ಹೇಳಿರುತ್ತದೆ. **ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾ ದೇವತಾಃಸ್ಮೃತಾಃ। ಪ್ರತಿಬುದ್ಧಾ ನಸೇವಂತೇ ಯಸ್ಮಾತ್ ಪರಿಮಿತಂಫಲಂ।** ಚತುರ್ಮುಖಬ್ರಹ್ಮನನ್ನೇ ಆಗಲಿ, ರುದ್ರನನ್ನೇ ಆಗಲಿ ಅಥವಾ ಇನ್ನೂ ಇತರ ದೇವತೆಗಳನ್ನೇ ಯಾಗಲಿ ಪ್ರಾಜ್ಞರು ಸೇವಿಸುವದಿಲ್ಲವು ಎಂದರೆ ಆಶ್ರಯಿಸುವುದಿಲ್ಲವು. ಏಕೆಂದರೆ ಅವರುಗಳು ಕೊಡುವ ಫಲಗಳು ಪರಿಮಿತಿಯುಳ್ಳವು. ಅಪರಿಮಿತವಾದ, ಮೋಕ್ಷಸುಖವನ್ನು ಕೊಡಲು ಅವರಿಗೆ ಶಕ್ತಿಯಿಲ್ಲವೆಂಬರ್ಥವು, ಆ ಬ್ರಹ್ಮರುದ್ರಾದಿಗಳು ಧ್ಯಾನಯೋಗ್ಯರಲ್ಲವು. ಏಕೆಂದರೆ ಅವರಿಗೆ ಶುಭಾಶ್ರಯತ್ವವಿಲ್ಲವು. ಗುರುತರ ಉಪಾಯಕ್ಕೂ ಆ ಕಾರಣದಿಂದ ಅನರ್ಹರು. ಎಂತಹ ಉಪಾಸಕರಿಗೆ ಮೋಕ್ಷ ಪ್ರಾಪ್ತಿಯುಂಟೆಂಬ ಸಂದರ್ಭದಲ್ಲಿ ಪರಮಪುರುಷನ ಶುಭಾಶ್ರಯವನ್ನು ಉಪಾಸಿಸುವವರಿಗೆ ಮಾತ್ರ ಮೋಕ್ಷವೆಂದು ತಿಳಿಸಿರುತಾರೆ. ಹೀಗೆ ದಿವ್ಯಮಂಗಳ ವಿಗ್ರಹ ಯುಕ್ತನಾದ ಪರಮಪುರುಷನೇ ಅಮಂಗಳಗಳನ್ನು ಹೋಗಲಾಡಿಸಿ ಸರ್ವಮಂಗಳಗಳನ್ನೂ

ಉಂಟುಮಾಡಲು ಶಕ್ತಿಯುಳ್ಳವನು. **ತ್ವದಂಘ್ರಿ ಮುದ್ದಿಶ್ಯ** ಎಂಬ ಪ್ರಯೋಗಕ್ಕೆ ಎರಡು ಕಾರಣಗಳನ್ನು ಹೇಳಬಹುದು. (೧) ಈ ಅಂಜಲಿ ಬಂಧಕ್ಕೂ ಕೂಡ ಆತ್ಮನಿಕ್ಷೇಪವು ಅವಶ್ಯಕವೆಂದು ತಿಳಿಸುವುದಕ್ಕಾಗಿಯೂ (೨) ಇಹಲೋಕದಲ್ಲೂ ಕೂಡ ಯಾರಾದರೂ ಶತ್ರುನನ್ನು ಕುರಿತು ಅಪರಾಧಿಯು ರಕ್ಷಿಸು ಎಂದು ಬೇಡಿದರೆ ರಕ್ಷಿಸುವಾಗ, ಸರ್ವಲೋಕ ಶರಣ್ಯನಾಗಿ ಕ್ಷಮಾಗುಣ ನಿಧಿಯಾಗಿ, ಕೃಪಾಮಹೋದಧಿಯಾಗಿರುವ, ಶ್ರಿಯಃ ಪತಿಯ ಪಾದಕಮಲವನ್ನು "**ಸಭ್ರಾತುಃ ಚರಣೌಗಾಢಂ ನಿಪೀಡ್ಯ ರಘುನಂದನಃ** ಎಂಬಲ್ಲಿ ಹೇಳಿರುವಹಾಗೆ ಗಟ್ಟಿಯಾಗಿ ಹಿಡಿದುಕ್ಕೊಂಡರೆ ಎಂದಿಗೂ ರಕ್ಷಿಸದೇ ಇರುವುದಿಲ್ಲವೆಂಬ ಭಾವವನ್ನು ಪ್ರದರ್ಶಿಸುವುದಕ್ಕಾಗಿಯೂ ಹಾಗೆ ಪ್ರಯೋಗವು. ಪಾದವು ರಕ್ಷಿಸುತ್ತದೆ ಎಂಬದನ್ನು ಅಹಲ್ಯಾ ಶಾಪವಿಮೋಚನ ವೃತ್ತಾಂತದಿಂದಲೂ, ಉತ್ತರಾಗರ್ಭ ರಕ್ಷಣ ವೃತ್ತಾಂದಿಂದಲೂ, ಬಲಿಚಕ್ರವರ್ತಿಯ ವೃತ್ತಾಂತದಿಂದಲೂ, ಲೋಕಪಾವನೆಯಾದ ಗಂಗೋತ್ಪತ್ತಿಯಿಂದಲೂ ಅರಿಯಬಹುದು. ಹೀಗೆ "**ತ್ವದಂಘ್ರಿಮುದ್ದಿಶ್ಯ**"ವೆಂದು ಹೇಳಿರುವುದರಿಂದ ಅನ್ಯದೇವತೆಯ ಉದ್ದಿಶ್ಯವಾಗಿ ಮಾಡುವರಲ್ಲವೆಂದೂ, ಮತ್ತು ಅನ್ಯದೇವತೆಗಳು ಕೊಡುವ ಅಲ್ಪಾಸ್ಥಿರಪ್ರಯೋಜನದ ಉದ್ದಿಶ್ಯವಾಗಿಯೂ ಅಲ್ಲವೆಂಬುದು ಏರ್ಪಟ್ಟಿತು.

ಅಥವಾ **ತ್ವದಂಘ್ರಿ ಮುದ್ದಿಶ್ಯ** ಎಂಬುದರಿಂದ ಉಪಾಸನಾಧಿಕಾರವು ಸ್ವಾಮಿಯ ಮುಖ ಮೊದಲುಗೊಂಡು ಸಂಪೂರ್ಣ ದಿವ್ಯಮಂಗಳ ವಿಗ್ರಹವನ್ನೂ ಸಾಕ್ಷಾತ್ಕಾರ ಮಾಡುವುದನ್ನು ವ್ಯಾವರ್ತಿಸಿ ಅಂಘ್ರಿ-ಪಾದಕಮಲವನ್ನು ಆಶ್ರಯಿಸುವುದೇ ಸಾಕು ಎಂದು ಹೇಳಲ್ಪಟ್ಟಿತು. ಹೇಗೆಂದರೆ ಲಕ್ಷ್ಮಣನು ಸೀತೆಯ ಆಭರಣಗಳನ್ನು ವಿಮರ್ಶಿಸುವ ಸಂದರ್ಭದಲ್ಲಿ ಸುಗ್ರೀವನಿಗೆ ಹೇಳುತ್ತಾನೇನೆಂದರೆ **"ನಾಹಂ ಜಾನಾಮಿ ಕೇಯೂರೇ ನಾಹಂ ಜಾನಾಮಿ ಕುಂಡಲೇ । ನೂಪುರೇತ್ವಭಿ ಜಾನಾಮಿ ನಿತ್ಯಂ ಪಾದಾಭಿವಂದನಾತ್"** ॥ ನಾನು ಸೀತೆಯ ಬಾಹುಭೂಷಣಗಳಾದ ವಂಕಿಗಳನ್ನು ಗುರುತಿಸಲಾರೆನು. ಆಕೆಯ ಕರ್ಣಾಭರಣಗಳನ್ನೂ ಗುರುತಿಸಲಾರೆನು. ನಿತ್ಯವೂ ಆಕೆಯ ಪಾದಕ್ಕೆರಗುವುದರಿಂದ ಕಾಲಿನ ಆಬರಣಗಳಾದ ಕಾಲುಸರವನ್ನು ಮಾತ್ರ ನಿಸ್ಸಂಶಯವಾಗಿ ಗುರ್ತಿಸಬಲ್ಲೆನು ಎಂದು ಆಶ್ರಯಣಕ್ಕೆ ಅಂಘ್ರಿಗಳೇ ಪರಮಗತಿ ಎಂದು **ಅಂಘ್ರಿಮುದ್ದಿಶ್ಯ**ಎಂದು ಹೇಳಲ್ಪಟ್ಟಿತು.

ಇಲ್ಲಿ **ಉದ್ದಿಶ್ಯ** ಎಂಬ ಪದದಿಂದ ಪಾದಕಮಲವನ್ನೇ ಉಪಾಯತಯಾ ಉದ್ದೇಶಿಸಿ ಎಂದಾಗಲಿ ಕೈಂಕರ್ಯವನ್ನು ಪಾದಕಮಲಗಳ ಸನ್ನಿಧಿಯಲ್ಲಿ ಮಾಡಬೇಕೆಂಬ ಅಭಿಸಂಧಿಯಿಂದಲಾಗಲಿ ಎಂಬ ಭಾವವು ತೋರಿಬರುತ್ತದೆ.

**ಕದಾಪಿ** ಎಂಬುದರಿಂದ ಸ್ವಾಮಿಗೆ ಅಂಜಲಿ ಬಂಧವನ್ನು ಮಾಡಲು ಯಾವುದೊಂದು ನಿಯತಿ ನಿಯಮವಿಲ್ಲದೆ ಸದಾ ಮಾಡಬಹುದೆಂಬ ಭಾವವು

ಸೂಚಿತವು. ಹಾಗೆಯೇ ದೇಶಕಾಲ ಮತ್ತು ಅವಸ್ಥಾ ನಿಯಮವೂ ಇಲ್ಲವು; ಎಲ್ಲಿಯೇ ಇರಲಿ, ಯಾವ ಅವಸ್ಥೆಯಲ್ಲೇ ಇರಲಿ, ಅಂಜಲಿ ಬಂಧವನ್ನು ಮಾಡಲು ಏನೂ ಅಭ್ಯಂತರವಿಲ್ಲವು. **"ಜಾತಪುತ್ರಃ ಕೃಷ್ಣಕೇಶೋಗ್ನೀನಾದಧೀತ"** ಮಗುವು ಹುಟ್ಟಿದವನು, ಶುಚಿಭೂತನಾಗಿ ಕೆಲವು ಸಂಸ್ಕಾರಾದಿಗಳನ್ನು ನಡೆಸಬೇಕೆಂಬ ನಿಯಮವುಂಟು, ಸಂಧ್ಯಾವಂದನಾದಿಗಳನ್ನು ಕ್ಲಿಪ್ತಕಾಲದಲ್ಲಿ ಶುಚಿ ಭೂತನಾಗಿ ಸ್ನಾನಾನಂತರ ಮಾಡಬೇಕೆಂಬ ನಿಯಮವುಂಟು, ಶ್ರಾದ್ಧಾದಿ ಕರ್ಮಗಳಿಗೂ ಹೀಗೆಯೇ ನಿಯಮವುಂಟು, ಈ ಅಂಜಲಿಬಂಧಕ್ಕೆ ಹೀಗೆ ಯಾವುದೊಂದೂ ಕಾಲದೇಶಾವಸ್ಥಾದಿಗಳ ನಿಯಮವ್ಯಾವುದೂ ಇಲ್ಲವೆಂಬ ಭಾವವು.

**ಕೇನಚಿತ್** ಈ ಅಂಜಲಿ ಬಂಧಕ್ಕೆ ಸಮಸ್ತ ಜನರೂ ಅರ್ಹರೇ, ವರ್ಣಾಶ್ರಮ ಧರ್ಮಗಳು ಇದಕ್ಕೆ ಬೇಕಿಲ್ಲವು. ವೇದವೇದಾಂಗ ಪಾರಂಗತತ್ವವೂ ಬೇಕಿಲ್ಲವು. **"ಸತ್ಯಾದಿಷ್ವಿವ ನೈಗಮೇಷ್ವಧಿಕೃತಿಃ ಸರ್ವಾಸ್ಪದೇ ಸತ್ಪಥೇ"** ಎಂದು ಮಹಾಗುರುಗಳು ಅಪ್ಪಣೆ ಕೊಡಿಸಿರುವ ಹಾಗೆ **'ಸತ್ಯಂವದ'** ಎಂದು ಶ್ರುತಿಯಲ್ಲಿ ಹೇಳಿದ್ದರೂ ಹೇಗೆ ಅದರಲ್ಲಿ ಸರ್ವರಿಗೂ ಅನ್ವಯವುಂಟೋ, ಹಾಗೆಯೇ ಅಂಜಲಿಬಂದಧಲ್ಲಿ ಅಧಿಕಾರವು ಸ್ತ್ರೀ, ಬಾಲ, ಪಂಡಿತ, ಬ್ರಾಹ್ಮಣ, ಶ್ವಪಾಕ ಮೊದಲಾಗಿ ಸರ್ವರಿಗೂ ಉಂಟೆಂಬುದು ಈ **ಕೇನಚಿತ್ತೆಂ**ಬ ಪ್ರಯೋಗದಿಂದ ವ್ಯಕ್ತವು. ಆದುದರಿಂದ ಇದು ಸುಕರವಾದುದು ಮತ್ತೂ ಶಾಸ್ತ್ರೀಯವಾದುದೆಂಬ ಭಾವವು. **"ಅಂಜಲಿಃ ಪರಮಾಮುದ್ರಾಕ್ಷಿಪ್ರಂ ದೇವಪ್ರಸಾದಿನೀ"**ಅಂಜಲಿಯು ಸರ್ವೋತ್ಕೃಷ್ಟವಾದ ಕರನ್ಯಾಸವು. ಬಹುಬೇಗನೆ ಸರ್ವೇಶ್ವರ ಪ್ರಸನ್ನತೆಯನ್ನುಂಟುಮಾಡುವಂತಹುದೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಈ ಅಂಜಲಿ ರಚನೆಯನ್ನು ಹೀಗೆಯೇ ರಚಿಸಬೇಕೆಂಬ ಅವಶ್ಯಕತೆ ಇಲ್ಲದೆ ಹೇಗೆ ಮಾಡಿದರೂ ಸ್ವಾಮಿಯ ಪ್ರಸನ್ನತೆಯ ಸಂಪಾದಕವೆಂದು ಹೇಳುವುದಕ್ಕಾಗಿ **ಯಥಾ ತಥಾವಾಪಿ** ಎಂದು ಪ್ರಯೋಗವು. ಇಲ್ಲಿ ಎರಡು ಅನ್ವಯಗಳಿವೆ,ಇವುಗಳಿಂದ ತೋರುವ ಅಭಿಪ್ರಾಯವೇನೆಂದರೆ ಅಂಜಲಿ ಮಾಡುವ ಅಧಿಕಾರಿಗೆ ಪರಾವರ ತತ್ವಹಿತ, ಪುರುಷಾರ್ಥಗಳ ವಿವೇಕಜ್ಞಾನವಿದ್ದರೂ ಸರಿಯೇ, ಇಲ್ಲದಿದ್ದರೂ ಸರಿಯೇ, ತಲೆಯಲ್ಲಿರುವ ಮೊದುಳಿನ ರೂಪದಲ್ಲೋ ಒಂದು ಸಂಪುಟದ ರೂಪದಲ್ಲೋ ಅಂಜಲಿಯನ್ನು ಮಾಡಿದರೂ ಅಥವಾ ಒಂದುಕ್ಕೆ ಸ್ವಾಧೀನವಿಲ್ಲದೆ ಅಂಜಲಿಮಾಡಲು ಪ್ರಯತ್ನಪಟ್ಟು ಬಾಯಿಂದಲೋ ಮನಸ್ಸಿನಿಂದಲೋ ಅಂಜಲಿ ಮಾಡಿದ ಭಾವನೆಯು ಉಂಟಾದರೂ ಅದೂ ಕೂಡ ವಿತಥವಾಗುವುದಿಲ್ಲವೆಂಬ ತಾತ್ಪರ್ಯವು ತೋರಿಬರುತ್ತದೆ. **"ಏಕೇನ ಪಾಣಿನಾಯಸ್ತು ಪ್ರಣಮೇತ್ಪುರುಷೋತ್ತಮಂ। ನ್ಯಾಯ್ಯಸ್ತಸ್ಯ ಕರಚ್ಛೇದ ಇತಿ ವೇದವಿದೋವಿದುಃ"** **"ಏಕಹಸ್ತಪ್ರಣಾಮಂಚ ಏಕಂಚಾಪಿ ಪ್ರದಕ್ಷಿಣಂ"** ಎಂದರೆ ಒಂದು ಕೈಯಿಂದ ಯಾವನು ಪುರುಷೋತ್ತಮನನ್ನು ನಮಸ್ಕರಿಸುವನೋ ಅವನ ಕೈಯ್ಯನ್ನು ಕತ್ತರಿಸುವುದು ನ್ಯಾಯವೆಂದು ವೇದವಿತ್ತುಗಳು ಹೇಳುವರು ಎಂದು ಹೇಳಲ್ಪಟ್ಟಿರುತ್ತದೆ. ಇದರಿಂದ

ನಾವು ಗ್ರಹಿಸತಕ್ಕದ್ದೇನೆಂದರೆ ಎರಡು ಕೈಗಳೂ ಸರಿಯಾಗಿ ಇರುವವನು ಏಕ ಹಸ್ತದಿಂದ ಪ್ರಣಾಮಮಾಡುವುದು ಯುಕ್ತವಲ್ಲವೆಂಬ ಭಾವವು. ಹಾಗೆಯೇ ಒಂದುಸಲ ಪ್ರಣಾಮವೂ ಕೂಡ ಉಚಿತವಲ್ಲವು. **"ತೌಯುತಾವಂಜಲಿಃ ಪುಮಾನ್"** ಅಂಜಲಿಯನ್ನು ಎರಡು ಕೈಗಳನ್ನೂ ಸೇರಿಸಿಯೇ ಮಾಡತಕ್ಕದ್ದೆಂದು ನಿಘಂಟಿನಲ್ಲೂ ಹೇಳಿರುತ್ತದೆ. ಅಂಜಲಿ ಶಬ್ದವು ಪುಲ್ಲಿಂಗವೆಂದು ನಿಘಂಟುವಿನಿಂದ ತೋರಿಬರುತ್ತದೆ. ಆದುದರಿಂದ ಮೂಲದಲ್ಲೂ ಪುಲ್ಲಿಂಗವೆಂದೇ ಇಟ್ಟುಕೊಳ್ಳ ಬಹುದು. ಆದರೆ **"ಅಂಜಲಿ; ಪರಮಾಮುದ್ರಾ"** ಎಂಬಲ್ಲಿ ಸ್ತ್ರೀಲಿಂಗವಾಗಿ ಭಾವಿಸಿದಹಾಗೆ ತೋರುತ್ತದೆ. ಒಂದು ಕೈಸ್ವಾಧೀನವಿಲ್ಲವಾದರೆ ಒಂದುಕೈಯಿಂದ ಸ್ವಾಮಿಗೆ ಹೇಗೆ ಚಾಮರವನ್ನು ಬೀಸ ಬಹುದೋ ಹಾಗೆಯೇ ಒಂದು ಕೈಯಿಂದ ನಮಸ್ಕಾರಾಂಜಲಿಗಳನ್ನು ಮಾಡಿದರೂ ಪ್ರತ್ಯವಾಯವಿಲ್ಲವು. ಹಾಗೆಯೇ ಅನುಜ್ಞೆಯುಂಟು. ವೃದ್ಧನಾದವನಿಗೆ ಸಾಷ್ಟಾಂಗ ನಮಸ್ಕಾರಮಾಡಲು ಶಕ್ತಿಯಿರಲಾರದು. ನಮಸ್ಕಾರವನ್ನೇ ಮಾಡಲು ಶಕ್ತಿಇಲ್ಲದಿರಬಹುದು. ಅಂತಹ ಸಂದರ್ಭದಲ್ಲಿ ಅಂಜಲಿಯನ್ನುಮಾಡಬಹುದು. ಅದಕ್ಕೂ ಸಾಧ್ಯವಿಲ್ಲದ ಸಂದರ್ಭದಲ್ಲಿ ವಾಚಾ, ಮನಸಾ ನಮಸ್ಕಾರವಾಗಲಿ ಅಂಜಲಿ ಮಾಡಿದ ಭಾವನೆಯಾಗಲಿ ಸಾಕಾಗಿರುತ್ತದೆ.

**"ವಸಂತೇ ವಸಂತೇ ಜ್ಯೋತಿಷಾಯಜೇತ"** "ಪ್ರತಿಯೊಂದು ವಸಂತ ಋತುವಿನಲ್ಲೂ ಜ್ಯೋತಿಷ್ಟೋಮಯಾಗವನ್ನುಮಾಡತಕ್ಕದ್ದು" ಎಂದು ಹೇಳಿರುವ ಹಾಗೆ ಈ ಪ್ರಪದನ ರೂಪಾಂಜಲಿಯನ್ನು ಮಾಡತಕ್ಕದ್ದೇ ಅಥವಾ ಪ್ರಪತ್ತಿಯ ಹಾಗೆ ಒಂದುಸಲವೇ ಮಾಡತಕ್ಕದ್ದೇ ಎಂಬ ಸಂದೇಹದಲ್ಲಿ **ಸಕೃತ್ಕೃತೋಂಜಲಿಃ** ಎಂದು **"ಸಕೃತ್ಕೃತಶ್ಶಾಸ್ತ್ರಾರ್ಥಃ"** ಎಂಬಲ್ಲಿ ಹೇಳಿರುವುದನ್ನು ಮನಸ್ಸಿನಲ್ಲಿಟ್ಟು ಪ್ರಯೋಗಿಸಿರುತ್ತಾರೆ. ಆದರೆ ಇದು ಕೃತಜ್ಞತಾಭಾವದಿಂದ ಅನುಷ್ಠಿಸಾವ ಸಂದರ್ಭದಲ್ಲಿ ಅಸಕೃತ್ ಜಪಿಸುವ ದ್ವಯಮಂತ್ರದ ಹಾಗೆ ಪದೇ ಪದೇ ಸಮಯಗಳಲ್ಲಿ ಅಂಜಲಿ ಬಂಧವೂ ವಿಧಾಯಕವೇ, ಆದರೆ ಪರಮಪುರುಷನ ಅನುಗ್ರಹಪ್ರಾಪ್ತಿಗೆ **ಸಕೃತ್ಕೃತ ಅಂಜಲಿಯೇ** ಸಾಕೆಂಬ ಭಾವವು ಶರಣಾಗತಿಯ ಕಾಲದಲ್ಲಿ ಮಾಡಿದ ಸಕೃತ್ಪ್ರಣಾಮವೇ ಸ್ವಾಮಿಯ ಅನುಗ್ರಹಕ್ಕೆ ಸಾಕಾದರೂ ಈ ಪ್ರಪನ್ನನು ತನ್ನ ಕೃತಜ್ಞತಾ ಭಾವವನ್ನು ಪ್ರಕಟಿಸಲು ಪುನಃ ಪುನಃ ನಮಸ್ಕಾರವೇ ಈ ದಾಸಭೂತನಾದ ಚೇತನನಿಗೆ ಯೋಗ್ಯವಾದುದು. ಸಕೃತ್ತೇ ಸಾಕೆಂದು ಅನೇಕ ಸಂದರ್ಭಗಳಲ್ಲಿ ಹೇಳಲ್ಪಟ್ಟಿರುತ್ತದೆ.

**"ಸಕೃತ್ಸ್ಮೃತೋಽಪಿ ಗೋವಿಂದೋನೃಣಾಂ ಜನ್ಮಶತೈಶ್ಚಿತಂ ।**
**ಪಾಪರಾಶಿಂ ದಹತ್ಯಾಶು ತೂಲರಾಶಿಮಿವಾನಲಃ ॥"**

ಒಂದುಸಲ ಗೋವಿಂದನನ್ನು ಸ್ಮರಿಸಿದರೂ ಅಂತವರ ಅನೇಕ ಜನ್ಮಗಳಿಂದಲೂ ಕೂಡಿ ಹಾಕಲ್ಪಟ್ಟ ಪಾಪರಾಶಿಯನ್ನು ಅದು, ಅಗ್ನಿಯು ಹತ್ತಿಯ ರಾಶಿಯನ್ನು ಸುಡುವ ಹಾಗೆ, ಸುಟ್ಟುಬಿಡುತ್ತದೆ.

"ಸಕೃದುಚ್ಚಾರಿತಂಯೇನ ಹರಿರಿತ್ಯಕ್ಷರದ್ವಯಂ ।
ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥"

ಯಾರಿಂದ ಹರಿಃ ಎಂಬ ಎರಡಕ್ಷರವು ಒಂದೇಸಲ ಉಚ್ಚರಿಸಲ್ಪಟ್ಟರೂ ಅಂತವನಿಂದ ಮೋಕ್ಷವನ್ನು ಕುರಿತು ಹೋಗುವುದಕ್ಕೆ ಬೇಕಾದ ಸಾಧನ ಸಾಮಗ್ರಿಯು ಕಟ್ಟಲ್ಪಟ್ಟಿತೆಂದು ತಿಳಿಯುವುದು.

"ಋಚೋ ಯ ಜೂಂಷಿ ಸಾಮಾನಿ ಯೋಽಧೀತೇಽ ಸಕೃದಂಜಸಾ ।
ಸಕೃದಷ್ಟಾಕ್ಷರಂ ಜಪ್ತ್ವಾಫಲಂ ತ್ಯಸಮಶ್ನುತೇ ॥
ವಿಷ್ಣೋರಾಯತನಂ ನಿತ್ಯಂ ಸಾಯಂ ಪ್ರಾತರ್ದಿನೇ ದಿನೇ ।
ಪ್ರದಕ್ಷಿಣದ್ವಯಂ ಕುರ್ಯಾತ್ ಅಶ್ವಮೇಧ ಫಲಂ ಲಭೇತ್ ॥
ಉತ್ಸವೇ ಬಲಿದಾನೇಚ ತಥಾ ಕುರ್ಯಾತ್ ಪ್ರದಕ್ಷಿಣಂ ।
ಪದೇ ಪದೇಽಶ್ವಮೇಧ ಫಲಂ ದಶಗುಣಂ ಲಭೇತ್ ॥
ಯಾನಿಯಾನಿಚ ಪಾಪಾನಿಜನ್ಮಾಂತರ ಕೃತಾನಿಚ ।
ತಾನಿತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇ ಪದೇ ॥"

ಯಾವನು ಋಗ್ವೇದವನ್ನೂ ಯಜುರ್ವೇದವನ್ನೂ ಸಾಮವೇದವನ್ನೂ ಒಂದುಸಲ ಪೂರ್ತಿಯಾಗಿ ಅಧ್ಯಯನ ಮಾಡುತ್ತಾನೋ, ಮತ್ತು ಯಾವನು ಮೂಲಮಂತ್ರವನ್ನು ಒಂದುಸಲ ಜಪಿಸುತ್ತಾನೋ ಅವನವನಿಗೆ ಅದರಿಂದುಂಟಾಗುವ ಫಲವನ್ನು ಹೊಂದುವನು. ವಿಷ್ಣುದೇವಾಲಯವನ್ನು ಕುರಿತು ನಿತ್ಯವೂ ಬೆಳಿಗ್ಗೆ ಸಾಯಂ ಕಾಲದಲ್ಲೂ ಪ್ರತಿದಿನವೂ ಹೋಗಿ ಎರಡು ಪ್ರದಕ್ಷಿಣೆಯನ್ನು ಮಾಡಿದರೆ ಅಶ್ವಮೇಧವನ್ನು ಮಾಡಿದ ಫಲವು ಲಭಿಸುತ್ತದೆ. ಉತ್ಸವ ಕಾಲದಲ್ಲೂ ಮತ್ತು ಬಲಿಹರಣ ಕಾಲದಲ್ಲೂ ಹಾಗೆಯೇ ಪ್ರದಕ್ಷಿಣೆಯನ್ನು ಮಾಡಿದರೆ ಹೆಜ್ಜೆಹೆಜ್ಜೆಗೂ ಅಶ್ವಮೇಧವನ್ನು ಮಾಡಿದ ಫಲವು ಹತ್ತರಷ್ಟುಲಭಿಸುತ್ತದೆ. ಜನ್ಮಾಂತರಗಳಲ್ಲಿ ಮಾಡಿದ ಪಾಪವು ಯಾವುಯಾವವು ಉಂಟೋ ಅವೆಲ್ಲವೂ ಹೀಗೆ ಪ್ರದಕ್ಷಿಣೆ ಮಾಡುವಾಗ ಪ್ರತಿಹೆಜ್ಜೆಯಲ್ಲೂ ನಾಶವಾಗುವುವು" ಎಂದು ಹೇಳಲ್ಪಟ್ಟಿರುತ್ತದೆ. ಹೀಗೆ ಎಲ್ಲಾ ಪ್ರಮಾಣಗಳಲ್ಲೂ ಸಕೃತ್ ಒಂದೇಸಲ ಮಾಡುವ ಸ್ಮರಣ, ಕೀರ್ತನ ಮೊದಲಾದವುಗಳ ಪ್ರಭಾವವನ್ನು ಪ್ರದರ್ಶಿಸುವುದಕ್ಕಾಗಿ ಎಂದು ಭಾವಿಸತಕ್ಕದ್ದು ಆದುದರಿಂದ ಸಾಧಾರಣವಾಗಿ ಅಂಜಲಿಯನ್ನು ಮಾಡುವವರು ಅಸಕೃತ್ ಮಾಡಬಹುದೆಂದು ಇಲ್ಲಿ ಹೇಳಿದರೆ ಗ್ರಂಥಕರ್ತರ ಅಭಿಪ್ರಾಯಕ್ಕೆ ವಿರೋಧವಾಗುವುದಿಲ್ಲವು. ಒಂದೇಸಲವೇ ಅಂಜಲಿಯನ್ನು ಮಾಡಿದರೆ ನಾಕು, ಸ್ವಾಮಿಯ ಅನುಗ್ರಹವನ್ನು ಒದಗಿಸಿಕೊಡುವುದೆಂದು "ಅಂಜಲಿಃ ಪರಮಾಮುದ್ರಾ" ಎಂಬಲ್ಲಿ ಹೇಳಿರುವ ಅಂಜಲಿಯ ಮಹಾತ್ಮ್ಯೆಯನ್ನು ಪ್ರದರ್ಶಿಸಿದರೆಂದೂ ಭಾವಿಸಬಹುದು.

**"ಸರ್ವೇಷಾ ಮೇವಧರ್ಮಾಣಾ ಮುತ್ತಮೋ ವೈಷ್ಣವೋ ವಿಧಿಃ।
ರಕ್ಷತೇ ಭಗವಾನ್ವಿಷ್ಣು ರ್ಭಕ್ತಾನಾತ್ಮ ಶರೀರವತ್ ॥"**

ಎಲ್ಲಾ ಕೈಂಕರ್ಯ ರೂಪಧರ್ಮಗಳಿಗಿಂತ ವಿಷ್ಣುವಿಗೆ ಮಾಡತಕ್ಕ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟ ಕೈಂಕರ್ಯಗಳು ಸರ್ವೋತ್ಕೃಷ್ಟವಾದವು. ಹಾಗೆ ಕೈಂಕರ್ಯಗಳನ್ನು ಮಾಡಿದ ಭಕ್ತರುಗಳನ್ನು ತನ್ನ ದಿವ್ಯಮಂಗಳ ವಿಗ್ರಹವನ್ನು ರಕ್ಷಿಸಿಕೊಂಡ ಹಾಗೆ ರಕ್ಷಿಸುವನೆಂದು, ದೇವಾಲಯದ ಸಮ್ಮಾರ್ಜನ—ಸಾರಿಸೋಣ, ಸ್ವಾಮಿಗೆ ಪುಷ್ಪ ಮಾಲೆಯನ್ನು ಕಟ್ಟಿ ಸಮರ್ಪಿಸೋಣ, ದೀಪ ಹಚ್ಚೋಣ ಮೊದಲಾದ ದೇಹಾ ಯಾಸ ಧನಾನುಕೂಲ ಮೊದಲಾದ ಕೈಂಕರ್ಯಗಳು ಸರ್ವೋತ್ಕೃಷ್ಟವಾದುವೆಂದು ಹೊಗಳಲ್ಪಟ್ಟಿವೆ. ಆದರೆ ಅಂತಹ ಕಷ್ಟಸಾಧ್ಯವಾದ ಕೈಂಕರ್ಯಗಳಿಗಿಂತ ಅಂತಹ ಅನುಕೂಲಗಳಿಲ್ಲದವನಿಗೆ ಈ ಅಂಜಲಿಬಂಧವೇ ಸಾಕೆಂದು ಅದರ ಮಹಾತ್ಮೆಯು ಉಪದೇಶಿಸಲ್ಪಟ್ಟಿತು.

ಈ ಅಂಜಲಿ ಮಹಾತ್ಮೆಯನ್ನು ಮಹರ್ಷಿಯು ಶ್ರೀಮದ್ರಾಮಾಯಣದಲ್ಲಿ ವ್ಯಕ್ತಪಡಿಸಿರುತ್ತಾರೆ. **"ಕೃತಾಪರಾಧ್ಯಸ್ಯ ಹಿತೇ ನಾನ್ಯತ್ಪಶ್ಯಾಮ್ಯಹಂ ಕ್ಷಮಂ। ಅಂತರೇಣಾಂಜಲಿಂ ಬದ್ಧ್ವಾ ಲಕ್ಷ್ಮಣಸ್ಯ ಪ್ರಸಾದನಾತ್"** ಇದು ಸುಗ್ರೀವನು ನಡೆಸಿದ ಭಗವದಪರಾಧವಿಷಯದಲ್ಲಿ ಪ್ರಾಯಶ್ಚಿತ್ತವು ಯಾವುದೆಂಬುದನ್ನು ಮಹಾಪ್ರಾಜ್ಞನಾದ ಆಂಜನೇಯನು ಸುಗ್ರೀವನಿಗೆ ತಿಳಿಸುತ್ತಾನೆ. ಭಗವದಪರಾಧಕ್ಕೆ ಆತನಿಗೆ ಅಂತರಂಗ ಪ್ರಿಯನಾದ ಮಹಾಭಾಗವತೋತ್ತಮನಾದ ಲಕ್ಷ್ಮಣನಿಗೆ ಅಂಜಲಿಮಾಡಿ ಕ್ಷಮಾಪಣೆಯನ್ನು ಕೇಳಿಕೊಳ್ಳುವುದೇ ವಿನಾ ಬೇರೇ ಉಪಾಯವಿಲ್ಲವೆಂದು ಹೇಳುತ್ತಾನೆ. ಶ್ರೀರಾಮ ಪ್ರಭುವಿನ ವಿಷಯದಲ್ಲಿ ಅಪರಾಧಮಾಡಿದ ನಿನಗೆ, ಓ ಸುಗ್ರೀವನೇ ಲಕ್ಷ್ಮಣನಿಗೆ ಅಂಜಲಿಯನ್ನು ಮಾಡಿ ಆತನ ಅನುಗ್ರಹವನ್ನು ಪ್ರಾರ್ಥಿಸುವುದನ್ನು ಬಿಟ್ಟರೆ ಬೇರೆ ಉಪಾಯವು ನನಗೆ ಕಾಣಬರುವುದಿಲ್ಲವೆಂಬ ಭಾವವು.

ಇಷ್ಟು ದೂರ ಪೂರ್ವಾರ್ಧದಿಂದ **"ಅಂಜಲಿಃ ಪರಮಾಮುದ್ರಾ"** ಎಂಬುದನ್ನು ಉಪಪಾದಿಸಿ ಹೇಳಿದರು. ಉತ್ತರಾರ್ಧದಿಂದ **"ಕ್ಷಿಪ್ರಂ ದೇವಪ್ರಸಾದಿನೀ"** ಎಂಬುದನ್ನು ಉಪಪಾದಿಸುತ್ತಾರೆ. **ತದೈವ** ಅಂಜಲಿಮಾಡಿದ ಒಡನೆಯೇ ಅಶುಭಗಳನ್ನು ಹೋಗಲಾಡಿಸಿ ಶುಭಗಳನ್ನು ವೃದ್ಧಿಸುತ್ತದೆ ಎಂಬಲ್ಲಿ ಅವಧಾರಣಾಭಿಪ್ರಾಯವೇನೆಂದರೆ ಬೇರೆಜನ್ಮಗಳಾಗಲಿ ಅಥವಾ ಕಾಲವಿಳಂಬದಿಂದಾಗಲಿ ಅಲ್ಲದೆ ಒಡನೆಯೇ ಫಲಸಿದ್ಧಿಯೆಂಬುದು ತೋರಿಬರುತ್ತದೆ. ಏವಕಾರದಿಂದ ಇತರ ಯಜ್ಞಯಾಗಾದಿ ದಾನತಪಸ್ಸುಗಳೆಲ್ಲಾ ವ್ಯಾವರ್ತಿಸಲ್ಪಟ್ಟವು.

**"ಅಶುಭಾನಿ ಮುಷ್ಣಾತಿ"** ಎಂಬಲ್ಲಿ ಪಾಪಮಾತ್ರವಲ್ಲದೆ ಪುಣ್ಯವೂ ಕೂಡ ಅಶುಭಗಳಲ್ಲೇ ಸೇರಿತು. ಏಕೆಂದರೆ ಪುಣ್ಯಫಲವಾಗಿ ಸ್ವರ್ಗ ಅಥವಾ

ಐಹಿಕ ಸುಖಾನುಭವ ಮಾಡಬೇಕಾದುದರಿಂದ ಪುಣ್ಯವೂ ಬಂಧಕವೇ, ಆದುದರಿಂದಲೇ ಮೋಕ್ಷಪ್ರಾಪ್ತಿಗೆ ಪುಣ್ಯವೂ ತೊಲಗಬೇಕಾಗಿರುವುದರಿಂದ ಶ್ರುತಿಯು "**ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂದು ಹೇಳಿತು. ಆದರೆ ಪುರುಷನಿಗೆ ತನ್ನ ಪುಣ್ಯಕರ್ಮವು ತೊಲಗುವುದು ಅವಜ್ಞತೆಯಿಂದ ಇಷ್ಟವಿಲ್ಲದೇ ಹೋಗಬಹುದು. ಆದುದರಿಂದ "**ಮುಷ್ಣಾತಿ ಚೋರಯತಿ**" ಎಂಬ ಅರ್ಥದಲ್ಲಿ ಮೂಢನಾದ ಬಾಲನಿಗೆ ಅಪಥ್ಯವನ್ನು ತಪ್ಪಿಸುವುದಕ್ಕಾಗಿ ತಂದೆಯು ಪ್ರತಿಕೂಲ ಪದಾರ್ಥವನ್ನೂ ಅಪಹರಿಸುವ ತೆರದಿ ಈ ಅಂಜಲಿಯು ಪುಣ್ಯವನ್ನು ಕಳವು ಮಾಡುತ್ತದೆ ಅಪಹರಿಸುತ್ತದೆ ಎಂಬ ತಾತ್ಪರ್ಯವು. ಹಾಗೆ ಕಳವು ಮಾಡಿದ **ಅಶುಭಗಳು** ಯಾವುವು? ಎಂದರೆ ಭಗವತ್ಪ್ರಾಪ್ತಿಗೆ ವಿರೋಧಿಗಳೆಂಬ ಭಾವವು. ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳಾದರೋ ಅವು ಯಾವ ಅಶುಭಗಳಿಗೆ ಪ್ರಾಯಶ್ಚಿತ್ತಗಳೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆಯೋ ಅವುಗಳನ್ನು ಮಾತ್ರ ಆ ವ್ರತಗಳು ಪರಿಹರಿಸುತ್ತವೆ. ಈ ಅಂಜಲಿಯಾದರೋ ಹಾಗಲ್ಲವು. ಎಲ್ಲಾ ಅಶುಭಗಳನ್ನೂ ಹೋಗಲಾಡಿಸುತ್ತವೆ ಎಂದು **ಅಶೇಷತಃ** ಎಂದು ಹೇಳಿದರು.

ಹೀಗೆ ಅನಿಷ್ಟನಿವೃತ್ತಿ ಮಾತ್ರವೇ ಅಂಜಲಿ ಫಲವೆಂದು ಭಾವಿಸತಕ್ಕದ್ದಲ್ಲವು. ಸಮಸ್ತ ಇಷ್ಟ ಪ್ರಾಪ್ತಿಯೂ ಲಭಿಸುತ್ತದೆ ಎಂದು **ಅಶೇಷತಃ ಶುಭಾನಿ ಪುಷ್ಣಾತಿ** ಎಂಬುದರಿಂದ ಹೇಳಿದರು. "**ತಸ್ಮಿನ್ಪ್ರಸನ್ನೇ ಕಿಮಿಹಾಸ್ತ್ಯಲಭ್ಯಂ**" ಎಂಬ ಶ್ರೀ ಪರಾಶರೋಕ್ತಿಯ ಪ್ರಕಾರ ಆತನು ಪ್ರಸನ್ನನಾದ ಒಡನೆಯೇ ಇಹಲೋಕದ ಭೋಗಗಳೂ ಕುಚೇಲರಿಗೆ ಉಂಟಾದ ಹಾಗೂ ಸ್ವರ್ಗಾದಿ ಭೋಗಗಳೂ ಎಲ್ಲವೂ ಲಭಿಸಬಹುದು. ಇದನ್ನು ಒಡನೆಯೇ ಮಾಡಬಹುದು. ಹೇಗೆಂದರೆ ಶರಣಾಗತನಾದ **ವಿಭೀಷಣನಿಗೆ** ಐಹಿಕವಿಷ್ಟವಿಲ್ಲದಿದ್ದರೂ ಸಮುದ್ರ ತರಣಕ್ಕೆ ಮುಂಚೆಯೇ ಲಂಕಾರಾಜ್ಯ ಪಟ್ಟಾಭಿಷಿಕ್ತನನ್ನಾಗಿ ಮಾಡಿದರು. ಪರಿಪೂರ್ಣ ಬ್ರಹ್ಮಾನುಭವ ಪರ್ಯಂತ ಸರ್ವವಿಧ ಭೋಗಗಳೂ ಸಿದ್ಧಿಸಬಹುದೆಂಬ ಭಾವವನ್ನು **ಅಶೇಷತಃ ಶುಭಾನಿ ಪುಷ್ಣಾತಿ** ಎಂಬುದರಿಂದ ತಿಳಿಸಿದರು. ಇಲ್ಲಿ **ಅಶುಭಾನಿ** ಎಂಬುದರಿಂದ ಪಾಪಪುಣ್ಯಗಳೆಲ್ಲಾ ಪರಿಹರಿಸಲ್ಪಡುತ್ತವೆ. ಒಂದು ಪಾಪ ನಿರ್ಮೂಲನಕ್ಕೆ ಒಂದು ಪ್ರಾಯಶ್ಚಿತ್ತವುಂಟು; ಹಾಗಲ್ಲದೆ ಒಂದು ಸಲ ಅಂಜಲಿ ಬಂಧದಿಂದ ಸಕಲ ಪುಣ್ಯ ಪಾಪರಾಶಿಗಳೂ ತೊಲಗುತ್ತವೆಂದು **ಅಶೇಷತಃ** ಸ್ವಲ್ಪವೂ ಶೇಷವಿಲ್ಲದೆ ಸವಾಸನವಾಗಿ ಪರಿಹರಿಸಲ್ಪಡುತ್ತವೆಂದು ಹೇಳಲ್ಪಟ್ಟಿತು.

**ನಜಾತುಹೀಯತೇ** ಹೀಗೆ ಹೇಳಿರುವುದು ತನ್ನನ್ನಾಶ್ರಯಿಸಿದವನಿಗೆ ಮಾತ್ರ ಉಪಕರಿಸಿದರೆ ಸಾಕು ಎಂಬ ಭಾವವಲ್ಲವು. ತನಗೆ ಸೇರಿದವರಿಗೂ ಕೂಡ ಅನುಗ್ರಹಪ್ರಾಪ್ತಿಯು ಉಂಟಾಗುತ್ತದೆ ಎಂಬ ಭಾವವು. "**ಯಜ್ಞೋz ನೃತೇನರಕ್ಷತಿ**" ಮನುಯಜ್ಞವಾದರೋ ಒಂದು ಮಂತ್ರೋಚ್ಚಾರಣೆಯಲ್ಲಿ ಅನೃತ

ವುಂಟಾದರೆ ಯಜಮಾನನನ್ನೂ ರಕ್ಷಿಸಲಾರದು. ಇದು ಹಾಗಲ್ಲವು. **ನಜಾತು ಹೀಯತೇ** ಎಂದಿಗೂ ಅದು ವ್ಯರ್ಥವಾಗುವುದಿಲ್ಲವು. ಅಂಜಲಿ ಮಾಡಿದವನನ್ನು ರಕ್ಷಿಸಿಯೇ ರಕ್ಷಿಸುತ್ತದೆ. ಅಶ್ವಮೇಧ ಯಜ್ಞವನ್ನು ನಡೆಸಲು ಸಂಕಲ್ಪಿಸಿದಾಗ ದಶರಥ ಮಹಾರಾಜನು ತನ್ನಮಂತ್ರಿಗಳನ್ನು ಕುರಿತು ಹೇಳುತ್ತಾನೇನೆಂದರೆ-

**"ನಾಪರಾಧೋ ಭವೇತ್ಕಷ್ಟೋ ಯದ್ಯಸ್ಮಿನ್ ಕ್ರತುಸತ್ತಮೇ।**
**ಛಿದ್ರಂ ಹಿ ಮೃಗಯನ್ತೇಽತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ॥**
**ನಿಹತಸ್ಯ ಚ ಯಜ್ಞಸ್ಯ ಸದ್ಯಃ ಕರ್ತಾವಿನಶ್ಯತಿ"।** (ರಾ. ಬಾ. 12)

ಈ ಶ್ರೇಷ್ಠವಾದ ಕ್ರತುವು ನಡೆಯುವಾಗ ಯಾವ ಅಪರಾಧವೂ ನಡೆಯದೇ ಇರಬೇಕು. ಏಕೆಂದರೆ ಬ್ರಹ್ಮರಕ್ಷಸ್ಸುಗಳು ಯಜ್ಞವನ್ನು ನಾಶವಮಾಡುವುದಕ್ಕಾಗಿ ಯಾವುದಾದರೂ ನ್ಯೂನತೆ ಸಿಕ್ಕೀತೆ ಎಂದು ಕಾದುಕೊಂಡಿವೆ. ಹೀಗೆ ಯಜ್ಞವು ನಾಶವಾದರೆ ಯಜಮಾನನು ನಾಶವನ್ನು ಹೊಂದುವನು. ಎಂದು ಹೇಳಿ ಜಾಗರೂಕರಾಗಿ ನೀವು ಇರತಕ್ಕದ್ದೆಂದು ಹೇಳಿದರು. ಅಂತಹ ಭಯವೇನೂ ಈ ಅಂಜಲಿ ಬಂಧದಲ್ಲಿಲ್ಲವೆಂದು **ನಜಾತು ಹೀಯತೇ** ಎಂದು ಹೇಳಿರುತ್ತಾರೆ. ಅಥವಾ ಸ್ವರ್ಗಾದಿ ಫಲಪ್ರಾಪ್ತಿಯಲ್ಲಿ **"ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ"** ಎಂದು ಫಲವಿನಾಶವುಂಟು. ಇದು ಹಾಗಲ್ಲವೆಂದು, ಎಂದಿಗೂ ಇದರ ಫಲಕ್ಕೆ ಚ್ಯುತಿ ಇಲ್ಲವೆಂದು **ನಜಾತು ಹೀಯತೇ** ಎಂದು ಹೇಳಲ್ಪಟ್ಟಿತೆಂಬ ಭಾವವು ಅಥವಾ ಪರಿಪೂರ್ಣ ಬ್ರಹ್ಮಾನುಭವ ಪಡೆಯಲ್ಲೂ ಈ ಅಂಜಲಿ ಬಂಧವು ಹಾಗೆಯೇ ಇದ್ದುಕೊಂಡೇ ಪರಮಾನಂದವನ್ನು ಕೊಡುವುದರಿಂದಾಗಲಿ **ನಜಾತು ಹೀಯತೇ** ಎಂದು ಹೇಳಲ್ಪಟ್ಟಿತು. ಈ ಭಾವವು **ನಿತ್ಯಾಂಜಲಿ ಪುಟಾ.ಹೃಷ್ಟಾಃ** ಯಾವಾಗಲೂ ಮುಕ್ತರು ಅಂಜಲಿ ಬಂಧ ಮಾಡಿಕೊಂಡು ನಿರಂತರ ನಿರತಿಶಯ ಸುಖಾನುಭವವನ್ನು ಮಾಡುವವರಾಗಿ ಹೇಳಿ ಮುಂದೆ **"ಯೇತುಮುಕ್ತಾ ಭವಂತೀಹ ನರಾ ಭರತಸತ್ತಮ। ತೇಷಾಂ ಲಕ್ಷಣ ಮೇತದ್ಧಿ"** ಎಂಬಲ್ಲಿ ವ್ಯಕ್ತವು.

ಆಗಲಿ ಶಾಸ್ತ್ರಗಳಲ್ಲಿ ತ್ರೈವರ್ಣಿಕರಾದ ಶಕ್ತರಿಗೆ ಉಪಾಸನವೆಂದೂ ಅಶಕ್ತರಿಗೆ ಪ್ರಪತ್ತಿ ಎಂದೂ ಎರಡೇ ಉಪಾಯಗಳಿರುವಾಗ ಈ ಅಂಜಲಿಬಂಧವು ಹೇಗೆ ಉಪಾಯವಾದೀತು ? ಎಂದು ಆಕ್ಷೇಪತಂದರೆ, ಸಮಾಧಾನವು ಹೇಗೆಂದರೆ—ಶ್ರೀ ಆಳವಂದಾರ್ರಾದ ಗ್ರಂಥಕರ್ತರೇ ಹಿಂದೆ ಪ್ರಪದನವನ್ನು ಅನುಷ್ಠಿಸಿರುತ್ತಾರೆ. ಅನಂತರ ಈ ಅಂಜಲಿಪ್ರಭಾವವನ್ನು ಹೇಳಿರುವುದರಿಂದ ಪ್ರಪದನದಲ್ಲಿ ಆತ್ಮ ನಿಕ್ಷೇಪರೂಪ ಪ್ರಣಾಮವು ಹೇಗೋ ಹಾಗೆಯೇ ಈ ಅಂಜಲಿಯು ಎಂದು ಭಾವಿಸತಕ್ಕದ್ದು. ಈ ಅಂಜಲಿಯಿಂದ ತೋರಿಬರುವುದು, ಆಕಿಂಚನ್ಯವೂ, ಅನನ್ಯಗತಿತ್ವವೂ ; ಆದುದರಿಂದ ಈ ಅಂಜಲಿಯೂ ಕೂಡ ಸಪರಿಕರವಾದ ಪ್ರಣಾಮದೊಂದಿಗೆ ಆಚರಿಸುವುದಕ್ಕೆ ಬದಲಾಗಿ ಅಂಜಲಿಯ ಮೂಲಕ ಪ್ರಪತ್ತಿ

ಯೇ ಸಪರಿಕರವಾಗಿ ಅನುಷ್ಠಿಸಲ್ಪಟ್ಟಿತೆಂದು ಭಾವಿಸತಕ್ಕದ್ದು. ಆವಾಗ, ಅಂಜಲಿಯೂ ಅವ್ಯವಹಿತ ಉಪಾಯವಾಗಿ ಪ್ರಪತ್ತಿಯ ಪ್ರಭೇದವೇ ಎನಿಸಿತು. ಅಥವಾ ವ್ಯವಹಿತ ಉಪಾಯವಾಗಿ ಎಂದು ಭಾವಿಸುವುದರಲ್ಲೂ ಏನೆಂದೂ ವಿರೋಧವಿಲ್ಲವು. ಈ ಸಂದರ್ಭದಲ್ಲಿ ಅಂಜಲಿಮಾಡುವಾಗ ಪರಿಕರಗಳಾದ ಮಹಾ ವಿಶ್ವಾಸಾದಿಗಳಿದ್ದವೆಂದು ಹೇಳಬೇಕಾದ ಅವಶ್ಯಕವಿಲ್ಲವು. ಪ್ರದಕ್ಷಿಣ ಪ್ರಣಾಮಗಳನ್ನು ಭಗವಂತನಲ್ಲಿ ಮಾಡುವ ಸಂದರ್ಭದಲ್ಲಿ ಅವು ಹೇಗೆ ಪಾಪನಿವೃತ್ತಿಯನ್ನೂ, ನಿರ್ಮಲಜ್ಞಾನವನ್ನು, ಸಾಧುಸಮಾಗಮವನ್ನೂ, ಗುರೂಪಸದನವನ್ನೂ, ಉಪಾಯಾನುಷ್ಠಾನವನ್ನು ಪರಂಪರಯಾ ಕ್ರಮವಾಗಿ ಉಂಟುಮಾಡಿ ರಕ್ಷಿಸುತ್ತವೋ ಹಾಗೆಯೇ ಅಂಜಲಿಯೂ "**ನೇಹಾಭಿ ಕ್ರಮನಾಶೋಸ್ತಿ**" ಎಂಬಲ್ಲಿ ಹೇಳಿರುವ ಹಾಗೆ **ನಜಾತು ಹೀಯತೇ** ಎಂಬಲ್ಲಿಯೂ ಹೇಳಿರುವ ಹಾಗೆಯೂ ಎಂದಿಗೂ ವ್ಯರ್ಥವಾಗದೆ ಕ್ರಮವಾಗಿ ಮೋಕ್ಷವನ್ನು ಹೊಂದಿಸಬಲ್ಲದೆಂದು ಅದರ ಮಹಾತ್ಮೆಯು ಹೇಳಲ್ಪಟ್ಟಿತೆಂದರೂ ಏನೂ ವಿರೋಧವಿಲ್ಲವು.

ಹಾಗಲ್ಲದೆ ಇಲ್ಲಿ ಇದೂಒಂದು ಮೂರನೆಯ ಅವ್ಯವಹಿತ ಉಪಾಯವೆಂದರೆ ಸಾಕ್ಷಾತ್ ಉಪಾಯವೆಂದೇ ಹೇಳಲ್ಪಟ್ಟಿತೆಂದು ಅತಿವಾದತಂದರೆ ಕಥಾಶ್ರವಣ, ಗಂಗಾವಗಾಹನ, ಪುಣ್ಯಕ್ಷೇತ್ರವಾಸವೇ ಮೊದಲಾದವುಗಳೆಲ್ಲಾ ಸಾಕ್ಷಾತ್ತಾಗಿಯೇ ಮೋಕ್ಷದಾಯಕವೆಂದು ಒಪ್ಪಬೇಕಾಗಿ ಬರುತ್ತದೆ. ಆಗಲಿ "**ಧ್ಯಾಯರ್ನ್ ಕೃತೇ ಯಜರ್ನ್ ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯರ್ನ್ । ಯದಾಪ್ನೋತಿ ತದಾಪ್ನೋತಿ ಕಲೌಸಂಕೀರ್ತ್ಯ ಕೇಶವಂ ॥**" ಎಂದೂ "**ಕಲೇರ್ದೋಷನಿಧೇ ರಾಜನ್ನಸ್ತಿಹ್ಯೇಕೋ ಮಹಾರ್ನ್ಗುಣಃ । ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂವ್ರಜೇತ್**" ಎಂದೂ ಕೃತಯುಗದಲ್ಲಿ ಧ್ಯಾನಮಾಡುದರಿಂದಲೂ, ತ್ರೇತಾಯುಗದಲ್ಲಿ ಯಜ್ಞಾನುಷ್ಠಾನದಿಂದಲೂ, ದ್ವಾಪರದಲ್ಲಿ ಭಗವದರ್ಚನೆಯಿಂದಲೂ ಉಂಟಾಗುವ ಫಲವು ಕಲಿಯುಗದಲ್ಲಿ ಕೇಶವನನ್ನು ಸ್ತುತಿಸುವುದರಿಂದಲೇ ಲಭಿಸುತ್ತದೆಂದೂ ಮತ್ತು ಕಲಿಯುಗವು ದೋಷಗಳಿಗೆ ನಿಧಿಯು, ಹೀಗಿದ್ದರೂ ಓರಾಜನೇ ಆ ಯುಗದಲ್ಲಿ ಒಂದು ಮಹತ್ತಾದಗುಣವುಂಟು ಅದೇನೆಂದರೆ ಶ್ರೀಕೃಷ್ಣನನ್ನು ಸ್ತುತಿಸುವುದರಿಂದಲೇ ಬಂಧದಿಂದ ಬಿಡಲ್ಪಟ್ಟವನಾಗಿ ಪರವಾಸುದೇವ ಸಾಯುಜ್ಯವನ್ನು ಹೊಂದುವನೆಂದು ಹೇಳಲ್ಪಟ್ಟಿದೆಯಲ್ಲಾ, ಇಲ್ಲಿ ಏವ ಎಂಬ ಅವಧಾರಣದಿಂದ ಕೀರ್ತನವೇ ಸಾಕ್ಷಾದುಪಾಯವಾಗಿ ತೋರುತ್ತದೆಯಲ್ಲಾ ? ಎರಡೇ ಉಪಾಯವು ಎಂಬ ಹೇಳಿಕೆಯು ಹೇಗೆ, ಎಂದರೆ? ಇಲ್ಲಿಯೂ ಕೂಡ ನಿಸ್ಸಂದೇಹವಾಗಿ ಕೃಷ್ಣಸಂಕೀರ್ತನವು ಮೋಕ್ಷೋಪಾಯಾನುಷ್ಠಾನಕ್ಕೆ ಸಾಕ್ಷಾತ್ತಾದ ಸಾಧನವೆಂದೇ ಅರ್ಥವು: ಮಿಕ್ಕವ್ಯಾಪಾರಗಳು ಯಾವುವೂ ಬೇಕಿಲ್ಲವೆಂಬುದರಲ್ಲಿ ಅವಧಾರಣಾರ್ಥವು. ಹೀಗೆ ಅಭಿಪ್ರಾಯವೆಂದು ಭಾವಿಸದಿದ್ದರೆ ಅಂಜಲಿಯು ಪ್ರಪದನಕ್ಕಿಂತ ಸುಕರವಾದುದಾಗಿ ವೇದದಲ್ಲೂ ಇತಿಹಾಸಗಳಲ್ಲೂ

ಉದೀರ್ಣ ಸಂಸಾರ ದವಾಶು ಶುಕ್ಷಣಿಂ
ಕ್ಷಣೇನ ನಿರ್ವಾಪ್ಯ ಪರಾಂಚನಿರ್ವೃತಿಂ!
ಪ್ರಯಚ್ಛತಿತ್ವ ಚ್ಚರಣಾರುಣಾಂಬುಜ
ದ್ವಯಾನುರಾಗಾಮೃತ ಸಿಂಧುಶೀಕರಃ ॥ ೨೯ ॥

---

ಸರ್ವಶ್ರೇಷ್ಠವಾದ ಉಪಾಯವೆಂದು ಹೇಳಿರುವ ಶರಣಾಗತಿ ಶಾಸ್ತ್ರಗಳಾದ, ಶ್ರೀಮದ್ರಾಮಾಯಣ, ಭಗವಚ್ಛಾಸ್ತ್ರ ಸಂಹಿತಾದಿಗಳಿಗೆಲ್ಲಾ ಪರಮವಿರುದ್ಧಾವಾಗುತ್ತದೆ. ಆದುದರಿಂದ ಅಂಜಲಿ ಪ್ರಭಾವವನ್ನು ಮೇಲೆ ಉಪಪಾದಿಸಿದ ಮೂರು ವಿಧದಲ್ಲಿ ಯಾವುದಾದರೂ ಒಂದುಭಾವವನ್ನು ಸ್ವೀಕರಿಸಬಹುದು. ಆದುದರಿಂದ ಅನನ್ಯ ಪ್ರಯೋಜನನಾಗಿ ಆಕಿಂಚನ್ಯಾದಿ ಅಂಗಗಳಿಂದ ಕೂಡಿದ ಅಂಜಲಿಯು ಮೋಕ್ಷಪರ್ಯವಸಾಯಿ ಎಂಬುವುದರಲ್ಲೇನೂ ವಿರೋಧವಿಲ್ಲವು. ಈ ಅಭಿಪ್ರಾಯದಿಂದ ಪ್ರೇರಿತನಾದ ಭರತನ ವಿಷಯದಲ್ಲಿ ಮಹರ್ಷಿಯು **"ಶಿರಸ್ಯಂಜಲಿಮಾಧಾಯ ಕೈಕೇಯ್ಯಾನಂದವರ್ಧನಃ"** ಎಂದು ಪ್ರಯೋಗಿಸಿರುತ್ತಾರೆ. ನಿಗಮಾನ್ತದೇಶಿಕರವರು ಬರೆದಿರುವ **ಅಂಜಲಿವೈಭವದಲ್ಲಿ** ಇಲ್ಲಿ ಶ್ರೀಯಾಮುನಮುನಿಗಳು ಹೇಳಿರುವ ಮಹಾತ್ಮೆಯನ್ನೆಲ್ಲಾ ವಿವರವಾಗಿ ಕಾಣಬಹುದು.

**ಅವತಾರಿಕೆಯು,** ಹಿಂದಿನ ಶ್ಲೋಕದಲ್ಲಿ ಭಗವಂತನ ಪಾದಾರವಿಂದವನ್ನು ಕುರಿತು ಅಂಜಲಿಯನ್ನು ಮಾಡಿದರೇ ಸಾಕು. ಅದು ಕ್ರಮೇಣ ಸರ್ವಾಭೀಷ್ಟವನ್ನೂ ಹೊಂದಿಸಬಲ್ಲದೆಂದು ಹೇಳಿದರು. ಈ ಶ್ಲೋಕದಲ್ಲಿ ಅಂಜಲಿಯು ಕೂಡ **ಬೇಕಿಲ್ಲವು.** ಆತನಪಾದಾರವಿಂದದಲ್ಲಿ ಭಕ್ತಿಯನ್ನಿಟ್ಟರೇ ಸಾಕು ಎಂದು ಉಪದೇಶಿಸುತ್ತಾರೆ. ಪ್ರತಿಪದಾರ್ಥವು-ಇಲ್ಲಿ ಕರ್ತೃಪದವು **ತ್ವಚ್ಚರಣಾರುಣಾಂಬುಜ ದ್ವಯಾನುರಾಗಾಮೃತ ಸಿಂಧುಶೀಕರಃ"** ಎಂಬುದು, **ತ್ವತ್**-ಆಶ್ರಿತರ ವಿಷಯದಲ್ಲಿ ಪರಮವಾತ್ಸಲ್ಯ ಕಾರುಣ್ಯಾದಿಗಳಿಂದ ಪ್ರೇರಿತನಾದ ನಿನ್ನ, **ಚರಣಾರುಣಾಂಬುಜದ್ವಯ**-ಕಮಲ ಪುಷ್ಪದ ಹಾಗೆ ಕೆಂಪಾದ, ಕೋಮಲವಾದ ನಿನ್ನ ಪಾದಯುಗಳದಲ್ಲಿ, **ಅನುರಾಗ** ಆಶ್ರಿತರಲ್ಲಿ ತೋರುವ ಪ್ರೀತಿಎಂಬ, **ಅಮೃತ ಸಿಂಧುಶೀಕರಃ**-ಅಮೃತಸಮುದ್ರದ ಒಂದು ಹನಿಯೇ, **"ಉದೀರ್ಣ ಸಂಸಾರ ದವಾಶುಶುಕ್ಷಣಿಂ", ಉದೀರ್ಣ** ಹೆಚ್ಚಾಗಿ ಜ್ವಲಿಸುತ್ತಿರುವ, **ಸಂಸಾರ**-ಸಂಸಾರವೆಂಬ **ದವಾಶುಶುಕ್ಷಣಿಂ**-ಕಾಡ್ಗಿಚ್ಚನ್ನು, **ಆಶುಶುಕ್ಷಣಿ** ಎಂದರೆ ಅಗ್ನಿಗೆ ಹೆಸರು. **ಕ್ಷಣೇನ** ಒಂದು ಕ್ಷಣದಲ್ಲೇ, **ನಿರ್ವಾಪ್ಯ** ಆರಿಸಿ, **ಪರಾಂ**-ಶ್ರೇಷ್ಠವಾಗಿ ನಿರತಿಶಯವಾದ, **ನಿರ್ವೃತಿಂ**-ಸುಖವನ್ನು ಆನಂದವನ್ನು, **ಪ್ರಯಚ್ಛತಿ** ಕೊಡುತ್ತದೆ. ನಿನ್ನ ಪಾದಾರವಿಂದವನ್ನು ಆಶ್ರಯಿಸುವುದರಿಂದುಂಟಾದ ನಿನ್ನ ಪ್ರೀತಿಯ ಲವಾಂಶವೇ ಸಂಸಾರತಾಪಗಳನ್ನೆಲ್ಲಾ ಒಡನೆಯೇ ಹೋಗಲಾಡಿಸಿ ಪರಿಪೂರ್ಣ ಬ್ರಹ್ಮಾನುಭವರೂಪವಾದ ಆನಂದವನ್ನು ಕೊಡುತ್ತದೆ ಎಂಬ ತಾತ್ಪರ್ಯವು. ಅಥವಾ **ತ್ವಚ್ಚರಣಾರುಣಾಂಬುಜ**

**ದ್ವಯಾನುರಾಗಾಮೃತ ಸಿಂಧುಶೀಕರಃ**- ನಿನ್ನ ಕೆಂಪು ಕಮಲ ಸದೃಶಗಳಾದ ಪಾದದ್ವಂದ್ವದಲ್ಲಿ ನಾವುಮಾಡಿದ ಅನುರಾಗವೆಂಬುದೇ ಒಂದುಅಮೃತೋದಧಿಯು, ಅದರ ಒಂದುಹನಿಯೇ ಸಂಸಾರಾಗ್ನಿಎಂಬ ಅನಿಷ್ಟದ ನಿವೃತ್ತಿಯನ್ನು ಅತ್ಯುತ್ತಮ ಸುಖವಾದ ಇಷ್ಟಪ್ರಾಪ್ತಿಯಾದ ಮೋಕ್ಷವನ್ನು ಸಹ ಕೊಡುತ್ತದೆ. ತಾನು ಮಾಡುವ ಅನುರಾಗ ಹೇಗೆ ಅಮೃತೋದಧಿಯಾದೀತು ? ಎಂದರೆ ದೊಡ್ಡವರಲ್ಲಿ ಮಾಡುವ ಪ್ರೀತಿಯು ಭಕ್ತಿ ಎನಿಸುತ್ತದೆ. ಇಂತಹ ಸಾಧಾರಣ ಭಕ್ತಿಯು ವೃದ್ಧಿಯಾಗುತ್ತಾ ಪರಭಕ್ತಿ, ಪರಜ್ಞಾನ, ಪರಮಭಕ್ತಿಗಳ ರೂಪಗಳನ್ನು ಹೊಂದಿ ಪರಬ್ರಹ್ಮಪ್ರಾಪ್ತಿ ಯಲ್ಲಿ ಉತ್ಕಟೇಚ್ಛೆಯುಂಟಾಗುವುದರಿಂದ ಅಮೃತಸಿಂಧುತ್ವೇನ ರೂಪಣೆಯು, ಆದರೆ ಅದರ ಲವಮಾತ್ರವು ಹೇಗೆ ಮೋಕ್ಷಸಾಧನವೆಂಬುದಕ್ಕೆ ಶ್ರೀ ನಿಗಮಾಂತ ಮಹಾದೇಶಿಕರವರು ಅಸಾಧಾರಣ ಭಕ್ತಿಯೇ ಬೆಳೆದು ಪರಮಭಕ್ತಿ ದೆಶೆಯನ್ನು ಹೊಂದಿ, ನಿತ್ಯಕೈಂಕರ್ಯ ಪರ್ಯಂತ ಪ್ರಯೋಜನವನ್ನು ಸಾಧಿಸಿಕೊಡುವುದರಿಂದ ಶೀಕರ ಶಬ್ದ ಪ್ರಯೋಗವೆಂದು ಹೇಳಿರುತ್ತಾರೆ.

**ಉಪಪಾದನೆಯು**-ಈ ಶ್ಲೋಕದಲ್ಲಿ ಅಂಜಲಿ ಮಾಡಲು ಅನರ್ಹತೆ ಇದ್ದರೂ **ವಿಷಯೇ ತೇ ಮಹಾರಾಜ! ರಾಮವ್ಯಸನ ಕರ್ಶಿತಾಃ। ಅಪಿವೃಕ್ಷಾಃ ಪರಿಮ್ಲಾನಾಃ ಸಪುಷ್ಪಾಂಕುರ ಕೋರಕಾಃ** " ಎಂದು ಸುಮಂತ್ರನು ದಶರಥ ನಲ್ಲಿ, ಶ್ರೀರಾಮನು ವನಕ್ಕೆ ತೆರಳಿದುದರಿಂದ ಕೋಸಲ ರಾಜ್ಯದವರೆಲ್ಲಾ ರಾಮ ನಲ್ಲಿರುವ ಪ್ರೀತಿ ವಿಶೇಷದಿಂದ ದುಃಖ ಸಾಗರದಲ್ಲಿ ಮುಳುಗಿರುವುದು ಹಾಗಿರಲಿ ; ವೃಕ್ಷಗಳೂಕೂಡ, (ಇವುಗಳು ಬದ್ಧ ಜೀವಾತ್ಮರು ಎಂದು ಶಾಸ್ತ್ರವು ಹೇಳುತ್ತದೆ) ನಾನು ಶ್ರೀರಾಮ ಪ್ರಭುವನ್ನು ಅರಣ್ಯಕ್ಕೆ ಕರೆದುಕ್ಕೊಂಡು ಹೋದಾಗ ಚಿ-ಗುರು, ಪುಷ್ಪ, ಕಾಯಿ, ಫಲಗಳಿಂದ ತುಂಬಿದ್ದರೂ, ಹಿಂತಿರುಗಿ ಬಂದಾಗ ಎಲ್ಲವೂ ಸಂಪೂರ್ಣವಾಗಿ ಬಾಡಿಹೋಗಿದ್ದುವು ಎಂದು ಅನಂತರ ಅವುಗಳ ಪ್ರೀತಿ ವಿಶೇಷಮಾತ್ರದಿಂದಲೇ ಕೊನೆಗೆ ಅವೂ ಕೂಡ ಭಗವತ್ಕೃಪೆಯಿಂದ ನಿರತಿ ಶಯಾನಂದವನ್ನು ಹೊಂದಿದ ಹಾಗೆ ಪ್ರಾಪ್ತಕಾಲದಲ್ಲಿ ಪುರುಷಾರ್ಥಸಿದ್ಧಿ ಯುಂಟು ಎಂದು ಇಲ್ಲಿ ಹೇಳುತ್ತಾರೆ. ಪ್ರಾಪ್ತಕಾಲಕ್ಕೆ ನಿದರ್ಶನವಾಗಿ ರಾವಣ ಸಂಹಾರಾನಂತರ ಸೀತೆಯೊಡನೆ ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ಬಂದಾಗ ಆವೃಕ್ಷಗಳೇ ಹೇಗೆ ತೋರಿದವು ಎಂದರೆ ಮಹರ್ಷಿಯು ಹೇಳುತ್ತಾರೆ :- "**ನಿಷ್ಫಲಾ : ಫಲಿನಶ್ಚಾಸನ್ ವಿಪುಷ್ಪಾ ಪುಷ್ಪಶಾಲಿನ** " ಎಂಬುದಾಗಿ. **ಉದೀರ್ಣ** ವೆಂದರೆ ಯಾವಾಗಲೂ ಈ ಜೀವಾತ್ಮನನ್ನು ಅಸತ್ಕಲ್ಪವಾಗಿ ಮಾಡು ವುದರಲ್ಲಿ ವಿಶ್ರಾಂತಿಯೇ ಇಲ್ಲದಿರುವ ಜಾಜ್ವಲ್ಯವಾದ, **ಸಂಸಾರ**-ಹಿಂದಿನ ಜನ್ಮ ಗಳಲ್ಲಿ ಮಾಡಿಡ ಕರ್ಮಾನುಭವಕ್ಕಾಗಿ ಅನುಸರಿಸಿಬರುವ ದೇಹಪ್ರಾಪ್ತಿರೂಪ ಬಂಧ ಪ್ರವಾಹವೆಂಬುದೇ **ದವಾಶಶುಕ್ಷಣಿ** ದಾವಾಗ್ನಿಯು-ಕಾಡ್ಗಿಚ್ಚು ; ಇದು ಕಾಡಿನಲ್ಲಿ ಸುತ್ತಿ ಸುತ್ತಿ ಬಂದು ಮಧ್ಯೆ ಇರುವ ವೃಕ್ಷಗಳನ್ನೆಲ್ಲಾ ಹೇಗೆ ಸುಟ್ಟು

ಬಿಡುತ್ತದೋ, ಹಾಗೆಯೇ ಸಂಸಾರದ ತಾಪತ್ರಯಗಳು ಈತನನ್ನು ದಹಿಸಿಬಿಡುತ್ತವೆ ಎಂಬ ಭಾವವು ಪ್ರದರ್ಶಿಸಲ್ಪಟ್ಟಿತು. ಇದರಿಂದ ಸಂಸಾರ ತಾಪತ್ರಯದ ದುಸ್ಸಹತ್ವದ, ಪರಮಾತ್ಮನಲ್ಲದೆ ಇನ್ನು ಯಾರಿಂದಲೂ ಉಪಶಾಂತಿಯು ಸಾಧ್ಯವಿಲ್ಲವೆಂಬುದನ್ನೂ ಗ್ರಹಿಸಬಹುದು. ಈ ಸಂದರ್ಭದಲ್ಲಿ "**ವರಂ ಹುತವಹಜ್ವಾಲಾ ಪಂಜರಾಂತರ್ವ್ಯವಸ್ಥಿತಿಃ। ನಶೌರಿಚಿಂತಾ ವಿಮುಖ ಜನಸಂವಾಸ ವೈಶಸಂ**" ಎಂಬುದು ಅನುಸಂಧೇಯವು. ಸಂಸಾರ **ತಾಪತ್ರಯವು** ಅಗ್ನಿ ಮಧ್ಯೆ ಇರುವುದಕ್ಕಿಂತ ಕೇಡೆಂದು ಪ್ರಪನ್ನರ ಅಭಿಪ್ರಾಯವು. ಬೆಂಕಿಯಾದರೂ ಶೀಘ್ರದಲ್ಲೇ ಸುಟ್ಟುಬಿಡುತ್ತದೆ. ಇದು ಹಾಗಲ್ಲದೆ ದೇಹಕ್ಲೇಶಗಳನ್ನು ಅನವರತ ಕೊಡುತ್ತಾ ನಾನಾ ವಿಧವಾದ ದುಃಖಗಳನ್ನು ಅನುಭವಿಸುವಹಾಗೆ ಮಾಡುತ್ತದೆ ಯಾದುದರಿಂದ ವರಂ ಎಂದು ಹೇಳಲ್ಪಟ್ಟಿತು.

**ಕ್ಷಣೇನ**—ಸ್ವಾಮಿಯ ಕೃಪೆಯುಂಟಾಯಿತು ಎಂದರೆ ಎಷ್ಟೇ ಅನಿಷ್ಟ ರಾಶಿಯೇ ಇರಲಿ ಸರ್ವವೂ ಒಡನೆಯೇ ನಿವರ್ತಿಸಿ ಹೋಗುತ್ತದೆಂಬ ಭಾವವನ್ನು ತಿಳಿಸುತ್ತದೆ. ಸಾಧ್ವಿಯಾದ ದ್ರೌಪದಿಗೆ ದುರ್ಯೋಧನ ಸಭೆಯಲ್ಲಿ ಪ್ರಾಪ್ತವಾದುದು ಪರಮಶೋಚನೀಯವಾಗಿ ಅತಿದುಸ್ಸಹಹಾದುದಾಗಿದ್ದಿತು. ಯಾವಾಗ ಶ್ರೀ ವೇದವ್ಯಾಸರ ಉಪದೇಶವನ್ನು ಜ್ಞಾಪಿಸಿಕೊಂಡು ಶರಣ್ಯನಲ್ಲಿ ಶರಣಾಗತಳಾದಳೋ, **ಕ್ಷಣೇನ** ಕೂಡಲೇ ಆಕೆಯ ಎಲ್ಲಾ ಶೋಕವೂ ಕಳೆದುಹೋದವು. ಪ್ರಪನ್ನರಿಗೆ ಅವಿಳಂಬದಿಂದ ಸರ್ವಾನಿಷ್ಟಗಳ ಪ್ರಶಮನವುಂಟಾಗುತ್ತದೆಂಬುದು ಇದರಿಂದ ಸೂಚಿತವು.

**ಕ್ಷಣೇನ** ಅಲ್ಪಕಾಲದಲ್ಲಿ ಪ್ರಪದನಾನುಷ್ಠಾನವು ನಡೆಯುತ್ತದೆ. ಅದು ನಡೆದ ಒಡನೆಯೇ "**ತದಧಿಗಮ ಉತ್ತರ ಪೂರ್ವಾಘಯೋ ರಶ್ಲೇಷವಿನಾಶೌ**" ಎಂಬ ಸೂತ್ರದಲ್ಲಿ ಪೂರ್ವಾಘವೆಲ್ಲಾ ನಾಶಹಾಗುತ್ತದೆ. ಅಬುದ್ಧಿ ಪೂರ್ವಕ ಉತ್ತರಾಘಗಳು ಲೇಪಿಸುವುದಿಲ್ಲವೆಂದೂ ಹೇಳಲ್ಪಟ್ಟಿವೆ. "**ಯಥೇಷಿಕಾ ತೂಲಮಗ್ನೌ ಪ್ರೋತಂ ಪ್ರದೂಯೇತ। ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ**" ಊಬಿನ ಹತ್ತಿಯು ಅಗ್ನಿಯಲ್ಲಿ ಎಲ್ಲಾ ಹೇಗೆ ಭಗ್ಗನೇ ಸುಟ್ಟುಹೋಗುತ್ತದೋ ಹಾಗೆ ಉಪಾಯಾನುಷ್ಠಾನ ಮಾಡಿದವನ ಸಮಸ್ತಪಾಪಗಳೂ ನಾಶವಾಗುತ್ತವೆ. ಎಂಬುದನ್ನು **ಕ್ಷಣೇನ** ಎಂಬುದು ಸೂಚಿಸುತ್ತದೆ. ಅದರಲ್ಲೂ ಆರ್ತರಿಗೆ ಒಡನೆಯೇ ಸರ್ವಪಾಪಗಳ ಪರಿಹಾರವೆಂಬುದು ಸಿದ್ಧವು. ಯಾವಾಗ ಅನಿಷ್ಟನಿವೃತ್ತಿಯಾಯಿತೋ ಆಗ ಒಡನೆಯೇ "**ಪರಾಂಚ ನಿರ್ವೃತಿಂ ಪ್ರಯಚ್ಛತಿ**" ನಿರತಿಶಯ ಮೋಕ್ಷಸುಖವನ್ನು ನಿನ್ನ ಪಾದಾರವಿಂದ **ಅಮೃತ ಸಿಂಧುಶೀಕರವು** ಕೊಡುತ್ತದೆ. ಅಮೃತ ಸಿಂಧುವಿಗೆ ಪಾದದ್ವಯವನ್ನು ರೂಪಕಮಾಡಿ ಹೇಳಿರುವುದರಿಂದ ಸಂಜೀವನತ್ವವು.

ಮೋಕ್ಷಸುಖವೇ ಲಭಿಸುವುದರಿಂದ **ಪರಾಂಚೆ ನಿರ್ವೃತಿಂ** ಎಂದು ಹೇಳಲ್ಪಟ್ಟಿತು. ನಿರ್ವೃತಿ ಶಬ್ದವು "**ಏಷಹ್ಯೇವಾ ನಂದಯಾತಿ। ರಸಂ ಹ್ಯೇವಾಯಂ ಲಬ್ಧ್ವಾ ನಂದೀಭವತಿ।**" ಎಂಬ ಶ್ರುತಿವಾಕ್ಯವನ್ನು ಬೋಧಿಸುತ್ತದೆ. ಹಾಗೆಯೇ ಸೂತ್ರಕಾರರೂ ಹೇಳುತ್ತಾರೆ. "**ತದ್ಧೇ ತುರ್ವ್ಯಪದೇಶಾಚ್ಚ** (1-1-20) **ಅಸ್ಮಿನ್ನಸ್ಯಚ ತದ್ಯೋಗಂಶಾಸ್ತಿ**" (1-1-15) ಎಂದರೆ "ಪರಮಾತ್ಮನೇ ಆನಂದಮಯನು ಏಕೆಂದರೆ ಹಾಗೆ ಆನಂದಮಯನಾಗಿ ಇರುವುದರಿಂದಲೇ ಎಲ್ಲಾ ಆಶ್ರಯಿಸಿದವರನ್ನು **ಆನಂದಯಾತಿ** ಆನಂದಗೊಳಿಸುವನೆಂದೂ ಮತ್ತು ಪರಮಾತ್ಮನೇ ಆನಂದಮಯನು ಏಕೆಂದರೆ ಇಂತಹ ಆನಂದಮಯನಲ್ಲಿ ಈ ಆಶ್ರಿತ ಜೀವಾತ್ಮನಿಗೆ ಎಲ್ಲಾ ಆನಂದವೂ ಲಭಿಸುತ್ತದೆ ಎಂದೂ ತೈತ್ತಿರೀಯಾದಿ ಶ್ರುತಿಗಳು ಹೇಳುತ್ತವೆಯಾದ್ದರಿಂದ" ಎಂಬುದು ಈ ಎರಡು ಸೂತ್ರಗಳ ಅರ್ಥವು.

**ಚರಣಾಂಬುಜದ್ವಯ** ಎಂಬಲ್ಲಿ ದ್ವಯಶಬ್ದ ಸ್ವಾರಸ್ಯದಿಂದ ದಿವ್ಯಮಂಗಳ ವಿಗ್ರಹದಲ್ಲಿ ಚರಣಗಳು ಎರಡೂ, ಅರುಣಕಾಂತಿಯ ಪರಸ್ಪರ ಕಾನ್ತಿಯಿಂದ ಶೋಭಾಯಮಾನವಾಗಿ ಅವು "ಉಪಾಯತ್ವ ಉಪೇಯತ್ವ" ಎರಡು ಕಾರ್ಯಗಳನ್ನು ವಹಿಸಿವೆ ಎಂಬುದು ತೋರಿಬರುತ್ತದೆ. "**ನಾಥಯೋ ನಿಸಹಸ್ರೇಷು**" ಎಂಬಲ್ಲಿ ಓ ಸ್ವಾಮಿಯೇ! ಎಷ್ಟು ಜನ್ಮ ವೆತ್ತಿದರೂ ನಿನ್ನಲ್ಲಿ ಅನುರಾಗವೂ ಭಕ್ತಿಯೂ ಸಂಪೂರ್ಣವಿರಬೇಕೆಂಬ ಪ್ರಾರ್ಥನೆ ಇರುತ್ತದೆ. ಹಾಗೆಯೇ ಜಿತಂತಾಸ್ತೋತ್ರದಲ್ಲಿ "**ತ್ವ ತ್ಪಾದಕಮಲಾದನ್ಯನ್ನಮೇಜನ್ಮಾಂತರೇಷ್ವಪಿ**" ಹಾಗೆಯೇ ಮುಕುಂದ ಮಾಲೆಯಲ್ಲಿ "**ಏತತ್ಪ್ರಾರ್ಥ್ಯಂ ಮಮಬಹುಮತಂ ಜನ್ಮಜನ್ಮಾಂತರೇಪಿ ತ್ವತ್ಪಾದಾಂಭೋರುಹ ಯುಗಗತಾ ನಿಶ್ಚಲಾ ಭಕ್ತಿರಸ್ತು**" ನಾನು ಪ್ರಾರ್ಥಿಸುವುದು ಇಷ್ಟೇ, ಏನೆಂದರೆ ಜನ್ಮಜನ್ಮಾಂತರಗಳು ಒಂದುವೇಳೆ ಉಂಟಾದರೂ ನಿನ್ನ ಪಾದಕಮಲದ್ವಂದದಲ್ಲಿ ನಿಶ್ಚಲವಾದ ಭಕ್ತಿಯು ಶಾಶ್ವತವಾಗಿರಲಿ ಎಂಬುದು.

ಸ್ವಾಮಿ ಪಾದದ್ವಂದ್ವವನ್ನು **ಅಮೃತಸಿಂಧು ಶೀಕರಃ** ಎಂದು ವಿಶೇಷಿಸಿ ಹೇಳಿರುವುದರಿಂದ ಆತ್ಮಾವಿಗೆ ಅದು ಉಜ್ಜೀವನೋಪಯುಕ್ತವಾಗಿ ಸಂಜೀವನ ರೂಪವಾದುದೆಂದೂ ಅದು ಸುಖರೂಪವಾದುದೆಂದೂ, ಅದಕ್ಕೆ ಎಂದಿಗೂ ಚ್ಯುತಿ ಇಲ್ಲವೆಂದೂ, ಉಪದಿಷ್ಟವು. ಇಷ್ಟು ಶ್ರೇಯಸ್ಸನ್ನೂ ಆ ಸಮುದ್ರದ ಒಂದುಹನಿಯೇ ಉಂಟುಮಾಡಬಲ್ಲದೆಂಬ ಮಾಹಾತ್ಮ್ಯೆಯು ಪ್ರಕಟಿಸಲ್ಪಟ್ಟಿತು. **ಶೀಕರಃ** ಎಂಬುದರಿಂದ ತಮ್ಮ ಭಾಗ್ಯವಿಶೇಷದಿಂದ ಪರಮಾತ್ಮನ ಪಾದಕಮಲದಲ್ಲಿ ಉಂಟಾದ ಭಕ್ತಿಯ ಲವಾಂಶವೇ ಕ್ರಮೇಣ ಪರಭಕ್ತಿ, ಪರಜ್ಞಾನ, ಪರಮಭಕ್ತಿಯಾಗಿ ವೃದ್ಧಿಯನ್ನು ಹೊಂದಿ ದಿವ್ಯವೈಕುಂಠ ಪ್ರಾಪ್ತಿ, ಪರಿಪೂರ್ಣ ಬ್ರಹ್ಮಾನುಭವ ದಿವ್ಯದಂಪತಿಗಳಿಗೆ ನಿರತಿಶಯ ಕೈಂಕರ್ಯವನ್ನು ಮಾಡುವ ಸುಕೃತವು ಲಭಿಸುತ್ತದೆಂಬ ಭಾವವು ತೋರುತ್ತದೆ.

**ವಿಲಾಸ ವಿಕ್ರಾನ್ತ ಪರಾವರಾಲಯಂ**
**ನಮಸ್ಯ ದಾರ್ತಿಕ್ಷಪಣೇ ಕೃತಕ್ಷಣಂ ।**
**ಧನಂ ಮದೀಯಂ ತವಪಾದ ಪಂಕಜಂ**
**ಕದಾನುಸಾಕ್ಷಾತ್ಕರವಾಣಿ ಚಕ್ಷುಷಾ ॥ ೩೦ ॥**

**ಅವತಾರಿಕೆಯು**-ಹಿಂದಿನ ಏಳು ಶ್ಲೋಕಗಳಿಂದಲೂ ತಮ್ಮ ಮತ್ತು ಪರಮ ಪುರುಷನ ಯಥಾರ್ಥ ಜ್ಞಾನದಿಂದ ಕೂಡಿದ ಉಪಾಯಾನುಷ್ಠಾನಕ್ಕೆ ಬೇಕಾದ **ಸಾಮರ್ಥ್ಯವನ್ನು** ಉಪಪಾದಿಸಿ, ಮುಂದಿನ ೧೭ ಶ್ಲೋಕಗಳಿಂದ ದ್ವಯದ ಉತ್ತರಖಂಡಾರ್ಥವನ್ನು ಉಪಪಾದಿಸುವ ಫಲದ ವಿಷಯದಲ್ಲಿ ತಮಗಿರುವ **ಅರ್ಥಿತ್ವವನ್ನು** ಉಪಪಾದಿಸಿ, ಹೀಗೆ ಉಪಾಯಾನುಷ್ಠಾನಕ್ಕೆ ಬೇಕಾದ ಅರ್ಥಿತ್ವ ಸಾಮರ್ಥ್ಯಗಳೆರಡೂ ಇರುವುದರಿಂದ ತಮ್ಮಲ್ಲಿ ಯೋಗ್ಯವಾದ ಅಧಿಕಾರ ವುಂಟೆಂಬುದನ್ನು ತಿಳಿಸುತ್ತಾರೆ. ಪ್ರಕೃತ ಹಿಂದಿನ ಶ್ಲೋಕಕ್ಕೂ ಈ ಶ್ಲೋಕಕ್ಕೂ ಸಂಗತಿ ಹೇಗೆ? ಎಂದರೆ ಹಿಂದಿನ ಶ್ಲೋಕದಲ್ಲಿ ಪರಮಪುರುಷನ ಪಾದಾರ ವಿಂದವನ್ನು ಆಶ್ರಯಿಸುವುದರಿಂದುಂಟಾಗುವ ಅನುಗ್ರಹವು, ದುಷ್ಕರವಾದ ಅನಿಷ್ಟನಿವೃತ್ತಿಯನ್ನೂ ಅಮೋಘವಾದ ಇಷ್ಟಪ್ರಾಪ್ತಿಯನ್ನೂ ಉಂಟುಮಾಡುತ್ತ ದೆಂದು ಹೇಳಿದರು ಇಂತಹ ಅತ್ಯದ್ಭುತ ಮಹಾತ್ಮೆಯುಳ್ಳ ಪಾದಕಮಲವನ್ನು ದಿವ್ಯಚಕ್ಷುಸ್ಸಿನಿಂದ ಎಂದಿಗೆ ಸಾಕ್ಷಾತ್ಕರಿಸುವ ಸುಕೃತವು ಲಭಿಸುತ್ತದೋ ಎಂದು ಕಾತರವನ್ನು ಪ್ರದರ್ಶಿಸುತ್ತಾರೆ.

**ಅರ್ಥವು** :—ಪರಮಪುರುಷನ ಪಾದಪಂಕಜದ ಮಹಿಮೆಯನ್ನು ಪುನಃ ಹೇಳುತ್ತಾರೆ. ಅದು ಎಂಥಾದ್ದೆಂದರೆ- **ವಿಲಾಸ ವಿಕ್ರಾನ್ತಪರಾವರಾಲಯಂ, ವಿಲಾಸ** = ಅನಾಯಾಸವಾಗಿ ಲೀಲೆಯಾಗಿಯೇ, **ವಿಕ್ರಾಂತ** = ತ್ರಿವಿಕ್ರಮಾವ ತಾರಿಯ ಪಾದವಿನ್ಯಾಸದಿಂದ ಅಳೆದ **ಪರಾವರಾಲಯಂ*, ಪರ** = ಶ್ರೇಷ್ಠವಾದ ಬ್ರಹ್ಮಾದಿಗಳ ಮತ್ತು **ಅವರ**-ಶ್ರೇಷ್ಠವಲ್ಲದ ಮನುಷ್ಯಾದಿಗಳ **ಆಲಯಂ**-ಲೋಕ ಗಳನ್ನುಳ್ಳ ಎಂದರೆ ತ್ರಿವಿಕ್ರಮನಾಗಿ ಈ ಎಲ್ಲಾ **ಲೋಕಗಳನ್ನೂ** ಆಕ್ರಮಿಸಿದ, ಪಾದಪಂಕಜಕ್ಕೆ ವಿಶೇಷಣವು, ಮತ್ತು **ನಮಸ್ಯದಾರ್ತಿಕ್ಷಪಣೇ ಕೃತಕ್ಷಣಂ, ಸಮಸ್ಯತ್** = ಶರಣಾಗತಿ ಮಾಡಿ ನಮಸ್ಕರಿಸಿದವರ. **ಆರ್ತಿ** = ದೈನ್ಯವನ್ನು, **ಕ್ಷಪಣೇ**-ಹೋಗಲಾಡಿಸುವುದರಲ್ಲಿ **ಕೃತಕ್ಷಣಂ**-ಮಾಡಲ್ಪಟ್ಟ ಅವಕಾಶವುಳ್ಳ ಅಥವಾ ಮಾಡಲ್ಪಟ್ಟ ವ್ಯಾಪಾರವುಳ್ಳ, **ಮದೀಯಂ ಧನಂ**- ನಶ್ವರಗಳಾದ ಐಹಿಕಗಳನ್ನೆಲ್ಲಾ ತ್ಯಜಿಸಿದ ನನಗೆ ಪರಮ ಪುರುಷಾರ್ಥರೂಪ ಧನವಾದ. **ತವಪಾದಪಂಕಜಂ**-ನಿನ್ನ ಪಾದಕಮಲವನ್ನು **ಚಕ್ಷುಷಾ**-ಕಣ್ಣಿನಿಂದ, **ಕದಾನು**= ಯಾವಾಗ **ಸಾಕ್ಷಾತ್ಕರವಾಣಿ**-ಸಾಕ್ಷಾತ್ಕರಿಸುವೆನೋ? ಎಂದರೆ ಅಂಥಹ ಸುಕೃತವು ಎಂದಿಗೆ ದೊರೆಯುವುದೋ ತಿಳಿಯದು ಎಂಬ ಭಾವವು. ಅರ್ಚಾವತಾರದ ಪಾದಕಮಲವನ್ನು ಪ್ರತಿದಿನವೂ ಅವರೇ ಪ್ರತ್ಯಕ್ಷವಾಗಿ ನೋಡು

**ತ್ರಿದ್ದರೂ ಕೂಡ ಕದಾದ್ರಕ್ಷ್ಯಾಮಿ ಚಕ್ಷುಷಾ** ಎಂದು ಹೇಳಿರುವುದರಿಂದ ಈ ಮಾಂಸಚಕ್ಷುಸ್ಸಿನಿಂದ ಎಂಬ ಅಭಿಪ್ರಾಯವಲ್ಲವಾಗಿ ತೋರುತ್ತದೆ. ಆತನು ಅಕ್ರೂರ, ಅರ್ಜುನಾದಿಗಳಿಗೆ ಅನುಗ್ರಹಿಸಿದ ಪರರೂಪವನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು **ಕದಾ ಸಾಕ್ಷಾತ್ಕರವಾಣಿ** ಎಂದು ಹೇಳಿದ್ದರೂ ಹೇಳಿರಬಹುದು. ಅಂತಹ ರೂಪವನ್ನು ಈ ಮಾಂಸಚಕ್ಷುಸ್ಸಿನಿಂದ ನೋಡಲು ಸಾಧ್ಯವಿಲ್ಲದುದರಿಂದ **ಚಕ್ಷುಷಾ** ಎಂದರೆ ಸ್ವಾಮಿದತ್ತದಿವ್ಯ ಚಕ್ಷುಸ್ಸಿನಿಂದ ನೀನು ಅನುಗ್ರಹಿಸುವ ಪರರೂಪದ ಪಾದಪಂಕಜವನ್ನು **ಕದಾದ್ರಕ್ಷ್ಯಾಮಿ** ಯಾವಾಗ ನೋಡುವ ಸುಖವು ಲಭಿಸುತ್ತದೋ ಎಂಬ ಭಾವವು. ಅಥವಾ ಇನ್ನೊಂದರ್ಥವನ್ನೂ ಹೇಳಬಹುದು. ಪ್ರಪನ್ನರಾದವರು ಕಾಲವಿಳಂಬವನ್ನು ಸಹಿಸಲಾರರು. ಮೃತ್ಯುವನ್ನು ಪ್ರಿಯನಾದ ಅತಿಥಿಯನ್ನಾಗಿ ಭಾವಿಸುವುದರಿಂದ ಯಾವಾಗ ದೇಹಾವಸಾನವನ್ನುಂಟುಮಾಡಿ ದಿವ್ಯವೈಕಂಠಕ್ಕೆ ಕರೆಸಿಕೊಂಡು ಅಲ್ಲಿ ಪಾದಪಂಕಜವನ್ನು ಕಂಡು ಧನ್ಯನಾಗಿ ನಿನಗೆ ಸಮಸ್ತ ಕೈಂಕರ್ಯಗಳನ್ನೂ ಮಾಡುವ ಸುಕೃತವೋ? ಎಂದು ಬೇಡುತ್ತಾರೆ. ಈ ಅರ್ಥವೇ ತುಂಬಾ ಸಮಂಜಸವಾಗಿ ತೋರುತ್ತದೆ. ಹಾಗೆಯೇ ಶ್ರೀ ಯತಿವರ್ಯರೂ "**ಕದಾ, ಕದಾ**" ಎಂದು ಪರಮಾತ್ಮಸಾಯುಜ್ಯವನ್ನು ಕ್ಷಿಪ್ರದಲ್ಲೇ ಹೊಂದಬೇಕೆಂಬ ಅಭಿಪ್ರಾಯದಿಂದ ಅನೇಕ ಸಲ ಪ್ರಯೋಗಿಸಿರುತ್ತಾರೆ.

**ಉಪಪಾದನೆಯು**-ನಿನ್ನ ಪಾದಪಂಕಜದ ಮಹಾತ್ಮ್ಯೆಯು ಅತ್ಯದ್ಭುತವು ಏಕೆಂದರೆ **ವಿಲಾಸವಿಕ್ರಾನ್ತ ಪರಾವರಾಲಯಂ** ನೀನು ತ್ರಿವಿಕ್ರಮಾವತಾರಿಯಾಗಿ ಒಂದು ಪಾದವಿನ್ಯಾಸದಿಂದ ಈ ಕೆಳಗಿನ ಲೋಕವನ್ನೆಲ್ಲಾ ಅಳೆದು, ಇನ್ನೊಂದು ಪಾದವಿನ್ಯಾಸದಿಂದ ಮೇಲಿನ ಲೋಕವನ್ನೆಲ್ಲಾ ಅಳೆದು, ನಿನ್ನ ಪಾದಚ್ಛಾಯೆಯೇ ಸರ್ವ ಲೋಕಕ್ಕೂ ಉಜ್ಜೀವನರೂಪವಾದುದೆಂದು ತೋರಿಸುವುದಕ್ಕಾಗಿ ವಿಲಾಸವಿಕ್ರಾನ್ತ ಎಂಬ ಪ್ರಯೋಗವು. ವಾಮನಾಗಿದ್ದುದು ತ್ರಿವಿಕ್ರಮನಾಗಲು ತುಂಬಾ ಶ್ರಮವೋ ಎಂದರೆ **ವಿಲಾಸವಿಕ್ರಾನ್ತ** ಲೀಲೆ ಮಾತ್ರದಿಂದಲೇ ಎಲ್ಲಾ ಲೋಕಗಳನ್ನೂ **ಪಾದಪಂಕಜದ** ಮೂಲಕ ಆಕ್ರಮಿಸಿರುವನು. ಹೀಗೆ ಲೀಲೆಯಿಂದಲೇ ಅಳೆದ **ಪರಾವರಾಲಯಂ** ಈ ಭೂಲೋಕ ಸತ್ಯಲೋಕಾದಿಗಳನ್ನು ಉಳ್ಳದ್ದು ನಿನ್ನ ಪಾದಪಂಕಜವೆಂದು ಹೇಳಿದರು. ಈ ಲೋಕದಲ್ಲಿ ಅಧರ್ಮವೂ ತನ್ಮೂಲಕವಾಗಿ ದುಃಖವೂ ಹೆಚ್ಚಾದುದರಿಂದ ಕರ್ಮ ಭೂಮಿಯಾಗಿ ಅವರ ಲೋಕವು. ಬ್ರಹ್ಮರುದ್ರೇಂದ್ರಾದಿ ದಿಕ್ಪಾಲಕರುಗಳ ಲೋಕವೂ ಎಲ್ಲವೂ ಪರಾಲಯವು ಇದಕ್ಕಿಂತ ಉತ್ಕೃಷ್ಟ ಲೋಕಗಳು. ಸರಿಯಾಗಿ ವಿಮರ್ಶಿಸಿ ನೋಡಿದರೆ ಪರಮಪದಕ್ಕೆ ಹೋಲಿಸಿದರೆ ಅವುಗಳೂ ಅಶಾಶ್ವತ ಲೋಕಗಳು. "**ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ । ಮಾ ಮುಪೇತ್ಯತು ಕಾಂತೇಯ ಪುನರ್ಜನ್ಮನವಿದ್ಯತೇ**" ಎಂಬಲ್ಲಿ ಬ್ರಹ್ಮಲೋ

ಕಾದಿಗಳಿಗೂ ದಿವ್ಯವೈಕುಂಠಕ್ಕೂ ಇರುವ ವ್ಯತ್ಯಾಸವು ಉಪಾದಿತವು. ಶ್ರುತಿಯು **"ಯಸ್ಯೋರುಷು ತ್ರಿಷುವಿಕ್ರಮಣೇಷು ಭುವನಾನಿವಿಶ್ವಾ"** ಎಂಬಲ್ಲಿ ತ್ರಿವಿಕ್ರಮಾವತಾರವು ಪ್ರಸಿದ್ಧವು. ಯಾವ ಮಹಾ ಪುರುಷನ ಅಗಾಧಗಳಾದ ಮೂರ ಪಾದವಿನ್ಯಾಸಗಳಲ್ಲಿ ಎಲ್ಲಾ ಪ್ರಪಂಚಗಳೂ ಅಡಗಿವೆಯೋ ಎಂಬುದು ಶ್ರುತ್ಯರ್ಥವು. ಹಾಗೆಯೇ **"ಕ್ರಾನ್ತ್ವಾಧರಿತ್ರೀಂ ಗಗನಂ ತಥಾದಿವಂ"** ಭೂಮಿಯನ್ನೂ ಆಕಾಶವನ್ನೂ ಸ್ವರ್ಗವನ್ನೂ ಆಕ್ರಮಿಸಿ ಎಂದರೆ ಅಳೆದು ಎಂಬ ಪ್ರಮಾಣವೂ ಉಂಟು. ಹೀಗೆ ಇವುಗಳನ್ನು ಆಕ್ರಮಿಸುವುದರಲ್ಲಿ ಸರ್ವೇಶ್ವರನಿಗೆ ಏನೊಂದೂ ಆಯಾಸವಿಲ್ಲದೆ ಲೀಲೆ ಮಾತ್ರವೇ ಎಂದೂ ತಿಳಿಸುವುದಕ್ಕಾಗಿ ವಿಲಾಸ ಶಬ್ದವು. ಈ ಅವತಾರದಿಂದ ಗ್ರಹಿಸತಕ್ಕ ವಿಷಯವೇನೆಂದರೆ 'ಈ ಎಲ್ಲಾ ವಿಭೂತಿಯೂ ಆತನದೇ, ಅವನಲ್ಲೇ ಅಡಗಿವೆ' ಎಂದೂ ಆತನ ಪಾದವೇ ನಮಗೆ ರಕ್ಷಿಸುವ ವಸ್ತುವು ಎಂಬುದು.

ಮುಂದೆ ಆ ಪದಪಂಕಜದ ಸೌಲಭ್ಯವನ್ನೂ ಆಶ್ರಯಿಸುವುದು ಆ ಕಾರಣದಿಂದ ಪರಮ ಸುಕರವೆಂಬುದನ್ನೂ ಹಾಗೆ ಆಶ್ರಯಿಸಿದವಳ ಅನಿಷ್ಟ ನಿವರ್ತಕತ್ವವನ್ನೂ ವ್ಯಕ್ತಪಡಿಸುವುದಕ್ಕಾಗಿ **ನಮಸ್ಯದಾರ್ತಿಕ್ಷಪಣೇ ಕೃತಕ್ಷಣಂ** ಎಂಬ ವಿಶೇಷಣವನ್ನು ಪಾದಪಂಕಜಕ್ಕೆ ಕೊಟ್ಟಿರುತ್ತಾರೆ. ಶರಣಾಗತಿಯನ್ನನುಷ್ಠಿಸಿ ನಮಸ್ಕಾರ ಮಾಡಿದವರ ಆರ್ತಿಯನ್ನು ಹೋಗಲಾಡಿಸುವುದಕ್ಕಾಗಿ ಕೊಡಲ್ಪಟ್ಟ ಅವಸರ ಉಳ್ಳದುದು. ಇಲ್ಲಿ **ನಮ** ಶ್ಯಬ್ದವು, **"ನಮಶ್ಚಕ್ರುರ್ಜನಾರ್ದನಂ"** ಎಂಬಲ್ಲಿ ಹೇಳಿರುವ ಹಾಗೆ, ಶರಣಾಗತಿಯನ್ನನುಷ್ಠಿಸುವ ಕಾಲದ ಪ್ರಹ್ವೀಭಾವವು ಎಂದರೆ ಪ್ರಣಾಮವೆನಿಸುವುದು. ಮಾರ್ಕಾಂಡೇಯರು ಪಾಂಡವರನ್ನು ಕುರಿತು "ಶ್ರೀ ಕೃಷ್ಣನನ್ನು ಸಾಧಾರಣ ಮನುಷ್ಯನೆಂದು ಭಾವಿಸಬೇಡಿ. ಆತನೇ ಪರತತ್ವವು. ಆತನ ಕಣ್ಣಿನ ಸೊಬಗಿನಿಂದಲೇ ಖಂಡಿತವಾಗಿಯೂ ಹೇಳಬಲ್ಲೆನು. ಆತನಲ್ಲಿ ಶರಣಾಗತಿಯನ್ನೂ ಅನುಷ್ಠಿಸಿ" ಎಂದು ಉಪದೇಶಿಸಿದ ಒಡನೆಯೇ **"ದ್ರೌಪದ್ಯಾ ಸಹಿತಾಸ್ಸರ್ವೇ ನಮಶ್ಚಕ್ರುರ್ಜನಾರ್ದನಂ"** ಎಂಬಲ್ಲಿ ಹೇಳಿರುವ ಹಾಗೆ ನಮಶ್ಯಬ್ದವು ಶರಣಾಗತಿಯನ್ನು ಸೂಚಿಸುತ್ತದೆ. ಇಲ್ಲಿ **ಕೃತಕ್ಷಣ** ಎಂಬಲ್ಲಿನ **ಕ್ಷಣ** ಶಬ್ದಕ್ಕೆ ಮಾಡಲ್ಪಟ್ಟ ವ್ಯಾಪಾರವುಳ್ಳದ್ದು ಎಂದು ಅರ್ಥಮಾಡಬಹುದು. ಏಕೆಂದರೆ **ಕ್ಷಣ** ಶಬ್ದಕ್ಕೆ ವ್ಯಾಪಾರ, ವೈಕಲ್ಯ, ಕಾಲಭೇದ, ಅತ್ಯಲ್ಪ ಕಾಲ ಎಂಬ ನಾನಾರ್ಥಗಳುಂಟು, ಶರಣಾಗತರು ಆರ್ತರಾಗಿದ್ದಪಕ್ಷದಲ್ಲಿ ಮಿಕ್ಕ ವ್ಯಾಪಾರಗಳನ್ನೆಲ್ಲಾ ಬಿಟ್ಟು ತತ್‌ಕ್ಷಣವೇ ಆರ್ತಿಯನ್ನು ಹೋಗಲಾಡಿಸುವ ದಯಾವಾತ್ಸಲ್ಯಯುಕ್ತವೆಂಬುದು **"ಆರ್ತಿಕ್ಷಪಣೇ ಕೃತಕ್ಷಣ"**ವೆಂದು ಹೇಳಲ್ಪಟ್ಟಿತು ಇದಕ್ಕೆ ನಿದರ್ಶನವಾಗಿ ಗಜೇಂದ್ರಮೋಕ್ಷದಲ್ಲಿ ಗರುಡಾಳ್ವಾರ್ ರವರ ವೇಗವೂ ಕೂಡ ಸಾಲದೆ ಹೋಯಿತೆಂಬ ಪುರಾಣೋಕ್ತಿಯಿರುತ್ತದೆ. ಹದಿನಾಲ್ಕು ವರ್ಷ ವನವಾಸ ಕಳೆಯಿತೋ ಇಲ್ಲವೋ ವಿಭೀಷಣನು ಲಂಕೆಯಲ್ಲಿ ಒಂದು ದಿನ ಇದ್ದು ಅಯೋಧ್ಯೆಗೆ ತೆರಳಬಹುದೆಂದು ಯಾಚಿಸಿದರೂ ಒಪ್ಪದೆ **"ಶಿರಸಾ ಯಾಚಿ**

**ತಸ್ಯಸ್ಯವಚನಂ ನಕೃತಂಮಯಾ"** ಶರಣಾಗತನಾದ ಭರತನು ತಲೆಬಾಗಿ ಯಾಚಿಸಿದುದನ್ನು ನಾನು ಮಾಡಲಿಲ್ಲವೇ ಎಂಬ ಪರಿತಾಪದಿಂದ ಒಡನೆ ಅಯೋಧ್ಯೆಗೆ ತೆರಳಿದುದೂ ನಿದರ್ಶನವು.

ಈ ಪಾದಪಂಕಜವನ್ನು **ಧನಂ ಮದೀಯಂ** ಎಂದು ಹೇಳಿಕೊಂಡರು. ಐಹಿಕದಲ್ಲಿ ವಿರಕ್ತಿಯನ್ನು ಹೊಂದಿದವನಿಗೆ ಧನವು ತೃಣವಾದುದರಿಂದ, ಪರಮ ಧನವು ಯಾವುದೆಂದರೆ ಸಿದ್ಧೋಪಾಯನಾದ ಪರಮಪುರುಷನೇ. ಆಗಲಿ ಮಮ ಕಾರ ಕೂಡದೆಂದು ನಿಷೇಧಿಸಿರುವಾಗ **ಮದೀಯಂ** ಎಂಬ ಪ್ರಯೋಗವು ಸಾಧುವೋ ? ಎಂದರೆ ಐಹಿಕವಾದ ಮಮಧನಂ, ಮಮಗೃಹಂ ಇತ್ಯಾದಿಗಳು **"ಮಮೇತಿ ದ್ವ್ಯಕ್ಷರೋಮೃತ್ಯುಃ ನಮಮೇತಿ ಚ ಶಾಶ್ವತಂ"** ಎಂಬಲ್ಲಿ ಹೇಳಿ ರುವ ಹಾಗೆ, ಕೂಡದು. ಲೋಕನಾಥನನ್ನೂ ಆತನ ಪಾದಪಂಕಜವನ್ನೂ ಹೇಳುವಾಗ, **ಮಮ** ಶಬ್ದವು ಶ್ಲಾಘನೀಯವು. ಆದುದರಿಂದ **ಧನಂ ಮದೀಯಂ** ಎಂಬ ಪ್ರಯೋಗವು. ಹಾಗೆಯೇ ಅನೇಕ ವಿರಕ್ತ ಶಿಖಾಮಣಿಗಳು ಹೇಳಿಕೊಂಡಿ ರುತ್ತಾರೆ. ಶ್ರೀ ನಿಗಮಾಂತ ಮಹಾದೇಶಿಕರವರೂ "**ಅಸ್ತಿಮೇ ಹಸ್ತಿಶೈಲಾಗ್ರೇ ವಸ್ತುಪೈತಾ ಮಹಂಧನಂ**" ಎಂದು ಪ್ರಯೋಗಿಸಿರುತ್ತಾರೆ. ಐಹಿಕ ಧನವು ಹೇಗೆ ಐಹಿಕ ಸುಖಗಳನ್ನು ಈಯುವುದೋ, ಹಾಗೆಯೇ ಈ ಧನವು ಅದನ್ನೂ ಶಾಶ್ವತ ಸುಖವನ್ನೂ ಕೊಡುತ್ತದೆ. ಐಹಿಕ ಧನವೂ ಕೂಡ ಈತನ ಸಂಕಲ್ಪ ವಿನಾ ಸುಖವನ್ನು ಕೊಡಲಾರದು.

**ಈ ಧನಂಮದೀಯಂ** ಎಂಬ ಪ್ರಯೋಗವು ಶ್ರೀ ಯಾಮುನ ಮುನಿಗಳ ಜೀವನ ಚರಿತ್ರೆಯ ಒಂದು ಇತಿಹಾಸವನ್ನು ಸೂಚಿಸುತ್ತದೆ. ಇವರನ್ನು ಚೋಳ ದೇಶದ ರಾಜನ ಆಸ್ಥಾನ ವಿದ್ವಾಂಸನಾದ ಅಕ್ಕಿಯಾಳ್ವಾನನು ಕಪ್ಪವನ್ನು ಕೊಡ ಬೇಕೆಂದು ನಿರ್ಬಂಧಿಸಲು, ರಾಜನ ಸಭೆಗೆಹೋಗಿ ಆತನನ್ನು ಜಯಿಸಿ, ಅದಕ್ಕೆ ಫಲವಾಗಿ ರಾಜನು ತನ್ನ ಹೆಂಡತಿಯೊಂದಿಗೆ ಮಾಡಿಕೊಂಡಿದ್ದ ಶಪಥಕ್ಕನುಗಣ ವಾಗಿ ಅರ್ಧ ರಾಜ್ಯವನ್ನು ಪಡೆದು ಆಳುತ್ತಿದ್ದರು. ಇವರ ಪಿತಾಮಹರಾದ ನಾಥಮುನಿಗಳು ತಮ್ಮ ಶಿಷ್ಯರಾದ ಮಣಕ್ಕಾಲ್‌ನಂಬಿಯವರನ್ನು ಕರೆದು ತಮ್ಮ ಪೌತ್ರರಿಗೆ ರಹಸ್ಯಾರ್ಥಗಳನ್ನೆಲ್ಲಾ ಉಪದೇಶಿಸತಕ್ಕದ್ದೆಂದು ಆಜ್ಞಾಪಿಸಿದ್ದರು. ಇದಕ್ಕೆ ಶ್ರೀ ಮಣಕ್ಕಾಲ್‌ನಂಬಿಯವರಿಗೆ ಅವಕಾಶವು ದೊರೆಯದೆ ಕಷ್ಟಪಟ್ಟು ಕಡೆಗೆ ದೊರೆತಾಗ ೧೮ ದಿನಗಳು ಯಾಮುನ ಮುನಿಗಳಿಗೆ ಗೀತಾರ್ಥಾದಿಗಳನ್ನುಪ ದೇಶಿಸಿ "ನಿಮ್ಮ ಪಿತಾಮಹರು ನಿಮಗೆ ಸಮರ್ಪಿಸುವುದಕ್ಕಾಗಿ ನನ್ನಲ್ಲಿ ಧನವನ್ನು ಕೊಟ್ಟಿರುತ್ತಾರೆ. ಶ್ರೀರಂಗಕ್ಕೆ ದಯಮಾಡಿ ಬಂದರೆ ಅಲ್ಲಿ ಒಪ್ಪಿಸುತ್ತೇನೆಂದು" ಹೇಳಿ ಅವರನ್ನು ಕರೆದುಕೊಂಡು ಹೋಗಿ ಶ್ರೀರಂಗನಾಥನ ಎದುರಿಗೆ ನಿಲ್ಲಿಸಿ ಸ್ವಾಮಿಯನ್ನು ತೋರಿಸಿ ಇದೇ ಧನವು ಎಂದು ಹೇಳಿದ ಇತಿಹಾಸವು ಜ್ಞಾಪಕಕ್ಕೆ ಬರುತ್ತದೆ. ಇವರು ತದನಂತರ ವಿರಕ್ತಿಭಾವನನ್ನು ಹೊಂದಿ ರಾಜ್ಯವನ್ನು ಪರಿ

ತ್ಯಾಗಮಾಡಿ ಶ್ರೀರಂಗದಲ್ಲೇ ಇದ್ದುಕೊಂಡು ೧೮ ಮಂದಿ ಶಿಷ್ಯರಿಗೆ ಪಾಠ ಪ್ರವಚನಗಳನ್ನು ಮಾಡಿಕೊಂಡು ಇದ್ದರೆಂದು ಹೇಳಲ್ಪಟ್ಟಿರುತ್ತದೆ. ಈ ವೃತ್ತಾಂತಗಳಿಗೆ ದಾಸನು ಬರೆದಿರುವ ಗುರುಪರಂಪರಾಸಾರ ವ್ಯಾಖ್ಯಾನದ ೮೫–೮೮ನೆಯ ಪುಟಗಳನ್ನು ಪರಾಂಬರಿಸಿ.

ತವಪಾದ ಪಂಕಜಂ ಎಂಬ ಪ್ರಯೋಗದಿಂದ, ಸ್ವರೂಪಾದಿಗಳಿಂದ ನಿರತಿಶಯ ಭೋಗ್ಯನಾದ ಆಶ್ರಿತವತ್ಸಲನಾದ ನಿನ್ನ ಪಾದಕಮಲವೇ ಮುಮುಕ್ಷು ಗಳಿಗೆ ಧ್ಯೇಯವಾಗಿಯೂ ಮುಕ್ತರಿಗೆ ಭೋಗ್ಯಭೂತವಾಗಿಯೂ ಇರುವುದು ಎಂದು ಹೇಳಲ್ಪಟ್ಟಿತು.

ಕದಾ ಎಂದು ಹೇಳಿರುವುದು, ಶ್ರುತಿಯಲ್ಲಿ **"ನಚಕ್ಷುಷಾ ಪಶ್ಯತಿ ಕಶ್ಚನೈನಂ"** ಈತನನ್ನು ಯಾರೊಬ್ಬರೂ ಈ ಮಾಂಸ ಚಕ್ಷುಸ್ಸಿನಿಂದ ನೋಡ ಲಾರರು ಎಂದು ಹೇಳಿರುವುದನ್ನು ಜ್ಞಾಪಿಸುತ್ತದೆ. ಹಾಗೆಯೇ ಗೀತೆಯಲ್ಲೂ ೧೧ನೇ ಅಧ್ಯಾಯದಲ್ಲಿ

**"ನತುಮಾಂ ಶಕ್ಷ್ಯಸೇ ದ್ರಷ್ಟುಂ ಅನೇನೈವ ಸ್ವಚಕ್ಷುಷಾ ।**
**ದಿವ್ಯಂದ ದಾಮಿತೇ ಚಕ್ಷುಃ ಪಶ್ಯಮೇಯೋಗ ಮೈಶ್ವರಂ ॥"**

ಈ ಮಾಂಸ ಚಕ್ಷುಸ್ಸಿನಿಂದಲೇ ನನ್ನ ದಿವ್ಯಮಂಗಳ ವಿಗ್ರಹ ಕಲ್ಯಾಣಯೋಗ ವನ್ನೂ ವಿಭೂತಿಯ ಐಶ್ವರ್ಯವನ್ನೂ ನೀನು ನೋಡಲು ಸಾಧ್ಯವಿಲ್ಲವು. ಆದುದರಿಂದ ನಿನಗೆ ದಿವ್ಯಚಕ್ಷುಸ್ಸನ್ನು ಕೊಡುವೆನು ನೋಡು ಎಂದು ಶ್ರೀ ಕೃಷ್ಣಭಗವಾನ್ ರವರು ಅರ್ಜುನನಿಗೆ ಹೇಳಿರುತ್ತಾರೆ. ಸ್ವಾಮಿಯ ಅನುಗ್ರಹದಿಂದ ಹೀಗೆ ನೋಡ ಬಹುದು. ಆದರೆ ಇದು ಸ್ವಾಮಿಯ ಪರಮಾನುಗ್ರಹದಿಂದ ಸಿದ್ಧಿಸತಕ್ಕದ್ದು. ಇನ್ನೊಂದು ಕಡೆಯಲ್ಲೂ **"ನಮಾಂಸ ಚಕ್ಷುಷಾ ಬ್ರಹ್ಮಭೂತಃ ಸಶಕ್ಯತೇ"** ಎಂದು ಹೇಳಲ್ಪಟ್ಟಿರುತ್ತದೆ. ಪರಬ್ರಹ್ಮ ಭೂತನಾದ ಅವನು ಮಾಂಸಚಕ್ಷುಸ್ಸಿ ನಿಂದ ನೋಡಲು ಸಾಧ್ಯವಿಲ್ಲವು ಎಂಬ ಅರ್ಥವು. **"ಪ್ರತ್ಯಕ್ಷೋಸಿ ನಕಸ್ಯಚಿತ್"** ಯಾರೊಬ್ಬನಿಗೂ ನೀನು ಪ್ರತ್ಯಕ್ಷನಲ್ಲವು ಎಂದು ಜಿತನ್ತೆಯಲ್ಲಿದೆ. **"ತಾಸಾಮಾ ವಿರಭೂಚ್ಛೌರಿಃ"** ಎಂಬಲ್ಲಿ **ಸಾಕ್ಷಾನ್ಮನ್ಮಥ ಮನ್ಮಥನ** ಹಾಗೆ ಶ್ರೀ ಕೃಷ್ಣನು ತೋರಿದನೆಂದು ಹೇಳಿರುವ ಸಂದರ್ಭದಲ್ಲಿ ಗೋಪಿಕಾಸ್ತ್ರೀಯರೇ ಮೊದಲಾದವರಿಗೆ ದಿವ್ಯಚಕ್ಷುಸ್ಸನ್ನು ದಯಪಾಲಿಸಿ ಪ್ರತ್ಯಕ್ಷನಾದನೋ, ಹಾಗೆಯೇ ತಾವೂ ಪ್ರತ್ಯಕ್ಷಿಸಿ ನೋಡುವ ಸುಕೃತವು ಎಂದಿಗೋ ಎಂದು ಹೇಳುತ್ತಾರೆ. ಇಲ್ಲಿ ಆಚಾರ್ಯರು ವಿಳಂಬವನ್ನು ಸಹಿಸದವರಾಗಿ ಮುಕ್ತದೆಶೆಯಲ್ಲಿ ಅಪ್ರಾಕೃತ ದಿವ್ಯಚಕ್ಷುಸ್ಸಿನಿಂದ ನಿನ್ನ ದಿವ್ಯಮಂಗಳ ವಿಗ್ರಹವನ್ನು ನೋಡುವ ಸುಕೃತವು ಎಂದಿಗೆ ಲಭಿಸೀತೋ ? ಎಂಬ ಭಾವವು. ಅಥವಾ ಶಾಸ್ತ್ರಮುಖೇನ ಜ್ಞಾನಚಕ್ಷುಸ್ಸಿನಿಂದ ಸಾಕ್ಷಾತ್ಕರಿಸ ಬಹುದು. ಇದಕ್ಕೆ ವೇದವು ಒಂದು ಕಣ್ಣೆಂದೂ, ಉಪಾಸನ ರೂಪವಾದುದು

**ಕದಾ ಪುನಶ್ಶಂಖ ರಥಾಂಗ ಕಲ್ಪಕ**
**ಧ್ವಜಾ ರವಿಂದಾಂಕುಶ ವಜ್ರಲಾಂಛನಂ ।**
**ತ್ರಿವಿಕ್ರಮತ್ವಚ್ಚರಣಾಂಬುಜದ್ವಯಂ**
**ಮದೀಯ ಮೂರ್ಧಾನಮಲಂ ಕರಿಷ್ಯತಿ ॥ ೩೧ ॥**

---

ಇನ್ನೊಂದು ಕಣ್ಣಿಂದೂ ಹೇಳಲ್ಪಟ್ಟಿದೆ. ಆದರೆ ಇವರು ಉಪಾಸನವನ್ನು ತ್ಯಜಿಸಿ ಶರಣಾಗತಿಯನ್ನು ಅನುಷ್ಠಿಸಿದವರಾದ ಕಾರಣದಿಂದ, ಈ ವಿಧವಾಗಿ ನೋಡ ಬೇಕೆಂಬ ಆಶೆಯಿಂದಲೂ **ಕದಾ** ಎಂದು ಹೇಳಿದವರಲ್ಲವು. ಹೀಗೆ ಶಾಸ್ತ್ರಮುಖೇನ ಜ್ಞಾನಚಕ್ಷುಸ್ಸಿನಿಂದ ತಿಳಿದ ಪರವಾಸುದೇವ ಮೂರ್ತಿಯನ್ನೇ ವಿಶೇಷವಾಗಿ ವರ್ಣಿಸುತ್ತಾರಾದುದರಿಂದ ಅಂತಹ ದಿವ್ಯಮಂಗಳ ವಿಗ್ರಹದ ಸಾಕ್ಷಾತ್ಕಾರವೇ ಇಲ್ಲಿ ಬೇಕಾದುದೇ ವಿನಾ ಜ್ಞಾನಚಕ್ಷುಸ್ಸಿನ ಮೂಲಕ ಸಾಕ್ಷಾತ್ಕಾರವನ್ನು ಗುರುಗಳು ಬಯಿಸಲಿಲ್ಲವೆಂದು ವ್ಯಕ್ತವಾಗುತ್ತದೆ. ಆದುದರಿಂದ ಪರವಾಸುದೇವ ಮೂರ್ತಿಯ ಸಾಕ್ಷಾತ್ಕಾರವನ್ನೇ ಇವರು ಬಯಸಿದರು. ಏಕೆಂದರೆ ಹಿಂದಿನ ಶ್ಲೋಕದಲ್ಲಿ ಸಂಸಾರ ಮಧ್ಯದಲ್ಲಿರುವುದು ಕಾಡ್ಗಿಚ್ಚಿನ ಮಧ್ಯದಲ್ಲಿರುವ ಹಾಗೆ ಎಂದು **"ಉದೀರ್ಣ ಸಂಸಾರ ದವಾಶುಶುಕ್ಷಣಿಂ"** ಎಂಬ ಪ್ರಯೋಗದಿಂದ ಹೇಳಿಕೊಂಡವರಾದುದರಿಂದ ಬಹು ಶೀಘ್ರವಾಗಿ ಮೋಕ್ಷವು ದೊರೆತು ಅಪ್ರಾಕೃತ ಚಕ್ಷುಸ್ಸಿನಿಂದ ಸಾಕ್ಷಾತ್ಕರಿಸುವ ಸುಕೃತವು ಯಾವಾಗಲೋ ಎಂದು **ಕದಾ** ಎಂಬ ಪ್ರಯೋಗವು. ಇದು ವಿಳಂಬಾಸಹತ್ವವನ್ನು ಪ್ರದರ್ಶಿಸುತ್ತದೆ. **"ತದ್ವಿಷ್ಣೋಃ ಪರಮಂಪದಂ ಸದಾ ಪಶ್ಯನ್ತಿಸೂರಯಃ"** ಎಂಬಲ್ಲಿ ಹೇಳಿರುವಹಾಗೆ ಅವಿಚ್ಛಿನ್ನ ವಾಗಿ ಸದಾ ನೋಡತಕ್ಕ ದೆಶೆಯನ್ನು ಪ್ರಾರ್ಥಿಸಿರುತ್ತಾರೆಂದು ಧಾರಾಳವಾಗಿ ಹೇಳಬಹುದು.

**ಅವತಾರಿಕೆಯು**—ಹಿಂದಿನ ಶ್ಲೋಕದಲ್ಲಿ **ಕದಾನು ಸಾಕ್ಷಾತ್ಕರವಾಣಿ ಚಕ್ಷುಷಾ** ಎಂದು ತ್ವರಾತಿಶಯವನ್ನು ಸೂಚಿಸಿ, ಯಾವಾಗ ನಿನ್ನ ಪಾದದ್ವಂದವನ್ನು ಸಾಕ್ಷಾತ್ಕರಿಸುವ ಸುಕೃತವು ಲಭಿಸುತ್ತದೋ ಎಂದು ಹೇಳಿದರು. ಆ ತ್ವರಾತಿಶಯ ವನ್ನೇ ಪುನಃ ಪ್ರಕಟಿಸುವರಾಗಿ ಪಾದಕಮಲ ದ್ವಂದ್ವಲಕ್ಷಣವನ್ನು ವರ್ಣಿಸ್ಸಿ ಮುಂದೆ ಸುಮಾರು ೧೪ ಶ್ಲೋಕಗಳಿಂದ ಯಾವ ದಿವ್ಯಮಂಗಳ ವಿಗ್ರಹದ ಪಾದದ ಸಾಕ್ಷಾತ್ಕಾರವನ್ನೂ ಆ ಪಾದದ್ವಂದ್ವದಲ್ಲಿ ತಾವು ಶಿರಸ್ಸನ್ನಿಡುವ ಸುಕೃತವನ್ನೂ ಅಪೇಕ್ಷಿಸಿದರೋ ಎಂದರೆ ಮುಕ್ತದಶೆಯನ್ನು ಹೊಂದಿ, ಅಪ್ರಾಕೃತ ಶರೀರವನ್ನು ಹೊಂದಿ ದಿವ್ಯಚಕ್ಷುಸ್ಸಿನಿಂದ ಆತನನ್ನೂ, ಆತನ ಪಾದಾರವಿಂದಗಳನ್ನೂ, ಸಾಕ್ಷಾತ್ತಾಗಿ ನೋಡಿ, ಆತನ ಪಾದಯುಗ್ಮದಲ್ಲಿ ತಮ್ಮ ಶಿರಸ್ಸನ್ನಿಡುವ ಭಾಗ್ಯವು ಎಂದಿಗೆ ದೊರೆಯುತ್ತದೋ ಎಂದು ಹೇಳುತ್ತಾರೆ. ಅದನ್ನು ಸಾಕ್ಷಾತ್ಕರಿಸುವುದು

ಏತಕ್ಕೆ ಎಂದರೆ ಆ ಪಾದಗಳಲ್ಲಿ ತಮ್ಮ ಶಿರಸ್ಸನ್ನಿಡುವುದರಿಂದ ಶಿರಸ್ಸಿಗೆ ಅಲಂಕಾರ ರೂಪದಲ್ಲಿ ಕಂಗೊಳಿಸುವುದು ಯಾವಾಗಲೋ ಎಂದು ಪ್ರಾರ್ಥಿಸುತ್ತಾರೆ.

**ಅರ್ಥವು**-ಶಂಖರಥಾಂಗ ಕಲ್ಪಕ-ಲಾಂಛನಂ, ಶಂಖ, **ರಥಾಂಗ-ಚಕ್ರ** ಕಲ್ಪಕ-ಕಲ್ಪವೃಕ್ಷ, **ಧ್ವಜ, ಅರವಿಂದ**-ಕಮಲ, **ಅಂಕುಶ**-ಭರ್ಜಿ, **ವಜ್ರ**-ವಜ್ರಾಯುಧ, **ಲಾಂಛನಂ**-ಇವುಗಳ ಚಿಹ್ನೆಗಳುಳ್ಳ **ತ್ವಚ್ಚರಣಾಂಬುಜದ್ವಯಂ**-ಪರಮಕಾರುಣಿಕನಾಗಿ, ಭಕ್ತವತ್ಸಲನಾಗಿರುವ ನಿನ್ನ ಪಾದಕಮಲ ಯುಗ್ಮವನ್ನು, **ಹೇತ್ರಿವಿಕ್ರಮ**-ಎಲ್ಲಾ ಪ್ರಾಣಿಗಳೂ ನನಗೆ ಸಮರು. ಎಲ್ಲರಿಗೂ ನಾನು ಸತ್ತಾದಾಯಕನು; ಆಧಾರನು, ಗತಿಯು, ನನ್ನ ಪಾದಗಳೇ ಆಶ್ರಿತರಿಗೆ ಉಜ್ಜೀವನ ರೂಪವಾದುದೆಂದು ತೋರಿದ ತ್ರಿವಿಕ್ರಮನೇ, **ಕದಾಪುನಃ**—ಎಂದಿಗೋ, **ಮದೀಯ ಮೂರ್ಧಾನಂ**—ನನ್ನ ಶಿರಸ್ಸನ್ನು, **ಅಲಂಕರಿಷ್ಯತಿ**—ಅಲಂಕರಿಸುತ್ತದೋ ? ತಿಳಿಯದು ಎಂದು ತ್ವರಾತಿಶಯವನ್ನು ತೋರಿರುತ್ತಾರೆ.

**ಉಪಪಾದನೆಯು**-ಹಿಂದೆ ಹೇಳಿದುದನ್ನೇ ಅನುವಾದ ಮಾಡಿ ಹೇಳುವದರಿಂದ **ಕದಾಪುನಃ** ಎಂಬ ಪ್ರಯೋಗವು. ಹಾಗಾದರೆ ಪುನರುಕ್ತಿಯೇ ? ಎಂದರೆ ಅಲ್ಲವು ಏಕೆಂದರೆ, ಹಿಂದೆ ಸುಮ್ಮನೆ ಸಾಕ್ಷಾತ್ಕಾರವು ಪ್ರಾರ್ಥಿಸಲ್ಪಟ್ಟಿತು. ಇಲ್ಲಿ ತಮ್ಮ ಶಿರಸ್ಸನ್ನು ಅಂತಹಪಾದಗಳಲ್ಲಿ ಇಟ್ಟು ನಮಸ್ಕರಿಸಬೇಕೆಂಬ ಪ್ರಾರ್ಥನೆಯು. ಹಿಂದೆ ತಮಗೆ ಮುಕ್ತಿದೆಶೆಯಲ್ಲಿ ಉಂಟಾಗುವ ದಿವ್ಯಚಕ್ಷುಸ್ಸಿಗೆ ಸಾರ್ಥಕ್ಯವು ಅಪೇಕ್ಷಿಸಲ್ಪಟ್ಟಿತು. ಈಗ ತಮಗುಂಟಾಗುವ ಅಪ್ರಾಕೃತ ಶರೀರದ ಶಿರಸ್ಸಿನ ಸಾರ್ಥಕ್ಯವು ಪ್ರಾರ್ಥಿತವು. ಹಿಂದೆ ಸುಮ್ಮನೆ **ಪಾದಪಂಕಜಂ** ಎಂದು ಇಷ್ಟೇ ಹೇಳಲ್ಪಟ್ಟಿತು. ಸ್ವಾಮಿಯು **"ಪತಿಂ ವಿಶ್ವಸ್ಯ"** ಎಂಬಲ್ಲಿ ಹೇಳಿರುವ ಹಾಗೆ ಸರ್ವಲೋಕಗಳ ನಾಥನಾಗಿರುವವನ ಪಾದಲಕ್ಷಣವು ಎಂತಹ ಚಿಹ್ನೆಗಳುಳ್ಳದ್ದಾಗಿ ಮಹಿಮೆಯುಳ್ಳದೆಂದು ಹೇಳುತ್ತಾರೆ. ಆದುದರಿಂದ ಪುನರುಕ್ತಿದೋಷಕ್ಕೆ ಅವಕಾಶ ವಿಲ್ಲವು. ಆ **ಅರುಣಾಂಬುಜದ್ವಯ** ವೆಂತಾದ್ದೆಂದರೆ ಶಂಖ, ಚಕ್ರ, ಕಲ್ಪವೃಕ್ಷ, ಧ್ವಜ, ಕಮಲ, ಭರ್ಜಿ, ವಜ್ರಾಯುಧ ಇವುಗಳ ಲಾಂಛನವುಳ್ಳದು ಸರ್ವಲೋಕ ಸಮ್ರಾಟ್ ಆದುದರಿಂದ ಈ ಚಿಹ್ನೆಗಳೂ ರೇಖೆಗಳೂ ಪಾದಗಳಲ್ಲಿರಬೇಕೆಂಬ ಭಾವವು. ಸ್ವಾಮಿಯ ಅನುಗ್ರಹದಿಂದ ಈ ಲೋಕದ ರಾಜರಾಗಿರುವವರಿಗೆ ಪಾದಗಳಲ್ಲಿ ಉತ್ತಮ ರೇಖೆಗಳುಂಟೆಂದು ಸಾಮುದ್ರಿಕ ಶಾಸ್ತ್ರವು ಹೇಳುವಾಗ ಇನ್ನು "ಸಮ್ರಾಡೆಂ"ದೂ "ರಾಜಾಧಿರಾಜಸ್ಸರ್ವೇಷಾಂ" ಎಂದು ಹೇಳಲ್ಪಟ್ಟ ರಾಜಾಧಿರಾಜನಾದ ಸ್ವಾಮಿಗಿರುವ ಆ ಮಹತ್ತಾದ ಪಾದಚಿಹ್ನೆಗಳ ವಿಷಯದಲ್ಲಿ ಹೇಳತಕ್ಕದ್ದೇನಿರುತ್ತದೆ.

"ಶಂಖಚಕ್ರಗದಾ ಪದ್ಮೈರಂಕಿತಂ ಪಾದಪಂಕಜಂ ।
ಶರಚ್ಚಂದ್ರ ಪ್ರತೀಕಾಶ ನಖರಾಜಿ ವಿರಾಜಿತಮ್ ॥
ಸುರಾಸುರೈರ್ವಂದ್ಯ ಮಾನಮೃಷಿಭಿ ರ್ವಂದಿತಂ ಸದಾ ।
ಮೂರ್ಧಾನಂ ಮಾಮಕಂದೇವ ತಾವಕಂ ಮಂಡಯಿಷ್ಯತಿ ॥"

ಎಂಬಲ್ಲಿಯೂ ಈ ಶ್ಲೋಕಾಭಿಪ್ರಾಯವು ವ್ಯಕ್ತವು. ಇದರರ್ಥವೇನೆಂದರೆ ಶಂಖಚಕ್ರಗದಾ ಕಮಲಗಳ ಚಿಹ್ನೆಯಿಂದ ಗುರ್ತಿಸಲ್ಪಟ್ಟ ಮತ್ತು ಶರತ್ಕಾಲದ ಚಂದ್ರನಿಗೆ ಸಮಾನವಾದ ಉಗುರುಗಳ ಕಾಂತಿಯಿಂದ ಪ್ರಕಾಶಿಸುತ್ತಿರುವ ಮತ್ತು ದೇವತೆಗಳಿಂದಲೂ ಮತ್ತು ಅಸುರರಿಂದಲೂ ಸೇವಿಸಲ್ಪಡುವ ಋಷಿಗಳಿಂದ ಸದಾ ಧ್ಯಾನಿಸಲ್ಪಡುವ ನಿನ್ನ ಸಂಬಂಧವಾದ ಪಾದ ಕಮಲವು ಓದೇವನೇ! ನನ್ನ ಶಿರಸ್ಸನ್ನು ಅಲಂಕರಿಸುತ್ತದೆ. ಮತ್ತು **"ಸಂಚಿನ್ತಯೇದ್ಭಗವತಶ್ಚರಣಾರವಿಂದಂ ವಜ್ರಾಂಕುಶ ಧ್ವಜಸರೋರುಹ ಲಾಂಛನಾಢ್ಯಂ"** ಎಂಬಲ್ಲಿಯೂ ಸರ್ವೇಶ್ವರನ ಚರಣಾರವಿಂದಗಳಲ್ಲಿ ಈ ಚಿಹ್ನೆಗಳೇ ಇವೆಎಂದೂ, ಅಂತಹ ಭಗವಂತನ ಚರಣಾರ ವಿಂದವನ್ನು ಚಿಂತಿಸತಕ್ಕದ್ದೆಂದು ಹೇಳಲ್ಪಟ್ಟಿರುತ್ತದೆ. ಹೀಗೆಯೇ ನಾರದೀಯ ಶ್ಲೋಕವು ಉದಾಹರಿಸಲ್ಪಟ್ಟಿರುತ್ತದೆ.

ಭೃಂಗಾರಾಸನ ವಾಜಿ ಕುಂಜರ ರಥೈಃ
ಮಾಲಾಕುಂಡಲ ಚಾಮರಾಂಕುಶಯುವ್ಯೈಃ ಶೈಲೈರ್ಧ್ವಜೈಸ್ತೋಮರೈಃ।
ಮತ್ಸ್ಯೈಸ್ಸ್ವಸ್ತಿ ವೇದಿಕಾ ವ್ಯಜನಿಕೈಶ್ಶಂಖಾತಪತ್ರಾಂಬುಜೈಃ
'ಪಾದೇಪಾಣಿತಲೇ ನರಾನೃಪತಿತಾಂ ಯಾನ್ತಿಸ್ತ್ರಿಯೋ ರಾಜ್ಞತಾಮ್ ॥

ಭೃಂಗಾರ—ಕಲಶ, ಆಸನ—ಆಸನವು ಕುದುರೆ, ಆನೆ, ರಥ, ಶ್ರೀವತ್ಸವೆಂಬ ಮಚ್ಚೆಯು ಧನುಸ್ಸು ಬಾಣಗಳಿಂದಲೂ ಹೂವಿನಹಾರ, ಕುಂಡಲ, ಚಾಮರ ಅಂಕುಶ, ಗೋಧಿ ಇವುಗಳಿಂದಲೂ, ಪರ್ವತ, ಧ್ವಜ ತೋಮರವೆಂದರೆ ಗದಾ ಯುಧಗಳಿಂದಲೂ, ಮೀನು, ಸ್ವಸ್ತಿಕವೆಂದರೆ ಅರಮನೆ ದೇವಾಲಯ, ವೇದಿಕಾ ಎಂದರೆ ಜಗುಲಿ, ವ್ಯಜನಿಕವೆಂದರೆ ಬೀಸಣಿಗೆಯಿಂದಲೂ ಶಂಖ, ಆತಪತ್ರವೆಂದರೆ ಕೊಡೆ, ಕಮಲಪುಷ್ಪ ಇವುಗಳಿಂದಲೂ, ಎಂದರೆ ಈ ಲಾಂಛನೆಗಳಿಂದ ಕಾಲಿನಲ್ಲೂ ಅಂಗೈಯಲ್ಲೂ ಗುರ್ತಿಸಲ್ಪಟ್ಟ ಮನುಷ್ಯರು ರಾಜಪದವಿಯನ್ನು ಹೊಂದುವರು. ಸ್ತ್ರೀಗಳು ಪಟ್ಟಮಹಿಷಿ ಪದವಿಯನ್ನು ಹೊಂದುವರು.

**ಹೇತ್ರಿವಿಕ್ರಮ** ಎಂಬ ಸಂಬೋಧನೆಯಿಂದ ಇವರು ಉತ್ಕೃಷ್ಟರು. ಇವರು ನಿಕೃಷ್ಟರೆಂಬ ವಿಭಾಗವಿಲ್ಲದೆ ಸರ್ವರಿಗೂ ತನ್ನ ಪಾದಾಶ್ರಯಣವು ಸಮಸ್ತಫಲ ವನ್ನು ಕೊಡುತ್ತದೆಂದು ಪ್ರದರ್ಶಿಸಿದ ಮಹತ್ವವು ತೋರುತ್ತದೆ, ಮತ್ತೂ ಅಂತಹ ಸುಸಮಯದಲ್ಲಿ ತಾವು ಜನ್ಮವನ್ನು ಎತ್ತಿ ಅಂತಹ ಫಲವನ್ನು ಪಡೆಯಲಿಲ್ಲವೇ ಎಂಬ ನಿರ್ವೇದವು ತೋರಿಬರುತ್ತದೆ.

**ತ್ವಚ್ಚರಣಾಂಬುಜ ದ್ವಯಮ್** ಎಂಬ ಪ್ರಯೋಗದಿಂದ, ಸ್ವಾಮಿಯ ಆಶ್ರಯದ ದುರ್ಲಭತ್ವವೂ ಆತನ ಪಾದಯುಗ್ಮದ ಆಶ್ರಯದ ಸೌಲಭ್ಯವೂ ಸೂಚಿತವು. "**ಅಪ್ರಾಪ್ಯಃ ಕೇಶವೋ ರಾಜನ್ ಇಂದ್ರಿಯೈ ರಜಿತೈರ್ನರೈಃ**" ಎಂಬಲ್ಲಿ ಇಂದ್ರಿಯಗಳನ್ನು ಜಯಿಸದೇ ಇರುವರಿಂದ ಶ್ರೀ ಕೇಶವನು ಪ್ರಾಪ್ಯ ನಲ್ಲವು, ಸ್ವಾಮಿಪಾದವನ್ನು ಆಶ್ರಯಿಸಿದವರು ಎಂತವರೇ ಆಗಲಿ ಅಂತವರಲ್ಲೂ ವಾತ್ಸಲ್ಯವುಂಟೆಂಬ ಭಾವವು ತೋರಿಬರುತ್ತದೆ. ಇದಕ್ಕೆ ಅಹಲ್ಯಾಪಾವನತ್ವವೇ ನಿದರ್ಶನವು. ಬಲಿಯು ಆಸುರಸ್ವಭಾವನಾಗಿದ್ದರೂ ಸ್ವಾಮಿಪಾದದಿಂದ ರಕ್ಷಿಸಲ್ಪಟ್ಟನು, ಕಾಳಿಯ ಸರ್ಪನೂ ಹಾಗೆಯೇ ಪಾದವಿನ್ಯಾಸದಿಂದ ರಕ್ಷಿಸಲ್ಪಟ್ಟನು. ಮನುಷ್ಯನಲ್ಲಿ ಎಂತಹ ಮಹತ್ತಾದ ದೋಷವೇ ಇರಲಿ **ಚರಣಾಂಬುಜ ದ್ವಯಕ್ಕೆ** ಸರ್ವದೋಷ ನಿವೃತ್ತಿಮೂಲಕ ಪಾವನಮಾಡುವ ಶಕ್ತಿಯುಟೆಂಬ ಭಾವವು ತೋರಿ ಬರುತ್ತದೆ. ಮಹಾಭಾರತದಲ್ಲಿ "**ಯಾವತ್ಸ ಪಾದಪದ್ಮಾಭ್ಯಾಂ ಪಸ್ಪರ್ಶೇಮಾಂ ವಸುಂಧರಾಂ। ತಾವತ್ಪೃಥ್ವೀ ಪರಿಷ್ವಂಗೇ ಸಮರ್ಥೋನಾಭವತ್ಕಲಿಃ ॥**" ಕಲಿದೋಷ ಪ್ರಶಮನ ಮಾಡುವ ಶಕ್ತಿಯು ಚರಣಾಂಬುಜದ್ವಯಕ್ಕೆ ಉಂಟೆಂದು ತೋರಿಬರುತ್ತದೆ. ಆ ಭಗವಂತನು ಎಲ್ಲಿಯವರೆಗೆ ಭೂಮಿಯಾದ ನನ್ನನ್ನು ಪಾದ ಕಮಲ ದ್ವಂದ್ವದಿಂದ ಸ್ಪರ್ಶಿಸಿದನೋ ಅದುವರೆಗೂ ಕಲಿಪುರುಷನು ಭೂಮಿಯನ್ನಾ ಕ್ರಮಿಸಲು ಸಮರ್ಥನಾಗಲಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಅಸ್ತ್ರದಗ್ಧನಾಗಿದ್ದ ಶಿಶುವಾದ ಪರೀಕ್ಷಿದ್ರಾಜನು ಹೇಗೆ ಉಜ್ಜೀವಿಸಲ್ಪಟ್ಟನೋ, ನಿನ್ನ ಪಾದಕಮಲದಿಂದ ಹಾಗೆಯೇ ನಾನುಸಹ ಉಜ್ಜೀವಿಸಲ್ಪಡುವೆನು ಎಂಬ ಭಾವವು ಈ ಪ್ರಯೋಗ ದಿಂದ ತೋರಿಬರುತ್ತದೆ. ಈ ಸಂದರ್ಭದಲ್ಲಿ "**ಯಾವನ್ನ ಚರಣೌಭ್ರಾತುಃ ಪಾರ್ಥಿವವ್ಯಂಜನಾನ್ವಿತೌ। ಶಿರಸಾಧಾರೆಯಿಷ್ಯಾಮಿ ನಮೇಶಾಂತಿರ್ಭವಿಷ್ಯತಿ** (ರಾ. ಅಯೋ. 98-8)ಎಂದು ಹೇಳುವ ಭರತನ ಅಮೋಘವಾದ ವಾಕ್ಯಅನು ಸಂಧೇಯವು. ಹೀಗೆಯೇ ಇನ್ನೂ ಎರಡು ಶ್ಲೋಕಗಳನ್ನುಹೇಳುತ್ತಾನೆ. ಎಲ್ಲಿವರೆಗೆ ನಾನು ಅಣ್ಣನ ರಾಜಾಧಿರಾಜನೆಂದು ಸೂಚಿಸುವ, ವಜ್ರ, ಅಂಕುಶ, ಧ್ವಜ, ಅರ ವಿಂದ, ಸುಧಾ ಕಲಶಾದಿ ಲಾಂಛನಗಳುಳ್ಳಪಾದಕಮಲಗಳನ್ನುಧರಿಸುವದಿಲ್ಲವೋ ಅಲ್ಲಿವರೆಗೂ ನನ್ನ ಮನಸ್ಸಿನ ಖೇದವು ಹೋಗಿ ಶಾಂತಿಯು ನೆಲೆಗೊಳಿಸುವುದಿಲ್ಲವು ಎಂದು ಹೇಳುತ್ತಾನೆ. ರಾಜ್ಯವನ್ನು ಧರಿಸುವ ಕಿರೀಟವು ಶ್ರೀರಾಮನಿಗೆ ತಲೆ ಯಲ್ಲಿರುವುದು ನ್ಯಾಯವು. ನನ್ನ ತಲೆಗೆ ಕಿರೀಟವು ಯಾವುದೆಂದರೆ ಸ್ವಾಮಿಯ ಪಾದವೇ ಎಂಬ ಭಾವವು. ಅಧ್ಯಾತ್ಮಪರವಾಗಿಯೂ ಧ್ವನ್ಯರ್ಥವು ತೋರಿಬರುತ್ತ ದೇನೆಂದರೆ ದಿವ್ಯವೈಕುಂಠದಲ್ಲಿ ಸ್ವಾಮಿಯ ಸಾನ್ನಿಧ್ಯವನ್ನು ಹೊಂದಿ ಆತನ ಪಾದದಲ್ಲಿ ನನ್ನ ತಲೆಯನ್ನಿಡುವತನಕ **ನಮೇಶಾಂತಿರ್ಭವಿಷ್ಯತಿ** ನನಗೆ ಬಂಧ ನಿವೃತ್ತಿರೂಪ ಶಾಂತಿಯುಂಟಾಗುವದಿಲ್ಲವು. ಆತನ ಪಾದವೇ ಸರ್ವವಿಧದಲ್ಲೂ ಉಜ್ಜೀವನೋಪಾಯವು ಎಂಬ ಭಾವವು ತೋರಿಬರುತ್ತದೆ.

ಹಾಗೆಯೇ ಮಾರ್ಕಂಡೇಯರ ಉಕ್ತಿಯೂ ಅನುಸಂಧೇಯವು **ತಸ್ಯ ತಾಮ್ರತಲೌತಾತ ಚರಣಾಸುಪ್ರತಿಷ್ಠಿತಾ | ಸುಜಾತಮೃದುರಕ್ತಾಭಿ ರಂಗುಳೀಭಿರಲಂಕೃತಾ || ಪ್ರಯತ್ನೇನ ಮಯಾ ಮೂರ್ಧ್ನಾ ಗೃಹೀತ್ವಾಹ್ಯಭಿವಂದಿತಾ** ||ಇದು ವನವಾಸಿಗಳಾದ ಯುಧಿಷ್ಠಿರಾದಿಗಳನ್ನು ಕುರಿತು ಮಾರ್ಕಂಡೇಯರು ಹೇಳುವ ವಾಕ್ಯವು ಪ್ರಳಯದಲ್ಲಿ ತಮಗೆ ಸ್ವಾಮಿ ಅನುಗ್ರಹಿಸಿದುದನ್ನು ವಿಸ್ತರಿಸಿ ಹೇಳುವ ಪ್ರಕರಣವು (191-133) ಓ ತಾತ!-ಓ ಅಪ್ಪನೇ! ಯುಧಿಷ್ಠಿರನೇ **ತಸ್ಯ**-ಆಲದೆಲೆಯಲ್ಲಿ ಶಿಶುವಾಗಿ ತೋರಿದ ಪರಮ ಪುರುಷನ, **ತಾಮ್ರತಲೌ**-ಕೆಂಪಗಿರುವ ಅಂಗಾಲು **ಸುಪ್ರತಿಷ್ಠಿತಾ**-ಚೆನ್ನಾಗಿ ಪ್ರತಿಷ್ಠಿತಗಳಾದ **ಸುಜಾತ ಮೃದು ರಕ್ತಾಭಿಃ**-ಸುಂದರವಾಗಿ ಹುಟ್ಟಿರುವ ಮೃದುವಾಗಿ ಕೆಂಪಗಿರುವ **ಅಂಗುಳೀಭಿಃ**—ಕಾಲುಬೆರಳುಗಳಿಂದ ಅಲಂಕರಿಸಲ್ಪಟ್ಟ, **ಚರಣೌ**-ಎರಡು ಪಾದಗಳನ್ನು ಪ್ರಯತ್ನದಿಂದ, **ಮಯಾ**-ನನ್ನಿಂದ **ಮೂರ್ಧ್ನಾಗೃಹೀತ್ವಾ**-ತಲೆಯಿಂದಧರಿಸಿ, **ಅಭಿವಂದಿತಾ**—ಸೇವಿಸಲ್ಪಟ್ಟವು ಎಂಬುದು ಅರ್ಥವು. **ಮದೀಯಂ ಮೂರ್ಧಾನ ಮಲಂಕರಿಷ್ಯತಿ** ಎಂಬುದರಿಂದ ಮುಕ್ತದೆಶೆಯಲ್ಲಿ ತಮಗೆ ಭಗವದನುಗ್ರಹದಿಂದ ಪ್ರಾಪ್ತವಾಗುವ ಅಪ್ರಾಕೃತ ಶರೀರದೊಂದಿಗೆ ನಿನ್ನ ಪಾದಕಮಲದಲ್ಲಿ ಶಿರಸ್ಸನ್ನು ಇಟ್ಟು ನಿನ್ನನ್ನು ಅನುಭವಿಸುವ ಸುಕೃತವು ದಾಸನಾದ ನನಗೆ ಎಂದಿಗೆ ದೊರೆಯುತ್ತದೋ ಎಂದು ಹೇಳಿಕೊಂಡರೆಂದೂ ಅರ್ಥಮಾಡಬಹುದು. ಇದರಿಂದ ಭಗವತ್ಪಾದ ಮೂಲವನ್ನು ಹೋಗಿ ಸೇರುವುದರಲ್ಲಿ ತ್ವರಾತಿಶಯವು ದ್ಯೋತಿತವು. ಇದೇ ಶ್ರೀ ಯಾಮುನಮುನಿಗಳ ಹೃದಯಂಗಮವಾದ ಅರ್ಥವು, ಏಕೆಂದರೆ ಮುಂದೆ ೩೨ ನೆಯ ಶ್ಲೋಕ ಮೊದಲುಗೊಂಡು ೪೬ ನೇ ಶ್ಲೋಕದವರೆಗೆ ಪ್ರಾಪ್ಯನಾದ ಪರವಾಸುದೇವ ದಿವ್ಯಮಂಗಳ ವಿಗ್ರಹರೂಪವನ್ನು ವರ್ಣಿಸುವವರಾಗಿ ಆ ಶ್ಲೋಕದಲ್ಲಿ **ಕದಾಹ ಮೈಕಾನ್ತಿಕ ನಿತ್ಯಕಿಂಕರಃ ಪ್ರಹರ್ಷಯಿಷ್ಯಾಮಿ ಸನಾಥಜೀವಿತಃ** ಯಾವಾಗ ನಿನ್ನ ಸಾನ್ನಿಧ್ಯವನ್ನುಹೊಂದಿ ನಿನಗೆ ನಿತ್ಯಕೈಂಕರ್ಯ ಮಾಡುವ ಸುಕೃತ ದೊರೆಯುತ್ತದೋ ಎಂದು ಹೇಳಿರುತ್ತಾರೆ. **ಕದಾಮೂರ್ಧಾನ ಮಲಂಕರಿಷ್ಯತಿ** ಎಂಬುದರಿಂದ ಇನ್ನೊಂದು ಭಾವವು ತೋರಿಬರುತ್ತದೆ. ಶರಣಾಗತನಾದ ಪ್ರಪನ್ನನಿಗೆ ನಿರ್ಯಾಣಾನಂತರ ಅರ್ಚಿರಾದಿ ಗತಿಯಲ್ಲಿ ವಿರಜಾವಗಾಹನಾನಂತರ ಅಪ್ರಾಕೃತ ಶರೀರವುಂಟಾಗಿ ಅಮಾನವರೆಂಬುವರು ಈತನನ್ನು ಕರೆದುಕೊಂಡು ಹೋಗಿ ಶ್ರಿಯಃಪತಿಯಾದ ಪರವಾಸುದೇವನ ಎದುರಿಗೆ ನಿಲ್ಲಿಸಿ, ಆತನು ತನ್ನ ಶಿರಸ್ಸನ್ನು ನಿತ್ಯಶೇಷಿಗಳ ಪಾದದಲ್ಲಿಡುವ ಹಾಗೆ ಮಾಡುವರೆಂದು ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಎಂದಿಗೆ ಅಂತಹ ಸುಕೃತವು ದೊರೆಯುತ್ತೋ ಎಂದು ಪರಮವಿರಕ್ತಿಯಿಂದ ಹೇಳಿಕೊಂಡಿರುತ್ತಾರೆಂದು ಭಾವಿಸಬಹುದು. **ಶೇಷನಾದ ತಮ್ಮ ಶಿರಸ್ಸ ಶೇಷಿಯ ಪಾದಾರವಿಂದದಲ್ಲಿಟ್ಟು ನಮಸ್ಕರಿಸುವುದೇ ಶಿರಸ್ಸಿಗೆ ಅಲಂಕಾರವೆಂದು ಭಾವಿಸಿರುತ್ತಾರೆ.**

**ವಿರಾಜ ಮಾನೋಜ್ಜ್ವಲ ಪೀತವಾಸಸಂ**
**ಸ್ಮಿತಾತಸೀ ಸೂನಸಮಾಮಲಚ್ಛವಿಂ ।**
**ನಿಮಗ್ನನಾಭಿಂ ತನುಮಧ್ಯಮುನ್ನತಂ**
**ವಿಶಾಲವಕ್ಷಸ್ಥಲ ಶೋಭಿಲಕ್ಷಣಂ ॥ ೩೨ ॥**

---

**ಅವತಾರಿಕೆಯು**—"ನಧರ್ಮನಿಷ್ಠೋಽಸ್ಮಿ" ಎಂಬಲ್ಲಿ ಶರಣಾಗತಿಯನ್ನನುಷ್ಠಿಸಿದುದರ ಫಲವಾಗಿ ತಮಗೆ ಪ್ರಾಪ್ತವಾಗುವ ಪ್ರಾಪ್ಯವಾದ ಶ್ರೀ ಪರವಾಸುದೇವ ಮೂರ್ತಿಯನ್ನು ಶಾಸ್ತ್ರಗಳ ಮೂಲಕವಾಗಿ ತಾವು ಗ್ರಹಿಸಿದ ರೀತ್ಯಾ ಅಥವಾ ತದನುಗುಣವಾಗಿ ತಮ್ಮ ಆಚಾರ್ಯರಿಂದ ಉಪದಿಷ್ಟವಾದುದನ್ನು ಗ್ರಹಿಸಿದ ರೀತ್ಯಾ ಮುಂದೆ ೧೪ ಶ್ಲೋಕಗಳಿಂದ ವರ್ಣಿಸುತ್ತಾರೆ ಇಂತಹ ಪರಿಪೂರ್ಣ ಬ್ರಹ್ಮಾನುಭವರೂಪಾನಂದವನ್ನೂ ಮತ್ತು ನಿತ್ಯಕೈಂಕರ್ಯವನ್ನೂ ಮಾಡುವ ಭಾಗ್ಯವು ಎಂದಿಗೆ ದೊರೆಯುತ್ತದೋ ಎಂದು ತ್ವರಾತಿಶಯವನ್ನು ಪ್ರದರ್ಶಿಸುತ್ತಾರೆ. ಪ್ರಾಪ್ಯಸ್ವರೂಪ ಸ್ವಭಾವಗಳನ್ನು ಮುಖ್ಯವಾಗಿ ವರ್ಣಿಸುತ್ತಾರೆ.

**ಅರ್ಥವು**-ಮೊದಲು ದಿವ್ಯಮಂಗಳ ವಿಗ್ರಹವನ್ನುವರ್ಣಿಸುತ್ತಾರೆ. **ವಿರಾಜಮಾನೋಜ್ಜ್ವಲ ಪೀತವಾಸಸಂ,** ಇವೆಲ್ಲವೂ ಸ್ವಯಂಪ್ರಕಾಶವಾದ ಶುದ್ಧಸತ್ವಮಯವಾದುದರಿಂದ, **ವಿರಾಜಮಾನ**-ಸ್ವತಃ ಪ್ರಕಾಶವಾಗಿ, **ಉಜ್ಜ್ವಲ**-ಥಳಥಳಿಸುವ, **ಪೀತವಾಸಸಂ**—ಪೀತಾಂಬರವನ್ನುಳ್ಳ, **ಸ್ಮಿತಾತಸೀಸೂನಸಮಾಮಲಚ್ಛವಿಂ,** ಸ್ಮಿತ ಅರಳಿದ, **ಅತಸೀಸೂನ**-ಅಗಸೇ ಪುಷ್ಪಕ್ಕೆ **ಸಮ**-ಸಮಾನವಾದ, **ಅಮಲಚ್ಛವಿಂ**—ನಿರ್ಮಲವಾದ ಬೆಳ್ಳಗಿರುವ ದೇಹಕಾಂತಿಯುಳ್ಳ, **ನಿಮಗ್ನನಾಭಿಂ**—ಗಂಭೀರವಾದ ಎಂದರೆ ಆಳವಾದ ನಾಭಿಯನ್ನುಳ್ಳ **ತನುಮಧ್ಯಂ**—ಸೂಕ್ಷ್ಮವಾದ ಸೊಂಟವನ್ನುಳ್ಳ, ಉನ್ನತಂ-ಎತ್ತರವಾಗಿರುವ, **ವಿಶಾಲಿ ವಕ್ಷಸ್ಥಲ ಶೋಭಿ ಲಕ್ಷಣಂ**—ವಿಶಾಲವಾದ ವಕ್ಷಸ್ಥಳದಲ್ಲಿ ಪ್ರಕಾಶಿಸುವ ಶ್ರೀವತ್ಸಚಿಹ್ನೆ ಕೌಸ್ತುಭರತ್ನ ಮೊದಲಾದ ಲಕ್ಷಣಗಳನ್ನುಳ್ಳ 'ಇವೆಲ್ಲಾ ೪೬ನೇ ಶ್ಲೋಕದಲ್ಲಿರುವ **ಭವಂತಂ**—ನಿನ್ನನ್ನು ಎಂಬುದಕ್ಕೆ ವಿಶೇಷಣವು. ಇಂತಹ ನಿನ್ನನ್ನು **ಅಹಂ ನಿತ್ಯ ಕಿಂಕರಃ**—ನಿತ್ಯದಾಸನಾದ ನಾನು ಕೈಂಕರ್ಯಗಳನ್ನೆಸಗಿ **ಕದಾ ಪ್ರಹರ್ಷಯಿಷ್ಯಾಮಿ**—ಯಾವಾಗ ಪ್ರೀತಿಗೊಳಿಸುವೆನೋ? ಅಂತಹ ಸುಕೃತವು ಯಾವಾಗ ದೊರಕುತ್ತದೋ ಎಂದು ಚಾತಕ ಪಕ್ಷಿಯಹಾಗೆ ನಿರೀಕ್ಷಿಸುತ್ತಿದ್ದೇನೆಂದು ತ್ವರಾತಿಶಯವನ್ನು ಪ್ರದರ್ಶಿಸುತ್ತಾರೆ.

**ಉಪಪಾದನೆಯು**—ಸಮಸ್ತ ಕಲ್ಯಾಣ ಗುಣಗಳಿಂದಲೂ ಎರಡು ವಿಧ ವಿಭೂತಿಗಳಿಂದಲೂ ದಿವ್ಯಮಙ್ಗಳ ವಿಗ್ರಹ ಶೋಭೆಯಿಂದಲೂ ಯುಕ್ತನಾದ ಪ್ರಾಪ್ಯವನ್ನು ಎಂದಿಗೆ ಸಂದರ್ಶಿಸಿ ಅನುಭವಿಸುವ ಆನಂದವನ್ನು ಹೊಂದಿ ನಿತ್ಯ ಕೈಂಕರ್ಯವನ್ನೆಸಗುವ ಪರಮ ಸುಕೃತವು ಯಾವಾಗ ಲಭ್ಯವಾದೀತೋ ಎಂದು

ಗಳ **ಶ್ಲೋಕಗಳಿಂದ, ಪರಿಪೂರ್ಣನಾದ** ಪರವಾಸುದೇವನಾದ ದಿವ್ಯ ವೈಕುಂಠ **ಮೂರ್ತಿಯನ್ನು ವರ್ಣಿಸುತ್ತಾರೆ.** ಪ್ರಥಮತಃ ಈ ಶ್ಲೋಕದಿಂದ ದಿವ್ಯಮಂಗಳ ವಿಗ್ರಹದ ಲಾವಣ್ಯವನ್ನು ವರ್ಣಿಸಿ ಆನಂದಿಸುತ್ತಾರೆ. ಮಹಾಭಾರತದಲ್ಲಿ ಸಭಾ ಮಧ್ಯದಲ್ಲಿ ಮಹರ್ಷಿಯಿಂದ ಹೊಗಳಲ್ಪಟ್ಟ ಶ್ರೀ ಕೃಷ್ಣಭಗವಾನರವರ ದಿವ್ಯ ಮಂಗಳ ವಿಗ್ರಹದ ಸಮುದಾಯ ಶೋಭೆಯನ್ನು ಅನುಭವಿಸುತ್ತಾರೆ.

**ಅತಸೀ ಪುಷ್ಪಸಂಕಾಶಃ ಪೀತವಾಸಾ ಜನಾರ್ದನಃ |**
**ವ್ಯಭ್ರಾಜಿತ ಸಭಾಮಧ್ಯೇ ಹೇಮ್ನೀವೋಪಚಿತೋಮಣಿಃ ||**

ಅಗಸೇ ಪುಷ್ಪಕ್ಕೆ ಸಮಾನವಾದ ದೇಹಕಾಂತಿಯುಳ್ಳವನಾಗಿ ಪೀತಾಂಬರ ಧಾರಿಯಾದ ಜನಾರ್ದನನು ಸಭಾಮಧ್ಯದಲ್ಲಿ ಭಂಗಾರದಲ್ಲಿ ಕಟ್ಟಿರುವ ದಿವ್ಯರತ್ನ ದಂತೆ ಶೋಭಾಯಮಾನನಾಗಿದ್ದನು ಎಂಬುದು ಅನುಸಂಧೇಯವು ದಿವ್ಯ ವೈಕುಂಠದಲ್ಲಿ ಎಲ್ಲವೂ ಸ್ವಯಂ ಪ್ರಕಾಶವಾಗಿ ಶೋಭಾಯಮಾನವಾಗಿಯೇ ಇವೆ. ದಿವ್ಯಮಙ್ಗಳ ವಿಗ್ರಹದ ಕಾಂತಿಯೂ, ಸೊಬಗೂ, ಲಾವಣ್ಯವೂ ಮತ್ತು ಪೀತಾಂಬರದ ವಿಶೇಷ ತೇಜಸ್ಸೂ ಎಲ್ಲಾ ಸೇರಿರುವುದರಿಂದ ವಿರಾಜಮಾನತ್ವವೂ, ಉಜ್ವಲತ್ವವೂ, ಭಾಸ್ವರತ್ವವೂ, ದೇಹಕಾನ್ತಿಯು ಎಂಥಾದ್ದೆಂದರೆ "**ಸ್ಮಿತಾತಸೀ ಸೂನಸಮಾಮಲಚ್ಛವಿಂ**" ಎಂದು ಹೇಳಿರುತ್ತಾರೆ ಇದರಿಂದ ರಮಣೀಯ ತ್ವವೂ, ಲಾವಣ್ಯವೂ ಹೇಳಲ್ಪಟ್ಟಿತು. ಅಥವಾ **ಅಮಲಚ್ಛವಿಂ** ಎಂಬುದರಿಂದ, ಆಶ್ರಯಿಸಿ ಧ್ಯಾನಿಸುವವರ ದೋಷವೆಂಬ ಕತ್ತಲೆಯನ್ನು ಪ್ರತಿಭಟಿಸುವ ಕಾನ್ತಿ ಯುಳ್ಳದ್ದೆಂದೂ ಅರ್ಥಮಾಡಬಹುದು.

**ನಿಮಗ್ನನಾಭಿಂ** ಎಂದು ಗಂಭೀರವಾದ ನಾಭಿಯು ಪರಮಪುರುಷ ಲಕ್ಷಣ ವನ್ನೂ ಬೋಧಿಸುವುದಲ್ಲದೆ ಹಿಂದೆ, **ಅಜನಿಷ್ಟಚ ಕಸ್ಯನಾಭೇಃ** ಎಂಬಲ್ಲಿ ಹೇಳ ಲ್ಪಟ್ಟಿರುವುದನ್ನೂ ಸೂಚಿಸುತ್ತದೆ. **ತನುಮಧ್ಯವೂ** ವಿಶಾಲವೃಕ್ಷಸ್ಥಳವೂ ಕೂಡ ಮಹಾಪುರುಷ ಲಕ್ಷಣವನ್ನು ಸೂಚಿಸುತ್ತದೆ. **ಕಸ್ಯೋದರೇ ಹರವಿರಿಂಚಿ** ಎಂದು ಹಿಂದೆ ಹೇಳಲ್ಪಟ್ಟ ಅಂಡಗಳಿಗೆಲ್ಲಾ ಆಶ್ರಯವಾದ ಉದರವುಳ್ಳವನಿಗೆ ಮಧ್ಯವು ಸೂಕ್ಷ್ಮವಾಗಿರುವುದು ಅತ್ಯಾಶ್ಚರ್ಯವೆಂಬ ಭಾವವು ತೋರಿಬರುತ್ತದ, **ವಿಶಾಲ ವಕ್ಷಸ್ಸು** ಶತ್ರುಗಳಿಂದ ಅಪ್ರತಿಹತವಾದ ವೀರ್ಯವನ್ನು ಪ್ರಕಟಿಸುವುದಲ್ಲದೆ **ಲಕ್ಷ್ಮಿಗೂ** ಶ್ರೀವತ್ಸಕಾಸ್ತುಭಾದಿಗಳಿಗೆ ಆಶ್ರಯವಾಗಿರುವ ಭಾವವು ಸೂಚಿತವು. **ಆಂಜನೇಯನನ್ನು** ಕುರಿತು ಸೀತೆಯು ಶ್ರೀರಾಮಚಂದ್ರ ಪ್ರಭುವಿನಲ್ಲಿ ತೋರಿ ಬರುವ ಮಹಾಪುರುಷ ಲಕ್ಷಣಗಳನ್ನು ಕೇಳಿತಿಳಿದ ಹಾಗೆ, ಇಲ್ಲಿಯೂ ಪೀತಾಂ ಬರದ ಸೊಬಗೂ ಪರಮಸೌಂದರ್ಯ ಲಾವಣ್ಯವನ್ನು ಪ್ರಕಟಿಸುವ ದಿವ್ಯಮಙ್ಗಳ **ವಿಗ್ರಹದ ಕಾನ್ತಿಯೂ** ಸೂಕ್ಷ್ಮಮಧ್ಯ ಪ್ರದೇಶವೂ ವಿಶಾಲ ವಕ್ಷಸ್ಸೂ ಇವೆಲ್ಲವೂ **ರಾಜಾಧಿರಾಜನ** ಲಕ್ಷಣಗಳನ್ನು ಪ್ರಕಟಿಸುತ್ತವೆಂದು ಹೇಳಲ್ಪಟ್ಟಿತು

**ಚಕಾಸತಂ ಜ್ಯಾಕಿಣ ಕರ್ಕಶೈ ಶ್ಶುಭೈ**
**ಶ್ಚತುರ್ಭಿ ರಾಜಾನು ವಿಲಂಬಿಭಿ ರ್ಭುಜೈಃ ।**
**ಪ್ರಿಯಾವತಂ ಸೋತ್ಪಲ ಕರ್ಣಭೂಷಣ**
**ಶ್ಲಥಾಲಕಾಬಂಧ ವಿಮರ್ದಶಂಸಿಭಿಃ ॥ ೩೩ ॥**

---

**ಅವತಾರಿಕೆಯು** ಹಿಂದಿನ ಶ್ಲೋಕದಲ್ಲಿ ದಿವ್ಯಮಙ್ಗಳ ವಿಗ್ರಹದ ಸಮು ದಾಯ ಶೋಭೆಯೂ ಭುಜಗಳ ಮಧ್ಯದಲ್ಲಿರುವ ಅವಯವಗಳ ಶೋಭೆಯೂ ವರ್ಣಿಸಲ್ಪಟ್ಟವು. ಈ ಶ್ಲೋಕದಲ್ಲಿ ವೀರಶೃಂಗಾರ ರಸಗಳಿಗೆ ಆಕರವಾದ ಪರಮ ಪುರುಷ ಲಕ್ಷಣವಾದ ಆಜಾನು ಬಾಹುತ್ವವನ್ನೂ ಚತುರ್ಭಜತ್ವವನ್ನೂ ವರ್ಣಿಸು ತ್ತಾರೆ.

**ಅರ್ಥವು ಜ್ಯಾಕಿಣಕಾರ್ಕಶೈಃ**— ಬಿಲ್ಲಿನ ಹೆದೆಯಿಂದ ಜಡ್ಡುಕಟ್ಟಿ ಕಠಿನ ಗಳಾಗಿ ತೋರುವ, **ಶುಭೈಃ**— ಔದಾರ್ಯ, ಸೌಂದರ್ಯ, ವೀರ್ಯ, ಇವುಗಳು ಬಾಹು ಗಳಿಗೆ ಮುಖ್ಯವಾದ ಗುಣಗಳು, ಅವುಗಳನ್ನುಳ್ಳ, **ಪ್ರಿಯಾವತಂಸೋತ್ಪಲಕರ್ಣ ಭೂಷಣ ಶ್ಲಥಾಲಕಬಂಧ ವಿಮರ್ದಶಂಸಿಭಿಃ**, ಇಂತಹ **ಭವಂತಂ**–ನಿನ್ನನ್ನು ನಿತ್ಯಕಿಂಕರನಾದ ನಾನು **ನಿತ್ಯಕಿಂಕರಃ ಕದಾಪ್ರಹರ್ಷಯಿಷ್ಯಾಮಿ** ಎಂದು ಹೇಳುತ್ತಾರೆ. **ಪ್ರಿಯಾ**–ಪ್ರಿಯಳಾದ ತನ್ನ ಪತ್ನಿಯಾದ ಲಕ್ಷ್ಮಿಯ, **ಅವತಂಸ**-- ಆಭರಣವೇನು **ಉತ್ಪಲ**–ಕನ್ನೈದಿಲೇ ಪುಷ್ಪವೇನು, **ಕರ್ಣಭೂಷಣ**— ಓಲಿ ಗಳೇನು, **ಶ್ಲಥ**–ಕೆದರಿಹೋದ, **ಅಲಕ**–ಮುಂಗುರುಳೇನು, **ಆಬಂಧ**–ಸೀರೆಯ ಗಂಟೇನು ಇವುಗಳ **ವಿಮರ್ದ**— ಪದೇಪದೇ ತಗುಲೋಣವನ್ನು, **ಶಂಸಿಭಿಃ**— ಹೇಳುವ ಅಂದರೆ ಪ್ರದರ್ಶಿಸುವ **ಚತುರ್ಭಿಃ**–ನಾಲ್ಕಾದ, **ಆಜಾನುವಿಲಂಬಿಭಿಃ**– ಮೊಳಕಾಲಿನವರೆಗೂ ಲಂಬಿಸಿರುವ (**ಚತುರ್ಭಿಃ**— ನಾಲ್ಕಾದ) ಭುಜೈಃ–ಭುಜ ಗಳಿಂದ, **ಚಕಾಸತಂ** ಪ್ರಕಾಶಿಸುತ್ತಿರುವ ಮುಂದೆ ಇರುವ **ಭವಂತಂ** ಎಂಬುದಕ್ಕೆ ವಿಶೇಷಣವು. ಇಂತಹ ಚತುರ್ಭುಜಗಳಿಂದ ಕಂಗೊಳಿಸುವ ನಿನ್ನನ್ನು **ಕದಾಹಂ ಪ್ರಹರ್ಷಯಿಷ್ಯಾಮಿ**, ಯಾವಾಗ ನಿನ್ನನ್ನು ಸಂತೋಷಗೊಳಿಸುವೆನೋ ಎಂದು ವಿಳಂಬಾಸಹತ್ವವನ್ನು ಪ್ರಕಟಿಸುತ್ತಾರೆ. ಇದು ೪೬ನೆಯ ಶ್ಲೋಕದಲ್ಲಿದೆ ಅಲ್ಲಿವರೆಗೆ ಒಂದೇ ಅನ್ವಯವು.

**ಉಪಪಾದನೆಯು** ವೀರ ಶೃಂಗಾರಗಳಿಗೆ ಆಕರವಾದ ಪರವಾಸುದೇವ ಮೂರ್ತಿಯ ಚತುರ್ಭುಜಗಳನ್ನೂ ಸಾಕ್ಷಾತ್ಕರಿಸಿ ಆನಂದಿಸಿ ವರ್ಣಿಸಿರುತ್ತಾರೆ, ಅವತಾರ ಮುಖ್ಯ ಉದ್ದೇಶ್ಯವು ಶಿಷ್ಟಪರಿಪಾಲನವೇ ಆದರೂ ಅದು ದುಷ್ಟನಿಗ್ರಹ ವಿಲ್ಲದೇ ಸಾಧ್ಯವಿಲ್ಲವಾದುದರಿಂದ ಅದನ್ನು ಸರ್ವೇಶ್ವರನು ನಡೆಸುವನು. ಅಧರ್ಮ ವನ್ನು ಅಡಗಿಸಿ ಧರ್ಮವನ್ನು ತಲೆಯೆತ್ತುವ ಹಾಗೆ ಮಾಡುವುದಕ್ಕಾಗಿ ಪ್ರಾಸಂಗಿಕ ವಾಗಿ ಧರ್ಮಸಂಸ್ಥಾಪನೆಯನ್ನೂ ಉಪದೇಶದ ಮೂಲಕ ನಡೆಸುವನು. ಆದುದ

ರಿಂದ ಶತ್ರುಗಳನ್ನು ಅವತಾರ ಕಾಲಗಳಲ್ಲಿ ಬಾಣಪ್ರಯೋಗದ ಮೂಲಕ ನಿರ್ಮೂಲಮಾಡುವ ಬಾಹುಪರಾಕ್ರಮವುಳ್ಳವನೆಂದು ಕೊಂಡಾಡುತ್ತಾರೆ ಬಾಣ ಪ್ರಯೋಗಮಾಡಿ ಮೂರೂಮುಕ್ಕಾಲು ಗಳಿಗೆಯಲ್ಲಿ ಹದಿನಾಲ್ಕುಸಾವಿರ ರಾಕ್ಷಸ ರನ್ನು ನಿರ್ಮೂಲ ಮಾಡಿದುದು ಗುರುಗಳ ಸ್ಮೃತಿಪಥಕ್ಕೆ ಬಂದಹಾಗೆ ತೋರು ತ್ತದೆ. ಆ ಕಾರಣದಿಂದ ಬಾಣಪ್ರಯೋಗ ಮಾಡಿ ಭುಜವು ಜಿಡ್ಡುಗಟ್ಟಿರುತ್ತ ದೆಂದು **ಜ್ಯಾಕಿಣಕರ್ಕಶೈಃ** ಎಂದು ಹೇಳಿದರು. ಅಲ್ಲಿ **ಚತುರ್ದಶಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಂ । ಏಕಶ್ಚ ರಾಮೋಧರ್ಮಾತ್ಮಾ ಕಥಂಯುದ್ಧಂ ಭವಿಷ್ಯತಿ ॥** ಎಂದು ಶ್ರೀ ಕುಲಶೇಖರಾಳ್ವಾರ್‌ರವರು ಅನುಭವಿಸಿದುದು ಸ್ಮೃತಿ ಪಥಕ್ಕೆ ಬರುತ್ತದೆ. ಶ್ರೀಮದ್ರಾಮಾಯಣದಲ್ಲಿ "**ಚತುರ್ದಶ ಸಹಸ್ರಾಣಿ ರಕ್ಷಸಾಂ ಭೀಮಕರ್ಮಣಾಂ । ಹತಾನ್ಯೇಕೇನ ರಾಮೇಣ ಮಾನುಷೇಣ ಪದಾತಿನಾ** (ಅರಣ್ಯ 26-35) ಎಂದಿರುತ್ತದೆ. ಆದುದರಿಂದಲೇ **ಜ್ಯಾಕಿಣ ಕರ್ಕಶೈ** ಎಂಬ ಪ್ರಯೋಗವು. ಹಾಗೆ ಯುದ್ಧಕ್ಕೆ ಬಂದ ಎಲ್ಲಾ ರಾಕ್ಷಸರೂ ಹತರಾದ ಒಡನೆಯೇ "**ತಂದೃಷ್ಟ್ವಾ ಶತ್ರುಹಂತಾರಂ ಮಹರ್ಷೀಣಾಂ ಸುಖಾವಹಂ । ಬಭೂವ ಹೃಷ್ಟಾವೈದೇಹೀ ಭರ್ತಾರಂ ಪರಿಷಸ್ವಜೇ**" ಇಂತಹ ವೀರ್ಯವನ್ನು ಪ್ರದರ್ಶಿಸಿದ ತನ್ನ ಪತ್ನಿಯನ್ನು ಸಂತೋಷಚಿತ್ತದಿಂದ ಸೀತೆಯು ಗಾಢಾಲಿಂಗನವನ್ನು ಮಾಡಿದಳೆಂಬುವುದನ್ನೂ ಸ್ಮೃತಿಪಥಕ್ಕೆತರುತ್ತದೆ. ದಿವ್ಯವೈಕುಂಠ ನಿತ್ಯ ಮುಕ್ತರಿಗೆ ಸೇವೆಯನ್ನು ಈಯುವಾಗ ಶ್ರೀ ಮಹಾಲಕ್ಷ್ಮಿ ಯನ್ನು ಮೂಲಮಂತ್ರದ ಧ್ಯಾನ ಶ್ಲೋಕದಲ್ಲಿ **ವಾಮಾಂಕೇ ಸ್ಥಿತಯಾ ಪ್ರಸನ್ನ ವದನಂ ಶ್ರೀಕಾಂತೆಯಾಲಿಂಗಿತಂ** ಎಂದು ಹೇಳಿರುವುದನ್ನೂ ಜ್ಞಾಪಕಕ್ಕೆ ತಂದುಕೊಂಡು "**ಪ್ರಿಯಾವತಂ ಸೋತ್ಪಲಕರ್ಣ ಭೂಷಣ—ವಿಮರ್ದಶಂ ಸಿಭಿಃ** ಎಂದು ಪ್ರಯೋಗಿಸಿರುತ್ತಾರೆ. ಆಲಿಂಗನ ಕಾಲಗಳಲ್ಲಿ ಶ್ರೀ ಮಹಾ ಲಕ್ಷ್ಮಿಯ ಆಭರಣಗಳೂ, ಆಕೆಯು ಧರಿಸಿದ ಕನ್ನೈದಿಲೆ ಹೂವು, ಓಲೆಗಳು, ಆಕೆಯ ಮುಂಗುರುಳುಗಳು, ಆಕೆಯು ಉಟ್ಟಿರುವ ಸೀರೆಯಗಂಟು ಇವೆಲ್ಲವೂ ಭುಜಗಳಿಗೆ ತಗಲಿವೆ ಎಂಬುವುದನ್ನು ವರ್ಣಿಸಿರುತ್ತಾರೆ. ಶ್ರೀರಾಮನು ಧೀರೋ ದಾತ್ತನು. ಸೀತೆಯು ಇಂಥವನ ವೀರಪತ್ನಿಯು ಆದುದರಿಂದ ಆಂಜನೇಯ ನೊಂದಿಗೆ ಲಂಕೆಯಿಂದ ಶ್ರೀರಾಮನಲ್ಲಿಗೆ ಹೋಗಲು ಸಮ್ಮತಿಸದೆ ಹೇಳುತ್ತಾ ಳೇನೆಂದರೆ "**ರಾಘವಸ್ಯ ಯಶೋಹೀಯೇತ್**" ಈ ಲಂಕೆಯನ್ನೆಲ್ಲಾ ಉರಾ ಕ್ಷಸವನ್ನಾಗಿ ಶ್ರೀರಾಮನು ಮಾಡದಿದ್ದರೆ ಆತನ ಯಶಸ್ಸಿಗೆ ಕುಂದಕವು. ಆದುದರಿಂದ "**ಶರೈಸ್ತುಸಂಕುಲಾಂ ಕೃತ್ವಾಲಂಕಾಂಪರಬಲಾರ್ದನಃ । ಮಾಂನಯೇದ್ಯದಿಕಾಕುತ್ಸ್ಥಃ ತತ್ತಸ್ಯ ಸದ್ವಶಂಭವೇತ್**" ಲಂಕೆಯನ್ನು ಬಾಣಗಳಿಂದ ಆಕುಲಿತವಾಗುವ ಹಾಗೆ ಮಾಡಿ ಶತ್ರುನಿರಸನಮಾಡಿ ನನ್ನನ್ನು ಅಯೋಧ್ಯೆಗೆ ಕರೆದುಕೊಂಡು ಹೋದರೆ ಆವಾಗ ಆ ಧೀರೋತ್ತಮನಿಗೆ ಯೋಗ್ಯ ವಾದುದು ಎಂದು ಹೇಳಿ ಕಳುಹಿಸಿರುತ್ತಾಳೆ. ೧೪ ಸಾವಿರ ರಾಕ್ಷಸರನ್ನೆಲ್ಲಾ

ಏಕಾಕಿಯಾಗಿ ಧ್ವಂಸಮಾಡಿದ ವೀರನಾದುದರಿಂದಲೇ ಆಕೆಯು ಧೀರೋದಾತ್ತನಾದ ತನ್ನ ಪತಿಯನ್ನು ಯುದ್ಧಾನಂತರ ಗಾಡಾಲಿಂಗನ ಆಲಿಂಗಿಸಿದುದೂ ಆತನ ವೀರ್ಯವನ್ನು ಪ್ರದರ್ಶಿಸುತ್ತದೆ. ಹೀಗೆ ವೀರ್ಯವನ್ನು ಉಪಪಾದಿಸಿದುದು ಉಪಲಕ್ಷಣವಾಗಿ ಸರ್ವೇಶ್ವರನು ಷಾಡ್ಗುಣ್ಯ ಪರಿಪೂರ್ಣನೆಂಬುದನ್ನು ತಿಳಿಸುತ್ತದೆ.

ವೈಕುಂಠ ಮೂರ್ತಿಯ ಭುಜಗಳು ಮಂಗಳಕರವಾದವೆಂದು **ಶುಭೈಃ** ಎಂಬುದರಿಂದ ಹೇಳಿರುತ್ತಾರೆ. ಆಶ್ರಿತನ ವಿಷಯದಲ್ಲಿ ಔದಾರ್ಯವೂ, ಆತನ ಶತ್ರುವನ್ನು ನಿರಸನ ಮಾಡುವುದರಲ್ಲಿ ವೀರ್ಯವೂ, ಆಜಾನುಬಾಹುಗಳಿರುವುದರಿಂದ ಸೌಂದರ್ಯವೂ, ಇವುಗಳೆಲ್ಲಾ ಇರುವುದರಿಂದ ಶುಭವಾದವುಗಳು. ಆಶ್ರಿತರನ್ನು ಉದ್ಧಾರಮಾಡುವೆನೆಂಬ ಕಂಕಣವನ್ನು ಧರಿಸಿರುವುದರಿಂದಲೂ, ಶುಭಗಳು.

ವಿಶ್ವರೂಪ ಪ್ರದರ್ಶನಕಾಲದಲ್ಲಿ **"ಸಹಸ್ರಬಾಹು"** ವಾಗಿದ್ದರೂ ಪರರೂಪದಲ್ಲಿ ನಿತ್ಯ ಮುಕ್ತರುಗಳಿಂದ ಸೇವಿತನಾಗಿರುವಾಗ **ಚತುರ್ಭುಜತ್ವ** ವೆಂಬುದು ಶಾಸ್ತ್ರಸಿದ್ಧವೆಂದು ತಿಳಿಸುವುದಕ್ಕಾಗಿ **ಚತುರ್ಭಿರಾಜಾನುವಿಲಂಬಿಭಿರ್ಭುಜೈಃ** ಎಂದು ಪ್ರಯೋಗವು. ಇಂತಹ ಪರರೂಪವನ್ನೇ ದಯಮಾಡಿ **ತೋರಿಸೆಂದು** ಅರ್ಜುನನು ವಿಶ್ವರೂಪಧಾರಿಯಾನ ಶ್ರೀ ಮಹಾವಿಷ್ಣುವನ್ನು ಪ್ರಾರ್ಥಿಸಿರುತ್ತಾನೆ. **"ತದೇವಮೇ ದರ್ಶಯ ದೇವ ರೂಪಂ ಪ್ರಸೀದದೇವೇಶ ಜಗನ್ನಿವಾಸ"** ಆ **ತದೇವ** ಮಹಾ ಪ್ರಸಿದ್ಧವಾದ ಪರರೂಪವನ್ನು **ದರ್ಶಯ ಪ್ರಸೀದ ತೋರಿಸು** ಪ್ರಸನ್ನನಾಗು ಎಂದು ಬೇಡಿರುತ್ತಾನೆ. ಅದು ಎಂಥಾದ್ದೆಂದರೆ **"ಕಿರೀಟಿನಂಗದಿನಂ ಚಕ್ರಹಸ್ತಂ ಇಚ್ಛಾಮಿ ತ್ವಾಂದ್ರಷ್ಟು ಮಹಂತಥೈವ। ತೇನೈವರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವವಿಶ್ವ ಮೂರ್ತೇ!!"** ಓ ಸಹಸ್ರಬಾಹುವಿನಿಂದ ಕೂಡಿದ ಓ ವಿಶ್ವರೂಪನೇ, ಈ ರೂಪವನ್ನು **ನೋಡಬೇಕೆಂಬ** ಇಚ್ಛೆಯುಂಟು. ವಿಶ್ವರೂಪವನ್ನು ತೋರಿಸಿದ ಹಾಗೆಯೇ ನಾಲ್ಕು ಬಾಹುಗಳಿಂದೊಪ್ಪುವ ಆ ಪರರೂಪವನ್ನು ಪ್ರದರ್ಶಿಸೆಂದು ಬೇಡುತ್ತಾನೆ.

ಹಾಗೆಯೇ **ವಿಷ್ವಕ್ಸೇನಸಂಹಿತೆಯಲ್ಲೂ** ಪರರೂಪವು **ವರ್ಣಿಸಲ್ಪಟ್ಟಿರು**ತ್ತದೆ. ಹೇಗೆಂದರೆ,

**ವೈಕುಂಠೇ ತುಪರೇ ಲೋಕೇ ಶ್ರಿಯಾಸಾರ್ಧಂ ಜಗತ್ಪತಿಃ।**
**ಉಭಾಭ್ಯಾಂ ಭೂಮಿನೀಳಾಭ್ಯಾಂ ಸೇವಿತಃ ಪರಮೇಶ್ವರಃ।**
**ಮಹಾಯೋಗೀ ಜಗದ್ಧಾತಾ ದಿವ್ಯಸಿಂಹಾಸನೋಪರಿ।**
**ದಿವ್ಯಸಂಸ್ತರಣೋಪೇತೇ ಶೇಷಾಹಿ ಫಣಮಂಡಿತೇ।**
**ಪಂಚೋಪ ನಿಷದಾಮ್ನಾತ ದಿವ್ಯಮಂಗಳ ವಿಗ್ರಹಃ।**
**ಅಪ್ರಾಕೃತ ತನುರ್ದೇವೋ ನಿತ್ಯಾಕೃತಿಧರೋಯುವಾ।**
**ನಿತ್ಯಾನ್ವಿತೋಜಗದ್ಧಾತಾ ನಿತ್ಯೈರ್ಮುಕ್ತೈಶ್ಚಸೇವಿತಃ।**

ಬದ್ಧಾಂಜಲಿಪುಟೈರ್ಹೃಷ್ಟೈಃ ನಿರ್ಮಲೈರ್ನಿರುಪದ್ರವೈಃ ।
ಚತುರ್ಭುಜ ಶ್ಯಾಮಲಾಂಗಃ ಶ್ರೀಭೂಭ್ಯಾಂಸಹ ನೀಳಯಾ ।
ವಿಮಲೈರ್ಭೂಷಣೈಃ ನಿತ್ಯೈಃ ಭೂಷಿತೋ ನಿತ್ಯವಿಗ್ರಹಃ ।
ಪಂಚಾಯುಧೈಸ್ಸೇವ್ಯಮಾನಶ್ಶಂಖಚಕ್ರಧರೋಹರಿಃ ।
ಸಹಸ್ರಸ್ಥೂಣ ಸಂಯುಕ್ತೇ ಮಂಟಪೇ ಪರಮೇಶ್ವರಃ ।
ವಿನ್ಯಸ್ಯವಾಮಕಂ ಬಾಹು ಮಾಸನೇ ವಾಮಪಾರ್ಶ್ವಕೇ ।
ದಕ್ಷಿಣ ಜಾನುಕೇನ್ಯಸ್ತಂ ಲಂಬಯನ್ ಜಗತಾಂಪತಿಃ ।

ಇದರ ತಾತ್ಪರ್ಯವೇನೆಂದರೆ:—ಆದಿವ್ಯ ವೈಕುಂಠವೆಂಬ ಶ್ರೇಷ್ಠವಾದ ಲೋಕದಲ್ಲಿ ಲೋಕಕ್ಕೆಲ್ಲಾ ಸ್ವಾಮಿಯಾದ ಸರ್ವನಿಯಾಮಕನಾಗಿರುವವನು ಭೂಮಿನೀಳಾ ದೇವಿಗಳಿಂದ ಸೇವಿತನಾಗಿದ್ದಾನೆ. ಮಹತ್ತಾದ ಉಭಯ ವಿಭೂತಿ ಕಲ್ಯಾಣ ಗುಣಗಳಿಂದ ಯುಕ್ತನಾಗಿ ಸರ್ವಜಗತ್ತಿಗೂ ಸೃಷ್ಟಿಕರ್ತನಾದವನು ದಿವ್ಯಸಿಂಹಾಸನದ ಮೇಲೆ ಬಿಜಮಾಡಿರುತ್ತಾನೆ. ಆ ಸಿಂಹಾಸನವು ದಿವ್ಯಹಾಸಿಗೆಯಿಂದ ಕೂಡಿದುದಾಗಿ ಶೇಷನೆಂಬ ಹಾವಿನ ಹೆಡೆಗಳಿಂದ ಅಲಂಕೃತವಾದುದು. ಅತನ ದಿವ್ಯಮಂಗಳ ವಿಗ್ರಹವು ಪಂಚೋಪನಿಷನ್ಮಂತ್ರ ರೂಪವಾದುದು. ಹೇಯವಾದ ಪ್ರಕೃತಿ ಸಂಬಂಧವಿಲ್ಲದುದು ಯಾವಾಗಲೂ ನಿತ್ಯವಾಗಿರುವ ಶರೀರವನ್ನು ಹೊಂದಿ ಯವ್ವನಸ್ಥನ ಹಾಗೆ ತೋರುವಂತಾದ್ದು. ಬದ್ಧಾಂಜಲಿ ಪುಟರಾಗಿರುವ ಮತ್ತು ಮಹತ್ತಾದ ಆನಂದವನ್ನು ಹೊಂದಿರುವ ನಿತ್ಯಮುಕ್ತರುಗಳಿಂದ ಸೇವಿಸಲ್ಪಟ್ಟವನು, ನಾಲ್ಕು ಭುಜಗಳನ್ನುಳ್ಳವನು, ಶ್ಯಾಮಲವಾದ ಅಂಗಗಳುಳ್ಳವನು, ಶಂಖ ಚಕ್ರಗಳನ್ನು ಧರಿಸಿದವನಾಗಿ ಶ್ರೀಹರಿಯು ಸಾವಿರ ಕಂಭಗಳಿಂದ ಕೂಡಿದ ಮಣಿ ಮಂಟಪದಲ್ಲಿ ಬಿಜಮಾಡಿಸಿದ್ದಾನೆ, ಎಡತೋಳನ್ನುಎಡಗಡೆ ಇರುವ ಆಸನದಲ್ಲೂ ಆಜಾನುವಾಗಿರುವ ಬಲತೋಳನ್ನು ಬಲಗಾಲಿನ ಮೊಳಕಾಲಿನ ಮೇಲೆ ಇಟ್ಟು ಕ್ಕೊಂಡು ಹೀಗೆ ಸೇವೆಯನ್ನೀಯುತ್ತಾ ಇದ್ದಾನೆಂದು ಹೇಳಲ್ಪಟ್ಟಿರುತ್ತದೆ.

ಹೀಗೆ ಪ್ರತಿದಿನವೂ ವೈಕುಂಠಪತಿಯನ್ನು ಪ್ರಪನ್ನನು ಧ್ಯಾನಿಸತಕ್ಕದ್ದೆಂದು ಶ್ರೀ ಯತಿವರ್ಯರು ತಾವು ಬರೆದಿರುವ ನಿತ್ಯವೆಂಬ ಗ್ರಂಥದಲ್ಲಿ ಅಪ್ಪಣೆ ಕೊಡಿಸಿರುತ್ತಾರೆ.

ದೇವೋ ವೈಕುಂಠನಾಥಸ್ತು ಅನಂತಾಸನ ಸಂಸ್ಥಿತಃ ।
ಸೇವ್ಯಃ ಶ್ರೀಭೂಮಿನೀಳಾಭಿ ಪ್ರಾದುರ್ಭಾವೈಸ್ತುಚಾಖಿಲೈಃ ।
ಶಂಖ ಚಕ್ರಧರೋ ನಿತ್ಯಂ ಜಾನುನ್ಯಸ್ತೈಕ ಹಸ್ತವಾನ್ ।
ಅಭಯಪ್ರದ ಹಸ್ತಶ್ಚ ನೀಲಜೀಮೂತ ಸನ್ನಿಭಃ ।
ಧ್ಯಾತವ್ಯೋ ನಿತ್ಯಲೋಕಸ್ಥೋ ಭುಕ್ತಿಮುಕ್ತಿ ಫಲಪ್ರದಃ ।

ಎಂದು ಬಲಪೌಷ್ಕರದಲ್ಲಿ ಹೇಳಿರುವುದು. ಸುಲಭವಾಗಿರುವುದರಿಂದ ಅರ್ಥವು ವ್ಯಕ್ತವು. ಇಲ್ಲಿ **ಅಭಯಪ್ರದ** ಹಸ್ತವನ್ನು ವರ್ಣಿಸಿರುತ್ತಾರೆ.

ಕೆಲವರು "**ಮುಖಂ ಕಿಮಸ್ಯ ಕೌಬಾಹೂ**" ಎಂದೂ "**ಬಾಹೂರಾಜನ್ಯಃ ಕೃತಃ**" ಎಂದು ಪುರುಷ ಸೂಕ್ತದಲ್ಲಿ ಹೇಳಿರುವುದರಿಂದಲೂ ಐತರೀಯದಲ್ಲಿ ದ್ವಿಭುಜವನ್ನೇ ಹೇಳಿರುವುದರಿಂದಲೂ ಪರರೂಪದಲ್ಲಿ ಎರಡು ಬಾಹುಗಳನ್ನು ಹೊಂದಿರುವನೆಂದು ಹೇಳುವರು. ಅವುಗಳು ಪರರೂಪ ವರ್ಣನೆಯಲ್ಲವಾದುದ ರಿಂದ ಇದು ಸರಿಯಲ್ಲವೆಂದು ಶ್ರೀ ದೇಶಿಕರವರು ನಿರಾಕರಿಸಿರುತ್ತಾರೆ. ಅಂತಹ ಪ್ರಮಾಣಗಳಾದ ರಹಸ್ಯಾಮ್ನಾಯ, ಪೌಷ್ಕರ, ಭಾರದ್ವಾಜ, ಸಾಂಕರ್ಷಣಾದಿ ವಾಕ್ಯಗಳೆಲ್ಲವೂ ಸರ್ವೇಶ್ವರನಿಗೆ ಅಂತಹ ರೂಪಸದ್ಭಾವಗಳುಂಟೆಂದು ಹೇಳುತ್ತವೇ ವಿನಾ ಪರರೂಪದ ವರ್ಣನೆಗಳಲ್ಲವು.

ಆನಂದಸಂಹಿತೆಯಲ್ಲಿ "**ಸ್ಥೂಲ ಮಷ್ಟಭುಜಂ ಪ್ರೋಕ್ತಂ ಸೂಕ್ಷ್ಮಂ ಚೈವಚತುರ್ಭುಜಂ ಪರಂತು ದ್ವಿಭುಜಂಪ್ರೋಕ್ತ ತಸ್ಮಾದೇತತ್ರಯಂ ಯಜೇತ್**" ಹೇಳಿರುವುದು, ಧ್ಯಾನಕ್ಕೆ ಇಚ್ಛಾಗೃಹೀತವಾದ ದಿವ್ಯಮಙ್ಗಳ ವಿಗ್ರಹವು, ಎಂಟು ಭುಜ, ನಾಲ್ಕುಭುಜ, ದ್ವಿಭುಜಗಳುಳ್ಳದ್ದಾಗಿರಬಹುದಾದ್ದ ರಿಂದ ವಿರೋಧವೇನೂ ಇಲ್ಲವು. ನೃಸಿಂಹ, ಕೃಷ್ಣಾದ್ಯವತಾರಗಳಿಂದ ಒಂದೊಂ ದರಲ್ಲೇ ಸಮಯಾನುಗುಣವಾಗಿ ದ್ವಿಭುಜವೂ, ಚತುರ್ಭುಜವೂ ಇತ್ತೆಂಬುದೂ ವ್ಯಕ್ತವು. ಶ್ರೀಕೃಷ್ಣಾವತಾರದಲ್ಲಿ ಮುಖ್ಯೋದ್ದೇಶವೇ ಪ್ರಾಕೃತ ಜನರಿಗೆಲ್ಲಾ ದ್ವಿಭುಜಯುಕ್ತ ಸಾಧಾರಣ ಮನುಷ್ಯನ ಹಾಗೆ ಸೇವೆಯು" "**ಮಾನುಷೀಂ ತನು ಮಾಶ್ರಿತಂ**" "**ಪರಂಭಾವಮಜಾನಂತಃ**" ಎಂದು ಅವರೇ ಹೇಳಿಕೊಂಡಿರುತ್ತಾರೆ. ಭಾಗವತೋತ್ತಮರಿಗೂ, ಋಷಿಗಳೇ ಗೋಪಿಕಾಸ್ತ್ರೀಯರಾಗಿ ಜನಿಸಿದವರಿಗೂ ತನ್ನ ಚತುರ್ಭುಜತ್ವದಿಂದ ಸೇವೆಯನ್ನು ಕೊಟ್ಟಿರುತ್ತಾರೆ. ಪರರೂಪವು ಚತುರ್ಭುಜಗಳಿಂದ ಕೂಡಿದ ಶಾಶ್ವತವಾದ ರೂಪವೆಂಬುದು ಸಿದ್ಧವು. ಅರ್ಜು ನನು ಪರರೂಪ ಸೇವೆಯನ್ನು ಕೊಡು ಎಂದು ಪ್ರಾರ್ಥಿಸುವಾಗ, "**ಕಿರೀಟಿ ನಂಗದಿನಂ ಚಕ್ರಹಸ್ತಂ ಇಚ್ಛಾಮಿತ್ವಾಂದ್ರಷ್ಟುಮಹಂ ತಥೈವ। ತೇನೈವ ರೂಪೇಣ ಚತುರ್ಭುಜೇನ ಸಹಸ್ರ ಬಾಹೋ ಭವವಿಶ್ವಮೂರ್ತೇ।** (ಗೀ-೧೧) ಚತುರ್ಭುಜವುಳ್ಳದ್ದೆಂದು ಹೇಳಿರುತ್ತಾನೆ.

ಪರರೂಪವು ಇಂತಹ ಪ್ರಪನ್ನರ ಶತ್ರುಗಳನ್ನು ಧ್ವಂಸಮಾಡುವ ವೀರ್ಯ ವುಳ್ಳದ್ದಾಗಿಯೂ ಲಕ್ಷ್ಮಿಯನ್ನು ಆಲಿಂಗಿಸಲು ಯೋಗ್ಯವಾದ ಸೌಂದರ್ಯವುಳ್ಳ ದ್ದಾಗಿಯೂ ಲಾವಣ್ಯಯುಕ್ತವಾಗಿಯೂ ಆಜಾನುವಿಳಂಬವುಳ್ಳದ್ದಾಗಿಯೂ ಇರುವ ಚತುರ್ಭುಜಗಳಿಂದ ಕೂಡಿರುವನೆಂದು ಹೇಳಲ್ಪಟ್ಟಿತು.

**ಉದಗ್ರಪೀನಾಂಸವಿಲಂಬಿ ಕುಂಡಲಾ**
**ಲಕಾವಲೀ ಬಂಧುರಕಂಬು ಕಂಧರಂ ।**
**ಮುಖಶ್ರಿಯಾ ನ್ಯ ಕೃತ ಪೂರ್ಣನಿರ್ಮಲಾ**
**ಮೃತಾಂಶು ಬಿಂಬಾಂಬುರುಹೋಜ್ಜ್ವಲಶ್ರಿಯಂ  ॥ ೩೪ ॥**

---

ಶ್ರೀ ಸಾತ್ವತದಲ್ಲಿ "**ವರದಾಭಯದೇನೈವ ಶಂಖ ಚಕ್ರಾಂತಿತೇನ ಚ ತ್ರೈಲೋಕ್ಯೋದ್ಧೃತಿ ದಕ್ಷೇಣ ಯುಕ್ತಃ ಪಾಣಿದ್ವಯೇನಚ**-ಎಂದು ಹೇಳಿರುವುದು ದಿವ್ಯವೈಕುಂಠ ರೂಪ ವಿಷಯವಲ್ಲವು. ಹೃದ್ಯಾಗ ವಿಶೇಷವನ್ನು ಕುರಿತು ಹೇಳುವ ಸಂದರ್ಭವು.

ಹಾಗೆಯೇ ಇನ್ನೂ ಕೆಲವುಕಡೆ ದ್ವಿಭುಜತ್ವವು ಹೇಳಲ್ಪಟ್ಟಿರುತ್ತದೆ. ಅವೆಲ್ಲಾ ಶ್ರೀ ವೈಕುಂಠಮೂರ್ತಿಯ ರೂಪವರ್ಣನೆಯಲ್ಲವು.

ವೈಕುಂಠರೂಪವರ್ಣನೆಯು ಪಾದ್ಮೋತ್ತರದಲ್ಲಿ "**ಸಿಂಹಸ್ಕಂಧ ನಿಭೈಃ ಪ್ರೋಚ್ಚೈಃ ಪೀನೈರಂಸೈರ್ವಿಶೋಭಿತಃ । ಪೀನವೃತ್ತಾಯತ ಭುಜೈಶ್ಚತುರ್ಭಿರುಪಶೋಭಿತಃ**" ಎಂಬುದಾಗಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಮೂಲ ಮಂತ್ರದ ಧ್ಯಾನಶ್ಲೋಕ ವರ್ಣನೆಯಲ್ಲೂ ಚತುರ್ಭುಜತ್ವವು ವ್ಯಕ್ತವು. ಅಲ್ಲಿ "**ಜಾನುನ್ಯಾಧಾಯ ಸವ್ಯೇತರಮಿತರಭುಜಂ ನಾಗಭೋಗೇನಿಧಾಯ । ಪಶ್ಚಾದ್ಬಾಹುದ್ವಯೇನ ಪ್ರತಿಭಟಶಮನೇಧಾರಯನ್ ಶಂಖಚಕ್ರೇ**" ಬಲ ಮೊಣಕಾಲಿನ ಮೇಲೆ ಮುಂದಿನ ಬಲಹಸ್ತವನ್ನೂ ಎಡಗೈಯ್ಯನ್ನು ಆದಿಶೇಷನ ಮೇಲಿಟ್ಟು, ಹಿಂದಿನ ಶತ್ರುನಾಶಕಗಳಾದ ಶಂಖಚಕ್ರಗಳನ್ನು ಹಿಂದಿನ ಎರಡು ಕೈಗಳಲ್ಲೂ ಹಿಡಿದು ಎಂದು ವರ್ಣಿಸಲ್ಪಟ್ಟಿರುತ್ತದೆ, ಆದುದರಿಂದ ಪರರೂಪವು ಚತುರ್ಭುಜಯುಕ್ತವು. ಶ್ರೀ ಭಾಷ್ಯಕಾರರೂ ಗೀ-೧೧-೫೦ನೆಯ ಶ್ಲೋಕದಲ್ಲಿ, "**ಸ್ವಕಂ ರೂಪಂದರ್ಶಯಾಮಾಸಭೂಯಃ**" ಎಂಬುದಕ್ಕೆ "**ಸ್ವಕೀಯಮೇವ ಚತುರ್ಭುಜಂ ರೂಪಂದರ್ಶಯಾಮಾಸ**" ಎಂದೂ "**ಚತುರ್ಭುಜತ್ವಮೇವ ಸ್ವಕೀಯಂ ರೂಪಂ**" ಎಂದೂ ಪರರೂಪವನ್ನು ವರ್ಣಿಸಿರುತ್ತಾರೆ.

ಅವತಾರಿಕೆಯು ಹಿಂದಿನ ಶ್ಲೋಕಗಳಲ್ಲಿ ಪೀತಾಂಬರ ಮೊದಲು ಮಾಡಿಕೊಂಡು ಆರೋಹಣ ಕ್ರಮದಿಂದ ಸ್ವಾಮಿಯ ಪರರೂಪದ ಚತುರ್ಭುಜತ್ವವನ್ನು ವರ್ಣಿಸಿದರು. ಈ ಶ್ಲೋಕದಲ್ಲಿ ದಿವ್ಯವೈಕುಂಠಮೂರ್ತಿಯ ಕಂಠ ಮತ್ತು ಮುಖಗಳ ಶೋಭೆಯನ್ನು ಶಾಸ್ತ್ರದಲ್ಲಿ ಉಪಪಾದಿತವಾದುದನ್ನು ವರ್ಣಿಸುತ್ತಾರೆ.

**ಅರ್ಥವು** ಪೂರ್ವಾರ್ಧವೆಲ್ಲಾ ಒಂದೇ ಸಮಾಸಪದವು. **ಉದಗ್ರ**-ಉನ್ನತವಾದ, **ಪೀನ**-ಸ್ಥೂಲವಾದ. ಕೃಶವಲ್ಲದ, **ಅಂಸ**-ಭುಜಶಿರಸ್ಸಿನಲ್ಲಿ,

**ವಿಲಂಬಿ**-ಜೋಲಾಡುತ್ತಿರುವ. **ಕುಂಡಲ**-ಕಿವಿಯ ಆಭರಣವೇನು, **ಅಲಕಾವಲೀ**-ಮುಂಗುರುಳುಗಳ ಸಮೂಹವೇನು, ಇವುಗಳಿಂದ **ಬಂಧುರ**-ಮನೋಹರವಾದ, **ಕಂಬು**-ಶಂಖದ ಹಾಗಿರುವ, **ಕಂಧರಂ**-ಕುತ್ತಿಗೆಯುಳ್ಳ (ಇದು **ಭವಂತಂ**-ಎಂಬುದಕ್ಕೆ ವಿಶೇಷಣವು. ಸ್ವಾಮಿಯು ಇನ್ನು ಎಂತವನೆಂದರೆ **ಮುಖಶ್ರಿಯಾ**-ಮುಖದ ಕಾಂತಿಯಿಂದ **ನ್ಯಕ್ಕೃತಪೂರ್ಣ-ಶ್ರಿಯಾನ್ಯಕ್ಕೃತ**-ತಿರಸ್ಕರಿಸಲ್ಪಟ್ಟ **ಪೂರ್ಣ**—ಪೂರ್ಣಿಮೆಯಲ್ಲಿ ಸಂಪೂರ್ಣವಾಗಿ ಗುಂಡಾಗಿರುವ **ನಿರ್ಮಲ**-ಸಾಧ್ಯವಾದರೆ ಕಳಂಕರಹಿತನಾಗಿರುವ, **ಅಮೃತಾಂಶುಬಿಂಬ**-ಚಂದ್ರಬಿಂಬ ಮತ್ತು **ಅಂಬುರುಹ**-ಕಮಲಗಳ, **ಉಜ್ವಲ**-ತೇಜೋರೂಪವಾದ, **ಶ್ರಿಯಂ**--ಕಾಂತಿಯುಳ್ಳ (**ಭವಂತಂಕದಾ ಪ್ರಹರ್ಷಯಿಷ್ಯಾಮಿ**) ಎಂದು ೪೬ನೆಯ ಶ್ಲೋಕದೊಂದಿಗೆ ಅನ್ವಯವು.

**ಉಪಪಾದನೆಯು**—ವೈಕುಂಠನಾಥನ ಮುಖಲಾವಣ್ಯವನ್ನು ಸ್ಮರಿಸಿ ಅನುಭವಿಸುತ್ತಾರೆ. ಕಿವಿಯ ಕುಂಡಲಗಳು ಬಂದು ಸ್ವಾಮಿಯ ಉನ್ನತ ಭುಜ ಶಿರಸ್ಸುಗಳ ಮೇಲೆ ನೆಲಸಿವೆಯೆಂದು ಹೇಳುತ್ತಾರೆ. ಕುತ್ತಿಗೆಯಲ್ಲಿ ಸುಂದರಗಳಾಗಿ, ಮನೋಹರಗಳಾದ ಮೂರು ರೇಖೆಗಳಿಂದ ಕೂಡಿ ಶಂಖದ ಹಾಗಿರುವುದರಿಂದ, **ಕಂಬುಗ್ರೀವ ಕಂಬು ಕಂಧರ** ವೆಂಬ ಪ್ರಯೋಗವುಂಟು. ಹಾಗೆಯೇ ಇಲ್ಲಿಯೂ ಪ್ರಯೋಗವು. ಸ್ವಾಮಿಯ ಮುಖ ಕಾನ್ತಿಯಿಂದ ಕುಣ್ಡಲ ಕಾನ್ತಿಯು ಅಲಕಾವಳಿ ಕಾನ್ತಿಯೂ ಪರಮಲಾವಣ್ಯದಿಂದ ಸೇರಿ ಮನೋಹರವಾಗಿದೆ ಎಂಬ ಭಾವವು ತೋರಿಬರುತ್ತದೆ. ಸ್ವಾಮಿಯ ಮುಖಕಾನ್ತಿಗೆ ಯಾವ ಉಪಮೆಯು ಸರಿಹೋಗುವುದಿಲ್ಲವಾದುದರಿಂದ ಅದನ್ನೇ ವ್ಯಕ್ತಪಡಿಸುತ್ತಾರೆ. ಸಾಧಾರಣವಾಗಿ ಈ ಲೋಕದ ಲಾವಣ್ಯಯುಕ್ತ ಸ್ತ್ರೀ ಪುರುಷರಿಗೆ ಚಂದ್ರಬಿಂಬ ಸಾಮ್ಯವನ್ನು ಕವಿಗಳು ಹೇಳುವ ಪದ್ಧತಿಯುಂಟು, ಅಂತಹ ಉಪಮೆ ಯಾವುದೂ ಸರಿಯಲ್ಲವೆಂದು ಹೇಳುತ್ತಾರೆ. ಪೌರ್ಣಿಮೆ ಚಂದ್ರನು ಪೂರ್ಣನಾಗಿ ತುಂಬಾ ಆಹ್ಲಾದಕರನಾಗಿ ತೋರಿದರೂ ಆತನಲ್ಲಿ ಮಧ್ಯೆ ಕಳಂಕವುಂಟು. ಅಂತಹ ಚಂದ್ರನು ಕಳಂಕವಿಲ್ಲದೆಯೇ ಒಂದುವೇಳೆ ಇದ್ದರೂ ಆಗಲೂ ಕೂಡ ವೈಕುಂಠಪತಿಯ ಮುಖಕಾನ್ತಿಯು ಹಿಮಾಂಶುವಿನ ಕಾನ್ತಿಯನ್ನು ಹೀಯಾಳಿಸುತ್ತದೆಂದು **ನ್ಯಕ್ಕೃತ** ಎಂದು ಪ್ರಯೋಗಿಸಿರುತ್ತಾರೆ. ಶ್ರೀ ಹರ್ಷಕವಿಯು ದಮಯನ್ತಿಯ ಮುಖಕಾನ್ತಿಯನ್ನು ಹೋಲಿಸುವ ಸಂದರ್ಭದಲ್ಲಿ "**ಭ್ರಮಯತ್ಯುಚಿತಂ ವಿದರ್ಭಜಾನನನೀರಾಜನವರ್ಧಮಾನಕಮ್**" ಎಂದು ದಮಯನ್ತಿಯ ಮುಖಲಾವಣ್ಯದ ದೃಷ್ಟಿ ಪರಿಹಾರಕ್ಕಾಗಿ ಸುಣ್ಣಹಚ್ಚಿ ಕಳಂಕವೆಂಬ ಸಗಣಿ ಸೇರಿರುವ ಮಣ್ಣಿನ ಶರಾವವೆಂದು ಕವಿಯು ವರ್ಣಿಸಿರುವುದನ್ನು ಈ **ನ್ಯಕ್ಕೃತ** ವೆಂಬ ಪ್ರಯೋಗವು ಸ್ಮರಿಸುವಹಾಗೆ ಮಾಡುತ್ತದೆ. **ಅಮೃತಾಂಶುಬಿಂಬ** ಮತ್ತು ಕಮಲಗಳ ಶ್ರೀ ಯಾವುದೆಂದರೆ ನೋಡುವುದಕ್ಕೆ ಅದರಿಂದ ಹರ್ಷ ಮನೋಹರತ್ವಗಳ

**ಪ್ರಬುದ್ಧಮುಗ್ಧಾಂಬುಜ ಚಾರುಲೋಚನಂ**
**ಸವಿಭ್ರಮ ಭ್ರೂಲತಮುಜ್ವಲಾಧರಮ್।**
**ಶುಚಿಸ್ಮಿತಂ ಕೋಮಲಗಂಡಮುನ್ನಸಮ್**
**ಲಲಾಟ ಪರ್ಯನ್ತವಿಲಂಬಿತಾಲಕಮ್** ॥ ೩೫ ॥

---

ನ್ನುಂಟುಮಾಡೋಣವು. ಹಾಗೆಯೇ ಆವುಗಳ ಶೀತಳತ್ವದ ಮೂಲಕ ಆಪ್ಯಾಯಮಾನವಾಗಿ ಆ ಪರಮಪುರುಷನ ಶೀತಲ ಕೃಪಾಕಟಾಕ್ಷದ ಸುಹಿಮೆಯು ಬೋಧಿತವು.

**ಅವತಾರಿಕೆಯು** ಹಿಂದಿನ ಶ್ಲೋಕದಲ್ಲಿ ಶ್ರೀ ವೈಕುಂಠನಾಥನ ಮುಖದ ಸರ್ವ ಲಾವಣ್ಯವನ್ನು ಶಾಸ್ತ್ರದೃಷ್ಟಿಯಿಂದ ವರ್ಣಿಸಿದರು. ಈ ಶ್ಲೋಕದಲ್ಲಾದರೋ ದಿವ್ಯಮಙ್ಗಳ ವಿಗ್ರಹದ ಮುಖದಲ್ಲಿರುವ ಲೋಚನ, ಅಧರ ಮೊದಲಾದ ಅವಯವಗಳ ಶೋಭೆಯನ್ನು ವರ್ಣಿಸುತ್ತಾರೆ. ಇವೆಲ್ಲಾ ದ್ವಿತೀಯಾನ್ತ ಪದಗಳು "ಭವನ್ತಂ" ಎಂಬುದಕ್ಕೆ ವಿಶೇಷಣಗಳು.

**ಅರ್ಥ**--ಪ್ರಬುದ್ಧಮುಗ್ಧಾಂಬುಜಚಾರುಲೋಚನಂ, **ಪ್ರಬುದ್ಧ**-ಅರಳಿದ, **ಮುಗ್ಧ**-ಸುಂದರವಾದ, **ಅಂಬುಜ**-ಕಮಲದಹಾಗೆ, **ಚಾರು**-ಮನೋಹರವಾದ, **ಲೋಚನಂ** ಕಣ್ಣುಗಳನ್ನುಳ್ಳ, **ಸವಿಭ್ರಮ ಭ್ರೂಲತಂ**-ವಿಲಾಸದಿಂದ ಕೂಡಿದ ಬಳ್ಳಿಯಹಾಗೆ ಬಾಗಿದ ಹುಬ್ಬುಗಳನ್ನುಳ್ಳ, **ಉಜ್ಜ್ವಲಾಧರಂ**—ಕೆಂಪಗೆ ಪ್ರಕಾಶವಾಗಿರುವ ತುಟಿಯನ್ನುಳ್ಳ, **ಶುಚಿಸ್ಮಿತಂ**-ನಗುವಾಗ ದಂತದ ಬಿಳೀಕಾನ್ತಿಯಿಂದ ಶೋಭಾಯಮಾನವಾದ, ಪರಿಶುದ್ಧವಾದ ಮನಸ್ಸಿನಿಂದ ಕೂಡಿದ, ಮುಗುಳುನಗೆಯನ್ನುಳ್ಳ, **ಕೋಮಲಗಂಡಂ**-ಸುಕುಮಾರವಾದ ಕೆನ್ನೆಯನ್ನುಳ್ಳ, **ಉನ್ನಸಂ**-ಎತ್ತರವಾದ ಮೂಗನ್ನುಳ್ಳ, **ಲಲಾಟಪರ್ಯನ್ತ ವಿಲಂಬಿತಾಲಕಂ**-ಹಣೆಯವರೆಗೂ ಜೋಲಾಡುತ್ತಿರುವ ಮುಂಗುರುಳುಗಳನ್ನುಳ್ಳ **ಭವನ್ತಂ ಕದಾಪ್ರಹರ್ಷಯಿಷ್ಯಾಮಿ**-ಎಂದು ೪೬ನೆಯ ಶ್ಲೋಕದಲ್ಲಿ ಇರುವುದರೊಂದಿಗೆ ಅನ್ವಯವು. ಹೀಗೆ ಪರಮ ಪುರುಷನಾದ ವಾಸುದೇವಮೂರ್ತಿಯ ಮುಖವನ್ನು ವರ್ಣಿಸಿ ಆನಂದಭರಿತರಾದರು.

**ಉಪಪಾದನೆಯು**-ಸ್ವಾಮಿಯ ಕಣ್ಣಿನ ಸೊಬಗಿಗೆ ಸಾಧಾರಣವಾಗಿ ಕಮಲಸಾಮ್ಯವು ಶ್ರುತಿ, ಸ್ಮೃತಿ ಇತಿಹಾಸ, ಪುರಾಣಗಳಲ್ಲೆಲ್ಲಾ ಕೊಡಲ್ಪಟ್ಟಿರುತ್ತದೆ. **"ಕಪ್ಯಾಸಂಪುಂಡರೀಕಂ ಏವಮಕ್ಷಿಣೀ"** ಎಂಬ ಶ್ರುತಿಯು (ಛಾಂ ೧-೬-೬) ಬಹು ಸ್ವಾರಸ್ಯವಾಗಿ ವರ್ಣಿಸಿರುತ್ತದೆ. ಇದಕ್ಕೆ ಶ್ರೀ ಯತಿವರ್ಯರ ವ್ಯಾಖ್ಯಾನವು **"ಗಂಭೀರಾಂಭಸ್ಸಮುದ್ಭೂತ ಸಮ್ಮೃಷ್ಟನಾಳರ ವಿಕರ ವಿಕಸಿತ ಪುಂಡರೀಕದಳಾ ಮಲಾಯತೇಕ್ಷಣಂ"** ಎಂಬುದಾಗಿ, ಇಲ್ಲಿ **"ಕಂಪಿ**

ಬತೀತಿ ಕಪಿಃ" ಎಂಬ ವ್ಯುತ್ಪತ್ತಿಯಿಂದ ನೀರನ್ನು ಹೀರುವವನು, ಸೂರ್ಯನೆಂಬ ರ್ಥವು, ಮರ್ಕಟವೆಂಬರ್ಥವಲ್ಲವು. ಸೂರ್ಯನಿಂದ **ಆಸಂ** ನಾಳದಲ್ಲಿದ್ದು ಅರಳಿದ ಎಂಬ ತಾತ್ಪರ್ಯವು. ಬಹು ಆಳವಾದ ನೀರಿನಲ್ಲಿ ಉದ್ಭವಿಸಿ, ಕೋಮಲವಾದ ನಾಳದಿಂದ ಕೂಡಿ ನೀರಿನಮೇಲಿದ್ದು ಪ್ರಾತಃಕಾಲದ ಸೂರ್ಯಕಿರಣದಿಂದ ಅರಳಿದ ಕಮಲವು ಎಷ್ಟು ಶೋಭಾಯಮಾನವಾದುದೋ ಅಷ್ಟು ಶೋಭೆಯುಳ್ಳದ್ದೆಂಬ ಭಾವವು. ಇಂತಹ ಶೋಭೆಯು ಅವತಾರ ಕಾಲದಲ್ಲೂ ದಿವ್ಯಮಙ್ಗಳ **ವಿಗ್ರಹ** ವಾದುದರಿಂದ ಅನುಸರಿಸಿ ಬರುತ್ತದೆಂಬುದನ್ನು ಮಹರ್ಷಿಗಳ ಪ್ರಯೋಗದಿಂದ "**ರಾಮಃ ಕಮಲಪತ್ರಾಕ್ಷಃ**" ಎಂಬ, "**ತಂಪದ್ಮದಳ ಪತ್ರಾಕ್ಷಂ**" ಎಂಬು ದನ್ನೂ ಕಾಣಬಹುದು. ಹಾಗೆಯೇ ಕೃಷ್ಣಭಗವಾನರವರ ಕಣ್ಣಿನ ಸೊಬಗನ್ನು ನೋಡಿ, ಆತನು ಪರತತ್ವವೆಂಬುದನ್ನು ನಿಸ್ಸಂಶಯವಾಗಿ ಹೇಳುವೆನೆಂದು ಪಾಂಡವರಿಗೆ ತಿಳಿಸಲು, ಅವರೆಲ್ಲರೂ ಶ್ರೀಕೃಷ್ಣನಲ್ಲಿ ಶರಣಾಗತಿಯನ್ನು ಅನುಷ್ಠಿ ಸಿದರೆಂದು ಮಹರ್ಷಿಯು ಹೇಳುತ್ತಾರೆ. "**ಯಃ ಸದೇವೋ ಮಯಾದೃಷ್ಟಃ ಪುರಾಪದ್ಮಾಯತೇಕ್ಷಣಂ। ಸಏವ ಪುರುಷವ್ಯಾಘ್ರ ಸಂಬಂಧೀ ತೇಜನಾ ರ್ದನಃ॥**" ಹಿಂದೆ ಪ್ರಳಯದಲ್ಲಿ ನನ್ನಿಂದ ನೋಡಲ್ಪಟ್ಟ ಪುಂಡರೀಕಾಕ್ಷನೇ ಈಗ ನಿನಗೆ ಸಂಬಂಧಿಯಾಗಿ ಅವತರಿಸಿರುವ ಶ್ರೀಕೃಷ್ಣನೆಂದು ಧರ್ಮರಾಯನನ್ನು ಕುರಿತುಹೇಳಿ "**ಗಚ್ಛಧ್ವಮೇನಂ ಶರಣಂ ಶರಣ್ಯಂ ಪುರುಷರ್ಷಭಾಃ।**" ಓ ಪುರುಷಶ್ರೇಷ್ಠರಾದ ಪಾಂಡವರೇ ಆತನನ್ನೇ ಉಪಾಯವನ್ನಾಗಿಯೂ ಪ್ರಾಪ್ಯ ವನ್ನಾಗಿಯೂ ಹೊಂದಿರಿ ಎಂದು ಉಪದೇಶಿಸಿರುತ್ತಾರೆ.

**ಪ್ರಬುದ್ಧ**ವಾದುದು **ಚಾರುಲೋಚನ**ವೆಂದು ಹೇಳಿರುವುದರಿಂದ ಆಶ್ರಿತ ರಲ್ಲಿ ಅನುಗ್ರಹವೂ, ಕರುಣೆಯೂ, ವಾತ್ಸಲ್ಯವೂಎಲ್ಲಾ ತೋರಿಬರುತ್ತದೆ. ವಿಭೀಷ ಣನು ಯಾವಾಗ ತನ್ನನ್ನು ಬಂದು ಆಶ್ರಯಿಸಿದನೋ ಆಗ ಆತನನ್ನು "**ವಚಸಾ ಸಾಂತ್ವಯಿತ್ವೈನಂ ಲೋಚನಾಭ್ಯಾಂ ಪಿಬನ್ನಿವ**" ಎಂದು ಮಹರ್ಷಿಯು ವರ್ಣಿ ಸಿರುವುದು ಅನುಗ್ರಹ, ಕರುಣೆ ವಾತ್ಸಲ್ಯಾದಿಗಳು ಆ ಸ್ವಾಮಿಯ ದಿವ್ಯ ಕಟಾಕ್ಷದಲ್ಲಿ ತೋರಿಬರುತ್ತವೆ ಎಂಬ ಅಭಿಪ್ರಾಯದಿಂದ. **ಸವಿಭ್ರಮ ಭ್ರೂಲತಂ** ಎಂಬ ಪ್ರಯೋಗದಿಂದ ಸ್ವಭಕ್ತ ಸಂಪ್ರಾಪ್ತಿಯಿಂದುಂಟಾದ ಉಲ್ಲಾಸಾತಿಶಯವನ್ನು ಸೂಚಿಸುತ್ತದೆ. **ಉಜ್ವಲಾಧರಂ** –ಹವಳ, ತೊಂಡೇಹಣ್ಣು ಇವುಗಳ ರಕ್ತಿಮಕಾ ನ್ತಿಗಿಂತ ಅತಿಶಯವಾದುದೆಂಬ ಭಾವವನ್ನೂ **ಉಜ್ವಲ** ಶಬ್ದದಿಂದ ತೋರ್ಪಡಿಸು ತ್ತಾರೆ, ಬಿಂಬ ನಾಮಕಫಲವನ್ನು **ಅಧರಾಯಿತ** ಕೀಳಾಗಿ ಮಾಡಿರುವುದರಿಂದ **ಅಧರ** ಶಬ್ದವೆಂದು ವರ್ಣಿಸಿದ ಶ್ರೀಹರ್ಷ ಕವಿಯೋಕ್ತಿಗೆ ಅನುಗುಣವಾಗಿ **ಉಜ್ವಲಾಧರ** ವೆಂಬ ಪ್ರಯೋಗವು. **ಶುಚಿ-ಸ್ಮಿತಂ** ಎಂಬುದರಿಂದ ಕೆಂಪಾದ ತುಟಿಗಳ ಮಧ್ಯದಲ್ಲಿ ಮುಗುಳುನಗೆಯಿಂದ ದಂತದ ಧಾವಳ್ಯವು ಹೇಳಲ್ಪಟ್ಟಿತು. ಅಥವಾ "**ಸ್ಮಯನ್ನಿವ ನೃಪೋಹನ್ತಿ**" ನಗುತ್ತಿರುವ ರಾಜನು ಕೊಲ್ಲುವನೆಂದು

**ಸ್ಫುರತ್ಕಿರೀಟಾಙ್ಗದ ಹಾರಕಣ್ಠಿಕಾ**
**ಮಣೀನ್ದ್ರಕಾಂಚೀಗುಣ ನೂಪುರಾದಿಭಿಃ**
**ರಥಾಙ್ಗ ಶಂಖಾಸಿಗದಾ ಧನುರ್ವರೈಃ**
**ಲಸತ್ತು ಲಸ್ಯಾ ವನಮಾಲಯೋಜ್ವಲಮ್** || ೩೭ ||

---

ಹೇಳಿದ ಹಾಗಲ್ಲದೆ ಪರಿಶುದ್ಧ ಮನಸ್ಸಿನಿಂದ ನಗುತ್ತಾ ಆಶ್ರಿತರನ್ನು ಅನುಗ್ರಹಿಸುವನೆಂಬ ಭಾವವು ಸೂಚಿತವು. ಪೌಷ್ಕರದಲ್ಲಿ "**ಪೂರ್ವಕರ್ಮಾನಲಾರ್ತಾನಾಂ ಧ್ಯಾಯತಾಂ ಖೇದ ಶಾನ್ತಯೇ। ಸ್ವದನ್ತೇನ್ದುಚಯೋತ್ಥೇನಹ್ಲಾದಯನ್ ಗೋಗಣೇನತು**" ಎಂದರೆ ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳೆಂಬ ಬೆಂಕಿಯಿಂದ ದೈನ್ಯವನ್ನು ಹೊಂದಿ ಮತ್ತು ಧ್ಯಾನಮಾಡುವವರ ದುಃಖವು ಶಾನ್ತಿ ಹೊಂದುವುದಕ್ಕಾಗಿ ತನ್ನ ದಂತಗಳೆಂಬ ಚನ್ದ್ರಸಮೂಹದಿಂದ ಹುಟ್ಟಿದ ಕಾನ್ತಿ ಸಮೂಹದಿಂದ ಭಗವನ್ತನು ಆನನ್ದಗೊಳಿಸುವನೆಂದು ತಾತ್ಪರ್ಯವು. ಕೋಮಲ ಕಪೋಲವೂ, ಮುಂಗುರುಳು ಹಣೆಯವರೆಗೂ ವಿಲಂಬಿಸಿರುವುದೂ ಪರಮ ಲಾವಣ್ಯವನ್ನು ಬೋಧಿಸುತ್ತವೆ.

**ಅವತಾರಿಕೆಯು** ಅನಂತರ ಶ್ರೀ ಯತಿವರ್ಯರು ಶರಣಾಗತಿ ಗದ್ಯದಲ್ಲಿ "**ನಿರತಿಶಯೌಜ್ವಲ್ಯ ಕಿರೀಟ ಮಕುಟ ಚೂಡಾವತಂಸ ಮಕರಕುಂಡಲಗ್ರೈವೇಯಕ ಹಾರಕೇಯೂರ ಕಟಕ ಶ್ರೀವತ್ಸಕೌಸ್ತುಭಮುಕ್ತಾ ದಾಮೋದರ ಬಂಧನ ಪೀತಾಂಬರ ಕಾಂಚೀಗುಣನೂಪುರಾದ್ಯಪರಿಮಿತ ದಿವ್ಯಭೂಷಣ**" ಎಂದು "ಸ್ವಾನುರೂಪಾಚಿಂತ್ಯಶಕ್ತಿ ಶಂಖಚಕ್ರಗದಾ ಶಾರ್ಙ್ಗಾದ್ಯಸಂಖ್ಯೇಯ ನಿತ್ಯ ನಿರವದ್ಯ ನಿರತಿಶಯ ಕಲ್ಯಾಣ ದಿವ್ಯಾಯುಧ" ಎಂದು ಇದನ್ನೇ ವಿಸ್ತರಿಸಿ ಹೇಳಿರುವ ಹಾಗೆ ಈ ಶ್ಲೋಕದಲ್ಲಿ ಪೂರ್ವಾರ್ಧದಲ್ಲಿ ಶ್ರೀ ವೈಕುಂಠಮೂರ್ತಿಯನ್ನು ದಿವ್ಯಭೂಷಣಯುಕ್ತನನ್ನಾಗಿಯೂ ಉತ್ತರಾರ್ಧದಲ್ಲಿ ದಿವ್ಯಾಯುದಯುಕ್ತನನ್ನಾಗಿಯೂ ಕಂಡು ಅನುಭವಿಸುತ್ತಾರೆ. ಸ್ವಾಮಿಯ ದಿವ್ಯಭೂಷಣಾಲಂಕಾರವು ತನ್ನನ್ನು ಆಶ್ರಯಿಸುವವರ ಮನಸ್ಸನ್ನು ಆಕರ್ಷಿಸುವುದಕ್ಕಾಗಿಯೂ ಅವರ ಶತ್ರುಗಳನ್ನೂ ಲೋಕಕಂಟಕರನ್ನೂ ಶಿಕ್ಷಿಸುವುದಕ್ಕಾಗಿಯೂ, ದಿವ್ಯಾಯುಧಗಳನ್ನು ಸ್ವಾಮಿಯು ಧರಿಸುವನೆಂದೂ ಭಾವಿಸತಕ್ಕದ್ದು.

ಬ್ರಹ್ಮರುದ್ರಾದಿಗಳ ವಿಗ್ರಹಗಳು ದಿವ್ಯಮಙ್ಗಳ ವಿಗ್ರಹಗಳಲ್ಲವು. ಅದಕ್ಕಾಗಿ ಒಬ್ಬನಿಗೆ ಚತುರ್ಮುಖವೂ ಎಂಟು ಕಣ್ಣುಗಳೂ, ಇನ್ನೊಬ್ಬನಿಗೆ ತ್ರಿನೇತ್ರಾದಿಗಳೂ ಹೀಗೆ ವಿಜಾತೀಯವಾದ ವಿಗ್ರಹವೂ ಅದಕ್ಕನುಗುಣವಾದ ಆಭರಣಾಯುಧಗಳೂ ಉಂಟು. ಪರಮ ಪುರುಷನಿಗಾದರೋ ದಿವ್ಯಮಂಗಳ ವಿಗ್ರಹವೂ ಚತುರ್ಭುಜತ್ವವೂ ದಿವ್ಯಾಭರಣಗಳೂ ದಿವ್ಯಾಯುಧಗಳೂ, ಉಂಟೆಂದು ಹೇಳು

ವುದರ ಮೂಲಕ ಈ ಶ್ಲೋಕದಲ್ಲಿ ಸರ್ವೇಶ್ವರನಿಗೆ ವಿಲಕ್ಷಣಗಳಿಂದ ದಿವ್ಯಾಭರಣಗಳೂ ದಿವ್ಯಾಯುಧಗಳೂ ಉಂಟೆಂದು ತಿಳಿಸುತ್ತಾರೆ.

ಅರ್ಥವು—ಪೂರ್ವಾರ್ಧವೆಲ್ಲಾ ಒಂದೇ ಪದವು, **ಸ್ಫುರತ್**-ಪ್ರಕಾಶಮಾನಗಳಾದ ಕಿರೀಟವೇನು **ಅಂಗದ**-ಬಾಹುಪುರಿಯೇನು, **ಹಾರ**ವೇನು **ಕಂಠಿಕಾ**-ಕಂಠಾಭರಣವೇನು, ಮುತ್ತಿನ ಕಂಠಿಯೇನು ಮಣೀನ್ದ್ರ-ಶ್ರೇಷ್ಠಮಣಿಯಾಗಿ ಜೀವಾತ್ಮಸ್ವಾಮಿಯವಾದ ಕೌಸ್ತುಭರತ್ನವೇನು; **ಕಾಂಚೀಗುಣ**-ಉಡಿದಾರವೇನು, **ನೂಪುರ**-ಕಾಲಿನ ಗೊರಸೇನು, **ಆದಿಭಿ**-ಇವೇ ಮೊದಲಾದ ಇತರ ಆಭರಣಗಳಿಂದಲೂ, **ರಥಾಂಗ**-ಸುದರ್ಶನವೆಂಬ ಚಕ್ರ, **ಪಾಂಚಜನ್ಯ**ವೆಂಬ **ಶಂಖ, ಅಸಿ**-ನಂದಕವೆಂಬ ಕತ್ತಿ, **ಗದಾ**-ಕೌಮೋದಕೀ ಎಂಬ ಗದೆ ಏನು ಶಾರ್ಙವೆಂಬ, **ಧನುರ್ವರೈಃ**-ಶ್ರೇಷ್ಠಧನುಸ್ಸು ಇವುಗಳಿಂದಲೂ, **ವರ** ಎಂಬ ಶ್ರೇಷ್ಠಪದವನ್ನು ಶಂಖಚಕ್ರಾದಿ ಎಲ್ಲಾ ಆಯುಧಗಳಿಗೂ ಅನ್ವಯಿಸತಕ್ಕದ್ದು. ಮತ್ತು **ಲಸತ್ತುಳಸ್ಯಾ**-ಪ್ರಕಾಶಮಾನವಾದ ಎಂದರೆ ಮನೋಹರವಾದ ಸುಗಂಧವುಳ್ಳ ತುಳಸಿಯುಕ್ತವಾದ, **ವನಮಾಲಯಾ**-ಕಂಠದಿಂದ ಪಾದದವರೆಗೂ ಜೋಲಾಡುತ್ತಿರುವ ವನಮಾಲೆಯಿಂದಲೂ, **ಉಜ್ವಲಂ**-ಶೋಭಿಸುತ್ತಿರುವ, "ಭವನ್ತಂ" ಎಂಬುದರೊಂದಿಗೆ ಅನ್ವಯವು. ಇಂತಹ ದಿವ್ಯಾಭರಣಗಳಿಂದಲೂ ತುಲಸೀವನಮಾಲೆಯಿಂದಲೂ ಶೋಭಿಸುತ್ತಿರುವ ನಿನ್ನನ್ನು ಎಂಬರ್ಥವು.

ಉಪಪಾದನೆಯು—ಶ್ರೀ ಪರಾಶರರು "**ಅಸ್ತ್ರಭೂಷಣ ಸಂಸ್ಥಾನಸ್ವರೂಪಂ ರೂಪವರ್ಜಿತಃ। ಬಿಭರ್ತಿ ಮಾಯಾರೂಪೋಸೌ ಶ್ರೇಯಸೇ ಪ್ರಾಣಿನಾಂ ಹರಿಃ**" (ವಿ.ಪು. ೧.೨೨.೩೬) ಎಂದು ಚೇತನದ ಶ್ರೇಯಸ್ಸಿಗಾಗಿಯೇ ಈ ದಿವ್ಯಭೂಷಣ ದಿವ್ಯಾಯುಧಗಳನ್ನು ಧರಿಸಿಕೊಂಡಿರುತ್ತಾನೆಂದು ಹೇಳಿರುತ್ತಾರೆ. "**ಅವ್ಯಾಹತಾನಿ ಕೃಷ್ಣಸ್ಯ ಚಕ್ರಾದೀನ್ಯಾಯುಧಾನಿತೇ। ರಕ್ಷನ್ತಿ ಸಕಲಾಪದ್ಭ್ಯೋಯೇನ ವಿಷ್ಣುರುಪಾಸಿತಃ॥**" ಈ ದಿವ್ಯಾಯುಧಗಳನ್ನೆಲ್ಲಾ ಸರ್ವೇಶ್ವರನು ಧರಿಸಿರುವುದು ತನ್ನ ಆಶ್ರಿತ ರಕ್ಷಣೆಗಾಗಿಯೇ ಎಂದು ವಿಷ್ಣುಧರ್ಮದಲ್ಲಿ ಹೇಳಲ್ಪಟ್ಟಿರುತ್ತದೆ. ಈ ದಿವ್ಯಾಯುಧಗಳು ಭಕ್ತರನ್ನು ಆಪತ್ಕಾಲದಲ್ಲಿ ರಕ್ಷಿಸಿತ್ತೆಂಬುದನ್ನು ಗಜೇಂದ್ರಮೋಕ್ಷ, ಅಂಬರೀಷೋಪಾಖ್ಯಾನ, ಶಿಶುಪಾಲವಧ, ಪೌಂಡ್ರಕವಾಸುದೇವಾದಿ ಉಪಾಖ್ಯಾನಗಳಿಂದ ಗ್ರಹಿಸಬಹುದು ಈ ಆಭರಣಾಯುಧಗಳು ಬರೀ ಆಭರಣಾಯುಧಗಳೇ ಅಲ್ಲವು ೨೫ ತತ್ವಗಳಿಗೂ ಅಭಿಮಾನದೇವತೆಗಳಾಗಿ ಇವು ಇರುವುದರಿಂದ ಸ್ವಾಮಿಯು ವಿಗ್ರಹವನ್ನು ಧರಿಸಿರುವಾಗಲೂ, ಚಿದಚಿತ್ತತ್ವಗಳೊಂದಿಗೇ ಸೇರಿ ಪರಿಪೂರ್ಣನಾಗಿಯೇ ತೋರುವನೆಂಬ ವಿಶಿಷ್ಟಾದ್ವೈತಭಾವವೂ ಈ ಶ್ಲೋಕದಿಂದ ಉಪದಿಷ್ಟವು. ಅಸ್ತ್ರಭೂಷಣಾಧ್ಯಾಯವಾದ ವಿಷ್ಣುಪುರಾಣ ಪ್ರಥಮಾಂಶ ೨೨ನೆಯ ಅಧ್ಯಾಯದಲ್ಲಿ ಇದು ನಿಪುಣತರವಾಗಿ ಉಪಪಾದಿತವು. ಅಲ್ಲಿಹೇಳಿರುವುದೇನೆಂದರೆ, "**ಆತ್ಮಾನ ಮಸ್ಯ ಜಗತೋ ನಿರ್ಲೇ**

**ಚಕರ್ಥ ಯಸ್ಯಾ ಭವನಂ ಭುಜಾನ್ತರಂ**
**ತವಪ್ರಿಯಂ ಧಾಮ ಯದೀಯಜನ್ಮಭೂಃ ।**
**ಜಗತ್ಸಮಸ್ತಂ ಯದಪಾಙ್ಗ ಸಂಶ್ರಯಮ್**
**ಯದರ್ಥಮಂ ಬೋಧಿ ರಮನ್ಥ್ಯಬಂಧಿಚ　|| ೩೭ ||**

---

**ಪ ಮಗುಣಾಲಯಂ । ಬಿಭರ್ತಿ ಕೌಸ್ತುಭಮಣಿಸ್ವರೂಪಂ ಭಗವಾನ್ ಹರಿಃ"** ಶ್ರೀಹರಿಯು ಕೌಸ್ತುಭ ಮಣಿಯನ್ನು ಸ್ವರೂಪ ವಿಕಾರವಿಲ್ಲದ ಸರ್ವಜೀವರತ್ನ ರಾಶಿಗಳ ಅಧ್ಯಯನವಾಗಿ ಧರಿಸಿರವನು, ಎಂದು ಹೇಳಿರುವುದರಿಂದ ಜೀವಾತ್ಮನ ಅಪೃಥಕ್ ಸಿದ್ಧವಿಶೇಷಣ ಭಾವವು ಬೋಧಿತವು **"ಶ್ರೀವತ್ಸ ಸಂಸ್ಥಾನ ಧರಂ ಅನಂತೇನ ಸಮಾಶ್ರಿತಂ । ಪ್ರಧಾನಂ ಬುದ್ಧಿ ರಾಪ್ಯಾಸ್ತೇಗದಾರೂಪೇಣ ಮಾಧವೇ ।।"** ಎಂದೂ ಮುಂದೆ **"ಚಲಸ್ವರೂಪಮತ್ಯಂತಂ ಜವೇನಾಂ ತರಿತಾನಿಲಮ್ । ಚಕ್ರಸ್ವರೂಪಂ ಚ ಮನೋಧತ್ತೇ ವಿಷ್ಣೋಃ ಕರೇಸ್ಥಿತಮ್"॥** ಅಚಿತ್ತುಗಳನ್ನು ಅಪೃಥಕ್ ಸಿದ್ಧ ವಿಶೇಷಣವಾಗಿ ಸ್ವಾಮಿ ಶ್ರೀಹರಿಯು ಧರಿಸಿರುವನೆಂದು ಹೇಳಲು ಹೊರಟು ಚಕ್ರವೇಮನಸ್ತತ್ತ್ವವೆಂದು ಹೇಳಿದರು. ಶ್ರೀಲಕ್ಷ್ಮಿಯೂ ಹಾಗೆಯೇ ವಕ್ಷದಲ್ಲೇ ಇರುವಳು; ಇವುಗಳೆಲ್ಲಾ ಅಲ್ಲಿ ಉಪಪಾದಿತವು. ಇವೆಲ್ಲಾ ಚೆನ್ನಾಗಿ ಗ್ರಹಿಸಲು ದಾಸನು ಬರೆದಿರುವ ಶ್ರೀಮದ್ರಹಸ್ಯತ್ರಯಸಾರದ ತತ್ತ್ವತ್ರಯಾಧಿಕಾರದ ೫೧೭-೫೨೫ನೆಯ ಪುಟಗಳನ್ನು ಪಾರಾಂಬರಿಸಿ. ಶ್ರೀದೇಶಿಕವರ್ಯರು ಇವನ್ನೆಲ್ಲಾ **"ಪುರುಷಮಣಿವರಮಾಕ"** ಎಂಬ ಅಧಿಕಾರ ಸಂಗ್ರಹ ಪಾಶುರದಿಂದ ವ್ಯಕ್ತಗೊಳಿಸಿರುತ್ತಾರೆ. ಈ ದಿವ್ಯಾಭರಣಾಯುಧಾಭಿಮಾನ ದೇವತೆಗಳೆಲ್ಲಾ ಅಸ್ಪೃಷ್ಟ ಸಂಸಾರಿಗಳಾಗಿ ನಿತ್ಯರಲ್ಲಿ ಸೇರಿದವರೆಂಬುದಕ್ಕೆ ಪ್ರಮಾಣವನ್ನು ಶ್ರೀದೇಶಿಕರವರು **"ಸ್ರಗ್ವಸ್ತ್ರಾಭರಣೈರ್ಯುಕ್ತಂ ಸ್ವಾನುರೂಪೈರನೂಪಮೈಃ । ಚಿನ್ಮಯೈಃ ಸ್ವಪ್ರಕಾಶೈಶ್ಚ ಅನ್ಯೋನ್ಯ ರುಚಿ ರಂಜಿತೈಃ ।"** ಎಂಬುದರಿಂದ ಉದಾಹರಿಸಿರುತ್ತಾರೆ. ಸ್ವಾಮಿಯ ವನಮಾಲೆ, ಪೀತಾಂಬರ, ಆಭರಣ, ಆಯುಧಗಳು ಇವೆಲ್ಲಾ ಸ್ವಯಂಪ್ರಕಾಶರಾದ ಚೇತನ ಪರಂಪರೆ ಎಂದು ಹೇಳಲ್ಪಟ್ಟಿರುತ್ತದೆ.

**ಅವತಾರಿಕೆಯು** ಮುಂದಿನ ಮೂರು ಶ್ಲೋಕಗಳಿಂದಲೂ ಲಕ್ಷ್ಮಿಯು ಯಾವಾಗಲೂ ಪರಮ ಪುರುಷನಿಗೆ ಅಪೃಥಕ್ಸಿದ್ಧ ವಿಶೇಷಣಳಾಗಿ ಸ್ವಾಮಿಯು ಹೇಗೆ ಸ್ವರೂಪ ರೂಪಗುಣ ವಿಭವೈಶ್ವರ್ಯಗಳಿಂದ ಶೋಭಿಸುತ್ತಿದ್ದಾನೆಯೋ ಹಾಗೆಯೇ ಆತನಿಗೆ ಅನುಗುಣವಾದ ಸ್ವರೂಪಾದಿಗಳುಳ್ಳವಳಾದುದರಿಂದ ಅವನೊಂದಿಗೆ ಸೇರಿ ಈ ಸರ್ವೈಶ್ವರ್ಯಗಳನ್ನೂ ಹೊಂದಿರುವನೆಂದು ಹೇಳುತ್ತಾರೆ. ಅವಿನಾಭೂತತ್ವವನ್ನು ಉಪಪಾದಿಸುತ್ತಾರೆ. ಚತುಶ್ಲೋಕಿಯಲ್ಲಿ ಉಪಪಾದಿಸಿದ ಲಕ್ಷ್ಮೀತತ್ತ್ವವನ್ನೆಲ್ಲಾ ಸಂಗ್ರಹವಾಗಿ ಈ ಮೂರು ಶ್ಲೋಕಗಳಿಂದಲೂ ಉಪ

ಪಾದಿಸುತ್ತಾರೆ. ಪ್ರಾಪ್ಯ ಪ್ರಾಪಕದೆಶೆಯಲ್ಲೂ ಲಕ್ಷ್ಮೀವಿಶಿಷ್ಟತೆಯನ್ನು ಸ್ಥಾಪಿಸುತ್ತಾರೆ.

**ಅರ್ಥ—ಯಸ್ಯಾಃ**—ಯಾವ ನಿನ್ನ ಪತ್ನಿಯಾದ ಲಕ್ಷ್ಮಿಯು, **ಭವನಂ**-ಯಾವಾಗಲೂ ಇರುವ ಸ್ಥಳವು, **ತವ**-ನಿನ್ನ, ಇದನ್ನು ಕಾಕಾಕ್ಷಿ ನ್ಯಾಯದ ಪ್ರಕಾರ ಭುಜಾಂತರಂ, ಪ್ರಿಯಂಧಾಮ, ಎರಡಕ್ಕೂ ಅನ್ವಯಿಸತಕ್ಕದ್ದು. **ಭುಜಾನ್ತರಂ**-ಭುಜಗಳ ಮಧ್ಯದಲ್ಲಿರುವ ವಕ್ಷಸ್ಥಳವನ್ನಾಗಿ, **ಚಕರ್ಥ**-ನೀನು ಮಾಡಿಕೊಂಡಿರು ತ್ತೀಯೋ, ತವ-ನಿನ್ನ, **ಪ್ರಿಯಂಧಾಮ**-ಪ್ರಿಯವಾದ ಸ್ಥಾನವಾದ ಕ್ಷೀರಸಾಗರವು **ಯದೀಯ**—ಯಾವ ಲಕ್ಷ್ಮಿಯು, **ಜನ್ಮಭೂಃ**—ಅವತಾರ ಭೂಮಿಯೋ, ಇವು ಗಳಿಂದ ಲಕ್ಷ್ಮಿಯ ನಿತ್ಯಾನಪಾಯಿತ್ವವು ಹೇಳಲ್ಪಟ್ಟಿತು, **ಜಗತ್ಸಮಸ್ತಂ**—ಬ್ರಹ್ಮ ರುದ್ರಾದಿಗಳಿಂದ ಸೇರಿದ, ಚೇತನಾಚೇತನ ವರ್ಗವಾದ ಸಮಸ್ತಜಗತ್ತೂ **ಯದ ಪಾಂಗ ಸಂಶ್ರಯಂ**—ಯಾವ ಲಕ್ಷ್ಮಿಯ ದಿವ್ಯಕಟಾಕ್ಷದ ನೋಟವನ್ನು ಆಶ್ರಯಿಸಿರುತ್ತದೋ, ಇದರಿಂದ ಜಗತ್ಸೃಷ್ಟಿ ಸ್ಥಿತಿಲಯಾದಿಗಳಲ್ಲೂ, ಚೇತನರ ಸರ್ವವಿಧ ಶ್ರೇಯಸ್ಸನ್ನುಂಟು ಮಾಡುವುದರಲ್ಲೂ ಅನ್ವಯವು ಹೇಳಲ್ಪಟ್ಟಿತು. **ಯದರ್ಥಂ**—ಯಾವ ಲಕ್ಷ್ಮಿಗೋಸ್ಕರವಾಗಿ **ಅಂಭೋಧಿಃ**—ಸಮುದ್ರವು, **ಅಮಂಥಿ**—ನೀನು ಕೂರ್ಮಾವತಾರಿಯಾಗಿರುವಾಗ ಕಡೆಯಲ್ಪಟ್ಟಿತೋ, ಮತ್ತು **ಅಬಂಧಿಚ**-ರಾಮಾವತಾರಿಯಾದಾಗ ಸೇತುಬಂಧನ ಮಾಡಲ್ಪಟ್ಟಿತೋ-"**ತಯಾ ಸಹಾಸೀನಂ**" ಎಂದು ೩೯ನೆಯ ಶ್ಲೋಕದಲ್ಲಿರುವುದರೊಂದಿಗೆ ಅನ್ವಯವು. ಅಂತಹ ಪತ್ನಿಯೊಂದಿಗೆ ಬಿಜಮಾಡಿಸಿರುವ ಇದು "**ಭವಂತಂ**" ಎಂಬುದಕ್ಕೆ ವಿಶೇಷಣವು.

**ಉಪಪಾದನೆಯ**—ನಿನ್ನ ಭುಜಾಂತರವೆಂದರೆ ವಕ್ಷಸ್ಥಳವು ಯಾವಳಿಗೆ ಭವನವೆಂದು ಹೇಳಲ್ಪಟ್ಟಿರುವದರಿಂದ ಲಕ್ಷ್ಮಿಯು ಯಾವಾಗಲೂ ಪರಮಪುರುಷ ನೊಂದಿಗೆ ಸಂಶ್ಲೇಷಿಸಿಕೊಂಡೇ ಇರುವಳೆಂಬ ಭಾವವು ಪ್ರದರ್ಶಿಸಲ್ಪಟ್ಟಿತು. "**ಅಗಲಗಿಲ್ಲೇನ್ ಇರೆಯುಮೆನ್ನಲರ್ ಮೇಲ್‌ಮಙ್ಗೈಯುರೈಮಾರ್ಪಾ**" ಎಂಬ ನಮ್ಮಾಳ್ವಾರ್‌ರವರ ಪಾಶುರವು ಇಲ್ಲಿ ಅನುಸಂಧೇಯವು. (ಚತುಶ್ಲೋಕೀ ೩೮ನೆಯ ಪುಟನೋಡಿ) ಒಂದುಃಕ್ಷಣ ಕೂಡ ಅಗಲಿರಲಾರನೆಂದಿರುವವಳೆಂದು ಹೇಳಲ್ಪಟ್ಟಿರುತ್ತದೆ. ಲಕ್ಷ್ಮೀತತ್ವವು ಎಲ್ಲೆಲ್ಲಿ ಉಪಪಾದಿತ ವೆಂಬುದನ್ನು ಶ್ರೀ ನಂಜೀಯರವರ ಶ್ರೀ ಸೂಕ್ತಭಾಷ್ಯವನ್ನು ದಾಸನು ಕನ್ನಡಕ್ಕೆ ಪರಿವರ್ತನೆ ಮಾಡಿರುವುದರಲ್ಲಿ ಕಾಣಬಹುದು. ಅವೆಲ್ಲಕ್ಕೂ ಐಕಕಂಠ್ಯ ವಿರುತ್ತದೆ. ಲಕ್ಷ್ಮೀತತ್ವ ಉಪಬೃಂಹಣವು ಶ್ರೀ ಪರಾಶರರ ಪ್ರಥಮಾಂಶ, ೯ನೆಯ ಅಧ್ಯಾಯದಲ್ಲೂ ಶ್ರೀ ವ್ಯಾಸರಿಂದ ಮಹಾಭಾರತದಲ್ಲೂ ಇರುತ್ತದೆ. ದೇವಿಯು ಸಮುದ್ರಮಥನ ಕಾಲದಲ್ಲಿ ಅವತರಿಸಿದನಂತರ "**ದಿವ್ಯಮಾಲ್ಯಾಂಬರಧರಾಸ್ನಾತಾ ಭೂಷಣ ಭೂಷಿತಾ । ಪಶ್ಯತಾಂ ಸರ್ವದೇವಾನಾಂ ಯಯೌವಕ್ಷಸ್ಥಲಂ**

**ಹರೇಃ** |" ದಿವ್ಯವಸ್ತ್ರಾಭರಣ ಭೂಷಿತಳಾಗಿ ಸರ್ವದೇವತೆಗಳೂ ನೋಡುತ್ತಿದ್ದ ಹಾಗೆಯೇ ಹರಿಯವಕ್ಷಸ್ಥಲವನ್ನು ಸೇರಿದಳೆಂದು ಹೇಳಲ್ಪಟ್ಟಿರುತ್ತದೆ. "**ತತೋ ವಲೋಕಿತಾದೇವಾ ಹರಿವಕ್ಷಸ್ಥಲಸ್ಥಯಾ | ಲಕ್ಷ್ಮ್ಯಾ ಮೈತ್ರೇಯ ಸಹಸಾ ಪರಾಂ ನಿರ್ವೃತಿ ಮಾಗತಾಃ**" ಆಕೆಯ ದಿವ್ಯಕಟಾಕ್ಷದ ಮಹಿಮೆಯಿಂದ ಶ್ರೇಷ್ಠವಾದ ಸಿಶ್ಶ್ರೇಯಸ್ಸನ್ನು ಹೊಂದಿದರೆಂದು ಹೇಳಿರುವುದರಿಂದ, ಲಕ್ಷ್ಮಿಗೆ ಉಪಾಯತ್ವವೂ, ಪರಮಪ್ರಾಪ್ತಿಯನ್ನು ಹೊಂದಿಸುವುದೂ, "ವಿಮುಕ್ತಿ ಫಲದಾಯಿನೀ" ಎಂದು ಇಂದ್ರಸ್ತುತಿಯಲ್ಲಿರುವುದರಿಂದ ಮೋಕ್ಷಪ್ರದತ್ವಶಕ್ತಿಯೂ ಮತ್ತು "**ಸರ್ವಲೋಕಮಹೇಶ್ವರೀಂ**" ಎಂಬ ಪ್ರಯೋಗದಿಂದ ಸರ್ವೇಶ್ವರನೊಂದಿಗೆ ಸರ್ವಲೋಕ ನಿಯಮನ ಶಕ್ತಿಯೂ ಉಂಟೆಂಬುದು ತೋರಿಬರುತ್ತದೆ.

ಹೀಗೆ ಒಟ್ಟಿಗೇ ಯಾವಾಗಲೂ ಇರುವರೆಂಬುದು ಶ್ರುತಿಯಲ್ಲೂ "**ಆನೀದವಾತಂಗ್ ಸ್ವಧಯಾ ತದೇಕಂ**" ಎಂಬಲ್ಲೂ "**ಶ್ರದ್ಧಯಾದೇವೋ ದೇವತ್ವಮಶ್ನುತೇ**" ಎಂಬಲ್ಲೂ ದ್ಯೋತಿತವು ಈ ಶ್ರುತಿಗಳು ಇಬ್ಬರಾದ ಲಕ್ಷ್ಮೀನಾರಾಯಣರು ಸೇರಿ ಒಂದೇ ಪರತತ್ತ್ವವೆಂದು ಬೋಧಿಸುತ್ತವೆ. ಇದನ್ನೇ ಶ್ರೀವ್ಯಾಸರೂ "**ಏಕಾಕೀ ವಿದ್ಯಯಾ ಸಾರ್ಧಂ**" (ಭಾರತ ಮೋಕ್ಷಧರ್ಮ) ಉಪಪಾದಿಸಿರುತ್ತಾರೆ.

ಹೀಗೆ ಒಟ್ಟಿಗೆ ಯಾವಾಗಲೂ ಲೋಕದಂಪತಿಗಳಿರುವವರೆಂಬುದನ್ನು ಶ್ರೀ ಪರಾಶರರು "**ನಿತ್ಯೈವೇಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ | ಯಥಾ ಸರ್ವಗತೋ ವಿಷ್ಣುಃ ತಥೈವೇಯಂ ದ್ವಿಜೋತ್ತಮ**" ಎಂದು ವ್ಯಕ್ತಪಡಿಸಿರುತ್ತಾರೆ. ಈ ಶ್ಲೋಕದಿಂದ ಲೋಕದಂಪತಿಗಳಿಬ್ಬರೂ ವಿಭುಗಳಾಗಿ ಎಲ್ಲವನ್ನೂ ಸ್ವರೂಪತಃ ವ್ಯಾಪಿಸಿರುವರಲ್ಲದೆ ಪರಸ್ಪರ ವ್ಯಾಪ್ತಿಯೂ ಉಂಟೆಂಬುದೂ ಸ್ಥಿರಪಡುತ್ತದೆ ಹಾಗೆಯೇ ವಾಲ್ಮೀಕಿ ಮಹರ್ಷಿಯೂ "**ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ!**" ಎಂಬ ಸೀತಾ ವಾಕ್ಯದಿಂದಲೂ "**ಅನನ್ಯಾ ಹಿ ಮಯಾ ಸೀತಾ ಭಾಸ್ಕರೇಣ ಪ್ರಭಾ ಯಥಾ**"ಎಂಬ ಶ್ರೀರಾಮೋಕ್ತಿಯಿಂದಲೂ ಈ ನಿತ್ಯಾನಪಾಯಿನೀ ಎಂಬುದನ್ನು ಉಪದೇಶಿಸಿರುತ್ತಾರೆ. ಹಾಗೆಯೇ ವಿಷ್ವಕ್ಸೇನ ಸಂಹಿತೆಯಲ್ಲೂ "**ತಥಾಲಕ್ಷ್ಮ್ಯಾಃ ಸ್ವರೂಪಂಚ ವಕ್ಷ್ಯೇಶೃಣು ಸಮಾಹಿತಃ**" **ಗುಣತಶ್ಚ ಸ್ವರೂಪೇಣವ್ಯಾಪ್ತಿಃ ಸಾಧಾರಣೀಮತಾ || ಯಥಾ ಮಯಾ ಜಗದ್ವ್ಯಾಪ್ತಂ ಸ್ವರೂಪೇಣ ಸ್ವಭಾವತಃ| ತಥಾ ವ್ಯಾಪ್ತಂ ತಯಾ ಸರ್ವಂ ನಿಯನ್ತ್ರೀ ಚ ತಥೇಶ್ವರೀ**" ಎಂದು ಸ್ವರೂಪ ವ್ಯಾಪ್ತ್ಯಾದಿಗಳು ಉಪಪಾದಿಸಲ್ಪಟ್ಟಿವೆ. ಆದುದರಿಂದಲೇ "**ಚಕರ್ಥಯಸ್ಯಾ ಭವನಂಭುಜಾನ್ತರಂ**" ಎಂದು ಪ್ರಯೋಗವು.

**ತವಪ್ರಿಯಂಧಾಮ ಯದೀಯ ಜನ್ಮಭೂಃ** ಎಂಬುದರಿಂದ ನಿನಗೆ ಪ್ರಿಯವಾದ ಕ್ಷೀರಸಮುದ್ರವೇ ಅವತಾರಸ್ಥಳವೆಂದು ಮಹಾಕವಿಯು ಹೇಳಿರುವುದು

ಲಕ್ಷ್ಮಿಗೆ ಕ್ಷೀರಸಮುದ್ರವೇ ತೌರುಮನೆಯು, ಇದರಿಂದ ಆಕೆಯ ಕೋಮಲಸ್ವಭಾವವು **"ಪಾಪಾನಾಂವಾ ಶುಭಾನಾಂವಾ ವಧಾರ್ಹಾಣಾಂಪ್ಲವಂಗಮ। ಕರುಣ ಕಾರ್ಯಂ ಮಾರ್ಯೇಣ ನಕಶ್ಚಿನ್ನಾಪರಾಧ್ಯತಿ"**ಎಂಬಲ್ಲಿ ತೋರಿಬರುವ ನಿರುಪಾಧಿಕ ಕಾರುಣ್ಯವೂ ಆಶ್ರಿತ ವಾತ್ಸಲ್ಯಾದಿಗಳೂ ಲಕ್ಷ್ಮಿಗೆ ಅಮೃತಪ್ರಾಪ್ತಿತ್ವವೂ ಉಂಟೆಂಬುದು ತೋರಿಬರುತ್ತದೆ. ತವಪ್ರಿಯಂಧಾಮಾದಿ ವಾಕ್ಯವು ಶ್ರೀ ಪರಾಶರರು ಉಪಪಾದಿಸಿರುವ ಪುರಾಣ ಪ್ರಕರಣವನ್ನು ಸೂಚಿಸಿ ಲಕ್ಷ್ಮೀತತ್ವವನ್ನು ನಿರ್ಧರಿಸಲು ಆ ಇತಿಹಾಸವೇ ಸಾಕೆಂಬುದನ್ನು ಸೂಚಿಸುತ್ತದೆ ಇದಲ್ಲದೆ ಅಲ್ಲಿ **"ರಾಘವತ್ವೇ ಭವತ್ಸೀತಾರುಕ್ಮಿಣೀ ಕೃಷ್ಣಜನ್ಮನಿ। ಅನ್ಯೇಷುಚಾವತಾರೇಷು ವಿಷ್ಣೋ ರೇಷಾನಪಾಯಿನೀ"** ಎಂಬ ವಾಕ್ಯಾನುಸಾರವಾಗಿ ಪರಮಪುರುಷನು ಕೂರ್ಮ ಮೋಹಿನ್ಯಾದ್ಯವತಾರಗಳನ್ನು ಎತ್ತಿದಾಗ ತಾನೂ ಅವತರಿಸಿದವಳಾಗಿ ಕ್ಷೀರಾಬ್ಧಿಯಿಂದ ಮೇಲಕ್ಕೆ ಎದ್ದಳೆಂಬುದನ್ನೂ ತಿಳಿಸುತ್ತದೆ.

ಸ್ವಾಮಿಗೆ ಕ್ಷೀರಸಮುದ್ರವು ಪ್ರಿಯಂಧಾಮ ವೆನ್ನುವುದಕ್ಕೆ **"ವಿಷನಾರಾಯಣ ಶ್ರೀವರ್ಮಾ ಕ್ಷೀರಾರ್ಣವನಿಕೇತನಃ"** ಎಂಬುದೂ ಅನುಸಂಧೇಯವು.

**ಜಗತ್ಸಮಸ್ತಂಯದಪಾಂಗ ಸಂಶ್ರಯಂ** ಸಮಸ್ತ ಜಗತ್ತೂ ಲಕ್ಷ್ಮಿಯ ದಿವ್ಯಕಟಾಕ್ಷವನ್ನು ಆಶ್ರಯಿಸಿರುವುದು ಎಂಬುದರಿಂದ ಪರಮಪುರುಷನು ಹೇಗೆ ಜಗತ್ತಿಗೆಲ್ಲಾ ಈಶ್ವರನೋ ಹಾಗೆ ಈಕೆಯೂ ಈಶ್ವರಿಯು. ಸ್ವಾಮಿಯು ತನ್ನ ಪತ್ನಿಯ ಮುಖೋಲ್ಲಾಸಕ್ಕಾಗಿಯೇ ಆಕೆಯೊಂದಿಗೇನೇ ಸೃಷ್ಟಿಸ್ಥಿತಿ ಲಯ, ಚೇತನಶಿಕ್ಷೆ ರಕ್ಷೆಗಳನ್ನೂ ನಡೆಸುವನು. ಆಕೆಯೊಂದಿಗೇ ಈತನು ಸರ್ವಕ್ಕೂ ನಿಯನ್ತಾ. ಈ ನಿಯನ್ತೃತ್ವವು ಲೀಲಾವಿಭೂತಿಯಲ್ಲಿ ಮಾತ್ರವೇ ಎಂದು ಭಾವಿಸತಕ್ಕದ್ದಲ್ಲವು. ನಿತ್ಯವಿಭೂತಿಯಲ್ಲೂ ಉಂಟು ಎಂಬ ಭಾವವು ಶ್ರೀ ಯತಿವರ್ಯರಿಂದ ನಿಪುಣತರವಾಗಿ ಉಪಪಾದಿತವು. ಈ ವಿಷಯಗಳೆಲ್ಲಾ ಶ್ರೀ ಯಾಮುನಮುನಿಗಳ ಚತುಶ್ಲೋಕಿಯಲ್ಲೂ, ಶ್ರೀ ಯತಿವರ್ಯರ ಗದ್ಯಗಳಲ್ಲೂ ಶ್ರೀ ಕೂರೇಶರ ಶ್ರೀಸ್ತವದಲ್ಲೂ ಶ್ರೀ ಪರಾಶರಭಟ್ಟರ ಶ್ರೀ ಗುಣರತ್ನಕೋಶದಲ್ಲೂ ಶ್ರೀ ನಂಜೀಯರ ಶ್ರೀ ಸೂಕ್ತಭಾಷ್ಯದಲ್ಲೂ ಶ್ರೀ ದೇಶಿಕರ ಶ್ರೀಸ್ತುತಿಯಲ್ಲೂ ಕಾಣಬಹುದು. ಇವುಗಳಲ್ಲಿ ಕೆಲವುಗಳಿಗೆ ದಾಸನು ಅವರುಗಳ ವ್ಯಾಖ್ಯಾನವನ್ನು ಅನುಸರಿಸಿ ಬರೆದಿರುವನು. ಪರಾಂಬರಿಸಬಹುದು, ವಿಷ್ಣುಪುರಾಣದ ಇಂದ್ರಸ್ತುತಿಯಲ್ಲಿ **"ತ್ವಯಾದೇವಿ ಪರಿತ್ಯಕ್ತಂ ಸಕಲಂ ಭುವನತ್ರಯಂ। ವಿನಷ್ಟಪ್ರಾಯಮಭವತ್ ತ್ವಯೇದಾನೀಂ ಸಮೇಧಿತಂ। ತ್ವಯಾವಲೋಕಿತಾಸ್ಸದ್ಯಃ ಶೀಲಾದ್ಯೈಃ ಸಕಲೈರ್ಗುಣೈಃ । ಧನೈಶ್ವರ್ಯೈಶ್ಚಯುಜ್ಯನ್ತೇ ಪುರುಷಾ ನಿರ್ಗುಣಾ ಅಪಿ"** ಲಕ್ಷ್ಮಿಯ ಅಪಾಂಗ ಸಂಶ್ರಯವಿಲ್ಲದಿದ್ದರೆ ಭುವನತ್ರಯವೂ ನಷ್ಟವಾಗುತ್ತದೆಂದು, ಅಪಾಂಗದಿಂದ ಅವಲೋಕಿಸಲ್ಪಟ್ಟರೆ ಸಕಲ ಗುಣಧನ ಐಶ್ವರ್ಯಗಳಿಂದ ಯುಕ್ತರಾಗುವರೆಂದೂ ಹೇಳಲ್ಪಟ್ಟಿರುತ್ತದೆ, ಈ ವಿಷಯವು

ದಾಸನು ಪರಿವರ್ತಿಸಿರುವ ಶ್ರೀಸೂಕ್ತದ ವ್ಯಾಖ್ಯಾನದ "ಗಂಧದ್ವಾರಾಂ' ಎಂಬ ಶ್ಲೋಕದಲ್ಲಿ ಬಹು ವಿಸ್ತಾರವಾಗಿ ಉಪಪಾದಿಸಲ್ಪಟ್ಟಿರುತ್ತದೆ. ಪರಾಂಬರಿಸಬಹುದು. ಶ್ರೀ ಗುಣರತ್ನ ಕೋಶದಲ್ಲಿ ಶ್ರೀ ಪರಾಶರ ಭಟ್ಟರವರು "**ಜಗತ್ಸಮಸ್ತಂ ಯದಪಾಂಗ ಸಂಶ್ರಯಂ**" ಎಂಬುದನ್ನು ವಿಸ್ತರಿಸಿ "**ಅಪಾಂಗಾಭೂಯಾಂಸೋಯದುಪರಿ ಪರಂಬ್ರಹ್ಮತದಪಿ ಭೂದಮೀಯತ್ರದ್ವಿತ್ರಾಸ್ಸಚಶತಮಖಾದಿಸ್ತ್ರದಥರಾತ್**" ಎಂದು ಹೇಳಿರುತ್ತಾರೆ. ಆಕೆಯ ೨-೩ ಅಪಾಂಗ ನೋಟವು ಬ್ರಹ್ಮರುದ್ರಾದಿಗಳನ್ನಾಗಿ ಮಾಡಿತು ಎಂದು ಹೇಳಲ್ಪಟ್ಟಿತು. ಶ್ರೀ ಭಾರತದಲ್ಲಿ ವ್ಯಾಸನ ಸಂವಾದದಲ್ಲಿ ಭಗವಂತನೇ ಲಕ್ಷ್ಮಿಗೆ ಅಧೀನನೆಂದು ಇಂದ್ರನಿಗೆ ಹೇಳಿರುತ್ತಾರೆ. ಹಾಗೆ ವಿಷ್ಣುಸ್ಮೃತಿಯ ಕೊನೆಯಲ್ಲೂ ಬ್ರಹ್ಮಪುರಾಣದಲ್ಲೂ, ಸಹಸ್ರನಾಮಸ್ತೋತ್ರದಲ್ಲೂ ಭಗವಚ್ಛಾಸ್ತ್ರದಲ್ಲೂ ಹಿರಣ್ಯಗರ್ಭಸಂಕಣ, ಧನದಾದಿ ಸಂಹಿತೆಗಳಲ್ಲೂ ಬ್ರಹ್ಮರುದ್ರೇಂದ್ರಾದಿಗಳೆಲ್ಲಾ ಲಕ್ಷ್ಮಿಗೆ ಅಧೀನನಾದ ವೈಭವವುಳ್ಳವರೆಂದು ಹೇಳಲ್ಪಟ್ಟಿರುತ್ತದೆ.

**ಯದರ್ಥ ಮಂಭೋಧಿರಮನ್ಥಿ** ಇಲ್ಲಿ ಯದರ್ಥಂ ಯಾವ ಲಕ್ಷ್ಮಿಯ ಪ್ರಾಪ್ತಿಗೋಸ್ಕರವಾಗಿ ಸಮುದ್ರವು ಕಡೆಯಲ್ಪಟ್ಟಿತೋ ಎಂಬ ಅರ್ಥವು. ಈ ಉಪಾಖ್ಯಾನವು ಬಹುಸ್ವಾರಸ್ಯವಾಗಿ ಶ್ರೀ ಪರಾಶರ ಮಹರ್ಷಿಯಿಂದ ಶ್ರೀ ವಿಷ್ಣುಪುರಾಣ ಪ್ರಥಮಾಂಶದ ೯ನೇ ಅಧ್ಯಾಯದಲ್ಲಿ ಉಪಪಾದಿತವು. ತನ್ನ ಶಿಷ್ಯರಾದ ಮೈತ್ರೇಯರಿಗೆ ಲಕ್ಷ್ಮೀತತ್ವವನ್ನೆಲ್ಲಾ ಸಮಗ್ರವಾಗಿ ಉಪದೇಶಿಸುತ್ತಾರೆ. ಆ ಉಪದೇಶದ ಸಾರಾಂಶವನ್ನೆಲ್ಲಾ ಶ್ರೀ ಯಾಮುನಮುನಿಗಳು ಮುಂದಿನ ಶ್ಲೋಕದಲ್ಲೂ ಶ್ರೀ ಯತಿವರ್ಯರು "**ಭಗವನ್ನಾರಾಯಣಾ ಭಿಮತಾನುರೂಪ ಸ್ವರೂಪ ರೂಪಗುಣ ವಿಭವೈಶ್ವರ್ಯ ಶೀಲಾದಿ**" ಎಂದಾರಂಭಿಸಿ ಶರಣಾಗತಿ ಗದ್ಯದಲ್ಲಿ ಸಂಗ್ರಹಿಸಿರುತ್ತಾರೆ. ದೂರ್ವಾಸ ಶಾಪಗ್ರಸ್ತನಾದ ಇಂದ್ರನಿಗೆ ಶಾಪವಿಮೋಚನಾರ್ಥವಾಗಿಯೂ ರಾಕ್ಷಸರ ನಾಶಕ್ಕಾಗಿಯೂ ಸಮುದ್ರ ಮಥನವು ಮಾಡಲ್ಪಟ್ಟಿತು. ಆಗ ಸಮುದ್ರದಿಂದ ಲಕ್ಷ್ಮಿಯು ಜನಿಸಿ ಕ್ಷೀರಸಾಗರ ಕನ್ನಿಕೆ ಎಂದೆನಿಸಿ ಸರ್ವೇಶ್ವರನಲ್ಲಿ ಸೇರಿ ಶಕ್ರನು ಪುನಃ ಸಿಂಹಾಸನಗತನಾಗಿ ಆತನನ್ನೂ ಇತರ ದೇವತೆಗಳನ್ನೂ ದಿವ್ಯ ಕಟಾಕ್ಷದಿಂದ ನೋಡಿ ಪುನಃ ಅವರನ್ನು ಸತ್ತ್ವಯುಕ್ತರಾಗಿ ಮಾಡಿ ದೈತ್ಯರನ್ನೆಲ್ಲಾ ಸೋಲಿಸುವ ಹಾಗೆ ಮಾಡಿದರು. **ದಿವ್ಯ ಮಾಲ್ಯಾಂಬರಧರಾ ಸ್ನಾತಾ ಭೂಷಣ ಭೂಷಿತಾ । ಪಶ್ಯತಾಂ ಸರ್ವದೇವಾನಾಂ ಯಯೌವಕ್ಷಸ್ಥಲಂ ಹರೇಃ**" ಎಂಬುದು ಅನುಸಂಧೇಯವು. ಸಮುದ್ರದಿಂದ ಮೇಲಕ್ಕೆ ಬಂದವಳಾಗಿ ದಿವ್ಯಮಾಲೆ, ದಿವ್ಯಪೀತಾಂಬರಗಳನ್ನು ಧರಿಸಿದವಳಾಗಿ ಸ್ನಾನಮಾಡಿ ದಿವ್ಯಭೂಷಣಗಳಿಂದ ಭೂಷಿತಳಾಗಿ ಎಲ್ಲಾ ದೇವತೆಗಳೂ ಅವಳನ್ನು ನೋಡುತ್ತಿರುವಾಗಲೇ ತನ್ನ ಪತಿಯ ವಕ್ಷಸ್ಥಲವನ್ನು ಕುರಿತು ಹೋದಳು ಎಂಬರ್ಥವು.

ಸ್ವವೈಶ್ವರೂಪ್ಯೇಣ ಸದಾನುಭೂತಯಾ
ಪ್ಯ ಪೂರ್ವ ವದ್ವಿಸ್ಮಯ ಮಾದಧಾನಯಾ ।
ಗುಣೇನ ರೂಪೇಣ ವಿಲಾಸಚೇಷ್ಟಿತೈಃ
ಸದಾತವೈವೋಚಿತಯಾ ತವ ಶ್ರಿಯಾ ॥ ೩೮ ॥

---

**ಯದರ್ಥ ಮಂಭೋಧಿ ರಮಂಥ್ಯಬಂಧಿಚ** ಶ್ರೀ ರಾಮಾವತಾರಿ ಯಾದಾಗ ಅರಣ್ಯವಾಸದಲ್ಲಿರುವಾಗ ದುರುಳ ರಾವಣನು ವಂಚಿಸಿ ಸೀತೆಯನ್ನು ಬಲಾತ್ಕರಿಸಿ ಕರೆದುಕೊಂಡು ಹೋಗಿ ಅಶೋಕವನದಲ್ಲಿಟ್ಟಾಗ, **ಯದರ್ಥಂ** ಯಾವಸೀತೆಯನ್ನು ಪುನಃ ಹೊಂದುವುದಕ್ಕಾಗಿ **ಅಂಭೋಧಿಃ ಅಬಂಧಿಚ**–ಸಮುದ್ರವು ಸೇತುವೆಯ ಮೂಲಕ ನಳನಿಂದ ಬಂಧಿಸಲ್ಪಟ್ಟಿತೋ **ತಯಾಸಹಾ ನೀನಂ** ಅಂತಹ ಲಕ್ಷ್ಮಿಯೊಡನೆಯೇ ಇರುವ ; ಶ್ರೀಮದ್ರಾಮಾಯಣದಲ್ಲಿ ಹಾಗೆಯೇ **"ವಿಷಸೇತುರ್ಮಯಾಬದ್ಧಃ ಸಾಗರೇ ಮಕರಾಲಯೇ । ತವಹೇತೋರ್ವಿಶಾಲಾಕ್ಷಿ ನಳಸೇತುಸ್ಸುದುಷ್ಕರಃ** ಶ್ರೀರಾಮಚಂದ್ರ ಪ್ರಭುವು ಸೀತೆಯೊಡನೆ ಪುಷ್ಪಕವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಬರುತ್ತಾ ಇರುವಾಗ ಸೀತೆಗೆ ನಳ ಸೇತುವನ್ನು ತೋರಿಹೇಳಿದ ವಾಕ್ಯವು. ನಿನ್ನ ಉದ್ದಿಶ್ಯವಾಗಿ ಸಾಗರದಲ್ಲಿ ನನ್ನ ಆಜ್ಞೆಯ ಮೇರೆಗೆ ನಳಸೇತುವು ಬಂಧಿಸಲ್ಪಟ್ಟಿತು ಎಂದು ಹೇಳಲ್ಪಟ್ಟಿರುತ್ತದೆ. ಹೀಗೆ ಹೇಳಿರುವುದರಿಂದ **"ನಿತ್ಯೈವೇಷಾ ಜಗನ್ಮಾತಾ ವಿಷ್ಣೋಃ ಶ್ರೀರನಪಾಯಿನೀ"** ಎಂಬಲ್ಲಿ ಹೇಳಿರುವುದಕ್ಕೆ ವಿರುದ್ಧವಾಗಿ ಅವತಾರ ಕಾಲಗಳಲ್ಲಿ ಲಕ್ಷ್ಮೀನಾರಾಯಣರಿಗೆ ನಿತ್ಯಸಂಶ್ಲೇಷವು ತಪ್ಪಿ ವಿಶ್ಲೇಷವುಂಟಾದ ಹಾಗೆ ತೋರಿ ಬರುತ್ತದಲ್ಲಾ ನಿತ್ಯಾನಪಾಯತ್ವಕ್ಕೆ ವಿರುದ್ಧೋಪಪಾದನೆಯು ಹೇಗೆ ? ಎಂದರೆ, ಅವತಾರೋದ್ದೇಶಗಳಿಗನುಗುಣವಾಗಿ ಇವಳೂ ಸಹಧರ್ಮಿಣಿಯಾಗಿ ಸಹಕಾರಿಯಾಗಿ ನಟಿಸುವವಳಾದುದರಿಂದ ಇಬ್ಬರೂ ಸ್ವತಃ ಸಙ್ಕಲ್ಪಿಸಿ ಮಾಡಿಕೊಂಡ ವಿಶ್ಲೇಷವೇ ವಿನಾ ವಾಸ್ತವವಾದ ವಿಶ್ಲೇಷೆಯಲ್ಲವು. ಆದುದರಿಂದ ಸಿದ್ಧಾನ್ತಕ್ಕೆ ವಿರೋಧವೇನೂ ಇಲ್ಲವು. ವಾಸ್ತವವಾದ ವಿಷಯವು. **"ನಚ ಸೀತಾತ್ವಯಾಹೀನಾ ನಚಾಹಮಪಿ ರಾಘವ"** ಎಂಬ ಲಕ್ಷ್ಮಣೋಕ್ತಿಯ ಪ್ರಕಾರ ಜೀವಾತ್ಮನೂ, ಲಕ್ಷ್ಮಿಯೂ ಇಬ್ಬರೂ ಅಪೃಥಕ್ಸಿದ್ಧ ವಿಶೇಷಣವಾದುದರಿಂದ ಭಗವಂತನನ್ನು ತ್ಯಜಿಸಿರಲು ಸಾಧ್ಯವೇ ಇಲ್ಲವು.

**ಅವತಾರಿಕೆಯು**–ಹಿಂದಿನ ಶ್ಲೋಕದಲ್ಲಿ ಲಕ್ಷ್ಮಿಯು ಸ್ವಾಮಿಗೆ ಅಪೃಥಕ್ ಸಿದ್ಧವಿಶೇಷಣವಾಗಿ ತನ್ನ ಪತಿಯೊಂದಿಗೆ ಸಹ ಧರ್ಮಚಾರಿಣಿಯಾಗಿರುವುದರಿಂದ ಸರ್ವಜಗತ್ತಿನ ಸತ್ತಾಸ್ಥಿತಿನಿಯಮನಾದಿಗಳಲ್ಲೂ ಲಕ್ಷ್ಮಿಗೂ ಅನ್ವಯವುಂಟೆಂದು ಸ್ಥಾಪಿಸಿ ಹೇಳಿದರು. ಈ ಶ್ಲೋಕದಲ್ಲಾದರೋ, ಸರ್ವೇಶ್ವರನ, ಸ್ವರೂಪರೂಪಗುಣ ವಿಭವೈಶ್ವರ್ಯಗಳು ಹೇಗೆ ಸರ್ವೋತ್ಕೃಷ್ಟವೋ ಹಾಗೆಯೇ ಲಕ್ಷ್ಮಿಯು ಕೂಡ

ಅವುಗಳಿಗೆ ಅನುಗುಣವಾದ ಸ್ವರೂಪ ರೂಪಗುಣ ವಿಭವೈಶ್ವರ್ಯಗಳಿಂದ ಯುಕ್ತಳೆಂದು ಹೇಳುತ್ತಾರೆ—

**ಅರ್ಥವು-ಸ್ವವೈಶ್ವ ರೂಪ್ಯೇಣ**— ಸರ್ವೇಶ್ವರನಾದ ತನ್ನ, ಸಮಸ್ತವಿಶ್ವವನ್ನೂ ವ್ಯಾಪಿಸಿ, ಅದನ್ನು ತನಗೆ ಶರೀರವಾಗಿ ಮಾಡಿಕೊಂಡು ಅದಕ್ಕೆಲ್ಲಾ ಆತ್ಮಾವಾಗಿರುವ ಸ್ವರೂಪದಿಂದ **ಸದಾನುಭೂತಯಾಪಿ** —ಲಕ್ಷ್ಮಿಯೂ ತನಗೆ ಅಪೃಥಕ್ಸಿದ್ಧ ವಿಶೇಷಣವಾಗಿ, ಆಕೆಯೂ ಸರ್ವ ವಿಶ್ವವನ್ನೂ ವ್ಯಾಪಿಸಿ ಅವುಗಳಿಗೆ ಆತ್ಮಾವಾಗಿರುವುದರಿಂದ ಯಾವಾಗಲೂ ಅವಳನ್ನು ಅನುಭವಿಸುತ್ತಿದ್ದರೂ ಕೂಡ, **ಅಪೂರ್ವವತ್**—ಹೊಸದಾಗಿರುವಹಾಗೆ, ವಿಸ್ಮಯಂ-ತನಗೆ ಆಶ್ಚರ್ಯವನ್ನು, ಸದಾ **ಆದಧಾನಯಾ**-ಯಾವಾಗಲೂ ಬೀರುತ್ತಿರುವಳಾದ ಮತ್ತು ಗುಣೇನ-ಕಲ್ಯಾಣ ಗುಣಗಳಿಂದಲೂ, **ರೂಪೇಣ**—ದಿವ್ಯಮಂಗಳ ವಿಗ್ರಹದಿಂದಲೂ, ವಿಲಾಸ ಚೇಷ್ಟಿತೈಃ—ವಿಲಾಸವೆಂದರೆ ಲೀಲಾವಿಶೇಷಗಳೇನು. **ಚೇಷ್ಟಿತೈಃ**—ಅದ್ಭುತ ವ್ಯಾಪಾರಗಳೇನು ಇವುಗಳಿಂದ ಅಥವಾ ವಿಲಾಸಯುಕ್ತಗಳಾದ. ಲೀಲಾರಸ ಯುಕ್ತಗಳಿಂದ ಅತ್ಯದ್ಭುತ ವ್ಯಾಪಾರಗಳಿಂದ, ಸದಾ-ಯಾವಾಗಲೂ, **ತವೈವ**—ನಿನಗೇನೇ, **ಉಚಿತಯಾ**-ಯೋಗ್ಯಳಾದ, **ತವಶ್ರಿಯಾ**-ನಿನಗೆ ಸಂಪದ್ಭಾಯಕಳಾದ, ಅಥವಾ ನಿನ್ನ ಸ್ವತ್ತಾಗಿ ನನಗೆ ಶೇಷಭೂತಳೆಂದು ಹೇಳಿಕೊಳ್ಳುವ ಲಕ್ಷ್ಮಿಯೊಂದಿಗೆ **ತಯಾಸಹ** ಅಂತಹ ಮಹಾ ಪ್ರಸಿದ್ಧಳಾದ ಪತ್ನಿಯೊಂದಿಗೆ ಇರುವ ಎಂಬುದರೊಂದಿಗೆ ಅನ್ವಯವು—

**ಉಪಪಾದನೆಯು—ಸ್ವವೈಶ್ವ ರೂಪ್ಯೇಣ ಸದಾನುಭೂತಯಾ** ಎಂದು ಹೇಳಿರುವುದರಿಂದ ನಾರಾಯಣನು ಹೇಗೆ ಸರ್ವವಿಶ್ವವನ್ನೂ ಶರೀರವಾಗಿ ಹೊಂದಿ ಎಲ್ಲಕ್ಕೂ ಆತ್ಮಾವೋ ಹಾಗೆಯೇ ಲಕ್ಷ್ಮಿಯೂ ಪತಿಯೊಂದಿಗಿರುವಂತವಳಾಗಿ ಸರ್ವಶರೀರಕಳಾಗಿ ಸರ್ವಕ್ಕೂ ಆತ್ಮಾವಾಗಿದ್ದಾಳೆಂಬ ಶಾಸ್ತ್ರಪ್ರಕ್ರಿಯೆಯು ಬೋಧಿತವು. ಇದರಿಂದ ನಮ್ಮಲ್ಲೇ ಕೆಲವರು ಗುಣತಃ ಮಾತ್ರವೇ ಲಕ್ಷ್ಮಿಗೆ ವ್ಯಾಪ್ತಿಯೇ ವಿನಾ ಸ್ವರೂಪತಃ ವ್ಯಾಪ್ತಿ ಇಲ್ಲವೆಂದು ಹೇಳುವ ವಾದವು ಯಾಮುನ ಮುನಿಗಳ ಅಭಿಪ್ರಾಯಕ್ಕೆ ವಿರೋಧವಾಗಿ ನಿರಸ್ತವು. ಇವರು ಸ್ವರೂಪತಃ ವ್ಯಾಪ್ತಿಯನ್ನು ಏಕೆ ಹೇಳುವುದಿಲ್ಲವೆಂದರೆ, ಹಾಗೆ ಹೇಳಿದರೆ ಲಕ್ಷ್ಮಿಯೂ ವಿಭುವೆಂದು ಒಪ್ಪಿಕ್ಕೊಳ್ಳ ಬೇಕಾಗುತ್ತದೆ. ಅವರ ಅಭಿಪ್ರಾಯವು ಲಕ್ಷ್ಮಿಯು ಜೀವಕೋಟಿಗೆ ಸೇರಿ ಅಣುವೆಂಬುದು. ವಿಷ್ಣು ಪುರಾಣದಲ್ಲಿ ಶ್ರೀ ಪರಾಶರರು ತಮ್ಮ ಶಿಷ್ಯರಿಗೆ ಮಾಡಿರುವ ಉಪದೇಶದಲ್ಲಿ ಲಕ್ಷ್ಮಿಯೂ ನಾರಾಯಣನ ಹಾಗೆ ವಿಭುವಾಗಿ ಎಲ್ಲವನ್ನೂ ಪರಮಾತ್ಮನೊಂದಿಗೆ ವ್ಯಾಪಿಸಿರುತ್ತಾಳೆಂದು ಹೇಳಿರುತ್ತಾರೆ "**ಯಥಾ ಸರ್ವಗತೋವಿಷ್ಣುಃ ತಥೈವೇಯಂ ದ್ವಿಜೋತ್ತಮ** | ಇಲ್ಲಿ ಲಕ್ಷ್ಮಿಗೂ ವಿಷ್ಣುವಿನ ಹಾಗೆ ಸರ್ವಗತತ್ವವುಂಟೆಂಬುದು ಕಂಠೋಕ್ತವು. ಹೀಗೆ ಉಪದೇಶಿಸಿದುದನ್ನು ಮೈತ್ರೇಯರು ಗಮನಿಸಿದರೋ ಇಲ್ಲವೋ ಎಂಬ ಸಂದೇಹದಿಂದ ಇಂದ್ರಸ್ತುತಿ

ಯಲ್ಲಿ ಪ್ರಸಃ **"ತ್ವಯೈತದ್ವಿಷ್ಣುನಾಚಾಂಬ ಜಗದ್ವ್ಯಾಪ್ತಂ ಚರಾಚರಂ"** ಈ ಸರ್ವಚರಾಚರಯುಕ್ತವಾದ ಜಗತ್ತೆಲ್ಲಾ ವಿಷ್ಣು, ಲಕ್ಷ್ಮೀ ಇಬ್ಬರಿಂದಲೂ ಸ್ವರೂಪತಃ ವ್ಯಾಪಿಸಲ್ಪಟ್ಟಿತೆಂದು ಹೇಳಿ ಜ್ಞಾಪಕವನ್ನು ಕೊಟ್ಟಿರುತ್ತಾರೆ. ಈ ಅಭಿಪ್ರಾಯವು ಶ್ರೀ ಸೂಕ್ತದಲ್ಲೂ ವಿಷ್ವಕ್ಸೇನ ಸಂಹಿತೆಯಲ್ಲೂ ಸುವ್ಯಕ್ತವು. ದಾಸನು ಬರೆದಿರುವ ಶ್ರೀ ಸೂಕ್ತದ ಉಪಪಾದನೆಯನ್ನು ಪರಾಂಬರಿಸಿ. ವಿಷ್ವ ಕ್ಸೇನ ಸಂಹಿತಾ ವಾಕ್ಯಗಳು ಯಾವುವೆಂದರೆ :—

**ತಥಾಲಕ್ಷ್ಮ್ಯಾಃ ಸ್ವರೂಪಂಚ ವಕ್ಷ್ಯೇಶೃಣು ಸಮಾಹಿತಃ ।**
**ಗುಣತಶ್ಚ ಸ್ವರೂಪೇಣ ವ್ಯಾಪ್ತಿಸ್ಸಾಧಾರಣೀಮತಾ ॥**
**ಯಥಾಮಯಾಹಿ ಸಾವ್ಯಾಪ್ತಾ ತಯಾವ್ಯಾಪ್ತೋಹಮೀಶ್ವರಃ ।**
**ಯಥಾಮಯಾ ಜಗದ್ವ್ಯಾಪ್ತಂ ಸ್ವರೂಪೇಣ ಸ್ವಭಾವತಃ ।**
**ತಥಾವ್ಯಾಪ್ತಂ ತಯಾಸರ್ವಂ ನಿಯನ್ತ್ರೀಚ ತಥೇಶ್ವರೀ ।**
**ಮಚ್ಛೇಷ ಭೂತಾಸರ್ವೇಷಾಮೀಶ್ವರೀ ವಲ್ಲಭಾಮಮ ॥**

ಇದು ಭಗವದ್ವಾಕ್ಯವು. ತನ್ನ ಹಾಗೆಯೇ ಲಕ್ಷ್ಮಿಯೂ ಸ್ವರೂಪ ಸ್ವಭಾವ ವುಳ್ಳವಳು. ತಾನು ಹೇಗೆ ಎಲ್ಲವನ್ನೂ ವ್ಯಾಪಿಸಿ ಎಲ್ಲಕ್ಕೂ ಆತ್ಮವಾಗಿ ಎಲ್ಲಕ್ಕೂ ನಿಯಾಮಕನೋ ಹಾಗೆಯೇ ಲಕ್ಷ್ಮಿಯೂ ಸಹ ಎಂದು ಹೇಳಲ್ಪಟ್ಟಿರುತ್ತದೆ. ಸರ್ವವೂ ಹೇಗೆ ನನ್ನ ಸ್ವತ್ತಾಗಿ ಸರ್ವವೂ ನನಗೆ ಶೇಷಭೂತವೋ ಹಾಗೆಯೇ ಎಲ್ಲವೂ ಲಕ್ಷ್ಮಿಯ ಸ್ವತ್ತು ಮತ್ತು ಎಲ್ಲವೂ ಆಕೆಗೂ ಶೇಷಭೂತವು. ಗಂಡ ಹೆಂಡ ರಿಗೆ ಅಧೀನವಾದ ವಿಭೂತಿಗೆ **ನವಿಭಾಗಃ** ವಿಭಾಗವಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಅವರ ಸರ್ವವಿಭೂತಿಯಲ್ಲಿ ಅಧಿಕಾರವಿದ್ದರೂ ಕೆಲವು ವಿಭೂತಿಯಲ್ಲಿ ನಾರಾಯಣ ನಿಗೆ ಹೆಚ್ಚುಮಮತೆಯು, ಕೆಲವಲ್ಲಿ ಲಕ್ಷ್ಮಿಗೆ ಮಮತೆಯು, ಆದುದರಿಂದ ಎಲ್ಲಾ ವಿಶ್ವಕ್ಕೂ ಇಬ್ಬರೂ ಈಶ್ವರೇಶ್ವರಿಗಳು. ಮುಂದಿರುವ **ತವಶ್ರಿಯಾ** ಎಂಬ ಪ್ರಯೋಗದಿಂದ ಲಕ್ಷ್ಮಿಯ ಪತಿಶೇಷತ್ವವು ಪಾರಾರ್ಥ್ಯವು "**ಮಚ್ಛೇಷಭೂತಾ ಸರ್ವೇಷಾಂ ಈಶ್ವರೀ ವಲ್ಲಭಾಮಮ**" ಎಂಬ ಪ್ರಮಾಣದಿಂದ ಬೋಧಿತವು. ಶ್ರೀ ಭಾಷ್ಯಕಾರರು ವೈಕುಂಠಗದ್ಯದಲ್ಲಿ **"ಭಗವತಸ್ತತ್ತದವಸ್ಥೋಚಿತ ಪರಿ ಚರ್ಯಾಯಾ ಮಾಜ್ಞಾಪಯನ್ತ್ಯಾ ಶೀಲ ರೂಪಗುಣವಿಲಾಸಾದಿಭಿರಾತ್ಮಾನು ರೂಪಯಾ ಶ್ರಿಯಾ"** ಎಂದು ಅಪ್ಪಣೆ ಕೊಡಿಸಿರುತ್ತಾರೆ. ಆಗಲಿ ರೂಪ ಗುಣಾದಿಗಳು ಅನುರೂಪವಾದವು ಎಂದು ಹೇಳಿದರೆ ಸ್ವರೂಪಬಿಟ್ಟು ಹೋಯಿ ತಲ್ಲಾ ; ಎಂದರೆ ಇದು ರೂಪವಿಷಯವಾದುದರಿಂದ ಸ್ವರೂಪ ಕುರಿತು ಹೇಳ ಲಿಲ್ಲವು. ಆದರೆ ಶರಣಾಗತಿ ಗದ್ಯದಲ್ಲಿ **ಸ್ವರೂಪವನ್ನು** ಸೇರಿಸಿ ಹೇಳಿರುತ್ತಾರೆ.

**ಅಪೂರ್ವವತ್** ಎಂಬ ಪ್ರಯೋಗದಿಂದ ವಿಷ್ಣುವಿನ ಮತ್ತು ಲಕ್ಷ್ಮಿಯ ಸ್ವರೂಪಾದಿಗಳು ಪರಸ್ಪರಾಧೀನವಲ್ಲವು, ಸ್ವತಂತ್ರವಾದುವೆಂಬ "**ಸ್ವರೂಪಂ**

ಸ್ವಾತಂತ್ರ್ಯಂ" ಎಂಬ ಶ್ರೀ ಗುಣ ಶ್ಲೋಕದಲ್ಲಿ ಉಪಪಾದಿಸಲ್ಪಟ್ಟ ಭಾವವನ್ನು ಸೂಚಿಸುತ್ತದೆ. ಪರಮ ಪುರುಷನಿಂದಲೇ ಇವೆಲ್ಲಾ ಬಂದುದಾದರೆ **ವಿಸ್ಮಯ ಮಾದಧಾನೆಯಾ** ಎಂಬಲ್ಲಿ ತೋರುವ ಅದ್ಭುತ ರಸಕ್ಕೆ ಕಾರಣವಿಲ್ಲವಾಗುತ್ತದೆ—

**ಗುಣೇನ ರೂಪೇಣ ವಿಲಾಸ ಚೇಷ್ಟಿತೈಃ ಸದಾತವೈವೋಚಿತಯಾ**

ಎಂದು ಹೇಳಿರುವುದರಿಂದ ಮೇಲೆ ಹೇಳಿದ ಸ್ವರೂಪ ಮಾತ್ರವೇ ಅಲ್ಲದೆ ಕಲ್ಯಾಣ ಗುಣಗಳಲ್ಲೂ ಅವತಾರಗಳ ದಿವ್ಯಮಙ್ಗಳ ವಿಗ್ರಹಗಳಲ್ಲೂ ವಿಲಾಸದಲ್ಲೂ ದಿವ್ಯ ಚೇಷ್ಟಿತಗಳಲ್ಲೂ ಲಕ್ಷ್ಮಿಯು ತನ್ನ ಪತಿಗೆ ಸಮವೆಂಬ ಭಾವವು ಬೋಧಿತವು. ಇದನ್ನೇ ಶ್ರೀಯತಿವರ್ಯರು ಶರಣಾಗತಿ ಗದ್ಯದಲ್ಲಿ "**ಶ್ರೀ ಭಗವನ್ನಾರಾಯಣಾ ಭಿಮತಾನು ರೂಪಸ್ವರೂಪರೂಪ ಗುಣವಿಭವೈಶ್ವರ್ಯ ಶೀಲಾದ್ಯನವಧಿಕಾತಿ ಶಯಾ ಸಂಖ್ಯೇಯ ಕಲ್ಯಾಣಗುಣಗಣಾಂ**'' ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಇವಕ್ಕೆಲ್ಲಾ ಪ್ರಮಾಣವಾಗಿ ಮಹರ್ಷಿವಾಕ್ಯದಲ್ಲಿ "**ತುಲ್ಯ ಶೀಲವಯೋ ವೃತ್ತಾಂ ತುಲ್ಯಾಭಿ ಜನಲಕ್ಷಣಾಂ । ರಾಘವೋರ್ಹತಿವೈದೇಹೀಂ ತಂಚೇಯ ಮಸಿತೇಕ್ಷಣಾ**" ಎಂದು ಹೇಳಿರುವ ಪ್ರಾಜ್ಞನಾದ ಆಂಜನೇಯೋಕ್ತಿ ಇರುತ್ತದೆ. ಗುಣಗಳಲ್ಲಿ ಇಬ್ಬರೂ ಸಮವೆಂಬುದಕ್ಕೆ ನಿದರ್ಶನವಾಗಿ ವಿಭೀಷಣನ ಶರಣಾಗತಿ ಫಲವಾಗಿ ಶ್ರೀರಾಮನಿಂದ ಆತನ ಪರಿಗ್ರಹವನ್ನೂ, ತ್ರಿಜಟಾ ಶರಣಾಗತಿಯ ಫಲವಾಗಿ ಸೀತೆಯಿಂದ ರಾಕ್ಷಸಿಗಳ ರಕ್ಷಣವನ್ನೂ ಇಟ್ಟುಕೊಳ್ಳಬಹುದು ಹಾಗೆಯೇ ಇಬ್ಬರೂ ಸರ್ವಜ್ಞರು, ಸತ್ಯಸಂಕಲ್ಪಯುಕ್ತರು ಸೀತೆಯು ರಾಮಾವತಾರೋದ್ದೇಶವನ್ನು ಆತನ ಸತ್ಯಸಂಕಲ್ಪತೆಯನ್ನೂ ತಿಳಿದವಳಾದುದರಿಂದ ಅಯೋಧ್ಯೆಯಲ್ಲಿ ಸುಖದಿಂದಿರದೆ ಪತಿಯೊಂದಿಗೆ ವನವಾಸವನ್ನೇ ಅಪೇಕ್ಷಿಸಿದಳು. ರಾವಣನು ಅಧರ್ಮಿಯಾಗಿ ತನಗೆ ಪತ್ನಿಯಾಗೆಂದು ಬಲಾತ್ಕರಿಸಿದಾಗ ಸಾಧ್ವಿಯಾದ ಸೀತೆಯು ತನ್ನ ಕಟಾಕ್ಷದಿಂದ ಆತನನ್ನು ದಹಿಸದೆ ಪತಿಯಸಂಕಲ್ಪವಾದ ರಾಕ್ಷಸನಾಶವನ್ನು ತನ್ನ ಸರ್ವಜ್ಞತೆಯಿಂದ ಪರಿಪಾಲಿಸಿದಳು. ಆ ಕಾರಣದಿಂದಲೇ ಆಂಜನೇಯನು ರಾಮನಲ್ಲಿಗೆ ಕರೆದುಕೊಂಡು ಆಗಲೇ ಹೋಗುವೆನೆಂದು ಪ್ರಾರ್ಥಿಸಿದರೂ ತನ್ನ ಸರ್ವಜ್ಞತೆಯ ಮೂಲಕ ಪತಿಯ ಇಂಗಿತವನ್ನು ಅರಿತವಳಾದ ಪ್ರಯುಕ್ತ ಲೋಕವು ಅರಾಕ್ಷಸವಾಗಿ ಕ್ಷೇಮವನ್ನು ಹೊಂದಲೆಂದು ಆಂಜನೇಯನ ಸಲಹೆಗೆ ಒಪ್ಪಲಿಲ್ಲವು. ಇಬ್ಬರೂ ಶರಣಾಗತರ ರಕ್ಷಣೆಯಲ್ಲಿ ನಿರತರು. ಕಾಕ, ವಿಭೀಷಣ, ದಂಡಕಾರಣ್ಯ ಮಹರ್ಷಿಗಳು, ಶ್ರೀರಾಮನಲ್ಲಿ ಮಾಡಿದ ಶರಣಾಗತಿಯಿಂದ ರಕ್ಷಿಸಲ್ಪಟ್ಟರು. ಹಾಗೆಯೇ ಅವತಾರಗಳಲ್ಲೂ ದಿವ್ಯಮಂಗಳ ವಿಗ್ರಹದಲ್ಲಿ ಸಮತೆಯುಂಟೆಂದು ಮಹರ್ಷಿಯು "**ರಾಘವತ್ವೇ ಭವೇತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ । ಅನ್ಯೇಷು ಚಾವತಾರೇಷು ವಿಷ್ಣೋ ರೇಷಾನಪಾಯಿನೀ। ದೈವತ್ವೇದೇವ ದೇಹೇಯಂ ಮನುಷ್ಯತ್ವೇ ಚ ಮಾನುಷೀ** ಎಂಬ ವಾಕ್ಯಗಳಿಂದ ಉಪದೇಶಿಸಿರುತ್ತಾರೆ. ಈ ಅಭಿಪ್ರಾಯ

ಗಳನ್ನೇ ಶ್ರೀ ಯಾಮುನ ಮುನಿಗಳು ಚತುಶ್ಲೋಕಿಯಲ್ಲಿ ನಾಲ್ಕನೆಯ ಶ್ಲೋಕದಲ್ಲಿ ಉಪಪಾದಿಸಿರುತ್ತಾರೆ. ವಿಲಾಸದಲ್ಲೂ ಇಬ್ಬರೂ ಸಮರು. ಇಬ್ಬರೂ ಜಗತ್ತನ್ನು ಮೋಹಗೊಳಿಸುವರು. "**ಚಂದ್ರಕಾನ್ತಾನನಂ ರಾಮಮತೀವ ಪ್ರಿಯದರ್ಶನಂ । ರೂಪೌದಾರ್ಯಗುಣೈಃ ಪುಂಸಾಂ ದೃಷ್ಟಿಚಿತ್ತಾಪಹಾರಿಣಂ ।**" ಎಂದು ಶ್ರೀರಾಮಚಂದ್ರಪ್ರಭುವು ವರ್ಣಿಸಲ್ಪಟ್ಟಿರುತ್ತಾನೆ. ಶೂರ್ಪಣಖೆಯು ಶ್ರೀರಾಮ ಲಕ್ಷ್ಮಣರ ವಿಲಾಸ ಲಾವಣ್ಯಗಳಿಗೆ ಬೆರಗಾಗಿಯೂ, ಗೋಪಿಕಾಸ್ತ್ರೀಯರು ಶ್ರೀಕೃಷ್ಣ ಭಗವಾನರವರ ವಿಲಾಸಕ್ಕೆ ಮೋಹಿತರಾಗಿ ಸಾಕ್ಷಾನ್ಮನ್ಮಥ ಮನ್ಮಥನನ್ನು ಸದಾ ನೋಡುತ್ತಿರಬೇಕೆಂಬ ಆಶಯದಿಂದ ಕೂಡಿದ್ದರು.

ಚೇಷ್ಟಿತೆಗಳಲ್ಲೂ ಇಬ್ಬರೂ ಸಮರು. ಮಹರ್ಷಿಯು ಹೇಳಿರುವ ಹಾಗೆ ಲಕ್ಷ್ಮಿಯು ಸಹಧರ್ಮಚರಿಯಾಗಿ ಸ್ವಾಮಿಯ ಸೃಷ್ಟಿಸ್ಥಿತಿ ನಿಯಮನಲಯಾದಿಗಳಲ್ಲೂ ಮತ್ತು ಅವತಾರಕಾಲದ ದಿವ್ಯಚೇಷ್ಟಿತಗಳಲ್ಲೂ ಸಹಧಮಚಾರಿಣಿಯು. ಹೀಗೆ ಎಲ್ಲಾ ವಿಷಯಗಳಲ್ಲೂ ಪತಿಗೆ ಅನುಗುಣವಾದವಳೆಂಬ ಭಾವವು. ರಾಕ್ಷಸ ನಿರ್ಮೂಲಕ್ಕೆ ಸಹಾಯಕಳಾಗಿ ಸೀತೆಯು ಪತಿಯೊಂದಿಗೆ ವನವಾಸಕ್ಕೆ ಮುಂದಾಳಾಗಿ "**ಅಗ್ರತಸ್ತೇ ಗಮಿಷ್ಯಾಮಿ**" ಎಂದು ಹೇಳಿಕೊಂಡು ಹೊರಟಳು. ದುರುಳನಾದ ಶಿಶುಪಾಲನ ವಧೆಗೆ ಕಾರಣಭೂತಳಾಗುವುದಕ್ಕಾಗಿ ಆತನನ್ನು ತ್ಯಜಿಸಿ ಶ್ರೀಕೃಷ್ಣನಿಗೆ ಪತ್ರವನ್ನು ಬರೆದು ಅತನನ್ನೇ ಪತಿಯಾಗಿ ವರಿಸಿದಳು. ಹೀಗೆ ದಿವ್ಯಚೇಷ್ಟಿತಗಳಲ್ಲೂ ಸಮರಾದುದರಿಂದ **ವಿಲಾಸಚೇಷ್ಟಿತೈಃ ಸದಾ ತನ್ಮೈವೋಚಿತಯಾ** ಎಂದು ಹೇಳಲ್ಪಟ್ಟಿತು. ಶ್ರೀ ಶುಕರೂ ಲಕ್ಷ್ಮೀ ಸ್ತೋತ್ರದಲ್ಲಿ ಈ ಅಭಿಪ್ರಾಯಗಳನ್ನೇ ಸಮರ್ಥಿಸಿರುತ್ತಾರೆ. (ಭ.ಗೀ. 2534ನೆಯ ಪುಟ ನೋಡಿ.)

ಈ ಶ್ಲೋಕದಲ್ಲಿರುವ ಪದಗಳೆಲ್ಲಾ ತೃತೀಯಾನ್ತಗಳು. ಆದುದರಿಂದ ಮುಂದಿನ ಶ್ಲೋಕದಲ್ಲಿರುವ **ತಯಾ** ಎಂಬ ಆದಿ ಪದದೊಂದಿಗೆ ಅನ್ವಯಿಸತಕ್ಕದ್ದಾಗಿರುತ್ತದೆ. ಹೀಗೆ ಈ ಒಂದು ಶ್ಲೋಕದಿಂದಲೇ ಲಕ್ಷ್ಮೀತತ್ತ್ವವನ್ನೆಲ್ಲಾ ನಿರೂಪಣ ಮಾಡಿ "ಸ್ವರೂಪರೂಪ ಗುಣವಿಭವೈಶ್ವರ್ಯ"ದಲ್ಲೆಲ್ಲಾ ನಾರಾಯಣನಿಗೂ ಯಾವಾಗಲೂ ಅಪೃಥಕ್ ಸಿದ್ಧವಿಶೇಷಣವನ್ನೂ, ಅನುಗುಣವಾದ ಸಾಮ್ಯವನ್ನೂ ಉಪದೇಶಿಸಿರುತ್ತಾರೆ. ವಿಭೂತಿ ವಿಷಯವು ಈ ಶ್ಲೋಕದಲ್ಲಿ ಹೇಳಲ್ಪಡಲಿಲ್ಲವಲ್ಲವೇ ಎಂದರೆ ಮಿಕ್ಕ ಸ್ವರೂಪಗುಣ ಮೊದಲಾದವುಗಳು ಸ್ವಾಮಿಗೆ ಅನುರೂಪವಾಗಿ ಉಚಿತವೆಂದು ಹೇಳಿದ ನಂತರ ಉಪಲಕ್ಷಣರೂಪದಲ್ಲಿ ಹೇಳಲ್ಪಟ್ಟವು ಎಂದು ಭಾವಿಸಬಹುದು. "**ಸ್ವನೈಶ್ವರೂಪ್ಯೇಣ ಸದಾನುಭೂತಯಾ**" ಎಂಬಲ್ಲಿ ಹೇಳಲ್ಪಟ್ಟಿತೆಂದಾಗಲಿ ಭಾವಿಸಬಹುದು. ಶ್ರೀ ಪರಾಶರರು ಈ ಅಭಿಪ್ರಾಯವನ್ನೇ "**ದೇವತಿರ್ಯಕ್ ಮನುಷ್ಯೇಷು ಪುನ್ನಾಮಾ ಭಗವಾನ್ ಹರಿಃ। ಸ್ತ್ರೀನಾಮ್ನೀ ಶ್ರೀಶ್ಚ ವಿಜ್ಞೇಯಾನಾನಯೋರ್ವಿದ್ಯತೇಪರಂ**" ಎಂದು ಮುಗಿಸಿ ಲಕ್ಷ್ಮೀನಾರಾಯಣರಿಬ್ಬರೂ ಎಲ್ಲಾ ವಿಭೂತಿಗಳಲ್ಲೂ ನಿಯಾಮಕರೆಂದೂ ಪುನ್ನಾಮ

**ತಯಾಸಹಾಸೀನಮನನ್ತ ಭೋಗಿನಿ**
**ಪ್ರಕೃಷ್ಟವಿಜ್ಞಾನ ಬಲೈಕಧಾಮಿನಿ ।**
**ಫಣಾಮಣಿವ್ರಾತ ಮಯೂಖಮಂಡಲ**
**ಪ್ರಕಾಶಮಾನೋ ದರದಿವ್ಯಧಾಮನಿ ॥ ೩೯ ॥**

ವಿರುವವುಗಳಿಗೆಲ್ಲಾ ನಾರಾಯಣನೂ ಸ್ತ್ರೀನಾಮವಿರುವುಗಳಿಗೆಲ್ಲಾ ಲಕ್ಷ್ಮಿಯು ನಿಯಾಮಕತ್ವವನ್ನು ವಹಿಸಿರುತ್ತಾರೆಂದೂ ತಿಳಿಸಿರುತ್ತಾರೆ.

**ಅವತಾರಿಕೆಯು** ಹಿಂದೆ ಸರ್ವಲೋಕನಿಯಮನತ್ವ, ಸರ್ವವ್ಯಾಪ್ತಿ, ಕಲ್ಯಾಣಗುಣಾಕರತ್ವ, ನಿತ್ಯಾನಪಾಯಿತ್ವ, ಪತಿಪಾರಾರ್ಥ್ಯದೊಂದಿಗೆ ಚೇತನ ಉಪಾಯತ್ವವು ಬೋಧಿತವು. ಈ ಶ್ಲೋಕದಲ್ಲಿ ಉಪೇಯತ್ವದಲ್ಲೂ ಎಂದರೆ ಪ್ರಾಪ್ಯದಲ್ಲೂ ಲಕ್ಷ್ಮೀವಿಶಿಷ್ಟತೆಯನ್ನೂ ಆದಿಶೇಷಪರ್ಯಂಕದಲ್ಲಿ ಬಿಜಮಾಡಿಸಿರುವುದನ್ನೂ ಉಪದೇಶಿಸುತ್ತಾರೆ. ಹೀಗೆ ಲಕ್ಷ್ಮಿಯೊಂದಿಗೇ ದಿವ್ಯವೈಕುಂಠದಲ್ಲಿರುವಾಗ ನಿತ್ಯಸೂರಿಗಳಿಂದ ಸೇವಿತನೆಂದು ಹೇಳಲು ಹೊರಟು ಸಹಸ್ರಹೆಡೆಗಳಿಂದ ಕೂಡಿದ ಅನನ್ತಪರ್ಯಂಕದಲ್ಲಿ ಬಿಜಮಾಡಿರುವುದನ್ನು ವರ್ಣಿಸುತ್ತಾರೆ.

**ಅರ್ಥ ಪ್ರಕೃಷ್ಟ ವಿಜ್ಞಾನ ಬಲೈಕಧಾಮಿನಿ, ಪ್ರಕೃಷ್ಟ**-ಸರ್ವೋತ್ಕೃಷ್ಟವಾದ, **ವಿಜ್ಞಾನ**-ಸರ್ವಜ್ಞತೆ, **ಬಲ**-ಶ್ರಮಪ್ರಸಂಗರಹಿತವಾದ ಸಾಮರ್ಥ್ಯಗಳಿಗೆ, **ಏಕಧಾಮಿನಿ**--ಮುಖ್ಯಾಶ್ರಯವಾಗಿರುವ, **ಫಣಾಮಣಿವ್ರಾತ**--ಅನೇಕ ಹೆಡೆಗಳಲ್ಲೂ ಇರುವ ರತ್ನಸಮೂಹಗಳ **ಮಯೂಖ**-ಕಿರಣಗಳ, **ಮಂಡಲ**-ಸಮೂಹದಿಂದ, **ಪ್ರಕಾಶಮಾನ**-ಪ್ರಕಾಶಿಸಲ್ಪಟ್ಟ, **ಉದರಧಾಮನಿ**—ಮಧ್ಯಭಾಗವನ್ನು ಹೊಂದಿದ, ಸ್ವಯಂ ಪ್ರಕಾಶವಾಗಿ ತೇಜೋಮಯವಾದ ದಿವ್ಯವೈಕುಂಠವುಳ್ಳ, **ಅನನ್ತಭೋಗಿನಿ**—ಅನಂತನೆಂಬ ಹೆಸರುಳ್ಳ ಸರ್ಪದಲ್ಲಿ **ತಯಾಸಹ**— ಮೇಲೆ ಹೇಳಲ್ಪಟ್ಟ, ಭಗವನ್ತನಿಗೆ ಅನುರೂಪವಾದ ಸ್ವರೂಪರೂಪಗುಣ ವಿಭವೈಶ್ವರ್ಯಾದಿಗಳನ್ನುಳ್ಳ, ಲಕ್ಷ್ಮಿಯೊಂದಿಗೆ **ಆಸೀನಂ**—ಬಿಜಮಾಡಿಸಿರುವ, **ಭವನ್ತಂ** ಎಂದು ೪೭ ನೆಯ ಶ್ಲೋಕದಲ್ಲಿರುವುದರೊಡನೆ ಅನ್ವಯವು.

**ಉಪಪಾದನೆಯು**--ದಿವ್ಯವೈಕುಂಠದಲ್ಲಿರುವ ವಾಸುದೇವ ರೂಪದಲ್ಲಿರುವ ಪರರೂಪ ವರ್ಣನೆಯ ಪ್ರಕರಣವು. ಹಿಂದೆ ಪ್ರಾಪ್ಯದೆಶೆಯಲ್ಲಿಯೂ ಪ್ರಾಪಕ ದೆಶೆಯಲ್ಲೂ ಲಕ್ಷ್ಮಿಯೊಂದಿಗೇನೇ ಇರುತ್ತಾರೆಂದು ಹೇಳಿ ಅನನ್ತನೆಂಬ ಸರ್ಪದಮೇಲೆ ಲಕ್ಷ್ಮಿಯೊಂದಿಗೆ ಬಿಜಮಾಡಿಸಿರುತ್ತಾರೆಂದು ಹೇಳುತ್ತಾರೆ. ದ್ವಯಮನ್ತ್ರಾರ್ಥವು.

**ತಯಾಸಹ** ಎಂಬ ಪ್ರಯೋಗವು ಲಕ್ಷ್ಮಿಯು ನಿತ್ಯಾನಪಾಯಿನಿಯಾಗಿ, ಅಪೃಥಕ್ಸಿದ್ಧ ವಿಶೇಷವಾಗಿ ಒಟ್ಟಿಗೇ ಪತಿಯೊಂದಿಗೇನೇ ಇರುತ್ತಾಳೆಂಬುದು ಬೋಧಿತವು. ಮೋಕ್ಷಪ್ರದತ್ವವು ಪತಿಯೊಂದಿಗೆ ಕೊಡುವ ಶಕ್ತಿಯುಂಟೆಂಬುದೂ

ಸೂಚಿತವು. ಏಕೆಂದರೆ ಇಬ್ಬರೂ ಪರಸ್ಪರ ಇಂಗಿತಜ್ಞರು. "**ಅಸ್ಯಾ ದೇವ್ಯಾ ಮನಸ್ತಸ್ಮಿನ್ ತಸ್ಯ ಚಾಸ್ಯಾಂ ಪ್ರತಿಷ್ಠಿತಮ್**" ಎಂಬ ಪ್ರಾಜ್ಞನಾದ ಆಂಜನೇಯೋಕ್ತಿಯೂ ಸಹ ಇಲ್ಲಿ ಅನುಸಂಧೇಯವು. ಪರಸ್ಪರ ಇಂಗಿತಜ್ಞರಾದುದರಿಂದ ಏನೊಂದೂ ವಿಘಾತವಿಲ್ಲದೆ ಸಮರಸದಿಂದ ನಮ್ಮ ಉಜ್ಜೀವನಾರ್ಥವಾಗಿ ಕಂಕಣಬದ್ಧರೆಂಬುದು ತೋರಿಬರುತ್ತದೆ. "**ವೈಕುಂಠೇತು ಪರೇಲೋಕೇ ಶ್ರಿಯಾ ಸಾರ್ಧಂ ಜಗತ್ಪತಿಃ। ಆಸ್ತೇ ವಿಷ್ಣುರಚಿನ್ತ್ಯಾತ್ಮಾ ಭಕ್ತೈರ್ಭಾಗವತೈಃ ಸಹ**" ಎಂಬ ಪುರಾಣೋಕ್ತಿಯಲ್ಲಿರುವುದನ್ನೇ ಇಲ್ಲಿ ಉಪಪಾದಿಸಿರುವ ಪ್ರಕರಣವು. ಶ್ರೀ ಯತಿವರ್ಯರು ತಾವು ಬರೆದಿರುವ ಶ್ರೀ ವೈಕುಂಠಗದ್ಯದಲ್ಲಿ, ಶ್ರೀ ಯಾಮುನ ಮುನಿಗಳ ಈ ಪರರೂಪವರ್ಣನೆಗಳನ್ನು ಏನೊಂದೂ ವ್ಯತ್ಯಾಸವಿಲ್ಲದೆ ಉಪಯೋಗಿಸಿರುತ್ತಾರೆ. ಅವಲೋಕಿಸಬಹುದು. ಇಲ್ಲಿರುವ **ತಯಾಸಹ** ಎಂಬುದನ್ನು ವರ್ಣಿಸಿ ಬರೆದಿರುತ್ತಾರೆ. ಏನೆಂದರೆ, "**ಮಹತಿ ದಿವ್ಯಯೋಗ ಪರ್ಯಙ್ಕೇ ಅನನ್ತಭೋಗಿನಿ ಶ್ರೀಮದ್ವೈಕುಂಠೈಶ್ವರ್ಯಾದಿ ದಿವ್ಯಲೋಕಮಾತ್ಮಕಾನ್ತ್ಯಾ ವಿಶ್ವಮಾಪ್ಯಾಯಯನ್ತ್ಯಾ ಶೇಷಶೇಷಾಶನಾದಿ ಸರ್ವಂ ಪರಿಜನಂ ತತ್ತದವಸ್ಥೋಚಿತ ಪರಿಚರ್ಯಾಯಾ ಮಾಜ್ಞಾಪಯನ್ತ್ಯಾ ಶೀಲ ರೂಪಗುಣ ವಿಲಾಸಾದಿಭಿರಾತ್ಮಾನು ರೂಪಯಾ ಶ್ರಿಯಾಸಹಾಸೀನಂ**" ಅನನ್ತನೆಂಬ ಸರ್ಪದಮೇಲೆ ಲಕ್ಷ್ಮಿಯೊಂದಿಗೆ ಬಿಜಮಾಡಿಸಿರುತ್ತಾನೆಂದೂ ಲಕ್ಷ್ಮಿಯೂ ಅಲ್ಲಿರುವ ಕೈಂಕರ್ಯಮಾಡುವ ನಿತ್ಯಮುಕ್ತರಿಗೆ ಉಚಿತವಾದ ಕೈಂಕರ್ಯಗಳಲ್ಲಿ ಆಜ್ಞಾಪಿಸುತ್ತಿರುವಳೆಂದೂ ಆಕೆಯು ಪರಮ ಪುರುಷನಿಗೆ ಅನುರೂಪವಾದ ಶೀಲ, ರೂಪ, ಗುಣ, ವಿಲಾಸಾದಿಗಳುಳ್ಳವಳೆಂದೂ ಹೇಳಲ್ಪಟ್ಟಿರುತ್ತವೆ. ಇಷ್ಟು ಅರ್ಥಗಳೂ **ತಯಾಸಹ** ಎಂಬ ಪ್ರಯೋಗದಿಂದ ಬೋಧಿತವು. **ತಯಾಸಹ** ಎಂಬ ತೃತೀಯೆಯಿಂದ ಪರಮಾತ್ಮ ಪ್ರಾಧಾನ್ಯವೂ ಲಕ್ಷ್ಮಿಯ ಪರಮಾತ್ಮನಿಗೆ ಶೇಷಭಾವವೂ ಬೋಧಿತವು.

ಆಸೀನಂ ಎಂಬುದರಿಂದ "**ಸಹಸ್ರಸ್ಥೂಣೇ ವಿತತೇ ದೃಢಉಗ್ರೇಯತ್ರ ದೇವಾನಾಂ ಅಧಿದೇವ ಆಸ್ತೇ**" ಸಹಸ್ರ ಕಂಬಗಳಿರುವ ಮಣ್ಟಪದಲ್ಲಿ ನಿತ್ಯಸೂರಿಗಳೂ ಸ್ವಾಮಿಯಾದ ಪರಮಪುರುಷನಿರುವನೋ ಎಂಬ ತವಲ್ಕಾರಸ್ಮೃತಿಯ ಅರ್ಥವು ಬೋಧಿತವು. "**ಸರ್ವಾತ್ಮ ಸಾಧಾರಣನಾಥ ಗೋಷ್ಠೀ ಪುರೇಪಿ ದುಷ್ಪೂರ ಮಹಾವಕಾಶಮ್ । ಆಸ್ಥಾನ ಮಾನನ್ದಮಯಂ ಸಹಸ್ರ ಸ್ಥೂಣಾದಿ ನಾಮ್ನಾತಮವಾಪ್ನುವಾನಿ**" ಎಂಬುದೂ ಅನುಸಂಧೇಯವು. ಎಲ್ಲಾ ಜೀವಾತ್ಮರುಗಳಿಗೂ ಸಮವಾದುದಾಗಿರುವ ಭಗವನ್ತನ ಸಭೆಯಲ್ಲೂ ಕೂಡ ಎಂದಿಗೂ ತುಂಬಿಹೋಗದ ಹಾಗೆ ಸ್ಥಳವುಳ್ಳ ಆನನ್ದಮಯವೆಂಬ ಸಹಸ್ರ ಕಂಭಗಳುಳ್ಳ ಮಂಟಪವನ್ನು ನಾನು ಹೋಗಿ ಸೇರುವೆನು ಎಂಬುದು ಅರ್ಥವು.

**ಅನಂತನೆಂಬ** ಈ ಸರ್ಪರೂಪನಿಗೆ ಏಕೆ ಹೆಸರೆಂದರೆ-**ಗನ್ಧರ್ವಾಪ್ಸರ ಸಸ್ಸಿದ್ಧಾಸ್ಸಕಿನ್ನರ ಮಹೋರಗಾಃ । ನಾನ್ತಂಗುಣಾನಾಂಗಚ್ಛನ್ತಿ ತೇನಾ ನನ್ತೋಯಮುಚ್ಯತೇ ॥**" ಗಂಧರ್ವರೂ ಅಪ್ಸರಸ್ಸುಗಳೂ ಸಿದ್ಧರೂ ಮೊದಲಾದವರೆಲ್ಲಾ ಈತನ ಕಲ್ಯಾಣಗುಣಗಳ ಅಂತವನ್ನು ತಿಳಿಯಲಾರದುದರಿಂದ ಅನನ್ತವೆಂದು ಈ ದಿವ್ಯಸೂರಿಗೆ ಹೆಸರೆಂದು ಹೇಳಲ್ಪಟ್ಟಿರುವುದು. "ಸತ್ಯಂಜ್ಞಾನ ಮನನ್ತಂಬ್ರಹ್ಮ" ಎಂಬ ಸ್ವರೂಪಬೋಧಕ ವಾಕ್ಯದಲ್ಲಿ ಅನನ್ತ ಶಬ್ದಕ್ಕೆ ಅರ್ಥ ಹೇಗೆಂದರೆ ದೇಶ ಕಾಲ ವಸ್ತು ಪರಿಚ್ಛೇದರಹಿತನೆಂಬ ಅರ್ಥವು ಎಂದರೆ. ಎಲ್ಲಾ ದೇಶ ಕಾಲ ವಸ್ತುಗಳಲ್ಲೂ ಇರುವವನೆಂಬರ್ಥವು. **ಪ್ರಕೃಷ್ಟವಿಜ್ಞಾನ ಬಲೈಕ ಧಾಮನಿ.** ಸರ್ವೋತ್ಕೃಷ್ಟವಾದ ಷಡ್ಗುಣಗಳಲ್ಲಿ ಎರಡಾದ ಜ್ಞಾನ ಬಲಗಳಿಗೆ ಸಂಕರ್ಷಣ ವ್ಯೂಹಾವತಾರ ಮುಖ್ಯಾಶ್ರಯವಾದುದು; ಅಥವಾ ನಿತ್ಯಸೂರಿಯಾದ ಅನನ್ತನಲ್ಲೇ ಈ ಗುಣಗಳಿವೆಯೆಂದು ಹಾಗೆಯೆ ಹೇಳಬಹುದು.

**ಫಣಾಮಣಿವ್ರಾತ** ಎಂಬಲ್ಲಿರುವ ವ್ರಾತ ಶಬ್ದದಿಂದ ಅನನ್ತನಿಗೆ ಸಹಸ್ರ ಹೆಡೆಗಳೆಂದೂ ಆ ಒಂದೊಂದು ಹೆಡೆಯಲ್ಲೂ ಒಂದೊಂದು ರತ್ನವೆಂಬುದೂ ಹೇಳಲ್ಪಟ್ಟಿತು. ಈ ರತ್ನಗಳ **ಮಯೂಖಮಂಡಲ** ದಿವ್ಯತೇಜಸ್ಸಿನಿಂದ ದಿವ್ಯ ವೈಕುಂಠವೆಲ್ಲಾ ಪ್ರಕಾಶಿಸಲ್ಪಟ್ಟಿತು ಎಂಬ ಭಾವವು. ಸ್ವಾಮಿಯ ದಿವ್ಯಮಂಗಳ ವಿಗ್ರಹವೇ ದಿವ್ಯ ತೇಜೋಮಯವು. ಅವಕ್ಕೆ ಸಹಸ್ರರತ್ನಗಳ ದೀಪ್ತಿಯೂ ಸೇರಿದನಂತರ ಹೇಳತಕ್ಕದ್ದೇನು? ಇಂತಹ ತೇಜೋಮಯ ವೈಕುಂಠದಲ್ಲಿ ಅನನ್ತನ ರತ್ನತೇಜಸ್ಸುಗಳಿಂದ ಪ್ರಕಾಶಮಾನವಾದ ದಿವ್ಯಪೀಠದಲ್ಲಿ ಸಾವಿರಸ್ತಂಭಗಳಿಂದ ಶೋಭಿಸುವ ದಿವ್ಯಮಣ್ಟಪದಲ್ಲಿ ತನಗೆ ಅನುರೂಪಳಾಗಿಯೂ ಲೇಪಳಾಗಿಯೂ ಇರುವ ಲಕ್ಷ್ಮಿಯಿಂದ ಕೂಡಿ ನಿತ್ಯಮುಕ್ತರುಗಳಿಂದ ಸೇವಿಸಲ್ಪಡುವ '**ಭವನ್ತಂ**' ಎಂಬುದರೊಂದಿಗೆ ಅನ್ವಯವು. ಈ ಕೊನೆಯ **ಧಾಮ** ಶಬ್ದದಿಂದ ಪರವಾಸುದೇವ ರೂಪಿಯಾದ, ಪ್ರಾಪ್ಯನಾದ, ಶ್ರೀಯಃಪತಿಯ ಅಪ್ರಾಕೃತವಾದ, ನಿತ್ಯವಾದ, ದಿವ್ಯವಾದ ವೈಕುಂಠವೆಂದು ಕರೆಯಲ್ಪಡುವ ಭಗವದ್ವಿಮಾನವು ಹೇಳಲ್ಪಟ್ಟಿತು. **"ತದ್ವಿಷ್ಣೋಃ ಪರಮಂಪದಂ ಸದಾಪಶ್ಯನ್ತಿ ಸೂರಯಃ। ದಿವೀವ ಚಕ್ಷುರಾತತಂ। ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಃ ಸಮಿಂಧತೇ ವಿಷ್ಣೋರ್ಯತ್ಪರಮಂಪದಂ ।"** ಅನೇಕಶ್ರುತಿ ಪುರಾಣೇತಿಹಾಸಗಳಲ್ಲಿ ದಿವ್ಯ ವೈಕುಂಠ ಲೋಕವೊಂದುಂಟು, (ನಿತ್ಯವಿಭೂತಿ) ಎಂದು ಹೇಳಿದ್ದರೂ ಇದೆಲ್ಲಾ ಕಲ್ಪನೆ ಎಂದು ಕೆಲವರು ಹೇಳುವರು. ಸರ್ವೇಶ್ವರ ಶಬ್ದವು ಸಾರ್ಥಕ್ಯವನ್ನು ಹೊಂದಬೇಕಾದರೆ ವಿಭೂತಿಯು ಇದ್ದೇ ಇರಬೇಕು. **"ತ್ರಿಪಾದಸ್ಯಾಮೃತಂದಿವಿ"** ಎಂದು ಪುರುಷಸೂಕ್ತ ವಚನವಿರುತ್ತದೆ. ಪಾದ್ಮೋತ್ತರ ಪುರಾಣದಲ್ಲಿ **"ಭೋಗಾರ್ಥಂ ಪರಮಂವ್ಯೋಮಲೀಲಾರ್ಥಮಖಿಲಂ ಜಗತ್। ಭೋಗ ಕ್ರೀಡತಯಾ ವಿಷ್ಣೋರ್ವಿಭೂತಿದ್ವಯ ಸಂಸ್ಥಿತಿಃ"** (೫-೯) ನಿತ್ಯವಿಭೂತಿ

**ನಿವಾಸ ಶಯ್ಯಾಸನಪಾದುಕಾಂಶುಕೋ-**
**ಪಧಾನ ವರ್ಷಾತಪವಾರಣಾದಿಭಿಃ ।**
**ಶರೀರಭೇದೈ ಸ್ತವ ಶೇಷತಾಂಗತೈಃ**
**ಯಥೋಚಿತಂ ಶೇಷಇತೀರ್ಯ ತೇಜನೈಃ ॥ ೪೦ ॥**

---

ಭೋಗಕ್ಕಾಗಿಯೂ, ಸಮಸ್ತ ಜಗತ್ತೂ ಲೀಲೆಗಾಗಿಯೂ ಎರಡು ವಿಭೂತಿಗಳೆಂದು ಹೇಳಲ್ಪಟ್ಟಿರುತ್ತದೆ.

**ಅವತಾರಿಕೆಯು** ಪ್ರಾಪ್ಯ ದೆಸೆಯಲ್ಲಿ ಶ್ರೀಮನ್ನಾರಾಯಣನು ಅನಂತ ಗರುಡಾದಿ ನಿತ್ಯಸೂರಿಗಳಿಂದ ಸೇವಿತನಾಗಿರುವನೆಂದು ಹೇಳಲುಪಕ್ರಮಿಸಿ ಹಿಂದಿನ ಶ್ಲೋಕದಲ್ಲಿ ಅನನ್ತನ ಕೈಂಕರ್ಯವನ್ನು ಪಪಾದಿಸಿ ಆತನು ಶೇಷನೆಂದು ವ್ಯವಹರಿಸಲ್ಪಡುವುದಕ್ಕೆ ಕಾರಣವನ್ನು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಅನನ್ತನಿಂದ ಸ್ವಾಮಿ ಗುಂಟಾಗುವ ಅನನ್ತ ಕೈಂಕರ್ಯಗಳನ್ನು ಮನಸ್ಸಿನಲ್ಲಿಟ್ಟು ಅದನ್ನು ಅನುಭವಿಸುವವರಾಗಿ ಹೀಗೆ ಅನನ್ತನು ಯಾವಾಗಲೂ ಸ್ವಾಮಿಯ ಕೈಂಕರ್ಯಗಳನ್ನೆಸಗುತ್ತಾ ಆತನ ಪ್ರಯೋಜನಕ್ಕಾಗಿಯೇ ತನ್ನ ಸ್ವರೂಪವು ಎಂಬ ಜ್ಞಾನವುಳ್ಳವನಾದುದರಿಂದ ಆತನನ್ನು ಎಲ್ಲರೂ ಶೇಷನೆಂದು ಕರೆಯುತ್ತಾರೆಂದು ಹೇಳುತ್ತಾರೆ.

**ಅರ್ಥವು**—ಈ ಶ್ಲೋಕವು ಹಿಂದಿನ ಶ್ಲೋಕದಲ್ಲಿರುವ **ಅನನ್ತಭೋಗಿನಿ** ಎಂಬುದಕ್ಕೆ ವಿಶೇಷಣವು. **ಜನೈಶ್ಶೇಷ ಇತೀರ್ಯತೇ ಅನನ್ತಭೋಗಿನಿ ತಯಾ ಸಹಾಸೀನಂ ಭವನ್ತಂ** ಎಂದು ಅನ್ವಯವು. **ನಿವಾಸ....ವಾರಣಾದಿಭಿಃ** ಎಂದು ಒಂದೇಪದವು. **ನಿವಾಸ** ಮನೆಯೇನು, ವಿಶ್ವನಿಗೆ ಆಯತನವಾಗುವನೆಂಬ ಭಾವವು, ಆತನಿರುವ ಗೃಹವೆಲ್ಲಾ ಶೇಷಾಂಶವೇ ಎಂದು ಭಾವವು, ಶಯ್ಯಾ-ಹಾಸಿಗೆ ಏನು **ಪಾದುಕೆ** ಯೇನು **ಅಂಶುಕ**-ಪೀತಾಂಬರವೇನು **ಉಪಧಾನ**-ಶಿರಸ್ಸು ಕಾಲು ಮೊದಲಾದುವುಗಳಿಗೆ ದಿಂಬು ಏನು. **ವರ್ಷಾತಪವಾರಣಾದಿಭಿಃ**-ಮಳೆ ಬಿಸಿಲು ಇವೆರಡನ್ನೂ ತಡೆಯುವ ಛತ್ರ ಮೊದಲಾದ **ಶರೀರಭೇದೈಃ**-ಅವಯುವ ಭೇದಗಳಿಂದ ಇದರಿಂದ ಆತ್ಮಾ ಒಬ್ಬನೇ, ಶರೀರಗಳು ಮಾತ್ರ ಬೇರೆ ಬೇರೆಯಾಗಿ ಧರ್ಮಭೂತಜ್ಞಾನದ್ವಾರಾ ಬಾಹುಳ್ಯವಿರಬಹುದೆಂದು ಸೂಚಿಸಲ್ಪಟ್ಟಿತು. **ಯಥೋಚಿತಂ**-ಸಂದರ್ಭಗಳಿಗೆ ಯೋಗ್ಯವಾದ ಎಂದರೆ ಕಾಲ ದೇಶಾವಸ್ಥೆಗಳಿಗೆ ಅನುಗುಣವಾಗಿ ಹೀಗೆ **ತವಶೇಷತಾಂಗತೈಃ**-ನಿನ್ನ ಪ್ರಯೋಜನಕ್ಕಾಗಿ ಕೈಂಕರ್ಯವನ್ನೆಸಗುವುದಕ್ಕಾಗಿಯೇ ಉಂಟಾದುವಾದುದರಿಂದಲೇ **ಜನೈಃ**-ಎಲ್ಲರಿಂದಲೂ **ಶೇಶಇತಿ**-ಶೇಷನೆಂಬುದಾಗಿ, **ಈರ್ಯತೇ**-ಹೇಳಲ್ಪಡುವ, **ಅನನ್ತಭೋಗಿನಿ** ಎಂಬುದಕ್ಕೆ ವಿಶೇಷಣವು.

**ಉಪಪಾದನೆಯು** ಈ ಅನನ್ತನೇ ಸ್ವಾಮಿಗೆ ಬೇಕಾದ ಎಲ್ಲಾ ಶರೀರ ಭೇದಗಳನ್ನು ಹೊಂದುತ್ತಾನೆಂದು ಹೇಳುತ್ತಾರೆ. ದಹರ ವಿದ್ಯೆಯಲ್ಲಿ ಹೇಳಿರುವ

ಚೇತನನ ದಹರಾಕಾಶವನ್ನೇ ನಿವಾಸವಾಗಿರುವವನೂ ಈ ಅನನ್ತನೇ. ಉಪಧ್ಯಾ-ಹಾಸಿಗೆ ಮತ್ತು ಉಪಧಾನ-ದಿಂಬೂ ನಕ ಸ್ವರೂಪನಾಗಿ ಆಗುವವನೂ ಅನನ್ತನೇ. ಆಸನಂ-ಪರ್ಯಂಕವಿದ್ಯಾದಿಗಳಲ್ಲಿ ಹೇಳುವ ಸಿಂಹಾಸನ ರೂಪವಾಗುವವನು ಎಂಬರ್ಥವು. "ನಿಷಣ್ಣಃ ಪರಮಾಸನೇ ವಿದುರಾನ್ನಾನಿ ಬುಭುಜೇ ಶುಚೀನಿ ಗುಣವನ್ತಿ ಚ" ಎಂಬಲ್ಲಿ ಹೇಳಿರುವ ಆಸನವು ವಿದುರ ಗೃಹದಲ್ಲಿರುವ ಸಿಂಹಾಸನವಾದರೂ ಅದು ಪರಮಾಸನವೆನಿಸಲು ಶೇಷನ ಸಂಬಂಧವು ಆ ಕಾಲದಲ್ಲಿ ಉಂಟೆಂದು ಊಹಿಸಬಹುದು. ಪಾದುಕಾ-ಭರತನಿಗೆ ಆರಾಧನ ರೂಪಿಯಾಗಿ ರಾಮಪಾದುಕೆಯಾಗಿ ನಂದಿಗ್ರಾಮಕ್ಕೆ ಹೋದವನೂ ಅನನ್ತನೇ. ಶ್ರೀಮದ್ರಾಮಾಯಣದಲ್ಲಿ "ಅಧಿರೋಹಾರ್ಯಪಾದಾಭ್ಯಾಂ ಪಾದುಕೇ ಹೇಮಭೂಷಿತೇ। ಏತೇಹಿ ಸರ್ವಲೋಕಸ್ಯ ಯೋಗಕ್ಷೇಮಂ ವಿಧಾಸ್ಯತಃ" (ಅಯೋ. ..) ಎಂದು ಹೇಳಿರುವುದರಿಂದ ಜಡಪಾದುಕೆಯು ಇಂತಹ ಮಹಿಮೆಯನ್ನು ಹೊಂದಿರಲಾರದಾದುದರಿಂದ ಸ್ವಾಮಿಯಿಂದ ಆಜ್ಞಪ್ತವಾದ ಶೇಷಾಂಶವೇ ಈ ಯೋಗಕ್ಷೇಮವನ್ನು ವಹಿಸುವ ಶಕ್ತಿಯುಳ್ಳದ್ದಾಯಿತೆಂದು ಭಾವಿಸಬಹುದು. ಪಾದುಕೆಯು ಶೇಷಾಂಶವೆಂಬ ಅಭಿಪ್ರಾಯವನ್ನು ಶ್ರೀ ದೇಶಿಕರವರು ಪಾದುಕಾ ಸಹಸ್ರದಲ್ಲಿ ಉಪಪಾದಿಸಿರುತ್ತಾರೆ. "ಶಯ್ಯಾತ್ಮನಾ ಮಧುರಿಪೋರಸಿ ಶೇಷಭೂತಾ ಪಾದಾಶ್ರಯೇಣ ಚ ಪುನರ್ದ್ವಿಗುಣೀಕೃತಂ ತತ್" ಶ್ರೀಮನ್ನಾರಾಯಣನಿಗೆ ಶಯ್ಯಾವಾಗಿ ಕೈಙ್ಕರ್ಯಮಾಡುವ ಶೇಷನಾದೆ. ಪುನಃ ಪಾದುಕಾ ಶರೀರವಾಗಿ ಪಾದವನ್ನು ಆಶ್ರಯಿಸುವುದರಿಂದ ಆ ಶೇಷವು ದ್ವಿಗುಣವಾಯಿತು ಇನ್ನೂ ಹೆಚ್ಚಾಯಿತು ಎಂಬ ಭಾವವು. ಅಂಶುಕ—ಮೋಹಿನ್ಯವತಾರವನ್ನೆತ್ತಿದಾಗ ದಿವ್ಯಪೀತಾಂಬರವಾಗಿ ಪರಿಣಮಿಸಿದವನೂ ಅನನ್ತನೇ. ಕೃಷ್ಣಾವತಾರದಲ್ಲಿ ದೇವಕಿಯ ಸಾನ್ನಿಧ್ಯವನ್ನು ಬಿಟ್ಟು ಯಶೋದೆಯಲ್ಲಿ ಹೋಗುವುದಕ್ಕಾಗಿ ತೆರಳಿದಾಗ ವರ್ಷನಿವಾರಣಮಾಡಿ ತನ್ನ ಹೆಡೆಗಳಿಂದ ಮರೆಮಾಡಿ ಛತ್ರಿಯ ರೂಪವನ್ನು ಹೊಂದಿದವನೂ ಅನನ್ತನೇ. ಹೀಗೆ ವಿಧವಿಧ ಶರೀರಗಳನ್ನು ದೇಶ ಕಾಲಾವಸ್ಥೆಗೆ ಅನುಗುಣವಾಗಿ ಶರೀರ ಭೇದಗಳನ್ನು ಹೊಂದುವನೆಂದು ಹೇಳಲ್ಪಟ್ಟಿತು. ಹೀಗೆ ಅನೇಕ ಶರೀರಭೇದಗಳಿಗೆ ಪ್ರಮಾಣವು ಯಾವುದೆಂದರೆ "ಅಪರಿಮಿತಧಾಭವತಿ" ಎಂದಿರುವುದರಿಂದ ಅಪರಿಮಿತವಾದ ಶರೀರ ಭೇದಗಳುಂಟೆಂದು ಹೇಳಲ್ಪಟ್ಟಿರುತ್ತದೆ. ಹೀಗೆ ಓ ಭಗವನ್ತನೇ ನಿನಗೆ ಕೈಙ್ಕರ್ಯಾದಿಗಳನ್ನು ಎಸಗುವುದಕ್ಕಾಗಿಯೇ ಶೇಷನಿಗೆ ನಾನಾವಿಧ ದಿವ್ಯಮಂಗಳ ವಿಗ್ರಹತ್ವವೆಂಬ ಭಾವವು. ಇವೆಲ್ಲವೂ ತನ್ನ ಪ್ರಯೋಜನಕ್ಕಲ್ಲದೆ ಪರಮ ಪುರುಷ ಪ್ರಯೋಜನಕ್ಕಾಗಿಯೇ. ಆದುದರಿಂದ ಶೇಷನೆಂದು ಈ ಅನಂತನು ಕರೆಯಲ್ಪಡುವನೆಂದು ಹೇಳಿದರೂ ಶೇಷ ಶಬ್ದಕ್ಕೆ ತನ್ನ ಉಪಯೋಗ ಯಾವುದೂ ಇಲ್ಲದೆ ಶ್ರೇಷ್ಠನಿಗೆ ಉಪಯೋಗವಾಗಿರುವುದೇ ಸ್ವರೂಪವಾಗಿ ಉಳ್ಳವನೆಂದರ್ಥವು ಈ ಅಭಿಪ್ರಾಯವೇ "ಪರಗತಾತಿಶಯಾಧಾನೇಚ್ಛಯೋಪಾದೇಯತ್ವಮೇವ

**ದಾಸಸ್ಸಖಾ ವಾಹನ ಮಾಸನಂ ಧ್ವಜೋ**
**ಯಸ್ತೇವಿತಾನಂ ವ್ಯಜನಂ ತ್ರಯೀಮಯಃ ।**
**ಉಪಸ್ಥಿತಂ ತೇನ ಪುರೋಗರುತ್ಮತಾ**
**ತ್ವದಂಘ್ರಿ ಸಂಮರ್ದಕಿಣಾಙ್ಕ ಶೋಭಿನಾ ॥ ೪೧ ॥**

---

ಯಸ್ಯ ಸ್ವರೂಪಂ ಸಶೇಷಃ" ಶ್ರೀಶನು ಹೊಂದಿದ ಅತಿಶಯವನ್ನು ಉಂಟು ಮಾಡುವುದೇ ತನಗೆ ಯೋಗ್ಯವಾದುದೆಂಬುದು ಯಾವನಿಗೆ ಸ್ವರೂಪವೋ ಆತನು ಶೇಷನೆನಿಸುವನೆಂದು ಶ್ರೀಯತಿವರ್ಯರು ಹೇಳಿರುತ್ತಾರೆ. **ಶೇಷ ಇತೀರಿತೇ ಜನೈಃ** ಎಂದು ಹೇಳಿರುವುದರಿಂದ ಪ್ರಸಿದ್ಧವಾಗಿ ಎಲ್ಲರ ತಿಳುವಳಿಕೆಗೂ ಬಂದಿರುವ ವ್ಯವಹಾರವೇ **ಶೇಷ** ಎಂಬುದಾಗಿ ಹೇಳಲ್ಪಟ್ಟಿತು.

**ಅವತಾರಿಕೆಯು** ಹಿಂದಿನ ಶ್ಲೋಕಗಳಲ್ಲಿ ದಿವ್ಯ ವೈಕುಂಠದಲ್ಲಿ ಪರಮ ಪುರುಷನು ಯಾವಾಗಲೂ ತನಗೆ ಅತ್ಯಂತ ಅನುರೂಪಳಾಗಿಯೂ, ಶೇಷಭೂತಳಾಗಿಯೂ ಕಲ್ಯಾಣಗುಣಾಕರಳಾಗಿಯೂ ಆಶ್ರಿತರಲ್ಲಿ ಪರಮ ಕಾರುಣ್ಯಯುಕ್ತಳಾಗಿ ಅನುಗ್ರಹಮಯಳಾಗಿರುವ ಲಕ್ಷ್ಮಿಯೊಂದಿಗೆ ಇರುವವನಾಗಿ ದಿವ್ಯಸೂರಿಗಳಿಂದ ಸೇವಿತನು ಎಂದು ಹೇಳಲು ಹೊರಟು, ಹಿಂದಿನ ಎರಡು ಶ್ಲೋಕಗಳಿಂದ ಆದಿಶೇಷನ ದಿವ್ಯ ಕೈಂಕರ್ಯವನ್ನು ಉಪದೇಶಿಸಿದರು. ಈ ಶ್ಲೋಕದಿಂದ ಗುರುತ್ಮಾಂತನವರಿಂದಲೂ ನಾನಾ ಶರೀರ ಭೇದಗಳಿಂದಲೂ ಶೇಷನ ಹಾಗೆ ನಾನಾ ಪ್ರಕಾರವಾಗಿ ಕೈಂಕರ್ಯವನ್ನು ಹೊಂದಿ ಸೇವಿತನೆಂದು ಹೇಳುತ್ತಾರೆ. ಶೇಷನ ಹಾಗೆ ಇಹಲೋಕದಲ್ಲಿರುವ ಹಾವುಗಳಿಗೂ ಗರುಡನ ಹಾಗೆ ಇಹಲೋಕದಲ್ಲಿ ಗರುಡಪಕ್ಷಿಗಳಿಗೂ ಪರಸ್ಪರ ದ್ವೇಷವಿದ್ದರೂ, ಸ್ವಾಮಿ ಸನ್ನಿಧಿಯಲ್ಲಿ ದ್ವೇಷವಿಲ್ಲದೆ ಪರಮ ಮೈತ್ರಿಯಿಂದ ಇರುವರೆಂಬುದು ಸೂಚಿತವು. ದ್ವೇಷವು ಇಹಲೋಕದಲ್ಲೇ ವಿನಾ ನಿತ್ಯವಿಭೂತಿಯಲ್ಲೇ ಇಲ್ಲವು. ಇದು ಪರವಾಸುದೇವ ಸಾನ್ನಿಧ್ಯದ ಮಹಾತ್ಮ್ಯೆಯು. "**ರಾಮಮೇವಾನುಪಶ್ಯನ್ತಃ ನಾಭ್ಯಹಿಂಸರ್ನ ಪರಸ್ಪರಂ**" ಎಂಬುದನ್ನು ಶ್ರೀರಾಮ ಪಟ್ಟಾಭಿಷೇಕ ಸರ್ಗದಲ್ಲಿ ಕಾಣಬಹುದು. ಹಾಗೆಯೇ ಋಷ್ಯಾಶ್ರಮಗಳಲ್ಲಿ ಋಷಿಗಳ ತಪೋ ಮಹಿಮೆಯಿಂದ ಘಾತುಕ ಮೃಗಗಳೂ ಮೈತ್ರಿಯಿಂದಲೇ ವಾಸಿಸುವುವೆಂದು ಹೇಳಲ್ಪಟ್ಟಿರುತ್ತದೆ.

**ಅರ್ಥವು. ಯಃ**—ಯಾವ **ತ್ರಯೀಮಯಃ**—ವೇದಮಯವಾದ ಶರೀರವುಳ್ಳ ಗರುತ್ಮಾನನು, **ತೇ**—ನಿನಗೆ, **ದಾಸಃ**—ತನ್ನ ಶೇಷಭಾವವನ್ನರಿತವನೋ, **ಸಖಾ**—ಸ್ನೇಹಿತನೋ, **ವಾಹನಂ**—ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಹಕಾರಿಯಾಗಿ ವಾಹನವಾಗಿಯೂ, **ಆಸನಂ**—ಕೂತುಕೊಳ್ಳುವುದಕ್ಕೆ ಭದ್ರಾಸನವಾಗಿಯೂ, **ವಿತಾನಂ**—ಮೇಲುಕಟ್ಟಾಗಿಯೂ, **ವ್ಯಜನಂ**—ಬೀಸಣಿಗೆಯಾಗಿಯೂ, ಆಗುವನೋ, **ತ್ವದಂಘ್ರಿ ಸಂಮರ್ದಕಿಣಾಂಕ ಶೋಭಿನಾ,**

**ತ್ವತ್**—ನಿನ್ನ, **ಅಂಘ್ರಿ**—ಪಾದಪದ್ಮಗಳ, **ಸಮ್ಮರ್ದ**—ಗರುತ್ಮಾನನ ಎರಡು ಕೈಯಲ್ಲೂ ಇಷ್ಟು ಬಲವಾಗಿ ಊರಿದ ಸಂಬಂಧದಿಂದ **ಕಿಣ**—ಕೈಗಳಲ್ಲಿ ಜಡ್ಡು ಗಟ್ಟಿದ, **ಅಂಕ**—ಗುರ್ತಿನಿಂದ, **ಶೋಭಿನಾ**—ಶೋಭಿಸುತ್ತಿರುವ, ವಾಹನನಾಗಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವಾಗ ಶ್ರೀಮನ್ನಾರಾಯಣನ ಎರಡು ಪಾದತಲಗಳೂ ಶ್ರೀ ಗರುಡಾಳ್ವಾರ್ರವರ ಎರಡು ಕೈಗಳ ಮೇಲೆ ಇರುವ ಗರುಡಸೇವೆಯನ್ನು ಅನುಭವಿಸುತ್ತಾ ಮಾಡಿದ ವರ್ಣನೆಯ ಪ್ರಕರಣವು ಆ ಪಾದಗಳು ತನ್ನ ಕೈಮೇಲೆ ಒತ್ತಿ ಗರುಡನಿಗೆ ಗುರ್ತಾಗಿದೆ ಎಂಬ ಭಾವವು. **ತೇನ**—ಅಂತಹ ಪ್ರಸಿದ್ಧ ನಿತ್ಯಸೂರಿಯಾದ **ಗರುತ್ಮತಾ**—ಗರುಡಾಳ್ವಾರ್‌ರವರಿಂದ, **ಪುರಃ**-ಮುಂದುಗಡೆಯಲ್ಲಿ, **ಉಪಸ್ಥಿತಂ**—ಬಿಜಮಾಡಿಸಿರುವ, **ಭವನ್ತಂ**-ನಿಮ್ಮನ್ನು ಎಂದು ೪೬ನೆಯ ಶ್ಲೋಕದಲ್ಲಿರುವುದರೊಡನೆ ಅನ್ವಯವು.

**ಉಪಾದನೆಯು**—ದಾಸ, ಶೇಷ ಶಬ್ದಗಳು ಸಮಾನಾರ್ಥಗಳಾದರೂ, ಶೇಷ ಶಬ್ದವು ಚೇತನಾ ಚೇತನಗಳೆರಡಕ್ಕೂ ಅನ್ವಯಿಸುತ್ತದೆ. ದಾಸತ್ವವಾದರೋ ಶೇಷತ್ವವನ್ನು ತಿಳಿಯುವ ಶಕ್ತಿಯುಳ್ಳ ಚೇತನ ಮಾತ್ರಕ್ಕೆ ಅನ್ವಯಿಸುತ್ತದೆ. "**ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ**" ಎಂಬ ರುದ್ರವಾಕ್ಯ ರೀತ್ಯಾ ಸ್ವಾಭಾವಿಕ ಸ್ವರೂಪವು ದಾಸತ್ವವಾದುದರಿಂದ ಪ್ರಥಮತಃ ದಾಸತ್ವವು ನಿರ್ದಿಷ್ಟವು. ಹೀಗೆ ಸ್ವರೂಪತಃ ದಾಸನಾದರೂ "**ಸಖಿತ್ವಮುಭ್ಯೈಷ್ಯೈತುನಃ**" (ರಾ. ಯು.... .) ಎಂಬ ಉಕ್ತಿಯ ಹಾಗೆಯೂ ಮತ್ತು "**ಸರ್ವಸ್ಯ ಶರಣಂ ಸುಹೃತ್**" ಎಂಬ ಶ್ರುತಿವಾಕ್ಯದ ಹಾಗೂ ಗರುತ್ಮಾನ್‌ಸಖನು. ಆಂಜನೇಯನೂ ಗರುತ್ಮಾನರ ಹಾಗೇ ಆದುದರಿಂದ "**ಲೋಕನಾಥಸ್ಯ ರಾಮಸ್ಯ ಸಖಾ ದಾಸೋऽಸ್ಮಿ ರಾವಣ**" ಎಂದು ಹೇಳಿಕೊಂಡಿರುತ್ತಾನೆ. ಶ್ರುತಿಯಲ್ಲೂ "**ದ್ವಾಸು ಪರ್ಣಾ ಸಯುಜಾ ಸಖಾವಾ**" ಎಂಬ ಪ್ರಯೋಗವನ್ನು ಕಾಣಬಹುದು. ತನಗೆ ಚೇತನನು ಸಖನಾದುದರಿಂದ ತನ್ನೊಂದಿಗೆ ಸಮವಾದ ಆನನ್ದಭಾಕ್ಕಾಗಿ ಮಾಡುತ್ತಾನೆ. "**ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂಬ ಶ್ರುತಿಯೂ "**ಮಮ ಸಾಧರ್ಮ್ಯಮಾಗತಾಃ**" ಎಂಬ ಸ್ಮೃತಿಯೂ ಅನುಸಂಧೇಯಗಳು. ಸಖಿತ್ವವೆಂದರೆ "**ಸಮಾನ ಚಿತ್ತವೃತ್ತಿತ್ವಂ**" ಸಮನಾದ ಚಿತ್ತವೃತ್ತಿಯನ್ನು ಹೊಂದಿರೋಣವು ರಾಮ ಲಕ್ಷ್ಮಣರು ನಾಗಾಸ್ತ್ರ **ಬಂಧಕ್ಕೆ** ಸಿಲುಕಿದಾಗ ಗರುಡನಿಂದ ಆನಾಗ ಬಂಧವು ಬಿಟ್ಟು ಹೋದಾಗ ಗರುಡನು ಹೇಳುತ್ತಾನೇನೆಂದರೆ--

" **ಅಹಂಸಖಾತೇ ಕಾಕುತ್‌ಸ್ಥಪ್ರಿಯಃ ಪ್ರಾಣೋ ಬಹಿಶ್ಚರಃ। ಗರುತ್ಮಾನಿಹಸಂ** ಪ್ರಾಪ್ತೋಯುವಾಭ್ಯಾಂ ನಾಹ್ಯಕಾರಣಾತ್" (ರಾ-ಯು-50-50) ಇಲ್ಲಿ ಅನೇಕ ಕಡೆಗಳಲ್ಲಿ ಸಖತ್ವವು ಉಪಪಾದಿತವು. ಈ ಸಖಾಶಬ್ದವು **ನಿತ್ಯ ಸೂರಿಗಳೂ ಸಹ ನಮ್ಮಂತೆಯೇ ಜೀವಕೋಟಿಗೆ ಸೇರಿದವರೆಂಬುದನ್ನು ಗ್ರಹಿಸಬಹುದು.** ಸೀತೆಯು ಹೇಳುತ್ತಾಳೇನೆಂದರೆ:—"**ವಿದಿತಸ್ಸಹಿ ಧರ್ಮಜ್ಞ**

**ಶ್ಶರಣಾಗತವತ್ಸಲಃ । ತೇನಮೈತ್ರೀ ಭವತುತೇ ಯದಿಜೀವಿತುಮಿಚ್ಛಸಿ॥** ತನ್ನ ಭರ್ತಾ ಶರಣಾಗತವತ್ಸಲನು. ತನಗೆ ಸಮಾನ ಭೋಗವನ್ನು ಕೊಟ್ಟು ಕಾಪಾಡುವನು. ಆದುದರಿಂದ ಆತನೊಂದಿಗೆ ಮೈತ್ರಿಯನ್ನು ಬೆಳಸು. ನೀನಾಗೀಗ ಉಜ್ಜೀವಿಸುವಿ, ಸಮಾನಭೋಗವನ್ನು ಕೊಡುವುದೇ ಮೈತ್ರಿಯ ಪ್ರಧಾನಗುಣವೆಂದು ಕವಿಯು ಹಾಲುನೀರಿನ ದೃಷ್ಟಾಂತದಿಂದ ಉಪದೇಶಿಸಿರುತ್ತಾರೆ **"ಕ್ಷೀರೇಣಾತ್ಮಗತೋ ದಕಾಯಹಿ ಗುಣಾ ದತ್ತಾಃ ಪುರಾತೇಖಿಲಾಃ ಕ್ಷೀರೋತ್ತಾಪಮವೇಕ್ಷ್ಯತೇನಪಯಸಾ ಸ್ವಾತ್ಮಾಕೃಶಾನೌಹುತಃ। ಗನ್ತುಂಪಾವಕಮುನ್ಮನಸ್ತದಭವದ್ದೃಷ್ಟ್ವಾತು ಮಿತ್ರಾಪದಂ ಹ್ಯುಕ್ತಂತೇನ ಜಲೇನ ಶಾಮ್ಯತಿ ಸತಾಂ ಮೈತ್ರೀಪುನಸ್ತ್ವೀದೃಶೀ"** ಬರೀ ಚೊಂಬಿಗೆ ಹಾಲು ಕರೆಸತಕ್ಕದ್ದಲ್ಲವೆಂದು ಸ್ವಲ್ಪ ನೀರನ್ನಿಟ್ಟು ಕರೆಸುವ ಶಾಸ್ತ್ರವುಂಟು, ಆಗ ತನ್ನನ್ನು ಹೊಂದಿದ ಸ್ನೇಹಿತನಾದ ನೀರಿಗೆ ತನ್ನ ಸರ್ವಸ್ವವಾದ ಗುಣಗಳನ್ನೆಲ್ಲಾ ಕೊಟ್ಟು ಇದು ನೀರು ಇದು ಹಾಲು ಎಂದು ತಿಳಿಯದ ಹಾಗೆ ಉಪಕರಿಸುತ್ತದೆ. ಅದನ್ನು ಕಾಯಿಸಿದಾಗ ತನಗೆ ಉಪಕರಿಸಿದ ಹಾಲಿಗೆ ತಾಪ ವುಂಟಾಯಿತೇ ಎಂಬ ಪರಿತಾಪದಿಂದ ನೀರು ಮೊದಲು ಆವಿಯಾಗಿ ಹೋಗುತ್ತದೆ ಸ್ನೇಹಿತನಾದ ನೀರು ಹೋಗಿಬಿಟ್ಟನೇ ಎಂಬ ಪರಿತಾಪದಿಂದ ತಾನೂ ಬೆಂಕಿಯಲ್ಲಿ ಬೀಳಲು ಉಕ್ಕುತ್ತದೆ, ಆಗ ಸ್ವಲ್ಪ ನೀರನ್ನು ಉಕ್ಕುವುದನ್ನು ತಪ್ಪಿಸುವುದಕ್ಕಾಗಿ ಬಿಡಲು ತನ್ನ ಸ್ನೇಹಿತನು ಪುನಃ ಬಂದನೆಂದು ಶಾನ್ತವಾಗುತ್ತದೆ. ಸತ್ಪುರುಷರ ಮೈತ್ರಿಯು ಇಂಥಾದ್ದು ಎಂಬುದು ಶ್ಲೋಕಾರ್ಥವು.

**ವಾಹನಂ**-ಶ್ರೀ ಮಹಾವಿಷ್ಣುವು ದಿವ್ಯಮಙ್ಗಳ ವಿಗ್ರಹಯುಕ್ತನಾದಾಗ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವಾಗ ಸ್ವಾಮಿಯು ಗರುಡವಾಹನನಾಗಿಯೇ ಸಂಚರಿಸುವನು. ಗಜೇಂದ್ರ ಧ್ರುವಾದಿಗಳನ್ನು ರಕ್ಷಿಸಲು ತೆರಳಿದಾಗ ಗರುಡಾರೂಢನಾಗಿಯೇ ತೆರಳಿದನೆಂಬ ಪುರಾಣ ವೃತ್ತಾಂತಗಳಿರುತ್ತವೆ. ಗರುತ್ಮಾನನ ಶರೀರವೆಲ್ಲಾ ವೇದಮಯವೆಂಬುದು ಶ್ರುತಿಸ್ಮೃತಿ ಪುರಾಣ ಪ್ರಸಿದ್ಧವಾದುದು. **"ಸುಪರ್ಣೋಸಿ ಗರುತ್ಮಾನ್ ತ್ರಿವೃತ್ತೇ ಶಿರೋಗಾಯತ್ರಂ ಚಕ್ಷುಃ"** ಎಂಬ **"ತಸ್ಯಗಾಯತ್ರೀ ಚ-ಜಗತೀಚ-ಪಕ್ಷಾವಭವತಾಂ ಉಷ್ಣಿಕ್ಚತ್ರಿಷ್ಟುಪ್ಚ ಪೃಷ್ಠಾ ಅನುಷ್ಟುಪ್ಚ ಪಙ್ಕ್ತಿಶ್ಚಧುತ್ಯಾ ಬೃಹತ್ಯೇವೋಕ್ತಿರಭವತ್" ಸಏತಂ ಛಂದೋರಥಮಾಸ್ಥಾಯ ಯಏತ ಮಧ್ವಾನ ಮನುಚರತ್** ಎಂಬ ಶ್ರುತಿಗಳಿವೆ ಇದರಿಂದ ಗರುತ್ಮಾನ್ ಶರೀರವು ಛಂದೋಮಯವಾದುದು.

ಸ್ವಾಮಿಯು ವಾಹನಾರೂಢರಾಗಿ ಹೋಗುವಾಗ ಸ್ವಾಮಿಯ ಎರಡು ಪಾದಗಳೂ ಗರುತ್ಮಾನ್‌ರವರ ಹಸ್ತದಲ್ಲಿಡುವುದರಿಂದ ಅವುಗಳ ಸಂಮರ್ದದಿಂದ ಗರುತ್ಮಾನ್‌ರವರ ಹಸ್ತವು ಜಡ್ಡುಗಟ್ಟಿರುವುದರಿಂದ ಶೋಭಿಸುತ್ತಿದ್ದಾರೆಂದು

**ತ್ವದೀಯ ಭುಕ್ತೋಜ್ಝಿತ ಶೇಷಭೋಜಿನಾ
ತ್ವಯಾ ನಿಸೃಷ್ಟಾತ್ಮ ಭರೇಣ ಯದ್ಯಥಾ ।
ಪ್ರಿಯೇಣ ಸೇನಾಪತಿನಾ ನ್ಯವೇದಿತತ್
ತಥಾನುಜಾನನ್ತ ಮುದಾರ ವೀಕ್ಷಣೈಃ ॥ ೪೨ ॥**

ವೈನತೇಯರು ವರ್ಣಿಸಲ್ಪಟ್ಟಿರುತ್ತಾರೆ. ಆದುದರಿಂದ ಕಾಂಚೀಪುರದ ಗರುಡ ಸೇವೆ. ಮೇಲುಕೋಟೆಯ ವೈರಮುಡೀ ಉತ್ಸವ ಮೊದಲಾದ ಸಮಯಗಳಲ್ಲಿ ಸ್ವಾಮಿಯ ಪಾದಗಳು ವೈನತೇಯರ ಹಸ್ತಗಳಲ್ಲಿ ನೆಲೆಸಿರುವಹಾಗೆ ಅಲಂಕರಿಸುತ್ತಾರೆ.

**ಅವತಾರಿಕೆಯು** ಹಿಂದೆ ನಿತ್ಯರಾದ ಅನಂತ ಗರುಡರಿಂದ ದಿವ್ಯ ವೈಕುಂಠದಲ್ಲಿ ಸೇವಿಸಲ್ಪಡುವನೆಂದು ಹೇಳಿ ಈ ಶ್ಲೋಕದಿಂದ ವಿಷ್ವಕ್ಸೇನರಿಂದ ಸೇನಾನಾಯಕನಾಗಿ ಕೈಂಕರ್ಯವನ್ನು ಲಕ್ಷ್ಮೀಪತಿಯು ಹೊಂದುವನೆಂದು ಅನನ್ತ ಗರುಡರ ಹಾಗೆ ಈ ವಿಷ್ವಕ್ಸೇನರೂ ಶೇಷಭೂತರಾಗಿ ಕೈಂಕರ್ಯವನ್ನು ಎಸಗುತ್ತಾರೆಂದು ತಿಳಿಸುತ್ತಾರೆ; ಮತ್ತು ಅವರೂ ಸ್ವಾಮಿಗೆ ಶೇಷಭೂತರೆಂದೂ ತಿಳಿಸುತ್ತಾರೆ.

**ಅರ್ಥವು—ತ್ವದೀಯ ಭುಕ್ತೋಜ್ಝಿತ ಶೇಷಭೋಜನಾ, ತ್ವದೀಯ—** ಸ್ವಾಮಿಯಾದ ನಿನ್ನ ಸಂಬಂಧವಾದ, **ಭುಕ್ತ**—ಊಟ ಮಾಡಲ್ಪಟ್ಟು **ಉಜ್ಝಿತ**—ಪಾತ್ರದಲ್ಲಿ ಬಿಡಲ್ಪಟ್ಟ, **ಶೇಷ**—ಮಿಕ್ಕ ಭಾಗವನ್ನು. **ಭೋಜನಾ**—ಊಟಮಾಡುವ, ಸ್ವಾಮಿಯು ಬಿಟ್ಟ ಆಹಾರ ಶೇಷವನ್ನು ಊಟಮಾಡುವ ಎಂಬ ಭಾವವು. **ತ್ವಯಾ**—ಶ್ರೀಯಃಪತಿಯಾದ ನಿನ್ನಿಂದ, **ನಿಸೃಷ್ಟ**—ಇಡಲ್ಪಟ್ಟ, **ಆತ್ಮಭರೇಣ**—ತನ್ನ ಸಮಸ್ತ ಭೂಷಣಾಯುಧ ಸೇನೆ ಮೊದಲಾದ ಭಾರವನ್ನುಳ್ಳ, **ಪ್ರಿಯೇಣ**—ನಿನಗೆ ತುಂಬಾ ಪ್ರಿಯನಾದ, **ಸೇನಾಪತಿನಾ**—ಸೇನಾಪತಿಯಾದ ವಿಷ್ವಕ್ಸೇನರಿಂದ, **ಯತ್**—ಯಾವ ವಿಷಯವು **ಯಥಾ**—ಹೇಗೆ **ನ್ಯವೇದಿ**—ವಿಜ್ಞಾಪಿಸಿಕೊಳ್ಳಲ್ಪಟ್ಟಿತೋ, **ತತ್**—ಅದು, **ತಥಾ**—ಹಾಗೆಯೇ, **ಉದಾರ ವೀಕ್ಷಣೈ**—ಒಪ್ಪಿಗೆಯನ್ನು ಕೊಡುವ ಉದಾರವಾದ ಕಣ್ಣಿನ ನೋಟಗಳಿಂದಲೇ **ಅನುಜಾನನ್ತಂ**—ಅನುಜ್ಞೆಯನ್ನು ಕೊಡುತ್ತಿರುವ, **ಭವನ್ತಂ** ಎಂಬುದರೊಂದಿಗೆ ಅನ್ವಯವು.

**ಉಪಪಾದನೆಯು** ದಿವ್ಯ ವೈಕುಂಠದಲ್ಲಿ ಶ್ರೀಯಃಪತಿಯು ಅನನ್ತ ಗರುಡರಲ್ಲದೆ ಇನ್ನೊಬ್ಬ ಮುಖ್ಯ ನಿತ್ಯಸೂರಿಯಾಗಿ ಸ್ವಾಮಿಯ ಇಂಗಿತವನ್ನರಿತು ವಿರೋಧಿ ನಿರಸನವೇ ಮುಖ್ಯಕಾರ್ಯವಾಗಿಯುಳ್ಳ ವಿಷ್ವಕ್ಸೇನರಿಂದಲೂ ಸೇವ್ಯನಾಗಿದ್ದಾನೆಂದು ಹೇಳಿ ಭಗವನ್ತನ ಎದುರಿಗೆ ನಿಂತಿರುವ ಹಾಗೆ ಅನುಭವಿಸುತ್ತಾರೆ. ಮೊದಲನೆಯ ಭಾಗದಿಂದ ಸ್ವಾಮಿಗೆ ನಿವೇದನವಾದ ಶೇಷವನ್ನು ವಿಷ್ವಕ್ಸೇನರು ಪರಿಗ್ರಹಿಸುತ್ತಾರೆಂದು ಹೇಳಿದರು. ಈ ಪದ್ಧತಿಯು ಈಗಲೂ ಮುಖ್ಯ ದೇವಾ

ಲಯುಗಳಲ್ಲೂ ನಡೆದು ಬರುತ್ತಾ ಇದೆ. ಹೀಗೆಯೇ ನಿವೇದನ ವಿಷಯದಲ್ಲಿ ಹೇಳಿದುದು, ಹೂವು ಮೊದಲಾದವುಗಳಿಗೂ ಉಪಲಕ್ಷಣವಾಗಿ ಭಾವಿಸತಕ್ಕದ್ದು. ಸ್ವಾಮಿಯು ಧರಿಸಿದ ಹಾರ ಮೊದಲಾದವುಗಳನ್ನು ತೆಗೆದು ವಿಷ್ವಕ್ಸೇನರಿಗೆ ಸಮರ್ಪಿಸುವ ಪದ್ಧತಿಯೂ ಸಹ ದೇವಾಲಯುಗಳಲ್ಲಿವೆ.

**ತ್ವಯಾ ನಿಸೃಷ್ಟಾತ್ಮಭರೇಣ** ಎಂಬುದಕ್ಕೆ ಸ್ವಾಮಿಯು ಜಗತ್ಸೃಷ್ಟ್ಯಾದಿ ಭಾರವನ್ನು ವಿಷ್ವಕ್ಸೇನರಲ್ಲಿ ಇಟ್ಟಿರುತ್ತಾರೆಂದು ಅರ್ಥಮಾಡಿರುತ್ತಾರೆ. ಇದರ ಅಭಿಪ್ರಾಯವೇನೆಂದರೆ—ಭಗವದಧೀನನಾಗಿರುವ ವಿಷ್ವಕ್ಸೇನರ ಪ್ರಶಂಸೆ ಎಂದು ಭಾವಿಸತಕ್ಕದ್ದು ಶ್ರೀ ವೈಕುಂಠಗದ್ಯದಲ್ಲಿ ಶ್ರೀ ಯತಿವರ್ಯರು ವಿಷ್ವಕ್ಸೇನರಲ್ಲಿ ಸಮಸ್ತಾತ್ಮೈಶ್ವರ್ಯದ ಭಾರವನ್ನಿಟ್ಟಿರುತ್ತಾರೆಂದು ಬರೆದಿರುತ್ತಾರೆ. ಭಕ್ತರುಗಳ ಭಗವತ್ಸೇವಾರೂಪ ಕೈಂಕರ್ಯಗಳಲ್ಲಿ ವಿಘ್ನವು ಸಂಭವಿಸದ ಹಾಗೆ ತನ್ನ ಪರಿಜನ ವನ್ನು ನೇಮಿಸುತ್ತಾರೆಂಬುದಾಗಿ ಅರ್ಥಮಾಡಬಹುದು. ಆದುದರಿಂದಲೇ ಎಲ್ಲಾ ಮಹತ್ತಾದ ಉತ್ಸವಾರಂಭದಲ್ಲೂ ಮತ್ತು ಇತರ ಕೈಂಕರ್ಯಗಳಲ್ಲೂ **"ಆದೌ ವಿಷ್ವಕ್ಸೇನಾರಾಧನಂ ಕರಿಷ್ಯೇ"** ಎಂದು ಸಂಕಲ್ಪಿಸಿ ಆರಾಧಿಸುವ ಪದ್ಧತಿ ಯುಂಟು ಇತರರಿಗೆ ಗಣಪತಿಯ ಆರಾಧನೆಯು, ವಿಶ್ವಕ್ಸೇನ ಮಂತ್ರದಲ್ಲಿರುವ **"ವಿಶ್ವಸೃಜೇ"** ಎಂಬ ಪದದ ಅಭಿಪ್ರಾಯವೇನೆಂದರೆ, ಮುಕ್ತರಿಗಿರುವ ಹಾಗೆ **"ಸಏಕಧಾ ಭವತಿ ತ್ರಿಧಾಭವತಿ"** ಇತ್ಯಾದಿಗಳಲ್ಲಿ ಹೇಳಿರುವ ಶಕ್ತಿಯೂ ಸಹ ವಿಷ್ವಕ್ಸೇನರಿಗೆ ಸ್ವಾಮಿಯ ಅಭಿಮತಾನುಸಾರವಾಗಿ ಅಸುರ ವಿನಾಶ ಶಿಷ್ಟಪರಿ ಪಾಲನೆಗೆ ಬೇಕಾದ ಸೇನೆಯೇ ಮೊದಲಾದುವನ್ನು ನಿರ್ಮಿಸುವ ಶಕ್ತಿ ಉಂಟೆಂಬ ಭಾವವು ತೋರಿಬರುತ್ತದೆ.

**ಪ್ರಿಯೇಣ ಸೇನಾಪತಿನಾ** ಅನಂತ ಗರುಡರುಗಳಿಗಿಂತ ಪ್ರಿಯರಾದವರು ವಿಷ್ವಕ್ಸೇನರು ಎಂಬ ಅಭಿಪ್ರಾಯದಿಂದ ಹೇಳಿದ್ದಲ್ಲವು. ನಿತ್ಯವಿಭೂತಿಯಲ್ಲಿನ ಕೈಂಕರ್ಯಪರರಾದ ನಿತ್ಯರೆಲ್ಲರೂ ಪ್ರಿಯರಾದುದರಿಂದ ಅವರ ಹಾಗೆ ಸೇನಾ ಪತಿಯೂ ಪ್ರಿಯರೆಂಬ ಭಾವವು. ಸ್ವಾಮಿಗೆ ತುಂಬಾ ಪ್ರಿಯವಾದುದು ಶಿಷ್ಟ ಪರಿಪಾಲನವು. ಅದು ದುಷ್ಟನಿಗ್ರಹವಿಲ್ಲದೆ ಆಗುವುದಿಲ್ಲವಾದುದರಿಂದ ಅಂತಹ ನಿಗ್ರಹದಲ್ಲಿ ಸದಾ ನಿರತರಾಗಿರುವುದರಿಂದಲಾಗಲೀ ವಿಷ್ವಕ್ಸೇನರು ಪ್ರಿಯರೆಂದು ಹೇಳಲ್ಪಟ್ಟಿತೆಂದು ಭಾವಿಸಬಹುದು.

**ನ್ಯವೇದಿತತ್** ಎಂಬ ಪಾಠಕ್ಕೆ ನಿವೇದಿತಂ ಎಂಬ ಪಾಠಾನ್ತರವುಂಟು. ಆಗ **ಯತ್ ತತ್** ಎಂಬ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. **ನ್ಯವೇದಿತತ್** ಎಂಬ ಪಾಠವೇ ಸರಿಯಾಗಿ ತೋರುತ್ತದೆ. ಸೇನಾಪತಿಯು ತನ್ನ ಇಂಗಿತದ ಮೂಲಕ ತಿಳಿದು ಅರಿಕೆ ಮಾಡಿಕೊಳ್ಳುವುದು ಭಗವಂತನಿಗೆ ಅಭಿಮತ ವಾದುದು ಎಂದು ಹೇಳುವುದಕ್ಕಾಗಿ, **"ಅನುಜಾನನ್ತ ಮುದಾರವೀಕ್ಷಣೈಃ"** ಎಂಬ ಪ್ರಯೋಗವು. ಹೀಗೆ ತನ್ನ ಪರಿಜನರು ತನಗೆ ಅರಿಕೆ ಮಾಡುವುದೂ

**ಹತಾಖಿಲ ಕ್ಲೇಶಮಲೈಃ ಸ್ವಭಾವತಃ**
**ತ್ವದಾನುಕೂಲ್ಯೈಕ ರಸೈಸ್ತವೋಚಿತೈಃ ।**
**ಗೃಹೀತ ತತ್ತತ್ಪರಿಚಾರ ಸಾಧನೈಃ**
**ನಿಷೇವ್ಯಮಾಣಂ ಸಚಿವೈ ರ್ಯಥೋಚಿತಮ್ ॥ ೪೩ ॥**

---

ಅದನ್ನು ತಾನು ಸರ್ವಜ್ಞನಾದರೂ ಕೃಪಾಕಟಾಕ್ಷದಿಂದ ಅನುಮೋದಿಸುವುದೂ ಇಂತಹ ವಿಡಂಬನವೆಲ್ಲಾ ಸ್ವತಂತ್ರಲೀಲಾ ಪ್ರವೃತ್ತಿ ಇರುವವನ ಮಹಿಮೆಯನ್ನು ಪ್ರಕಟಿಸುತ್ತವೆ. ಮುಕ್ತದೆಶೆಯಲ್ಲಿ ಎಲ್ಲರೂ ಸರ್ವಜ್ಞತೆಯನ್ನು ಹೊಂದಿರುವುದ ರಿಂದ ವಿಶೇಷ್ಯನಾದ ಪರಿಪೂರ್ಣ ಬ್ರಹ್ಮನಿಗೂ ಅವನನ್ನು ಅನುಭವಿಸುವ ವಿಶೇಷಣರಾದ ನಿತ್ಯಮುಕ್ತರಿಗೂ ಐಕಮತ್ಯವೇ ವಿನಾ ಅಭಿಪ್ರಾಯದಲ್ಲಿ ಪರಸ್ಪರ ವ್ಯತ್ಯಾಸವಿಲ್ಲವೆಂಬುದು ಪ್ರದರ್ಶಿಸಲ್ಪಟ್ಟಿತು. ವಿಭೀಷಣನನ್ನು ಪರಿಗ್ರಹಿಸುವುದರಲ್ಲಿ ರಾಮಗೋಷ್ಠಿಯಲ್ಲಿ ಸುಗ್ರೀವಾದಿಗಳಿಗೂ ರಾಮಚಂದ್ರ ಪ್ರಭುವಿಗೂ, ಆತನ ದಾಸನಾದ, ಪ್ರಾಜ್ಞನಾದ ಆಂಜನೇಯನಿಗೂ ಶರಣಾಗತ ರಕ್ಷಣೆಯಲ್ಲಿ ಹೀಗೆ ಭಿನ್ನಾಭಿಪ್ರಾಯಗಳು ಈ ಲೋಕದಲ್ಲಿ ಮಾತ್ರ ಉಂಟು. ಆದರೆ ಪರಮ ಪುರುಷನಿಗೂ, ನಿತ್ಯಮುಕ್ತರಿಗೂ ಪರಸ್ಪರ ಅಭಿಮತಗಳಾದ ಅಭಿಪ್ರಾಯಗಳೇ ಯಾವಾಗಲೂ ಉಂಟೆಂಬುದು ಈ ವಿಷ್ವಕ್ಸೇನರ ಪ್ರವೃತ್ತಿಯ ಮೂಲಕ ಉಪದಿಷ್ಟವು.

**ವೀಕ್ಷಣೆಯು ಉದಾರ**ವೆಂದು ಹೇಳುವುದರ ಅಭಿಪ್ರಾಯವೇನೆಂದರೆ ತನ್ನ ಮಹತ್ವವನ್ನು ತೋರುವ ಐಶ್ವರ್ಯಾತಿಶಯದಿಂದಲೂ ಸೌಂದರ್ಯಾದಿ ಗುಣಾತಿಶಯ ದಿಂದಲೂ ಕೂಡಿ ವಿಷ್ವಕ್ಸೇನಾಭಿಪ್ರಾಯವನ್ನೇ ಅನುಮೋದಿಸಿ ಆಜ್ಞೆಯನ್ನು ಕೊಡುವುದರ ಮೂಲಕ ಉಂಟಾಗುವ ಆನಂದವನ್ನು ಕೊಡುವ ಭಾವವನ್ನು ಸೂಚಿಸುತ್ತದೆ. ಸೇನಾಪತಿಯನ್ನು ಹೀಗೆ ದಿವ್ಯಕಟಾಕ್ಷದ ಮೂಲಕ ಬಹುಮಾನಿ ಸಿರುವುದು ತನ್ನನ್ನು ಆಶ್ರಯಿಸಿದ ಪ್ರಸನ್ನರ ವಿಷಯದಲ್ಲಿ **"ಉದಾರಾಸ್ಸರ್ವ ಏ ವೈತೇ"** ಎಂಬಲ್ಲಿ ಹೇಳಿರುವ ಹಾಗೆ ಪರಪಕ್ಷಕ್ಕೆ ಸೇರಿದ ವಿಭೀಷಣನ ವಿಷಯದಲ್ಲೇ **"ಲೋಚನಾಭ್ಯಾಂ ಪಿಬನ್ನಿವ"** ಎಂಬಲ್ಲಿ ಹೇಳಿರುವ ಹಾಗೆ **ಉದಾರ ಕಟಾಕ್ಷವೀಕ್ಷಣ**ದೊಂದಿಗೆ ಸಂಭಾಷಣೆ ಎಂಬುದು ಬೋಧಿತವು. ಪಾಪಿಗಳಾದ ಶರಣಾಗತರ ವಿಷಯದಲ್ಲೇ **ಉದಾರ ಕಟಾಕ್ಷವೀಕ್ಷಣ**ವಿರುವ ಮಹಾನುಭಾವನು ಆಶ್ರಯಿಸಿ ಮುಕ್ತಿಹೊಂದಿ ಅನಂತರ ಹೇಯಗಂಧವೇ ಇಲ್ಲದಿರುವ ಮುಕ್ತರ ವಿಷಯದಲ್ಲೂ ಹೇಯಗಂಧವೇ ಇಲ್ಲದಿರುವ ನಿತ್ಯರ ವಿಷಯ ದಲ್ಲೂ ಉದಾರ ಕಟಾಕ್ಷವೀಕ್ಷಣವು ಕೈಮುತಿಕ ನ್ಯಾಯಸಿದ್ಧವೆಂಬ ಭಾವವು ಸೂಚಿತವು. ಆದುದರಿಂದ ಉದಾರವೀಕ್ಷಣವೆಂಬ ಅಭಿಪ್ರಾಯವು ತುಂಬಾ ಅರ್ಥಗರ್ಭಿತವಾಗಿ ಯಾಮುನ ಮುನಿಯು ಮಹಾಕವಿಯೆಂಬುದನ್ನು ದೃಢೀ ಕರಿಸುತ್ತದೆ.

**ಅವತಾರಿಕೆಯು**--ಹಿಂದೆ ಪ್ರಧಾನ ತಮರಾದ, ಮೂವರು ನಿತ್ಯರಾದ, ಅನಂತಗರುಡ ವಿಷ್ವಕ್ಸೇನರಿಂದ ಹೇಗೆ ಪರಮಪದದಲ್ಲಿ ಶ್ರೀ ಪರವಾಸುದೇವನು ಸೇವಿತನೆಂಬುದನ್ನು ಹೇಳಿದರು. ಈ ಶ್ಲೋಕದಲ್ಲಿ ಇನ್ನೂ ಅನೇಕ ನಿತ್ಯಮುಕ್ತರುಗಳಿಂದಲೂ ಪರಿಚರ್ಯಾ ಸ್ತೋತ್ರ ಮೊದಲಾದವುಗಳಿಂದ ಸೇವಿತನಾಗಿರುವನೆಂದು ಹೇಳಿ ಪ್ರಾಪ್ಯವನ್ನು ಅನುಭವಿಸುತ್ತಾರೆ—

**ಅರ್ಥವು-ಸ್ವಭಾವತಃ**—ತಮ್ಮ ನೈಜವಾದ ಆಕಾರ ರೀತ್ಯಾ, **ಹತ**—ಸರ್ವೇಶ್ವರ ಸಂಕಲ್ಪದಿಂದ, ಹೊಡೆಯಲ್ಪಟ್ಟ ಅಥವಾ ನಿರಾಕರಿಸಲ್ಪಟ್ಟ **ಅಖಿಲ**-ಸಮಸ್ತವಾದ **ಕ್ಲೇಶ**-ದುಃಖಗಳೇನು, **ಮಲೈ**-ಇಲ್ಲಿನ ಹಾಗೆಯೇ ಮನಸ್ಸಿನ ದ್ವೇಷಾಸೂಯೆ ಮೊದಲಾದ ದೋಷಗಳೇನು ಇವುಗಳುಳ್ಳ, ಅಂದರೆ ಹೇಯವಾದದು ಯಾವುದೂ ಇಲ್ಲದಿರುವ ಎಂದರ್ಥವು. **ತ್ವದಾನುಕೂಲ್ಯೈಕ ರಸೈಃ**—ಯಾವಾಗಲೂ ನಿನಗೆ ಅನುಕೂಲವಾಗಿರುವುದೇ ಮುಖ್ಯವಾದ ಆನಂದವೆಂದು ಭಾವಿಸಿರುವ, **ತವೋಚಿತೈಃ**-ನಿನಗೇ ಅರ್ಹರಾಗಿರುವ, **ಗೃಹೀತ ತತ್ತತ್ಪರಿಚಾರ ಸಾಧನೈಃ**—ಶ್ರೀ ಮಹಾಲಕ್ಷ್ಮಿಯಿಂದ ಆಜ್ಞಪ್ತರಾದುದರಿಂದ ಅಯಾ ಕೈಕಂರ್ಯ ಸಾಧನೆಗಳುಳ್ಳ **ಸಚಿವೈಃ**—ನಿನ್ನ ಮಂತ್ರಾಲೋಚನೆಯಲ್ಲಿಯೇ ಉದ್ಯುಕ್ತರಾಗಿ ನಿನಗೆ ಮಂತ್ರಿಗಳಾಗಿರುವ ನಿತ್ಯಸೂರಿಗಳಿಂದ, **ಯಥೋಚಿತಂ**-ನಿನಗೆ ಹೇಗೆ ಯೋಗ್ಯವೋ ಹಾಗೆ, **ನಿಷೇವ್ಯಮಾಣಂ**-ಸೇವಿಸಲ್ಪಡುವ, **ಭವನ್ತಂ** (೪೬) ಎಂಬುದರೊಂದಿಗೆ ಅನ್ವಯವು.

**ಉಪಪಾದನೆಯು**—ಮೇಲೆ ಹೇಳಿದ ಮೂವರು ನಿತ್ಯಸೂರಿಗಳಲ್ಲದೆ ಅಸಂಖ್ಯಾತರಾದ ನಿತ್ಯರೂ ಮುಕ್ತರೂಸಹ ಸ್ವಾಮಿಯ ದಿವ್ಯವೈಕುಂಠ ಸಭೆಯಲ್ಲಿದ್ದಾರೆಂದೂ ಅವರುಗಳಿಂದ ಸೇವ್ಯನು ಪರವಾಸುದೇವನೆಂದೂ ಹೇಳಿ ಅವರುಗಳು ನಿತ್ಯಕೈಂಕರ್ಯಗಳನ್ನು ಮಾಡುವ ಸುಕೃತ ದೆಶೆಯನ್ನು ಅನುಭವಿಸುತ್ತಾರೆ.

ಆ ನಿತ್ಯಮುಕ್ತರೂ ಎಂಥಾವರೆಂದರೆ? **ಸ್ವಭಾವತಃ ಹತಾಖಿಲ ಕ್ಲೇಶ ಮಲರು.** ತ್ರಿವಿಧ ಜೀವರಾಶಿಗಳೆಲ್ಲಾ ಸ್ವರೂಪತಃ ವಿಮಲರು. ಸೂರ್ಯಕೋಟಿ ಪ್ರಕಾಶವುಳ್ಳವರು, ಜ್ಞಾನತೇಜಸ್ಸಿನಿಂದ ಬೆಳಗುವವರು ಇದನ್ನೇ ಗೀತೆಯು **"ನತದ್ಭಾಸಯತೇ ಸೂರ್ಯೋನ ಶಶಾಂಕೋ ನಪಾವಕಃ । ಯದ್ಗತ್ವಾನ ನಿವರ್ತನ್ತೇ ತದ್ಧಾಮ ಪರಮಂ ಮಮ"** ಎಂಬಲ್ಲಿ ಜೀವಾತ್ಮನನ್ನು ಪರಮಂ **ಧಾಮ**-ಶ್ರೇಷ್ಠವಾದ ಜ್ಯೋತಿಸ್ಸು ಎಂದು ಹೇಳಿ ಅದನ್ನು ವಿಶದೀಕರಿಸುವುದಕ್ಕಾಗಿ **ಆ ತದ್ಧಾಮವು "ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ"** ಎಂದು ಮುಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿರುತ್ತದೆ. ಜ್ಞಾನಸ್ವರೂಪ **ಗುಣ**ಗಳಿಂದ ಶೋಭಾಯಮಾನನೆಂದು **ಹತಾಖಿಲಕ್ಲೇಶ ಮಲ**ವುಳ್ಳವರೆಂದು ಹೇಳಲ್ಪಟ್ಟಿದೆ. ಬದ್ಧರಾದವರೇ ಒಂದುಕಾಲದಲ್ಲಿ ಕ್ಲೇಶಮಲಗಳನ್ನು ಹೊಂದಿದ್ದರೂ ಮುಕ್ತ ದಶೆಯಲ್ಲಿ ಅವುಗಳಿಂದ ದೂರೀಕೃತರಾಗುವಾಗ, ನಿತ್ಯರಿಗೆ ಸ್ವಾಮಿಯ ನಿತ್ಯ

ಸಂಕಲ್ಪದಿಂದ ಕ್ಲೇಶಮಲವು ಎಂದಿಗೂ ಬೇಡವೆಂದು ಏರ್ಪಟ್ಟವರಿಗೆ ಕ್ಲೇಶಮಲಗಳು ಎಲ್ಲಿಯವು? ಹೀಗೆ ನಿತ್ಯರು ಸ್ವಭಾವತಃ ಪ್ರಕೃತಿ ಸಂಬಂಧವೆಂದಿಗೂ ಇಲ್ಲದವರು. ಪ್ರಕೃತಿ ಸಂಬಂಧವಿರುವುದೇ ಕ್ಲೇಶಮಲಗಳಿಗೆ ಕಾರಣವು. ಅದರ ಸಂಬಂಧವೆಂದಿಗೂ ಇಲ್ಲದವರಾದುದರಿಂದ, **ಹತಾಖಿಲ ಕ್ಲೇಶರು.**

ಈ ಅಭಿಪ್ರಾಯವು "**ತದ್ವಿಷ್ಣೋಃ ಪರಮಂಪದಂ ಸದಾಪಶ್ಯನ್ತಿ ಸೂರಯಃ ದಿವೀವ ಚಕ್ಷುರಾತತಂ ತದ್ವಿಪ್ರಾಸೋವಿಪನ್ಯವೋ ಜಾಗೃವಾಂಸಸ್ಸಮಿನ್ಧತೇ**" ಎಂಬ ಶ್ರುತಿಯಲ್ಲಿ ಉಪಪಾದಿತವು. ಈ ಶ್ರುತಿವಾಕ್ಯವೇ ಈ ಶ್ಲೋಕದಲ್ಲಿ ಉಪಪಾದಿಸಲ್ಪಟ್ಟಿರುತ್ತದೆ. ಈ ಶ್ರುತಿಯ ಅರ್ಥವೇನೆಂದರೆ, **ತದ್ವಿಷ್ಣೋಃ ಪರಮಂಪದಂ**–ಆ ಮಹಾ ವಿಷ್ಣುವಿನ ಪ್ರಸಿದ್ಧವಾದ ವೈಕುಂಠವನ್ನು ವಿಪ್ರಾಸಃ–ಮಹಾ ಪ್ರಾಜ್ಞರಾಗಿಯೂ **ಜಾಗೃವಾಂಸಃ**–ಭ್ರಮಜ್ಞಾನರಹಿತರಾಗಿಯೂ ಇರುವ ನಿತ್ಯಸೂರಿಗಳು **ವಿಪನ್ಯವಃ**–ಸ್ತುತಿಸುವವರಾಗಿ, **ಸಮಿಂಧತೇ**–ಪ್ರಕಾಶಿಸುತ್ತಿರುವರು. ಈ ಅಭಿಪ್ರಾಯವೇ ಪುರುಷಸೂಕ್ತದ ೧೬ನೆಯ ಋಕ್ಕಿನಲ್ಲಿ "**ಯತ್ರ ಪೂರ್ವೇಸಾಧ್ಯಾಃ ಸನ್ತಿದೇವಾಃ**" ಎಂಬಲ್ಲೂ ಬೋಧಿತವು. ಇಲ್ಲಿ **ಹತಾಖಿಲ ಕ್ಲೇಶಮಲಸ್ವಭಾವ**ರೆಂದು ಹೇಳಿರುವುದರಿಂದ ಪೂರ್ವದಲ್ಲಿ ಕ್ಲೇಶ ಮಲಗಳಿದ್ದುವು, ಈಗ ಅವು ಹತಗಳಾಗಿವೆ ಎಂದು ಅರ್ಥಮಾಡಿ ಇದು **ಮುಕ್ತರ** ವಿಷಯವೆಂದು ಅರ್ಥಮಾಡುವುದರಲ್ಲಿ ಏನೂ ತೊಂದರೆ ಇಲ್ಲವು. ಆದರೂ ಸರ್ವೇಶ್ವರನ ನಿತ್ಯಸಂಕಲ್ಪದಿಂದ ಯಾವಾಗಲೂ **ಹತಾಖಿಲ ಕ್ಲೇಶಸ್ವಭಾವ**ರಾಗಿ ನಿತ್ಯರಾಗಿರುವುದರಿಂದ ನಿತ್ಯರೇ ಇಲ್ಲಿ ಮುಖ್ಯವಾಗಿ ಹೇಳಲ್ಪಟ್ಟರೆಂದು ಭಾವಿಸತಕ್ಕದ್ದು. ನಿತ್ಯ ಸರ್ವಜ್ಞತೆಯಿಂದ ಕೂಡಿದವರಾದುದರಿಂದ **ಹತಾಖಿಲ ಕ್ಲೇಶಮಲ ಸ್ವಭಾವರು.** ಮೇಲಿನ ಶ್ರುತಿಯ ಅಭಿಪ್ರಾಯಾನುಗುಣವಾಗಿ **ತ್ವದಾನುಕೂಲ್ಯೈಕ ಕರಸರು** ಎಂದೂ ಹೇಳಲ್ಪಟ್ಟರು. **ವಿಪ್ರಾಸಃ ಜಾಗೃವಾಂಸಃ** ಎಂದು ಹೇಳಿರುವುದಕ್ಕೆ ಸರಿಯಾಗಿ ತಮ್ಮ ಸರ್ವಜ್ಞತೆಯಿಂದಲೂ ಭ್ರಮಜ್ಞಾನ ರಾಹಿತ್ಯದಿಂದಲೂ ಯಾವಾಗಲೂ ಸರ್ವೇಶ್ವರನಿಗೆ ಅನುಕೂಲರಾಗಿದ್ದುಕೊಂಡಿರುವುದೇ ತಮಗೆ ಮುಖ್ಯಾನಂದ ರಸವೆಂದು ಭಾವಿಸಿರುವವರು. ತಮ್ಮ ಭಗವಚ್ಛೇಷತ್ವವನ್ನರಿತವರಾಗಿ ತಮ್ಮ ಪಾರತಂತ್ರಕ್ಕೆ ಅನುಗುಣವಾಗಿ ಕೈಂಕರ್ಯಗಳನ್ನೆಸಗುವುದೇ ತಮಗೆ ಸ್ವರೂಪವೆಂದು ಭಾವಿಸಿ ತನ್ಮೂಲಕ ಆನಂದಿಸುವವರು ಎಂಬರ್ಥವು. ನಿರತಿಶಯ ಮಹಿಮೆಯನ್ನು ಹೊಂದಿ ಸರ್ವಶೇಷಿಯಾಗಿ ಸರ್ವಾಧಿಕನಾಗಿರುವ ಸರ್ವೇಶ್ವರನಿಗೆ ಕೈಂಕರ್ಯಮಾಡಲು ಯೋಗ್ಯರಾದವರು. ಇಂತಹ ಪ್ರಾಜ್ಞರಾದ ನಿತ್ಯಸೂರಿಗಳೇ ಎಂದು ತಿಳಿಸುವುದಕ್ಕಾಗಿ **ತವೋಚಿತೈಃ** ಎಂಬುದರಿಂದ ಗ್ರಹಿಸಬಹುದು. ಆದುದರಿಂದಲೇ ಅವರು **ಗೃಹೀತ ತತ್ತತ್ಪರಿಚಾರ ಸಾಧನರು.** ಇವೆಲ್ಲಾ ಇವರಿಗೆ ಉಂಟಾದುದು ವಾಸುದೇವಮೂರ್ತಿಯ ಸಂಕಲ್ಪಾಯತ್ತವಾದುದೆಂದು ತಿಳಿಯತಕ್ಕದ್ದು. ಇದು ಇವರಿಗೆ ಮಾತ್ರವೇ ಅಲ್ಲದೆ

ಹಿಂದೆ ಹೇಳಿದ ಅನನ್ತ ಗರುಡ ವಿಷ್ವಕ್ಸೇನರಿಗೂ ಸಮಾನವಾದುದು. ಅವರು ಪರಿಚರ್ಯಸಾಧನವುಳ್ಳವರೆಂದು ಹೇಳಲ್ಪಟ್ಟರು. ಆ ಸಾಧನಗಳು ಯಾವುವೆಂದರೆ ಛತ್ರ ಚಾಮರಾದಿಗಳು. ಇವರನ್ನು ಸಚಿವರೆಂದು ಹೇಳಿರುವುದರ ಅಭಿಪ್ರಾಯ ವೇನೆಂದರೆ? ಪ್ರಾಪ್ತಕಾಲಗಳಲ್ಲಿ ಇವರೊಂದಿಗೆ ಸರ್ವೇಶ್ವರನು ಮನ್ತ್ರಾಲೋಚನೆ ನಡೆಸುವನಾದುದರಿಂದ ಸಚಿವರು. ಇವರನ್ನು ತನಗೆ ಅಭಿಮತವಾದ ವಿಭೂತಿಯ ನಿರ್ವಾಹದಲ್ಲಿ ಸರ್ವೇಶ್ವರನು ಅವರೊಂದಿಗೆ ಆಲೋಚಿಸಿ ನಿಯಮಿಸಬಹುದು. ಮತ್ತು ಲೀಲಾ ವಿಭೂತಿಯಲ್ಲಿ ಅವತಾರ ಮೊದಲಾದ ಕಾಲದಲ್ಲಿ ತನಗೆ ಸಹಾಯಕ ರಾಗಿ ಅವತರಿಸುವ ಹಾಗೆ ಮಾಡುವುದರಿಂದಲೂ ಸಚಿವರು. ದುಷ್ಟರು ಭೂಲೋಕ ದಲ್ಲಿ ಹೆಚ್ಚಿದರೂ ಅವರ ನಿಗ್ರಹಕ್ಕಾಗಿಯೂ, ಸಾಧುಜನ ಪರಿತ್ರಾಣದಲ್ಲೂ ಧರ್ಮ ಸಂಸ್ಥಾಪನಾದಿ ಕಾರ್ಯಗಳಲ್ಲಿ ಇವರು ಸಹಾಯ ಮಾಡಬೇಕೆಂದು ಆಜ್ಞಪ್ತರಾಗಿರು ವುದರಿಂದಲೂ ಸಚಿವರು. ಸರ್ವಜ್ಞನಾಗಿ ಸರ್ವಶಕ್ತನಾಗಿರುವವನಿಗೆ ಇತರರಿಂದ ಸಹಾಯ ಬೇಕೇ? ಎಂದಾಕ್ಷೇಪಿಸಿದರೆ ಸ್ವತಂತ್ರನಾದವನ ಅಪೇಕ್ಷೆಯ ಮೇಲೆ ಪೂರ್ವಪಕ್ಷವು ಹೇಗೆ ಕೂಡುತ್ತದೆ? ನಿತ್ಯರೂ ಕೂಡ ಸರ್ವಜ್ಞರಾಗಿ ಇಂಗಿತಜ್ಞ ರಾದುದರಿಂದ ಆ ಸಾಚಿವ್ಯವು ಯಥೋಚಿತವೆಂದು ಹೇಳಲ್ಪಟ್ಟಿತು. ಸರ್ವೇಶ್ವರನಾಗಿ ಸರ್ವಜ್ಞನಾಗಿ ಸ್ವತನ್ತ್ರನಾದವನಿಗೆ ಸಾಚಿವ್ಯವು ಹೇಗೆ ಉಚಿತವೋ ಹಾಗೆ ನಡೆಸು ವವರಾದ ಪ್ರಯುಕ್ತ **ಯಥೋಚಿತಂ ನಿಷೇವ್ಯಮಾಣಂ** ಎಂಬ ಪ್ರಯೋಗವು. **ಯಥೋಚಿತಂ ನಿಷೇವ್ಯಮಾಣಂ** ಎಂದು ಅನ್ವಯವಾದುದರಿಂದ, ಸಾಚಿವ್ಯ ದಲ್ಲೂ ಕೈಂಕರ್ಯದಲ್ಲೂ ಸ್ತುತಿ ಮೊದಲಾದ ಸರ್ವವಿಧವಾದ ಸೇವೆಗಳಲ್ಲೂ ಯಥೋ ಚಿತನಾಗಿ ನಡೆದುಕೊಳ್ಳುವವರೆಂಬುದು ತೋರಿಬರುತ್ತದೆ. ಯಥೋಚಿತ ಸಾಚಿ ವ್ಯದಲ್ಲಿ ಸ್ವಾಮಿಯ ಇಷ್ಟವನ್ನು ಪರಿಶೀಲಿಸುವುದಾದರೆ ಶ್ರೀ ರಾಮಚಂದ್ರಪ್ರಭುವು ವಿಭೀಷಣ ಪರಿಗ್ರಹ ವಿಷಯದಲ್ಲಿ, ಜಾಂಬವ, ಸುಗ್ರೀವ, ಆಂಜನೇಯರೊಂದಿಗೆ ಮಾಡಿದ ಮಂತ್ರಾಲೋಚನೆಯನ್ನೂ ದುರ್ಯೋಧನಾದಿಗಳ ನಿಗ್ರಹ ವಿಷಯದಲ್ಲಿ, ಧರ್ಮರಾಯ ಭೀಮಾರ್ಜುನಾದಿಗಳೊಂದಿಗೆ ನಡೆಸಿದ ಮಂತ್ರಾಲೋಚನೆ ಯನ್ನೂ ನಿದರ್ಶನವಾಗಿ ಇಟ್ಟುಕೊಳ್ಳಬಹುದು. ಹಾಗೆಯೇ ನಿತ್ಯರಲ್ಲೂ ಆಲೋಚಿಸಿ, ಅವರುಗಳು ಆಳ್ವಾರ್, ಆಚಾರ್ಯರುಗಳಾಗಿ ಅವತರಿಸಿ, ಲೋಕೋ ಜ್ಜೀವನವನ್ನು ಮಾಡುವಹಾಗೆ ಮಾಡಬಹುದು. ಹಾಗೆಯೇ ಮುಕ್ತರುಗಳನ್ನೂ ಸ್ವಾಮಿಯು ಆಜ್ಞಾಪಿಸಬಹುದು ಈ ಅಭಿಪ್ರಾಯವು ಈ ಮುಂದಿನ ಭಾಗವತ ಶ್ಲೋಕದಲ್ಲಿ ಸೂಚಿತವೆಂದು ಭಾವಿಸಬಹುದು. **"ಜನಸ್ಯ ಕೃಷ್ಣಾದ್ವಿಮು ಖಸ್ಯ ದೈವಾದಧರ್ಮಶೀಲಸ್ಯ ಸುದುಃಖಿತಸ್ಯ । ಅನುಗ್ರಹಾಯೈವ ಚರನ್ತಿ ನೂನಂ ಭೂತಾನಿ ಭವ್ಯಾನಿ ಜನಾರ್ದನಸ್ಯ ॥"** ಪ್ರಾರಬ್ಧ ಕರ್ಮವಶರಾಗಿ ಶ್ರೀ ಕೃಷ್ಣನಿಂದ ವಿಮುಖರಾಗಿ ಆ ಕಾರಣದಿಂದ ಅಧರ್ಮಶೀಲರಾಗಿ ತುಂಬಾ ದುಃಖವನ್ನು ಅನುಭವಿಸುತ್ತಿರುವ ಜನರಿಗೆ ತಮ್ಮ ಜ್ಞಾನೋಪದೇಶದ ಮೂಲಕ ಅನುಗ್ರಹ ಉಂಟಾಗುವುದಕ್ಕಾಗಿ ಶ್ರೀ ಜನಾರ್ದನನು ಪರಮ ಭಾಗವತೋತ್ತಮ

**ಅಪೂರ್ವ ನಾನಾರಸಭಾವ ನಿರ್ಭರ**
**ಪ್ರಬುದ್ಧಯಾ ಮುಗ್ಧವಿದಗ್ಧಲೀಲಯಾ ।**
**ಕ್ಷಣಾಣುವತ್ಕ್ಷಿಪ್ತ ಪರಾದಿಕಾಲಯಾ**
**ಪ್ರಹರ್ಷಯನ್ತಂ ಮಹಿಷೀಂ ಮಹಾಭುಜಂ　॥ ೪೪ ॥**

ರಾದ ತನ್ನವರನ್ನು ಭೂಮಿಯಲ್ಲಿ ಜನಿಸಿ ಸಂಚರಿಸುವ ಹಾಗೆ ಮಾಡುತ್ತಾನೆಂದೂ ಹೇಳಲ್ಪಟ್ಟಿದೆ.

**ಅವತಾರಿಕೆಯು**—ಹಿಂದೆ ಉಪಪಾದಿಸಲ್ಪಟ್ಟ ಪ್ರತಿಯೊಂದು ವ್ಯಾಪಾರಗಳಲ್ಲೂ "**ಸಹಧರ್ಮಚರೀತವ**" ಎಂಬಲ್ಲಿ ಸೂಚಿಸಲ್ಪಟ್ಟ ಲಕ್ಷ್ಮಿಯ ಅನ್ವಯವನ್ನೂ ಸಾಮರಸ್ಯವನ್ನೂ ಮನಸ್ಸಿನಲ್ಲಿಟ್ಟು ಹೇಳುತ್ತಾರೆ ಲೀಲಾ ವಿಭೂತಿಯಲ್ಲೆಲ್ಲಾ ಸ್ವಾಮಿಯು ಲಕ್ಷ್ಮಿಯೊಂದಿಗೆ ವಿಹರಿಸುವವರಾಗಿ ಅನೇಕ ಕಲ್ಪಕೋಟಿ ಕಾಲಗಳನ್ನೂ ಒಂದು ತ್ರುಟಿಯ ಹಾಗೆ ಕಳೆಯುತ್ತಾರೆಂದು ಹೇಳಿ ಸರ್ವೇಶ್ವರನಿಗೆ ಲಕ್ಷ್ಮಿಯ ಆಲಿಂಗನಾದಿಗಳಿಗೆ ಸಹಾಯಕವಾಗಿರುವ ಚತುರ್ಭುಜತ್ವವಿರುವ ದಿವ್ಯ ಮಂಗಳ ವಿಗ್ರಹವನ್ನು ಅನುಭವಿಸುತ್ತಾರೆ.

**ಅರ್ಥವು**—**ಅಪೂರ್ವ ನಾನಾರಸಭಾವ ನಿರ್ಭರ ಪ್ರಬುದ್ಧಯಾ, ಅಪೂರ್ವ**-ಹೊಸ ಹೊಸದಾಗಿ ತೋರುವ, **ನಾನಾರಸ**-ನಾನಾವಿಧಗಳಾದ, ಶೃಂಗಾರಾದಿ ನವರಸಗಳೇನು, **ಭಾವ**-ನಾನಾವಿಧಗಳಾದ ಅನುಭಾವಾದಿಗಳೊಂದಿಗೆ ತೋರುವುವೇನು, ಇವುಗಳಿಂದ, **ನಿರ್ಭರ** ಪರಿಪೂರ್ಣವಾಗೋಣ ಹೇಗೋ ಹಾಗೆ **ಪ್ರಬುದ್ಧಯಾ**—ಪ್ರಕಾಶವಾಗಿ ತೋರುತ್ತಿರುವ, **ಕ್ಷಣಾಣುವತ್ಕ್ಷಿಪ್ತ ಪರಾದಿ ಕಾಲಯಾ**, ಕ್ಷಣ-ಕ್ಷಣಕಾಲದ, **ಅಣುವತ್**-ಅತ್ಯಲ್ಪ ಭಾಗದ ಹಾಗೆ, **ಕ್ಷಿಪ್ತ**—ಕಳೆಯಲ್ಪಟ್ಟ, **ಪರಾದಿ ಕಾಲಯಾ**—ಅನೇಕ ಚತುರ್ಮುಖರ ಪ್ರಳಯವೇ ಮೊದಲಾಗಿವುಳ್ಳ ಅನನ್ತ ಕಾಲವುಳ್ಳ, ಇದು ಮುಂದೆ **ಮುಗ್ಧವಿದಗ್ಧ ಲೀಲಯಾ** ಎಂಬುದಕ್ಕೆ ವಿಶೇಷಣವು. ಈ ನವರಸ ಯುಕ್ತವಾದ ವಿಭ್ರಮ ವಿಲಾಸ ಚೇಷ್ಟಿತಗಳಿಂದ, ಅನೇಕ ಬ್ರಹ್ಮಕಲ್ಪಗಳು ಕೂಡ ಸರ್ವೇಶ್ವರನಿಗೆ ಒಂದುಕ್ಷಣದ ಅತ್ಯಲ್ಪ ಕಾಲದಂತೆ ಕಳೆಯುತ್ತದೆಂದು ಹೇಳಿರುತ್ತಾರೆ. ಹೀಗೆ ಅನನ್ತಕಾಲವನ್ನುಳ್ಳ, **ಮುಗ್ಧವಿದಗ್ಧ ಲೀಲಯಾ**—ಮನೋಹರವಾಗಿಯೂ, ಪ್ರೌಢವಾಗಿಯೂ, ಅತ್ಯದ್ಭುತವಾದ ಲೀಲೆಯಿಂದ, **ಮಹಿಷೀಂ**-ತನ್ನ ಪಟ್ಟಮಹಿಷಿಯಾದ ಲಕ್ಷ್ಮಿಯನ್ನು, **ಪ್ರಹರ್ಷಯನ್ತಂ**-ಸಂತೋಷಪಡಿಸುತ್ತಿರುವ, **ಮಹಾಭುಜಂ**--ಮಹಾಪರಾಕ್ರಮವುಳ್ಳ ನಾಲ್ಕು ಭುಜಗಳನ್ನುಳ್ಳ, "**ಭವನ್ತಂ**" ನಿನ್ನನ್ನು ಎಂಬುದರೊಂದಿಗೆ ಅನ್ವಯವು.

**ಉಪಪಾದನೆಯು**--ಸ್ವಾಮಿಗೆ ಲೀಲಾ ವಿಭೂತಿಯಲ್ಲಿ ನಿತ್ಯವಿಭೂತಿಯಲ್ಲಿನ ಹಾಗೆ ವಿಶೇಷಪ್ರೀತಿಯು, ಇಲ್ಲಿನ ಚೇತನರುಗಳ ಅನುಗ್ರಹಾರ್ಥವಾಗಿಯೂ

ಧರ್ಮ ಸಂಸ್ಥಾಪನೆಗಾಗಿಯೂ, ಅವತಾರಗಳನ್ನು ಎತ್ತುವುದರ ಮೂಲಕವಾಗಿ ವಿಭ್ರಮ, ವಿಲಾಸಗಳೊಂದಿಗೆ ಪ್ರದರ್ಶಿಸಿದ ದಿವ್ಯಚೇಷ್ಟಿತಗಳಲ್ಲಿ ಶೃಂಗಾರಾದಿ ರಸಗಳು ತತ್ತದವಸರಗಳಲ್ಲಿ ಪ್ರದರ್ಶಿಸಲ್ಪಟ್ಟಿರುವುದಲ್ಲದೆ ಅವುಗಳು, ಅನುಭವಿಸುವ ಪ್ರಪನ್ನರಿಗೆ ಹೊಸಹೊಸದಾಗಿ ತೋರುತ್ತವೆಂದು ಹೇಳುವುದಕ್ಕಾಗಿ **ಅಪೂರ್ವ ನಾನಾರಸಭಾವ ನಿರ್ಭರ ಪ್ರಬುದ್ಧಯಾ** ಎಂಬ ಪ್ರಯೋಗವು. "**ಶೃಂಗಾರವೀರ ಕರುಣಾದ್ಭುತ ಹಾಸ್ಯಭಯಾನಕಾಃ । ಬೀಭತ್ಸ ರೌದ್ರೇಶಾ ಚ ರಸಾಃ**" ಎಂಬುದಾಗಿ ರಸಗಳು ಹೇಳಲ್ಪಟ್ಟಿವೆ. ಕೃಷ್ಣಾವತಾರದಲ್ಲಿ ಗೋಪಿಗಳೊಂದಿಗೆ ವಿಹರಿಸಿರುವುದೂ, ವಸ್ತ್ರಾಪಹರಣದಲ್ಲೂ ಮತ್ತು ತಾನೇ ಮೋಹಿನ್ಯವತಾರವನ್ನು ತಾಳಿದಾಗ ಶೃಂಗಾರರಸ ಪ್ರದರ್ಶಕ ಚೇಷ್ಟೆಗಳು ವ್ಯಕ್ತವು. ವೀರರಸವನ್ನು ೧೪೦೦೦ ರಾಕ್ಷಸರನ್ನು ಅತ್ಯಲ್ಪಕಾಲದಲ್ಲಿ ಕೊಂದು. ಅದನ್ನು ಕಂಡು ಸೀತೆಯು ತನ್ನನ್ನು ಆಲಿಂಗನ ಮಾಡಿದಾಗ ಕಾಣಬಹುದು "**ಚತುರ್ದಶ ಸಹಸ್ರಾಣಿ ರಕ್ಷಸಾಂ ಕ್ರೂರ ಕರ್ಮಣಾಂ । ಏಕಶ್ಚ ರಾಮೋಧರ್ಮಾತ್ಮಾ ಕಥಂಯುದ್ಧಂ ಭವಿಷ್ಯತಿ**" ಎಂದು ರಾಜರ್ಷಿ ಸಿದ್ಧಾದಿಗಳು ನೋಡಿ ಸಾಧ್ಯವೇ ? ಎಂದು ಯೋಚಿಸುತ್ತಿದ್ದಾಗಲೇ ರಾಕ್ಷಸರೆಲ್ಲರೂ ಹತರಾದುದೂ, ರಾವಣನೊಂದಿಗೆ ಯುದ್ಧವೂ, ವೀರರಸವನ್ನು ಪ್ರಕಟಿಸುತ್ತದೆ. ಕಾರುಣ್ಯವನ್ನು ಧ್ರುವ ಪರಿಪಾಲನ, ಗಜೇಂದ್ರ ಮೋಕ್ಷಣ, ವಿಭೀಷಣ ಪರಿಗ್ರಹ, ಪ್ರಹ್ಲಾದಾನುಗ್ರಹಗಳಿಂದ ಗ್ರಹಿಸಬಹುದು. ಅದ್ಭುತವನ್ನು ಗೋವರ್ಧನೋದ್ಧರಣ, ಕಾಳೀಯಮರ್ದನ ಮೊದಲಾದವುಗಳಲ್ಲಿ ಕಾಣಬಹುದು. ಹಾಸ್ಯರಸವು, ಅರ್ಜುನನುಬಂಧುವು, ಯುದ್ಧವು ತನಗೆ ಉಚಿತವಲ್ಲವೆಂದು ದುಃಖಿಸುತ್ತಿರಲಾಗಿ, ತಾನು "**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ**" ಎಂದು ನಗುತ್ತಾ ಮಾತನಾಡುವುದರಿಂದಲೂ, ಹಾಗೆಯೇ ಶ್ರೀರಾಮನು ವನಕ್ಕೆ ಪ್ರಯಾಣ ಮಾಡುವಾಗ ಎಲ್ಲರೂ ದುಃಖಾಕ್ರಾಂತರಾಗಿರುವಾಗ, ತಿಜಟನೆಂಬ ಬ್ರಾಹ್ಮಣನು ಹೆಂಡತಿಯಿಂದ ಪ್ರೇರಿತನಾಗಿ ಬಂದು "**ನಿರ್ಧನೋ ಬಹುಪುತ್ರೋಸ್ಮಿ**" ಎಂದು ತಿಳಿಸಲು, ಅದಕ್ಕೆ ಕರುಣಾಸಾಗರನು "**ತಮುವಾಚ ತತೋರಾಮಃ ಪರಿಹಾಸ ಸಮನ್ವಿತಂ**" ಪರಿಹಾಸದಿಂದ ಯುಕ್ತನಾಗಿ ಹೇಳುತ್ತಾನೇನೆಂದರೆ, ಒಂದು ದಂಡವನ್ನು ತೆಗೆದುಕೊಂಡು ಈ ನಿಲ್ಲಿಸಿರುವ ಗೋ ಬೃಂದದಲ್ಲಿ ಎಷ್ಟುದೂರ ಎಸೆಯುತ್ತೀಯೋ ಅಷ್ಟು ಗೋವುಗಳೆಲ್ಲಾ ನಿನ್ನವು ಎಂದು, ಈ ಹಾಸ್ಯ ಸನ್ನಿವೇಶವನ್ನು ಮಹರ್ಷಿಯು "**ಸಶಾಟೀಂ ತ್ವರಿತಃ ಕಟ್ಯಾಂ ಸಂಭ್ರಾನ್ತಃ ಪರಿವೇಷ್ಟ್ಯತಾಂ । ಆವಿಧ್ಯದಂಡಂ ಚಿಕ್ಷೇಪ ಸರ್ವಪ್ರಾಣೇನವೇಗಿತಃ**" (ಅಯೋ. ೩೨-೩೭) ಆ ಬ್ರಾಹ್ಮಣನು ತನ್ನ ಹರಕು ಉತ್ತರೀಯವನ್ನು ಬೇಗನೆ ಸೊಂಟಕ್ಕೆ ಸುತ್ತಿ, ತನ್ನ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ವೇಗದಿಂದ ಎಸೆದನೆಂದು ವಿನೋದವಾಗಿ ವರ್ಣಿಸಿರುತ್ತಾರೆ. ಎಲ್ಲರಿಗೂ ದುಃಖವಾದರೂ ಈ ಲೀಲಾ ಮಾನುಷ ವಿಗ್ರಹನಿಗೆ ಶೋಕವಿಲ್ಲ. ಆಗಲೂ ಲೀಲೆಯೇ ಎಂಬ ಭಾವವು ತೋರಿಬರುತ್ತದೆ. ಹಾಗೆಯೇ ಭಾಗವತ (೧೦-೧೩-೧೬) ನೆಯ ಶ್ಲೋಕವಾದ "**ಬಿಭ್ರದ್ವೇಣುಂ**"

ಎಂಬ ಶ್ಲೋಕವೂ ಅನುಸಂಧೇಯವು. ಭಯಾನಕವನ್ನು ನೃಸಿಂಹಾವತಾರದಲ್ಲೂ, ಪರಶುರಾಮಾವತಾರದಲ್ಲೂ, ಶ್ರೀರಾಮಾವತಾರದಲ್ಲಿ **"ಚಾಪಮಾನಯ ಸೌಮಿತ್ರೇ" "ಸಾಗರಂ ಶೋಷಯಿಷ್ಯಾಮಿ ಪದ್ಭ್ಯಾಂಯಾಂತು ಪ್ಲವಂಗಮಾಃ"** ಎಂಬಿವೇ ಮೊದಲಾದ ಸ್ಥಳಗಳಲ್ಲಿ ಕಾಣಬಹುದು. ಇದು ರೌದ್ರರಸಕ್ಕೂ ನಿದರ್ಶನವಾಗಬಹುದು. ಬೀಭತ್ಸ ರಸವನ್ನು ಪ್ರದರ್ಶಿಸಿರುವುದಕ್ಕೆ ನಿದರ್ಶನವು. ಯಶೋದೆಯಿಂದ ಹಗ್ಗದಿಂದ ಬಂಧಿಸಲ್ಪಟ್ಟು ಶಿಕ್ಷಿಸಲ್ಪಟ್ಟಾಗ ಇತ್ತ ನೋವೆಯು ಭಾಗವತದಲ್ಲಿ **"ಗೋಪ್ಯಾದದೇ ತ್ವಯಿಕೃತಾಗಸಿ"** ಎಂಬ ಶ್ಲೋಕದಲ್ಲಿ ಮತ್ತು **"ಕೃತಾಗಸಂತಂ ಪ್ರರುದನ್ತಮಕ್ಷಿಣೀ ಕಷನ್ತಮಂಜನ್ಮಷಿಣೀ ಸ್ವಪಾಣಿನಾ । ಉದ್ವೀಕ್ಷಮಾಣಂ ಭಯವಿಹ್ವಲೇಕ್ಷಣಂ ಹಸ್ತೇ ಗೃಹೀತ್ವಾಭಿಷಯನ್ತ್ಯವಾಗುರತ್"** ಎಂಬ ಅದ್ಭುತ ಶ್ಲೋಕಗಳಲ್ಲಿ ವ್ಯಕ್ತವು. ಹೀಗೆ ನಾನಾರಸಗಳನ್ನೂ ಭಾವಗಳನ್ನೂ ಬಹುಸ್ವಾರಸ್ಯದಿಂದ ಅವತಾರಕಾಲಗಳಲ್ಲಿ ಅಪೂರ್ವವಾಗಿ ಪ್ರದರ್ಶಿಸಿರುವುದರಿಂದ **"ಅಪೂರ್ವ ನಾನಾರಸಭಾವ ನಿರ್ಭರ ಪ್ರಬುದ್ಧಯಾ"** ಎಂಬ ಪ್ರಯೋಗವು. ಇದು **ಲೀಲಯಾ** ಎಂಬುದಕ್ಕೆ ವಿಶೇಷಣವು.

ಆ ಲೀಲೆಯು ಇನ್ನೂ ಎಂತಾದ್ದೆಂದರೆ **ಮುಗ್ಧವಿದಗ್ಧ ಲೀಲಯಾ** ಮನೋಹರವಾಗಿಯೂ ಇರುವುದಲ್ಲದೆ ವಿಶೇಷ ಪ್ರಾಜ್ಞತೆಯನ್ನು ತೋರುವ ಲೀಲೆಯು, ಶಿಷ್ಟರ ವಿಷಯದಲ್ಲಿ ತೋರಿದ ಅನುರಾಗ ವಾತ್ಸಲ್ಯಾದಿಗಳು ಇದಕ್ಕೆ ನಿದರ್ಶನವು, ಧ್ರುವ ಪ್ರಹ್ಲಾದಿಗಳೊಂದಿಗೆ ನಡೆಸಿದ ಲೀಲಾಚೇಷ್ಟಿತಗಳೂ, ಅಂಬರೀಷಾದಿಗಳಿಗೆ ತೋರಿದ ಅನುಗ್ರಹವೂ ಮುಗ್ಧವಾದುವು. ಕಾಲಯವನನ್ನು ಕಂಡು ಭೀತನಾದ ಹಾಗೆ ಓಡಿಹೋಗಿ ಮುಚುಕುಂದನಿದ್ದ ಬಳಿ ಅದೃಶ್ಯನಾಗಿಬಿಟ್ಟು, ಮಲಗಿದ್ದ ಮುಚುಕುಂದನೇ ಕೃಷ್ಣನೆಂದು ಭಾವಿಸಿ ಕಾಲಿನಿಂದ ಒದ್ದುದರಿಂದ ಮುಚುಕುಂದ ದೃಷ್ಟಿಪಾತದಿಂದ ಆ ಕಾಲಯವನನು ಭಸ್ಮವಾಗುವ ಹಾಗೆ ಮಾಡಿದುದು **ಮುಗ್ಧವಿದಗ್ಧ ಲೀಲೆಯು,** ಮತ್ತು ರುದ್ರನಿಂದ, ಯಾರ ತಲೆಯ ಮೇಲೆ ಕೈಯನಿಟ್ಟರೂ ಅವರು ಭಸ್ಮವಾಗುವ ವರವನ್ನು ಪಡೆದ ಭಸ್ಮಾಸುರ ರಾಕ್ಷಸನು, ತನ್ನ ವರದ ಯಾಥಾರ್ಥ್ಯವನ್ನು ಪರೀಕ್ಷಿಸುವುದಕ್ಕಾಗಿ ರುದ್ರನ ತಲೆಯ ಮೇಲೆ ಕೈಯ್ಯನ್ನಿಡಲು ಬರಲಾಗಿ, ಭೀತನಾಗಿ ಓಡಿಹೋಗಿ ವಿಷ್ಣುವಿನ ಮರೆಯನ್ನು ಹೋಗಲಾಗಿ, ವಿಷ್ಣುವು ಆ ಅಸುರನನ್ನು ಕುರಿತು ಹೇಳುತ್ತಾನೇನೆಂದರೆ ಈ ರುದ್ರನು ದಕ್ಷಶಾಪ ಮೊದಲಾದವುಗಳಿಂದ ತನ್ನ ಮಹಾತ್ಮ್ಯೆಯನ್ನು ಕಳೆದುಕೊಂಡಿರುತ್ತಾನೆ. ಬೇಕಾದರೆ ನಿನ್ನ ಕೈಯನ್ನು ನಿನ್ನ ತಲೆಯಮೇಲೇ ಇಟ್ಟು ನೋಡು ಏನೂ ಆಗುವುದಿಲ್ಲವೆಂದು ಹೇಳಿ ಆತನು ಕೈಯ್ಯನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡು ಭಸ್ಮವಾದನು. ಇದೂ ಸರ್ವೇಶ್ವರನ ವಿದಗ್ಧತೆಯನ್ನು ಪ್ರದರ್ಶಿಸುತ್ತದೆ, ಮತ್ತು ಹಿರಣ್ಯಕಶಿಪುವೂ ರಾವಣನೂ ವರಮಹಾತ್ಮ್ಯೆಗಳಿಂದ ಯಾರು ಯಾರಿಂದಲೂ ತಮಗೆ ಮರಣವು ಸಂಭವಿಸಕೂಡದೆಂದು ಹೇಳಿದ್ದರೋ

ಅವರನ್ನೆಲ್ಲಾ ತ್ಯಜಿಸಿ ಬೇರೆ ವಿಧದಿಂದ ಅವರುಗಳಿಗೆ ವ್ಯತ್ಯಯವು ಉಂಟಾಗುವಂತೆ ಮಾಡಿದುದೂ ವಿದಗ್ಧತೆಯನ್ನೇ ಪ್ರದರ್ಶಿಸುತ್ತದೆ.

ಈ ಲೀಲೆಯು ಇನ್ನೂ ಎಂತಾದ್ದೆಂದರೆ, **ಕ್ಷಣಾಣುವತ್ಕ್ಷಿಪ್ತ ಪರಾದಿ ಕಾಲಯಾ** ಚತುರ್ಮುಖಾದಿಗಳ ಕಲ್ಪವೆಲ್ಲಾ ಒಂದುಕ್ಷಣದ ಅತ್ಯಲ್ಪ ಭಾಗದ ಹಾಗೆ ಸ್ವಾಮಿಗೆ ಕಳೆದುಹೋಗುತ್ತದೆಂದೂ ಹಾಗೆ ಲಕ್ಷ್ಮಿಯೊಂದಿಗೆ ಸ್ವಾಮಿಗೆ ಲೀಲೆಯಾದುದರಿಂದ, ಕಾಲವು ತಿಳಿಯದಹಾಗೆ ಕಳೆದುಹೋಗುತ್ತದೆಂಬ ಭಾವದಿಂದ, "**ಕ್ಷಣಾಣುವತ್ಕ್ಷಿಪ್ತ ಪರಾದಿಕಾಲಯಾ**" ಎಂಬ ಪ್ರಯೋಗವು. ಏಕಂ, ದಶ, ಶತಂ, ಸಹಸ್ರಂ, ಅಯುತಂ, ನಿಯುತಂ, ಅರ್ಬುದಂ, ನ್ಯರ್ಬುದಂ, ಬೃಂದಂ, ಮಹಾಬೃಂದಂ, ಖರ್ವಂ, ನಿಖರ್ವಂ, ಶಂಖಂ, ಪದ್ಮಂ, ಸಮುದ್ರಂ, ಮಧ್ಯಂ, ಅಂತಂ, ಪದಾರ್ಧಂ, ಪರಂ, "**ಏವಮಷ್ಟಾದಶೈತಾನಿಪದಾನಿ ಗಣಾನಿ ವಿಧೌ**" ೧೮ನೆಯ ಅಂಕಿಯು ಪರವೆನಿಸುತ್ತದೆ. ೧೮ ಅಂಕಿಗಳಿಗಿಂತ ಮೇಲೆ ಗಣನೆಯು ಊಹಿಸಲು ಅಸಾಧ್ಯವಾದುದರಿಂದ ಅಲ್ಲಿಗೆ ನಿಲ್ಲಿಸಲ್ಪಟ್ಟಿರುತ್ತದೆ. ಹಾಗೆ ಗಣನೆಯು ಕಷ್ಟವೆಂದೇ, "**ಗಂಗಾಯಾಃ ಸಿಕತಾ; ಧಾರಾಃ ಯಥಾ ವರ್ಷತಿ ವಾಸವೇ| ಶಕ್ಯಾಗಣಯಿತುಂ ಲೋಕೇನವ್ಯತೀತಾಃ ಪಿತಾಮಹಾಃ**" ಗಂಗೆಯ ಮರಳನ್ನೂ ಮಳೆಯಲ್ಲಿರುವ ಧಾರೆಯನ್ನೂ ಒಂದುವೇಳೆ ಎಣಿಸಬಹುದಾದರೂ ಚತುರ್ಮುಖ ಬ್ರಹ್ಮರು ಕಲ್ಪ ಕಲ್ಪಗಳಲ್ಲಿ ಎಷ್ಟುಜನ ಕಳೆದುಹೋದರೆಂಬುದನ್ನು ಗಣನೆಮಾಡಲು ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಹೀಗೆ **ಪರ** ವರ್ಷಗಳು ಚತುರ್ಮುಖನ ಆಯುಸ್ಸಾಗುತ್ತದೆ. ಆದರೆ ವಿಷ್ಣುಪುರಾಣದಲ್ಲಿ "**ಪರಾರ್ಧಂ ದ್ವಿಗುಣಂ ಯತ್ತು ಪ್ರಾಕೃತಃ ಸಲಯೋದ್ವಿಜ**" ಪರಾರ್ಧದ ದ್ವಿಗುಣಕಾಲಕ್ಕೆ ಒಂದು ಪ್ರಾಕೃತ ಲಯವಾಗುತ್ತದೆ, ಎಂದು ಹೇಳಿರುತ್ತದೆ. ಇಷ್ಟು ವರುಷಗಳ ಕಾಲವೂ ಲಕ್ಷ್ಮಿಯೊಂದಿಗೆ ವಿಹರಿಸುತ್ತಿರುವುದರಿಂದ ಒಂದು ಕ್ಷಣದ ಅತ್ಯಲ್ಪ ಭಾಗದಂತೆ ಕಳೆದು ಹೋಗುತ್ತದೆಂಬ ಭಾವವು ಪ್ರದರ್ಶಿಸಲ್ಪಟ್ಟಿದೆ.

ಇಂತಹ ಲೀಲೆಯಲ್ಲಿ ಪರಮ ಪುರುಷನಿಗೆ ಆಸಕ್ತಿಯು ಏತರಿಂದ ಎಂದರೆ ಲಕ್ಷ್ಮಿಯೊಂದಿಗೆ ಸದಾ ವಿಹರಿಸಿಕೊಂಡು ಇರುವುದರಿಂದಲೇ ಎಂದು ತಿಳಿಸುವುದಕ್ಕಾಗಿ "**ಮಹಿಷೀಂ ಪ್ರಹರ್ಷಯನ್ತಂ ಮಹಾಭುಜಂ**" ತನ್ನ ಪಟ್ಟಮಹಿಷಿಯಾದ ಲಕ್ಷ್ಮಿಗೆ ಆನಂದವನ್ನುಂಟುಮಾಡುವ ಮಹಾಭುಜಗಳುಳ್ಳವನನ್ನು ಎಂದು ಮುಂದೆ "ಭವನ್ತಂ" ಎಂಬುದಕ್ಕೆ (೪೬ನೆಯ ಶ್ಲೋಕ) ವಿಶೇಷಣವು. ೧೪೦೦೦ ರಾಕ್ಷಸರನ್ನು ಲಕ್ಷ್ಮಣನ ಸಹಾಯ ಕೂಡವಿಲ್ಲದೆ ಒಬ್ಬನೇ ಅಸಹಾಯಶೂರನಾಗಿ ೩||| ಘಳಿಗೆಯಲ್ಲಿ ನಿರ್ಮೂಲಮಾಡಿದುದನ್ನು ಕಂಡು ಸೀತೆಯು ಬಂದು ಆಲಂಗಿಸಿದಾಗ ತಾನೂ ಬಿಗಿದು ಅಪ್ಪಿದ, ಮಹಾ ಭುಜಗಳುಳ್ಳ ಭಾವವನ್ನು ಮಹರ್ಷಿಯು "**ತಂದೃಷ್ಟ್ವಾ ಶತ್ರು ಹಂತಾರಂ ಮಹರ್ಷೀಣಾಂ ಸುಖಾವಹಂ| ಬಭೂವ ಹೃಷ್ಟಾವೈದೇಹೀ ಭರ್ತಾರಂ ಪರಿಷ್ವಸ್ವಜೇ**" ಎಂದು ಈ ಸಂದರ್ಭದಲ್ಲಿ ಸೀತೆಯು ಪತಿಯನ್ನು ಆಲಂಗಿಸಿದ

ರೆಂದು ಮಾತ್ರ ಹೇಳಿದ್ದರೂ ಪತಿಯು ಹಾಗೆಯೇ ಆಲಂಗಿಸಿರಬಹುದೆಂದು ಊಹಿಸಬಹುದು. ಕೃಷ್ಣಾವತಾರಿಯಾಗಿ ರುಕ್ಮಿಣಿಯೊಂದಿಗೆ ಪ್ರಣಯ ಕಲಹವನ್ನು ಅಭಿನಯಿಸುತ್ತಾ ಪರುಷವಾಕ್ಯನ್ನು ಪ್ರಯೋಗಿಸಿದುದರಿಂದ ಪತ್ನಿಯು ಮೂರ್ಛಿತಳಾಗಿ ಭೂಮಿಯಲ್ಲಿ ಶಯನಿಸಲು, ಅದಕ್ಕೆ ತುಂಬಾ ಕಾತರನಾಗಿ ಚತುರ್ಭುಜಗಳ ಆವಿಷ್ಕಾರ ಮೂಲಕ ಎರಡು ತೋಳುಗಳಿಂದ ಎತ್ತಿ ಆಲಿಂಗಿಸಿ ಮಿಕ್ಕ ತೋಳುಗಳಿಂದ ಕಣ್ಣೀರನ್ನು ಒರೆಸಿ ಆಕೆಯ ಕೂದಲನ್ನು ಹಿಂದಕ್ಕೆ ಮಾಡಿದರೆಂದು ಕವಿಯು, "**ಪರ್ಯಂಕಾದವರುಹ್ಯಾಶು ತಾಮುತ್ಥಾಪ್ಯ ಚತುರ್ಭುಜಃ। ಕೇಶಾನ್ ಸಮೂಹ್ಯ ತದ್ವಕ್ತ್ರಂ ಪ್ರಾಮೃಜತ್ಪದ್ಮಪಾಣಿನಾ। ಪ್ರಮೃಜ್ಯಾಶ್ರುಕಲೇ ನೇತ್ರೇ ಸ್ತನೌ ಚೋಪಹತಾಶುಚಾ। ಆಶ್ಲಿಷ್ಯ ಬಾಹುನಾ ರಾಜನ್ ಅನನ್ಯವಿಷಯಾ ಸತೀಂ ||**" (ಭಾಗ ೧೦-೪೦-೨೫) ಎಂದು ವರ್ಣಿಸಿ, ಮಹತ್ತಾದ ಚತುರ್ಭುಜಗಳ ಸಾರ್ಥಕ್ಯವನ್ನು ಉಪಪಾದಿಸಿರುತ್ತಾರೆ ಶ್ರೀ ವೀರರಾಘವೀಯವ್ಯಾಖ್ಯಾನದಲ್ಲಿ ಬಹು ಸ್ವಾರಸ್ಯವಾಗಿ "**ಉತ್ಥಾಪನಾಶ್ಲೇಷಣ, ವಕ್ತ್ರ ಪರಿಮಾರ್ಜನಾರ್ಥಮಾವಿಷ್ಕೃತ ಚತುರ್ಭುಜಃ**" ತನ್ನ ಪತ್ನಿಯನ್ನು ಎತ್ತೋಣ, ಆಲಿಂಗನ ಕಣ್ಣೊರಿಸೋಣ, ತಲೆಯ ಕೂದಲನ್ನು ಸರಿಪಡಿಸೋಣ, ಇವುಗಳಿಗೆ ತಮ್ಮ ದ್ವಿಭುಜವು ಸಾಕಾಗದೆ ಆಗ ಚತುರ್ಭುಜವನ್ನು ಧರಿಸಿದರೆಂದು, ವ್ಯಾಖ್ಯಾನ ಮಾಡಿರುತ್ತಾರೆ. ಆತನ ಭುಜಗಳು ಮಹತ್ತಾದವೆಂದು ಅನೇಕ ಕಡೆಗಳಲ್ಲಿ ವರ್ಣಿಸಲ್ಪಟ್ಟಿದೆ. ಭರತನು ಚಿತ್ರಕೂಟದಲ್ಲಿರುವ ಶ್ರೀ ರಾಮನನ್ನು ಕಂಡು "**ಸಿಂಹಸ್ಕಂಧಂ ಮಹಾಬಾಹುಂ ಪುಂಡರೀಕ ನಿಭೇಕ್ಷಣಂ**" ಎಂದು ವರ್ಣಿಸಿರುತ್ತಾನೆ. ಶೂರ್ಪನಖಿಯೂ ಹೀಗೆಯೇ "**ಸಿಂಹೋರಸ್ಕಂ ಮಹಾಬಾಹುಂ ಪದ್ಮಪತ್ರನಿಭೇಕ್ಷಣಂ**" ಎಂದು ಮಹಾಭುಜಗಳುಳ್ಳವನೆಂದು ವರ್ಣಿಸಿರುತ್ತಾಳೆ. ಸರ್ವೇಶ್ವರನು ಪರಿಪೂರ್ಣ ಕಾಮನು, ಆದುದರಿಂದ ಆತನಿಗೆ ಬೇಕಾದುದು ಯಾವುದೂ ಇಲ್ಲವು. ಆ ಕಾರಣದಿಂದ ಈ ವಿಭೂತಿಯಿಂದ ಆತನಿಗೆ ಲೀಲೆಯೇ ಪ್ರಯೋಜನವೆಂದು ಹೇಳಲ್ಪಟ್ಟಿತು. ಈ ಅಭಿಪ್ರಾಯವನ್ನೇ ಶ್ರೀ ವ್ಯಾಸ ಮಹರ್ಷಿಯು "**ಲೋಕವತ್ತು ಲೀಲಾಕೈವಲ್ಯಂ**" (ಶಾ. ಸೂ. ೨-೧-೩೩) ಎಂಬ ಸೂತ್ರದಲ್ಲಿ ಉಪಪಾದಿಸಿರುತ್ತಾರೆ. ರಾಜರುಗಳು ಸ್ವಲ್ಪಮಟ್ಟಿಗೆ ಪೂರ್ಣ ಕಾಮರೆಂದು ಭಾವಿಸಬಹುದು. ಅಂತವರಿಗೆ ಲೀಲೆಯೇ ಪ್ರಯೋಜನವಾಗಿ ಕನ್ದುಕಾದಿಗಳಲ್ಲಿ ಹೇಗೆ ಪ್ರವೃತ್ತಿಯೋ ಹಾಗೆಯೇ ಸರ್ವೇಶ್ವರನಿಗೆ ತನ್ನ ಪತ್ನಿಯೊಂದಿಗೆ ಈ ವಿಭೂತಿಯಲ್ಲಿ ಲೀಲೆಯೇ ಪ್ರಯೋಜನವು. ಇದನ್ನೇ ಇತಿಹಾಸ ಪುರಾಣಗಳು ಉಪಪಾದಿಸುತ್ತವೆ. "**ಲೀಲಾ ಜಗತ್ಪತೇಸ್ತಸ್ಯ ಛಂದತಸ್ಸಪ್ರವರ್ತತೇ**" ಈ ಜಗತ್ತಿಗೆ ಪತಿಯಾದ ಸರ್ವೇಶ್ವರನಿಗೆ ಲೀಲೆಯು ಆತನ ಸಂಕಲ್ಪದ ಮೂಲಕವಾಗಿ ಪ್ರವರ್ತಿಸುತ್ತದೆ. "**ಮೋದತೇ ಭಗವಾನ್ ಭೂತ್ಯೈಃ ಬಾಲಃ ಕ್ರೀಡನಕೈ ರಿವ**" (ಭಾ. ಸಭಾ) ಷಾಡ್ಗುಣ್ಯ ಪರಿಪೂರ್ಣನಾದ

ಸ್ವಾಮಿಯು ಬಾಲನು ಹೇಗೆ ಆಟದ ಸಾಮಾನುಗಳಿಂದ ವಿಹರಿಸುತ್ತಾನೋ ಹಾಗೆಯೇ, ಸೃಷ್ಟಿಸಿದ ಪ್ರಾಣಿಗಳೊಂದಿಗೆ ವಿಹರಿಸಿ ಸಂತೋಷಪಡುತ್ತಾನೆ. "ಕ್ರೀಡಾಹರೇರಿದಂ ಸರ್ವಂ" (ಭಾ. ಶಾ. ೨೦೬–೫೮) ಇದೆಲ್ಲಾ ಶ್ರೀಹರಿಯ ಲೀಲೆಯು. "ಕ್ರೀಡತೋ ಬಾಲಕಸ್ಯೇವ ಚೇಷ್ಟಾಂತಸ್ಯ ನಿಶಾಮಯ" ಬಾಲನ ಹಾಗೆ ಆಡುತ್ತಿರುವ ಶ್ರೀಮನ್ನಾರಾಯಣನ ವಿವಿಧ ವಿಚಿತ್ರಚೇಷ್ಟೆಯು. (ವಿ ಪು. ೧–೨–೧೮) "ಹರೇ ವಿಹರಸಿ ಕ್ರೀಡಾಕನ್ದುಕೈ ರಿವ ಜನ್ತುಭಿಃ" ಓ ಶ್ರೀಹರಿಯೇ ನೀನು ಚಂಡುಗಳಿಂದ ಲೋಕಾದಿಯಲ್ಲಿ ಪ್ರಾಣಿಗಳೊಂದಿಗೆ ವಿಹರಿಸುತ್ತೀಯೇ (ವಿಷ್ಣುತತ್ವ) ಇತ್ಯಾದಿಗಳು ಅನುಸಂಧೇಯಗಳು. ಆಗಲಿ ಲೀಲಾ ವಿಭೂತಿಯಲ್ಲಿ ಲೀಲೆಯನ್ನು ಅನುಭವಿಸುವವನು ಎಂದರೆ ಸ್ವಾಮಿಯು ಒಬ್ಬನನ್ನು ರಾಜನನ್ನಾಗಿ ಮಾಡಿ ಸಾತ್ವಿಕ ಶಿಖಾಮಣಿಯಾಗಿ ಇನ್ನೊಬ್ಬನನ್ನು ಮಹರ್ಷಿಯನ್ನಾಗಿ ಮಾಡಿದುದು ಲೀಲೆಯೆಂದು ಒಪ್ಪಬಹುದು. ಆದರೆ ಕೆಲವರು ದರಿದ್ರರನ್ನಾಗಿಯೂ, ಪಾಪಿಷ್ಠರನ್ನಾಗಿಯೂ ಮಾಡಿ ಅವರು ದುಃಖಿಸುತ್ತಿದ್ದರೆ ಅದು ಹೇಗೆ ಲೀಲೆಯಾದೀತು? ಎಂದರೆ ಅದಕ್ಕೆ ಉತ್ತರವು ಏನೆಂದರೆ ಸರ್ವೇಶ್ವರನು ಈ ಲೀಲಾ ವಿಭೂತಿಯಲ್ಲಿ ಕರಣ ಕಳೇಬರಗಳನ್ನು ದಯಪಾಲಿಸಿ ವಿವೇಕ ಜ್ಞಾನವನ್ನು ಕೊಟ್ಟು, ಶಾಸ್ತ್ರಗಳನ್ನೂ ಶಾಸ್ತ್ರೋಪದೇಶಕರನ್ನೂ ಒದಗಿಸಿ ಕೊಟ್ಟಿದ್ದರೂ, ಇಂದ್ರಿಯಗಳನ್ನು ದುರುಪಯೋಗಪಡಿಸಿ ಸಹಸ್ರಾಪರಾಧಗಳನ್ನು ಮಾಡಿ, ಅಪರಾಧಿಗಳು ಜೈಲಿನಲ್ಲಿರುವ ಹಾಗೆ, ಬಂಧಕ್ಕೆ ಕಾರಣವಾಗಿ ಮಾಡಿಕೊಂಡರೆ ಚೇತನನ ತಪ್ಪೇ ವಿನಾ ಶ್ರೀಮನ್ನಾರಾಯಣನದಲ್ಲವು, ಆದರೂ ಸ್ವಾಮಿ ಈ ಚೇತನರೆಲ್ಲಾ ಯಾವಾಗ ಈ ಬಂಧದಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಅನುಷ್ಠಿಸುವರೋ ಎಂದು ಕಾದಿದ್ದು ರಕ್ಷಿಸುವನು, ಶ್ರೀಮನ್ನಿಗಮಾನ್ತದೇಶಿಕರವರು ಈ ವಿಷಯವನ್ನು ಶರಣಾಗತಿ ದೀಪಿಕೆಯಲ್ಲಿ ಉಪಪಾದಿಸಿರುತ್ತಾರೆ. "ಪಾಂಚಾಲಿಕಾ ಶುಕವಿಭೂಷಣ ಭೋಗದಾಯೀ ಸಮ್ರಾಡಿವಾತ್ಮಸಮಯಾ ಸಹಮೋದಸೇತ್ವಂ" ಪಾಂಚಾಲಿಕಾ ಎಂದರೆ ಬೊಂಬೆಗೆ ಆಭರಣಾದಿಗಳು, ಶುಕವನ್ನು ಪಂಜರದಲ್ಲಿಟ್ಟು ರಸಬಾಳೆ ಹಣ್ಣು ಮೊದಲಾದವುಗಳನ್ನು ಕೊಟ್ಟು ರಾಜನು ತನ್ನ ಹೆಂಡತಿಯೊಂದಿಗೆ ನೋಡಿ ಹೇಗೆ ರಮಿಸುವನೋ ಹಾಗೆ ಸರ್ವೇಶ್ವರನೂ ಆತ್ಮಸಮಯಾ ತನಗೆ ಸಮಾನಳಾದ ಲಕ್ಷ್ಮಿಯೊಂದಿಗೆ ಕ್ರೀಡಿಸುತ್ತೀಯೆ ಎಂದರ್ಥವು.

**ಮಹಿಷೀಂ**— ಪಟ್ಟಮಹಿಷಿಯು, ಪ್ರಧಾನ ಮಹಿಷಿಯು, ಇದರಿಂದ ಬೇರೆ ಪತ್ನಿಯಾದ ಭೂದೇವಿಯು ಸೂಚಿತವು. "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" ಎಂದು ಪುರುಷ ಸೂಕ್ತವು ಹೇಳುತ್ತದೆ. ಭೂದೇವಿಯು ಲಕ್ಷ್ಮಿಗೆ ಶೇಷಭೂತಳು.

**ಅಚಿನ್ತ್ಯ ದಿವ್ಯಾದ್ಭುತ ನಿತ್ಯಯೌವನ**
**ಸ್ವಭಾವ ಲಾವಣ್ಯಮಯಾಮೃತೋದಧಿಂ ।**
**ಶ್ರಿಯಃ ಶ್ರಿಯಂ ಭಕ್ತಜನೈಕ ಜೀವಿತಂ**
**ಸಮರ್ಥಮಾಪತ್ಸಖ ಮರ್ಥಿಕಲ್ಪಕಮ್** ॥ ೪೫ ॥

**ಅವತಾರಿಕೆಯು**—ಮೇಲೆ ೧೪ ಶ್ಲೋಕಗಳಿಂದಲೂ ದಿವ್ಯದಂಪತಿ ಮೂರ್ತಿಯ ಸ್ವರೂಪ ರೂಪಗುಣ ವಿಭವೈಶ್ವರ್ಯಗಳನ್ನೂ ಆತನಿಗೆ ಅಪೃಥಕ್ಸಿದ್ಧ ವಿಶೇಷಣಳಾದ ಲಕ್ಷ್ಮಿಯನ್ನೂ ಕೊಂಡಾಡಿ ನಿಗಮನದಲ್ಲಿ ಈ ಶ್ಲೋಕದಲ್ಲಿ ಆತನ ರೂಪಗುಣದ ಸಮುದಾಯ ಶೋಭಾರೂಪವಾದ ಲಾವಣ್ಯವನ್ನೂ ಭಕ್ತಜನರಿಗೆ ಪರಮಾನುಗ್ರಹಕಾರಕವಾದ ಆತನ ಆತ್ಮಗುಣಗಳನ್ನೂ ಅನುಸಂಧಾನ ಮಾಡುತ್ತಾ ಆತನ ಸರ್ವವಿಧ ಪೂರ್ಣತೆಯನ್ನೂ ಅನುಭವಿಸುತ್ತಾರೆ.

**ಅರ್ಥವು**—ಪೂರ್ವಾರ್ಧವೆಲ್ಲಾ ಒಂದೇಪದವು. **ಅಚಿನ್ತ್ಯ**-ಪರಮಯೋಗಿಗಳಿಂದಲೂ ತಿಳಿಯಲಸಾಧ್ಯವಾದ, **ದಿವ್ಯ**-ಅಪ್ರಾಕೃತವಾದ, **ಅದ್ಭುತ**-ಅತ್ಯಾಶ್ಚರ್ಯ ಕರವಾದ, **ನಿತ್ಯ**--ಶಾಶ್ವತವಾದ, **ಯೌವನ**-ಜರಾಮರಣಗಳು ಯಾವುದೂ ಇಲ್ಲದುದರಿಂದ ಯಾವಾಗಲೂ ಯೌವನವೇ, **ಸ್ವಭಾವ**-ಸ್ವಾಭಾವಿಕವಾಗಿ ಉಳ್ಳ, **ಲಾವಣ್ಯಮಯ**-ದಿವ್ಯಮಂಗಳ ವಿಗ್ರಹದ ಸಮುದಾಯ ಶೋಭೆಯುಳ್ಳ, ಇಂತಹ **ಅಮೃತೋದಧಿಂ**—ಆನನ್ದಮಯ ಸಾಗರನಾದ, ಹಿಂದೆ ಹೇಳಿದ ವಿಶೇಷಣಗಳೆಲ್ಲಾ **ಅಮೃತೋದಧಿಂ**-ಎಂಬುದನ್ನು ವಿಶೇಷಿಸುತ್ತವೆ. **ಶ್ರಿಯಃ ಶ್ರಿಯಂ**—ಲಕ್ಷ್ಮಿಗೂ ಶ್ರೀಪ್ರಾಯನು ಅಥವಾ ಲಕ್ಷ್ಮಿಗೂ ಆಶ್ರಯನಾದ, **ಭಕ್ತ ಜನೈಕ ಜೀವಿತಂ**—ಭಕ್ತರುಗಳಿಗೆ ಪ್ರಧಾನವಾದ ಪ್ರಾಣಾಧಾರನಾದ, **ಸಮರ್ಥಂ**—ತನ್ನ ಸಂಕಲ್ಪವನ್ನು ಸ್ಥಾಪಿಸಿಕೊಳ್ಳುವ ಸಾಮರ್ಥ್ಯವುಳ್ಳವನಾದ, **ಅಪತ್ಸಖಂ**—ಆಪತ್ಕಾಲದಲ್ಲಿ ಶರಣಾಗತರಿಗೆ ಆಪತ್ತನ್ನು ಹೋಗಲಾಡಿಸಿ ಪ್ರಿಯವನ್ನು ಮಾಡುವ ಸ್ನೇಹಿತನಾದ, **ಅರ್ಥಿಕಲ್ಪಕಂ**—ಚತುರ್ವಿಧ ಪುರುಷಾರ್ಥಗಳನ್ನು ಅಪೇಕ್ಷಿಸುವವರಿಗೆ, ಅವರವರ ಮನೋರಥಗಳನ್ನು ಪೂರ್ಣಮಾಡಿಕೊಡುವ ಕಲ್ಪವೃಕ್ಷಪ್ರಾಯನಾದ, ಮುಂದಿನ ಶ್ಲೋಕದಲ್ಲಿರುವ, **ಭವನ್ತಂ**—ನಿನ್ನನ್ನು ಎಂಬುದರೊಂದಿಗೆ ಅನ್ವಯವು.

**ಉಪಪಾದನೆಯು**—ಸರ್ವೇಶ್ವರನಾದ ಶ್ರಿಯಃ ಪತಿಯ ಸ್ವರೂಪರೂಪಾದಿಗಳ ಮಾಹಾತ್ಮ್ಯೆಯನ್ನು ತಿಳಿಯಲು ವೇದಪುರುಷನಿಗೇ ಸಾಧ್ಯವಿಲ್ಲದಿರುವಾಗ ಇಲ್ಲಿರುವ ಮನುಜರಿಗೆ ಸಾಧ್ಯವೇ ? ಆದುದರಿಂದ **ಅಚಿನ್ತ್ಯ**ವೆಂದು ಹೇಳಲ್ಪಟ್ಟಿತು. ಬಾಯಿಂದ ಹೇಳುವುದಕ್ಕಾಗಲಿ ಬರೆಯುವುದಕ್ಕಾಗಲಿ ಸಾಧ್ಯವಿಲ್ಲವು. ಶ್ರುತಿಯೂ ಕೂಡ "**ಯತೋವಾಚೋ ನಿವರ್ತನ್ತೇ, ಅಪ್ರಾಪ್ಯ ಮನಸಾ ಸಹ**" ಎಂದು ಹೇಳಿತು. ಸರ್ವೇಶ್ವರನು ಆನನ್ದಮಯನಾದುದರಿಂದ ಆ ಆನಂದವು

ಎಷ್ಟೆಂದು ಹೇಳಲು ಸಾಧ್ಯವೇ ಎಂಬ ವಿಷಯದಲ್ಲಿ ಪ್ರವರ್ತಿಸಿ ಸಾಧ್ಯವಾಗದೇ ಮೇಲೆ ಉದಾಹರಿಸಿರುವ ಹಾಗೆ ಹೇಳಿ ವಿರಾಮವನ್ನು ಹೊಂದಿತು. ಪರಮ ಯೋಗಿಗಳೂ ಹಾಗೆಯೇ ಅಚಿನ್ತ್ಯವೆಂದೇ ತಟಸ್ಥರಾದರು. "**ವರ್ಷಾಯುತೈರ್ಯಸ್ಯಗುಣಾ ನಶಕ್ಯಾವಕ್ತುಂ ಸಮೇತ್ಯೈರಪಿ ಸರ್ವದೇವೈಃ। ಚತುರ್ಮುಖಾಯುರ್ಯದಿ ಕೋಟಿವಕ್ತ್ರೋ ಭವೇನ್ನರಃ ಕ್ವಾಪಿ ವಿಶುದ್ಧಚೇತಾಃ ॥**" "**ಇಷುಕ್ಷಯಾನ್ನಿವರ್ತನ್ತೇ ನಾಂತರಿಕ್ಷ ಕ್ಷಿತಿಕ್ಷಯಾತ್ । ಮತಿಕ್ಷಯಾನ್ನಿವರ್ತನ್ತೇ ನಗೋವಿನ್ದ ಗುಣಕ್ಷಯಾತ್॥**" ಇತ್ಯಾದಿಗಳು ಅನುಸಂದೇಯವು. ಇವುಗಳ ಅರ್ಥ ರಹಸ್ಯತ್ರಯಸಾರ ೩೫೬-೮ ಪುಟಗಳನ್ನು ಪರಾಂಬರಿಸಿ. **ದಿವ್ಯ** ಶಬ್ದದಿಂದ ಸರ್ವೇಶ್ವರನ ನಿತ್ಯ ವಿಭೂತಿ ವಸ್ತುಗಳೂ ಆತನ ದಿವ್ಯ ಮಂಗಳ ವಿಗ್ರಹವೂ ಅಪ್ರಾಕೃತವಾಗಿ ವಿಕಾರವಿಲ್ಲದೆ ನಿತ್ಯವಾಗಿರುವುವೆಂದು ಹೇಳಲ್ಪಟ್ಟುವು. **ಅದ್ಭುತವು** ಹೇಗೆ? ಎಂದರೆ ಸದಾ ನಿತ್ಯಮುಕ್ತರುಗಳಿಂದ ಅನುಭವಿಸಲ್ಪಡುತ್ತಿದ್ದರೂ ಹಿಂದೆ ನೋಡದೆ ಹೊಸ ಹೊಸದಾಗಿ ತೋರುವಂತಾದ್ದೆಂದು ಸೂಚಿಸಲ್ಪಟ್ಟಿತು. ಮನುಷ್ಯನ ಆಯುಸ್ಸಿನಲ್ಲಿ ಬಾಲ್ಯವೂ **ಯೌವನವೂ** ರಮಣೀಯವಾದುವು. ಯೌವನದಲ್ಲಿ ಲಾವಣ್ಯಾತಿಶಯವೂ, ವೀರ್ಯವತ್ತಾಗಿ ತೋರುವ ಸಾಮರ್ಥ್ಯಾತಿಶಯವೂ ಇರುವುದರಿಂದ **ಯೌವನ** ಭಾವವು ಮುಖ್ಯವಾಗಿ ಹೇಳಲ್ಪಟ್ಟಿತು. ಹೀಗೆ ತೋರುವುದರಿಂದಲೇ ಸ್ವಾಮಿಯನ್ನು **ಸಾಕ್ಷಾನ್ಮನ್ಮಥ ಮನ್ಮಥಃ** ಎಂದು ಭಾವಿಸಿದರು. ಹೀಗೆ ರಮಣೀಯತ್ವವಿರುವುದರಿಂದಲೇ "**ಚನ್ದ್ರಕಾನ್ತಾನನಂ ರಾಮಮತೀವ ಪ್ರಿಯದರ್ಶನಂ । ರೂಪೌದಾರ್ಯ ಗುಣೈಃ ಪುಂಸಾಂದೃಷ್ಟಿ ಚಿತ್ತಾಪಹಾರಿಣಂ**" ಎಂದು ಶ್ರೀರಾಮಚಂದ್ರಪ್ರಭುವು ವರ್ಣಿಸಲ್ಪಟ್ಟಿರುತ್ತಾನೆ. ಆದುದರಿಂದಲೇ ಶ್ರೀ ದಶರಥಮಹಾರಾಜನು "**ರಾಮಂ ಮೇನುಗತಾದೃಷ್ಟಿ ರದ್ಯಾಪಿನನಿವರ್ತತೇ**" (ಅಯೋ ೩೩-೩೪) ಎಂದು ಹೇಳಿಕೊಂಡಿರುತ್ತಾನೆ. ಹೀಗೆ ದೃಷ್ಟಿ ಚಿತ್ತಗಳನ್ನಪಹರಿಸುವ ಸಾಮರ್ಥ್ಯವೇ ನೈಜವಾದುದರಿಂದ **ಯೌವನಸ್ವಭಾವ** ಎಂಬ ಪ್ರಯೋಗವು. ಪರವಾಸುದೇವನ ಸರ್ವಾವಯವಗಳ ಸೌಷ್ಠವದಿಂದ ಉಂಟಾಗಿರುವ ಸರ್ವಾಂಗ ಶೋಭೆಯಿಂದ ಆಕರ್ಷಕ ಶಕ್ತಿಯುಂಟೆಂಬುದು **ಲಾವಣ್ಯ** ಶಬ್ದದಿಂದ ಸೂಚಿಸಲ್ಪಟ್ಟಿತು. ಲಾವಣ್ಯವೆಂದರೆ ಸರ್ವಾವಯವಗಳ ಸಮುದಾಯ ಶೋಭೆಯು, "**ಚಕ್ಷುರಾನನ್ದ ಜನನಂ ಲಾವಣ್ಯ ಮಿತಿಕಥ್ಯತೇ**" ಎಂದು ಹೇಳಲ್ಪಟ್ಟಿರುತ್ತದೆ. ಶ್ರೀ ಕೃಷ್ಣನ ಲಾವಣ್ಯದ ಸೊಗಸಿಗೆ ಗೋಪಿಕಾಸ್ತ್ರೀಯರೆಲ್ಲಾ ಬೆರಗಾದರು. ಈ ರೂಪವು ಅಷ್ಟು ನಿರತಿಶಯವಾಗಿ ಭೋಗ್ಯತಮವಾಗಿ ತೋರುವುದರಿಂದಲೇ ಮುಕ್ತದೆಶೆಯು ಪರಿಪೂರ್ಣ ಬ್ರಹ್ಮಾನುಭವ, ಮತ್ತು ಆನಂದಮಯವಾದುದು, ಎಂದು ತಿಳಿಸುವುದಕ್ಕಾಗಿ "**ಲಾವಣ್ಯಮಯಾಮೃತೋದಧಿ**" ಎಂದು ಪ್ರಯೋಗಿಸಲ್ಪಟ್ಟಿತು. ಇಂತಹ ಉತ್ಕೃಷ್ಟದೆಶೆಯು ಇತರ ಸಿದ್ಧಾಂತಿಗಳಿಗೆ ಗೋಚರವಾಗದೆ ಮುಕ್ತ್ಯವಸ್ಥೆಯನ್ನು ನಾನಾವಿಧವಾಗಿ ಅಸಾರವಾಗಿ ಭಾವಿಸಿರುತ್ತಾರೆ ಅದ್ವೈತಿಗಳ, ಜೈನರ, ಭಾಸ್ಕರರ,

ಯಾದವ ಪ್ರಕಾಶಾದಿಗಳ ಅನೇಕ ಸಿದ್ಧಾಂತಗಳಲ್ಲಿ ಹೇಳಲ್ಪಟ್ಟ ಮೋಕ್ಷವನ್ನು ನಮ್ಮ ಪರಮೈಕಾನ್ತಿಗಳು ಅನುಮೋದಿಸಲಿಲ್ಲವು. ರಸಾಯನಕ್ಕೂ, ಹಾಗಲ ಕಾಯಿಗೂ ಎಷ್ಟು ವ್ಯತ್ಯಾಸವೋ ಅಷ್ಟು ವ್ಯತ್ಯಾಸವು ಈ ಅಭಿಪ್ರಾಯಗಳಲ್ಲಿರು ತ್ತದೆ. **ಅಮೃತೋದಧಿ** ಎಂಬಲ್ಲಿ **ಉದಧಿ** ಶಬ್ದವು, **ನಿರವಧಿಕ ನಿರತಿಶಯತ್ವ** ವನ್ನೂ **ಅಗಾಧತ್ವವನ್ನೂ** ಸೂಚಿಸುತ್ತದೆ. ಹೀಗೆ ಸರ್ವೋತ್ಕೃಷ್ಟನಾಗಿ ಸೇವ್ಯ ನೆಂದು ಹೇಳಲ್ಪಟ್ಟಿತು.

ಹಿಂದೆ **ಕಃ ಶ್ರೀಃ ಶ್ರಿಯಃ** ಎಂಬ ಶ್ಲೋಕದಲ್ಲಿ **ಶ್ರೀಯಃ ಶ್ರೀಃ** ಎಂದು ಹೇಳಿ ಈಗ ಪುನಃ **ಶ್ರಿಯಃ ಶ್ರಿಯಂ** ಎಂದು ಹೇಳಲು ಕಾರಣವೇನೆಂದರೆ— ಹಿಂದೆ ಪರತ್ವಸ್ಥಾಪನೆಗಾಗಿ ಹೇಳಲ್ಪಟ್ಟಿತು. ಇಲ್ಲಿಯಾದರೋ ಭೋಗ್ಯ ತಮತ್ವ ವನ್ನು ಸಮರ್ಥಿಸುವುದಕ್ಕಾಗಿ ಪ್ರಯೋಗವೆಂದು ಭಾವಿಸಬಹುದು. ಲಕ್ಷ್ಮಿಗೂ ಕೂಡ ಕಾನ್ತನಾಗಿ ಅತಿರಮಣೀಯನಾಗಿ ತೋರುವುದರಿಂದ ಪ್ರಾಪ್ಯದೆಶೆಯಲ್ಲಿ ಅತಿಮನೋಹರಳಾದ ಲಕ್ಷ್ಮಿಯೊಂದಿಗೆ ಸೇರಿಯೇ ಭೋಗ್ಯತಮನೆಂಬುದು ಸ್ಥಾಪಿಸಲ್ಪಟ್ಟಿತು.

**ಭಕ್ತಜನೈಕ ಜೀವಿತಂ**—ಭಕ್ತ ಜನರ ಪ್ರಧಾನವಾದ ಉಜ್ಜೀವನೆಗೆ ಕಾರಣಭೂತನು. ಇದು ಗೀತೆಯಲ್ಲಿ "**ಮಚ್ಚಿತ್ತಾಃ ಮದ್ಗತಪ್ರಾಣಾಃ ಬೋಧ ಯನ್ತಃ ಪರಸ್ಪರಂ । ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ**" (ಗೀ. ೧೦-೯) ಎಂಬಲ್ಲಿ ಉಪಪಾದಿತವು. ಪರಮೈಕಾನ್ತಿಗಳು ನನ್ನನ್ನೇ ಸದಾ ಚಿನ್ತಿಸುವವರಾಗಿ ನನ್ನಲ್ಲೇ ತಮ್ಮ ಪ್ರಾಣಗಳನ್ನಿಟ್ಟವರಾಗಿ ನನ್ನ ಕಲ್ಯಾಣ ಗುಣಗಳನ್ನೂ ದಿವ್ಯಚೇಷ್ಟಿತಗಳನ್ನೂ ಪರಸ್ಪರ ಬೋಧಿಸುವವರಾಗಿ, ತಿಳಿಯ ದವರಿಗೆ ತಾವು ಉಪದೇಶಿಸುವವರಾಗಿ, ಹೀಗೆ ತಾವೂ ಆನಂದಿಸಿ, ಇತರರಿಗೂ ಆನಂದವನ್ನುಂಟುಮಾಡುವವರಾಗಿ ಇರುವರು ಎಂದು ಹೇಳಲ್ಪಟ್ಟಿರುತ್ತದೆ. ಅಥವಾ **ಭಕ್ತಜನೈಕ ಜೀವಿತಂ** ಎಂದರೆ ಭಕ್ತಜನರುಗಳಿಂದಲೇ ತನಗೆ ಮುಖ್ಯ ಸತ್ತೆ ಎಂದು ಅರ್ಥ ಹೇಳಬಹುದು. ಇದನ್ನು ಗೀತೆಯಲ್ಲಿ ಶ್ರೀಕೃಷ್ಣಭಗವಾನರು ಹೇಳಿಕೊಂಡಿರುತ್ತಾರೆ. "**ಉದಾರಾಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇಮತಂ**" ಎಂಬುದರ ಅರ್ಥವನ್ನು ಪರಾಂಬರಿಸಿ. (ಗೀ ೭-೧೮) ಹಾಗೆಯೇ ದುರ್ಯೋಧನನಿಗೆ ಬುದ್ಧಿಯನ್ನು ಕಲಿಸಿರುತ್ತಾರೆ. ಹೇಗೆಂದರೆ "**ಪಾಂಡವಾನ್ ದ್ವಿಷಸೇ ರಾಜನ್ ಮಮಪ್ರಾಣಾಹಿ ಪಾಂಡವಾಃ**" (ಭಾ. ಉದ್ಯೋ.) "**ಪರಿತ್ರಾ ಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ**" ಎಂಬಲ್ಲಿ ಹೇಳಿರುವ ಹಾಗೆ ಸಾಧು ಪರಿತ್ರಾಣ ದುಷ್ಟನಿಗ್ರಹಗಳಲ್ಲಿ ಆತನಿಗೆ ಯಾರ ಸಹಾಯವೂ ಬೇಕಿಲ್ಲವು. ಅವನು **ಸಮರ್ಥನು**-ಸರ್ವೇಶ್ವರನು ಅಸಹಾಯ ಶೂರನು. ಹಾಗೆಯೇ ತಾನೇ ಹೇಳಿಕೊಂಡಿರುತ್ತಾನೆ. "**ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂ ಚೈವ ರಾಕ್ಷಸಾನ್ । ಅಂಗುಳ್ಯಗ್ರೇಣ ತಾನ್ ಹನ್ಯಾಂ ಇಚ್ಛನ್

**ಹರಿಗಣೇಶ್ವರ''** (ರಾ.ಯು. ೧೮-೨೫) **"ಬ್ರಹ್ಮಾ ಸ್ವಯಮ್ಭೂಶ್ಚತುರಾನನೋ ವಾ ರುದ್ರ ಸ್ತ್ರೀನೇತ್ರಸ್ತ್ರಿಪುರಾನ್ತಕೋವಾ। ಇಂದ್ರೋ ಮಹೇಂದ್ರಸ್ಸುರೆ ನಾಯಕೋವಾ** ತ್ರಾತುಂ ನಶಕ್ತಾ ಯುಧಿ ರಾಮವಧ್ಯಂ" (ರಾ. ಸುಂ. ೫೧-೪೫) ಶ್ರೀರಾಮನು ಯಾವ ದುಷ್ಟನು ವಧ್ಯನೆಂದು ಸಂಕಲ್ಪಿಸಿಬಿಟ್ಟನೋ ಆತನನ್ನು ರಕ್ಷಿಸಲು ಬ್ರಹ್ಮರುದ್ರೇಂದ್ರಾದಿಗಳಿಗೆ ಯಾರಿಗೂ ಸಾಧ್ಯವಿಲ್ಲವೆಂದು ಹೇಳಲ್ಪಟ್ಟಿತು. ಆತನ ಸತ್ಯಸಂಕಲ್ಪತ್ವಕ್ಕೆ ಪ್ರತಿಹತಿಯೇ ಇಲ್ಲವು. ಮತ್ತು ಪ್ರಪನ್ನರ ವಿಷಯದಲ್ಲಿ ಅಘಟಿತ ಘಟನಾ ಸಾಮರ್ಥ್ಯವುಳ್ಳವನೆಂಬುದು ಸಮರ್ಥಃ ಎಂಬುದರಿಂದ ಬೋಧಿಸಲ್ಪಟ್ಟಿತು. ಆದುದರಿಂದ ಸಮುದ್ರತರಣ, ರಾಕ್ಷಸರ ನಿಧನ ಮೊದಲಾದವುಗಳಿಗೆ ಮುಂಚೆಯೇ ವಿಭೀಷಣನು ಶರಣಾಗತನಾದ ಒಡನೆಯೇ ಲಂಕಾರಾಜ್ಯಾಭಿಷೇಕವನ್ನು ಆತನಿಗೆ ಲಕ್ಷ್ಮಣನ ಮೂಲಕ ನಡೆಯಿಸಿ ರಾವಣನ ವಧಾನನ್ತರ ಪುನಃ ಅಭಿಷೇಕವನ್ನು ನಡೆಸಿ ಕೃತಕೃತ್ಯನೆಂದು ಶ್ರೀರಾಮನು ಭಾವಿಸಿಕೊಂಡನು.

**ಆಪತ್ಸಖಂ**—ಭಕ್ತರ ಆಪತ್ಕಾಲದಲ್ಲಿ ಸಖನಾಗಿದ್ದು ಆಪತ್ತಿನ ಪರಿಹಾರವನ್ನು ಮಾಡುವವನು. ಗಜೇಂದ್ರನಿಗೂ, ದ್ರೌಪದಿಗೂ, ಪ್ರಹ್ಲಾದನಿಗೂ, ಪಾಂಡವರಿಗೆ ಲಾಕ್ಷಾಗೃಹ ದಹನ ಭಯಕಾಲದಲ್ಲೂ ಸಖನಾಗಿ ವಿಪತ್ತನ್ನು ಹೋಗಲಾಡಿಸಿದುದನ್ನು ನಿದರ್ಶನಗಳನ್ನಾಗಿ ಭಾವಿಸಬಹುದು.

**ಅರ್ಥಿಕಲ್ಪಕಂ**—ಭಕ್ತರ ಕೋರಿಕೆಗಳ ವಿಷಯದಲ್ಲಿ ಕಲ್ಪವೃಕ್ಷಪ್ರಾಯನು. ಅವುಗಳನ್ನು ದಯಪಾಲಿಸುವನೆಂಬ ಭಾವವು. ಇದು **"ಫಲಮತ ಉಪಪತ್ತೇಃ"** ಎಂಬ ವ್ಯಾಸಸೂತ್ರದಲ್ಲಿ ಉಪಪಾದಿತವು ಇದರ ಅಭಿಪ್ರಾಯವೇನೆಂದರೆ ಫಲವು ಕರ್ಮಾಧೀನವು. ಕೃಷ್ಯಾದಿ ಕರ್ಮಾದಿಗಳು ನಡೆದರೇನೆ ವ್ರೀಹ್ಯಾದಿ ಫಲವುಂಟು ಎಂಬುದನ್ನು ಪ್ರತ್ಯಕ್ಷವಾಗಿ ಕಂಡಿರುವೆವು. ಆದುದರಿಂದ ಯಜ್ಞ, ದಾನ, ತಪಸ್ಸುಗಳು ಅಲ್ಪಕಾಲಿಕವಾದಗೂ ಒಂದು ಅಪೂರ್ವವೆಂಬುದನ್ನುಂಟುಮಾಡಿ ತನ್ಮೂಲಕ ಫಲಪ್ರಾಪ್ತಿ ಎಂಬುದು ಪೂರ್ವಪಕ್ಷವು. ಇದನ್ನು ನಿರಸನಮಾಡಿ ಈ ಸೂತ್ರವು ಹೇಳುತ್ತದೇನೆಂದರೆ, ಈ ಕರ್ಮಗಳಿಂದ ಆರಾಧ್ಯನಾಗಿ ತನ್ಮುಖೇನ ಪ್ರೀತನಾದ ಪರಮೇಶ್ವರನೇ ಭೋಗಾಪವರ್ಗ ಫಲಗಳನ್ನೀಯುವನು. ಅಚೇತನ ರೂಪಕರ್ಮಕ್ಕೆ **''ಶ್ರುತತ್ವಾಚ್ಚ''** ಹಾಗೆಯೇ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿದೆ.
**"ಸವಾ ಏಷ ಮಹಾನಜ ಆತ್ಮಾನ್ನಾದೋ ವಸುದಾನಃ''** (ಬೃ. ೬-೪-೨೪)
**"ಏಷ ಹ್ಯೇವಾನನ್ದಯಾತಿ''** (ತೈ. ಆ. ೨-೭-೧) ಹಾಗೆಯೇ ಸ್ಮೃತಿಯಲ್ಲೂ
**"ಸತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ।**
**ಲಭತೇ ಚ ತತಃ ಕಾಮಾನ್ ಮಯ್ಯೈವ ವಿಹಿತಾನ್ ಹಿತಾನ್''** (ಗೀ. ೭-೨೨)
**"ಅಹಂ ಸರ್ವಯಜ್ಞಾನಾಂ ಭೋಕ್ತಾಚ ಪ್ರಭುರೇವಚ''**-(ಗೀ. ೯-೨೪)
ಇತ್ಯಾದಿ. ಅಥವಾ ಮನೋರಥಾಪೇಕ್ಷೆಯಲ್ಲಿ ಕಲ್ಪವೃಕ್ಷವು ಹೇಗೆ ಮನೋರಥವನ್ನು ಪೂರ್ತಿಮಾಡುತ್ತದೋ ಹಾಗೆ ಇಷ್ಟಾರ್ಥಗಳನ್ನು ಕೊಡುವಂತವನು

**ಭವನ್ತಮೇವಾನುಚರನ್ನಿರನ್ತರಂ**
**ಪ್ರಶಾನ್ತ ನಿಶ್ಶೇಷ ಮನೋರಥಾನ್ತರಃ ।**
**ಕದಾಹಮೈಕಾನ್ತಿಕ ನಿತ್ಯ ಕಿಂಕರಃ**
**ಪ್ರಹರ್ಷಯಿಷ್ಯಾಮಿ ಸನಾಥಜೀವಿತಃ　　॥ ೪೬ ॥**

ಅಥವಾ **ಸ್ವಯಮರ್ಥಿನಂ ಕಲ್ಪಯತಿ** ಆದುದರಿಂದ **ಅರ್ಥಿಕಲ್ಪಕನು** ಎಂಬ ವ್ಯುತ್ಪತ್ತಿರೀತ್ಯಾ ಕ್ಷೇತ್ರಜ್ಞನಿಗೆ ಆಯಾ ಪುರುಷಾರ್ಥಗಳಲ್ಲಿ ಪ್ರೀತಿಯನ್ನುಂಟು ಮಾಡಿಕೊಟ್ಟು ಅವರು ತನ್ನನ್ನು ಹೊಗಳುವ ಹಾಗೆ ಮಾಡಿ **"ಉದಾರಾಸ್ಸರ್ವ ಏವೈತೇ"** ಎಂದು ಭಕ್ತರು ಶ್ಲಾಘಿಸುವ ಹಾಗೆ ಮಾಡುವನು. ಈ ವಿಶೇಷಣ ಗಳೆಲ್ಲಾ ದ್ವಿತೀಯಾನ್ತ ಪದಗಳಾಗಿ ಮುಂದಿನ ಶ್ಲೋಕದಲ್ಲಿರುವ **"ಭವನ್ತಂ"** ಎಂಬುದನ್ನು ವಿಶೇಷಿಸುತ್ತವೆ.—

**ಅವತಾರಿಕೆಯು** ಹಿಂದೆ ೩೧ನೆಯ ಶ್ಲೋಕದಿಂದಲೂ ಸರ್ವೇಶ್ವರನ ಪರತ್ವ, ಕಲ್ಯಾಣಗುಣಾಕರತ್ವ. ಶ್ರಿಯಃಪತಿತ್ವ ಮೊದಲಾದ ಅಮೋಘ ಸ್ವರೂಪ ರೂಪ ಗುಣವಿಭವೈಶ್ವರ್ಯಾದಿಗಳನ್ನು ವರ್ಣಿಸಿ ಇಂತಹ ವೈಕುಂಠಪತಿಯನ್ನು ತಾವು ಪ್ರಾಪ್ಯವಾಗಿ ಹೊಂದಿ ಪರಿಪೂರ್ಣ ಬ್ರಹ್ಮಾನುಭವವನ್ನು ಮಾಡಿ ಆತನಿಗೆ ಸದಾ ಕೈಂಕರ್ಯವನ್ನೆಸಗಿ ಆತನಿಗೆ ಹರ್ಷವನ್ನುಂಟುಮಾಡಿ ಆತನ ಪ್ರೀತಿಗೆ ಎಂದು ಪಾತ್ರನಾಗುವೆನೋ ಎಂಬ ಕಾತರವನ್ನು ಪ್ರದರ್ಶಿಸುತ್ತಾರೆ.

**ಅರ್ಥವು**—ಭವನ್ತಮೇವ—ಶಾಸ್ತ್ರಜ್ಞಾನದಿಂದುಂಟಾದ, ವೈಕುಂಠಪತಿ ಯಾಗಿ, ಅಮೋಘಾದ್ಭುತ ಸ್ವರೂಪಾದಿಗಳಿಂದ ಪರಿಪೂರ್ಣನಾಗಿ, ಸರ್ವಶಕ್ತನಾಗಿ, ಪರಮದಯಾಳುವಾಗಿ, ಆಶ್ರಿತವಾತ್ಸಲ್ಯೈಕ ಜಲಧಿಯಾದುದರಿಂದ ಪ್ರಾಪಕನೂ ಪ್ರಾಪ್ಯನೂ ಆದ ನಿನ್ನನ್ನೇ, ಏವ ಕಾರದಿಂದ ಅನ್ಯದೇವತೆಗಳನ್ನು ತಾವು ಶರಣ ಹೊಂದುವುದಿಲ್ಲವೆಂಬ ಭಾವವು ಸೂಚಿತವು. ಏಕೆಂದರೆ ಮೋಕ್ಷವನ್ನಿತ್ತು ರಕ್ಷಿಸುವ ಶಕ್ತಿಯು ಅವರಿಗಿಲ್ಲವು. **"ನಹಿಪಾಲನ ಸಾಮರ್ಥ್ಯಂಋತೇ ಸರ್ವೇಶ್ವರಂ ಹರಿಮ್"** ಶ್ರೀಹರಿಗಲ್ಲದೆ ಬ್ರಹ್ಮರುದ್ರೇಂದ್ರಾದಿಗಳಿಗೆ ರಕ್ಷಿಸುವ ಶಕ್ತಿ ಇಲ್ಲವು. ಆದುದರಿಂದ ಅನ್ಯದೇವತೆಗಳನ್ನಾಶ್ರಯಿಸದೆ, **ಭವಂತಮೇವ**—ಅಂತಹ ನಿನ್ನನ್ನೇ **ನಿರಂತರಂ**—ಯಾವಾಗಲೂ, **ಅನುಚರೆನ್**-ನಿತ್ಯಮುಕ್ತರುಗಳ ಹಾಗೆ ಅನುಸರಿಸಿ ನಡೆದುಕೊಂಡವನಾಗಿ, ಆ ಕಾರಣದಿಂದಲೇ, **ಪ್ರಶಾಂತ ನಿಶ್ಶೇಷ ಮನೋ ರಥಾನ್ತರಃ**-ವಿಶೇಷವಾಗಿ ಶಾಂತಿಯನ್ನು ಹೊಂದಿದ, ಏನೊಂದೂ ಉಳಿಯದ ಹಾಗೆ ಎಲ್ಲಾ ಐಹಿಕ ಸ್ವರ್ಗಾದಿ ಬೇರೆ ಮನೋರಥಗಳನ್ನುಳ್ಳವನಾಗಿ, ಎಂದರೆ ಐಹಿಕವನ್ನೆಲ್ಲಾ ತೃಣಪ್ರಾಯದ ಹಾಗೆ ಭಾವಿಸಿ ಎಂಬರ್ಥವು. ಹಾಗೆ ಭಾವಿಸಿರುವ **ಅಹಂ**-ಅಕಿಂಚನನಾಗಿ ನಿನ್ನನ್ನೇ ಪ್ರಾಪ್ಯ ಮತ್ತು ಪ್ರಾಪಕನನ್ನಾಗಿ ಆಶ್ರಯಿಸಿದ ನಾನು, **ಕದಾ**-ಯಾವಾಗ, **ಐಕಾನ್ತಿಕ ನಿತ್ಯಕಿಂಕರಃ**-ಇನ್ನು ಯಾವುದರಲ್ಲೂ

ಮನಸ್ಸಿನಲ್ಲದೆ ನಿನ್ನನ್ನೇ ಪರಮಭಕ್ತಿಯಿಂದ ಧ್ಯಾನಿಸಿ ಸದಾ ನಿನಗೆ ಕೈಂಕರ್ಯ ಮಾಡುವ ದಾಸನಾಗಿ **ಸನಾಥ ಜೀವಿತಃ**–ಇದುವರೆಗೂ ನಿನ್ನನ್ನು ಆಶ್ರಯಿಸದೇ ಇರುವುದರಿಂದ ಉಂಟಾದ ದೈನ್ಯವನ್ನು, ಈಗ ನಿನ್ನನ್ನು ಆಶ್ರಯಿಸಿದುದರಿಂದ, ಖಂಡಿತವಾಗಿ ಹೋಗಲಾಡಿಸುವಿ ಎಂಬ ಪೂರ್ಣವಿಶ್ವಾಸದಿಂದ ಸ್ವಾಮಿಯಾದ ನಿನ್ನೊಂದಿಗೆ ಸೇರಿ ಸ್ವರೂಪವನ್ನು ಎಂದರೆ ಸತ್ತೆಯನ್ನು ಹೊಂದಿದವನಾಗಿ, **ಪ್ರಹರ್ಷಯಿಷ್ಯಾಮಿ**–ನಿನ್ನನ್ನು ಸಂತೋಷಗೊಳಿಸುವೆನೋ ಎಂದು ಕಾದಿರುತ್ತೇನೆಂಬ ತಾತ್ಪರ್ಯವು—

**ಉಪಪಾದನೆಯು**—ಈ ಮೇಲೆ ನನ್ನ ಪರಿಮಿತಜ್ಞಾನಮುಖೇನ ಅಧಿಕರಿಸಿದ ಶಾಸ್ತ್ರಜ್ಞಾನ ಮೂಲಕ ನಿನ್ನನ್ನು ಆಶ್ರಯಿಸಿದರೆ ನನ್ನ ದೈನ್ಯವು ತೊಲಗಿ ನೀನು ಖಂಡಿತವಾಗಿಯೂ ನನ್ನನ್ನು ರಕ್ಷಿಸಿ ಕಾಪಾಡುತ್ತೀ ಎಂಬ ಸಂಪೂರ್ಣ ನಂಬಿಕೆಯುಂಟು, ಎಂದು ಮಹಾ ವಿಶ್ವಾಸವನ್ನು ಪ್ರದರ್ಶಿಸಿ ಅಂತಹ ಸುಕೃತ ಕಾಲವು ಎಂದಿಗೆ ದೊರೆಯುತ್ತದೋ ಎಂದು ಕಾದಿದ್ದೇನೆ ಎನ್ನುತ್ತಾರೆ. ಇಲ್ಲಿ **ಭವನ್ತಂ** ಎಂಬುದಕ್ಕೆ ಅನೇಕ ವಿಶೇಷಣಗಳನ್ನು ಕೊಟ್ಟು ಸ್ವಾಮಿಗೆ ಆಶ್ರಿತರ ವಿಷಯದಲ್ಲಿರುವ ದಯಾ ವಾತ್ಸಲ್ಯಾದಿ ಕಲ್ಯಾಣ ಗುಣ ಪೂರ್ಣತೆಯನ್ನೂ, ಹಾಗೆ ಅನುಗ್ರಹಿಸಲು ಅರ್ಹವಾಗಿರುವ ಅನುಗ್ರಹಮಯಳಾದ ಲಕ್ಷ್ಮಿಯ ಸಾನ್ನಿಧ್ಯವನ್ನೂ ವರ್ಣಿಸಿ, ನೀನೇ ಈಶ್ವರನಾಗಿ ಪ್ರಾಪಕ ಮತ್ತು ಪ್ರಾಪ್ಯನಾಗಿರಲು ಯೋಗ್ಯನೆಂದು ತಿಳಿಸುವುದಕ್ಕಾಗಿ ಅಂತಹ ನಿನ್ನನ್ನು ಎಂದು ಹೇಳಿದುದೂ ಅಲ್ಲದೆ, **ಭವನ್ತಮೇವ** ಎಂಬುದರಿಂದ ತಮಗೆ ಕೃಪೆಗೈದು ರಕ್ಷಿಸಲು ಇನ್ನು ಯಾರಿಗೂ ಯೋಗ್ಯತೆ ಇಲ್ಲವೆಂದು ಅವಧಾರಣವನ್ನು ಪ್ರಯೋಗಿಸಿರುತ್ತಾರೆ. ಇದರಿಂದ ಕರ್ಮಾಧೀನರಾದ ಬ್ರಹ್ಮ ರುದ್ರೇಂದ್ರಾದಿಗಳಿಂದ ಮುಮುಕ್ಷುವಿನ ಮನೋರಥವು ಪೂರ್ಣವಾಗುವುದಿಲ್ಲವೆಂಬ ಭಾವವು ಶಿಕ್ಷಿತವು. **ಅನುಚರಃ**—ಎಂಬುದರಿಂದ ಸ್ವಾಮಿಯ ಆಜ್ಞಾ ಕೈಂಕರ್ಯಗಳನ್ನು ಸ್ವಾಮಿಯು ಪ್ರೀತಿಸುವ ಹಾಗೆ ನಡೆಸುವವನಾಗಿ ಎಂಬ ಭಾವವು ತೋರುವುದರಿಂದ ನಿನಗೆ ಅನುಕೂಲವಾಗಿ ನಿನ್ನ ದಾಸನಾದುದರಿಂದ ನಿನ್ನನ್ನು ಹಿಂಬಾಲಿಸಿಯೇ ಪ್ರವೃತ್ತಿಯುಳ್ಳವನೆಂದು ಹೇಳಲ್ಪಟ್ಟಿತು. ಇದರಿಂದ ಅನುಕೂಲ್ಯಸಂಕಲ್ಪವೂ, ಪ್ರಾತಿಕೂಲ್ಯ ವರ್ಜನೆಯೂ ಹೇಳಲ್ಪಟ್ಟುವು ಎಂದು ಭಾವಿಸಬಹುದು. ಶೇಷತ್ವವನ್ನು ತಿಳಿದ ದಾಸಭೂತನು ಸ್ವಾಮಿಯ ಆಜ್ಞೆಗಳನ್ನನುಸರಿಸಿ ಅನುಚರನಾಗಿಯೇ ಇರತಕ್ಕದ್ದು ನ್ಯಾಯವಷ್ಟೆ. ಆದುದರಿಂದಲೇ ಲಕ್ಷ್ಮೀವರ್ಧನನಾದ ಲಕ್ಷ್ಮಣನು, "**ಕುರುಷ್ವ ಮಾಂ ಅನುಚರಂ ವೈಧರ್ಮ್ಯಂ ನೇಹವಿದ್ಯತೇ । ಕೃತಾರ್ಥೋಽಹಂ ಭವಿಷ್ಯಾಮಿ ತವಚಾರ್ಥಃ ಪ್ರಕಲ್ಪತೇ ॥** ನೀನು ಸ್ವಾಮಿಯು, ನಾನು ನಿನಗೆ ಶೇಷನು, ದಾಸನು, ನಿನ್ನ ಆಜ್ಞೆಗಳನ್ನು ನಡೆಸುವುದಕ್ಕಾಗಿಯೂ ನಿನ್ನ ಕೈಂಕರ್ಯಗಳನ್ನು ಎಸಗುವುದಕ್ಕಾಗಿಯೂ ನಾನು ಏರ್ಪಟ್ಟವನು. ಹೀಗೆ ಸ್ವಾಮಿ ಭೃತ್ಯ

ಸಂಬಂಧವಿರುವಾಗ ಧರ್ಮಕ್ಕೆ ವಿರುದ್ಧವಾದುದೇನೂ ಇಲ್ಲ. ಆದುದರಿಂದ ನನ್ನನ್ನು ಅನುಚರನನ್ನಾಗಿ ಮಾಡಿಕೊಳ್ಳುವುದೇ ನ್ಯಾಯವು. ಇದರಿಂದ ನಾನು ಕೃತಕೃತ್ಯನಾಗುವೆನು. ನೀನು ಶೇಷಿಯಾದುದರಿಂದ ಇದು ನಿನಗೂ ಭೋಗ್ಯವಾದುದಾಗುತ್ತದೆಂದು ಹೇಳಿಕೊಂಡಿರುವುದು ಅನುಸಂಧೇಯವು. ಹಾಗೆಯೇ ಇನ್ನೊಂದು ಕಡೆಯಲ್ಲಿ **"ಭವಾಂಸ್ತು ಸಹವೈದೇಹ್ಯಾ ಗಿರಿ ಸಾನುಷು ರಂಸ್ಯತೇ। ಅಹಂ ಸರ್ವಂ ಕರಿಷ್ಯಾಮಿ"** ನೀನು ಸೀತೆಯೊಡನೆ ಪರ್ವತ ತೊಪ್ಪಲುಗಳಲ್ಲಿ ವಿನೋದವಾಗಿ ವಿಹರಿಸು. ಆಗ ನಿಮಗೆ ಬೇಕಾದ ಸರ್ವ ಕೈಂಕರ್ಯಗಳನ್ನೂ ನಾನು ಮಾಡುವೆನೆಂಬ ಲಕ್ಷ್ಮಣವಾಕ್ಯವು. **"ತವಾನುಭೂತಿ ಸಂಭೂತ ಪ್ರೀತಿ ಕಾರಿತ ದಾಸತಾಂ। ದೇಹಿಮೇ ಕೃಪಯಾದೇವ ನಜಾನೇ ಗತಿಮನ್ಯಥಾ"** "ಎಂದರೆ ತಮ್ಮ ಸಂಕಲ್ಪದಿಂದಲೇ ಉಂಟಾದ ನನ್ನಲ್ಲಿರುವ ಪ್ರೀತಿಯಿಂದುಂಟುಮಾಡಲ್ಪಟ್ಟ ದಾಸತ್ವವನ್ನು ಎಂದರೆ ಕೈಂಕರ್ಯವನ್ನು ಮಾಡುವ ಸುಕೃತವನ್ನು ನನಗೆ ಕೃಪಯಾ ದಯಪಾಲಿಸು. ಅದಲ್ಲದೆ ನನಗೆ ಇನ್ನು ಯಾವ ಉತ್ಕೃಷ್ಟಗತಿಯನ್ನೂ ನಾನು ಕಾಣೆನು" ಮುಂದಕ್ಕೆ **"ಸರ್ವಾವಸ್ಥೋಚಿತಾಶೇಷ ಶೇಷತೈಕರತಿಸ್ತವ। ಭವೇಯಂ ಪುಂಡರೀಕಾಕ್ಷ ತ್ವಮೇವೈವಂ ಕುರುಷ್ವಮಾಂ"** ಎಂಬ ಸರ್ವವಿಧ ಕೈಂಕರ್ಯವನ್ನು ಮಾಡುವ ಸುಕೃತವನ್ನು ದಯಪಾಲಿಸು ಎಂಬ ಪ್ರಾರ್ಥನೆ ಇರುತ್ತದೆ. ಮುಕ್ತಾವಸ್ಥೆಯುಂಟಾದರೆ ಅನುಚರತ್ವ ಹೇಗೆ! ಎಂದರೆ ಶೇಷಿಗೆ ಆತನ ಸಂಕಲ್ಪೋಚಿತವಾದ ಕೈಂಕರ್ಯಗಳನ್ನು ಎಸಗುವುದು ಮಾತ್ರವೇ ಅಲ್ಲದೆ ತದೀಯರಾದ ನಿತ್ಯಮುಕ್ತರುಗಳಿಗೂ ಭಗವತ್ಸಂಕಲ್ಪಾನುಗುಣವಾಗಿ ಅನುಕೂಲವಾಗಿರುವುದೇ ಅನುಚರತ್ವವೆಂದು ಭಾವಿಸಬಹುದು. ಈ **ಅನುಚರ್ರ** ಎಂಬ ಪ್ರಯೋಗವು **"ಏತಮಾನನ್ದಮಯ ಮಾತ್ಮಾನ ಮುಪಸಂಕ್ರಮ್ಯ। ಇಮಾಲ್ಲೋಕಾನ್ ಕಾಮಾನ್ನಿ ಕಾಮರೂಪ್ಯನುಸಂಚರ್ರ"** ಎಂಬ ತೈತ್ತಿರೀಯ ವಾಕ್ಯವನ್ನು ಸ್ಮರಿಸುತ್ತದೆ. **ಪ್ರಶಾನ್ತ ನಿಶ್ಶೇಷ ಮನೋರಥಾನ್ತರಃ** ಇಲ್ಲಿಯೂ ಮತ್ತು ಪರಮಪದದಲ್ಲಿಯೂ ಅನುಚರತ್ವವು ಉಂಟಾಗಬೇಕಾದರೆ ಐಹಿಕ ಭೋಗಗಳಲ್ಲಿ ಅಪೇಕ್ಷೆಯು ನಿಶ್ಶೇಷವಾಗಿ ತೊಲಗಬೇಕು. ಪಾಣಾಳ್ವಾರ್ರವರು **"ಎನ್ನಮುದನೈಕ್ಕಂಡ ಕಣ್ಗಳ್ ಮತ್ತೊನ್ನಿನೈಕ್ಕಾಣಾವೇ"** ಎಂದು ಹೇಳಿರುತ್ತಾರೆ. ಹಾಗೆ ತೊಲಗುವುದು ತುಂಬಾ ಕಷ್ಟವೆಂದು ತಿಳಿಸುವುದಕ್ಕಾಗಿಯೇ **ಪ್ರಶಾನ್ತ ನಿಶ್ಶೇಷ ಮನೋರಥಾನ್ತರಃ** ಎಂಬ ಪ್ರಯೋಗವು. **'ಪ್ರ'** ಎಂಬ ಉಪಸರ್ಗವೂ, **'ನಿಶ್ಶೇಷ'** ಎಂಬ ಪ್ರಯೋಗವೂ ಇಹಲೋಕದ ಭೋಗದಲ್ಲಿ ಆಸೆಯನ್ನು ತೊರೆಯುವುದು ಕಷ್ಟತರವೆಂಬುದನ್ನು ಸೂಚಿಸುತ್ತವೆ. **"ನಜಾತು ಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ। ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ"** ಎಂದರೆ ಕಾಮಗಳು ಉಪಭೋಗದಿಂದ ಶಮನವಾಗುವುದಿಲ್ಲವು. ಹೇಗೆ ಅಗ್ನಿಯಲ್ಲಿ ತುಪ್ಪವನ್ನು ಹೋಮ ಮಾಡಿದರೆ ಅಗ್ನಿಯು ಇನ್ನೂ ಪ್ರಜ್ವಲಿಸುತ್ತದೋ ಹಾಗೆ ಎಂದು ಭಾವವು. **"ಪೂರ್ಣೇಷು ಪೂರ್ಣೇಷು**

**ಪುನರ್ನವಾನಾಂ ಉತ್ಪತ್ತಿಯಸ್ಸನ್ತಿ ಮನೋರಥಾನಾಂ"** ಎಂಬಲ್ಲಿ ಹೊಸ ಹೊಸದಾಗಿ ಮನೋರಥಗಳು ಉತ್ಪನ್ನವಾಗುತ್ತವೆಂದು ಹೇಳಲ್ಪಟ್ಟಿರುತ್ತದೆ. ಅದು ಹೇಗೆ ಎಂಬುದನ್ನು ಇನ್ನೊಂದು ಕಡೆ ಉಪಪಾದಿಸಿರುತ್ತಾರೆ. ಹೇಗೆಂದರೆ **"ದರಿದ್ರಃ ಪ್ರಾರ್ಥಯತ್ಯರ್ಥಂ ಅರ್ಥವಾನ್ ರಾಜ್ಯಮಿಚ್ಛತಿ। ರಾಜಾಚ ಪೃಥಿವೀಶತ್ವಂ, ಪೃಥ್ವೀಶಃ ಚಕ್ರವರ್ತಿತಾಂ"** ಹೀಗೆಯೇ ಹೇಳುತ್ತಾ ಹೋಗಿ "ದುಷ್ಪೂರಾಂ ತೃಷ್ಣಾಮಿಮಾಂತ್ಯಜ" ಎಂದು ಮುಗಿಸಿರುತ್ತಾರೆ. **"ಪರಮಾತ್ಮನಿಯೋರಕ್ತೋ ವಿರಕ್ತೋಽ ಪರಮಾತ್ಮನಿ"** ಪರಮಾತ್ಮನನ್ನು ಹೊಂದಬೇಕೆಂದು ಅಭಿಲಾಷೆ ಇದ್ದುದಾದರೆ ಪರಮಾತ್ಮ ವ್ಯತಿರಿಕ್ತವಾದ ಐಹಿಕಾದಿಗಳನ್ನು ತೊರೆಯಬೇಕು. ಇದರ ಮುಖ್ಯಾಭಿಪ್ರಾಯವೇನೆಂದರೆ ಇಂತಹ ನಿತ್ಯಕೈಂಕರ್ಯವನ್ನು ಮಾಡುವ ಪ್ರಾಪ್ತಿಯು ನನಗುಂಟಾಗಬೇಕಾದರೆ, ಸಿದ್ಧೋಪಾಯನಾಗಿ ನೀನೇ ನಿಂತು ಐಹಿಕ ಮನೋರಥಗಳಲ್ಲಿ ಆಶೆಯನ್ನು ನೀನೇ ಕತ್ತರಿಸತಕ್ಕದ್ದೆಂಬ ಭಾವವು. ಅಕ್ರೂರರು ಹಾಗೆಯೇ ಶ್ರೀ ಕೃಷ್ಣನನ್ನು ಕುರಿತು ಪ್ರಾರ್ಥಿಸಿರುತ್ತಾರೆ. ಹೀಗೆ ಮನೋರಥಾನ್ತರದಲ್ಲಿ ಆಶೆಯು ದೂರೀಕೃತವಾದರೆ ಆಗ ಐಕಾನ್ತಿಕತ್ವವೂ ಲಭಿಸುತ್ತದೆ. ಆಗ ಆನನ್ದಮಯನನ್ನೇ ಯಾವಾಗಲೂ ಧ್ಯಾನಿಸುತ್ತಾ ಸ್ತುತಿಸುತ್ತಾ ಇರುವನೆಂಬುದು ತಾತ್ಪರ್ಯವು. ಆಗ ಮಾತ್ರವೇ **"ಮದ್ಭಕ್ತಾ ಯಾನ್ತಿ ಮಾಮಪಿ"** ಎಂಬಲ್ಲಿ ಹೇಳಿರುವ ಪ್ರಾಪ್ಯದೆಶೆಯನ್ನು ಹೊಂದುವನು. ಆದರೆ ಕೆಲವರು ಬ್ರಹ್ಮರುದ್ರಾದಿಗಳನ್ನು ಉಪಾಸಿಸಿದವರು ಪ್ರತೀಕಾಲಂಬನವನ್ನು ಮಾಡುವುದರಿಂದ ಮೋಕ್ಷವಿಲ್ಲದೆ ಅವರುಗಳ ಲೋಕಗಳನ್ನು ಸೇರುವರು. ಇಂತವರಿಗೆ ಆ ಬ್ರಹ್ಮರುದ್ರರುಗಳಿಗೆ ಪ್ರಳಯಾನಂತರ ಮೋಕ್ಷ ವುಂಟಾಗುವಾಗ ಅವರೊಂದಿಗೆ ಅವರುಗಳನ್ನು ಪ್ರಾಪ್ಯವಾಗಿ ಹೊಂದಿದವರಿಗೂ ಮೋಕ್ಷವೆಂದು ಹೇಳಿದೆಯಲ್ಲಾ ಎಂದರೆ ಅಲ್ಲಿ ಸೇರಿದನಂತರ, ಬ್ರಹ್ಮರುದ್ರಾದಿಗಳು ಸರ್ವೇಶ್ವರನನ್ನು ಹೇಗೆ ಧ್ಯಾನಿಸುವರೋ ಹಾಗೆಯೇ ಇವರುಗಳೂ ಉಪಾಸಿಸಿ ಅಥವಾ ಶರಣಹೊಂದಿ ದಿವ್ಯ ವೈಕುಂಠವನ್ನು ಸೇರುವರೆಂಬ ಭಾವವು. ಆದುದರಿಂದ ಐಕಾನ್ತಿಕವಾಗಿರುವುದು ಅತ್ಯಾವಶ್ಯಕವು. ಈ ಅಭಿಪ್ರಾಯವನ್ನೇ **"ಬ್ರಹ್ಮಣಾಸಹತೇಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ। ಪರಸ್ಯಾನ್ತೇಕೃತಾತ್ಮಾನಃ ಪ್ರವಿಶನ್ತಿ ಪರಂಪದಂ"** ಚತುರ್ಮುಖಬ್ರಹ್ಮನ ಲೋಕವನ್ನು ಸೇರಿದವರು ಪ್ರಳಯಾನನ್ತರ, **ಕೃತಾತ್ಮಾನಃ** ಸಾಧ್ಯೋಪಾಯಾನುಷ್ಠಾನಮಾಡಿ ಪರಮಪುರುಷನನ್ನು ಆಶ್ರಯಿಸಿ ಪರಮಪದವನ್ನು ಚತುರ್ಮುಖನೊಂದಿಗೆ ಸೇರುವರೆಂದು ಈ ಪ್ರಮಾಣವು ಹೇಳುತ್ತದೆ. ಆದುದರಿಂದ ಇಂತಹ ಕಾಲವಿಳಂಬಾದಿಗಳು ತಮಗೆ ಬೇಕಿಲ್ಲವೆಂದು ತಿಳಿಸುವುದಕ್ಕಾಗಿಯೇ **"ನಿತ್ಯಕಿಂಕರಃ"** ಎಂಬ ಪ್ರಯೋಗವು. ಇಂತಹ ಸುಕೃತ ಯಾವಾಗ ಲಭಿಸುತ್ತದೋ ಎಂದು **ಕದಾ** ಎಂಬ ಪ್ರಯೋಗವು. ಇದು ನಿನ್ನ ಕೃಪೆಯು ಯಾವಾಗ ಲಭಿಸುತ್ತದೋ ಆಗತಾನೇ ನಿತ್ಯಕೈಂಕರ್ಯವು ಉಂಟಾದೀತು ಎಂಬ ಭಾವವನ್ನೂ ವ್ಯಕ್ತಪಡಿಸುತ್ತದೆ.

**ಧಿಗಶುಚಿಮವಿನೀತಂ ನಿರ್ಭಯಂ ಮಾಮಲಜ್ಜಂ**
**ಪರಮಪುರುಷಯೋಽಹಂ ಯೋಗಿವರ್ಯಾಗ್ರಗಣ್ಯೈಃ ।**
**ವಿಧಿ ಶಿವ ಸನಕಾದ್ಯೈರ್ಧ್ಯಾತುಮತ್ಯಂತದೂರಂ**
**ತವ ಪರಿಜನ ಭಾವಂ ಕಾಮಯೇ ಕಾಮವೃತ್ತಃ ॥ ೪೭ ॥**

ಅಥವಾ ನೀನು ಶಾಸ್ತ್ರದಲ್ಲಿ ವಿಧಿಸಿರುವ ಉಪಾಯಾನುಷ್ಠಾನ ಬಲದಿಂದಲೇ ಲಭಿಸಬೇಕೇ ವಿನಾ ನನ್ನ ಈಗಿನ ದುಸ್ಥಿತಿಯನ್ನು ನೀನು ಭಾವಿಸಿದರೆ ತುಂಬಾ ಕಾಲ ವಿಳಂಬವೋ ಎಂದಾಗಲೀ ಕದಾ ಎಂಬ ಪ್ರಯೋಗವು. ಅಥವಾ ರಾಮಾಯಣ ಚರಮಶ್ಲೋಕದಲ್ಲಿ "ದದಾಮ್ಯೇ ತದ್ವ್ರತಂಮಮ" ಎಂದು ಅಭಯವನ್ನಿತ್ತೆಯೇ ವಿನಾ ಅದು ಯಾವಾಗವೆಂದು ಹೇಳಲಿಲ್ಲವು. ಆದುದರಿಂದ ಕದಾ ಎಂದೇನಾದರೂ ಕೇಳುತ್ತಾರೋ ಎಂದು ಕದಾ ಪ್ರಯೋಗವು. ಹೀಗೆ ಯಾಮುನೇಯರು ಪ್ರಯೋಗಿಸಿರುವ ಕದಾ ಎಂಬುದರ ವಿವರಣವಾಗಿಯೇ ಶ್ರೀ ಯತಿವರ್ಯರು ಕದಾ ಎಂಬುದನ್ನು ವೈಕುಂಠಗದ್ಯದಲ್ಲಿ ವಿಸ್ತರಿಸಿರುತ್ತಾರೆ. **ಪ್ರಹರ್ಷಯಿಷ್ಯಾಮಿ** ಎಂಬುದರಿಂದ ಪರಮಪುರುಷನಿಗೆ ಉಂಟಾಗುವ ಹರ್ಷವೇ ತಮಗೆ ಮುಖ್ಯವಾದುದೆಂದೂ ತಮಗೆ ಉಂಟಾಗುವ ಹರ್ಷವು ಅಷ್ಟು ಮುಖ್ಯವಲ್ಲವೆಂದು ಹೇಳುವುದಕ್ಕಾಗಿಯೂ ತನ್ಮೂಲಕವಾಗಿ ಪ್ರಣವದಲ್ಲಿ ಹೇಳಿರುವ ಶೇಷತ್ವವೇ ತಮ್ಮ ಸ್ವರೂಪವೆಂದು ವ್ಯಕ್ತಪಡಿಸುವುದಕ್ಕಾಗಿಯೂ ಹಾಗೆ ಪ್ರಯೋಗವು ಆ ಪ್ರಯೋಗದಿಂದಲೇ, ಸ್ವಾಮಿಗೆ ಹರ್ಷವುಂಟುಮಾಡುವುದೇ ತಮಗೂ ಹರ್ಷವೆಂಬ ಭಾವವು ತೋರಿಬರುತ್ತದೆ. ಶೇಷತ್ವದ ಅರ್ಥವಾದರೋ ಶೇಷಿಯ ಪ್ರಯೋಜನಕ್ಕಾಗಿಯೇ ತಾನು ಮಾಡುವುದೆಲ್ಲಾ ಎಂಬುದೇ. ಇದು ಈ ಪ್ರಯೋಗದಿಂದ ವ್ಯಕ್ತವು. **ಸನಾಥಜೀವಿತಃ** ಎಂಬುದರಿಂದ ನಾಥಪಾತ್ರರಾದ ತಾವು ಯಾವಾಗಲೂ ಸನಾಥನಾಗಿದ್ದರೂ, ದಾಸಭಾವವನ್ನು ಪ್ರದರ್ಶಿಸದೇ ಇದ್ದುದರಿಂದ ಬಹುದೈನ್ಯವನ್ನೂ ದುಃಖಾದಿಗಳನ್ನು ಅನುಭವಿಸಿದೆನು. ಈಗ ಭಗವಂತನನ್ನು ಆಶ್ರಯಿಸಿದ ಪ್ರಭಾವದಿಂದ, ಆತನು ಪ್ರಸನ್ನನಾದುದರಿಂದ ನಾನು ಈಗ ಬದುಕಿಕೊಂಡೆನು. ಎಂದು ಹೇಳಿಕೊಂಡಿರುತ್ತಾರೆ. ಹಿಂದೆ ಬದುಕಿದ್ದರೂ ಸತ್ತಹಾಗೆಯೇ, ಈಗ ಮಾತ್ರವೇ ಬದುಕಿದೆನು ಎಂಬ ಭಾವವು. ದೇಹಾವಸಾನದಲ್ಲಿ ಸದ್ಗತಿಯನ್ನು ಹೊಂದುವೆನೆಂಬ ಭಾವವು. ಆ ಸುಕೃತ ಪರಿಪಾಕವು ಒದಗಿದರೆ ನಾನು, ಇನ್ನು ಮುಂದಕ್ಕೆಲ್ಲಾ ಆನಂದವು ಶಾಶ್ವತವಾಗಿಯೇ ಇರುವುದರಿಂದ ಯಾವಾಗಲೂ ಜೀವಂತನಾಗಿಯೇ ಇರುವೆನೆಂಬುದು ಸೂಚಿತವು. ಅಂತಹ ಶಾಶ್ವತವಾದ ಅವಸ್ಥೆಯು ಉಂಟಾಗುವ ಸಂಭವವುಂಟೆಂಬುದನ್ನು ತಿಳಿಸುವುದಕ್ಕಾಗಿಯೇ "**ಪ್ರಹರ್ಷಯಿಷ್ಯಾಮಿ**" ಎಂಬಲ್ಲಿ ವರ್ತಮಾನಪ್ರಯೋಗವು.

**ಅವತಾರಿಕೆಯು**-ಇಂತಹ ಅಮೋಘ ಸ್ವರೂಪ ರೂಪ ಗುಣ ವಿಭವೈಶ್ವರ್ಯಗಳಿಂದ ಪರಿಪೂರ್ಣನಾದ ಭಗವನ್ತನನ್ನು ಸೇರಿ ನಿತ್ಯ ಕೈಂಕರ್ಯವನ್ನು ಮಾಡುವ

ಸುಕೃತವು ಎಂದಿಗೆ ದೊರೆಯುತ್ತದೋ ಎಂದು ತ್ವರಾತಿಶಯವನ್ನು ಹಿಂದಿನ ಶ್ಲೋಕದಲ್ಲಿ ವಿಜ್ಞಾಪಿಸಿಕೊಂಡರು. ಇದು ಲಭಿಸಬೇಕಾದರೆ, ಭಗವನ್ತನ ಕೃಪಾ ವಾತ್ಸಲ್ಯಾದಿಗಳಿಂದ ದೊರೆಯಬೇಕೇ ವಿನಾ ತನ್ನ ಈಗಿನ ದುಸ್ಥಿತಿಯನ್ನು ನೋಡಿದರೆ ಅಂತಹ ಉತ್ಕೃಷ್ಟಪದವಿಯು ಲಭಿಸುವುದು ದುಸ್ತರವೆಂದು ಹೇಳಿ ತಮ್ಮ ಈಗಿನ ನಿಕೃಷ್ಟಾವಸ್ಥೆಯನ್ನು ವ್ಯಕ್ತಪಡಿಸಿ ಅದನ್ನು ನಿಂದಿಸುತ್ತಾರೆ. ಹೀಗೆ ತಮ್ಮ ಕಾರ್ಪಣ್ಯವನ್ನು ಪ್ರಕಟಿಸುತ್ತಾರೆ. ಆದುದರಿಂದ ಹಿಂದಿನ ಶ್ಲೋಕದಲ್ಲಿ ತಾವು **ಕದಾ** ಎಂದು ಹೇಳಿಕೊಂಡುದುದಕ್ಕೆ ಕಾರಣವೇನೆಂದು ಕೇಳುತ್ತಿಯೋ ಹೇಳುವೆನು ಎಂದು ತಮ್ಮ ಈಗಿನ ನಿಕೃಷ್ಟಾವಸ್ಥೆಯನ್ನು ನಿಂದಿಸುತ್ತಾರೆಂದಾಗಲಿ ಅವತಾರಿಕೆಯಾಗಬಹುದು—

**ಅರ್ಥವು—ಹೇ ಪರಮಪುರುಷ—** ಓ ಸರ್ವೋತ್ಕೃಷ್ಟನೆಂದು ಪುರುಷ ಸೂಕ್ತದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಶ್ರೀಮನ್ನಾರಾಯಣನೇ! **ಯೋಽಹಂ—** ಯಾವ ದುಸ್ಥಿತಿಯಲ್ಲಿರುವುದರಿಂದ ಪ್ರಸಿದ್ಧಿಯನ್ನು ಹೊಂದಿರುವ ನಾನು, ಅತಿ ನಿಕೃಷ್ಟನು, ಹೀಗೆ ಗಜಾಜಗಳ ನ್ಯಾಯವೆಂಬುದು ಸೂಚಿತವು **ಕಾಮವೃತ್ತಃ—** ಐಹಿಕ ಕಾಮನೆಗಳಲ್ಲಿ ಪ್ರವೃತ್ತಿಯುಳ್ಳವನಾಗಿ ಇದ್ದುಕೊಂಡೇ ಅದ್ಭುತ ಪದವಿ ಯನ್ನು "**ಪ್ರಾಂಶು ಲಭ್ಯೇಫಲೇ ಲೋಭಾದುದ್ಬಾಹು ರಿವವಾಮನಃ**" ಎಂದು ಕವಿಯು ಹೇಳಿರುವ ಹಾಗೆ, **ಕಾಮಯೇ**-ಪ್ರಾರ್ಥಿಸುತ್ತೇನೆ. ಆ ಪದವಿಯು ಎಂತಾದ್ದೆಂದರೆ ಹೇಳುತ್ತಾರೆ. **ಯೋಗಿವರ್ಯಾಗ್ರಗಣ್ಯೈಃ**—ಭಗವದುಪಾಸನೆ ಮಾಡುವರಲ್ಲಿ ಅಗ್ರಗಣ್ಯರು ಮೊದಲನೆಯವರಾಗಿ ಶ್ರೇಷ್ಠರಾದ **ವಿಧಿಶಿವಸನ ಕಾದ್ಯೈಃ**—ಭಗವನ್ತನು ಚೇತನರುಗಳಲ್ಲೆಲ್ಲಾ ಸರ್ವಶ್ರೇಷ್ಠರೆಂದು ಆರಿಸಿ, ಸೃಷ್ಟಿ ಲಯ ಕರ್ಮಗಳನ್ನೂ ಲೋಕಾಧಿಪತ್ಯವನ್ನೂ ಕೊಟ್ಟಿರುವ **ವಿಧಿ**-ಚತುರ್ಮುಖ ಬ್ರಹ್ಮ, **ಶಿವ**—ರುದ್ರ, ಇವರುಗಳನ್ನು ಹೇಳಿದುದು ಇಂದ್ರಾದಿ ದಿಕ್ಪಾಲಕರಿಗೂ ಉಪಲಕ್ಷಣವು ಮತ್ತು ಕಾಮವೃತ್ತವಿಲ್ಲದೆ ವೈರಾಗ್ಯಶಿಖಾಮಣಿಗಳಾದ **ಸನ ಕಾದ್ಯೈಃ**—ಸನಕ ಸನಂದನಾದಿಗಳಿಂದಲೂ, ಆದಿ ಶಬ್ದದಿಂದ ಪರಾಶರ ವ್ಯಾಸಾದಿ ಗಳಿಂದಲೂ. **ಧ್ಯಾತುಂ** ಧ್ಯಾನಿಸಲು, **ಅತ್ಯಂತೆ ದೂರಂ**-ತುಂಬಾ ದೂರವಾದುದು ಇಂತಹ ಸರ್ವೋತ್ಕೃಷ್ಟ ಪದವಿ ಎಂದು ಹೇಳುತ್ತಾರೆ ಅದು ಯಾವುದೆಂದರೆ, **ತವಪರಿಜನ ಭಾವಂ**—ನಿನಗೆ ನಿರಂತರ ಕೈಂಕರ್ಯವನ್ನು ಮಾಡುವ ನಿತ್ಯಸೂರಿ ಗಳಿಗೆ ಸಮನಾದ ಕೈಂಕರ್ಯಪರನಾಗಿರುವ ಪದವಿಯನ್ನು **ಕಾಮಯೇ**-ಅಪೇಕ್ಷಿಸು ತ್ತೇನೋ, ತಂ ಎಂದು ಇಟ್ಟುಕೊಳ್ಳಬೇಕು ಅಂತಹ ಮಾಂ-ನನ್ನನ್ನು ಧಿಕ್-ಸುಡಬೇಕು ಎಂದು ನಿಂದನೆಯು. ನಿಂದೆಯು ಏತಕ್ಕೆಂದರೆ ಹೇಳುತ್ತಾರೆ. **ಅಶುಚಿಂ**—ಹೇಯವಾದ ಪ್ರಕೃತಿ ಸಂಬಂಧವಿರುವುದರಿಂದ ಅಪರಿಶುದ್ಧನಾದ, **ಅವಿನೀತಂ**—ಯಾರು ಯಾರ ವಿಷಯದಲ್ಲಿ ವಿನಯವು ಎಂದರೆ ಶೇಷಭಾವವು ಇರಬೇಕೋ, ಅಂತಹ ಭಗವನ್ತ, ಆಚಾರ್ಯ, ಭಾಗವತರ ವಿಷಯದಲ್ಲಿ ಪೂರ್ಣ

ಶೇಷಭಾವವನ್ನು ತೋರದೆ ಇರುವ, **ನಿರ್ಭಯಂ**-ಆದುದರಿಂದ ಸ್ವಾಮಿಯು ಎಲ್ಲಿ ದಂಡಿಸುವನೋ ಎಂಬ ಭಯವಿಲ್ಲದವನಾದ, **ಅಲಜ್ಜಂ**-ಪರಮ ವಿರಕ್ತನ ಹಾಗೆ ಮಿಥ್ಯಾ ಪ್ರವೃತ್ತಿಯನ್ನು ಹೊಂದಿದೆನೇ ಎಂಬ ಲಜ್ಜೆಇಲ್ಲದವನಾದ, **ಮಾಂಧಿಕ್** ಎಂಬುದಾಗಿ ಅನ್ವಯವು.—

**ಉಪಪಾದನೆಯು**—ತುಂಬಾ ಮೇಲಾದ ಅಂತಸ್ತಿನಲ್ಲಿರುವ ಚತುರ್ಮುಖ, ರುದ್ರ, ಸನಕಾದಿಗಳಿಗೂ ಕೂಡ **ಧ್ಯಾತು ಮತ್ಯಂತ ದೂರವಾದುದೆಂದು** ಹೇಳಲ್ಪಟ್ಟಿತು. ಚತುರ್ಮುಖನು ಸರ್ವರಿಗೂ ಶ್ರೇಷ್ಠನಾದ ಚೇತನನಾದ ಪ್ರಯುಕ್ತ ಸ್ವಾಮಿಯಿಂದ ವ್ಯಷ್ಟಿಸೃಷ್ಟಿ ಕ್ರಮದಲ್ಲಿ ಆಜ್ಞಪ್ತನಾಗಿರುವನು. ಅಂತವನಿಗೂ ಕೂಡ ಅತಿದೂರವಾದ ನಂತರ ತಮ್ಮ ಪಾಡೇನು ? ಎಂಬ ಭಾವವು ಹೋಗಲಿ ಪರಮ ಯೋಗಿಗಳಿಗಾಗಲೀ ವೇದ್ಯವೇ ಎಂದರೆ ಅವರಿಗೂ ಕೂಡ ವೇದ್ಯವಲ್ಲವೆಂದು ಹೇಳಲ್ಪಟ್ಟಿತು. ಯೋಗಿಗಳಲ್ಲಿ ಅನೇಕ ವಿಧವಾದವರುಂಟು, ಎಂದು ಶ್ರೀ ಪರಾಶರರು ವಿಷ್ಣುಪುರಾಣದಲ್ಲಿ ವಿವರಿಸಿ, ಯೋಗಿಗಳಲ್ಲಿ ಯಾರು ಸರ್ವಶ್ರೇಷ್ಠರೆಂದರೆ ಹೇಳುತ್ತಾರೆ—"**ಏಕಾನ್ತಿನಸ್ಸದಾ ಬ್ರಹ್ಮಧ್ಯಾಯಿನೋ ಯೋಗಿನೋಹಿಯೇ। ತೇಷಾಂ ತತ್ಪರಮಂ ಸ್ಥಾನಂ ಯದ್ವೈ ಪಶ್ಯನ್ತಿಸೂರಯಃ**" ಇವರನ್ನೇ ಜ್ಞಾನಿಗಳೆಂದು ಗೀತೆಯಲ್ಲಿ ಪ್ರಶಂಸಿಸಿರುತ್ತಾರೆ. ಇಂತಹವರಿಗೂ ಕೂಡ ಅತ್ಯಂತ ದೂರವಾದುದನ್ನು ತಾವು ಅಪೇಕ್ಷಿಸುವುದಾಗಿ ಹೇಳಿಕೊಳ್ಳಂಡರು. ವಿಧಿ ಶಿವರನ್ನು ಹೇಳಿ ಅನಂತರ ಸನಕಾದಿಗಳನ್ನು ಏಕೆ ಹೇಳಿದರು ಎಂದರೆ ಶ್ರೀ ಪರಾಶರರು ವಿಷ್ಣುಪುರಾಣ ಷಷ್ಠಾಂಶದಲ್ಲಿ ಉಪಪಾದಿಸಿರುವುದನ್ನು ಮನಸ್ಸಿನಲ್ಲಿಟ್ಟು, ಹಾಗೆ ಪ್ರಯೋಗಿಸಿರುತ್ತಾರೆ. ಖಾಂಡಿಕ್ಯರೆಂಬ ಶಿಷ್ಯರು ಕೇಶಿಧ್ವಜರನ್ನು ಕುರಿತು ಶುಭಾಶ್ರಯದ ಮಹಿಮೆಯನ್ನು ಕೇಳಲಾಗಿ ಆಚಾರ್ಯರಾದ ಕೇಶಿಧ್ವಜರು ಉಪದೇಶಿಸುತ್ತಾರೇನೆಂದರೆ ? ಚೇತನರ ಮನಸ್ಸಿನ ಭಾವನೆಯು. ಕರ್ಮಭಾವನೆ, ಬ್ರಹ್ಮಭಾವನೆ, ಉಭಯಭಾವನೆ ಎಂದು ಮೂರು ವಿಧವೆಂದು ತಿಳಿಸಿ ಬ್ರಹ್ಮಭಾವನೆಯಿಂದ ಕೂಡಿದವರು ಸನಕ ಸನಂದನಾದಿಗಳು, ಕರ್ಮಭಾವನೆಯಿಂದ ಕೂಡಿದವರು ದೇವತೆಗಳು ಮೊದಲುಗೊಂಡು ಸ್ಥಾವರಪರ್ಯನ್ತ ಚೇತನರು ; ಮತ್ತು ಉಭಯಭಾವನಾಯುತರು ಬ್ರಹ್ಮರುದ್ರರು ಎಂದು. ಬ್ರಹ್ಮಭಾವನಾದಿಗಳೆಂದರೇನೆಂಬುದನ್ನು ಮುಂದೆ ತಿಳಿಸುತ್ತಾರೆ. ಇವರೆಲ್ಲರೂ ಯೋಗಿವರ್ಯಾಗ್ರಣ್ಯರು. ಪರಮಪುರುಷನನ್ನು ಉಪಾಸಿಸುವ ಶಕ್ತಿಯುಳ್ಳವರು ; ಮತ್ತು ಅವರಲ್ಲಿ ಶ್ರೇಷ್ಠರು. ಹೀಗೆ ಇಂತಹ ಉಭಯ ಭಾವನಾಯುಕ್ತರಾದ ಬ್ರಹ್ಮರುದ್ರರಿಗೂ ಬ್ರಹ್ಮಭಾವನಾಯುಕ್ತರಾದ ಸನಕಾದಿಗಳಿಗೂ ಅತ್ಯಂತ ದೂರವೆಂದು ಹೇಳಿದನಂತರ ಕರ್ಮಭಾವನಾಯುಕ್ತರಾದ ನಮಗೆ ದೂರವೆಂದು ಹೇಳತಕ್ಕದ್ದೇನಿದೆ ? ಎಂದು ಹೇಳಲ್ಪಟ್ಟಿತು. ಕರ್ಮಭಾವನಾಯುತರಾದುದರಿಂದಲೇ ತಾವು **ಕಾಮವೃತ್ತಿರು ಕಾಮವೃತ್ತಿಃ** ಎಂಬುದಕ್ಕೆ ಇನ್ನೊಂದು ವಿಧವಾಗಿಯೂ ಅರ್ಥ ಹೇಳಬಹುದು.

ನಿನ್ನ **ಪರಿಜನ** ಭಾವವನ್ನು **ಕಾಮಯೇ**—ಅಪೇಕ್ಷಿಸುತ್ತೇನೋ ಅದೂ ಕೂಡ ಕಾಮುದ ವೃತ್ತಿಯುಳ್ಳವನೇ ಆದೆನು. ಈ ಅಭಿಪ್ರಾಯವನ್ನೇ ಸಂಕಲ್ಪ ಸೂರ್ಯೋದಯದಲ್ಲಿ ಶ್ರೀ ದೇಶಿಕರವರು ಕಾಮನೆಂಬುವನು ಹೇಳುವ ಹಾಗೆ ಮಾಡಿರುತ್ತಾರೆ. ಆಗಲಿ ಆತ್ಮನಿಂದೆಯೂ ಆತ್ಮಪೂಜೆಯು ಹಾಗೆಯೇ ಎಂದರೆ ಪ್ರಶಂಸೆಯು ನಿಷಿದ್ಧವಾಗಿರುವಾಗ, ಆತ್ಮನಿಂದೆಯುಸರಿಯೋ ? ಅಯೋಗ್ಯ ನಾಗಿರುವವನಿಗೆ ದುರ್ಲಭವಾದ ಕಾಮನೆಯೂ **"ಪರದ್ರವ್ಯೇಷ್ವಭಿಧ್ಯಾನಂ ಮನಸಾ ನಿಷ್ಟಚಿಂತನಂ । ವಿತಥಾಭಿ ನಿವೇಶಶ್ಚ ತ್ರಿವಿಧಂ ಮಾನಸಂಸ್ಮೃತಂ"** ಎಂದು ಸ್ಮೃತಿಯು ಹೇಳುವುದರಿಂದ ಅಪಚಾರವೇ ಆಗುತ್ತದೆಯಲ್ಲವೇ ? ಎಂದರೆ ತನ್ನ ದೈನ್ಯವನ್ನು ಪ್ರಕಟಿಸುವ ಉದ್ದೇಶ್ಯವಾಗಿದ್ದರೆ ಅಗ ಸಮಂಜಸವಾದುದೇ. ಹಾಗೆಯೇ ತನ್ನ ಪ್ರಾಶಸ್ತ್ಯವನ್ನು ತಿಳಿಯದೇ ಇರುವವನಿಗೆ ತಿಳಿಸುವುದು ಉದ್ದೇಶ್ಯವಾದರೆ ಆಗಲೂ ಆತ್ಮಪ್ರಶಂಸೆಯು ನ್ಯಾಯವಾದುದೇ. ಹಾಗೆಯೇ ಆಂಜನೇಯನು ತಾನು ರಾಮದೂತನೆಂದು ಪ್ರಶಂಸೆ ಮಾಡಿಕೊಂಡಿರುತ್ತಾನೆ. ಇವರಿಗೆ ದೈನ್ಯಕ್ಕೆ ಕಾರಣವೇನೆಂದರೆ ನಿನ್ನ ಪರಿಜನ ಭಾವವನ್ನು ಅರಿತ ನಿತ್ಯ ಸೂರಿಗಳೂ ಮುಕ್ತರೂ ಎಲ್ಲಿ ? ಪರಮ ದುಸ್ಥಿತಿಯಲ್ಲಿ ಇರುವ ತಾವು ಎಲ್ಲಿ ? ಎಂಬುದರಿಂದ ದೈನ್ಯವು. ಇಷ್ಟು ಮಾತ್ರವೇ ಅಲ್ಲವು. ವಿಧಿ ಶಿವಾದಿಗಳು ಯೋಗಿ ವರ್ಯರಲ್ಲಿ ಅಗ್ರಗಣ್ಯರು. ಅವರಿಗೇ ಅದು ಅತ್ಯಂತ ದೂರವಾಗಿರುವಾಗ, ಯೋಗಿ ಯಾಗಲು ಸುತರಾಂ ಅಸಮರ್ಥರಾದ ತಮಗೆ ಅದು ವೇದ್ಯವೇ ಎಂಬುದಾಗಿ ಯೂ ದೈನ್ಯವು. ನಿತ್ಯ ಸೂರಿಗಳೂ ನಿತ್ಯಶುದ್ಧರಾಗಿ ಅವರ ಮಹಿಮೆಯನ್ನು ಅರಿತಿರುವರು. ತಾವಾದರೋ ಅಶುಚಿಯು. ತಮ್ಮ ಸ್ವರೂಪವೇನೋ ಮಹ ತ್ತಾದುದೇ ಸರಿ. ಹೇಯಪ್ರಕೃತಿ ಸಂಬಂಧದಿಂದಲ್ಲವೇ ಅಶುಚಿಯು. ಶ್ರೀ ಪರಾಶ ರವರು, **"ಪುಮಾನ್ನದೇವೋ ನ ನರಃ ನತಿರ್ಯಕ್ ನಚಪಾದಪಃ । ಶರೀರಾಕೃತಿ ಭೇದಾಸ್ತು ಭೂಪೈತೇ ಕರ್ಮಯೋನಯಃ"** ಎಂಬಲ್ಲಿ ಈ ನಾಲ್ಕು ವಿಧ ಶರೀರಿ ಗಳಾದ ಚೇತನರಲ್ಲಿರುವ ಆತ್ಮಾ **ಪುಮಾನ್**-ಮಹಾ ಪರಿಶುದ್ಧನು. ಕರ್ಮಪರಿಪಾಕ ದಿಂದುಂಟಾದ ಪ್ರಕೃತಿ ಸಂಬಂಧವನ್ನು ಹೊಂದಿ ಹೇಯತ್ವವನ್ನು ಹೊಂದಿ ದೇವ ಮನುಷ್ಯ ತಿರ್ಯಕ್ ಪಾದಪವೆಂಬುದಾಗಿ. ಆಚಾರ್ಯಾನುಗ್ರಹ ವಿರುವುದರಿಂದಲೇ ಮಣಕ್ಕಾಲ್‌ನಂಬಿಯವರು ಬಹುಕಾಲ ಬಂದು ಕಾದಿದ್ದು ಉಪದೇಶಿಸಿದರು, ಕ್ಷತ್ರ ಬಂಧುವು ಬಹುಕಾಲ ನೀಚಕೃತ್ಯವನ್ನು ಮಾಡಿದರೂ ಆಚಾರ್ಯಾನುಗ್ರಹದಿಂದ ಮುಕ್ತನಾದ ನಲ್ಲವೇ? ಹಾಗೆಯೇ ನಿಮಗೂ ಆ ಆಚಾರ್ಯಾನುಗ್ರಹದಿಂದ ಮುಕ್ತಿ ಲಭಿಸೀತು ಅದುದರಿಂದ ಏಕೆ ನಿಂದೆಯು? ಎಂದರೆ ರಾಜ್ಯಾಡಳಿತದ ಹೆಮ್ಮೆಯಿಂದ ತಮ್ಮ ಆಚಾರ್ಯರನ್ನು ಸನ್ಮಾನಿಸದೇ ಇದ್ದುದರಿಂದ **ಅವಿನೀತನು.** ಆಗಲಿ ನಿಮ್ಮ ಆಚಾರ್ಯಾನುಗ್ರಹವನ್ನು ಸಂಪಾದಿಸಲಿಲ್ಲವೇ ? ಯಾಕೆ ನಿಂದೆಯು ? ಎಂದರೆ **ಅವಿನೀತಂ** ಆಚಾರ್ಯರನ್ನು ಸರಿಯಾಗಿ ನಾನೇ ಆಶ್ರಯಿಸಿದ್ದರೆ ಅಂತಹ ಭಯ ವಿರುತ್ತಿರಲಿಲ್ಲವು ನನ್ನ ಪಿತಾಮಹರಾದ ನಾಥಮುನಿಗಳ ಆಜ್ಞೆಯನ್ನು ಸಲ್ಲಿಸು

ವುದಕ್ಕಾಗಿ ಶ್ರೀ ಮಣಕ್ಕಾಲ್ ನಂಬಿಯವರು ಸ್ವತಃ ಉಪದೇಶಿಸಲು ಬಂದರೆ ನಾನು ಆಗ ರಾಜನಾಗಿದ್ದುದರಿಂದ ಅದನ್ನು ಪರಿಗಣಿಸದೆ ಅವರ ಸನ್ನಿಧಿಯಲ್ಲಿ ವಿಶೇಷಾಪಚಾರಪಟ್ಟೆನು. ಆದುದರಿಂದ ನಾನು **ಅವನೀತನಲ್ಲವೇ.?** ಹೋಗಲಿ ಪರಮಜ್ಞಾನಿಗಳಾದ ನಾಥಮುನಿಗಳು ಸಾನ್ನಿಧ್ಯದಲ್ಲೇ ಇದ್ದುಕೊಂಡಿದ್ದರೂ ಅವರನ್ನು ಆಶ್ರಯಿಸಿದನೇ ? ಆದುದರಿಂದಲೂ ಅವಿನೀತನು. ಹೀಗೆ ಆಚಾರ್ಯರಲ್ಲಿ ವಿನಯವಿದ್ದುದಾದರೆ ಪರಮ ನಿಕೃಷ್ಟದೆಶೆಯಲ್ಲಿ ಕ್ಷತ್ರ ಬಂಧುವಿನ ಹಾಗೆ ಪಾಜನ ಭಾವವನ್ನು ಹೊಂದುತ್ತಿದ್ದೆನು. ಆಚಾರ್ಯರ ವಿಷಯದಲ್ಲಿ ವಿಶೇಷ ಭಕ್ತಿಇಲ್ಲದೆ ನಟಿಸಿದುದರಿಂದ ಅವಿನೀತನೆಂದು ಹೇಳಿಕೊಂಡರು.–

**ನಿರ್ಭಯಂ**— ಪುನಃ ಪುನಃ ಶರೀರ ಸಂಬಂಧಕ್ಕೂ ಜನನ ಮರಣಗಳಿಗೂ ವಶನಾಗುವುದೇ ಭಯವು. ಅಂತಹ ಭಯವುಂಟಾಗುತ್ತದೋ ಎಂದು ಶಂಕಿಸದೆ ನಿರ್ಭಯನಾಗಿದ್ದುಬಿಟ್ಟೆನೆಂಬ ಭಾವವು. ಅಥವಾ ಯೋಗ್ಯತೆ ಇಲ್ಲದೆ ದುರ್ಲಭವಾದುದನ್ನು ಅಪೇಕ್ಷಿಸುವುದರ ಮೂಲಕ, ಪುರೋಡಾಶಾರ್ಥಿಯಾಗಿ ನುಗ್ಗಿದ ನಾಯಿಗೆ ದಂಡಘಾತ ಹೇಗೆ ಪ್ರಾಪ್ತವಾಗುತ್ತದೋ ಹಾಗೆಯೇ ಶಿಕ್ಷೆಗೆ ಒಳಪಡುವೆನೆಂಬ ಭಯವಿಲ್ಲದವನೆಂದಾಗಲಿ ಅರ್ಥಮಾಡಬಹುದು. ಅಥವಾ ಅನೇಕ ಅಪರಾಧಗಳನ್ನು ಹಿಂದೆ ಮಾಡಿದುದರ ಮೂಲಕ ದಂಡಕ್ಕೆ ಎಲ್ಲಿ ಒಳಗಾಗುವೆನೋ ಎಂಬ ಭಯವಿಲ್ಲದೆ ಇದುವರೆಗೂ ಅದರಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಶರಣಾಗತಿಯನ್ನನುಷ್ಠಿಸದೇ ಇದ್ದುದರಿಂದಲೂ ನಿರ್ಭಯನು. **ನಿರ್ದಯಂ** ಎಂಬ ಪಾಠಾನ್ತರವುಂಟು. ಅದಕ್ಕೆ ಕೆಲವರು ಪರಮ ಭಾಗವತರಿಗೆ ಭೋಗ್ಯವಾದ ಅಮೃತಕ್ಕೆ ವಿಷವನ್ನು ಸೇರಿಸಿದವನೆಂದು ಅರ್ಥಮಾಡುವುದರಲ್ಲಿ ಅಭಿಪ್ರಾಯವೇನೋ ತಿಳಿಯಲಿಲ್ಲವು ಭಾಗವತರ ಸನ್ನಿಧಿಯಲ್ಲಿ ದಯಾರಹಿತನಾಗಿ ಅಪಚಾರಮಾಡಿರುವನೆಂದು ಅರ್ಥಮಾಡಬಹುದು. ಅಥವಾ **“ಏಕಃ ಪಾಪಾನಿ ಕುರುತೇ ಫಲಂ ಭುಕ್ತೇ ಮಹಾಜನಾಃ”** ಎಂಬಲ್ಲಿ ಹೇಳಿರುವ ಹಾಗೆ ನನ್ನೊಬ್ಬನ ಅಪರಾಧದಿಂದ ಮದೀಯರಾದವರಿಗೂ **ಕೂಡ** ಶ್ರೇಯಸ್ಸಿಲ್ಲದ ಹಾಗೆ ಮಾಡಿದನೋ ಎಂಬ ಪರಿತಾಪವಿಲ್ಲದಿರುವುದರಿಂದ ನಿರ್ದಯನು. ಅಥವಾ ಲೋಕ ಸಙ್ಗ್ರಹಾರ್ಥವಾಗಿ ನಾನು ಸರಿಯಾದ ಮಾರ್ಗದಲ್ಲಿ ನಡೆದರೆ ನನ್ನನ್ನು ನಂಬಿದವರೂ ಹಾಗೆಯೇ ನಡೆಯುವರು; ಆದುದರಿಂದ ನಾನು ಸರಿಯಾದ ಮಾರ್ಗವನ್ನೇ ತೋರಿಸತಕ್ಕದ್ದೆಂಬ **ದಯಾ** ಶೂನ್ಯನೆಂದೂ ಅರ್ಥಮಾಡಬಹುದು. **ಅಲಜ್ಜಂ**–ಸೂರಿ ಸೇವ್ಯವಾದ ಮಹತ್ತಾದ ನಿಶ್ಶ್ರೇಯಸ್ಸು ಎಲ್ಲಿ ? ಹೇಯಪ್ರಕೃತಿ ಬದ್ಧನಾದ ನಾನೆಲ್ಲಿ ? ಇಂತಹ ನಿಕೃಷ್ಟನು, ಗುಲಾಮನು ರಾಜನಾಗಬೇಕೆಂದು ಅಪೇಕ್ಷಿಸಿದ ಹಾಗೂ, ಎಂಜಲೆಲೆಯ ಮೇಲೆ ಮಲಗಿರುವ ನಾಯಿಯು ರಾಜನ ಹಂಸ ತೂಲಿಕಾತಲ್ಪವನ್ನು ಅಪೇಕ್ಷಿಸಿದ ಹಾಗೂ, ಯೋಗಿಗಳಿಗೂ ಅಸಾಧ್ಯವಾಗಿರುವ ದಿವ್ಯ ವೈಕುಂಠಪ್ರಾಪ್ತಿಯನ್ನು ಪ್ರಾರ್ಥಿಸುವುದು.

**ಅಪರಾಧ ಸಹಸ್ರ ಭಾಜನಂ**
**ಪತಿತಂ ಭೀಮಭವಾರ್ಣವೋದರೇ ।**
**ಅಗತಿಂ ಶರಣಾಗತಂ ಹರೇ**
**ಕೃಪಯಾ ಕೇವಲಮಾತ್ಮ ಸಾತ್ಕುರು ॥ ೪೮ ॥**

"**ಪ್ರಾಂಶು ಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ**" ಎಂದು ಮಹಾಕವಿಯು ಹೇಳಿರುವ ಹಾಗೆ ಹಾಸ್ಯಾಸ್ಪದವೆಂದು ಭಾವಿಸದೇ ಇರುವುದರಿಂದ **ಅಲಜ್ಜನು**—ನಾಚಿಕೆ ರಹಿತನು. ಇಂತಹ **ಮಾಂ**—ಅಹಂಕಾರ ಮಮಕಾರಗಳಿಂದ ದುರ್ವಿನೀತನು ಎಂಬ ಭಾವವು. ಇನ್ನೂ ಎಂತವರು ತಾವು ಎಂದರೆ **ಕಾಮವೃತ್ತಿಃ**—ಇಷ್ಟ ಬಂದ ಹಾಗೆ ಸ್ವತಂತ್ರಿಸಿ ನಡೆಯುವ ವೃತ್ತಿಯುಳ್ಳವನೆಂದು ಹೇಳಿಕೊಂಡರು ಶಾಸ್ತ್ರಾತಿ ಕ್ರಮವನ್ನು ಎಲ್ಲಿ ಮಾಡುವೆನೋ ಎಂಬ ಭಯವಿಲ್ಲದವನೆಂಬ ಭಾವವು. ಇಂತವನು **ಕಾಮಯೇ** ಪರಿಜನ ಭಾವವನ್ನು ಅಪೇಕ್ಷಿಸುತ್ತೇನೆ. ಸುಮ್ಮನೆ ದಿವ್ಯವೈಕುಂಠವನ್ನು ಹೋಗಿ ಸೇರುವುದು ಮಾತ್ರವೇ ಸಾಲದು ತಮಗೆ ತುಂಬಾ ಇಷ್ಟವಾದುದು ಯಾವುದೆಂದ್ದರೆ ಶೇಷಿಯಾದ ಪರಮಪುರುಷನಿಗೆ ದಾಸಭೂತನಾದ ತಾನು ನಿತ್ಯಕೈಂಕರ್ಯವನ್ನು ಮಾಡಬೇಕೆಂಬ ಅಭಿಲಾಷೆಯಲ್ಲಿ ಶ್ರದ್ಧೆಯೂ ತ್ವರಾತಿಶಯವೂ. **ಈ** ಸಂದರ್ಭದಲ್ಲಿ "**ಲೋಕಯಾತ್ರಾ ಭಯಂ ಲಜ್ಜಾ ದಾಕ್ಷಿಣ್ಯಂ ಧರ್ಮಶೀಲತಾ । ಪಂಚಯತ್ರನ ವಿದ್ಯಂತೇನ ಕುರ್ಯಾತ್ತೇನ ಸಂಗತಿಂ**'' ಪೂರ್ವಾರ್ಧದಲ್ಲಿ ಹೇಳಿರುವ ಲೋಕನಡತೆ, ಭಯ, ಕೆಟ್ಟದ್ದನ್ನು ಮಾಡುವುದರಲ್ಲಿ ಲಜ್ಜೆ, ದಾಕ್ಷಿಣ್ಯ, ಧರ್ಮವನ್ನು ಮಾಡುವುದರಲ್ಲಿ ಇಚ್ಛೆಯು, ಈ ಐದೂ ಇಲ್ಲದವರೊಂದಿಗೆ ಸಹವಾಸವನ್ನು ಮಾಡಬೇಡವೆಂದು ಹೇಳಿರುತ್ತದೆ, ಇವೆಲ್ಲಾ ತಮ್ಮಲ್ಲಿ ಇಲ್ಲದುದರಿಂದ ತಾವು ತುಂಬಾ ನಿಕೃಷ್ಟರು ಆದರೂ ತುಂಬಾ ಪ್ರಕೃಷ್ಟ ಪದವಿಯಲ್ಲಿ ತುಂಬಾ ಅಭಿಲಾಷೆಯುಳ್ಳವನಾಗಿದ್ದೇನೆಂದು ಹೇಳಿಕ್ಕೊಂಡರು.

**ಅವತಾರಿಕೆಯು** ತಮ್ಮ ಅವಸ್ಥೆಯಾದರೋ ಅತ್ಯಂತ ನಿಕೃಷ್ಟವೆಂದು ನಿಂದಿಸಿಕ್ಕೊಂಡರು. ಆದರೆ ನಿನ್ನನ್ನು ಬಂದು ಸೇರಬೇಕೆಂಬ ಆಶೆತುಂಬಾ ಬಾಧಿಸಿ ಮೋಕ್ಷಾರ್ಥಿಯಾಗಿರುತ್ತೇನೆ. ಆ ಪದವಿಯು ವಿಧಿ ಶಿವಾದಿಗಳಿಗೂ ಇನ್ನೂ ಲಭ್ಯವಿಲ್ಲದುದು ಇಂತಹ ಉತ್ಕೃಷ್ಟ ಪದವಿಯು ಸ್ವಾಮಿಯನ್ನು ಐಕಾನ್ತ್ಯದಿಂದ ಧ್ಯಾನಮಾಡಿದರಾದರೂ ಲಭ್ಯವಾಗುತ್ತಿತ್ತು. ಅದಕ್ಕೆ ಸರ್ವಾತ್ಮನಾ ಅಶಕ್ತನೆಂದು ಹಿಂದೆಯೂ ಮತ್ತು ಹಿಂದಿನ ಶ್ಲೋಕದಲ್ಲೂ ಹೇಳಿಕ್ಕೊಂಡರು. ಆದುದರಿಂದ ಆ ಗುರುವಾದ ಉಪಾಯವನ್ನು ತ್ಯಜಿಸಿ ಲಘುವಾದ ಉಪಾಯವನ್ನೇ ಅವಲಂಭಿಸಿರುವುದರಿಂದ, ನನ್ನ ಸಹಸ್ರಾಪರಾಧಗಳನ್ನೂ ಹೋಗಲಾಡಿಸಿ, ಸಂಸಾರ ಸಮುದ್ರದಲ್ಲಿ ಮುಳುಗಿ ನಿರ್ಗತಿಕನಾದ ನನ್ನನ್ನು ಉದ್ಧಾರ ಮಾಡಲು ಕೇವಲ ನಿನ್ನ ಕೃಪೆಯ ಮಾಹಾತ್ಮ್ಯೆಯಿಂದಾಗತಕ್ಕದ್ದೇ ವಿನಾ ಅನ್ಯಥಾಇಲ್ಲವೆಂದು ಹೇಳುತ್ತಾರೆ

**ಅರ್ಥವು—ಹೇ ಹರೇ**-ಸರ್ವಪಾಪಹರನೇ, **ಅಪರಾಧ ಸಹಸ್ರ ಭಾಜನಂ**-ಸಹಸ್ರಾಪರಾಧಗಳನ್ನು ಹೊಂದಿರುವ, **ಭವಾರ್ಣ ವೋದರೇ**—ಸಂಸಾರವೆಂಬ ಸಾಗರದ ಮಧ್ಯದಲ್ಲಿ, **ಪತಿತಂ**-ಬಿದ್ದಿರುವ, **ಅಗತಿಂ**-ನೀನಲ್ಲದೆ, ಬೇರೆಗತಿ ಇಲ್ಲದ, **ಶರಣಾಗತಂ**-ನಿನ್ನ ಮರೆಯನ್ನು ಹೊಕ್ಕು ಆತ್ಮರಕ್ಷಾಭರ ಸಮರ್ಪಣೆಯನ್ನು ಮಾಡಿದವನನ್ನು ಎಂದರೆ ಮಾಡಿದ ನನ್ನನ್ನು **ಮಾಂ** ಎಂದಿಟ್ಟು ಕೊಳ್ಳಬೇಕು ; **ಕೃಪಯಾ ಕೇವಲಂ**—ಕೃಪೆಯಿಂದ ಮಾತ್ರವೇ, **ಆತ್ಮ ಸಾತ್ಕುರು**-ನಿನ್ನವನನ್ನಾಗಿ ಎಂದರೆ ನಿನ್ನ ಸಾಯುಜ್ಯವನ್ನು ಹೊಂದಿದವನನ್ನಾಗಿ, ಅಥವಾ ನಿನ್ನ ಕಿಂಕರನಾಗಿ ಕೈಂಕರ್ಯ ಮಾಡುವವನನ್ನಾಗಿ ಮಾಡಿಕೋ.

**ಉಪಪಾದನೆಯು**-ದಿವ್ಯ ವೈಕುಂಠಪತಿಯನ್ನು ಬಹುವಾಗಿ ಕೊಂಡಾಡಿ "ನಿನ್ನ ಸಾನ್ನಿಧ್ಯವನ್ನು ಹೊಂದಲು ನಿನ್ನ ಕೃಪೆಯೊಂದೇ ಸಾಧನವಲ್ಲದೆ ತಮ್ಮಲ್ಲಿ ಯಾವುದೊಂದು ಉತ್ಕರ್ಷವೂ ಇಲ್ಲವು; ಅಂತಹ ಸಾತ್ವಿಕ ಗುಣಗಳಿಗೆ ಬದಲಾಗಿ ಅಸಂಖ್ಯಾತಗಳಾದ ಅಪರಾಧಗಳೇ ತಮ್ಮಲ್ಲಿ ಉಂಟು" ಎಂದು ಪ್ರಥಮತಃ ಹೇಳು ತ್ತಾರೆ. **ಅಪರಾಧ ಸಹಸ್ರಭಾಜನಂ**-ಇಲ್ಲಿ ಸಹಸ್ರಶಬ್ದವು ಅಸಂಖ್ಯೇಯ ವೆಂಬರ್ಥದಲ್ಲಿ ಪ್ರಯುಕ್ತವು. ಆದುದರಿಂದಲೇ ನಿನ್ನ ಕೇವಲ ಕೃಪೆಗೆ ಸರಿಯಾದ ಲಕ್ಷ್ಯವು ನಾನು ಎಂದು ಹೇಳಿಕ್ಕೊಂಡರು. **ಅಪರಾಧ ಚಕ್ರವರ್ತಿ** ತಾನೇ ನಿನ್ನ ಕೃಪೆಗೆ ಯೋಗ್ಯವಾದ ಪಾತ್ರನು. **ದಯನೀಯ ಸ್ತವನಾಥ ದುರ್ಲಭಃ** ನೀನು ದಯೆಯನ್ನು ತೋರಿಸಲು ಯೋಗ್ಯನಾದ ಪಾತ್ರವು ; ನನ್ನನ್ನು ಬಿಟ್ಟರೆ ಇನ್ನು ಯಾರೂ ದೊರೆಯಲಾರರೆಂಬ ಭಾವವು ಸೂಚಿತವು. ಹೀಗೆ ಸಹಸ್ರಾ ಪರಾಧವನ್ನು ಮಾಡಿದವನನ್ನು ರಕ್ಷಿಸಿದರೇನೇ **"ಕ್ಷಾನ್ತಿಸ್ತೇ ನಿರುಪಾಧಿಕಾ ನಿರುಪಮಾಲಕ್ಷ್ಯೇತ ತತ್ಕ್ಷ್ಮ್ಯತಾಂ"** ಎಂದು ಕ್ಷಮಾಷೋಡಶಿಯಲ್ಲಿ ಹೇಳಿರುವ ಹಾಗೆ ನಿನ್ನ ಕೃಪೆಯು ನನ್ನ ಅಪರಾಧಗಳನ್ನು ಕ್ಷಮಿಸಿದರೇ ನಿನ್ನ ಕ್ಷಮಾಗುಣಕ್ಕೆ ಸರಿಯಾದ ಗುರಿಯಾಗುತ್ತದೆಂದು ಹೇಳಲ್ಪಟ್ಟಿರುತ್ತದೆ. ಅಪರಾಧ ಸಹಸ್ರವೆಂಬು ದೇನೂ ಅತಿಶಯೋಕ್ತಿಯಲ್ಲವು. ಸೃಷ್ಟಿ ಮೊದಲುಗೊಂಡು ಇದುವರೆಗೂ ಎತ್ತಿರುವ ಜನ್ಮಗಳಲ್ಲಿ ಅಪರಾಧ ಸಹಸ್ರವೆಂದು ಹೇಳಿದುದು ಅತಿಶಯೋಕ್ತಿಯಲ್ಲವು.

**ಭೀಮ ಭವಾರ್ಣವೋದರೇ ಪತಿತಂ**—ಇಲ್ಲಿ ಘೋರ ಸಂಸಾರ ಸಮುದ್ರ ದಲ್ಲಿ ಬಿದ್ದವನನ್ನು ಹೇಳಿರುವುದು ಹಿಂದೆ ೨೪ನೆಯ ಶ್ಲೋಕದಲ್ಲಿ **ನಿಮಜ್ಜ ತೋನನ್ತ ಭವಾರ್ಣವಾನ್ತಃ** ಎಂದು ಹೇಳಿದುದನ್ನು ಜ್ಞಾಪಿಸುವುದಕ್ಕಾಗಿ ಎಂದು ತಿಳಿಯತಕ್ಕದ್ದು. ಇಲ್ಲಿ **ಭವಾರ್ಣವೋದರೇ** ಎಂಬಲ್ಲಿನ ಉದರ ಶಬ್ದವು ಸಮುದ್ರದ ಮಧ್ಯಭಾಗವನ್ನು ಬೋಧಿಸಿ ಅಲ್ಲಿ ಸಮುದ್ರವು ತುಂಬಾ ಆಳವಾದುದ ರಿಂದ ಅಲ್ಲಿ ಬಿದ್ದವರನ್ನು ಬದುಕಿಸುವುದು ದುಸ್ತರವು ಎಂಬುದು ತೋರಿಬರುತ್ತದೆ. ತೀರದ ಹತ್ತಿರದಲ್ಲಿ ಬಿದ್ದರೆ ಬದುಕಿಸುವ ಶಕ್ತಿಯು ಯಾರಿಗಾದರೂ ಇದ್ದರೂ ಇರ

ಬಹುದು. ಬದ್ಧರೆಲ್ಲಾ ಸಂಸಾರ ಮಧ್ಯಭಾಗದಲ್ಲೇ ಬಿದ್ದವರಾದುದರಿಂದ ಇನ್ನು ಯಾರಿಗೂ ರಕ್ಷಿಸುವ ಶಕ್ತಿ ಇಲ್ಲವು. ಪರಮಪುರುಷನು ಮಾತ್ರವೇ ಶಕ್ತನೆಂಬ ಭಾವವು ಸೂಚಿತವು. **"ಸಂಸಾರ ಸಾಗರಂ ಘೋರಂ ಅನನ್ತ ಕ್ಲೇಶಭಾಜನಂ"** (ಪರಸನ್ತ್ರ) ಎಂಬು ಈ ಅಭಿಪ್ರಾಯವೇ ಹೇಳಲ್ಪಟ್ಟಿರುತ್ತದೆ. ಇಂತಹವರನ್ನು ಕೈಹಿಡಿದು ಮೇಲಕ್ಕೆ ಎತ್ತುವುದಕ್ಕಾಗಿಯೇ ಶ್ರೀಮನ್ನಾರಾಯಣನು ಕಾದಿರುವನು ಎಂದೂ **"ಮಗ್ನಾನಾಂ ಭವಿನಾಂ ಭವಾರ್ಣವ ಸಮುತ್ತಾರಾಯ ನಾರಾಯಣಃ"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. **ಭೀಮಭವಾರ್ಣವ** ಎಂಬುದಕ್ಕೆ ಅನುಸಾರವಾಗಿ "ಸಂಸಾರ ಸಾಗರಂ ಘೋರಂ" ಏಕೆಂದರೆ "ಅನನ್ತ ಕ್ಲೇಶಭಾಜನ" ವಾದುದರಿಂದ ಇವರಿಂದ ಶ್ರೀಯಾಮುನ ಮುನಿಗಳಿಗೆ ಪ್ರಾಪ್ಯಪ್ರಾಪ್ತಿಯಲ್ಲಿ ವಿಳಂಬವನ್ನು ಸಹಿಸದ ಅವಸ್ಥೆಯು ಬೋಧಿತವು. **ಅಗತಿಂ**–ತನ್ನನ್ನು ಸ್ವತಃ ಶಿಕ್ಷಿಸಿಕೊಳ್ಳುವುದಕ್ಕೆ ತಾನು ಅಸಮರ್ಥನೆಂದು. **ನಮಃ** ಶಬ್ದದಲ್ಲಿ ತೋರುವ ಅರ್ಥವೂ ಹಾಗೆಯೇ ಇತರ ದೇವತೆಗಳೂ ಅಸಮರ್ಥರೆಂಬ ಭಾವವು ತೋರಿಬರುವುದರಿಂದ ಹಿಂದೆ "ಅಕಿಂಚನೋಽನನ್ಯಗತಿಃ" (೨೧ನೆಯ ಶ್ಲೋಕ) ಎಂಬಲ್ಲಿನ ಅರ್ಥವು ಸ್ಮಾರಿತವು. **ಶರಣಾಗತಂ**–ಶರಣ ಹೊಂದಿದವರನ್ನು ಎಂಬುದರಿಂದ ಸ್ವಾಮಿಯು ರಕ್ಷಣೆಗೆ ವ್ಯಾಜರೂಪವಾಗಿ ಏರ್ಪಡಿಸಿರುವ ಸಾಧ್ಯೋಪಾಯವು ಬೋಧಿತವು. **"ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚಯಾಚತೇ। ಅಭಯಂ ಸರ್ವ ಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ"** ಎಂದೂ, **"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ"** ಎಂದೂ ಇತ್ಯಾದಿ ಭಗವದುಕ್ತಿಗಳು ಬೋಧಿತವು. ಈ ಲೋಕದಲ್ಲೇ ಚೇತನರಾದ ಸಾಧುಗಳೇ ಶರಣಾಗತರನ್ನು ರಕ್ಷಿಸುವರು ಎಂದು **"ಶರಣಂ ಚ ಪ್ರಪನ್ನಾನಾಂ ತವಾಸ್ಮೀತಿ ಚಯಾಚತೇ। ಪ್ರನಾದಂ ಪಿತೃಹಂತೄಣಾಮ ಪಿಕುರ್ವನ್ತಿ ಸಾಧವಃ** ನಾನು ನಿನ್ನವನು ಎಂದು ಪ್ರಾರ್ಥಿಸಿ ಶರಣಾಗತರಾದವರು ತಂದೆಯನ್ನು ಕೊಂದ ಘಾತುಕರಾಗಿದ್ದರೂ ಕೂಡ ಮನ್ನಿಸಿರುವ ಸಾಧುಗಳೇ ಇರುವಾಗ (ಇದಕ್ಕೆ ನಿದರ್ಶನವು ಶ್ರೀ ಪರಾಶರರು) ಇನ್ನು ಸರ್ವಶಕ್ತನಾಗಿ ಉದಾರನಾಗಿ ಕೃಪಾ ಮಹಿಮೆಯುಕ್ತನಾಗಿರುವ ಶ್ರೀಹರಿಯ ವಿಷಯದಲ್ಲಿ ಹೇಳತಕ್ಕದ್ದೇನಿರುತ್ತದೆ ಎಂಬ ತಾತ್ಪರ್ಯವು ತೋರಿಬರುತ್ತದೆ. ಹೀಗೆ ಕೃಪಾಮಹೋದಧಿಯು ಸ್ವಾಮಿಯು ಎಂದು ಹೇಳುವುದಕ್ಕಾಗಿ **ಕೃಪಯಾ** ಎಂಬ ಪ್ರಯೋಗವು. ಬರೀ ಸ್ವಾಮಿಯ ಕೃಪೆಯೇ ತಮಗೆ ಉತ್ತಾರಕವೇ ವಿನಾ, ಶರಣಾಗತಿ ಇಲ್ಲದೆ ಸರ್ವೇಶ್ವರನು ತಮ್ಮಲ್ಲಿ ಯಾವ ವಿಧವಾದ ಉತ್ಕರ್ಷವನ್ನು ನಿರೀಕ್ಷಿಸಿದರೂ ಪ್ರಯೋಜನವಿಲ್ಲವೆಂಬ ಭಾವ ಪ್ರದರ್ಶನಕ್ಕಾಗಿ **ಕೇವಲ** ಶಬ್ದವು. ಈ ಲೋಕದಲ್ಲೇ ಶರಣಾಗತ ರಕ್ಷಣೆಯನ್ನು ಮಾಡಿ ಪ್ರಸಿದ್ಧಿಯನ್ನು ಹೊಂದಿದ ಇತಿಹಾಸಗಳುಂಟೋ ಎಂದರೆ, ಶ್ರೀಮದ್ರಾಮಾಯಣದಿಂದ ಕಪೋತ ವಾನರರಾದ ತಿರ್ಯಗ್ಜಾತಿಯಲ್ಲಿ ನಿದರ್ಶನವುಂಟೆಂದು ಹೇಳಲ್ಪಟ್ಟಿರುತ್ತದೆ. ಸಂಕಲ್ಪ ಸೂರ್ಯೋದಯದಲ್ಲಿ ಅಂತಹ ಸಾಧುಗಳ ನಿದರ್ಶನಗಳು ಕೊಡಲ್ಪಟ್ಟಿವೆ. ಹೀಗಿರುವಾಗ

ಅಘಟಿತ ಘಟನಾರೂಪ ವಿಶೇಷ ಸಾಮರ್ಥ್ಯವೂ ಕಾರುಣ್ಯವೂ ಇರುವ ಪರಮ ಪುರುಷನ ವಿಷಯದಲ್ಲಿ ಶರಣಾಗತಿಯು ಎಂದಿಗಾದರೂ ನಿಷ್ಫಲವಾದೀತೇ ? ಸ್ವಾರ್ಥ ಸಿದ್ಧಿಯು ಎಂದು ತಿಳಿಸಲು ಕೃಷ್ಣಾ ಎಂದು ಪ್ರಯೋಗಿಸಿದಳು. ಅಘಟಿತ ಘಟನಾರೂಪ ಸಾಮರ್ಥ್ಯವು ಇಲ್ಲಿ ಹೇಳಲ್ಪಟ್ಟಿದೆ ಎಂಬುದು ಹರೇ ಎಂಬ ಪ್ರಯೋಗ ದಿಂದ ತೋರಿಬರುತ್ತದೆ. "ಬ್ರಹ್ಮಾಣಿ ಮಿಂದ್ರಂ ರುದ್ರಂಚ ಯಮಂ ವರುಣ ಮೇವಚ । ಪ್ರಸಹ್ಯ ಹರತೇ ಯಸ್ಮಾತ್ತಸ್ಮಾದ್ಧರಿರಿತೀರ್ಯತೇ" ಎಂಬ ಪುರಾಣೋಕ್ತಿಯಿಂದ ವ್ಯಕ್ತವು. ಪರಮಾತ್ಮನು ಬ್ರಹ್ಮನನ್ನೂ ಇಂದ್ರನನ್ನೂ ರುದ್ರನನ್ನೂ, ಯಮನನ್ನೂ ವರುಣನನ್ನೂ ಸಹ ಬಲಾತ್ಕಾರದಿಂದ ಸರ್ವ ಮಹಾ ಪ್ರಳಯದಲ್ಲಿ ಅವರುಗಳ ಸ್ಥಾನದಿಂದ ಚ್ಯುತಿಯ ಕಾರಣದಿಂದ ಸೆಳೆಯುವನು; ಆ ಕಾರಣದಿಂದ ಆತನು ಹರಿ ಎಂದು ಕರೆಯಲ್ಪಡುವನು. ಎಂಥ ಆಪತ್ತಿನಿಂದಲೂ ರಕ್ಷಿಸಲು ಸಿದ್ಧನು, ಪಾಪ ರಾಶಿಗಳು ಸಂಬಂಧವಾದ ಎಷ್ಟಿದ್ದರೂ ಹರಿಸುವ ಸರ್ವೇಶ್ವರನ ಹೆಸರೇ ಹರಿಯು, ಆದುದರಿಂದ ಅರ್ಜುನನಿಗೆ ಪಾಪಾಪಹ, "ದೇವ ಪ್ರಪನ್ನಾರ್ತಿಹರ" ಎಂದಿರುವುದರಿಂದ ಆಶ್ರಿತರ ಆರ್ತಿಯನ್ನು ಹೋಗಲಾಡಿಸುವವನು. ಅದರಿಂದ ಆರ್ತಿತಾನೆ ಏಕೆ ಇರಕೂಡದು? ಎಂದರೆ ಶ್ರುತಿಯು "ತದ್ಯಥೇಷೀಕಾ ತೂಲಮಗ್ನೌ ಪ್ರೋತಂ ಪ್ರದೂಯೇತ ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ" ಎಂದು ಹೇಳಿರುವಂತೆ ಅಗ್ನಿಯಿಂದ ದಹಿಸಲ್ಪಟ್ಟ ಹತ್ತಿಯು ಭಗ್ಗೆಂದು ಹತ್ತಿ ಉರಿದುಹೋಗುವಂತೆ ಪಾಪರಾಶಿಯನ್ನು ನಾಶಮಾಡಿ ರಕ್ಷಣೆಯು ಸರ್ವಶಕ್ತನಿಗೆ ಸಾಧ್ಯವು. ವಿಷ್ಣು ಸಂಹಿತೆಯಲ್ಲಿ ಹರಿಶಬ್ದಾರ್ಥ ನಿರ್ವ ಚನವು ಹೇಗೆಂದರೆ "ಯಸ್ಮಾದ್ವ್ಯಾಪ್ತಂ ಜಗತ್ತೇನ ತಸ್ಮಾದ್ವಿಷ್ಣುರಿತಿ ಸ್ಮೃತಃ! ಹರಣಾದೇವ ದುಃಖಾನಾಂ ಹರಿಂ ತ್ವಭಿಧೀಯತೇ" ಎಂದರೆ ಪರಬ್ರಹ್ಮನಿಂದ ಜಗತ್ತೆಲ್ಲಾ ವ್ಯಾಪಿಸಲ್ಪಟ್ಟಿರುವುದರಿಂದ ಆತನಿಗೆ ವಿಷ್ಣುವೆಂದೂ ಆಶ್ರಿತರ ದುಃಖ ಗಳನ್ನು ಹೋಗಲಾಡಿಸುವುದರಿಂದ ಹರಿ ಎಂದೂ ವ್ಯವಹರಿಸಲ್ಪಡುವನು ಎಂಬ ರ್ಥವು. ಶ್ರೀ ವಸಿಷ್ಠಮಹರ್ಷಿಯು ದ್ರೌಪದಿಗೆ ಮುಂದೆ ಆಪತ್ತು ಉಂಟಾಗಬಹು ದೆಂಬುದನ್ನು ತಮ್ಮ ಸರ್ವಜ್ಞತೆಯಿಂದ ಅರಿತವರಾದುದರಿಂದ; ತನ್ನಿವೃತ್ತಿಗಾಗಿ ಆಸಾಧ್ವಿಯನ್ನು ಕುರಿತು ನಿನಗೆ ಆಪತ್ತೇನಾದರೂ ಒದಗಿದರೆ ಆಗ ನೀನು ಶ್ರೀ ಹರಿಯಾದ ಕೃಷ್ಣನಲ್ಲಿ ಶರಣಾಗತಿಯನ್ನು ಅನುಷ್ಠಿಸಬೇಕೆಂದು ಹೇಳಿದ ಬುದ್ಧಿ ವಾದವನ್ನು ಸ್ಮರಿಸಿದವಳಾಗಿ ಹೇಳುತ್ತಾಳೇನೆಂದರೆ–"ಜ್ಞಾತಂ ಮಯಾವಸಿಷ್ಠೇನ ಪುರಾಗೀತಂ ಮಹಾತ್ಮನಾ। ಮಹತ್ಯಾಪದಂಪ್ರಾಪ್ಯ ಸ್ಮರ್ತವ್ಯೋ ಭಗವಾನ್ ಹರಿಃ" ಎಂದರೆ "ಮಹಾತ್ಮರಾದವಸಿಷ್ಠರು ನನಗೆ ಒಂದು ಹಿತವನ್ನು ಬೋಧಿಸಿದುದನ್ನು ತಿಳಿದಿರುತ್ತೇನೆ, ಏನೆಂದರೆ? ಮಹತ್ತಾದ ಆಪತ್ತು ಒದಗಿದಾಗ ಭಗವಂತನಾದ ಹರಿಯನ್ನು ಶರಣಾಗತಿಯ ಮೂಲಕ ಸ್ಮರಿಸಬೇಕೆಂದು". ಈಗ ಅಂತಹ ಮಹತ್ತಾದ ಆಪತ್ತು ದುರ್ಯೋಧನನ ಸಭೆಯಲ್ಲಿ ದುಶ್ಶಾಸನನ ವಸ್ತ್ರಾಪ ಹರಣ ದುಷ್ಕರ್ಮದಿಂದ ಎಂದು ಹೇಳುವ ದ್ರೌಪದಿಯ ವಾಕ್ಯವು. ಆತ್ಮಸಾತ್ಕುರು

**ಅವಿವೇಕ ಘನಾನ್ಧದಿಜ್ಮುಖೇ**
**ಬಹುಧಾನ್ತಂತತದುಃಖವರ್ಷಿಣಿ ।**
**ಭಗವನ್ ಭವದುರ್ದಿನೇ ಪಥಃ ಸ್ಖಲಿತಂ**
**ಮಾ ಮವಲೋಕಯಾ ಚ್ಯುತ ॥೪೯॥**

---

ನಿನ್ನ ಸಾನ್ನಿಧ್ಯವನ್ನು ಬಂದು ಸೇರುವಹಾಗೆ ನೀನೇ ಮಾಡತಕ್ಕದ್ದು. ನೀನು ಸರ್ವಶೇಷಿಯು ನಾನು ಶೇಷನು, ದಾಸನು. ಆ ದಾಸಭೂತವೃತ್ತಿಯು ಸ್ವಾಮಿಯ ಕೈಂಕರ್ಯವನ್ನು ಮಾಡುವುದು. ಆದುದರಿಂದ ಅಂತಹ ಕೈಂಕರ್ಯದಲ್ಲಿ ಸದಾ ನಿರತನಾಗಿರುವಹಾಗೆ ನೀನೇ ಮಾಡತಕ್ಕದ್ದು. **ಆತ್ಮಸಾತ್ಕುರು** ಎಂಬುದಕ್ಕೆ ದ್ವಿತೀಯೆಯು ಹಿಂದಿನ ಶ್ಲೋಕದಲ್ಲಿ **ಧಿಗಶುಚಿ ಮವಿನೀತಂ** ಎಂಬಲ್ಲಿ ತಮ್ಮ ನಿಕೃಷ್ಟಭಾವವನ್ನು ವ್ಯಕ್ತಪಡಿಸುವಾಗ **ಮಾಂ** ಎಂದಿರುತ್ತದೆ. ಇಲ್ಲಿ ಪುನಃ **ಮಾಂ** ಎಂದು ಹೇಳದಿರುವುದಕ್ಕೆ ಕಾರಣವು ತಮ್ಮ ಅವಸ್ಥೆಯ ನಿಕೃಷ್ಣಭಾವ ದಿಂದಾಗಲಿ ಅಥವಾ ತನ್ಮೂಲಕ ಉಂಟಾದ ಲಜ್ಜಾಭಾವದಿಂದಾಗಲಿ ಎಂದು ಭಾವಿಸತಕ್ಕದ್ದಾಗಿರುತ್ತದೆ. ಹೀಗೆ ಸಂಸಾರವೆಂಬ ಸಮುದ್ರ ಮಧ್ಯದಲ್ಲಿ ಬಿದ್ದು ಮುಳುಗಿ ಮುಳುಗಿ ತೇಲುತ್ತಾ ಬಹು ಕ್ಲೇಶಪಡುವವನು ಈಗ ನಿನ್ನಲ್ಲಿ ಶರಣಾಗತ ನಾಗಿದ್ದೇನೆ. ಅಂತವನನ್ನು ರಕ್ಷಿಸಲು ನಿನಗೆ ಪಾಪಹರ, ಕ್ಲೇಶಹರರೂಪ ಸಾಮರ್ಥ್ಯವೂ ಉಂಟು, ಕರುಣೆಯೂ ಉಂಟು, ಅಂತವನನ್ನು ರಕ್ಷಿಸುವುದೇ ತಮಗೆ ವ್ರತವೆಂದು ಪುನಃ ಪುನಃ ಹೇಳಿರುತ್ತೀಯೆ. ಆದುದರಿಂದ **ಕೃಪಯಾ ಕೇವಲಮಾತ್ಮ ಸಾತ್ಕುರು** ಎಂದು ಪ್ರಾರ್ಥಿಸಿದರು.

**ಅವತಾರಿಕೆಯು** "**ಧಿಗಶುಚಿಂ**" ಎಂಬ **ಶ್ಲೋಕದಲ್ಲಿ** ತಮ್ಮನಿಕೃಷ್ಟಾ ವಸ್ಥೆಯನ್ನು ಪಪಾದಿಸಿ ಅತ್ಯುತ್ಕೃಷ್ಟಪದವಿಯನ್ನು ಪ್ರಾರ್ಥಿಸುವುದು ಪರಮ ಲಜ್ಜಾಸ್ಪದವೆಂದು ಹೇಳಿಕೊಂಡರು. "**ಅಪರಾಧ ಸಹಸ್ರ ಭಾಜನಂ**" ಎಂಬ ಶ್ಲೋಕದಲ್ಲಿ ತಮಗೆ ಪ್ರಾಪ್ತವಾಗಿರುವ ದುರವಸ್ಥೆಯನ್ನು ಸಮುದ್ರ ಮಧ್ಯದಲ್ಲಿ ಬಿದ್ದು ಮುಳುಗಿ ಮುಳುಗಿ ತೇಲುವ ಕ್ಲೇಶಕರವಾದ ಅವಸ್ಥೆ ಎಂದು ಹೇಳಿ ಕೊಂಡರು. ಈ ಶ್ಲೋಕದಲ್ಲಿ ಆದುರವಸ್ಥೆಯನ್ನೇ ಇನ್ನೊಂದು ವಿಧವಾಗಿ ವರ್ಣಿಸಿ ಕರುಣಾಸಾಗರನನ್ನು, "ನಿನ್ನ ಕೃಪಾ ಕಟಾಕ್ಷದಿಂದ ಅವಲೋಕಿಸಿ ರಕ್ಷಿಸು" ಎಂದು ಬೇಡುತ್ತಾರೆ. ತಮ್ಮ ದುರವಸ್ಥೆ ಹೇಗಿದೆ ಎಂದರೆ ಅವಿವೇಕ ವೆಂಬ ಮೇಘವು ಸಂಪೂರ್ಣ ಮುಚ್ಚಿಕೊಂಡು ಗಾಢಾಂಧಕಾರ ವುಂಟಾಗಿ ಎಲ್ಲಿ ಕಾಲಿಟ್ಟರೂ ಕಾಲು ಜಾರಿ ಬೀಳುವುದು, ಏಳುವುದು, ಹೀಗೆ ದುಸ್ಥಿತಿಯಲ್ಲಿ ಇರುವ ವನನ್ನು ನಿನ್ನ ದಿವ್ಯಕಟಾಕ್ಷದ ಬೆಳಕನ್ನು ತೋರಿಸಿ ಕಾಪಾಡು ಎಂದು ಬೇಡು ತ್ತಾರೆ.

**ಅರ್ಥವು**-ತಮ್ಮಲ್ಲಿಯಾವುದೊಂದು ಅರ್ಹತೆಯಾಗಲಿ ಉತ್ಕೃಷ್ಟತೆ ಯಾಗಲಿ ಇಲ್ಲದಿರುವುದರಿಂದ ನಿನ್ನ ಕೃಪೆಯೇ ಶರಣಾಗತನಿಗೆ ಉತ್ತಾರಕವಾಗ ಬೇಕೇ ವಿನಾ, ಅನ್ಯಥಾ ಇಲ್ಲವೆಂದು ಹಿಂದಿನ ಶ್ಲೋಕದಲ್ಲಿ ವಿಜ್ಞಾಪಿಸಿಕ್ಕೊಂಡರು. ಹೀಗೆ ಸರ್ವೇಶ್ವರನ ಕೃಪೆಗೆ ತಾವೇ ಸರಿಯಾದ ಪಾತ್ರವೆಂಬುದನ್ನು ತಮ್ಮ ಪ್ರಕರ್ಷ ದುಸ್ಥಿತಿಯನ್ನು ಹೇಳಿ ತಮ್ಮ ಆಕಿಂಚನ್ಯವನ್ನು ಪ್ರಕಟಿಸಿ, ಹೇ ಅಚ್ಯುತ! ನಿನ್ನ ದಿವ್ಯಕಟಾಕ್ಷದಿಂದ ಅವಲೋಕಿಸು ಎಂದು ಪ್ರಾರ್ಥಿಸಿರುತ್ತಾರೆ ಹಿಂದೆಯೇ "**ನಧರ್ಮ ನಿಷ್ಠೋಽಸ್ಮಿ**"ಎಂಬ ಶ್ಲೋಕದಲ್ಲಿ ಹೇಳಿದುದನ್ನೇ ಇಲ್ಲಿಯೂ ಅನುವಾದ ಮಾಡಿ ಹೇಳುವಹಾಗೆ ತೋರುತ್ತದೆ. **ಹೇಭಗವನ್**-ಓ ಹೇಯಪ್ರತ್ಯನೀಕನಾಗಿ ಕಲ್ಯಾಣ ಗುಣಾಕರನಾದ ಸ್ವಾಮಿಯೇ! **ಹೇಅಚ್ಯುತ**— "**ಮಿತ್ರ ಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ**" ಎಂಬಲ್ಲಿ ಹೇಳಿರುವಹಾಗೆ ಪ್ರಪನ್ನರು ಗಳಿಂದ ಬಿಟ್ಟು ಹೋಗತಕ್ಕವನಲ್ಲದವನೇ! ಪ್ರಪನ್ನರ ಕೈಯನ್ನು ಬಿಡದಿರುವ ವನೇ ಎಬಂರ್ಥವು. ಅಥವಾ ಯಾವ ಕೃಪಾ ಸಾಗರನಿಂದ ಪ್ರಪನ್ನರಿಗೆ ಚ್ಯುತಿ ಇಲ್ಲವೋ ಅಂತವನೇ! **ಅವಿವೇಕ ಘನಾನ್ಧದಿಙ್ಮುಖೇ**-ಯೋಗ್ಯಾಯೋಗ್ಯಗ ಳಿಂದೂ ಧರ್ಮಾಧರ್ಮಗಳಿಂದೂ ವಿವೇಕಿಸಿ ತಿಳಿಯದ ಜ್ಞಾನಶೂನ್ಯತಾ ಎಂಬ ಮೇಘದಿಂದ, **ಅಂಧ**- ಕಣ್ಣು ಕಾಣಿಸದ, **ದಿಙ್ಮುಖೇ** ದಿಕ್ಕುಗಳ ಮುಖಗಳ ನ್ನುಳ್ಳ, ದಿಙ್ಮಾರ್ಗಗಳನ್ನುಳ್ಳ, **ಬಹುಧಾ ಸಂತತ ದುಃಖವರ್ಷಿಣಿ, ಬಹುಧಾ**-ನಾನಾ ವಿಧವಾದ, ತಾಪತ್ರಯಗಳಿಂದ, **ಸಂತತ**- ನಿರಂತರವಾಗಿ '**ದುಃಖ ವರ್ಷಿಣಿ**-ದುಃಖವೆಂಬ ಮಳೆಯನ್ನು ಸುರಿಸುತ್ತಿರುವ,' **ಭವದುರ್ದಿನೇ**-ಸಂಸಾರ ವೆಂಬ, ಸೂರ್ಯರಶ್ಮಿಯೇ ಇಲ್ಲದೆ ಕಾರ್ಗತ್ತಲೆ ಕವಿದಿರುವ ದಿನದಲ್ಲಿ, **ಪಥಸ್ಖಲಿತಂ**-ಕಣ್ಣುಕಾಣದೆ ಮಳೆಯಿಂದ ಕಾಲು ಜಾರಿ ಬಿದ್ದಿರುವ, **ಮಾಂ**- ಇಂತಹ ದುಸ್ಥಿತಿ ಯನ್ನು ಹೊಂದಿದ ನನ್ನನ್ನು, **ಅವಲೋಕಯ**- ನಿನ್ನ ಕೃಪಾಕಟಾಕ್ಷದಿಂದ ನೋಡು. ಎಂದರೆ ಮೇಲಕ್ಕೆ ಎತ್ತಿ ಈ ಸಂಸಾರ ಬಂಧದಿಂದ ರಕ್ಷಿಸು ಎಂಬ ರ್ಥವು. ಸಂಸಾರವೆಂಬುದೇ ಮೇಘಾಚ್ಛಾದಿತವಾದ ದಿನ. ಅವಿವೇಕವೆಂಬುದೇ ಮೇಘವು. ಇದು ಸರ್ವದಾ ದುಃಖವೆಂಬ ಮಳೆಯನ್ನು ಸುರಿಸುತ್ತಲೇ ಇದೆ. ಇದ ರಿಂದ ಮಾರ್ಗವೇ ತಿಳಿಯದೆ ಅಂಧನಾಗಿದ್ದೇನೆ ಮತ್ತು ಆ ವರ್ಷದಲ್ಲಿ ಕಾಲು ಜಾರಿ ಬಿದ್ದಿರುತ್ತೇನೆ. ಹೀಗೆ ಕಷ್ಟಕ್ಕೆ ಸಿಲುಕಿ ನರಳುತ್ತಿರುವಾಗ ನೀನು ಕೃಪಾ ಕಟಾಕ್ಷದಿಂದ ಅವಲೋಕಿಸಿ ರಕ್ಷಿಸು ಎಂದು ಪರಮದೈನ್ಯದಿಂದ ಬೇಡುತ್ತಾರೆ.

**ಉಪಪಾದನೆಯು**-ತಮ್ಮ ಈ ಬದ್ಧಾವಸ್ಥೆಯ ದುಸ್ಥಿತಿಯನ್ನು ಇನ್ನೊಂದು ಸಲ ಪ್ರಕಟಿಸಿ ಕರುಣಾ ಸಾಗರನಾದ ನೀನು ಕಣ್ಣೆತ್ತಿ ನೋಡಿದರೇನೇ ತಮಗೆ ಗತಿಯೇ ವಿನಾ, ತಾವು ತಮ್ಮನ್ನು ರಕ್ಷಿಸಿಕೊಳ್ಳಲು ಸಂಪೂರ್ಣವಾಗಿ ಅಶಕ್ತ ರೆಂದು ಹೇಳಿ, ಹಿಂದೆ ೨೨ನೆಯ ಶ್ಲೋಕದಲ್ಲಿ ಪ್ರಕಟಿಸಿದ ತಮ್ಮ ಆಕಿಂಚ-ನ್ಯವನ್ನು ಪುನಃ ಸಮರ್ಥಿಸುತ್ತಾರೆ. **ಅವಿವೇಕ ಘನಾಂಧ ದಿಙ್ಮುಖೇ**-ಶಾಸ್ತ್ರ ಜ್ಞಾನದ ಮೂಲಕ ಇದು ಸರಿಯಲ್ಲವೆಂದು ತಿಳಿಯುವುದೇ ವಿವೇಕವು "**ತಸ್ಮಾಚ್ಛಾಸ್ತ್ರಂ**

**ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ"** ಎಂಬಲ್ಲಿ ಹೇಳಿರುವ ಹಾಗೆ ಶಾಸ್ತ್ರ ಮೂಲಕವಾಗಿ ವಿವೇಕಿಸಿ ತಿಳಿಯಲಶಕ್ತನೆಂದು ನೈಚ್ಯಾನು ಸಂಧಾನದಿಂದ ಹೇಳಿಕೊಂಡರು. **"ಯದ್ಧಿತಂ ಮಮ ದೇವೇಶ ತದಾಜ್ಞಾಪಯ ಮಾಧವ"** ಇದು ಹಿತವೆಂದು ತಿಳಿದು ಅದನ್ನು ಮಾಡಿಸು ಎಂದು ಪ್ರಾರ್ಥಿಸುವ ವಿವೇಕವೂ ತಮಗಿಲ್ಲವು ಆದರ ದೊಡ್ಡವರು ಮಾಡಿದುದನ್ನವಲಂಬಿಸಿ ನಿನ್ನಲ್ಲಿ ಶರಣಾಗತಿಯನ್ನು ಮಾಡಿದೆನು. ಪರಮದ್ವ್ಯನ್ಯಾಸವನ್ನು ಹೊಂದಿದವನು ನಾನು, ಅಂತವನನ್ನು ನೀನೇ ಪರಮಕೃಪಯಾ ನೋಡತಕ್ಕದ್ದೆಂಬುದು ಸೂಚಿತವು. ಮಾರ್ಗತೋರದೆ, ಅವಿವೇಕ ಮೋಹದಿಂದ ಕತ್ತಲಾಗಿ, ಕಣ್ಣು ಕಾಣದೆ ಇರುತ್ತೇನೆ, ಎಂದು **ಘನಾಂಧ ದಿಙ್ಮುಖೇ** ಎಂದು ಹೇಳಿದರು. ಹೀಗೆ ಘನಾಂಧ ದಿಙ್ಮುಖವುಳ್ಳದ್ದು ಯಾವುದೆಂದರೆ **ಭವದುರ್ದಿನೇ** ಸಂಸಾರವೆಂಬ ಮೋಹಾವೃತವಾದ ದಿನವು. **"ಮೇಘಚ್ಛನ್ನೇಽಹ್ನಿ ದುರ್ದಿನಂ"** ಎಂದು ಅಮರ ನಿಘಂಟು ಇರುತ್ತದೆ. ಆ **ಭವದುರ್ದಿನವು** ಇನ್ನೂ ಎಂತಹುದೆಂದರೆ **ಬಹುಧಾಸಂತತ ದುಃಖವರ್ಷಿಣಿ**—ಸತತ ಮಳೆಯಂತೆ ದುಃಖವನ್ನು ಈ ಅವಿವೇಕ ಮೋಹವು ಸುರಿಸುತ್ತಿರುವುದು. ಈ ಸಂಸಾರವು ಜನ್ಮ ಕೌಮಾರ್ಯ, ಬಾಲ್ಯ, ಯೌವನ, ಜರಾ ಮರಣಾದಿ ಕಾಯಿಕ ಮತ್ತು ಮಾನಸಿಕ ದುಃಖಗಳನ್ನು ಸತತವಾಗಿ ವರ್ಷಿಸುತ್ತದೆಂಬ ಭಾವವು. ಶ್ರೀಪರಾಶರರು ವಿಷ್ಣು ಪುರಾಣದ ಷಷ್ಠಾಂಶದಲ್ಲಿ ಬಹುನಿಪುಣತರವಾಗಿ ವರ್ಣಿಸಿರುತ್ತಾರೆ. **"ಯಾವಜ್ಜೀವತಿ ತಾವಚ್ಚ ದುಃಖೈರ್ನಾನಾವಿಧೈಃ ಪ್ಲುತಃ। ತಂತುಕಾರಣ ಪಕ್ಷ್ಮೌಘೈರಾಸ್ತೇ ಕಾರ್ಪಾಸಬೀಜವತ್"** ಹತ್ತಿಯ ಬೀಜಕ್ಕೆ ತಂತುಗಳು ಸುತ್ತಿಕೊಂಡಿರುವಹಾಗೆ ಜನ್ಮವೆತ್ತಿದ ಮೊದಲು ಸಾಯುವತನಕ ನಾನಾವಿಧ ದುಃಖಗಳ ಸುತ್ತಿಕೊಂಡಿರುತ್ತವೆ ಎಂದು ಹೇಳಲ್ಪಟ್ಟಿರುತ್ತದೆ ಅಗಲಿ ಕೆಲವು ಸುಖಗಳನ್ನು ಅನುಭವಿಸವುದಿಲ್ಲವೇ ಎಂದರೆ **"ಯೇಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ"** ಎಂದು ಅವುಗಳೂ ಕ್ರಮೇಣ ದುಃಖಕ್ಕೆ ಕಾರಣಗಳಾಗುವುವು, ಎಂದು ಹೇಳಿರುತ್ತಾರೆ. ಸಂಸಾರವನ್ನು ದುರ್ದಿನವೆಂದು ರೂಪಕಮಾಡಿರುವುದಕ್ಕೆ ಕಾರಣವು, ಇಂದ್ರಿಯಗಳಿಗೆ ಸಿಲುಕಿ, ಮುಂದಕ್ಕೆ ಒಳ್ಳೆಯ ಗತಿ ಏನು ಎಂಬುದು ತಿಳಿಯದೆ ಅಂಧಕಾರ ಕವಿದುಕೊಂಡಿರುವುದರಿಂದ ಹಾಗೆ ಹೇಳಲ್ಪಟ್ಟಿರುತ್ತದೆ **ಪಥಃಸ್ಖಲಿತಂ** ಎಂಬುದರಿಂದ ಸರಿಯಾದ ಮಾರ್ಗವನ್ನು ತಾವು ತ್ಯಜಿಸಿರುವುದು ಎಂಬ ಭಾವವು. ಸರಿಯಾದ ಮಾರ್ಗವು ಯಾವುದೆಂದರೆ ನಿತ್ಯನೈಮಿತ್ತಿಕ ರೂಪ ನಿನ್ನ ಆಜ್ಞಾಕೈಂಕರ್ಯಗಳೊಂದಿಗೆ ನಿನ್ನನ್ನು ಉಪಾಸಿಸುವುದು. ಇದೇ ಮುಕ್ತಿಯನ್ನು ಹೊಂದಿಸಲು ಶಕ್ತಿಯುಳ್ಳದ್ದು. ಇದನ್ನು ಮಾಡಲು ಯೋಗ್ಯತೆ ಇಲ್ಲದುದರಿಂದ **ಪಥ** ದಿಂದ **ಸ್ಖಲಿತ** ನಾಗಿರುವೆನು. ಆದರೆ ಮಹಾಕೃಪಾಸಾಗರನಾದುದರಿಂದ ಅಂತಹ ಅಶಕ್ತರಿಗೂ ನಾನೇ ಶರಣ್ಯನೆಂದು ಚರಮ ಶ್ಲೋಕದಲ್ಲಿ **ಮಾಶುಚಃ** ಎಂದು ಸಮಾಧಾನಮಾಡಿರುತ್ತೀಯೇ. ಹೀಗೆಯೇ ರಾಮಾವತಾರ

**ನಮೃಷಾ ಪರಮಾರ್ಥ ಮೇವಮೇ**
**ಶೃಣು ವಿಜ್ಞಾಪನ ಮೇಕ ಮಗ್ರತಃ ।**
**ಯದಿ ಮೇ ನ ದಯಿಷ್ಯಸೇ ತತಃ**
**ದಯನೀಯಸ್ತವ ನಾಥ ದುರ್ಲಭಃ ॥೫೦॥**

---

ಯಾಗಿಯೂ "**ಸಕೃದೇವಪ್ರಪನ್ನಾಯ**" ಎಂಬ ಶ್ಲೋಕದಲ್ಲಿ ಅಂತಹ ಅಶಕ್ತ ರನ್ನು ರಕ್ಷಿಸುವುದೇ "**ವ್ರತಂ ಮಮ**" ಎಂದು ಹೇಳಿಕೊಂಡಿರುತ್ತೀಯೋ ಅದು ದರಿಂದ **ಅಚ್ಯುತ**–ಭಕ್ತರುಗಳನ್ನು ಬಿಟ್ಟು ಹೋಗದಹಾಗೆ ಕಾಪಾಡುವ ಸ್ವಾಮಿ ಯೇ! ನಿನ್ನ ಅಭಯ ಪ್ರದಾನಗಳ ಪ್ರಕಾರ **ಮಾಂ ಅವಲೋಕಯ** ನಿನ್ನ ಕೃಪಾ ಸೂಚಕವಾದ ಪುಂಡರೀಕಲೋಚನದ ಕಟಾಕ್ಷಲವಲೇಶದಿಂದಲಾದರೂ ಅವ ಲೋಕಿಸು. "**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ**" ಎಂದು ಹೇಳಿದವನಲ್ಲವೇ? "**ಮೂಢೋಯ ಮಲ್ಪಮತಿ ರಲ್ಪ ವಿಚೇಷ್ಟಿತೋಯಂ ಕ್ಲಿಷ್ಟಂ ಮನೋಸ್ಯ ವಿಷಯೈ ರ್ನಮಯಿಪ್ರಸಂಗೀ। ಇತ್ಥಂ ಕೃಪಾಂಕುರು ಮಯಿಪ್ರಣತೇ ಖಿಲೇಶತ್ವಾಂ ಸ್ತೋತು ಮಂಬುಜಭವೋಪಿ ದೇವನೇಶ:**" ಈತನು ಏನನ್ನೂ ತಿಳಿಯದ ಮೂಢನು, ಅಲ್ಪ ಬುದ್ಧಿಯುಳ್ಳವನು. ಅಲ್ಪಗಳಾದ ಚೇಷ್ಟೆಗಳುಳ್ಳವನಿವನು. ಈತನ ಮನಸ್ಸು ವಿಷಯಗಳಿಂದ ಕ್ಲೇಶವನ್ನು ಹೊಂದಿ, ಮನಸ್ಸು ನನ್ನಲ್ಲಿ ಸಂಬಂಧಿಸಿಲ್ಲವು. ಹೀಗೆಂದು ಭಾವಿಸಿದರೂ ನಾನು ನಿನ್ನಲ್ಲಿ ಶರಣಾಗತನಾಗಿ ನಮಸ್ಕರಿಸಲಾಗಿ ಓ, ಎಲ್ಲಕ್ಕೂ ನಿಯಾಮಕನಾದ ಸ್ವಾಮಿಯೇ! ನನ್ನಲ್ಲಿ ಕೃಪೆಮಾಡು. ಓ ದೇವನೇ! ನಿನ್ನನ್ನು ಸ್ತುತಿಸಲು ನಿನ್ನ ನಾಭೀಕಮಲ ದಲ್ಲಿ ಜನಿಸಿದ ಚತುರ್ಮುಖನುಕೂಡ ಸಮರ್ಥನಲ್ಲವು. ಎಂದು ಪ್ರಾರ್ಥಿಸಿದ ಕ್ಷತ್ರ ಬಂಧು ವಾಕ್ಯವು ಸ್ಮರಿತವು. ಶ್ರೀ ನಿಗಮಾಂತ ಮಹಾದೇಶಿಕರವರು, ರಹಸ್ಯ ತ್ರಯಸಾರದಲ್ಲಿ "**ಮಗ್ನಾನಾಂ ಭವಿನಾಂ ಭವಾರ್ಣವಸಮುತ್ತಾರಾಯ ನಾರಾಯಣ:**" ಎಂದು ಪ್ರಯೋಗಿಸಿರುತ್ತಾರೆ.

**ಅವತಾರಿಕೆಯು** ಹಿಂದಿನ ಎರಡು ಶ್ಲೋಕಗಳಿಂದಲೂ ತಮಗೆ ಈ ಪ್ರಕೃ ತಿಯ ಸಂಬಂಧವಾದ ದುರವಸ್ಥೆಯನ್ನು ವರ್ಣಿಸಿ ಹೇಳಿ, ತಮ್ಮ ಆಕಿಂಚನ್ಯವನ್ನು ಪ್ರದರ್ಶಿಸಿ, ಸರ್ವಶಕ್ತನಾದ ಕಲ್ಯಾಣ ಗುಣ ಮಹೋದಧಿಗೆ ಕರುಣಿಸಲು ಯೋಗ್ಯ ಪಾತ್ರನೆಂದು ತಿಳಿಸಿದರು. ಈ ಶ್ಲೋಕದಲ್ಲಿ ಹಾಗೆ ಕರುಣಿಸದೆ ಉದಾ ಸೀನ ಭಾವದಿಂದ ಸುಮ್ಮನಿದ್ದರೆ, ಸರ್ವಶಕ್ತನಾಗಿ ಸ್ವಾಮಿಯಾದ ನಿನಗೆ ದಯೆ ಯನ್ನು ತೋರಿಸಲು ಯೋಗ್ಯವಾದ ಪಾತ್ರವು ಬೇರೆ ದೊರೆಯಲಾರದು ಎಂದು ಹೇಳುತ್ತಾರೆ. ಮಹಾಪರಾಧಿಯಾಗಿ ಅಪರಾಧ ಚಕ್ರವರ್ತಿಯಾದವನನ್ನು ಉದ್ಧಾರ ಮಾಡಿದರಲ್ಲವೇ, ಸರ್ವಶಕ್ತನೆಂದೂ, ಕರುಣಾಸಾಗರನೆಂದೂ ಹೀಗೆಲ್ಲಾ ನಿನ್ನ ಕೀರ್ತಿಯೂ ಔದಾರ್ಯವೂ ಲೋಕದಲ್ಲೆಲ್ಲಾ ಬೆಳಗುವುದು. ಆದುದರಿಂದ ನೀನು ನನ್ನನ್ನು ನಿರಾಕರಿಸಬೇಡ, ಪುನಃ ನನ್ನಂತಹ ಪಾತ್ರವು ನಿನಗೆ ದೊರೆಯಲಾರ ದೆನ್ನುತ್ತಾರೆ–

**ಅರ್ಥವು-ಅಗ್ರತಃ**- ನಿನ್ನ ಎದುರಿಗೆ ನಿಂತು (ಮಾಡಿಕೊಳ್ಳುವ) **ಏಕಂ**- ಒಂದಾದ ಅಥವಾ, ಮುಖ್ಯವಾದ, **ವಿಜ್ಞಾಪನಂ**- ಪ್ರಾರ್ಥನೆಯನ್ನು **ಶೃಣು**- ಸಾವಧಾನದಿಂದ ಕೇಳು; ಅದು **ನಮೃಷಾ**-ಸುಳ್ಳಲ್ಲವು. **ಪರಮಾರ್ಥಮೇವ**- ಸತ್ಯವಾದುದೇ, ಆ ವಿಜ್ಞಾಪನೆಯು ಯಾವುದೆಂದರೆ ನನ್ನನ್ನೇ ಮುಖ್ಯವಾಗಿ ನಿನ್ನದಯೆಗೆ ಪಾತ್ರವೆಂದು ಭಾವಿಸತಕ್ಕದ್ದೆಂದು ಹೇಳುತ್ತಾರೆ. **ಮೇ**-ನನ್ನ, ಅಪರಾಧ ಚಕ್ರವರ್ತಿಯಾಗಿ ಸಂಸಾರ ಕೂಪದಲ್ಲಿ ಕಾಲು ಜಾರಿ ಬಿದ್ದಿರುವ ನನ್ನ ವಿಷಯದಲ್ಲಿ **ನದಯಿಷ್ಯಸೇ ಯದಿ**- ನೀನು ದಯೆ ತೋರಿಸಿ ರಕ್ಷಿಸದೆ ಹೋದರೆ, **ಹೇನಾಥ**-ಓ ಸ್ವಾಮಿಯೇ! **ತವ**-ಕರುಣಾಸಾಗರನೆಂಬ ಬಿರುದುಳ್ಳ ನಿನಗೆ, **ದಯನೀಯಃ**-ಹೆಚ್ಚು ಅಪರಾಧಗಳನ್ನು ಮಾಡಿರುವುದರಿಂದ ನೀನು ಕೃಪಾಳು ವೆಂಬ ಕೀರ್ತಿಯು ಜಗತ್ತಿನಲ್ಲೆಲ್ಲಾ ಹರಡಿಕೊಳ್ಳುವುದಕ್ಕಾಗಿ, ನೀನು ದಯೆ ಯನ್ನು ತೋರಿಸಲು ಅರ್ಹನಾದ ಪಾತ್ರನು, **ದುರ್ಲಭಃ**-ಜೀವರಾಶಿಯಲ್ಲಿ ನಿನಗೆ ದೊರೆಯಲಾರದು.

**ಉಪಪಾದನೆಯು**-"ನನಿಂದಿತಂಕರ್ಮ" ಎಂಬ ಶ್ಲೋಕದಲ್ಲಿ ಹಿಂದೆ ಹೇಳಿ ಕ್ಕೊಂಡ ಅಪರಾಧ ಬಾಹುಳ್ಯವನ್ನು ಸ್ಮರಿಸಿಕೊಂಡವರಾಗಿ ಅಂತಹ ವಿಶೇಷಾಪ ರಾಧಿಯಾದ ನನ್ನನ್ನು ಬಿಟ್ಟರೆ ನಿನಗೆ ಬೇರೆ ಅಂತಹ ವಿಶೇಷಾಪರಾಧಿಯು ದೊರೆಯಲಾರನು. ಆದುದರಿಂದ ನನ್ನ ವಿಷಯದಲ್ಲಿ ಉದಾಸೀನಭಾವದಿಂದ ಕೈ ಬಿಡಬೇಡ. ನನ್ನನ್ನು ಪರಿಗ್ರಹಿಸಿದರೋ ನಿನ್ನ ಕಾರುಣ್ಯ, ವಾತ್ಸಲ್ಯ ಸರ್ವ ಶಕ್ತತ್ವಾದಿ ಗುಣಗಳಿಗೆ ಒಳ್ಳೇ ಲಕ್ಷ್ಯವಾಗುವುದರಿಂದ, ನಾನೂ ಬದುಕಿಕೊಳ್ಳು ತ್ತೇನೆ. ನಿನಗಾದರೋ ವಿಶೇಷ ಖ್ಯಾತಿಯು; ಇಂತಹ ಸಹಸ್ರಾಪರಾಧಿಯಾದರೂ ನಮಗೆಲ್ಲಾ ನಾಥನಾದುದರಿಂದ ನೀನು ರಕ್ಷಿಸಿದಿ ಎಂಬ ಖ್ಯಾತಿಯು ಲೋಕದಲ್ಲೆಲ್ಲಾ ಹರಡುತ್ತದೆ. ಪರಮಶೇಷಿಯು ಇಂತಹ ಶೇಷಭೂತನನ್ನು ರಕ್ಷಿಸಿದನೆಂದಾಗು ವುದರಿಂದ, ನಿನಗೆ ಅತಿಶಯಾಪಹವಾಗುತ್ತದೆಂದು ಹೇಳಿದರು. ಈ ಸಂದರ್ಭದಲ್ಲಿ ಕ್ಷಮಾಷೋಡಶಿಯ ಶ್ಲೋಕವಾದ **"ಪುಣ್ಯಂ ಯತ್ತವ ಪೂಜನಂ ಭವತಿ ಚೇತತ್ಕರ್ತ್ರು ರಿಷ್ಟೇಕೃತೇ ತತ್ಸ್ವಾರ್ಥ್ರಂಗಪತೇ ಕೃತಪ್ರತಿಕೃತಂ ಸರ್ವೇಪಿತೆ ತ್ಕುರ್ವತೇ। ಪಾಪಂ ಚೇದಪರಾಧಮೇವ ಭವತಃ ತತ್ಕರ್ತ್ರೃ ಸಂರಕ್ಷಣೇ ಕ್ಷಾನ್ತಿಸ್ತೇ ನಿರುಪಾಧಿಕಾ ನಿರುಪಮಾ ಲಕ್ಷ್ಯೇತ ತತ್ಕ್ಷಮ್ಯತಾಂ**" ಎಂಬುದು ಇಲ್ಲಿ ಅನುಸಂಧೇಯವು. ಕ್ಷಮೆಯು ಕಾರುಣ್ಯದ ಕಾರ್ಯವು, ಸುಕೃತಮೂಲಕವಾಗಿ ನಿನ್ನನ್ನು ಆರಾಧಿಸಿದವರ ಇಷ್ಟಾರ್ಥವನ್ನು ನೀನು ಪೂರಣಮಾಡಿದರೆ; ಅವರು ಸ್ತುತಿಸಿದರು, ನೀನು ಕರುಣಿಸಿದಿ, ಎಂದಾಗಿ, ಮಾಡಿದುದಕ್ಕೆ ಪ್ರತಿಫಲ ಮಾಡಿದ ಹಾಗಾಗುತ್ತದೆ ಉಪಕರಿಸಿದವರಿಗೆ ಪ್ರತಿಯಾಗಿ ಮಾಡುವುದನ್ನು ಈ ಲೋಕದ ಅನೇಕ ಮಹಸೀಯರೂ ನಡೆಸುವರು. ನಿನ್ನ ಮಹಿಮೆಯು ಅಲ್ಲಿ ಏನಿರುತ್ತದೆ. ಮಹಿಮೆಯು ಎಲ್ಲಿ? ಎಂದರೆ; ನಿನ್ನ ಶಾಸ್ತ್ರಗಳನ್ನು ಅತಿಲಂಘಿಸಿ ವಿಶೇಷಾಪರಾಧ?

ಮಾಡಿದವರನ್ನು ನೀನು ರಕ್ಷಿಸಿದುದಾದರೆ, ನಿನ್ನ ಕ್ಷಮಾಗುಣವು ನಿರತಿಶಯ ವಾದುದು, ನಿರುಪಮವಾದುದು. ನಿನ್ನ ಕ್ಷಮಾಗುಣಕ್ಕೆ ಅಂತಹ ಪ್ರಪನ್ನನು ಸರಿಯಾದ ಲಕ್ಷ್ಯ (ಗುರಿ) ಯಾಗುವನು, ಆದುದರಿಂದ ರಂಗಪತೇ! ನನ್ನನ್ನು ಕ್ಷಮಿಸಿ ರಕ್ಷಿಸು ಎಂಬರ್ಥವು. ನಿಗಮಾನ್ತ ದೇಶಿಕರವರೂ ಅಭೀತಿಸ್ತವದ ೧೪ನೆಯ ಶ್ಲೋಕದಲ್ಲಿ **"ಇತಿಪ್ರಥಿತೆ ಸಾಧ್ವಸೇ ಮಯಿ ದಯಿಷ್ಯಸೇ ತ್ವಂ ನಚೇತ್ಕ ಇತ್ಥಮನುಕಂಪಿತಾತ್ವದನು ಕಂಪನೀಯಶ್ಚ ಕಃ"** ಎಂಬಲ್ಲಿ ತಮ್ಮ ವಿಷಯದಲ್ಲೂ ಹಾಗೇಯೇ ಹೇಳಿಕೊಂಡಿರುತ್ತಾರೆ. ಇನ್ನೊಂದು ವಿಧವಾಗಿಯೂ ಅರ್ಥ ಹೇಳಬಹುದು. ಹೇಗೆಂದರೆ ನನ್ನಲ್ಲಿ **ನದಯಿಷ್ಯಸೇಯದಿ**–ದಯೆಯನ್ನು ತೋರಿಸದೆ ಹೋದರೆ ಎಲ್ಲರೂ ನನ್ನ ಹಾಗೆಯೇ ಅಪರಾಧಿಗಳಾದರಿಂದ **ದಯನೀಯಸ್ತವನಾಥದುರ್ಲಭಃ**–ದಯೆಯನ್ನು ತೋರಿಸಲು ಯಾರೂ ಸಿಕ್ಕುವುದಿಲ್ಲವು. ಹಾಗೆ ಸಿಕ್ಕಿದುದಾದರೆ ನೀನು ಪಕ್ಷಪಾತಿಯಾಗುವೆ ಎಂಬ ಭಾವವು. **ನಮೃಷಾ**–ಸುಳ್ಳಲ್ಲವೆಂದು ಹೇಳಿದನಂತರವೂ **ಪರಮಾರ್ಥಮೇವ** ಎಂಬಲ್ಲಿ ಅವಧಾರಣದ ಅಭಿಪ್ರಾಯವೇನೆಂದರೆ ಸರ್ವಜ್ಞನ ಎದುರಿಗೆ ನಿಂತು ಸುಳ್ಳು ಹೇಳಲು ಸಾಧ್ಯವೇ? ಆದುದರಿಂದ ಸತ್ಯವಾಕ್ಯವೇ ಹೇಳಿರುವುದು ಎಂಬರ್ಥದಿಂದ **ನಮೃಷಾ ಪರಮಾರ್ಥಏವ** ಎಂಬುದಾಗಿ ದ್ವಿರುಕ್ತಿಯು. ಅಥವಾ ಸ್ವರಕ್ಷಣೆಯನ್ನು ಸುಳ್ಳನ್ನಾದರೂ ಹೇಳಿ ನಡೆಸಿಕೊಳ್ಳಬಹುದು ಎಂದು ಧರ್ಮಶಾಸ್ತ್ರ ಬಲವಿದ್ದರೂ, ಹಾಗೆ ಸುಳ್ಳಲ್ಲವು ಯಥಾರ್ಥವಾದುದೇ ಎಂದಾಗಲೀ, ಅಥವಾ ಸ್ವರಕ್ಷಣೆಯನ್ನು ಹೇಗಾದರೂ ಮಾಡಿ ಸಾಧಿಸಿಕೊಳ್ಳಬೇಕೆಂಬ ಅಭಿಲಾಷೆ ಯಿಂದಲ್ಲವೆಂದಾಗಲಿ ಆಗಬಹುದು. ಅಥವಾ ಯದ್ಯಪಿ ಪ್ರಕೃತಿ ಸಂಬಂಧವಿರು ವುದರಿಂದ ಅನೇಕರು ಸುಳ್ಳನ್ನು ಹೇಳಬಹುದು, ಆದರೆ ನನಗೆ ನಿನ್ನಕೃಪೆ ಇರು ವುದರಿಂದ ಜ್ಞಾನವು ಪೂರ್ತಿಯಾಗಿ ತಿರೋಹಿತವಾಗದಿರುವುದರಿಂದ (ಮರೆಯಾಗಿ ಹೋಗದೆ ಇರುವುದರಿಂದ) ಸತ್ಯವನ್ನೇ ಹೇಳಿರುವೆನು ಎಂದು ದ್ವಿರುಕ್ತಿ ಎಂಬು ದಾಗಿ ಭಾವಿಸಬಹುದು. ಸರ್ವಜ್ಞನಾಗಿರುವುದರಿಂದ, ತನ್ನ ಪ್ರಾರ್ಥನೆಯು ಆತನಿಗೆ ವೇದ್ಯವಾಗಿದ್ದರೂ, ತನ್ನ ಅಭಿಮತವನ್ನು ಸ್ವಾಮಿಯ ಎದುರಿಗೆ ನಿಂತು ತಿಳಿಸುವುದು ತನ್ನ ಕರ್ತವ್ಯವು ಎಂಬುದನ್ನು ತಿಳಿಸುವುದಕ್ಕಾಗಿ **ವಿಜ್ಞಾಪನಂ** ಎಂಬ ಪ್ರಯೋಗವು. ಸ್ವಾಮಿಯು ಕೇಳುತ್ತಾ ಇರುವಾಗಲೇ **ಶೃಣು** ಎಂದು ಹೇಳುವುದಕ್ಕೆ ಅಭಿಪ್ರಾಯವೇನೆಂದರೆ, ನೀನು ನನ್ನ ವಿಷಯದಲ್ಲಿ ಅನಾದರವನ್ನು ಮಾಡಲು ಬೇಕಾದಷ್ಟು ಕಾರಣವು ನಿನಿಗಿರಬಹುದು. ಪ್ರಪನ್ನನನ್ನು ಕೈ ಬಿಡುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿರುತ್ತೀಯೇ. ಆದುದರಿಂದ ನಿನಗೆ ಕಾರಣವಿದ್ದರೂ ನೀನು ದಯವಿಟ್ಟು ನನ್ನ ವಿಜ್ಞಾಪನೆಯನ್ನು ಲಾಲಿಸತಕ್ಕದ್ದೆನ್ನು ತ್ತಾರೆ, **ಏಕಂ** ಎಂದರೆ ಮುಖ್ಯವಾದುದೆಂಬ ಭಾವವು. ಹೇಗೆ ಮುಖ್ಯವೆಂದರೆ ನನಗೊಬ್ಬನಿಗೇ ಪ್ರಯೋಜನವಾಗಿ ಮುಖ್ಯವಲ್ಲವು, ನಮ್ಮಿಬ್ಬರಿಗೂ ಲಾಭಕರ ವಾಗಿ ಪ್ರಧಾನಭೂತವಾದುದು, ನನ್ನನ್ನು ಉದ್ಧಾರಮಾಡಿದರೆ, ಮಹಾಪರಾಧಿ

ಯನ್ನೂ ಕೂಡ ರಕ್ಷಿಸಿದಿ ಎಂಬ ಮಹತ್ಕೀರ್ತಿಯೂ ಔದಾರ್ಯವೂ, ಕಾರುಣ್ಯವೂ, ವಾತ್ಸಲ್ಯವೂ ಕ್ಷಮೆಯೂ ಅಲ್ಲದೆ, ಇಂತಹ ಪರಮಕಾರ್ಪಣ್ಯವನ್ನು ಹೊಂದಿದವನನ್ನು ಸಂರಕ್ಷಿಸಿದನೆಂಬ ಪರಮಸಂತೋಷವೂ ಶೇಷಿಯಾದ ನಿನಗೆ ಲಭಿಸುತ್ತದೆ. ಆದುದರಿಂದ ಈ ನನ್ನ ಅರಿಕೆಯು ಪ್ರಧಾನವಾದದು. **"ಉದಾರಾಸ್ಸರ್ವ ಏವೈತೇ"** ಎಂದು ನೀನು ಹೇಳಿದವನಲ್ಲವೇ? ಎಂಬ ಭಾವವು. ಅಥವಾ, **ಏಕಂ** ಎಂದರೆ ಒಂದು ಎಂದೂ ಅರ್ಥಮಾಡಬಹುದು ಹೇಗೆಂದರೆ ನಿನ್ನಲ್ಲಿ ಅನೇಕ ಪ್ರಾರ್ಥನೆಗಳಿರಬಹುದು. ಅವುಗಳೆಲ್ಲಾ ಹಾಗಿರಲಿ ನಿನ್ನ ಲಾಭವೇ ನನಗೆ ಮುಖ್ಯವಾಗಿ ಇದು ಒಂದೇ ನನಗೆ ಬೇಕಾದುದು ಎಂಬ ಭಾವವು **ಅಗ್ರತಃ** ಇತರರ ಮೂಲಕ ವಿಜ್ಞಾಪಿಸಿಕ್ಕೊಂಡರೆ ಏನಾದರೂ ಅನಾದರ ಉಂಟಾದೀತೋ ಎಂಬ ಸಂದೇಹದಿಂದ ಸಾಕ್ಷಾತ್ತಾಗಿ ಎದುರಿಗೆ ನಿಂತು ಪ್ರಾರ್ಥಿಸುವುದು ಪ್ರಯೋಜನಾವಹವು ಎಂದು ಭಾವಿಸಿ ಎದುರಿಗೆ ನಿಂತು ವಿಜ್ಞಾಪಿಸಿಕ್ಕೊಳ್ಳುತ್ತೇನೆ. ದೂರವಾಗಿದ್ದರೂ ನೀನು ಕೈಬಿಡುವನಲ್ಲವೆಂಬುದು ದ್ರೌಪದಿಯ ಇತಿಹಾಸದಲ್ಲೂ, ಗಜೇಂದ್ರಮೋಕ್ಷದಲ್ಲೂ, ಧ್ರುವನ ಪ್ರಾರ್ಥನೆಯಲ್ಲೂ ಪ್ರಕಟವಾಗಿದ್ದರೂ ಮನಸ್ಸಿನ ಚಾಪಲ್ಯದಿಂದ ಆರ್ಚಾವತಾರಿಯಾಗಿರುವ ಓ ರಂಗನಾಥನೇ! ಅಗ್ರತಃ-ನಿನ್ನ ಎದುರಿಗೆ ನಿಂತು ಪ್ರಾರ್ಥಿಸುತ್ತೇನೆ. ಶೃಣು-ಕೇಳು. ವಿಜ್ಞಾಪನೆಯನ್ನು ಉತ್ತರಾರ್ಧದಿಂದ ಹೇಳುತ್ತಾರೆ ನೀನು ನನ್ನಲ್ಲಿ ದಯೆಯನ್ನು ತೋರಿಸದೆ ಹೋದರೆ ನಿನ್ನ ದಯೆಗೆ ಸರಿಯಾದ ಪಾತ್ರನು ಇನ್ನು ಬೇರೆ ದೊರೆಯಲಾರನು. ಇದೀಗ ಪರಮಾರ್ಥವು ಎನ್ನುತ್ತಾರೆ. **ಮೇ** ಎಂದು ತಮ್ಮನ್ನು ಮುಟ್ಟಿ ಹೇಳುವ ಭಾವವೇನು ? ಎಂದರೆ ಸರಿಯಾಗಿ ನಿನ್ನನ್ನು ಆಶ್ರಯಿಸಬೇಕಾದರೆ ಪರಿಕರ ಸಹಕೃತ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳನ್ನು ಪರಂಪರಯೂ ಅನುಷ್ಠಿಸಬೇಕು. ಆದರೆ ನಾನು ಹಾಗೆ ಅನುಷ್ಠಿಸಲು ಅಶಕ್ತನು. ಆದುದರಿಂದ ಅಪರಾಧ ಪರಿಹಾರಕ್ಕೆ ಬೇರೆ ಮಾರ್ಗವೇ ಇಲ್ಲದೆ ಈ ಸಂಸಾರದೊಳಗೆ ಬಿದ್ದು ನರಳುವ ಹಾಗಾಯಿತಲ್ಲಾ ಎಂದು ನಿರಂತರ ದುಃಖಪಾತ್ರನಾಗಿರುವ **ಮೇ** ಎಂದು ಭಾವವು. ಅಥವಾ ಇನ್ನು ಯಾವ ಗತಿಯೂ ತೋರದೆ, ಲಕ್ಷ್ಮಣನು ಅಣ್ಣನ ಕಾಲನ್ನು **"ಗಾಢಂ ನಿಪೀಡ್ಯ"** ಎಂದು ಘಟ್ಟಿಯಾಗಿ ಹಿಡಿದುಕೊಂಡ ಹಾಗೆ ನಿನ್ನ ಪಾದಾರವಿಂದದಲ್ಲಿ ಶಿರಸ್ಸಿಟ್ಟು ಘಟ್ಟಿಯಾಗಿ ಹಿಡಿದಿರುವ **ಮೇ** ಎಂದಾಗಲಿ ಭಾವಿಸಬಹುದು. **ತವದಯನೀಯ** ಎಂದು ಅನ್ವಯಿಸಿದರೆ ದಯಾವಿಷಯಕ್ಕೆ ಯಾರು ಅರ್ಹರು ಎಂದು ಹುಡುಕುವ ನಿನಗೆ ಎಂದು ಅರ್ಥಮಾಡಬಹುದು. ಹಾಗಲ್ಲದೆ **ತವದುರ್ಲಭಃ** ಎಂಬುದರೊಂದಿಗೆ ಅನ್ವಯಿಸಿದರೆ ನನ್ನ ಬಿಟ್ಟರೆ ನಿನಗೆ ಇನ್ನು ಯಾರೂ ಸಿಕ್ಕಲಾರರು ಎಂದರ್ಥವಾಗುತ್ತದೆ. **ನಾಥ** ಎಂಬ ಸಂಬೋಧನೆಯಿಂದ, ಸ್ವಾಮಿ ಭೃತ್ಯನ್ಯಾಯದಿಂದ ನೀನೇ ನನಗೆ ರಕ್ಷಕನಾಗಬೇಕು, ನಾನೇ ನಿನಗೆ ರಕ್ಷ್ಯವಸ್ತುವು. ನನಗೂ ಶರಣ್ಯಾಂತರವು ಯಾರೂ ಇಲ್ಲವು, ಎಂಬ ಅಭಿಪ್ರಾಯವು. ಸ್ವಾಮಿ ಎಂದು ನಾನು ಭಾವಿಸಿದನಂತರ ನೀನು ನನ್ನನ್ನು ತ್ಯಜಿಸುವೆಯಾ? ಎಂದಿಗೂ ಇಲ್ಲವೆಂಬ

**ತದಹಂ ತ್ವದೃತೇನ ನಾಥವಾನ್**
**ಮದೃತೇತ್ವಂ ದಯನೀಯವಾರ್ನಚ ।**
**ವಿಧಿ ನಿರ್ಮಿತ ಮೇತದನ್ವಯಂ**
**ಭಗವನ್‌ಪಾಲಯ ಮಾಸ್ಮಜೀಹಪಃ　॥ ೫೧ ॥**

---

ಭಾವವು. ಈ ಅಭಿಪ್ರಾಯವನ್ನೇ ಮುಂದಿನ ಶ್ಲೋಕದಲ್ಲಿ ನಿಪುಣತರವಾಗಿ ಉಪಪಾದಿಸುತ್ತಾರೆ. ಹಿಂದೆಯೇ **"ಚಿರಾಯ ಮೇ ಕೂಲಮಿವಾಸಿಲಬ್ಧಃ" " ತ್ವಯಾ ಪಿ ಲಬ್ಧಂ ಭಗವನ್ನಿದಾನೀಂ ಅನುತ್ತಮಂ ಪಾತ್ರಮಿದಂ ದಯಾಯಾಃ" "ಪರಾಭವೋ ನಾಥನತೇ ನು ರೂಪಃ"** ಎಂದು ಹೇಳಿರುವುದೂ ಸಹ ಅನುಸಂಧೇಯವು. **"ಯದಿಮೇನದಯಿಷ್ಯಸೇ"** ಎಂದು ಹೇಳಿ ಅನಂತರ **ದಯನೀಯಸ್ತವನಾಥದುರ್ಲಭಃ** ಎಂದು ಹೇಳುವುದಕ್ಕೆ ಮಧ್ಯೆ ತತಃ ಎಂದು ಹೇಳಿರುವುದರ ಅಭಿಪ್ರಾಯವೇನೆಂದರೆ ಹೀಗೆ ದಯಮಾಡದೆ ಹೋದರೆ ಆ **ಕಾರಣದಿಂದ** ನಿನಗೆ ದಯನೀಯನು ದುರ್ಲಭನು ಎಂದಾಗುವುದರಿಂದ, ನೀನು ದಯಮಾಡದೇ ಹೋಗುವುದೂ ಇಲ್ಲವು, ನಿನಗೆ ದಯನೀಯನು ದುರ್ಲಭ ವಾಗುವುದೂ ಇಲ್ಲವು ; ಶೇಷ ಶೇಷಿಭಾವಗಳಿಗನುಗುಣವಾಗಿಯೇ ನೀನು ದಯೆ ಯನ್ನು ತೋರಿಸುವೆ ಎಂಬ ಭಾವವು ಸಿದ್ಧವು.

**ಅವತಾರಿಕೆಯು**–ಹಿಂದಿನ ಶ್ಲೋಕದಲ್ಲಿ, ತಮ್ಮನ್ನು ರಕ್ಷಿಸದೇ ಹೋದರೆ ತಮಗೆ ಮಾತ್ರವೇ ಅನುಪಪತ್ತಿಯಲ್ಲದೆ ಸರ್ವೇಶ್ವರನಾದ ನಿನಗೂ ಅನುಪ ಪತ್ತಿಯು ಹೇಗೆಂದರೆ? ನಿನಗೆ ದಯನೀಯ ಸತ್ಪಾತ್ರವು ಇನ್ನು ಬೇರೆ ದೊರೆಯ ಲಾರದು; ಆದುದರಿಂದ ನನ್ನನ್ನು ರಕ್ಷಿಸು ಎಂದು ಹೇಳಿ, ತಾವು ಈಗ ವಿಜ್ಞಾಪಿಸಿ ದುದು ಪರಮಾರ್ಥವೆಂದು ಹೇಳಿದರು. ಅದು ಹೇಗೆ ಪರಮಾರ್ಥವೆಂಬುದನ್ನು ಸಮರ್ಥನೆ ಮಾಡುತ್ತಾರೆ. ಹೇಗೆಂದರೆ ನೀನು ಶೇಷಿಯು, ನಾನು ಶೇಷನು ಎಂಬು ದನ್ನು ಪ್ರಣವಾದಿ ಸರ್ವಶಾಸ್ತ್ರಗಳೂ ಉದ್ಘೋಷಿಸುತ್ತವೆ. ನೀನು ನಾಥನು. ನಾನು ನಿನ್ನ ಸ್ವತ್ತಾದ ದಾಸನು. ಹೀಗೆ ರಕ್ಷಕ ರಕ್ಷ್ಯಸಂಬಂಧವು ಅನಾದಿಯಾಗಿ ಬಂದಿರು ವುದು ಎಂದಿಗೂ ತಪ್ಪದು. ಆದುದರಿಂದ ನೀನು ಕೈಬಿಡ ತಕ್ಕದಲ್ಲವೆನ್ನುತ್ತಾರೆ.

**ಅರ್ಥವು-ತತ್**—ಆ ಕಾರಣದಿಂದ, ಎಂದರೆ ಹಿಂದಿನ ಶ್ಲೋಕದಲ್ಲಿ ಹೇಳಿದ ಹಾಗೆ, ನನ್ನನ್ನು ಬಿಟ್ಟರೆ ನಿನ್ನ ಕರುಣೆಗೆ ಅರ್ಹವಾದ ವಸ್ತುವು ಬೇರೆ ದೊರೆಯಲಾರದು, ಎಂಬುದು ನಿಜವಾದ ವಿಷಯವಾದುದರಿಂದ **ತ್ವದೃತೇ**– ನಿನ್ನನ್ನು ಬಿಟ್ಟರೆ, **ಅಹಂ**–ಆಕಿಂಚನ್ಯ ಅನನ್ಯಗತಿತ್ವದಿಂದ ಕೂಡಿರುವ ಮತ್ತು ಕ್ಲೇಶಯುಕ್ತನಾದ ನಾನು, **ನನಾಥವಾನ್**–ಸ್ವಾಮಿಯಿಲ್ಲದವನಾಗುವೆನು, ನನಗೆ ರಕ್ಷಕನಾದ ಶೇಷಿಯು ಇಲ್ಲವಾಗುತ್ತದೆಂಬ ಭಾವವು. **ಮದೃತೇ**–ಸುಕೃತ ಪರಿಪಾಕ ದಿಂದ ಪ್ರಪನ್ನನಾಗಿ ದಯೆಗೆ ಎಲ್ಲಾ ವಿಧದಲ್ಲಿಯೂ ಅರ್ಹನಾಗಿರುವ ನನ್ನನ್ನು

ಬಿಟ್ಟರೆ, ತ್ವಂ ಸರ್ವಶಕ್ತನಾಗಿ, ದಯಾಸಾಗರನಾದ ನೀನು, **ದಯನೀಯರ್ವಾ**–ದಯೆಯಿಂದ ರಕ್ಷಿಸಲು ಯೋಗ್ಯನಾಗಿರುವ ದಾಸನನ್ನು ಳ್ಳವನಾದವನೂ, **ನಚ**–ಆಗಲಾರೆ. **ಏತದನ್ವಯಂ**–ಶೇಷ ಶೇಷಿ ಸಂಬಂಧದಿಂದುಂಟಾದ ಈರಕ್ಷ್ಯ ರಕ್ಷಕ ಸಂಬಂಧವನ್ನು, **ಏತಮನ್ವಯಂ** ಎಂದು ಪಾಠಾನ್ತರವು. ಆಗಲೂ ಇದೇ ಅರ್ಥವು, **ವಿಧಿನಿರ್ಮಿತಂ**—"ದಾಸಭೂತಾಸ್ಸ್ವತಸ್ಸರ್ವೇ ಹ್ಯಾತ್ಮಾನಃ ಪರಮಾತ್ಮನಃ" ಎಂಬಲ್ಲಿ ಸ್ಥಾಪಿಸಿದಹಾಗೂ, ಓಂ ಎಂಬ ಪ್ರಣವದಲ್ಲಿ **ಮಕಾರವಾಚ್ಯಃ ಜೀವಃ ಅಯ್ಯೈವ** ಎಂಬ ವ್ಯುತ್ಪತ್ತಿಯ ಮೂಲಕ ವೇದಾದಿಯಲ್ಲೇ ಸ್ಥಾಪಿಸಿರುವ ಹಾಗೂ, ನೀನೇ ಏರ್ಪಡಿಸಿರುವುದನ್ನು, ಹೇ **ಭಗರ್ವ**–ಹೇಯ ಪ್ರತ್ಯನೀಕನಾಗಿ ಷಾಡ್ಗುಣ್ಯಾದಿ ಕಲ್ಯಾಣ ಗುಣಾಕರನಾಗಿರುವ ಸ್ವಾಮಿಯೇ, **ಪಾಲಯ**–ರಕ್ಷಿಸು ಎಂದರೆ ಅಂತಹ ನೀನೇ ಏರ್ಪಡಿಸಿದ ಸಂಬಂಧವನ್ನು ನೀನೇ ಕಾಪಾಡತಕ್ಕದ್ದಾಗಿರುತ್ತದೆ. **ಹೇ ಭಗರ್ವ** ಎಂಬ ಸಂಬೋಧನೆಯು ಏಕೆಂದರೆ? ಭಗವಚ್ಛಬ್ದಕ್ಕೆ ಶ್ರೀ ಪರಾಶರರು ಹೇಯಪ್ರತ್ಯನೀಕನೆಂದೂ ಕಲ್ಯಾಣ ಗುಣಾಕರನೆಂದೂ, ವ್ಯುತ್ಪತ್ತಿಯ ಮೂಲಕ ಅರ್ಥಮಾಡಿರುತ್ತಾರೆ. ನೀನು ಈ ಸಂಬಂಧವನ್ನು ಪಾಲಿಸದೇ ಹೋದರೆ ಪ್ರಪನ್ನನನ್ನು ಕೂಡ ರಕ್ಷಿಸಲಿಲ್ಲ. ತುಂಬಾ ಹೇಯ ಕಠಿನ ಸ್ವಭಾವವುಳ್ಳವನೆಂದಾಗುತ್ತದೆ. ಕಲ್ಯಾಣ ಗುಣಗಣದಲ್ಲಿ ಕಾರುಣ್ಯವೇ ಮುಖ್ಯ ಗುಣವು. ಅದೇ ನಿನಗೆ ಇಲ್ಲವೆಂದು ಹೇಳಿಕೊಳ್ಳುವರು. ಆದುದರಿಂದ ಭಗವಚ್ಛಬ್ದಾರ್ಥವು ನಿನಗೆ ಸಲ್ಲಬೇಕಾದರೆ ನನ್ನನ್ನು ಕಾಪಾಡಲೇಬೇಕೆಂಬ ಭಾವನೆಯಿಂದ ಹಾಗೆ ಸಂಬೋಧನೆಯು. **ಮಾಸ್ಮಜೀಹಪಃ** ಎಂದಿಗೂ ನಾಶಪಡಿಸತಕ್ಕದ್ದಲ್ಲವು.

**ಉಪಪಾದನೆಯು**—ಈ ಶ್ಲೋಕದ ಮೂಲಕ, ಪರಮಾತ್ಮನಿಗೂ ನಮಗೂ ಇರುವ ನವವಿಧ ಸಂಬಂಧದಲ್ಲಿ ಶೇಷ ಶೇಷಿ ಸಂಬಂಧವೂ ರಕ್ಷ್ಯ ರಕ್ಷಕ ಸಂಬಂಧವೂ ಸಹ ಹೇಳಲ್ಪಡುವುವು. ಈ ಸಂಬಂಧಗಳು ಪ್ರಣವದಲ್ಲೂ ಮೂಲ ಮಂತ್ರದಲ್ಲೂ ವ್ಯಕ್ತವು. ಅದನ್ನೇ **ವಿಧಿ ನಿರ್ಮಿತ ಮೇತದನ್ವಯಂ** ಎಂಬುದರಿಂದ ತಿಳಿಸಿರುತ್ತಾರೆ. ಇದು ಸ್ವತಸ್ಸಿದ್ಧವಾದುದು ಎಂಬ ಅಭಿಪ್ರಾಯವು. ಹಿಂದೆ ನಾನು ಹೇಳಿದುದು ಸುಳ್ಳಲ್ಲವು. ಪರಮಾರ್ಥ ವೆಂದು ವಿಜ್ಞಾಪಿಸಿಕೊಂಡದ್ದು ಶಾಸ್ತ್ರಾನುಮತಿಯುಳ್ಳ ಸ್ವತಃ ಸಿದ್ಧವಾದ ವಿಷಯವಾದುದರಿಂದ ಹೇಳಿದನೇ ಅಲ್ಲದೆ ಅನ್ಯಥಾ ಅಲ್ಲವು, ಎಂದು ಹೇಳುತ್ತಾರೆ. **ಅಹಂ**—ಅಕಿಂಚನ್ಯವೇ ಧನವಾಗಿವುಳ್ಳನಾನು, **ನಾಥರ್ವಾ** ನಿನ್ನನ್ನೇ ನಾಥನಾಗಿ ಉಳ್ಳವನು. ಆದುದರಿಂದ ನೀನಲ್ಲದೆ ಇನ್ನು ಯಾರೂ ಶರಣ್ಯನಾಗಲಾರರು. ಸರ್ವ ಶಕ್ತನಾಗಿಯೂ ಪರಮ ಕಾರುಣಿಕನಾಗಿಯೂ ಇರುವ ನಿನ್ನನ್ನು ಬಿಟ್ಟರೆ, ಇನ್ನುಯಾರು ಶರಣ್ಯನಾಗುವರು? ಇದರಿಂದ ಮುಂಕುಂದ ನೊಬ್ಬನೇ ಮುಕ್ತಿದಾಯಕನೇ ವಿನಾ ಬ್ರಹ್ಮಾದಿಗಳು ಯಾರೂ ಮುಕ್ತಿಯನ್ನು ಕೊಡಲಾರರು ಎಂಬುದು ಸೂಚಿತವು. ಅವರುಗಳು

ಸರಿಯಲ್ಲವು. ಅಶಾಶ್ವತ ಫಲಗಳನ್ನು ಮಾತ್ರ ಕೊಡಬಲ್ಲರು. ಬರೀ ಶಕ್ತಿಯೂ ಬರೀ ಕಾರುಣ್ಯವೂ ಕಾರ್ಯಕಾರಿಯಾಗಲಾರವು. ಈ ಸರ್ವಶಕ್ತತೆಯೂ ಅಪಾರ ಕಾರುಣ್ಯವೂ ಎರಡೂ ನಿನ್ನಲ್ಲಿರುವುದರಿಂದ ನೀನೇ ಸರ್ವಶರಣ್ಯನು. ಆದುದರಿಂದ ನಿನ್ನನ್ನು ಬಿಟ್ಟರೆ ನನಗೆ ಬೇರೆ ಗತಿ ಇಲ್ಲವು; ನನ್ನನ್ನು ಬಿಟ್ಟರೆ ನಿನ್ನ ದಯೆಗೆ ಸರಿಯಾದ ಪಾತ್ರನೂ ಸಿಕ್ಕುವುದಿಲ್ಲವೆನ್ನುತ್ತಾರೆ-**ಮದ್ಯತೇತ್ವಂ ದಯನೀಯವಾನ್ನಚ**-ನನ್ನನ್ನು ಬಿಟ್ಟರೆ ನೀನು, ನಿನ್ನ ಮಹತ್ತಾದ ಕರುಣೆಗೆ ವಿಷಯವಾದ ಸತ್ಪಾತ್ರನುಳ್ಳವನಾಗುವುದಿಲ್ಲವು. ಅಪರಾಧಗಳು ತುಂಬಾ ಇರುವನು ನಿನಗೆ ಅಪೇಕ್ಷಿತವಾಗಿದ್ದರೆ ನನ್ನನ್ನು ಬಿಟ್ಟರೆ ನಿನಗೆ ಬೇರೆಯಾರು ಸಿಕ್ಕುವುದಿಲ್ಲವು. ಬಹಳ ಕಮ್ಮಿ ಅಪರಾಧಗಳುಳ್ಳವರೇ ಅಪೇಕ್ಷಿತರಾದರೂ ಆಗಲೂ ನಿನಗೆ ಯಾರೂ ಸಿಕ್ಕಲಾರರು. ನನ್ನ ಹಾಗೆಯೇ ಅನೇಕರೂ ಅಪರಾಧಿಗಳೇ. **"ನಕಶ್ಚಿನ್ನಾಪರಾಧ್ಯತಿ"** ಎಂದು ಕರುಣಾಮಯಳ ಮಾತು ಯಥಾರ್ಥವಾದುದು. ಆಗಲೂ ನಿನಗೆ ಸತ್ಪಾತ್ರ ದೊರೆಯಲಾರದು. ಆಗ ನೀನು ಕರುಣಾಕರನೆಂಬ ಬಿರುದಿಗೆ ಸಾರ್ಥಕ್ಯ ಹೇಗೆ ? ಎಂಬ ಭಾವವು ಸೂಚಿತವು.

ಹೀಗೆ ನೀನು ಸ್ವಾಮಿ, ನಾನು ದಾಸನು, ನೀನು ಶೇಷಿ, ನಾನು ಶೇಷ, ನೀನೇ ರಕ್ಷಕನು, ನಾನೇ ರಕ್ಷ್ಯವಸ್ತುವು ಹೀಗೆ ನಿನಗೂ ನನಗೂ ಸಂಬಂಧವು ಇದು **ವಿಧಿನಿರ್ಮಿತ ಮೇತದನ್ವಯಂ**-ನಿನ್ನಿಂದಲೇ ಏರ್ಪಟ್ಟಿದದು. ಏನೋ ಸುಕೃತ ಪರಿಪಾಕದ ಮೂಲಕ ನಿನ್ನನ್ನು ಆಶ್ರಯಿಸಿ ಪ್ರಪನ್ನನಾಗಿದ್ದೇನೆ, ಪ್ರಪನ್ನನಿಗೂ ನಿನಗೂ ಈ ರಕ್ಷ್ಯರಕ್ಷಕ ಸಂಬಂಧವನ್ನು ಏರ್ಪಡಿಸಿದವನೇ ನೀನು. ನಿನ್ನ ಏರ್ಪಾಡನ್ನು ನೀನೇ ಅತಿಕ್ರಮಿಸಿ ನಡೆಯಲು ಹೇಗೆಸಾಧ್ಯವು? ನೀನೇ, ದಯೆಯನ್ನು ತೋರಿಸಿದ ಮಾಹತ್ಮ್ಯೆಯನ್ನು ಹೊಂದಬೇಕು. ನಾನೇ ಅದಕ್ಕೆ ಸತ್ಪಾತ್ರನಾಗಬೇಕು. ನೀನು ಹೇಳಿದುದೇನು ? **"ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ"** ಹೀಗಲ್ಲವೇ ನಿನ್ನ ಏರ್ಪಾಡು ? ಇದನ್ನೇ ಅಲ್ಲವೇ ಮಹರ್ಷಿಗಳೂ ಕೊಂಡಾಡಿರುತ್ತಾರೆ. **"ರಕ್ಷಿತಾ ಜೀವಲೋಕಸ್ಯ ಸ್ವಜನಸ್ಯಚ ರಕ್ಷಿತಾ"** ಎಂದಲ್ಲವೇ ನಿನ್ನ ಮಾಹಾತ್ಮ್ಯೆಯು. ಸ್ವಜನರು ಯಾರು ನಿನಗೆ? ಪ್ರಪನ್ನನಾದ ನಾನಲ್ಲವೋ ? ಆದುದರಿಂದ ನಿನ್ನ ಏರ್ಪಾಡನ್ನು ನೀನೇ ಪರಿಪಾಲಿಸತಕ್ಕದ್ದೆಂದು **ಪಾಲಯ** ಎಂಬ ಪ್ರಯೋಗವು. ಇದರಿಂದ ಶಾಸನಗಳನ್ನು ಏರ್ಪಡಿಸಿದವನೂ ಸಹ, ಆ ಶಾಸನಗಳಿಗೆ ಅನುಗುಣವಾಗಿಯೇ ನಡೆಯಬೇಕೇ ವಿನಾ ಅತಿಕ್ರಮಣವು ಕೂಡದು ಎಂದಾಯಿತು. ಮನುಷ್ಯನಾಗಿ ಹುಟ್ಟಿ ರಾಮಕೃಷ್ಣಾದ್ಯವತಾರಗಳಲ್ಲಿ ಧರ್ಮಪರಿಪಾಲನೆಯನ್ನು ಮಾಡಿ ನಮಗೆ ಮಾರ್ಗವನ್ನು ತೋರಿಸಿ ಕೊಟ್ಟಿರುತ್ತಾನೆ. ಆತನಿಗೆ ಎಲ್ಲಿಯೂ ಈಷದಪಿ ಧರ್ಮವಿರುದ್ಧಾಚರಣೆ ಇಲ್ಲವು. ಹೀಗಿರುವಾಗ ನಮ್ಮ ಅವಿಜ್ಞತೆಯಿಂದ ಶಬರಿಯ ಎಂಜಲನ್ನು ತಿಂದನು. ಶಬರಿಯ ಎಂಜಲನ್ನು ಶ್ರೀರಾಮನು ತಿಂದನು ಎಂಬುವದನ್ನು ಕುರಿತ ಮಾತು ಅಶಾಸ್ತ್ರೀಯವು. ಶಬರಿಯು,

ಪಂಚಭಕ್ಷ್ಯ ಪರಮಾನ್ನವು ಸ್ವಾಮಿಗೆ ತುಂಬಾ ಭೋಗ್ಯವಾಗಿರುವಾಗ ಅದನ್ನು ಮಾಡಿ ಸಮರ್ಪಿಸಲಿಲ್ಲ ಏಕೆ? ಶಬರಳ ಅನ್ನವು ಶಾಸ್ತ್ರವಿರುದ್ಧವೆಂದಲ್ಲವೇ ಆಕೆಯು ಸ್ವಾದುವಾದ ಹಣ್ಣುಗಳನ್ನು ತಂದು ಅರ್ಪಿಸಿದಳು. ವಿವೇಕಿಸಿ ತಿಳಿಯುವವರಿಗೆ ಅಲ್ಲಲ್ಲೇ ಸಮಾಧಾನಗಳು ದೊರೆಯುವುವು) ವಿದುರನು ಮುಟ್ಟಿದ್ದ ಅನ್ನವನ್ನು ಪರಿಗ್ರಹಿಸಿದನು, ಇತ್ಯಾದಿ ಶಾಸ್ತ್ರಾತಿಕ್ರಮಣವನ್ನು ಮಾಡಿದನೆಂದು ಹೇಳುವರು. ತನ್ನ ಶಾಸ್ತ್ರವನ್ನು ತಾನು ಎಂದಿಗೂ ಅತಿಕ್ರಮಿಸುವುದಿಲ್ಲವೆಂದು ದುರ್ಯೋಧನನ ಎದುರಿಗೆ ಶ್ರೀಕೃಷ್ಣಭಗವಾನ್ ಪ್ರತಿಜ್ಞೆಯನ್ನು ಮಾಡಿರುತ್ತಾರೆ. ಇದರಿಂದ ನಾವು ಗ್ರಹಿಸತಕ್ಕ ವಿಷಯವೇನೆಂದರೆ? ಶರಣಾಗತಿಯನ್ನನುಷ್ಠಿಸಿದ ಪ್ರಪನ್ನನನ್ನು **"ನತ್ಯಜೇಯಂ ಕಥಂಚನ"** ಎಂಬ ಶಾಸ್ತ್ರ ಪಂಕ್ತಿಯನ್ನು ಸ್ವಾಮಿಯು ಪಾಲಿಸುವನೇ ವಿನಾ ಎಂದಿಗೂ ಅತಿಕ್ರಮಿಸುವುದಿಲ್ಲವು. ಅದರಿಂದ **ಪಾಲಯ ಮಾಸ್ಮ ಜೀಹಪಃ** ಎಂಬ ಪ್ರಯೋಗವು— ಆತನು ಎಂದಿಗೂ ಕೈಬಿಡತಕ್ಕದ್ದಲ್ಲವೆಂಬ ಪೂರ್ಣ ನಂಬಿಕೆಯಿಂದ **ಪಾಲಯ** ಎಂದು ಹೇಳಿದರೇ ವಿನಾ ಸಂದೇಹದಿಂದ ಹೇಳಲಿಲ್ಲವು. ಹಾಗೆ ಸಂದೇಹದಿಂದ ಹೇಳಿದರು ಎಂದರೆ ಮಹಾವಿಶ್ವಾಸರೂಪವಾದ ಅಂಗವೇ ಶರಣಾಗತಿ ಕಾಲದಲ್ಲಿರಲಿಲ್ಲ ವೆಂದಾಗುವುದರಿಂದ, ಅದು ಸಮಂಜಸವಾದ ಅಭಿಪ್ರಾಯವಾಗುವುದಿಲ್ಲವು. ಆಗಲಿ ಇಂತಹ ಸಂಬಂಧವನ್ನು ಶಾಸ್ತ್ರಮುಖೇನ ಏರ್ಪಡಿಸಿದವನೇನೋ ನೀನೇ ಎಂಬುದು ಸತ್ಯವು **"ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ"** **"ಶರಣಂ ವ್ರಜ । ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"** ಎಂದು ಹೇಳಿದುದೂ ಸತ್ಯವೇ. **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ"** ನಾನು ಸರ್ವಶಕ್ತನು, ಮತ್ತು ರಕ್ಷಕನು, ಆಶ್ರಿತರ ಕೈ ಬಿಡುವುದಿಲ್ಲವೆಂಬ ಭಾವನೆಯಿಂದ ಬಂದು ಆಶ್ರಯಿಸಿದವರನ್ನು ಎಂದಿಗಾದರೂ ತ್ಯಜಿಸುವನಲ್ಲವೆಂದು ಹೇಳಿದುದೂ ಸತ್ಯವೇ; ಆದರೆ ದುಷ್ಕರ್ಮ ಪರಿಪಾಕವು ಹೆಚ್ಚಾಗಿರುವ ಸಂದರ್ಭದಲ್ಲಿ **"ಭಗವನ್ ಪಾಲಯ"** ಎಂಬ ಪ್ರಾರ್ಥನೆಯು ಹೇಗೆ? ಎಂದು ಸ್ವಾಮಿಯು ಮೂದಲಿಸಬಹುದೆಂದು ಭಾವಿಸಿ ಮುಂದಕ್ಕೆ **ಮಾಸ್ಮಜೀಹಪಃ** ಎಂದು ಅರಿಕೆ ಮಾಡಿಕೊಂಡಿರುತ್ತಾರೆ. ನಿನ್ನ ಆಶ್ರಿತ ರಕ್ಷಣ ರೂಪವ್ರತಕ್ಕೆ ಭಂಗ ಮಾತ್ರವೇ ಅಲ್ಲದೆ ನೀನು ಸರ್ವಶಕ್ತನೆಂಬ ಮಾಹಾತ್ಮ್ಯಗೂ ಕುಂದಕವಾಗುತ್ತದೆಯಾದುದರಿಂದ **ಮಾಸ್ಮ ಜೀಹಪಃ** ಎಂದು ಪ್ರಯೋಗಿಸಿರುತ್ತಾರೆ. ಈ ಅಭಿಪ್ರಾಯವನ್ನೇ ಕ್ಷಮಾಷೋಡಶೀ ಕರ್ತೃಗಳೂ ಕೂಡ **"ತತ್ರಾಶಕ್ತ ಇತಿಪ್ರಥೇತಹಿ ತತೋಮಾಂ ರಕ್ಷತುತ್ವತ್ಕ್ಷಮಾ"** ಎಂದು ಪ್ರಾರ್ಥಿಸಿರುತ್ತಾರೆ. ಕ್ಷಮೆಯೂ ರಕ್ಷಣೆಯೂ ಕರುಣೆಯ ಕಾರ್ಯಗಳೇ; **ಮಾಸ್ಮ ಜೀಹಪಃ** ಎಂಬುದರಿಂದ ನೀನು ಕರುಣಾಸಾಗರನು ನೀನು ಸರ್ವಲೋಕ ಶರಣ್ಯನು ನೀನು ಕ್ಷಮಾನಿಧಿಯು, ಹೀಗೆ ಕಲ್ಯಾಣಗುಣಾಕರನೆಂಬ ಭಾವಗಳಿಗೆ ನ್ಯೂನತೆ ಬರುವುದರಿಂದ ನಿನಗೂ ನನಗೂ ಇರುವ ಈ ಶೇಷ ಶೇಷಿ ಸಂಬಂಧವನ್ನು ನೀನು

**ವಪುರಾದಿಷು ಯೋಪಿ ಕೋಪಿವಾ**
**ಗುಣತೋಽಸಾನಿ ಯಥಾ ತಥಾ ವಿಧಃ।**
**ತದಯಂ ತವ ಪಾದಪದ್ಮಯೋ**
**ರಹಮದ್ಯೈವಮಯಾ ಸಮರ್ಪಿತಃ　॥ ೫೨ ॥**

---

ಪಾಲಿಸತಕ್ಕದ್ದು. ಮಹತ್ತಾದ ಅಪರಾಧಿಯಾದುದರಿಂದ ರಕ್ಷಿಸುವುದಿಲ್ಲವೆಂದು ಹೇಳಿ ಈ ರಕ್ಷ್ಯ ರಕ್ಷಕ ಸಂಬಂಧವನ್ನು ನೀನು ಪಾಲಿಸದೇ ಹೋದರೆ, ನನ್ನೊಬ್ಬನಿಗೆ ಉಂಟಾಗುವ ದುರ್ದಶೆಯು ಮಾತು ಹಾಗಿರಲಿ; ನಿನಗೇನೇ ವಿಶೇಷ ಅಪಯಶಸ್ಸು. ಅಂತಹ ಅಪಯಶಸ್ಸು ನಿನ್ನಂತವನಿಗೆ ಯೋಗ್ಯವಲ್ಲವು. ಅದರಿಂದ ತಪ್ಪಿಸಿಕೊಳ್ಳಬೇಕೆಂದರೆ ಈ ಸಂಬಂಧವನ್ನು ಅವಶ್ಯವಾಗಿ ಪಾಲಿಸತಕ್ಕದ್ದೆಂದು **ಮಾಸ್ಮಜೀಹಪಃ** ಎಂದು ಅರಿಕೆ ಮಾಡಿಕ್ಕೊಂಡರು. ಹೋಗಲಿ ನೀನು ನನಗೆ ಶೇಷಿಯಲ್ಲವೋ? ಆದುದರಿಂದಲಾದರೂ ರಕ್ಷಿಸಬೇಕಲ್ಲವೋ? ಶೇಷನನ್ನು ಸರ್ವಥೈವ ಕೈಬಿಡತಕ್ಕದ್ದಲ್ಲವು; ಆದುದರಿಂದ **ಅನ್ವಯಂ ಪಾಲಯ ಮಾಸ್ಮಜೀಹಪಃ** ಎಂದು ಅರಿಕೆ ಮಾಡಿಕ್ಕೊಂಡರು. ತಂದೆಯು ಮಗನನ್ನು ಪಾಲಿಸಬೇಡವೇ ?

**ಅವತಾರಿಕೆಯು**-ಸರ್ವೇಶ್ವರನು ಕೇಳಬಹುದೇನೆಂದರೆ? ನೀನು ಹೇಳಿದುದೆಲ್ಲಾ ಸತ್ಯವು ; ನಾನು ನನ್ನ ವ್ರತವನ್ನು ಕಾಪಾಡಿಕೊಳ್ಳುವುದೂ ನ್ಯಾಯವೇ ; ನಾನು ಶೇಷಿಯಾಗಿ ಶೇಷ ನಾದವನನ್ನು ರಕ್ಷಿಸತಕ್ಕದ್ದೆಂಬುದೂ ನನ್ನ ಕರ್ತವ್ಯವೇ, ಆದರೆ ನೀನು ಆ ಶೇಷ ಶೇಷಿ ಸಂಬಂಧವನ್ನು ಪಾಲಿಸಿದೆಯೋ ? ನೀನು ನನಗೆ ಶೇಷ ಭೂತನೆಂಬ ಭಾವವು ನಿನಗಿತ್ತೋ ? ನೀನು ಸ್ವತಂತ್ರನೆಂದು ಇದುವರೆಗೂ ಭಾವಿಸಿದೆಯಲ್ಲವೇ ? ನೀನೇ ಆ ಸಂಬಂಧವನ್ನು ಪರಿಪಾಲಿಸದೇ ಇರುವಾಗ ಆ ಸಂಬಂಧವನ್ನು ಪರಿಪಾಲಿಸಿ ರಕ್ಷಿಸುವಂತೆ ನನ್ನನ್ನು ಪ್ರಾರ್ಥಿಸುವುದು ಹೇಗೆ ? ನೀನು ಇದುವರೆಗೆ ಭಾವಿಸಿದ್ದುದು ಹೇಗೆ? ಎಂದರೆ, ನೀನು ಸ್ವತಂತ್ರನೆಂದೂ, ನನ್ನ ವಸ್ತುವನ್ನು ನಿನ್ನದಾಗಿ ಭಾವಿಸಿ "**ಯೋಽನ್ಯಥಾ ಸನ್ತ ಮಾತ್ಮಾನಂ ಅನ್ಯಥಾ ಪ್ರತಿ ಪದ್ಯತೇ। ಕಿಂತೇನ ನಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ**" ಎಂಬಲ್ಲಿ ಹೇಳಿರುವಹಾಗೆ ನೀನು ಚೋರಕೃತ್ಯವನ್ನು ಮಾಡಿದವನಲ್ಲವೇ ? ನಿನ್ನಲ್ಲೇ ಹೀಗೆ ದೋಷವಿರುವಾಗ, ನಾನು ಈ ಸಂಬಂಧವನ್ನು ಪರಿಗಣಿಸದೇ ಇರುವುದರಲ್ಲಿ ದೊಷವೇನು ? ಎಂದು ಸ್ವಾಮಿಯು ಮೂದಲಿಸಿದರೆ ಅದಕ್ಕೆ ಈ ಶ್ಲೋಕದ ಮೂಲಕ ಸಮಾಧಾನವನ್ನು ಹೇಳುತ್ತಾರೆ.ಹೇಗೆಂದರೆ? ಶೇಷಿಯಾದ ನೀನು ನನ್ನಲ್ಲಿ ಕಂಡಿರುವ ದೋಷವೇನೋ ? ಸತ್ಯವೇ ಸರಿ. ಅದು ಅನಾದಿಯಾಗಿ ನನ್ನಲ್ಲಿ ಪ್ರಾಪ್ತವಾದುದಾದರೂ, ಆಶ್ರಿತರಲ್ಲಿ ಎಷ್ಟೇ ದೋಷವಿದ್ದರೂ ಅದನ್ನೆ ಪರಿಗಣಿಸದೆ ನೀನೇ ರಾವಣನ ವಿಷಯದಲ್ಲಿ "**ದೋಷೋಯದ್ಯಪಿ ತಸ್ಯಸ್ಯಾತ್ ಸತಾಮೇತದ ಗರ್ಹಿತಂ**" ಎಂಗೂ "**ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ**" "**ವಿಭೀಷಣೋ ವಾಸುಗ್ರೀವ ಯದಿವಾ ರಾವಣಃ ಸ್ವಯಂ**"

ಎಂದೂ ಹೇಳಿರುವ ಹಾಗೆ, ನಾನು ಹಿಂದೆ ಯದ್ಯಪಿ ಜ್ಞಾನ ಶೂನ್ಯನಾಗಿ ಈ ಶೇಷ ಶೇಷಿ ಭಾವವು ತಿಳಿಯದೆ ಇದ್ದರೂ, ಈಗ ನಿನ್ನ ಪಾದಕಮಲಗಳಲ್ಲಿ ಶರಣಾಗತಿ ಯನ್ನ ನುಷ್ಠಿಸಿದರೆ ರಕ್ಷಿಸುತ್ತೇನೆಂದು ಪ್ರಕಟಿಸಿರುವುದರಿಂದ ನಿನ್ನ ಪಾದಕಮಲ ಗಳಲ್ಲಿ ಸಮರ್ಪಿಸಿಕೊಂಡಿರುತ್ತೇನೆಂದು ತಿಳಿಸುತ್ತಾರೆ.

**ಅರ್ಥವು**–**ವಪುರಾದಿಷು**–ಶರೀರವೇ ಮೊದಲಾದವುಗಳಲ್ಲಿ **ಯೋಪಿ ಕೋಪಿವಾ**–ಯಾವುದಾದರೂ ಒಂದಾಗಿ ಕೆಲವು ಅಪಸಿದ್ಧಾಸ್ತಿಗಳು ಹೇಳುವ ಹಾಗೆ **ಅಸಾನಿ**–ಇರುವೆನೋ, **ಗುಣತೋಪಿವಾ**–ಗುಣಗಳಿಂದಲಾಗಲಿ, ಕೆಲವರು ಅಣುವೆಂದೂ, ಕೆಲವರು ವಿಭುವೆಂದೂ, ಕೆಲವರು ಕರ್ತೃತ್ವ ಭೋಕ್ತೃತ್ವಾದಿಗಳಿಲ್ಲ ವೆಂದೂ, ಕೆಲವರು ಉಂಟೆಂದೂ, ಹೀಗೆ **ಯಥಾ ತಥಾವಿಧಃ**—ಯಾವುದೋ ಒಂದು ವಿಧವಾಗಿ, **ಅಸಾನಿ**–ಇರುವೆನೋ ಎಂದರೆ ಸ್ವರೂಪ ಮತ್ತು ಗುಣಗಳ ವಿಷಯದಲ್ಲಿ ಯಥಾರ್ಥವಾದ ಜ್ಞಾನವಿಲ್ಲದಿದ್ದರೂ ಮತ್ತು ನಿರೂಪಿತ ಸ್ವರೂಪ ವಿಶೇಷಣಗಳ ಯಥಾರ್ಥ ಜ್ಞಾನವೂ ಸಹ ಇಲ್ಲದಿದ್ದರೂ ಎಂಬರ್ಥವು, **ಅಹಂ**–**ಅಹಂ,ಅಹಂ** ಎಂದು ತೋರಿ ಬರುತ್ತಿರುವ ನಾನು, **ತವ ಪಾದ ಪದ್ಮಯೋಃ**–ನನ್ನಲ್ಲಿ ನಿನ್ನ ಆತ್ಮಾವನ್ನು ಸಮರ್ಪಿಸು, ರಕ್ಷಿಸಿ ಬಿಡುವೆನು ಎಂದು ನೀನೇ ಹೇಳಿರುವ ಶಾಸ್ತ್ರಾರ್ಥವನ್ನನುರಸಿ ನಿನ್ನ ಪಾದ ಕಮಲಗಳಲ್ಲಿ, **ಅದ್ಯೈವ**–ಈಗಲೇ ಈ ಶಾಸ್ತ್ರ ಜ್ಞಾನಉಂಟಾದ ಸಮಯದಲ್ಲೇ, **ಸಮರ್ಪಿತಃ**–ಸಮರ್ಪಿಸಲ್ಪಟ್ಟಿರು ವೆನು. ನಿನ್ನ ಉಪದೇಶಾನುಗುಣವಾಗಿ ಶರಣಾಗತಿ ರೂಪವಾದ ಉಪಾಯಾನು ಷ್ಠಾನವನ್ನು ಮಾಡಿರುತ್ತೇನೆ ಎಂಬರ್ಥವು.

**ಉಪಪಾದನೆಯು**–ಆತ್ಮ ಸ್ವರೂಪವು "**ಜ್ಞಾನಾನನ್ದಮಯಸ್ತ್ವಾತ್ಮಾ ಶೇಷೋಹಿ ಪರಮಾತ್ಮನಃ**'' ಎಂದರೆ ಜೀವಾತ್ಮನು ಜ್ಞಾನಾನಂದ ಸ್ವರೂಪನು ಪರಮಾತ್ಮನಿಗೆ ಶೇಷಭೂತನು, ಎಂಬ ಜ್ಞಾನವೇ ಇಲ್ಲದೆ "**ತ್ವಂ ಮೇಽಹಂಮೇ ಕುತಸ್ತತ್ತದಪಿಕುತ ಇದಂ ವೇದಮೂಲ ಪ್ರಮಾಣಾದೇತಚ್ಚಾನಾದಿ ಸಿದ್ಧಾ ದನುಭವವಿಭವಾ ತ್ತರ್ಹಿಸಾಕ್ರೋಶ ಏವ । ಕ್ವಾಕ್ರೋಶಃ ಕಸ್ಯಗೀತಾದಿಷು ಮಮವಿದಿತಃ ಕೋತ್ರಸಾಕ್ಷೀ ಸುಧೀ ಸ್ಯಾದ್ಧನ್ತತ್ವತ್ಪಕ್ಷಪಾತೀಸ ಇತಿ ನೃಕಲಹೇ ಮೃಗ್ಯಮಧ್ಯಸ್ಥವತ್ವಮ್** ॥ ಎಂಬಲ್ಲಿ ಹೇಳಿರುವ ಹಾಗೆ ಪರಮಾತ್ಮ ನಿಗೆ ಶೇಷಭೂತನಲ್ಲವು ಸ್ವತಂತ್ರನು ಎಂಬ ಅಜ್ಞಾನವು ಅನಾದಿಯಾಗಿ ಬಂದಿದೆ ಯಲ್ಲವೇ, ಹೇಗೆ ರಕ್ಷಿಸಲು ಸಾಧ್ಯವೆಂದು ಸ್ವಾಮಿಯು, ಶಂಕಿಸಲು ಸಾಧ್ಯವಿಲ್ಲ ವೆಂದು ಹೇಳುತ್ತಾರೆ. ತಾನು ಪರಮಾತ್ಮನಿಗೆ ಆಧೀನನು ಎಂಬ ಜ್ಞಾನವಿಲ್ಲದೆ, ತಾನು ಸ್ವತಂತ್ರನು ಎಂಬುದು. ಎಷ್ಟು ಉಪದೇಶದಿಂದಲೂ ಹೋಗತಕ್ಕದಲ್ಲವು; ಅಲ್ಲದೆ ಆತನಲ್ಲಿ ಅಭ್ರಮವು ಸ್ಥಿರವಾಗಿ ನೆಲಸಿರುವುದರಿಂದ ಸರ್ವೇಶ್ವರನೇ ಪ್ರಮಾಣಮಾಡಿ ನೀನು ನನ್ನ ದಾಸನೆಂದು ಸ್ಥಾಪಿಸತಕ್ಕದ್ದಾಗಿರುತ್ತದೆಂದು ಈ ಶ್ಲೋಕದ ತಾತ್ಪರ್ಯವು. ಇದರ ಪ್ರತಿಪದಾರ್ಥ ಮೊದಲಾದವುಗಳಿಗೆ ದಾಸನು

ಪ್ರಕಟಿಸಿರುವ ರಹಸ್ಯತ್ರಯ ಸಾರ ಅರ್ಥ ಪಂಚಕಾಧಿಕಾರದ ೪೨೧-೨ನೆಯ ಪುಟಗಳನ್ನು ಪರಾಂಬರಿಸಿ. ಆದರೂ ಸರ್ವೇಶ್ವರನೇ ತಮಗೆ ಸ್ವಾಮಿ ಎಂದು ಹಿಂದೆ ೧೦ನೆಯ ಶ್ಲೋಕದಲ್ಲೇ **"ಸ್ವಾಮಿನ್ನಿಚಿತ್ರ ಮಿಹಮಾಶ್ರಿತ ವತ್ಸಲತ್ವಂ"** ವೆಂದು ಹೇಳಿಕೊಂಡು ಶೇಷತ್ವವನ್ನು ಪ್ರದರ್ಶಿಸಿ ಆಶ್ರಯಿಸಿರುತ್ತಾರಾದ್ದರಿಂದ ಸ್ವಾಮಿಯು ಅಂತಹ ಆಕ್ಷೇಪವನ್ನು ತರಲು ಕಾರಣವಿಲ್ಲವೆಂದು ಹೇಳಿ, ಉಪ ನಿಷತ್ತುಗಳಲ್ಲಿ ಓಂ ಎಂಬ ಪ್ರಣವಾರ್ಥವು ಉಪಪಾದಿತವಾಗಿ ಚೇತನನು ಪರಮ ಪುರುಷನಿಗೆ ಶೇಷಭೂತನು ಎಂದು ಇಷ್ಟುಮಾತ್ರ ಜ್ಞಾನವನ್ನು ಒಪ್ಪಿಕೊಂಡು ಅದಲ್ಲದೆ ಚೇತನನ, ಸರಿಯಾದ ಸ್ವರೂಪ ಸ್ವಭಾವ ಜ್ಞಾನವಿಲ್ಲವಾದರೂ, ನೀನು ಶರಣಾಗತಿಯನ್ನನುಷ್ಠಿಸು ರಕ್ಷಿಸುವೆನೆಂದು ಹೇಳಿರುವುದರಿಂದ ಒಡನೇ ಈ ಆತ್ಮಾವನ್ನು ಸಮರ್ಪಿಸಿರುತ್ತೇನೆ, ಈ ಆತ್ಮನ ಸ್ವರೂಪವೆಂತಾದ್ದು, ಆತನ ಗುಣವೆಂತಾದ್ದು ಎಂಬುದನ್ನು ಪ್ರಾಜ್ಞರ ಉಪದೇಶ ಮೂಲಕ ಹೊಂದಿರುವೆನು. ಅದು ಯಥಾರ್ಥವಾದುದೇ ಎಂಬುದು ನನ್ನ ಅಭಿಪ್ರಾಯವು. ಆದರೆ ಅದು ಯಥಾರ್ಥವೋ ಅಲ್ಲವೋ ಹೇಗಾದರೂ ಇರಲಿ, ನಿನಗೆ ನಾನು ಶೇಷಭೂತನೆಂಬ ಜ್ಞಾನವು ಈಗ ಇರುವುದರಿಂದ ನಾನು ಈ ಆತ್ಮಾವನ್ನು ನಿನ್ನಲ್ಲಿ ಸಮರ್ಪಿಸಿರುತ್ತೇನೆ. ಪರಿಗ್ರಹಿಸಿ ರಕ್ಷಿಸಬೇಕೆಂದು ಬೇಡುತ್ತಾರೆ.

**ವಪುರಾದಿಷು ಯೋಽಪಿಕೋಽಪಿವಾ**—ಆತ್ಮಸ್ವರೂಪ ವೆಂತಾದ್ದೆಂಬ ವಿಚಾರದಲ್ಲಿ ಅನೇಕ ಸಿದ್ಧಾಂತಿಗಳು ಬೇರೆಬೇರೆ ಅಭಿಪ್ರಾಯಗಳನ್ನು ತೋರ್ಪಡಿಸಿರುತ್ತಾರೆ. ಕೆಲವರು, ಮುಖ್ಯವಾಗಿ ಚಾರ್ವಾಕರು, ದೇಹವೇ ಆತ್ಮಾವೆಂದು ಹೇಳುವರು. ಇನ್ನು ಕೆಲವರು ಇಂದ್ರಿಯಗಳೇ ಆತ್ಮಾವೆಂದೂ, ಇನ್ನು ಕೆಲವರು ಧೀ ಎಂದರೆ ಧರ್ಮಭೂತಜ್ಞಾನವೇ ಆತ್ಮವೆಂದೂ (ಬೌದ್ಧರು) ಹೇಳುವರು. ನಮ್ಮ ಸಿದ್ಧಾಂತವಾದರೋ ಶ್ರೀಯಾಮುನ ಮುನಿಗಳು ತಾವೇ ಆತ್ಮಸಿದ್ಧಿ ಎಂಬ ಗ್ರಂಥದಲ್ಲಿ "**ದೇಹೇನ್ದ್ರಿಯ ಮನಃ ಪ್ರಾಣಧೀಭ್ಯೋಽನ್ಯೋಽನನ್ಯಸಾಧನಃ। ನಿತ್ಯೋ ವ್ಯಾಪೀ ಪ್ರತಿಕ್ಷೇತ್ರಮಾತ್ಮಾ ಭಿನ್ನಸ್ಸ್ವತಃ ಸುಖೀ**" ಎಂದು ಹೇಳಿರುವಂತೆ ಜೀವಾತ್ಮನು (೧) ದೇಹ (೨) ಇಂದ್ರಿಯ (೩) ಮನಸ್ಸು (೪) ಪ್ರಾಣ (೫) ಬುದ್ಧಿ (ಧರ್ಮಭೂತಜ್ಞಾನ) ಇವೆಲ್ಲಕ್ಕಿಂತಲೂ ಭಿನ್ನನು, ಸ್ವಯಂಪ್ರಕಾಶನು. ನಿತ್ಯನು, ಅಣುವಾಗಿ ಸೂಕ್ಷ್ಮವಾಗಿರುವುದರಿಂದ ಎಲ್ಲಾ ಅಚಿದ್ದ್ರವ್ಯವನ್ನೂ ವ್ಯಾಪಿಸುವ ಶಕ್ತಿಯುಳ್ಳವನು, ಪ್ರತಿಯೊಂದು ದೇಹದಲ್ಲಿರುವ ಆತ್ಮನೂ ಬೇರೆ ಬೇರೆ, ಜ್ಞಾನಾನನ್ದ ಸ್ವರೂಪನಾದುದರಿಂದ ಸ್ವತಃ ಸುಖಿಯು, ಎಂಬುದಾಗಿರುತ್ತದೆ. ಹೀಗೆ ಯಥಾರ್ಥವಾದ ಸ್ವರೂಪ, ಸ್ವಭಾವಗಳು ತಿಳಿಯದಿದ್ದರೂ ಮಹನೀಯರು ತಮ್ಮ ಅಭಿಪ್ರಾಯವೇ ಯಥಾರ್ಥವೆಂದು ಹೇಳಲು ಇಷ್ಟಪಡದೆ ಇತರ ಅಪಸಿದ್ಧಾಂತಿಗಳು ಇದಕ್ಕೆ ವ್ಯತಿರಿಕ್ತವಾಗಿ ದೇಹವೇ ಆತ್ಮಾವೆಂದು ಕೆಲವರು, ಕೆಲವರು ಇಂದ್ರಿಯಗಳೇ ಆತ್ಮಾವೆಂದೂ ಹೇಳುವರೆಂದು ತಿಳಿಸಿದರು. ಹೀಗೆಲ್ಲಾ

ತಿಳುವಳಿಕೆ ಇದ್ದರೆ, ಸ್ವಾಮಿಯನ್ನು ಆಶ್ರಯಿಸುವುದಕ್ಕೆ ಇವೆಲ್ಲಾ ಜ್ಞಾನವೂ ಆವಶ್ಯಕವಿಲ್ಲವೆಂಬ ಶಾಸ್ತ್ರಾರ್ಥವನ್ನೂ, ಅವಶ್ಯಕವಾಗಿ ಬೇಕಾದುದು ಪ್ರಣವದಲ್ಲಿ ಉಪದಿಷ್ಟವಾದ ಶೇಷತ್ವಜ್ಞಾನಮಾತ್ರವೇ ಎಂಬುದನ್ನೂ, ಇದನ್ನು ತಾವೇ ಹಿಂದೆ ಪ್ರದರ್ಶಿಸಿರುವ ಭಾವವನ್ನೂ ಈ ಶ್ಲೋಕದ ಮೂಲಕ ತಿಳಿಸುತ್ತಾರೆ.

೧. ಆತ್ಮಾ ದೇಹಕ್ಕಿಂತಲೂ ಬಿನ್ನನು, ಹೇಗೆಂದರೆ? ದೇಹದಲ್ಲಿ ಅನೇಕ ಅವಯವಗಳಿರುವುದರಿಂದ ಅನೇಕ ಆತ್ಮರುಗಳೆಂದು ಹೇಳಬೇಕಾಗುತ್ತದೆ. ಒಂದು ಅವಯುವವು ಛೇದಿಸಲ್ಪಟ್ಟರೂ ಚೈತನ್ಯವಿರುವುದರಿಂದ ಎಲ್ಲಾ ಅವಯುವಗಳಿಂದಲೂ ಒಂದೇ ಚೈತನ್ಯವಿರುವಂತಾದ್ದು ಎಂದರೂ, ಒಂದು ಅವಯುವದ ವಿಚ್ಛೇದದಲ್ಲಿ ಚೈತನ್ಯಕ್ಕೆ ವಿಚ್ಛೇದ ಒಪ್ಪಬೇಕಾಗಿ ಬರುವುದರಿಂದ ಸರಿಯಲ್ಲವು. ಒಬ್ಬನು ನೀರಿನಲ್ಲಿ ಬಿದ್ದು ಸತ್ತರೆ ದೇಹವೆಲ್ಲಾ ಸರಿಯಾಗಿಯೇ ಇದ್ದರೂ ಚೈತನ್ಯವು ಇರುವುದಿಲ್ಲವು. ಆದುದರಿಂದ ಚೈತನ್ಯವಿರುವ ಒಂದು ವಸ್ತುವು ದೇಹವನ್ನು ಬಿಟ್ಟುಹೋಯಿತೆಂದು ಭಾವಿಸಬೇಕಾಗುತ್ತದೆ. ದೇಹದಲ್ಲಿ ಒಂದೇವಿಧವಾದ ಚೈತನ್ಯವುಂಟಾದರೆ ಗರ್ಭಿಣಿ ಸ್ತ್ರೀಯಲ್ಲಿ ಇನ್ನೊಂದು ಚೈತನ್ಯವು ಹೇಗೆ ಉಂಟಾಯಿತೆಂದರೆ ಚಾರ್ವಾಕನು ಸರಿಯಾದ ಸಮಾಧಾನವನ್ನು ಹೇಳಲಾರನು. ಶಿಶುವು ಹುಟ್ಟಿದ ಒಡನೆಯೇ ಸ್ತನ್ಯಪಾನ ಮಾಡುತ್ತದಲ್ಲಾ ಅದು ಹೇಗೆ? ಎಂದರೂ ಸಮಾಧಾನವನ್ನು ಹೇಳಲಾರನು. ಸಂಸ್ಕಾರವನ್ನು ಆಗ ಒಪ್ಪಬೇಕಾಗುತ್ತದೆ. ಹಿಂದಿನಜನ್ಮದ ಆತ್ಮನ ಕರ್ಮಗಳ ಬಲದಿಂದ ಉಂಟಾಗುವುದು ಸಂಸ್ಕಾರವಾದುದರಿಂದ ದೇಹವ್ಯತಿರಿಕ್ತವಾಗಿ ಒಬ್ಬ ಆತ್ಮನುಂಟು ಎಂದು ಹೇಳಬೇಕಾಗುತ್ತದೆ. ಇದೂ ಅಲ್ಲದೆ ನನ್ನ ದೇಹವೆಂಬ ಪ್ರತೀತಿಯು ಇರುತ್ತೆ. ನಾನು ದೇಹವೆಂಬ ವ್ಯವಹಾರವಿಲ್ಲವು. ಆದುದರಿಂದಲೂ ದೇಹಕ್ಕಿಂತ ಭಿನ್ನನು. ದೇಹಕ್ಕೆ ಜ್ಞಾನವಿಲ್ಲವು. ಆತ್ಮಾವಿಗೆ ಜ್ಞಾನವುಂಟು. ಆತ್ಮನು ನಿತ್ಯವಾಗಿರುವುದರಿಂದ ಅಸ್ತಿ ಶಬ್ದವಾಚ್ಯನು. ದೇಹವು ಸತತ ಪರಿಣಾಮಿಯಾದುದರಿಂದ ನಾಸ್ತಿ ಶಬ್ದವಾಚ್ಯವು, ಆದರೆ, ಕೌಮಾರ್ಯ ಬಾಲ್ಯ, ಯುವ್ವನಜರಾದ್ಯವಸ್ಥೆಗಳನ್ನು ಹೇಳುತ್ತಾರಲ್ಲಾ ಎಂದರೆ ಆತ್ಮನಿರುವ ದೇಹಕ್ಕೆ ಪರಿಣಾಮದಿಂದುಂಟಾಗುವ ಅವಸ್ಥೆಗಳು ಹೇಳಲ್ಪಟ್ಟವೆಂದು ಭಾವಿಸತಕ್ಕದ್ದು.

೨. ಮಲಗಿರುವಾಗ ದೇಹವಿದ್ದರೂ ಚೈತನ್ಯವಿಲ್ಲವಾದುದರಿಂದ ದೇಹವು ಆತ್ಮವಲ್ಲದಿದ್ದರೂ, ಇಂದ್ರಿಯಗಳ ವ್ಯಾಪಾರವು, ಎದ್ದಾಗ ಇರುವುದರಿಂದ ಇಂದ್ರಿಯಗಳೇ ಆತ್ಮಾವೆಂದು ಕೆಲವರು ಹೇಳುವರು. ಕಣ್ಣು ನೋಡುತ್ತದೆ ಹೀಗಿರುವಾಗ ಕಣ್ಣಿಗಿಂತ ನೋಡುವನೊಬ್ಬನು ಬೇರೆ ಇದ್ದಾನೆಂದು ಏಕೆ ಒಪ್ಪಬೇಕು? ಎನ್ನುವರು. ಇದು ಸರಿಯಲ್ಲವು. ಏಕೆಂದರೆ ಕಣ್ಣಿನಿಂದ ನೋಡಬಹುದೇ ವಿನಾ ಕೇಳುವುದಕ್ಕೆ ಆಗುವುದಿಲ್ಲವಾದುದರಿಂದ ನೋಡುವುದಕ್ಕೆ ಒಬ್ಬ

ಆತ್ಮಾ ಕೇಳುವುದಕ್ಕೆ ಒಬ್ಬ ಆತ್ಮಾ ಹೀಗೆ ಅನೇಕಾತ್ಮರನ್ನು ಒಪ್ಪಬೇಕಾಗಿ ಬಂದು ಪರಸ್ಪರ ವಿಘಾತವು ದೇಹದಲ್ಲುಂಟಾಗಲು ಕಾರಣವಾಗಿ ಯಾವ ಧರ್ಮಗಳೂ ಸರಿಯಾಗಿ ನಡೆಯಲಾರದೇ ಹೋಗಬೇಕು. ಅಂತಹ ವೈಷಮ್ಯವಿಲ್ಲದುದರಿಂದ ಈ ಎಲ್ಲಾ ಇಂದ್ರಿಯಗಳಿಗಿಂತ ವ್ಯತಿರಿಕ್ತನಾಗಿ ಒಬ್ಬನೇ ಆತ್ಮಾವೆಂದು ಭಾವಿಸಬೇಕಾಗುತ್ತದೆ. ಆ ಒಬ್ಬನೇ ದರ್ಶನ, ಶ್ರವಣ, ಇತ್ಯಾದಿ ಎಲ್ಲಾ ವ್ಯಾಪಾರಗಳನ್ನೂ ನಡೆಸಬಲ್ಲನು; ಅವುಗಳಿಂದುಂಟಾಗುವ ಜ್ಞಾನವನ್ನು ಹೊಂದುವನು. ಮತ್ತು ಒಬ್ಬನು ಕಣ್ಣಿನಿಂದ ತಿರುಮಲೆ ಶ್ರೀನಿವಾಸನನ್ನು ನೋಡಿದ್ದಾನೆ. ಆತನಿಗೆ ಕಾರಣಾಂತರದಿಂದ ದೃಷ್ಟಿ ಪಾಟವವು ತೊಲಗಿದನಂತರ, ಆತನ ದಿವ್ಯಮಂಗಳ ವಿಗ್ರಹವು ಆತನ ಸ್ಮೃತಿಪಥಕ್ಕೆ ಬರಕೂಡದಾದೀತು. ಆದರೆ ಆ ಸ್ಮೃತಿಯು ಬರುವುದರಿಂದಲೂ, ಇಂದ್ರಿಯವೇ ಆತ್ಮಾವಲ್ಲದೇ, ಸ್ಮೃತಿಗೆ ತಂದುಕೊಳ್ಳುವ ಕರ್ತಾ ಬೇರೆ ಎಂಬುದು ಏರ್ಪಡುತ್ತದೆ.

೩. ಇನ್ನೂ ಕೆಲವರು ಮನಸ್ಸೇ ಆತ್ಮಾವೆನ್ನುವರು ಏಕೆಂದರೆ ನೋಡುವುದು, ಕೇಳುವುದು, ಸ್ಪರ್ಶಿಸುವುದು, ಇವೆಲ್ಲಾ ಮನಸ್ಸಿನ ಮೂಲಕ ನಡೆಯುತ್ತವೆಯಾದುದರಿಂದ ಮನಸ್ಸೇ ಆತ್ಮಾವೆಂದು ಹೇಳಲು ಅಭ್ಯಂತರವೇನು? ಎನ್ನುವರು. ಇದೂ ಸರಿಯಲ್ಲವು. ಮನಸ್ಸಿನಿಂದಲೇ ನೋಡುವನು, ಕೇಳುವನು ಎಂಬುದೇನೋ ಸತ್ಯವು. ಹೀಗೆ ತೃತೀಯೆಯನ್ನು ಹೇಳುವುದರಿಂದ ಕರಣವಾಗಿ ಇದು ಸಾಧನಮಾತ್ರವೇ ವಿನಾ ಕರ್ತೃವಲ್ಲವು. ಮನಸ್ಸು ಕಣ್ಣಿಗೆ ಕಾಣದೆ ಶಾಸ್ತ್ರ ಮೂಲಕವಾಗಿಯೇ ಗ್ರಹಿಸಬೇಕಾಗಿರುವುದರಿಂದಲೂ ಶಾಸ್ತ್ರದಲ್ಲಿ ಮನಸ್ಸೇ ಆತ್ಮಾವೆಂದು ಹೇಳದೆ ಅಚಿತ್ತಿನ ವಿಭಾಗಗಳಲ್ಲಿ ಮನಸ್ಸು ಹೇಳಲ್ಪಟ್ಟಿರುವುದರಿಂದಲೂ, ಮನಸ್ಸಿಗೆ ಚೈತನ್ಯವಿಲ್ಲವು.

೪. ಇನ್ನೂ ಕೆಲವರು ಪ್ರಾಣವೇ ಆತ್ಮಾವೆನ್ನಬಹುದು. ಏಕೆಂದರೆ ಇಂದ್ರಿಯಗಳ ಮತ್ತು ಮನಸ್ಸಿನ ವ್ಯಾಪಾರಗಳೆಲ್ಲಾ ಪ್ರಾಣಾಧೀನವಾಗಿರುವುವು. ಪ್ರಾಣವಿರುವವರೆಗೆ ಇವೆಲ್ಲವೂ ನಡೆಯುವುವು. ಪ್ರಾಣವಿಲ್ಲದೆ ಇದ್ದರೆ ಇವು ನಿಂತುಹೋಗುವುವು. ಆದುದರಿಂದ ಪ್ರಾಣವೇ ಆತ್ಮಾ ಎಂದು ಏಕೆ ಹೇಳಕೂಡದು ಎನ್ನುವರು, ಇದೂ ಸರಿಯಲ್ಲವು, ಏಕೆಂದರೆ ದೇಹವೇ ಆತ್ಮಾ ಎಂದು ಹೇಳುವುದರಲ್ಲಿ ಉಂಟಾದ ಅಸಾಮಂಜಸ್ಯವು ಈ ಸಂದರ್ಭದಲ್ಲೂ ಉಂಟಾಗುತ್ತವೆ. ಆ ಸಂದರ್ಭದಲ್ಲಿ ಮಮದೇಹ ಎಂದು ಹೇಳಿದಹಾಗೆ ಮಮಪ್ರಾಣಾ ಎಂಬ ವ್ಯವಹಾರವೂ ಉಂಟು. ಸುಖವಾಗಿ ನಿದ್ರೆಮಾಡಿ ಎದ್ದವನು, ಇಷ್ಟು ಹೊತ್ತು ನಾನು ಸುಖವಾಗಿ ನಿದ್ರಿಸಿದ್ದೆನೆಂದು ಹೇಳುತ್ತಾನೆ. ಪ್ರಾಣಗಳಿಗಾದರೋ ಆಗಲೂ ಕೆಲಸಮಾಡುತ್ತಿದ್ದುದರಿಂದ ಅವುಗಳಿಗೆ ವಿಶ್ರಾಂತಿ ಇಲ್ಲವು. ವಿಶ್ರಾಂತಿಯನ್ನೂ ಸುಖವನ್ನೂ ಹೊಂದುವವನು, ಅಹಂ-ನಾನು ಎಂದು ಪ್ರಾಣಕ್ಕಿಂತ

ಬೇರೆಯಾಗಿ ಹೇಳಿಕೊಳ್ಳುವನು. ಮತ್ತು ಈ ವಿಷಯವು ಶ್ರುತಿಯಲ್ಲೂ ಉಪಪಾದಿತವು. ಒಬ್ಬ ಮನುಷ್ಯನು ಮಲಗಿದ್ದರೆ, ಪ್ರಾಣದ ಹೆಸರಿನಿಂದ ಆತನನ್ನು ಎಬ್ಬಿಸುವುದಕ್ಕಾಗಿ ಕೂಗಿದರೆ ಏಳುವುದಿಲ್ಲವು. ಆತನಿಗೆ ಇಟ್ಟಿರುವ ಹೆಸರಿನಿಂದಲಾಗಲಿ, ಮುಟ್ಟಿ ಎಬ್ಬಿಸಿದರಾಗಲಿ, ಏಳುವನು. ಆದುದರಿಂದ ಪ್ರಾಣಕ್ಕೆ ಚೈತನ್ಯವಿಲ್ಲವಾದುದರಿಂದ ಚೈತನ್ಯವಿರುವ ವಸ್ತುವು ಬೇರೆಯಾಗಿ ಅಹಂ ನಾನು ಎಂದು ಹೇಳಲ್ಪಟ್ಟಿರುವ ವಸ್ತುವೇ ಆತ್ಮಾ ಎಂದು ಹೇಳಿಸಿಕೊಳ್ಳುತ್ತದೆ.

೫. ಆಗಲಿ ಚೈತನ್ಯಕ್ಕೆ ಜ್ಞಾನವೇ ಎಂದರೆ ಬುದ್ಧಿಯೇ ಪ್ರಧಾನವಾದುದರಿಂದ ಅದೇ ಆತ್ಮಾ ಎಂದು ಹೇಳುವೆವು ಎಂದು ಸೌಗತಾದಿಗಳು ಹೇಳಬಹುದು. ಇದೂ ಸರಿಯಲ್ಲವು. ಏಕೆಂದರೆ ಬುದ್ಧಿಯು ಧರ್ಮವೇ ವಿನಾ ಧರ್ಮಿಯಲ್ಲವು, ಎರಡನೆಯದು ಜ್ಞಾನವು ಸತ್ಯವಲ್ಲವು. ಅದೂ ಅಲ್ಲದೆ ಅದು ಸುಳ್ಳಾಗಬಹುದು. ಇದು ಸರ್ಪವಲ್ಲವು, ಹಗ್ಗವು; ಇದು ಬೆಳ್ಳಿಯಲ್ಲವು ಮುತ್ತಿನಚಿಪ್ಪು, ಎಂಬ ಪ್ರತೀತಿಯು ಅನೇಕರಿಗೆ ಆಮೇಲೆ ಉಂಟಾಗುವುದರಿಂದ ಜ್ಞಾನವು ಮಿಥ್ಯಾಕೂಡ ಆಗುತ್ತದೆಂದು ಒಪ್ಪಬೇಕಾಗುತ್ತದೆ. ತೆಂಗಿನ ಸಸಿಯನ್ನು ನೆಡುವವನು ತಾನು ೨೦ ವರ್ಷಗಳಮೇಲೆ ಅದರ ಫಲವನ್ನು ಅನುಭವಿಸುವೆನೆಂಬ ನಂಬಿಕೆಯಿಂದಲೇ ಪ್ರವೃತ್ತಿಸುವನು. ಆದುದರಿಂದ ಆತನಿಗೆ ಆತ್ಮಸ್ಥಿರತ್ವದಲ್ಲಿ ನಂಬಿಕೆಯುಂಟೆಂದು ಭಾವಿಸಬೇಕಾಗುತ್ತದೆ. ಒಂದುವೇಳೆ ತನ್ನ ಶರೀರವು ಅಸ್ಥಿರವಾದರೂ ತನ್ನ ಮಕ್ಕಳಾದರೂ ಅನುಭವಿಸುವರೆಂದು ನಂಬಿಕೆಯುಂಟಾಗಿಯೇ ನಡೆಸಿರುವನು. ಮತ್ತು **ಘಟಮಹಂಜಾನಾಮಿ** ಎಂಬಲ್ಲಿ ಜ್ಞಾನವು ಒಂದು ವಿಷಯವನ್ನೂ ಒಂದು ಆಶ್ರಯವನ್ನೂ ಅಪೇಕ್ಷಿಸುವಹಾಗೆ ತೋರುತ್ತದೆ. ವಿಷಯವು ಜ್ಞೇಯವಸ್ತುವು. **ಅಹಂವಸ್ತುವೂ** ಜ್ಞಾತಾವಾಗಿ ಜ್ಞಾನವನ್ನು ಹೊಂದುವನು. ಹೀಗೆ ಆತ್ಮಾ ಜ್ಞಾತಾ ಎಂದು ಶ್ರೀ ವ್ಯಾಸರು **“ಜ್ಞೋಽತಏವ”** ಎಂಬ ಸೂತ್ರದಲ್ಲಿ ವ್ಯಕ್ತಪಡಿಸಿರುತ್ತಾರೆ. ಇದರಿಂದ ಅದ್ವೈತಿಗಳ ಸಿದ್ಧಾಂತವಾದ “ಆತ್ಮನು ಜ್ಞಾನಮಾತ್ರ” ವೆಂಬ ವಾದವು ನಿರಸ್ತವು ಈ ವಾದಕ್ಕೆ ಅನೇಕ ಅನುಪಪತ್ತಿಗಳನ್ನು ಪ್ರಥಮಸೂತ್ರ ಭಾಷ್ಯದಲ್ಲಿ ಪ್ರದರ್ಶಿಸಿರುತ್ತಾರೆ. ಹೀಗೆ ಜ್ಞಾತೃತ್ವವಿರುವುದರಿಂದಲೇ **“ಏಷಹಿದ್ರಷ್ಟಾ, ಸ್ಪ್ರಷ್ಟಾ, ಶ್ರೋತಾಘ್ರಾತಾ ರಸಯಿತಾ ಮನ್ತಾಬೋದ್ಧಾ ಕರ್ತಾ ವಿಜ್ಞಾನಾತ್ಮಾ”** ಎಂದೂ **“ಅಥಯೋವೇದೇದಂ ಜಿಘ್ರಾಣೀತಿ ಸ ಆತ್ಮಾ”** ಎಂದೂ ಶ್ರುತಿಯು ಹೇಳುತ್ತದೆ. ಹಾಗೆಯೇ ಪೂರ್ವ ಕರ್ಮಾನುಗುಣವಾಗಿ ಪ್ರಾಪ್ತವಾಗಿ ಪರಮಾತ್ಮಾಧೀನವಾದ ಕರ್ತೃತ್ವಭೋಕ್ತೃತ್ವಗಳುಳ್ಳವನೇ ಆತ್ಮನು. ಶ್ರುತಿಯು ಈತನನ್ನು ಅಣುವೆಂದೂ, ಅದೇಕಾರಣದಿಂದ ನಿರವಯವನೆಂದೂ ಛೇದನ, ದಹನ, ಕ್ಲೇದನ ಶೋಷಣಾದಿಗಳಿಗೆ ಸಾಧ್ಯವಲ್ಲವೆಂದೂ ಶ್ರುತಿಗಳಲ್ಲೂ, ಗೀತೆಯಲ್ಲೂ, ಇತಿಹಾಸಗಳಲ್ಲೂ ಹೇಳಲ್ಪಟ್ಟವು. **“ಏಷೋಽಣುರಾತ್ಮಾ” “ಆರಾಗ್ರ ಮಾತ್ರೋಹ್ಯವರೋಽಪಿದೃಷ್ಟಃ” “ವಾಲಾಗ್ರಶತಭಾಗಸ್ಯ ಶತಧಾ**

**ಕಲ್ಪಿತಸ್ಯಚ। ಭಾಗೋಜೀವಸ್ಸವಿಜ್ಞೇಯಃ ಸಚಾನನ್ತ್ಯಾಯ ಕಲ್ಪತೇ''** ಆತ್ಮಾ ಅಣುಸ್ವರೂಪನೆಂದೂ, ಊಬುವುುಳ್ಳಿನ ತುದಿಯಷ್ಟಿದ್ದಾನೆಂದೂ, ಕೂದಲು ತುದಿಯನ್ನು ಸಾಧ್ಯವಿದ್ದರೆ ನೂರಾಗಿ ಸೀಳಿ ಆ ಒಂದು ಭಾಗವನ್ನು ನೂರಾಗಿ ವಿಭಾಗಿಸಿದರೆ ಎಷ್ಟು ಸೂಕ್ಷ್ಮವೋ, ಅಷ್ಟು ಸೂಕ್ಷ್ಮನು ಜೀವನು ಎಂದು ಪ್ರಮಾಣಗಳು ತಿಳಿಸುತ್ತವೆ. ಇಂತಹ ಆತ್ಮನು ಹೇಯಪ್ರತ್ಯನೀಕನು, ಈತನಿಗೆ ಹೇಯತ್ವವು ದೇಹಸಂಬಂಧದಿಂದ, ಅದು ತೊಲಗಿದರೆ ಸರ್ವಜ್ಞತ್ವವೂ ಕಲ್ಯಾಣ ಗುಣಾಷ್ಟಕಾ ವಿರ್ಭಾವವೂ ಉಂಟಾಗುತ್ತದೆ. ಇವನಿಗೆ ಜ್ಞಾನವು ಧರ್ಮವು, ಇದನ್ನು ಧರ್ಮಭೂತಜ್ಞಾನವೆಂದು ಹೇಳುವರು. ಇದು ವಿಭವು ಈ ಅಹಂ ಎಂಬ-ಧರ್ಮಿಗೆ ತೋರುವ ಘಟವಸ್ತು ಚೈತನ್ಯವಿಲ್ಲದೆ ಇತರರಿಗೆ ತೋರುತ್ತದೇ ವಿನಾ ತನಗೆ ತಾನೇ ತೋರುವುದಿಲ್ಲವು. ಇದಕ್ಕೆ ಶಾಸ್ತ್ರದಲ್ಲಿ 'ಪರಾಕ್ತ್ವ' ವೆಂದು ಹೇಳುವರು.

೬. ಅಹಂ ಎಂಬುದು ತನಗೆ ತಾನೇ ತೋರುತ್ತದೆ. ಆದುದರಿಂದ ಆತ್ಮಾ ಸ್ವಯಂಪ್ರಕಾಶವುಳ್ಳದ್ದು, ಈ ಬುದ್ಧಿಯು ಆತ್ಮಾವಿಗೆ ವಿಶೇಷಣವಾಗಿ ವಿಷಯ ಗಳನ್ನು ತೋರಿಸಬಲ್ಲದೇ ವಿನಾ ತನ್ನನ್ನು ತಾನೇ ಪ್ರಕಾಶಿಸಲಾರದು. ಆದುದ ರಿಂದಲೂ ಬುದ್ಧಿಯು ಆತ್ಮಾವಲ್ಲವು. ಮೋಕ್ಷೇಚ್ಛೆಯು ಜ್ಞಾನಕ್ಕೆ ಉಂಟಾಗ ಲಾರದು. ಹಾಗೆಯೇ ದೇಹೇಂದ್ರಿಯ ಮನಃಪ್ರಾಣಗಳಿಗೂ ಉಂಟಾಗುವುದಿಲ್ಲವು. ಅಹಮರ್ಥಕ್ಕೆ ಮಾತ್ರವೇ ಎಂದಾಗತಕ್ಕದ್ದು. ಕೆಲವರಿಗೆ ದುಃಖ ಪ್ರಾಪ್ತಿಯೂ ಕೆಲವರಿಗೆ ಸುಖಪ್ರಾಪ್ತಿಯೂ ಉಂಟಾಗುವುದಕ್ಕೆ ಕಾರಣವೇನು ? ಎಂಬುದಕ್ಕೆ ಸಮಾಧಾನ ಹೇಳಬೇಕಾದರೆ, ಪೂರ್ವಜನ್ಮದಲ್ಲಿ ಮಾಡಿದ ಸುಕೃತದುಷ್ಕೃತಾದಿ ಗಳಿಗನುಸಾರವಾಗಿ ಬಂದ ಭಗವನ್ನಿಗ್ರಹಾನುಗ್ರಹಗಳ ಮೂಲಕ ಪ್ರಾಪ್ತವಾದ ದೇಹಪ್ರಾಪ್ತಿಯ ಮೂಲಕ ಅನುಭವಗಳೆಂದು ಒಪ್ಪಬೇಕಾಗುತ್ತದೆ, ಆದುದರಿಂದ ಈತನ ಕರ್ತೃತ್ವಭೋಕ್ತೃತ್ವಗಳು ಭಗವದಧೀನವಾದವುಗಳೆಂದೂ ಒಪ್ಪಬೇಕಾ ಗುತ್ತದೆ, ಶ್ರೀನಿಗಮಾನ್ತದೇಶಿಕರು "ಅಹಂ" ಎಂದು ತೋರುವುದೇ ಆತ್ಮಾ ಎಂದು ಸ್ಥಾಪಿಸಲು ಈ ಮುಂದಿನ ಶ್ಲೋಕದಲ್ಲಿ ಕಾರಣಗಳನ್ನು ಹೇಳಿರುತ್ತಾರೆ. ಪ್ರತ್ಯಕ್ತ್ವಾದು ಪಲಂಭತೋಮಮ ಸುಖಂಭಾವೀತಿ ಮೋಕ್ಷೇಚ್ಛಯಾ **ಮುಕ್ತೆ ಬ್ರಹ್ಮ ಮುಮುಕ್ಷುವೇದವಚಸಾ ಸುಪ್ತೋೀಹ ಮಿತ್ಯುಕ್ತಿತಃ। ಮಾಂನಾಜ್ಞಾ ಸಿಷ ಮಿತ್ಯಪಿಸ್ವವಪುರಾಧ್ಯಜ್ಞಾನ ಮಾತ್ರಾಶ್ರಯಾತ್ ಸ್ವಾಪಪ್ರಾಚ್ಯೆ ನಿಜ ಕ್ರಿಯಾ ಸ್ಮರಣತೋಽಸ್ಯಾತ್ಮಾ ಹಮರ್ಥಃಸ್ಥಿರಃ''**

(೧) **ಪ್ರತ್ಯಕ್ತ್ವಾತ್**-ಸ್ವಯಂಪ್ರಕಾಶನಾಗಿ ತನಗೆ ತಾನೇ ಅಹಂ ಅಹಂ ಎಂದು ತೋರುವುದರಿಂದಲೂ (೨) **ಉಪಲಂಭತಃ–ಅಹಂ ಘಟಂ ಜಾನಾಮಿ** ಎಂದು ಜ್ಞಾನರೂಪ ಚೈತನ್ಯವಿರುವುದರಿಂದಲೂ (೩) **ಮಮಸುಖಂಭಾವೀತಿ**

**ಮೋಕ್ಷೇಚ್ಛಯಾ**-ನನಗೆ ನಿರತಿಶಯ ಸುಖವುಂಟಾಗುವುದೆಂದು ಮೋಕ್ಷದಲ್ಲಿ ಇಚ್ಛೆಯಿರುವುದರಿಂದಲೂ (೪) ಮುಕ್ತರ, ಪರಬ್ರಹ್ಮನ, ಮೋಕ್ಷಾರ್ಥಿಗಳ ವಿಷಯದಲ್ಲಿ ವೇದವಾಕ್ಯಗಳೂ **ಅಹಂ** ಎಂದೇ ಆತ್ಮವನ್ನು ಕುರಿತು ಹೇಳುವುದ ರಿಂದಲೂ; ಇದಕ್ಕೆ ಉದಾಹರಣೆಗಳೂ:-"ಅಹಮನ್ನಂ" "ಅಹಮನ್ನಾದಃ" "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಇತ್ಯಾದಿಗಳು (೫) **ಸುಪ್ತೋಹ ಮಿತ್ಯುಕ್ತಿತಃ**-ಇಷ್ಟುಹೊತ್ತೂ ಸುಖವಾಗಿ ನಿದ್ರೆಗೈದೆನು ಎಂದು ಹೇಳಿಕೆ ಯಿಂದಲೂ (೬) **ಮಾಂನಾಜ್ಞಾಸಿಷಂ**-"ಮಾಮಪಿನಾಜ್ಞಾಸಿಷಂ" ಇದುವರೆಗೂ ನಾನು ನನ್ನನ್ನೇ ತಿಳಿಯದೇ ಇರುವ ಸ್ಥಿತಿಯಲ್ಲಿದ್ದನು ಎಂಬ ಹೇಳಿಕೆಯಿಂದಲೂ **ಸ್ವವಪುರಾದ್ಯಜ್ಞಾನ ಮಾತ್ರಾಶಯಾತ್**-ನನ್ನ ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ ಮೊದಲಾದವುಗಳಿಗೆ ಜ್ಞಾನಾಶ್ರಯತ್ವವಿಲ್ಲದೆ ಜಡವಾದುದ ರಿಂದಲೂ (೭) **ಸ್ವಾಪಪ್ರಾಚ್ಯನಿಜಕ್ರಿಯಾ ಸ್ಮರಣತಃ**-ನಿದ್ರೆಯನ್ನು ಹೊಂದು ವುದಕ್ಕೆ ಮುಂಚೆ ಮಾಡಿದ ಕಾರ್ಯದ ಸ್ಮರಣೆ ಇರುವುದರಿಂದಲೂ **ಆತ್ಮಾ** ಎಂಬುದು, **ಅಹಂ ಅಹಂ** ಎಂದು ತೋರುವ ವಸ್ತುವೇ ಎಂಬುದು ಸ್ಥಾಪಿತವು. ಎಂದು ತಾತ್ಪರ್ಯವು ಹೀಗೆ ಯಾಮುನಮುನಿಗಳ ಸಿದ್ಧಾಂತವೇ ನಮ್ಮ ಯತಿವರ್ಯರ ಸಿದ್ಧಾಂತವಾಗಿ ಸರ್ವಶಾಸ್ತ್ರ ಸಮಂಜಸವಾದ ಅಭಿಪ್ರಾಯವಾಗಿರುವಾಗ **"ವಪುರಾದಿ ಷುಯೋಪಿಕೋಪಿವಾ"** ಎಂದು ಏಕೆ ಹೇಳಿದರೆಂಬುದು ನ್ಯಾಯವಾದ ಪ್ರಶ್ನೆ ಯಾಗುತ್ತದೆ. ಸರ್ವೇಶ್ವರನೇ ಸರ್ವಜ್ಞನಾದುದರಿಂದ ಯಥಾರ್ಥವನ್ನು ಸರಿಯಾಗಿ ಬಲ್ಲನು ಆದರೆ ಭರನ್ಯಾಸರೂಪೋಪಾಯನಿಷ್ಠನಿಗೆ ಈ ವಿಧವಾದ ಯಾವ ಜ್ಞಾನಗಳು ಕೂಡ ಬೇಕಾಗಿಲ್ಲವೆಂದು ಹೇಳುವ ಶ್ಲೋಕವಾಗಿ ತೋರುತ್ತದೆ. ಆದರೆ ಮುಖ್ಯವಾಗಿ ಶರಣಾಗತಿಗೆ ಬೇಕಾದುದು ಶೇಷತ್ವಜ್ಞಾನವು, ಆದರೆ ಶ್ರೀನಿಗಮಾಂತ ದೇಶಿಕರವರು ಭರನ್ಯಾಸ ಶಾಸ್ತ್ರವಾದ ಶ್ರೀಮದ್ರಹಸ್ಯತ್ರಯ ಸಾರ ದಲ್ಲಿ ತತ್ವತ್ರಯಾಧಿಕಾರದ ಆವಶ್ಯಕತೆ ಏನು? ಎಂದು ಆಕ್ಷೇಪಿಸಬಹುದು. ಆವ ಶ್ಯಕವಿಲ್ಲದಿದ್ದರೂ ಪ್ರಾಜ್ಞನಾಗಿ ಭರನ್ಯಾಸನಿಷ್ಠನಿಗೆ ಅಂತಹ ಜ್ಞಾನವು ಸ್ವರೂಪ ದಾಯಕವು ಎಂದು ಭಾವಿಸತಕ್ಕದ್ದು. ಭರನ್ಯಾಸವು ಇವು ಯಾವುದನ್ನೂ ಅಪೇಕ್ಷಿಸುವುದಿಲ್ಲವೆಂಬುದಕ್ಕೆ ಪ್ರಮಾಣವಾಗಿ **"ನಜಾತಿಭೇದಂ ನಕುಲಂ ನಲಿಂಗಂ ನಗುಣಕ್ರಿಯಾಃ। ನದೇಶಕಾಲೌ ನಾವಸ್ಥಾಂ ಯೋಗೋಹ್ಯಯಮ ಪೇಕ್ಷತೇ"** ಈ ಭರನ್ಯಾಸವೆಂಬ ಯೋಗವು ಅಧಿಕಾರಿಯಲ್ಲಿ ಬ್ರಾಹ್ಮಣಾದಿ ಉತ್ಕೃಷ್ಟತೆ ನಿಕೃಷ್ಟತೆಯನ್ನಾಗಲಿ ಕುಲದ ಉಚ್ಚ ನೀಚತನವನ್ನಾಗಲಿ ಸ್ತ್ರೀಪುರುಷ ವಿವೇಚನೆಯನ್ನಾಗಲಿ ಗುಣಕ್ರಿಯಗಳ, ಪ್ರಾಜ್ಞತೆ ಅಜ್ಞತೆ ಇತ್ಯಾದಿಗಳ, ಉತ್ತಮಾಧಮ ವಿವೇಚನೆಯನ್ನಾಗಲಿ ದೇಶಕಾಲಾವಸ್ಥೆಗಳ ತಾರತಮ್ಯವನ್ನಾಗಲಿ, ಅಪೇಕ್ಷಿಸುವುದಿಲ್ಲವು ಇನ್ನು ಯಾವುದನ್ನು ಅಪೇಕ್ಷಿಸುತ್ತದೆ ಎಂದರೆ ತನಗೂ ಸರ್ವೇಶ್ವರನಿಗೂ ಏನು ಸಂಬಂಧವು? ತನಗೆ ರಕ್ಷಕನು ಯಾರು? ಎಂಬ ಮುಖ್ಯ

ಜ್ಞಾನವೆಷ್ಟೋ ಅಷ್ಟುಮಾತ್ರವೇ; ತಾನು ಆತನಿಗೆ ಶೇಷಭೂತನು, ಆತನಲ್ಲದೆ ತನಗೆ ಇನ್ನು ಯಾರೂ ರಕ್ಷಕರಿಲ್ಲ ಎಂಬ ಮುಖ್ಯಜ್ಞಾನ-ಅಷ್ಟುಮಾತ್ರವಿದ್ದರೆ ಸಾಕು. ಆದರೆ ಇತರಜ್ಞಾನವೂ ಇದ್ದು ಪ್ರಾಜ್ಞನಾಗಿ ಅನುಷ್ಠಿಸುವುದು, ನಾರೀ ಮಣಿಯಾದ ಸಾಧ್ವಿಗೆ ಅಲಂಕಾರಗಳಿದ್ದಂತೆ ಶೋಭಿಸುತ್ತದೆ. ಈ ಅಭಿಪ್ರಾಯ ವನ್ನು ಮುಂದಿನ ಶ್ಲೋಕದಿಂದ ಗ್ರಹಿಸಬಹುದು. ಈ ಅಭಿಪ್ರಾಯವೇ ಗೀತೆಯಲ್ಲೂ **"ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ। ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯವಿಜಾನತಃ"** ನೀರಡಿಕೆ ಇರುವವನು ಅಗಾಧ ಜಲಾ ಶಯದಲ್ಲಿರುವ ನೀರಲ್ಲಿ ತನಗೆ ದಾಹಶಾಂತಿಗೆ ಎಷ್ಟು ಉದಕಬೇಕೋ ಅಷ್ಟು ಮಾತ್ರವನ್ನೇ ಹೇಗೆ ಪರಿಗ್ರಹಿಸುವನೋ ಹಾಗೆಯೇ ಉಪಾಯಾನುಷ್ಠಾನ ಮಾಡುವವನು ವೇದದಲ್ಲಿ ಅದಕ್ಕೆ ಎಷ್ಟು ಬೇಕೆಂತ ವಿಧಿಸಿದೆಯೋ ಅಷ್ಟುಮಾತ್ರವೇ ಗ್ರಹಿಸುವನು ಎಂಬುದರಿಂದ ಉಪಪಾದಿತವು. ಆದುದರಿಂದ, **"ಬಹುಭ್ಯಶ್ಚ ಮಹದ್ಭ್ಯಶ್ಚ ಶಾಸ್ತ್ರೇಭ್ಯೋಮತಿಮಾನ್ನರಃ। ಸರ್ವತಸ್ಸಾರ ಮಾದದ್ಯಾತ್ಪು ಷ್ಪೇಭ್ಯ ಇವಷಟ್ಪದಃ"** ಅನೇಕರಿಂದಲೂ ಪ್ರಾಜ್ಞರಿಂದಲೂ ಶಾಸ್ತ್ರಗಳಿಂದಲೂ ಸಹ ಬುದ್ಧಿವಂತನು ಎಲ್ಲಾ ಕಡೆಯಿಂದಲೂ ಸಾರಭೂತವಾದುದನ್ನು ಪರಿಗ್ರಹಿಸ ತಕ್ಕದ್ದು, ಹೇಗೆಂದರೆ ಭ್ರಮರಗಳು ಸಮಸ್ತ ಪುಷ್ಪಗಳಿಂದಲೂ ಸಾರಭೂತವಾದ ಮಕರಂದವನ್ನು ಪರಿಗ್ರಹಿಸುವಹಾಗೆ. ಹಾಗೆಯೇ ಇಲ್ಲಿಯೂ ಭರನ್ಯಾಸನಿಷ್ಠನಿಗೆ ಸಾರಭೂತಜ್ಞಾನವು ಯಾವುದೆಂದರೆ ತನಗೂ ಸರ್ವೇಶ್ವರನಿಗೂ ಇರುವ ಶೇಷ ಶೇಷಿ ಜ್ಞಾನವೂ, ರಕ್ಷ್ಯರಕ್ಷಕಜ್ಞಾನವೂ, ಆಗಲಿ ಈ ಜೀವಾತ್ಮನಾದ ತನ್ನ ಸ್ವರೂಪನಿರೂಪಕ ಧರ್ಮಗಳು ಯಾವುವು? ತನಗೆ ಕರ್ತೃತ್ವ ಭೋಕ್ತೃತ್ವ, ಜ್ಞಾತೃತ್ವಗಳ ವಿವೇಕವಿಲ್ಲದೆ ಅದು ಎಂತಹ ಉಪಾಯಾನುಷ್ಠಾನವು? ಎಂದರೆ ಇಲ್ಲಿ ಜೀವಾತ್ಮನ ಗುಣಗಳಾದ ಅಣುತ್ವ, ಆ ಕಾರಣದಿಂದ ಅಚ್ಛೇದ್ಯತ್ವ ಅದಾ ಹ್ಯತ್ವಗಳ, ಧರ್ಮಭೂತಜ್ಞಾನದ ವಿಭುತ್ವ ಮೊದಲಾದವುಗಳ ಜ್ಞಾನವೇನೂ ಇಲ್ಲಿ ಬೇಕಾದುದಲ್ಲವು. ಆತ್ಮಸ್ವರೂಪ ಮತ್ತು ಗುಣಗಳ ಯಥಾರ್ಥಸ್ವರೂಪವನ್ನು ನನಗೆ ಯಥಾರ್ಥವಾಗಿ ತಿಳಿಯಲು ಶಕ್ತಿ ಇಲ್ಲವೆಂದು ಇಲ್ಲಿ ಹೇಳಿಕೊಂಡರು. ನೀನು ಸರ್ವಜ್ಞನಾದುದರಿಂದ ನಿನಗೇನೇ ಅದು ಸರಿಯಾಗಿ ತಿಳಿಯತಕ್ಕದ್ದೆಂಬ ಭಾವದಿಂದ **"ಗುಣತೋಽಸಾನಿ ಯಥಾತಥಾವಿಧಃ** ಎಂದು ಹೇಳಿದರು. ಆದರೆ ನಿನ್ನ ಕೃಪೆಯಿಂದ ಪಶುವಿನಹಾಗೆ ಅಜ್ಞಾನಿಯಲ್ಲವು. ನಿನ್ನ ಕೃಪಾ ಮಹಿಮೆ ಯಿಂದ ಪ್ರಬುದ್ಧನೇ ಹೌದು, ಎಂದು ಮುಂದಿನ ಶ್ಲೋಕದಲ್ಲಿ ಹೇಳಿಕೊಳ್ಳುತ್ತಾರೆ, ನಿನ್ನನ್ನು ಶರಣಹೊಂದಲು ಅರ್ಥಿತ್ವಸಾಮರ್ಥ್ಯಗಳೆರಡೂ ಇರುವುದರಿಂದ ಸರಿ ಯಾದ ಅಧಿಕಾರಿ ಎಂಬುವುದೇನೋ ನನಗೆ ತಿಳಿಯುವುದು. ಈ ನನ್ನ ಶರೀರವೂ ನಾನೂ ಸಹ ನಿನ್ನ ವಸ್ತುವಾಗಿ ನಿನಗೆ ಶೇಷಭೂತವೆಂಬುದೇನೋ ಚೆನ್ನಾಗಿ ತಿಳಿಯುವುದು. **"ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿಸ್ಥಿತಂ"**

ಎಂಬಲ್ಲಿ ಹೇಳಿರುವಹಾಗೆ ನಾನು ನಿನ್ನ ಸ್ವತ್ತಾಗಿ ಅದಕ್ಕೆ ನೀನು ಸ್ವಾಮಿ ಎಂಬ ಜ್ಞಾನವು ಸಂಪೂರ್ಣವಾಗಿರುವುದರಿಂದ ನಿನ್ನ ವಸ್ತುವನ್ನು ನಿನ್ನಲ್ಲೇ ಸಮರ್ಪಿಸಿ ಬಿಟ್ಟು ನಿಶ್ಚಿಂತನಾಗಿರುವುದು ಯುಕ್ತವು ಎಂದು ಸಮರ್ಪಿಸಲ್ಪಟ್ಟಿತು **ತತ್** ಆ ಕಾರಣದಿಂದ **ತವಪಾದಪದ್ಮಯೋಃ ಅಹಮದ್ಯೈವ ಸಮರ್ಪಿತಃ. ಅದ್ಯೈವ** ಎಂದು ಅವಧಾರಣದೊಂದಿಗೆ ಹೇಳಿರುವುದರ ಅಭಿಪ್ರಾಯವು ಏನೆಂದರೆ ಉಪಾಯಾನುಷ್ಠಾನವನ್ನು ಮಾಡಬೇಕಾದವನು ಸಾವಕಾಶ ಮಾಡತಕ್ಕದ್ದಲ್ಲವು, ದೇಹವು ಅಸ್ಥಿರವು. ಉಪಾಯಾನುಷ್ಠಾನವಿಲ್ಲದೆ ದೇಹವಿಯೋಗವಾದರೆ ಪುನರ್ಜನ್ಮವು ತಪ್ಪದು. ಆದುದರಿಂದ. ಆತನೇ ಶೇಷಿಯಾಗಿ ರಕ್ಷಕನೆಂಬ ಜ್ಞಾನ ಯಾವಾಗ ಉಂಟಾಯಿತೋ ಆಗಲೇ ಭರಸಮರ್ಪಣೆಯು ಉಚಿತವೆಂದು ಪ್ರಾಜ್ಞನು ಭಾವಿಸತಕ್ಕದ್ದೆಂಬುದನ್ನು ಸೂಚಿಸುತ್ತದೆ, ಅಥವಾ ಆತನೇ ರಕ್ಷಕನು, ತಾನು ರಕ್ಷ್ಯವಸ್ತು, ಶೇಷಭೂತನು ಎಂಬ ಜ್ಞಾನವು ಯಾವಾಗಲೂ ಅನುಸರಿಸಿ ಬರುವುದಿಲ್ಲವು, ಅದಕ್ಕೆ ಬದಲಾಗಿ, ಅಹಂಕಾರ ಮಮಕಾರಗಳು ತೊಲಗುವುದು ತುಂಬಾ ಕಷ್ಟವಾದುದರಿಂದ ಈ ಶೇಷತ್ವಜ್ಞಾನವು ಉಂಟಾಗಿರುವಾಗಲೇ **ಅಹಂ ಅದ್ಯೈವಮಯಾ ಸಮರ್ಪಿತಃ** ಎಂದು ಹೇಳಿದರು. ಇಂತಹ ಭ್ರಮವಾಗಲಿ, ಅಥವಾ ನಾನು ಸ್ವತಂತ್ರನೋ ಅಥವಾ ನಿನ್ನವನೋ ಎಂಬ ಮೋಹಜ್ಞಾನವಾಗಲಿ ಬರುವುದಕ್ಕೆ ಮುಂಚೆ ಅದ್ಯೈವ ಎಂದು ಹೇಳಿದರು. ಈ ದೇಹದಿಂದಿರುವ ಆತ್ಮಾ ನಿನ್ನಂತಹ ಮಹಿಮೆಯುಕ್ತನಿಗೆ ಸಮರ್ಪಣೀಯವಾಗಿ ನೀನೇ ಮಾಡಿರುತ್ತೀಯೆ, "ವಿಚಿತ್ರಾ ದೇಹಸಂಪತ್ತಿಃ **ಈಶ್ವರಾಯ ನಿವೇದಿತುಂ । ಪೂರ್ವಮೇವ ಕೃತಾ ಬ್ರಹ್ಮನ್ ಹಸ್ತ ಪಾದಾದಿಸಂಯುತಾ**" ಎಂಬ ಶ್ಲೋಕವು ಅನುಸಂಧೇಯವು. ಅಥವಾ **ಅದ್ಯೈವ** ಈಗ ನಾನು ನಿನಗೆ ದಾಸಭೂತನು, ನೀನು ಸ್ವಾಮಿಯು ನಾನು ರಕ್ಷ್ಯವಸ್ತುವು ನೀನಲ್ಲದೆ ನನಗೆ ಇನ್ಯಾರೂ ರಕ್ಷಕರಿಲ್ಲವು ಎಂಬ ಜ್ಞಾನ ಉಂಟಾಗಿರುವಾಗಲೇ ಇನ್ನು ಯಾವ ಜಿಜ್ಞಾಸ, ತರ್ಕಗಳನ್ನು ನಡೆಸದೆ **ಅದ್ಯೈವ** ಈಗಲೇ ಎಂಬ ಭಾವವು. **ಅಹಂ ಸಮರ್ಪಯಾಮಿ** ಎಂದು ಹೇಳದೆ **ಮಯಾಸಮರ್ಪಿತಃ** ಎಂದು ಏತಕ್ಕೆ ಹೇಳಿದರು? ಎಂದರೆ ತಾನು ಹೀಗೆ ಭರಸಮರ್ಪಣೆಮಾಡು ಎಂಬ ಚೋದನೆಗೆ ನೀನೇ ಸಿದ್ಧೋಪಾಯನಾಗಿ ಕಾರಣನೇವಿನಾ ಅಲ್ಲಿಯೂ ಕೂಡ ನನ್ನ ಸ್ವಾತಂತ್ರ್ಯವಿರುವುದಿಲ್ಲವೆಂಬ ಭಾವ ಪ್ರದರ್ಶನೆಗಾಗಿ ಹಾಗೆ ಪ್ರಯೋಗವು.

ಮೋಕ್ಷಾರ್ಥಿಯಾದವನು ತಾನೂ, ತನಗೆ ಸೇರಿದ ಪತ್ನೀ ಸುತ ದುಹಿತಾದಿಗಳೆಲ್ಲರೂ ಮತ್ತು ತನಗೆ ಸಂಬಂಧಪಟ್ಟ ಎಲ್ಲಾ ವಸ್ತುಗಳೂ, ಪರಮಾತ್ಮನದೇ ವಿನಾ ತನ್ನದಾಗಿ ಯಾವುದೂ ಇಲ್ಲವೆಂಬ ಯಥಾರ್ಥ ಜ್ಞಾನವಿರಬೇಕು. ಹಾಗೆಯೇ **ಉಪರಿಚರಾಖ್ಯಾನದಲ್ಲಿ "ಆತ್ಮಾರಾಜ್ಯಂ ಧನಂ ಮಿತ್ರಂ ಕಳತ್ರಂ ವಾಹನಾನಿಚ । ಏತದ್ಭಗವತೇ ಸರ್ವಂ ಇತಿತತ್ಪ್ರೇಕ್ಷಿತಂ ಸದಾ"** ಎಂದು

ಹೇಳಲ್ಪಟ್ಟಿರುತ್ತದೆ. ರಾಜ್ಯವೂ ಧನವೂ, ಮಿತ್ರನೂ, ಹೆಂಡತಿಯೂ, ವಾಹನ ಗಳೂ ಇವೆಲ್ಲವೂ ಶ್ರೀಮನ್ನಾರಾಯಣನ ವಿಭೂತಿಯೇ ಎಂದು ಯಾವಾಗಲೂ ಆ ಉಪರಿಚರರ ಅನುಸಂಧಾನವಾಗಿತ್ತು. ಹಾಗೆಯೇ ಭರತಾಳ್ವಾರ್‌ರವರು ಹೇಳಿರುತ್ತಾರೆ. **"ರಾಜ್ಯಂ ಚಾಹಂಚ ರಾಮಸ್ಯ ಧರ್ಮಂ ವಕ್ತು ಮಿಹಾರ್ಹಸಿ"** ಎಂದು ಈ ಅಯ್ಯೋಧ್ಯಾ ರಾಜ್ಯವೂ ನಾನೂಸಹ ರಾಮನಿಗೆ ಸೇರಿದವು. ಹಾಗೀಗ ಧರ್ಮವನ್ನು ನನಗೆ ಉಪದೇಶಿಸುವುದು ನಿಮಗೆ ಯೋಗ್ಯವು ಎಂದು ಭರತನು ವಸಿಷ್ಠರನ್ನು ಕುರಿತು ಹೇಳುವ ವಾಕ್ಯವು. ಹಾಗೆಯೇ ವಿಷ್ಣುತತ್ವದಲ್ಲಿಯೂ **"ಸ್ವತ್ವಮಾತ್ಮನಿ ಸಂಜಾತಂ ಸ್ವಾಮಿತ್ವಂ ಬ್ರಹ್ಮಣಿಸ್ಥಿತಂ । ಉಭಯೋ ಶೇಷ ಸಂಬಂಧೋ ನಪರೋಭಿಮತೋಮಮ । ಸ್ವೋಽಜ್ಜೀವನೇಚ್ಛಾಯದಿತೇ ಸ್ವಸತ್ತಾಯಾಂ ಸ್ಪೃಹಾಯದಿ॥ ಆತ್ಮದಾಸ್ಯಂ ಹರೇಃಸ್ವಾಮ್ಯಂ ಸ್ವಭಾವಂಚ ಸದಾಸ್ಮರ"** ಜೀವಾತ್ಮನಲ್ಲಿ ಸ್ವತ್ವಂ ಪರಮಾತ್ಮನಸ್ವತ್ತಾಗಿ ಆದುದರಿಂದ ಆತನಿಗೆ ಶೇಷಭೂತನಾಗಿರುವ ಭಾವವು, **ಸಂಜಾತಂ**–ಸ್ವಾಮಿಯ ಸಂಕಲ್ಪದಿಂದುಟಾ ಯಿತು. **ಸ್ವಾಮಿತ್ವಂ**–ಆ ಆತ್ಮನಿಗೆ ಸ್ವಾಮಿಯಾಗಿ, ಶೇಷಿಯಾಗಿರುವ ಭಾವವು **ಬ್ರಹ್ಮಣಿ**—ಪರಬ್ರಹ್ಮನಲ್ಲಿ, **ಸ್ಥಿತಂ**—ಸದಾ ನೆಲೆಗೊಂಡಿತು. **ಉಭಯೋಃ**–ಈ ಜೀವಾತ್ಮ ಪರಮಾತ್ಮರಿಬ್ಬರಿಗೂ, **ಏಷಃಸಂಬಂಧಃ**—ಈ ದಾಸ, ಸ್ವಾಮಿ ಸಂಬಂಧವು ಎಂದರೆ ಶೇಷ ಶೇಷಿ ಸಂಬಂಧವು, **ಪರಃ**–ಇನ್ನು ಯಾರಿಗೂ, ಅನ್ಯ ದೇವತೆಗಳಿಗೆ ಈ ಸಂಬಂಧವು, **ಮಮ**–ನನಗೆ, **ನಾಭಿಮತಃ**–ಇಷ್ಟವಿಲ್ಲವು. ಅವರುಗಳು ಅಶಕ್ತರಾದುದರಿಂದ ; ನನ್ನ ಆತ್ಮಾವನ್ನು ರಕ್ಷಿಸುವ ಶಕ್ತಿ ಅವರಿಗಿಲ್ಲ ವಾದುದರಿಂದ, ಅವರಿಗೆ ಈ ಸಂಬಂಧವು ಸೇರತಕ್ಕದ್ದಲ್ಲವು. **ತೇ**–ಜೀವಾತ್ಮ ನಾದ ನಿನಗೆ, **ಸ್ವೋಽಜ್ಜೀವನೇಚ್ಛಾಯದಿ**–ನಿನ್ನ ಆತ್ಮಾ ಪರಮಶ್ರೇಯಸ್ಸನ್ನು ಹೊಂದಬೇಕೆಂಬ ಇಚ್ಛೆ ಇದ್ದುದಾದರೆ, **ಸ್ವಸತ್ತಾಯಾಂ**–ನಿನ್ನ ಸ್ವಾಭಾವಿಕವಾದ ಸ್ವಸ್ವರೂಪಾ ವಿರ್ಭಾವದಲ್ಲಿ, **ಸ್ಪೃಹಾಯದಿ**–ಆಶೆ ಇದ್ದುದಾದರೆ, **ಆತ್ಮದಾಸ್ಯಂ** ಪ್ರಣವದಲ್ಲಿ ಬೋಧಿಸುವ ಜೀವಾತ್ಮದಾಸ ಭಾವವನ್ನೂ, **ಹರೇಃ ಸ್ವಾಮ್ಯಂ**– ಶ್ರೀ ಮಹಾವಿಷ್ಣುವಿನ ಸ್ವಾಮಿತ್ವವನ್ನೂ ಎಂದರೆ ಜೀವಾತ್ಮನ ಶೇಷಭಾವವನ್ನೂ, **ಸದಾಸ್ಮರ**–ಯಾವಾಗಲೂ ಅನುಸಂಧಾನಮಾಡು, ಎಂದು ಹೇಳಲ್ಪಟ್ಟಿರುತ್ತದೆ. ಸರ್ವಸಂಶಯಗಳನ್ನೂ ಹೋಗಲಾಡಿಸುವ ನಾರದ ಮಹರ್ಷಿಯು ಪುಂಡರೀಕ ನೊಂದಿಗೆ ಸಂವಾದದಲ್ಲಿ **"ದಾಸೋ ಹಂ ವಾಸುದೇವಸ್ಯ ದೇವದೇವಸ್ಯ ಶಾರ್ಙ್ಗಿಣಃ । ಶಂಖಚಕ್ರ ಗದಾಪಾಣೇಃ ತ್ರೈಲೋಕ್ಯಸ್ಯೈಕ ಚಕ್ಷುಷಃ"** **ಅಹಂ**—ನಾನು, **ದೇವದೇವಸ್ಯ**—ಎಲ್ಲಾ ದೇವತೆಗಳಿಗೂ ಸ್ವಾಮಿಯಾದ, **ಶಾರ್ಙ್ಗಿಣಃ**–ಶಾರ್ಙ್ಗ ಧನುಸ್ಸನ್ನು ಧರಿಸಿರುವ, **ಶಂಖ, ಚಕ್ರ**, ಗದಾ, ಇವು ಗಳನ್ನು ಕೈಯಲ್ಲಿ ಧರಿಸಿರುವ, **ತ್ರೈಲೋಕ್ಯಸ್ಯ**—ಮೂರು ಲೋಕಗಳಿಗೂ, **ಏಕಚಕ್ಷುಷಃ**–ಒಂದೇ ಕಣ್ಣಿನ ಪ್ರಾಯನಾಗಿರುವ, **ವಾಸುದೇವಸ್ಯ**—ವಾಸು

**ಮಮನಾಥಯದಸ್ತಿಯೋಽಸ್ಮ್ಯಹಂ ಸಕಲಂ ತದ್ಧಿತವೈವ ಮಾಧವ।**
**ನಿಯತಸ್ವಮಿತಿ ಪ್ರಬುದ್ಧಧೀಃ ಅಥವಾ ಕಿನ್ನು ಸಮರ್ಪಯಾಮಿ ತೇ ॥೫೩॥**

---

ದೇವನಿಗೆ ದಾಸಃ-ದಾಸನೆಂದು ಹೇಳಿಕ್ಕೊಂಡಿರುತ್ತಾರೆ. ಈಶ್ವರ ಸಂಹಿತೆಯಲ್ಲಿ **"ದಾಸಭೂತಾಸ್ಸ್ವತ ಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ। ಅತೋಽಹಮಪಿತೇ ದಾಸ ಇತಿಮತ್ವಾ ನಮಾಮ್ಯಹಮ್''** ಪರಮಾತ್ಮನಿಗೆ ಜೀವಾತ್ಮರೆಲ್ಲಾ ದಾಸ ಭೂತರೆಂಬುದು ಸ್ವತಸ್ಸಿದ್ಧವಾದುದಷ್ಟೆ. ಆ ಕಾರಣದಿಂದ ನಾನೂ ಕೂಡ ನಿನಗೆ ದಾಸಭೂತನು ಎಂದು ಯಥಾರ್ಥಜ್ಞಾನವನ್ನು ಹೊಂದಿ, ನಾನು ನಿನಗೆ ನಮಸ್ಕರಿಸುವೆನು, ಎಂದರೆ ನಿನ್ನ ಶರಣ ಹೊಂದುವೆನು ಎಂಬರ್ಥವು, ಆದುದರಿಂದ ಈ ಶ್ಲೋಕದಲ್ಲಿ ತಾವು ಪರಮಾತ್ಮನಿಗೆ ಶೇಷಭೂತನೆಂಬ ಯಥಾರ್ಥಜ್ಞಾನವಿರುವುದರಿಂದಲೇ ತಮ್ಮ ಆತ್ಮನ ಸ್ವರೂಪ ಸ್ವಭಾವಗಳು ಹೇಗೇಇರಲಿ ಈ ಆತ್ಮಾವನ್ನು ನಿನ್ನ ಪಾದಕಮಲದಲ್ಲೇ ನಿನ್ನ ಕೃಪೆಯಿಂದ ಸಮರ್ಪಿಸಲ್ಪಟ್ಟಿರುತ್ತೆ ಎಂದು ಹೇಳಿದರು. ಇದರಿಂದ ನಿನ್ನ ಕೃಪೆಯೂ ಗುರುಗಳ ಅನುಗ್ರಹವೂ ಎರಡೂ ಈ ಸಮರ್ಪಣೆಗೆ ಕಾರಣವೇ ವಿನಾ ತಾನಲ್ಲವೆಂಬ ಅನುಸಂಧಾನವೂ ದ್ಯೋತಿತವು. "ಪ್ರಪತ್ತೌ ಮನಲಮ್" ಎಂದು ಶ್ರೀ ಪರಾಶರ ಭಟ್ಟರು ಸ್ವಾಮಿಯ ಅನುಗ್ರಹವಿಲ್ಲದೆ ಪ್ರಪತ್ತಿಯನ್ನು ಅನುಷ್ಠಿಸಲೂ ತನಗೆ ಸಾಧ್ಯವಿಲ್ಲವೆಂದು ಹೇಳಿಕ್ಕೊಂಡಿರುತ್ತಾರೆ.

**ಅವತಾರಿಕೆಯು—ಮಯಾಸಮರ್ಪಿತಃ** ಎಂದು ಆತ್ಮಸಮರ್ಪಣೆಯನ್ನೇನೋ ಮಾಡಿದುದು ಸರಿಯೇ, ಸ್ವಾಮಿಗೇ ಆತ್ಮಾಶೇಷಭೂತವಾದುದೆಂದು ಸಮರ್ಪಿಸಿದಿರಲ್ಲಾ, ಈ ಆತ್ಮಾ ಯಾರ ಸ್ವತ್ತೆಂದು ಭಾವಿಸಿ ಸಮರ್ಪಿಸಿದಿರಿ? ಪರಮಾತ್ಮನ ಸ್ವತ್ತನ್ನೇ ಪರಮಾತ್ಮನಿಗೇ ಸಮರ್ಪಿಸಿದಿರಿಯಲ್ಲವೇ? ಇಷ್ಟುದಿನವೂ ಆತನ ಸ್ವತ್ತನ್ನು ನನ್ನಸ್ವತ್ತು ನಾನು ಸ್ವತಂತ್ರನು, ಎಂದು ಭಾವಿಸಿ, ಅನಂತರ ಸಮರ್ಪಿಸಿದರೆ **"ಯೋಽನ್ಯಥಾಸನ್ತ ಮಾತ್ಮಾನ ಮನ್ಯಥಾ ಪ್ರತಿಪದ್ಯತೇ। ಕಿಂತೇನ ನಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ"** (ಆದಿ. ಭಾ) ಎಂಬ ಶಕುಂತಲಾ ವಾಕ್ಯದ ಹಾಗೆ ಚೋರಕೃತ್ಯವನ್ನು ಮಾಡಿದಹಾಗೆ ಆಗುವುದಿಲ್ಲವೇ? ಎಂಬಾಕ್ಷೇಪಕ್ಕೆ ಈ ಶ್ಲೋಕದಮೂಲಕ ಸಮಾಧಾನವನ್ನು ಹೇಳುತ್ತಾರೆ ; ಏನೆಂದರೆ? ತಾವು ಆತ್ಮಾವನ್ನು ತಮ್ಮ ಸ್ವಂತ ಸ್ವತ್ತೆಂದು ತಿಳಿದು ಸಮರ್ಪಿಸಲಿಲ್ಲವು, ಲೋಕದಲ್ಲಿರುವ ಸಕಲ ವಸ್ತುವೂ ನಿನ್ನ ವಿಭೂತಿಯಾಗಿ ನಿನ್ನದೇ ಎಂಬ ಸರಿಯಾದ ಜ್ಞಾನವು ನಿನ್ನ ಅನುಗ್ರಹದಿಂದಲೇ ನನಗೆ ಉಂಟಾಗಿದ್ದರೂ, ಸಮರ್ಪಿಸಿದ್ದೇನೆ. ಮಹೋಪಕಾರಿಯಾದ ನಿನಗೆ ನನ್ನ ಕೃತಜ್ಞತೆಯನ್ನು ಹೇಗೆ ತೋರಿಸಲಿ? ನನ್ನ ಹೆಸರುಮಾಡಿ ನೀನು ನನಗೆ ದಯಪಾಲಿಸಿರುವ ಸಕಲವಸ್ತುಗಳೂ ಕಳತ್ರಸುತ ಮೊದಲಾದ ಬಂಧುಗಳೂ ಸ್ನೇಹಿತರೂ ಎಲ್ಲವೂ

ನಿನ್ನವು. ನೀನು ಶಾಸ್ತ್ರಗಳಲ್ಲಿ "**ಓಮಿತ್ಯಾತ್ಮಾನಂ ಯುಂಜೀತ**" "**ಆತ್ಮಾನಂ ಮಯಿನಿಕ್ಷಿಪೇತ್**" ಇತ್ಯಾದಿ ಪ್ರಮಾಣಗಳಲ್ಲಿ ಉಪಾಯವಾಗಿ ವಿಧಿಸಿರುವುದನ್ನನುಸರಿಸಿ ಸಮರ್ಪಿಸಿದನೇ ವಿನಾ ಅಜ್ಞಾನದಿಂದ ಸಮರ್ಪಿಸಲಿಲ್ಲವು. ನನ್ನ ಪದಾರ್ಥವನ್ನು ನನಗೆ ಹೇಗೆ ಸಮರ್ಪಿಸುತ್ತೀ ಎಂದು ಆಕ್ಷೇಪಿಸಿ ನೀನು ಎಲ್ಲಿಯಾದರೂ ಹೇಳಿದ್ದಪಕ್ಷದಲ್ಲಿ ಸಮರ್ಪಿಸುತ್ತಿರಲಿಲ್ಲ. ಏಕೆಂದರೆ ಎಲ್ಲವೂ ನಿನ್ನದಾಗಿರುವಾಗ ಯಾವುದನ್ನು ತಾನೇ ಸಮರ್ಪಿಸಲಾದೀತು? ಆದರೆ, ಎಲ್ಲವೂ ನಿನ್ನಸ್ವತ್ತು ಆಗಿದ್ದರೂ, "ನಿನ್ನ ಆತ್ಮಾವನ್ನು ನನ್ನ ಪಾದದಲ್ಲಿ ಸಮರ್ಪಿಸು" ಎಂಬ ನಿನ್ನ ಪರಮಹಿತವಾದ ವಾಕ್ಯವನ್ನು ಅನುಸರಿಸಿ, ಸಮರ್ಪಿಸಿರುತ್ತೇನೆಂದು ಹೇಳುತ್ತಾರೆ. ಅದೂ ಅಲ್ಲದೆ ಕೆಲವರು, ಪರಮಾತ್ಮನ ಸ್ವತ್ತನ್ನು ಪರಮಾತ್ಮನಿಗೆ ಸಮರ್ಪಿಸುವದು ಹೇಗೆ ಉಪಾಯವಾದೀತು? ಅದಕ್ಕಾಗಿ ಪರಮಾತ್ಮನು ಮೋಕ್ಷವನ್ನು ಕೊಡಬೇಕೆಂಬ ನಿರ್ಬಂಧವೇನು? ಇತ್ಯಾದ್ಯಾಕ್ಷೇಪಗಳಿಗೂ ಸಮಾಧಾನವು ಇಲ್ಲಿ ದೊರೆಯುವುದು.

**ಅರ್ಥವು:—ಮಮನಾಥ**-ನನ್ನ ಸ್ವಾಮಿಯಾದವನೇ, **ಯದಸ್ತಿ**-ಯಾವ ನನ್ನ ಗೃಹಕ್ಷೇತ್ರಸುತ ಮಿತ್ರವೃಂದ ಮೊದಲಾದವುಗಳು ಇವೆಯೋ, ಮತ್ತು **ಅಹಂಯೋಽಸ್ಮಿ**-ನಾನು ಯಾವ ಸ್ವರೂಪ ಸ್ವಭಾವಗಳನ್ನುಳ್ಳವನಾಗಿದ್ದೇನೆಯೋ, **ಹೇ ಮಾಧವ**-ಓ ಲಕ್ಷ್ಮೀಪತಿಯೇ, **ತತ್ ಸಕಲಂ**-ಒಂದೂಬಿಡದೆ ಆಸಮಸ್ತವೂ ಹೀಗೆ ಹೇಳಿದುದರಿಂದ ಈ ವಿಶ್ವದ ಸರ್ವವಸ್ತುಗಳೂ, ಚೇತನಾ ಚೇತನಗಳೆಲ್ಲಾ, **ತವೈವಹಿ**-ನಿಮ್ಮದೇ ಎಂಬುದು ಶಾಸ್ತ್ರಸಿದ್ಧವಷ್ಟೆ. ನನಗೆ ಸಂಬಂಧಪಟ್ಟವೂ ಹಾಗೆಯೇ ಇತರರಿಗೆ ಸಂಬಂಧಪಟ್ಟವೂ ಎಲ್ಲವೂ, **ನಿಯತಸ್ವಮಿತಿ**-ನಿನಗೇ ನಿಯತವಾಗಿ ಸಂಬಂಧಿಸಿದ ಸ್ವತ್ತು ಎಂಬುದಾಗಿ, ಎಲ್ಲಾ ವಿಭೂತಿಯೂ ನಿನಗೇ ನಿಯತವಾದ ಶೇಷಭೂತವಾದ ಸ್ವತ್ತು ಎಂಬುದಾಗಿ, **ಪ್ರಬುದ್ಧಧೀಃ**-ನಿನ್ನ ಕೃಪೆಯಿಂದಲೇ ಸ್ವಲ್ಪವೂ ಸಂದೇಹ, ಭ್ರಮಾದಿಗಳಿಗೆ ಆಸ್ಪದವಿಲ್ಲದಿರುವ ವಿಕಸಿತವಾದ ಜ್ಞಾನವುಳ್ಳವನಾಗಿದ್ದೇನೆ, ಎಂದರೆ ಅಂತಹ ಸುಜ್ಞಾನದೊಂದಿಗೇನೇ ಹಿಂದಿನ ಶ್ಲೋಕದಲ್ಲಿ **ಮಯಾಸಮರ್ಪಿತಃ** ಎಂಬಲ್ಲಿ ಹೇಳಿರುವಹಾಗೆ ನಾನು ನಿನ್ನ ಪಾದದಲ್ಲಿ ನಿನ್ನ ಮತ್ತು ಗುರುಗಳ ಕೃಪೆಯಿಂದ ಸಮರ್ಪಿಸಲ್ಪಟ್ಟೆನು ಎಂಬ ಭಾವವು. **ಅಥವಾ**-ಹೀಗೆ ಶಾಸ್ತ್ರದಲ್ಲಿ ನಿನ್ನ ಪರಮಹಿತೋಪದೇಶಕ್ಕನುಗುಣವಾಗಿ ಈ ಆತ್ಮಾವನ್ನು ನಿನ್ನಲ್ಲಿ ಸಮರ್ಪಿಸದೇ ಹೋದರೆ ಎಂದರೆ ಆತನ ಸ್ವತ್ತನ್ನು ಆತನಿಗೆ ಸಮರ್ಪಿಸುವುದು ಯುಕ್ತವೇ? ಎಂದು ಶಾಸ್ತ್ರಪರಿತ್ಯಾಗ ಮಾಡಿ ಶಂಕಿಸಿದರೆ, **ತೇ**-ಉಚಿತ ಜನ್ಮವನ್ನಿತ್ತು ಕರಣ ಕಳೇಬರ ಸುಜ್ಞಾನಗಳನ್ನಿತ್ತು, ಹುಟ್ಟುವಾಗಲೇ ನಿನ್ನ ದಿವ್ಯಕಟಾಕ್ಷದಿಂದ ವೀಕ್ಷಿಸಿ, ಸಾಧುಸಮಾಗಮವನ್ನುಂಟುಮಾಡಿ, ಶಾಸ್ತ್ರಜ್ಞಾನವನ್ನಿತ್ತು ಸದ್ಗುರುವನ್ನಾಶ್ರಯಿಸುವಹಾಗೆ ಮಾಡಿ, ಪರಮನಿಶ್ರೇಯಸ್ಸನ್ನುಂಟುಮಾಡುವ ಭರನ್ಯಾಸವನ್ನು ಅನುಷ್ಠಿಸುವಹಾಗೆ ಮಾಡಿ ಹೀಗೆಲ್ಲಾ ಪರಮೋಪಕಾರವನ್ನು ಮಾಡಿದ ನಿನಗೆ, **ಕಿನ್ನು ಸಮರ್ಪಯಾಮಿ**-

ಏನನ್ನು ಸಮರ್ಪಿಸಲು ಸಾಧ್ಯವು? ಯಾವುದನ್ನೂ ಸಮರ್ಪಿಸಲು ಸಾಧ್ಯವೇ ಇಲ್ಲವಾಗುತ್ತದೆಂಬ ಭಾವವು; ಏಕೆಂದರೆ ಎಲ್ಲವೂ ನಿನ್ನಸ್ವತ್ತೇ ಆಗಿರುತ್ತವೆ. ಧೂಪ, ದೀಪ, ಚಂದನ, ಪುಷ್ಪಹಾರ, ನೈವೇದ್ಯ, ತೆಂಗಿನಕಾಯಿ, ಬಾಳೆಹಣ್ಣು, ಯಾವುದನ್ನೂ ಆಗ ಸಮರ್ಪಿಸಕೂಡದಂತಾಗುವುದು, ಎಂಬ ತಾತ್ಪರ್ಯವು. ಮಹನೀಯರುಗಳು ಇವೆಲ್ಲವನ್ನೂ ಸಮರ್ಪಿಸುವುದು ಸಾಂಪ್ರದಾಯಿಕವಾಗಿ ಬಂದಿರುತ್ತದೆ, ಆದುದರಿಂದ ಗ್ರಾಹ್ಯವೆನ್ನುತ್ತೇವೆ ಎಂದು ಸಮಾಧಾನವಾದರೆ, ಈ ಆತ್ಮಸಮರ್ಪಣೆಯಲ್ಲೂ ಈ ಆತ್ಮಾ ಪರಮಾತ್ಮನ ಸ್ವತ್ತೇ ಎಂಬ ಪ್ರಬುದ್ಧಜ್ಞಾನ ದಿಂದಲೇ ಸಮರ್ಪಿಸುತ್ತೇನೆ. ಅದರಲ್ಲಿ ತಪ್ಪೇನು ಎಂಬ ಭಾವವು.

ಉಪಪಾದನೆಯು: — ಹಿಂದಿನ ಶ್ಲೋಕದಲ್ಲಿ **ಅಹಮದ್ಯೈವ ಮಯಾ ಸಮರ್ಪಿತಃ** ಎಂದು ಹೇಳಿದರಲ್ಲಾ, ಈ ಆತ್ಮಾ ಪರಮಾತ್ಮನ ಸ್ವತ್ತು ಎಂಬ ಪ್ರಾಜ್ಞತೆ ಇದ್ದು ಸಮರ್ಪಿಸಲ್ಪಟ್ಟಿತೇ? ಇಲ್ಲವೇ ಅಜ್ಞಾನದಿಂದ ಈ ಆತ್ಮಾ ನನ್ನದು ಎಂದರೆ ನಾನು ಸ್ವತಂತ್ರನು ಎಂಬ ಭಾವದಿಂದ ಸಮರ್ಪಿಸಲ್ಪಟ್ಟಿತೇ? ಎಂಬ ವಿಕಲ್ಪದಲ್ಲಿ **ಪ್ರಬುದ್ಧಧೀಃ** ಆಗಿಯೇ ಸಮರ್ಪಿಸಿರುತ್ತೇನೆಂದು ಹೇಳು ತ್ತಾರೆ. ಆಗಲಿ, ಆತನ ಸ್ವತ್ತನ್ನೇ ಆತನಿಗೆ ಸಮರ್ಪಿಸಿದರೆ ಏನಾಯಿತು? ಎಂದರೆ ಶಾಸ್ತ್ರಜ್ಞಾನ ಬಲದಿಂದಲೇ, ನೀನು ಆತ್ಮಾವನ್ನು ಸಮರ್ಪಿಸು, ರಕ್ಷಿಸುವೆನು, ಎಂದು ಹೇಳಿರುವುದರಿಂದ ಸಮರ್ಪಿಸಿರುತ್ತೇನೆ ಎನ್ನುತ್ತಾರೆ. ಆತನ ಸ್ವತ್ತನ್ನು ಆತನಿಗೆ ಅರ್ಪಿಸುವುದು ಎಂಬೀ ಆಕ್ಷೇಪಣೆಯು ಲೋಕವಿರುದ್ಧವಾಗುತ್ತದೆ, ಹೇಗೆಂದರೆ? ರಾಜನ ಉದ್ಯಾನವನದಲ್ಲಿರುವ, ರಸಬಾಳೆ, ಕಿತ್ತಲೆ ಮೊದಲಾದ ಹಣ್ಣುಗಳನ್ನು ತಂದು ರಾಜನಿಗೆ ಸಮರ್ಪಿಸಕೂಡದೆಂದಾಗುತ್ತದೆ. ಆದುದರಿಂದ ಸರ್ವೇಶ್ವರನ ಸ್ವತ್ತನ್ನು ಸಮರ್ಪಿಸುವುದರಿಂದ ಆತನು ಪ್ರೀತನಾಗುವುದಿಲ್ಲ ವೆಂಬ ವಾದವು ಕೂಡುವುದಿಲ್ಲವು. ಅದೂ ಅಲ್ಲದೆ ಶಾಸ್ತ್ರದಲ್ಲಿ ನೀನು ಅತ್ಮ ನಿಕ್ಷೇಪವನ್ನು ಮಾಡು, ನಿರತಿಶಯ ಪದವಿಯನ್ನನುಗ್ರಹಿಸುತ್ತೇನೆ ಎಂಬ ಕರುಣಾ ಸಾಗರನ ದಿವ್ಯಸೂಕ್ತಿಯೇ ಇದ್ದ ಮೇಲೆ ಆ ವಾದವು ಒಂದು ನಿಮಿಷವಾದರೂ ನಿಂತೀತೇ?

**ಮಮನಾಥ** ಎಂಬ ಪದದಿಂದಲೇ ಸ್ವಾಮಿ ಭೃತ್ಯ, ಶೇಷ ಶೇಷಿ ಭಾವವು ಶಾಸ್ತ್ರ ಪ್ರಮಾಣ ಸ್ಥಾಪಿತವೆಂಬುದು ತೋರಿಬರುತ್ತದೆ. ಹಿಂದಿನ ಶ್ಲೋಕದಲ್ಲಿ ಉದಾಹರಿಸಿದ ಪ್ರಮಾಣಗಳನ್ನು ಪರಾಂಬರಿಸಬಹುದು, **"ಪತಿಂವಿಶ್ವಸ್ಯ"** ಎಂಬ ಶ್ರುತಿಯೂ ಓಂ ಎಂಬ ಪ್ರಣವಾರ್ಥವೂ ಈ ಶೇಷ ಶೇಷಿ ಸಂಬಂಧವನ್ನು ಸ್ಥಾಪಿಸುತ್ತವೆ. **"ಪ್ರಧಾನಕ್ಷೇತ್ರಜ್ಞ ಪತಿರ್ಗುಣೇಶಃ"** (ಶ್ವೇತಾ ೬೧-೫) ಪ್ರಕೃತಿಗೂ ಜೀವಾತ್ಮರಿಗೂ ಸ್ವಾಮಿಯಾದವನೇ ಕಲ್ಯಾಣಗುಣಾಕರನಾದ ಪರಮಪುರುಷನು. **"ದ್ವಾವಜಾವೀಶನೀಶೌ"** ಜೀವಾತ್ಮ (ಜಾತ್ಯೇಕವಚನ) ಪರಮಾತ್ಮರಾದವರಿಬ್ಬರೂ ನಿತ್ಯರು; ಒಬ್ಬನು ಸ್ವಾಮಿಯು ಇನ್ನೊಬ್ಬನು ದಾಸನು.

**"ಸರ್ವಸ್ಯ ಶರಣಂ ಸುಹೃತ್"** ಸರ್ವರಿಗೂ ಉಪಾಯಭೂತನು, ಸರ್ವರಿಗೂ ಹಿತ ಪ್ರವರ್ತಕನು. **"ಏಷ ಸರ್ವೇಶ್ವರಃ ಏಷಭೂತಾಧಿಪತಿಃ"** (ಬೃ ೪.೪.೨೨) ಇತ್ಯಾದ್ಯನೇಕ ಶ್ರುತಿಸ್ಮೃತಿಪ್ರಮಾಣಗಳು ಪರಮಾತ್ಮನಲ್ಲಿ ನಾಥಭಾವವನ್ನು ಹೊಗಳುತ್ತವೆ. **ಮಮಾಸ್ತಿ** ಎಂಬುದರಿಂದ ಈ ಲೋಕದಲ್ಲಿ ತನಗೆ ಅನುಬಂಧಿ ಸಿರುವ ಸರ್ವವಸ್ತುಗಳೂ ಸರ್ವವಿಧ ಬಂಧುಗಳೂ ಎಲ್ಲಾ ಹೇಳಲ್ಪಟ್ಟವು. ಮಮ ದೇಹವೆಂದೂ ಏರ್ಪಡುವುದರಿಂದ ದೇಹಾತ್ಮಭ್ರಮಾದಿಗಳು ಸರಿಯಲ್ಲವೆಂಬುದು ಸೂಚಿಸಲ್ಪಟ್ಟಿತು.

**ಯೋಸ್ಮ್ಯಹಂ**–ಎಂಬುದರಿಂದ ಪ್ರಣವದ ಮಕಾರದಿಂದ ಹೇಳಲ್ಪಟ್ಟ ಜೀವಾತ್ಮನ ಸ್ವರೂಪಾದಿಗಳು ಹೇಳಲ್ಪಟ್ಟವು. **ಸಕಲಂತತ್**–ಅವೆಲ್ಲವೂ ಎಂದು ಹೇಳಿರುವುದರಿಂದ ತಾನೂ, ತನಗೆ ಸಂಬಂಧಿಸಿದವೆಲ್ಲವೂ ಎಂಬ ಭಾವವು. **ತನ್ವೈವಮಾಧವ**–ಇವೆಲ್ಲವೂ ನಿನ್ನದೇ, ನಿನ್ನ ನಿಯಾಮ್ಯವರ್ಗಕ್ಕೇ ಸೇರಿದವು. ಏಕೆಂದರೆ ಇವೆಲ್ಲವೂ ನಿನ್ನಸ್ವತ್ತೇ. **ಮಾಧವ** ಶಬ್ದಸ್ವಾರಸ್ಯದಿಂದ ಗಂಡ ಹೆಂಡರಿಗೆ **ನವಿಭಾಗಃ** ವಿಭಾಗವಿಲ್ಲವೆಂದು ಧರ್ಮಶಾಸ್ತ್ರವು ಬೋಧಿಸುವುದರಿಂದ, ಎಲ್ಲವೂ ಅವರ ವಿಭೂತಿಯಾಗಿ ಅವು ಇಬ್ಬರಿಗೂ ಸೇರಿದುವೇ, ಈ ಪ್ರಪಂಚವೆಲ್ಲವೂ ಮತ್ತು ನಿತ್ಯವಿಭೂತಿಯೂ ಹೀಗೆ ಉಭಯ ವಿಭೂತಿಯೂ ಸ್ವಾಮಿಯೊಬ್ಬನಿಗೆ ಮಾತ್ರವೇ ಶೇಷವೆಂದು ತಿಳಿಯತಕ್ಕದ್ದಲ್ಲವು. **"ದಮ್ಪತ್ಯೋಃ ಚೈಕಶೇಷಿಣೀ"** ಎಂಬಲ್ಲೂ **"ಉಭಯಾಧಿಷ್ಠಾನಂ ಚೈಕಂ ಶೇಷಿತ್ವಂ"** ಎಂಬಲ್ಲೂ ಹೇಳಿರುವ ನಿಯಾಮ್ಯ ವರ್ಗವೆಲ್ಲಾ ಲಕ್ಷ್ಮೀನಾರಾಯಣರಿಬ್ಬರಿಗೂ ಸೇರಿದುದು ಎಂಬ ಭಾವವನ್ನು **ಮಾಧವ** ಎಂಬ ಪದವು ಸೂಚಿಸುತ್ತದೆ. **ತದ್ಧಿ** ಎಂಬಲ್ಲಿನ **ಹಿ** ಶಬ್ದವು ಪ್ರಮಾಣ ಪ್ರಸಿದ್ಧಿಯನ್ನು ಬೋಧಿಸುತ್ತದೆ. ಶ್ಲೋಕಾಂತ್ಯದಲ್ಲಿರುವ **ತೇ** ಎಂಬಲ್ಲಿ ಚತುರ್ಥಿಯು ಇರುವುದರಿಂದ, **ನಿಯತಸ್ವಂ** ಎಂಬ ಪ್ರಯೋಗದಿಂದ ಸೂಚಿತವಾದ ನಿತ್ಯಶೇಷಿತ್ವಾರ್ಥವು ಬೋಧಿತವು. ಆ ಕಾರಣದಿಂದಲೇ ಆತ್ಮಾವನ್ನು ರಕ್ಷಿಸುವ ಶಕ್ತಿಯು ತನಗಿಲ್ಲವೆಂದು, ಅದು ನಿನ್ನ ಪಾದಕಮಲದಲ್ಲಿ ಸಮರ್ಪಿಸಲ್ಪಟ್ಟಿತೆಂದು ಹೇಳಿರುತ್ತಾರೆ. ಆದರೆ ಸಮರ್ಪಿಸಿದುದಾದರೋ ಅಜ್ಞಾನಕೃತವಾದುದಲ್ಲವು. ಸರಿಯಾದ ಶೇಷ ಶೇಷಿತ್ವಜ್ಞಾನದಿಂದಲೇ ಅನುಷ್ಠಿಸಿದುದು ಎಂದು **ಪ್ರಬುದ್ಧಧೀಃ** ಆಗಿಯೇ ಸಮರ್ಪಿಸಿರುತ್ತೇನೆ ಎಂದು ಹೇಳಿಕೊಂಡಿರುತ್ತಾರೆ. ಈ ಪ್ರಾಜ್ಞತೆ ಯನ್ನು ನಾನೇ ಸ್ವಂತವಾಗಿ ಸಂಪಾದಿಸಿಕೊಂಡಿರುವೆನೆಂಬ ಅಹಂಕಾರವು ನನ ಗಿಲ್ಲವು. ಆ ವಿಷಯದಲ್ಲೂ ನಾನು **ಪ್ರಬುದ್ಧಧೀಃ** ಎಂಬ ಭಾವನೆಯೂ ಸೂಚಿ ತವು. ಹೀಗೆ ಪ್ರಾಜ್ಞತೆಯು ಉಂಟಾದುದೂ ನಿನ್ನ ಅನುಗ್ರಹವೇ, ಒಳ್ಳೇ ಸತ್ಕುಲದಲ್ಲಿ ಹುಟ್ಟುವಹಾಗೆ ಮಾಡಿ, ನೀನು ಅನುಗ್ರಹಿಸಿದ ಶಾಸ್ತ್ರ ಚಕ್ಷುಸ್ಸಿನಿಂದ **ಪ್ರಬುದ್ಧಧೀಃ**; ಮತ್ತು ಸದ್ಗುರುಗಳನ್ನು ನೀನೇ ಏರ್ಪಡಿಸಿಕೊಟ್ಟು, ನಾಥಮುನಿ, ಅವರ ಶಿಷ್ಯರಾದ ಉಯ್ಯಕ್ಕೊಂಡರ್ ಮಣಕ್ಕಾಲ್ ನಂಬಿಗಳ ಕೃಪೆಯಿಂದ

ಉಂಟಾದ **ಪ್ರಬುದ್ಧಧೀಯುಕ್ತನಾಗಿರಬೇಕು.** ಅಂತೂ **ನಾನೇ ಸ್ವತಂತ್ರನೆಂಬ** ಅಜ್ಞಾನದಿಂಡ ಈ ಆತ್ಮವನ್ನು ಸಮರ್ಪಿಸಿದನಲ್ಲವು. ಆಗಲಿ, ಇಷ್ಟು ಮಹ ದುಪಕಾರಮಾಡಿದ ನಿನಗೆ ಏನನ್ನಾದರೂ ಅರ್ಪಿಸಿ ನನ್ನ ಕೃತಜ್ಞತಾ ಭಾವವನ್ನು ಪ್ರದರ್ಶಿಸಬೇಡವೋ? ನೀನು ಸಮರ್ಪಿಸಬಹುದೆಂದು ಅನುಮತಿ ಕೊಟ್ಟಿರುವ ಆತ್ಮಾವನ್ನೂ, ಅದೂ ಅಲ್ಲದೆ ನನ್ನ ಆತ್ಮೋಜ್ಜೀವನವನ್ನು ಮಾಡಿಕೊಳ್ಳಬೇಕೆಂದು ತುಂಬಾ ಆತುರ ಉತ್ಸಾಹಗಳಿಂದಿರುವಂತ ಆತ್ಮಾವನ್ನೇ ಸಮರ್ಪಿಸಿದುದು ಸರಿಯಿಲ್ಲವಾದರೆ, **ಕಿನ್ನುಸಮರ್ಪಯಾಮಿತೇ**—ಇನ್ನು ಏನನ್ನು ಸಮರ್ಪಿಸ ಬಹುದು? ಯಾವುದೂ ಸರಿಯಲ್ಲವೆಂದಾಗುತ್ತದೆಂಬ ಭಾವವು. ಆದುದರಿಂದ ಕೃತಜ್ಞತಾಭಾವವನ್ನು ನಾನು ಪ್ರದರ್ಶಿಸತಕ್ಕದ್ದು ನ್ಯಾಯುವು. ನೀನು ಆ ಸಮರ್ಪಣೆಯನ್ನು ಅಂಗೀಕರಿಸಿ ಪ್ರೀತನಾಗುವುದೂ ನ್ಯಾಯುವು. ಲೋಕವಾಡಿ ಕೆಯೂ ಹಾಗೆಯೇ ಇರುತ್ತದೆ. ಲೋಕವಾಡಿಕೆಯು ಹೇಗೆಂದರೆ? ರಾಜನ ಉದ್ಯಾನವನದಲ್ಲಿ ತೋಟಗಾರನು ಸೊಗಸಾದ ಹಣ್ಣುಗಳನ್ನೂ ಮನೋಹರ ವಾದ ಹೂವಿನ ಹಾರಗಳನ್ನೂ ತಂದು ರಾಜನಿಗೆ ಸಮರ್ಪಿಸಿದರೆ ರಾಜನಿಗೆ ಸಂತೋಷವುಂಟಾಗಿ ಅದರಿಂದ ತೋಟಗಾರನು ಹೆಚ್ಚು ಫಲವನ್ನು ಹೊಂದುವು ದಿಲ್ಲವೇ? ಹಾಗೆಯೇ ಈ ಭಗವಂತನಿಗೆ ಲೀಲೋದ್ಯಾನವಾಗಿರುವ ಇಲ್ಲಿ ಬೆಳೆ ದಿರುವ ಪುಷ್ಪಗಳನ್ನೇ ಆತನಿಗೆ ಅರ್ಪಿಸಿದರೆ ಅವನು ಸಂತೋಷಿಸಲಾರನೇ? ಹಾಗೆಯೇ ಆತನ ಸ್ವತ್ತಾದ ಆತ್ಮಾವನ್ನು **"ಓಂ ಇತ್ಯಾತ್ಮಾನಂ ಯುಂಜೀತ"** **"ಶರಣಂವ್ರಜ"** ಇತ್ಯಾದಿ ವಿಧಿಗಳಿಗೆ ಅನುಸಾರವಾಗಿ ಪ್ರಮಾಣ ಶರಣರಾಗಿ ಭರನ್ಯಾಸವನ್ನು ಮಾಡಿದರೆ ಆತನು ಸಂತೋಷಿಸದೆ ಇರುವನೇ? ಪರಮ ನಿಶ್ರೇಯಸ್ಸನ್ನು ಕೊಡುವೆನೆಂದು ಹೇಳಿದ ಮಾತಿಗೆ ವಿರೋಧವಾಗಿ ನಡೆಯು ವನೇ? ಆತನ ಸ್ವತ್ತನ್ನು ಆತನಿಗೆ ಸಮರ್ಪಿಸುವುದು ಹೇಗೆ ಉಪಾಯವಾದೀತೆಂಬ ಆಕ್ಷೇಪಣೆಗೆ ಈ ಮೇಲಿನ ದೃಷ್ಟಾಂತಗಳು ಸದುತ್ತರವು. ಈ ಭರಸಮರ್ಪಣೆ ಯಲ್ಲಿ ಇನ್ನೊಂದು ಅಭಿಪ್ರಾಯುವುಂಟೆಂಬುದನ್ನೂ ಗ್ರಹಿಸಬಹುದು. ಏನೆಂದರೆ ಭರಸಮರ್ಪಣೆಯು, ಪೂರ್ವಕಾಲದಲ್ಲಿ ಶೇಷತ್ವಜ್ಞಾನವಿಲ್ಲದುದರಿಂದಲೇ ಭರಸಮ ರ್ಪಣೆಯನ್ನು ಮಾಡಲಿಲ್ಲವು, ಅದುವರೆಗೂ ಆತ್ಮಾಪಹಾರದೋಷ ಉಂಟಾಗಿತ್ತು. ಆ ದೋಷವು ಈ ಸಮರ್ಪಣೆಯಿಂದ ತೊಲಗುತ್ತದೆಂಬ ನಂಬಿಕೆಯಿಂದ ಸಮರ್ಪಿ ಸಿರುತ್ತೇನೆ. ಆದುದರಿಂದಲೇ **ಪ್ರಬುದ್ಧಧೀಃ** ಎಂಬ ಪ್ರಯೋಗವು. ಹೀಗಿರು ವಾಗ ಕೆಲವರು **"ವಪುರಾದಿಷು"** ಎಂಬ ಶ್ಲೋಕದಲ್ಲಿ ಯಾಮುನಮುನಿಗಳು ಈ ಆತ್ಮಾ ಪರಮಾತ್ಮನ ವಸ್ತುವು ಎಂಬ ಜ್ಞಾನವಿಲ್ಲದೆ ಸಮರ್ಪಿಸಿಬಿಟ್ಟರೆಂದೂ, ಅನಂತರ ಆತನ ವಸ್ತುವನ್ನೇ ಆತನಿಗೆ ಸಮರ್ಪಿಸುವುದು ಹೇಗೆ ಉಪಾಯ ವಾದೀತೆಂದು ಈ ಶ್ಲೋಕದಲ್ಲಿ ಲಜ್ಜಿಸಿದರೆಂದೂ ಹೇಳುವರು. ಹೀಗೆಯೇ ನಮ್ಮಾಳ್ವಾರ್‌ರವರೂ **"ಎನದಾವಿಯುಳ್‌ಕಲನ್ದ ಪೆರುನಲ್ಲುದವಿಕ್ಕೈ ಮಾರೆ"** ಎಂಬಲ್ಲಿ ಅಜ್ಞಾನದಿಂದ ಸಮರ್ಪಿಸಿ ಒಳ್ಳೆಯ ಜ್ಞಾನವುಂಟಾದನಂತರ ಲಜ್ಜಿಸಿ

ದರು. "**ಅರೆನಕ್ಕು ನಿನ್ಪಾದಮೋ ಶರಣಾಕತ್ತೆಂದೊಳಿಂದಾಯ್**" ಎಂಬಲ್ಲಿ **ಆರ್** ಎಂದರೆ ಉಪಾಯವು, **ಶರಣಾಗೆ** ಎಂದರೂ ಉಪಾಯವು, ಎರಡೂ ಭಟ್ಟರ ಅಭಿಪ್ರಾಯದಲ್ಲಿ ಉಪಾಯವನ್ನೇ ಭೋಧಿಸುತ್ತವೆ, **ಕೃತೇಚ ಪ್ರತಿ ಕರ್ತವ್ಯಮೇಷ ಧರ್ಮಸ್ಸನಾತನಃ**" ಉಪಕಾರಕ್ಕೆ ಪ್ರತ್ಯುಪಕಾರವಿರಬೇಕಾದು ದರಿಂದ ನಿನಗೇನಾದರೂ ಸಮರ್ಪಿಸಲು ನನ್ನದಾಗಿ ಏನಾದರೂ ಇದೆಯೇ ಎಂದರೆ ನನ್ನದಾಗಿ ನೀನು ಅನುಗ್ರಹಿಸಿರುವುದೆಲ್ಲಾ ನಿನ್ನದೇ ಆಗಿರುತ್ತದೆ. ಈ ಆತ್ಮಾವನ್ನು ಸಮರ್ಪಿಸಲೇ ಎಂದರೆ "**ಉನಕ್ಕೋರ್ ಕೈಮಾರು ನಾನೊನ್ನಿಲೇ**" ಪ್ರತ್ಯುಪಕಾರವಾಗಿ ನಿನಗೆ ಸಮರ್ಪಿಸೋಣವೆಂದರೆ ಯಾವುದೊಂದೂ ಇಲ್ಲವು. ಹೋಗಲಿ ಈ ನನ್ನ ಆತ್ಮಾವನ್ನಾದರೂ ಸಮರ್ಪಿಸೋಣವೆಂದರೆ "**ಎನದಾವಿಯುಂ ಉನದೇ**'' ನನ್ನ ಆತ್ಮಾವೂ ನಿನ್ನದೇ. "**ಸ್ವತ್ವಮಾತ್ಮನಿಸಂಜಾತಂ ಸ್ವಾಮಿತ್ವಂಬ್ರಹ್ಮಣಿಸ್ಥಿತಮ್**'' ಎಂದು ಇರುತ್ತದೆ. ಆದುದರಿಂದ **ಮಮ** ಎಂಬ ಎರಡಕ್ಷರವು ಮೃತ್ಯುವು. **ನಮಮ** ಎಂದು ಮೂರಕ್ಷರವು ಶಾಶ್ವತವು. ಎಂಬರ್ಥವನ್ನು ಈ ಶ್ಲೋಕವು ಉಪದೇಶಿಸುತ್ತದೆ ಎಂದು ಹೇಳುತ್ತಾರೆ. "**ಉನಪಾದಮೋ ಶರಣಾಕ**" ಎಂದು ಹೇಳಿರುವುದರಿಂದಲೇ ಶರಣಾಗತಿಯನ್ನು ಅನುಷ್ಠಿಸುವುದೇ ಉಪಾಯವೆಂದು ಏರ್ಪಡುತ್ತದೆ. ಯಾಮುನ ಮುನಿಗಳು ಈ ಶ್ಲೋಕದಲ್ಲಿ ತಾವು ಮಾಡಿದ ಶರಣಾಗತಿಯು ಸರಿಯಲ್ಲವೆಂದು ಶೋಕಿಸಿದರೆ, ಮುಂದೆ ಪುನಃ ೬೪ನೆಯ ಶ್ಲೋಕದಲ್ಲಿ "**ತವಾಹಮಸ್ಮೀತಿಚ ಯಾಚಮಾನಃ**'' ಎಂದು ಹೇಳಿರುವುದರಿಂದ ಇಂತಹ ಯಾಚನೆಯೇ ಶರಣಾಗತಿಯಲ್ಲವೇ ? "**ಸಕೃದೇವ ಪ್ರಪನ್ನಾಯ ತವಾಸ್ಮೀತಿಚ ಯಾಚತೇ | ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ**'' ಎಂಬಲ್ಲಿ ಮಹರ್ಷಿಯು ಅದನ್ನೇ ಶರಣಾಗತಿ ಎಂದು ಉಪಪಾದಿಸಿರುತ್ತಾರೆಯಲ್ಲವೇ ? ೬೦ನೆಯ ಶ್ಲೋಕದಲ್ಲೂ ಪುನಃ ಶರಣಾಗತಿಯೇ "ತವೈವಾಸ್ಮಿಹಿಭರಃ'' ಎಂದು (ಭರನ್ಯಾಸವೇ) ಏಕೆ ಹೇಳಲ್ಪಟ್ಟಿತು ? ಎಂದರೆ ನಿರುತ್ತರವಾಗುತ್ತದೆ. ಪ್ರಪದನವನ್ನು ವಿಧಿಸುವ ಅನೇಕ ಶಾಸ್ತ್ರಪಂಕ್ತಿಗಳಿಗೆಲ್ಲಾ ನೈರರ್ಥಕ್ಯವನ್ನು ಹೇಳಬೇಕಾಗುತ್ತದೆ. ದಾಸನು ಬರೆದಿರುವ ರಹಸ್ಯತ್ರಯಸಾರದ ವ್ಯಾಖ್ಯಾನದ ೧೦೪೧-೪೪ನೆಯ ಪುಟಗಳನ್ನು ಪರಾಂಬರಿಸಿ. ಶರಣಾಗತಿ ಎಂದು ಬೇರೆ ಅನುಷ್ಠಾನವೇನೂ ಇಲ್ಲವು ಶೇಷತ್ವಜ್ಞಾನವೇ ಭರನ್ಯಾಸವು ಎಂದು ಸಮಾಧಾನವನ್ನು ಹೇಳುವೆವು ಎಂದರೂ ಸರಿಯಲ್ಲವು. ಇದೇ ರಹಸ್ಯತ್ರಯಸಾರದ ೧೦೮೫ನೆಯ ಪುಟವನ್ನು ನೋಡಿ.

ಹಾಗಾದರೆ **ಕಿನ್ನು ಸಮರ್ಪಯಾಮಿತೇ** ಎಂಬುದರ ಅರ್ಥವೇನು ? ಎಂದರೆ ಸ್ವತಂತ್ರವಾಗಿ ನನಗೆ ಯಾವುದೊಂದು ವಸ್ತುವೂ ಇಲ್ಲವು. ಆದುದರಿಂದ ನಿನಗೆ ಕೃತಜ್ಞತಾಪೂರ್ವಕವಾಗಿ ಸಮರ್ಪಿಸಲು ಯಾವುದೂಇಲ್ಲವು. ಆದುದರಿಂದ ಹಿಂದಿನ ಶ್ಲೋಕದಲ್ಲಿನ ಆತ್ಮಸಮರ್ಪಣೆಯು ನಿನಗೆ ನಾನು ಶೇಷ

**ಅವಬೋಧಿತವಾನಿಮಾಂ ಯಥಾ ಮಯಿನಿತ್ಯಾ ಭವದೀಯತಾಂ ಸ್ವಯಮ್।**
**ಕೃಪಯೈವಮನನ್ಯ ಭೋಗ್ಯತಾಂ ಭಗವನ್ ಭಕ್ತಿಮಪಿ ಪ್ರಯಚ್ಛಮೇ ॥೫೪॥**

---

ಭೂತನು ಎಂದು ಪ್ರಕಟಿಸುವ ಮಾತ್ರವೇ ವಿನಾ ಅದು ನನ್ನದು ಎಂಬ ಅಹಂಕಾರ ಭಾವದಿಂದ ಅಲ್ಲವು ಎಂದು ಈಗ ವ್ಯಕ್ತಪಡಿಸಿರುತ್ತಾರೆ. ಮೊದಲು ಅಜ್ಞಾನದಿಂದ ಸಮರ್ಪಿಸಿ ಆಮೇಲೆ ಯಾಮುನಮುನಿಗಳಿಗೆ ತತ್ವಜ್ಞಾನವುಂಟಾ ಯಿತೆಂದು ಹೇಳುವುದು ಯಾಮುನಮುನಿಗಳಲ್ಲಿ ಪರಮಾಪಚಾರವು. ಅಂತಹ ಆರೋಪಣೆಗೆ "ನಿಯತಸ್ಸಮಿತಿ ಪ್ರಬುದ್ಧಧೀಃ" ಎಂಬ ಪ್ರಯೋಗವೂ, ಮುಂದಿನ ''ಅವಭೋಧಿತವಾನಿ ಮಾಂ ಯಥಾ'' ಎಂಬುದೂ ಅವಕಾಶ ಕೊಡುವುದೇ ಇಲ್ಲವು. ಭರನ್ಯಾಸವನ್ನು ವಿಧಿಸುವ ಪ್ರಮಾಣ ಮತ್ತು ಅದರ ಕ್ರಮವನ್ನು ಭೋಧಿಸುವ ಶಾಸ್ತ್ರಗಳಿಗೆಲ್ಲಾ ವಿರೋಧಉಂಟಾಗುತ್ತದೆ. ಆ ಕಾರಣ ದಿಂದಲೇ ಶೇಷತ್ವಜ್ಞಾನವೇ ಪ್ರಪತ್ತಿಯು ಎಂಬ ಹೇಳಿಕೆಯೂ ಕೂಡುವುದಿಲ್ಲವು. ರಹಸ್ಯತ್ರಯ ಸಾರದ ಸಾಂಗಪ್ರಪದನಾಧಿಕಾರವನ್ನು ಪರಿಶೀಲಿಸಿದರೆ ಇಂತಹ ಆಕ್ಷೇಪಗಳೆಲ್ಲಾ ತೊಲಗುವುವು. ತಾನು ದಾಸನೆಂಬ ಜ್ಞಾನಮಾತ್ರವೇ ಪ್ರಪತ್ತಿ ಯಾಗುವುದಿಲ್ಲವು. ಏಕೆಂದರೆ, ಅಪ್ರಪನ್ನನಲ್ಲೂ ದಾಸತ್ವಬುದ್ಧಿ ಇರುವುದುಂಟು. ಆದುದರಿಂದ ಶೇಷತ್ವಜ್ಞಾನ ಸಂಬಂಧವೂ ಭರನ್ಯಾಸ ಶಾಸ್ತ್ರರೀತ್ಯಾ ಅನುಷ್ಠಾ ನವೂ ಎರಡೂ ಅವಶ್ಯಕವು. ಆದುದರಿಂದ ಈ ಯಾಮುನಮುನಿಗಳೇ ಚತು ಶ್ಲೋಕಿಯಲ್ಲ "ತಾಂತ್ವಾಂದಾಸಇತಿ ಪ್ರಪನ್ನ ಇತಿಚ" ಎಂದು ದಾಸ, ಪ್ರಸನ್ನ ಶಬ್ದಗಳನ್ನು ಚಕಾರ ಸಮುಚ್ಚಯದಿಂದ ಪ್ರಯೋಗಿಸಿರುವರು. ಶಾಂಕರಾದಿ ಗಳು "ತತ್ವಮಸಿ" ಎಂಬ ವಾಕ್ಯಜನ್ಯಜ್ಞಾನವೇ ಮೋಕ್ಷದಾಯಕವೆಂದು ಹೇಳು ವರು. ಆದರೆ ಮೋಕ್ಷಕ್ಕೆ ಅಂತಹ ಜ್ಞಾನಮಾತ್ರವೇ ಸಾಲದುದಾಗಿ ಉಪಾ ಯಾನುಷ್ಠಾನವೂ ಹೇಗೆ ಅವಶ್ಯಕವೋ, ಹಾಗೆಯೇ ಶೇಷತ್ವ ಜ್ಞಾನಮಾತ್ರವೇ ಸಾಲದು, ಭರನ್ಯಾಸವೂ ಅವಶ್ಯಕವು. ಶರಣಾಗತಿಯ ವಿಷಯದಲ್ಲಿ ಅನೇಕರು ಅನೇಕ ಅಭಿಪ್ರಾಯವನ್ನು ಇಟ್ಟುಕೊಂಡಿರುತ್ತಾರೆ, ಆ ವಾದಗಳು ಏನನ್ನು ಬೋಧಿಸುತ್ತವೆ? ಎಂದರೆ ಆ ವಿಷಯಗಳಿಗೆ ಅವರು ಅಷ್ಟು ಪ್ರಾಶಸ್ತ್ಯ ಕೊಟ್ಟಿ ದ್ದಾರೆಂದು ಅಷ್ಟುಮಾತ್ರವೇ ಭಾವಿಸತಕ್ಕದ್ದಾಗಿದೆ. ಈ ಶರಣಾಗತಿಗೆ ಶೇಷತ್ವ ಜ್ಞಾನವೇ ತುಂಬಾ ಮುಖ್ಯವಾದುದರಿಂದ ದಾಸತ್ವಜ್ಞಾನವೇ ಶರಣಾಗತಿ ಎಂದು ಅವರು ಹೇಳಿದರು ಎಂದು ಇಟ್ಟುಕೊಳ್ಳಬೇಕೇ ವಿನಾ ಅದೇ ಅನುಷ್ಠಾನ ವಾಗುವುದಿಲ್ಲವು.

**ಅವತಾರಿಕೆಯು** ಹಿಂದಿನ ಎರಡು ಶ್ಲೋಕಗಳಿಂದಲೂ ಶೇಷತ್ವಜ್ಞಾನ ದಿಂದ ಈ ಆತ್ಮಾವನ್ನು ಸಮರ್ಪಿಸಿದೆನು. ಅದೂ ನಿನ್ನ ವಸ್ತುವೇ ಎಂಬ ಒಳ್ಳೇ ಜ್ಞಾನದಿಂದಲೇ ನಿನ್ನ ವಿಧಿವಾಕ್ಯಗಳಿಗೆ ಕಟ್ಟುಬಿದ್ದು ಶಾಸ್ತ್ರರೀತ್ಯಾ ಭರನ್ಯಾಸ ವನ್ನು ಅನುಷ್ಠಿಸಿದೆನು, ಎಂದು ಹೇಳಿಕೊಂಡರು. ಈಗ ಈ ಶ್ಲೋಕದಲ್ಲಿ

ಕೇಳಿಕೊಳ್ಳುವುದು ಏನೆಂದರೆ? ಭರನ್ಯಾಸವನ್ನು ಅನುಷ್ಠಿಸಿದ ಉತ್ತರಕಾಲದಲ್ಲಿ ಪ್ರಪನ್ನನು ಹೇಗೆ ತನ್ನ ಸ್ವರೂಪಾನುಗುಣವಾಗಿ ಇರಬೇಕೋ ಹಾಗೇ ಐಹಿಕದಲ್ಲಿ ಆಶೆಯನ್ನು ತೊರೆದು ನಿನ್ನಲ್ಲೇ ವಿಶೇಷ ಭಕ್ತಿಯನ್ನಿಟ್ಟು ನಿನ್ನನ್ನೇ ಚಿಂತಿಸುವ ಹಾಗೆ ಮಾಡು ಎಂದು ಪ್ರಾರ್ಥಿಸುತ್ತಾರೆ.

**ಅರ್ಥವು—ಹೇ ಭಗವನ್**—ಓ ಹೇಯ ಪ್ರತ್ಯನೀಕನಾಗಿ ಕಲ್ಯಾಣಗುಣಾಕರನಾಗಿರುವ ಸ್ವಾಮಿಯೇ, **ಇಮಾಂ**– ಹೀಗೆ ಶೇಷತ್ವಜ್ಞಾನದಿಂದಲೂ, ಸರ್ವವೂ ನಾನೂ ಸಹ ನಿನ್ನ ಸ್ವತ್ತೆಂಬ ಜ್ಞಾನದಿಂದಲೂ ತನ್ನನ್ನು ತಾನು ರಕ್ಷಿಸಿಕೊಳ್ಳಲು ಶಕ್ತಿ ಇಲ್ಲವೆಂಬ ನಿಶ್ಚಯದಿಂದಲೂ ಸಮರ್ಪಿಸಿ, ನಿರ್ಭರನಾಗಿ, ನಿರ್ಭಯನಾಗಿರುವ ಈ ಅವಸ್ಥೆಯನ್ನು ಹೊಂದಿದ, ಇದು **ಭವದೀಯತಾಂ** ಎಂಬುದಕ್ಕೆ ವಿಶೇಷಣವು. **ನಿತ್ಯಂ**-ಯಾವಾಗಲೂ ನಿತ್ಯವಾದ, **ಭವದೀಯತಾಂ**-ನಿನ್ನ ಸ್ವತ್ತಾಗಿರುವ ಭಾವವನ್ನು, **ಸ್ವಯಂ**–ನೀನಾಗಿಯೇ, **ಕೃಪಯೈವ**-ಸಿದ್ಧೋಪಾಯನಾಗಿ ಕೃಪೆಯಿಂದ, **ಯಥಾ**-ಹೇಗೆ, **ಅವಬೋಧಿತವಾನ್**-ಬೋಧಿಸಲ್ಪಟ್ಟಿನೋ, **ಏವಂ**-ಹಾಗೆಯೇ, ಇದು ತಥಾ ಎಂಬುದರ ಬದಲಾಗಿ ಪ್ರಯೋಗವು. **ಅನನ್ಯ ಭೋಗ್ಯತಾಂ**–ನೀನಲ್ಲದೆ ಇನ್ನು ಯಾವ ಐಹಿಕದಲ್ಲೂ ಭೋಗ್ಯಭಾವವಿಲ್ಲದಿರುವ ಅವಸ್ಥೆಯುಳ್ಳ, **ಭಕ್ತಿಮಪಿ**–ಪರಭಕ್ತಿ, ಪರಜ್ಞಾನ, ಪರಮಭಕ್ತಿರೂಪಗಳಾದ ಆಧಿಕ್ಯವನ್ನು ಹೊಂದುವ ಭಕ್ತಿಯನ್ನೂ ಕೂಡ, **ಪ್ರಯಚ್ಛ**-ಅನುಗ್ರಹಿಸು ಎಂದು ಪ್ರಾರ್ಥಿಸುತ್ತಾರೆ. ಐಹಿಕದಲ್ಲಿ ವೈರಾಗ್ಯವನ್ನೂ ನಿನ್ನಲ್ಲಿ ವಿಶೇಷ ಪ್ರೀತಿಯನ್ನೂ ಉಂಟುಮಾಡು ಎಂದು ಬೇಡುತ್ತಾರೆ. ಅಂತಹ ಜ್ಞಾನೋತ್ಪತ್ತಿಯುಂಟಾಗುವುದೂ ಕೂಡ ನೀನು ಸಿದ್ಧೋಪಾಯನಾಗಿ ಅನುಗ್ರಹಿಸಿದರೆ ಉಂಟೇ ವಿನಾ, ನನ್ನ ಪ್ರಯತ್ನದಿಂದ ಅದು ಎಂದಿಗೂ ಸಾಧ್ಯವಿಲ್ಲವೆಂಬ ಭಾವವು.

**ಉಪಪಾದನೆಯು**—ಭಗವನ್ ಎಂಬ ಸಂಬೋಧನೆಯಿಂದ ಸರ್ವೇಶ್ವರನಾದ ಶ್ರಿಯಃ ಪತಿಯು ತನ್ನನ್ನು ಆಶ್ರಯಿಸಿ ಸರ್ವಶ್ರೇಯಸ್ಸನ್ನೂ ಹೊಂದಲು ಉಚಿತವಾದ, ಹೇಯಪ್ರತ್ಯನೀಕನು ಕಲ್ಯಾಣಗುಣಾಕರನೆಂದು ಹೇಳಲ್ಪಟ್ಟಿತು. ಭಗವಚ್ಛಬ್ದ ನಿರುಕ್ತಿಯನ್ನು, ಭಕಾರ, ಗಕಾರ, ವಕಾರಗಳಿಂದ ತೋರುವ ಅರ್ಥವನ್ನೂ, ಸಮುದಾಯತ್ವೇನ ತೋರುವ ಅರ್ಥವನ್ನೂ ಸಹ, ಭಗವಾನ್ ಪರಾಶರರು ತಮ್ಮ ಶಿಷ್ಯರಿಗೆ ಉಪದೇಶಿಸಿರುತ್ತಾರೆ (ವಿ. ಪು. ೬.೫.೭೩–೭೯ ಶ್ಲೋಕಗಳನ್ನು ನೋಡಿ) ಕೊನೆಯ ಶ್ಲೋಕವಾದ "ಜ್ಞಾನ ಶಕ್ತಿ ಬಲೈಶ್ವರ್ಯ ವೀರ್ಯತೇಜಾಂ ಸ್ಯಶೇಷತಃ। ಭಗವಚ್ಛಬ್ದ ವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ" ಎಂಬುದರಿಂದ ಷಾಡ್ಗುಣ್ಯಪರಿಪೂರ್ಣನು. ಹೇಯಗುಣರಹಿತನೆಂಬ

ಅರ್ಥ ಉಂಟಾಗುತ್ತದೆ. ಆದರೆ ಭಗವಾನ್ ಶ್ರೀ ಪರಾಶರಃ ಎಂದು ಹೇಳು ವೆವು. ಅಂತಹ ಸಂದರ್ಭದಲ್ಲಿ ಔಪಚಾರಿಕವಾಗಿ ಪೂಜ್ಯರೆಂಬ ಅರ್ಥವನ್ನು ಹೇಳತಕ್ಕದ್ದು, ಎಂದು "**ತತ್ರ ಪೂಜ್ಯ ಪದಾರ್ಥೋಕ್ತಿ ಪರಿಭಾಷಾ ಸಮನ್ವಿತಃ। ಶಬ್ದೋಽಯಂ ನೋಪಚಾರೇಣ ಹ್ಯನ್ಯತ್ರ ಹ್ಯುಪಚಾರತಃ**" ಎಂಬಲ್ಲಿ ತಿಳಿಸಿ ರುತ್ತಾರೆ. ಭರನ್ಯಾಸದಲ್ಲಿ ಶೇಷತ್ವ ಜ್ಞಾನವಿರುವುದರಿಂದಲೂ ಅದರಿಂದುಂಟಾಗುವ ಐದು ಅಂಗಗಳಿಂದಲೂ, ಅಧಿಕಾರ ಉಂಟಾಗಿ ಅನುಷ್ಠಿಸಿದುದು ಆಯಿತು ಆಗಲಿ ಕೃತ ಕೃತರಾದ ತಮಗೆ ದೇಹಾವಸಾನದವರೆಗೂ ಏನು ಅಪೇಕ್ಷಿತ ವೆಂಬುದನ್ನು ತಿಳಿಸುತ್ತಾರೆ. ಐಹಿಕದಲ್ಲಿ ವಿರಕ್ತಿಯು ಸ್ವಾಮಿಯಲ್ಲಿ ನಿರತಿಶಯ ಭಕ್ತಿಯೂ ಇವೆರಡೂ ಕೂಡ ನಿನ್ನ ಕೃಪೆಯಿಂದಲೇ ಪ್ರಾಪ್ತವಾಗಬೇಕೇ ವಿನಾ, ತಮ್ಮ ಯತ್ನಮಾತ್ರದಿಂದಲೇ ಸಿದ್ಧಿಸುವುದಿಲ್ಲವೆಂದು ಹೇಳುತ್ತಾರೆ. ಮೊದಲು ನಿನ್ನ ಕೃಪೆಯಿಂದಲೇ ಒಂದು ಒಳ್ಳೆಯ ಜ್ಞಾನವನ್ನು ಹೊಂದಿದೆನೆಂದು ಹೇಳಿಕೊಳ್ಳು ತ್ತಾರೆ. **ಅವಬೋಧಿತವಾನ್**-ನಾನು ಗುರುಗಳಿಂದ **ಬೋಧಿತ**ನಾದೆನು ಅದೂ ಕೂಡ ನಿನ್ನ **ಕೃಪಯಾ** ಕೃಪೆಯಿಂದಲೇ ಎಂಬ ಭಾವವು **ಕೃಪಯಾ** ಎಂಬುದು ಪೂರ್ವಾರ್ಧಕ್ಕೂ ಉತ್ತರಾರ್ಧಕ್ಕೂ ಕಾಕಾಕ್ಷಿನ್ಯಾಯದಿಂದ ಅನ್ವಯಿಸತಕ್ಕದ್ದೆಂದು ತಿಳಿಸುವುದಕ್ಕಾಗಿ ಎರಡಕ್ಕೂ ಮಧ್ಯದಲ್ಲಿಟ್ಟಿರುತ್ತಾರೆ. ಯಾವ ಉಪದೇಶದ ಮಹಾತ್ಮ್ಯೆಯಿಂದ ಭರನ್ಯಾಸಕ್ಕೆ ಅಧಿಕಾರಿಯಾದೆನೋ ಅಂತಹ ಜ್ಞಾನವು; ಅದು ಯಾವುದೆಂದರೆ **ಇಮಾಂಭವದೀಯತಾಂ**-ಈ ಶೇಷ ಶೇಷಿಭಾವವು ಅಥವಾ "ಸ್ವ ಸ್ವಾಮಿಭಾವವು ; ತಾನು ದಾಸನು ಪರಮಾತ್ಮನು ಸ್ವಾಮಿಯು ಎಂಬ ಭಾವವು, ಇದನ್ನೇ ಮುಂದೆ **ತವಾಹಂ**-ನಾನು ನಿನ್ನವನು ಎಂಬ ಜ್ಞಾನವು (ಶ್ಲೋ ೬೪) ಎಂದು ತಿಳಿಸುತ್ತಾರೆ. ಈ ಸಂಬಂಧವಾದರೋ ಈಚೆಗೆ ಬಂದಿದ್ದಲ್ಲವು." **ದಾಸ ಭೂತಾಸ್ಸ್ವತಃ ಸರ್ವೇ** "ಎಂಬಲ್ಲಿ ಹೇಳಿರುವ ಹಾಗೆ ನಿತ್ಯವಾದುದು ಅದೂ ನಿನ್ನ ಕೃಪೆಯಿಂದಲೇ ಉಂಟಾದುದೆಂದು ತಿಳಿಸುವುದಕ್ಕಾಗಿ **ಸ್ವಯಂ** ಎಂಬ ಪ್ರಯೋಗವು. ಇದನ್ನು ಹೇಗೆ ಹೊಂದಿದೆನೋ ಹಾಗೇಯೇ ವಿರಕ್ತಿ ಭಕ್ತಿ ಭಾವಗಳನ್ನೂ ಹೊಂದಬೇಕೆಂಬ ಪ್ರಾರ್ಥನೆಯು ಇವೆಲ್ಲಕ್ಕೂ ನೀನು ಸಿದ್ಧೋಪಾ ಯನಾಗಿ, ನಿನ್ನ ಕೃಪೆಯೇ ಮುಖ್ಯ ಕಾರಣವೆಂದು **ಕೃಪಯಾ** ಎಂಬ ಪ್ರಯೋ ಗವು, ಅದನ್ನು **ಯಥಾ ಅವಬೋಧಿತವಾನ್** ಹಾಗೆ ಎಂದು **ತಥಾ** ಎಂಬ ಪ್ರಯೋಗವಿರಬೇಕು. ಆದುದರಿಂದ **ತಥಾ** ಎಂಬುದಕ್ಕೆ ಬದಲಾಗಿ **ಕೃಪಯೈವ** ಎಂಬಲ್ಲಿ **ಏವ** ಎಂಬ ಪ್ರಯೋಗವು. ಈ ಕಾರಣದಿಂದ **ಕೃಪಯೈವ ಮನನ್ಯ ಭೋಗ್ಯತಾಂ** ಎಂಬ ಪಾಠವೇ **ಕೃಪಯೈತಪನನ್ಯ ಭೋಗ್ಯತಾಂ** ಎಂಬ ಪಾಠಕ್ಕಿಂತ ಉತ್ತಮವು. **ಅನನ್ಯಭೋಗ್ಯತಾಂ ಭಗವದ್ಭಕ್ತಿಮಪಿ** ಎಂಬಲ್ಲಿ ಇವೆರಡನ್ನೂ **ಪ್ರಯಚ್ಛ** ಎಂಬ ಪ್ರಾರ್ಥನೆಯಾಗಿಯಾಗಲಿ **ಭಾವಿಸಬಹುದು**; ಅಥವಾ **ಅನನ್ಯಭೋಗ್ಯತಾಂ** ಎಂಬುದನ್ನು ಭಕ್ತಿಗೆ ವಿಶೇಷಣವನ್ನಾಗಿಯೂ ಭಾವಿಸಬಹುದು. **ಅನನ್ಯಭೋಗ್ಯತೆ** ಎಂದರೆ, ಅನ್ಯ ಭೋಗ್ಯತೆ ಇಲ್ಲದಿರುವ,

ಪರಮಾತ್ಮನಲ್ಲದೆ ಇನ್ನು ಯಾವ ಐಹಿಕದಲ್ಲೂ ಭೋಗ್ಯತ್ವ ಬುದ್ಧಿ ಇಲ್ಲದಿರುವ ಎಂಬರ್ಥವು. "ಪರಮಾತ್ಮನಿಯೋಃರಕ್ತಃ ವಿರಕ್ತೋಽಪರಮಾತ್ಮನಿ" ಎಂಬಲ್ಲಿ ಹೇಳಿರುವ ಹಾಗೆ ಪರಮಾತ್ಮನಲ್ಲೇ ಪ್ರೀತಿಯುಂಟಾಗಬೇಕಾದರೆ ನಶ್ವರಗಳಾದ ಐಹಿಕಗಳಲ್ಲಿ ವಿರಕ್ತಿಯುಂಟಾಗಬೇಕು. ಇವುಗಳೆಲ್ಲಾ ಅಲ್ಪಾಸ್ಥಿರ ಶ್ರೇಯಸ್ಸುಗಳು. ಆದುದರಿಂದ ಪರಮಾತ್ಮನಲ್ಲಿ ಭಕ್ತಿಯುಂಟಾದರೆ ನಿರತಿಶಯ ಶ್ರೇಯೋರೂಪವಾದ ದಿವ್ಯ ವೈಕುಂಠಪ್ರಾಪ್ತಿಯು ಭಕ್ತಿಮಪಿ ಎಂಬ ಪ್ರಯೋಗದಿಂದ ಅದರ ನಿರತಿಶಯತ್ವವು ವ್ಯಂಜಿತವು. ಅದು ಸರ್ವಶ್ರೇಷ್ಠವಾದುದರಿಂದ ಅದನ್ನು ಕೂಡ ದಯಪಾಲಿಸು ಎಂಬ ಭಾವವು. ಆ ಭಕ್ತಿಯು ಎಂತಾದ್ದೆಂದು ವರ್ಣಿಸಲ್ಪಟ್ಟಿರುತ್ತದೆ "ಯಾಪ್ರೀತಿರವಿವೇಕನಾಂ ವಿಷಯೇಷ್ವನಪಾಯಿನೀ। ತ್ವಾಮನುಸ್ಮರತೆಸ್ಸಾಮೇ ಹೃದಯಾನ್ಮಾಪಸರ್ಪತು" (ವಿ ಪು ೧-೨೦-೧೯) ಅವಿವೇಕಿಗಳಾಗಿ ವಿಷಯಕಾಮಿಗಳಾಗಿ ಅದನ್ನೇ ಸತತ ಚಿಂತಿಸುತ್ತಾ ಇರುವವರೆಗೆ ಅದನ್ನು ಹೊಂದಿಯೇತೀರಬೇಕೆಂಬ ಪ್ರಕೃಷ್ಟಪ್ರೀತಿಯು ಹೇಗೆ ಇರುತ್ತದೋ ಅಂತಹ ಪ್ರಕೃಷ್ಟ ಪ್ರೀತಿಯಾದ ಭಕ್ತಿಯು ನಿನ್ನನ್ನೇ ಸದಾ ಚಿಂತಿಸುತ್ತಿರುವ ನನಗೆ ನನ್ನ ಹೃದಯವನ್ನು ಬಿಟ್ಟು ಅಗಲದೇ ಇರಲೀ ಎಂದು ಪ್ರಹ್ಲಾದನು ನೃಸಿಂಹನನ್ನು ಕುರಿತು ಪ್ರಾರ್ಥಿಸುವ ಸಂದರ್ಭವು ಇದಕ್ಕೆ ಇನ್ನೊಂದು ವಿಧವಾಗಿ ಅರ್ಥವನ್ನು ಹೇಳುತ್ತಾರೆ ಹೇಗೆಂದರೆ—ಅವಿವೇಕಿಗಳಿಗೆ ವಿಷಯೋಪಭೋಗಗಳಲ್ಲಿ ಅವುಗಳನ್ನೇ ಸ್ಮರಿಸುತ್ತಿರುವವರಿಗೆ ಯಾವ ವಿಶೇಷ ಪ್ರೀತಿಯುಂಟೋ ಅದು ನಿನ್ನನ್ನೇ ಸದಾ ಅನುಸರಿಸಿ ನಡೆಯುತ್ತಿರುವ ನನಗೆ ನನ್ನ ಹೃದಯದಿಂದ ಹೇಮಾಪ-ಓ ಲಕ್ಷ್ಮೀಪತಿಯೇ; ಸರ್ಪತು ತೊಲಗಿ ಹೋಗಲಿ. ಅದರ ಹಿಂದೆ ಇರುವ ಶ್ಲೋಕವು. "ನಾಥಯೋನಿಸಹಸ್ರೇಷು ಯೇಷು ಯೇಷು ವ್ರಜಾಮ್ಯಹಂ! ತೇಷು ತೇಷ್ವಚ್ಯುತಾ ಭಕ್ತಿರಚ್ಯುತಾಸ್ತು ಸದಾತ್ವಯಿ" ಓ ಸ್ವಾಮಿಯೇ ಯಾವ ಯಾವ ಅನೇಕ ಯೋನಿಗಳಲ್ಲಿ ಜನ್ಮವನ್ನೆತ್ತುವೆನೋ, ಓ ಅಚ್ಯುತನೇ ನಿನ್ನ ಕೃಪೆಯಿಂದ ಆ ಆ ಯೋನಿಗಳಲ್ಲಿ ಜನಿಸಿದರೂ ನಿನ್ನಲ್ಲಿ ಭಕ್ತಿಯು ಸದಾ, ಚ್ಯುತವಾಗದೆ ಸ್ಥಿರವಾಗಿರಲಿ ಎಂದು ಪ್ರಹ್ಲಾದನು ಪ್ರಾರ್ಥಿಸಿರುತ್ತಾನೆ. ಹಾಗೆಯೇ ಕುನ್ತಿಯೂ "ಸ್ವಕರ್ಮ ಫಲನಿರ್ದಿಷ್ಟಾಂ ಯಾಂ ಯಾಂ ಯೋನಿಂ ವ್ರಜಾಮ್ಯಹಂ! ತಸ್ಯಾಂ ತಸ್ಯಾಂ ಹೃಷಿಕೇಶ ತ್ವಯಿ ಭಕ್ತಿ·ರ್ದೃಢಾಸ್ತುಮೇ" ಮಾಡಿದ ಕರ್ಮಫಲಕ್ಕನುಗುಣವಾಗಿ ಯಾವ ಯಾವ ಯೋನಿಗಳಲ್ಲಿ ಜನ್ಮವನ್ನೆತ್ತಬೇಕೋ, ಅವುಗಳಲ್ಲೆಲ್ಲಾ ಓ ಹೃಷಿಕೇಶನೇ ನಿನ್ನ ಕೃಪೆಯಿಂದ ನಿನ್ನಲ್ಲಿ ಭಕ್ತಿಯು ಯಾವಾಗಲೂ ಸ್ಥಿರವಾಗಿರಲಿ ಎಂದು ಪ್ರಾರ್ಥಿಸಿರುತ್ತಾಳೆ.

ಅಗಲಿ ಪರವೈಕಾನ್ತಿಗೆ ಯಾವ ವಿಧ ಯಾಚನೆಯೂ ಸರಿಯಿಲ್ಲವೆಂದು ಹೇಳುವಾಗ ಇಲ್ಲಿ "ಯಾಚ್ಞಾ" ಹೇಗೆ ಪ್ರಬುದ್ಧಧೀಯಾದವರಿಗೆ ಸಮಂಜಸವು!

**"ನಿರಾಶೀಃ ಕರ್ಮಸಂಯುಕ್ತಂ ಸಾತ್ವತಂ ಚಾಪ್ಯಕಲ್ಪಯಂ"** ಫಲಗಳಲ್ಲಿ ಆಶೆ ಇಲ್ಲದೆ ಕರ್ಮಗಳನ್ನು ನಡೆಸಬೇಕೆಂದು ಹೇಳುವ ಸಾತ್ವತ ಶಾಸ್ತ್ರವನ್ನು ನಡೆಸಿದೆನು ಎಂದಲ್ಲವೇ ಹೇಳಿರುವುದು! ಗೀತೆಯಲ್ಲೂ **"ಮಾ ಕರ್ಮಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ" "ಸಮಲೋಷ್ಟಾಶ್ಮಕಾಂಚನಃ"** ಅಂತಹವನಿಗೆ ಭಂಗಾರವೂ ಕೂಡ ಮಣ್ಣು ಹೆಂಟೆ, ಕಲ್ಲಿಗೆ ಸಮಾನ (ಗೀ. ೧೪-೨೪) ಇತ್ಯಾದಿ ಪ್ರಮಾಣಗಳು ಇದೆಯಲ್ಲಾ ಎಂದರೆ ಅದು ನ್ಯಾಯವೇ. ಆದರೆ ಅಲ್ಪಾಸ್ಥಿರಗಳಾದ ಶ್ರೇಯಸ್ಸುಗಳನ್ನು ಯಾಚಿಸುವುದು ಪ್ರಪನ್ನನಿಗೆ ಅಹಿತವಾದುದರಿಂದ ಯಾಚಿಸತಕ್ಕದ್ದಲ್ಲವು. ಕುಚೇಲರು ತಮ್ಮ ಪತ್ನಿಯಾದ ಕ್ಷುತ್ಕ್ಷಾಮೆಯಿಂದ ಶ್ರೀ ಕೃಷ್ಣನಿಂದ ಧನವನ್ನು ಯಾಚಿಸು ಎಂದು ಬೋಧಿತರಾದರು. ಅವರು ಆತನ ಸೇವೆಯನ್ನು ಮಾತ್ರ ಮಾಡಿ ಬಂದರೇ ವಿನಾ ಯಾಚಿಸಲಿಲ್ಲವು. ಅಕ್ರೂರನ ಆರಾಧನೆಯಿಂದ ಪ್ರೀತನಾದ ಶ್ರೀ ಕೃಷ್ಣನು ಆತನನ್ನು ಕುರಿತು ವರವನ್ನು ಬೇಡು, ಕೊಡುವೆನು ಎನ್ನಲು ; ಅದಕ್ಕೆ ಮಹಾ ಭಾಗವತರಾದ ಅಕ್ರೂರರು ನಕ್ಕು ಓ ಮಹಾನುಭಾವನೇ, ಐಹಿಕ ವಿಷಯವಾಗಿ ವರವನ್ನು ಬೇಡಿದರೆ ಸಂಸಾರದಲ್ಲೇ ಬಿದ್ದು ನರಳಲಿ ಎಂದು ವರವನ್ನು ಬೇಡು, ಎನ್ನುತ್ತೀಯಾ ? ನನಗೆ ಯಾವ ಆಶೆಯೂ ಇಲ್ಲವು. ನೀನು ವರವನ್ನು ಕೊಡುವುದಾದರೆ ಅಂತಹ ಅಲ್ಪಾಸ್ಥಿರ ಫಲಗಳನ್ನು ಬೇಡುವ ದುರಾಶೆಯನ್ನು ಕತ್ತರಿಸಿಬಿಡು. ಇದೇ ನೀನು ನನಗೆ ಕೊಡುವ ವರ, ಎಂದು ಉತ್ತರವನ್ನಿತ್ತನು. **"ಅನ್ನಂ ಪಾನಂ ಧನಂ ವಸ್ತ್ರಂ ಆಯುರಾರೋಗ್ಯಮಾಸ್ಪದಂ । ಆಪದ್ಯಪಿನಯಾಚೇತಪೂಜಕಃ ಪುರುಷೋತ್ತಮಂ । ನಾಪ್ರಪನ್ನೇದದಾಮ್ಯೇತೆ ದ್ಯಾಚಿತೋಽಪಿ ದಿನೇ ದಿನೇ । ಅಯಾಚಿತೋಽಪಿ ತತ್ಸರ್ವಂ ಪ್ರಪನ್ನೇವಿದಧಾಮ್ಯಹಂ"** ಅನ್ನ, ಪಾನ, ಧನ, ಆಯುಸ್ಸು, ಆರೋಗ್ಯ, ವಸತಿ ಇವು ಯಾವುದನ್ನೂ ಪುರುಷೋತ್ತಮನನ್ನು ಆರಾಧಿಸುವ ಪ್ರಪನ್ನನು ಆಪತ್ಕಾಲದಲ್ಲೂ ಕೂಡ ಯಾಚಿಸತಕ್ಕದ್ದಲ್ಲವು. ಆ ಪ್ರಪನ್ನನು ಪ್ರತಿದಿನದಲ್ಲೂ ಯಾಚಿಸಿದರೂ ಇವು ಯಾವುದನ್ನೂ ನಾನು ಕೊಡುವುದಿಲ್ಲವು. ಯಾಚಿಸದೇ ಇದ್ದರೂ ಇವೆಲ್ಲವೂ ಪ್ರಪನ್ನನಿಗೆ ನಾನೇ ಉಂಟುಮಾಡುವೆನು. ಹಾಗೆಯೇ **"ಯಾಚಿತೋಽಪಿಸದಾಭಕ್ತೈರ್ನಾಹಿತಂಕಾರಯೇದ್ಧರಿಃ । ಬಾಲಮಗ್ನೌಪತಂ ತಂತು ಮಾತಾ ಕಿಂ ನನಿವಾರಯೇತ್"** ಶ್ರೀ ಹರಿಯು ಭಕ್ತರಿಂದ ಪ್ರಾರ್ಥಿಸಲ್ಪಡದೇ ಇದ್ದರೂ ಎಂದಿಗೂ ಅಹಿತವನ್ನು ಮಾಡುವುದಿಲ್ಲವು. ಬಾಲನು ಅಗ್ನಿಯಲ್ಲಿ ಬೀಳುತ್ತಿದ್ದರೆ ತಾಯಿಯಾದವಳು ಅದನ್ನು ನೋಡಿ ತಪ್ಪಿಸುವುದಿಲ್ಲವೇನು? ಎಂಬುದು ಅರ್ಥವು. ಹಾಗೆಯೇ **"ತತ್ಪಾದ ಭಕ್ತಿ ಜ್ಞಾನಾಭ್ಯಾಂ ಫಲಮನ್ಯತ್ಕದಾಚನ । ನಯಾಚೇತ್ಪ್ರಣತೋವಿಷ್ಣುಂ ಯಾಚನಾನ್ನಶ್ಯತಿ ಧ್ರುವಂ"** ನಿನ್ನ ಪಾದಕಮಲಗಳಲ್ಲಿ ಜ್ಞಾನ ಮತ್ತು ಭಕ್ತಿ ಇವುಗಳಲ್ಲದೆ ಇನ್ನು ಯಾವಫಲವನ್ನೂ ಎಂದಿಗೂ ಯಾಚಿಸತಕ್ಕದ್ದಲ್ಲವು. ವಿಷ್ಣುವಿನಲ್ಲಿ ಶರಣಾಗತಿಯನ್ನನುಷ್ಠಿಸಿ ಯಾಚಿಸುವವನು ಪರಮ

ಶ್ರೇಯಸ್ಸನ್ನು ಹೊಂದಲಾರನು ಇದು ನಿಶ್ಚಯವು." ಎಂದು ಹೀಗೆ ಸಂಹಿತಾ ವಾಕ್ಯವಿರುವುದರಿಂದ ಪ್ರಪನ್ನನು ತನ್ನ ಸ್ವರೂಪಕ್ಕೆ ಹೀನವಾದ ಐಹಿಕಗಳನ್ನು ಪ್ರಾರ್ಥಿಸತಕ್ಕದ್ದಲ್ಲವು. ಈ ಶ್ಲೋಕದಲ್ಲೇ ಜ್ಞಾನ ಭಕ್ತಿಗಳನ್ನು ಮಾತ್ರ ಯಾಚಿಸಬಹುದೆಂದು ಶಾಸ್ತ್ರಾನುಮತಿ ಇರುವುದರಿಂದ ಶ್ರೀಯಾಮುನ ಮುನಿಗಳು ಯಾಚಿಸಿರುತ್ತಾರೆಂಬುದು ಸಮಾಧಾನವು. ಹಾಗೆಯೇ ಉಪಲಕ್ಷಣವಾಗಿ ಮಹಾ ಭಾಗವತ ಸಂಬಂಧ, ಪ್ರಸನ್ನತೆ, ಕೈಂಕರ್ಯಲಾಭ, ಭಗವತ್ಕೈಂಕರ್ಯ ಮೊದಲಾದವುಗಳನ್ನು ಪ್ರಾರ್ಥಿಸಲು ಶಾಸ್ತ್ರಾನುಮತಿಯುಂಟು. ಆದುದರಿಂದಲೇ ಶ್ರೀ ದೇಶಿಕರವರು ಅಭೀತಿಸ್ತವದಲ್ಲಿ "**ಪರಸ್ಪರ ಹಿತೈಷಿಣಾಂ ಪರಿಸರೇಷುಮಾಂವರ್ತಯ** " ಎಂದು ಅಪೇಕ್ಷಿಸಿರುತ್ತಾರೆ. ಪರಸ್ಪರ ಹಿತೈಷಿಗಳು ಯಾರೆಂದರೆ, ಮಹಾಭಗವತರಾದ ಪ್ರಪನ್ನರೇ. ಆಗಲಿ, ಮೋಕ್ಷವನ್ನು ಕೊಡು ಎಂದು ಪ್ರಾರ್ಥಿಸಕೂಡದೋ ಎಂಬ ಶಂಕೆಯುಂಟಾಗಬಹುದು. ಶರಣಾಗತಿಯು ಯಾಚನೆಯೆಂದೇ ಭರತ ಮುನಿವಾಕ್ಯವಾದ "**ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಂ। ತದೇಕೋಪಾಯತಾ ಯಾಚ್ಞಾ ಪ್ರಪತ್ತಿಃ ಶರಣಾಗತಿಃ** " ಎಂಬಲ್ಲೂ ಮತ್ತು ಅಹಿರ್ಬುಧ್ನ್ಯ ಸಂಹಿತಾ ವಾಕ್ಯವಾದ "**ತ್ವಮೇವೋಪಾಯ ಭೂತೋಮೇ ಭವೇತಿ ಪ್ರಾರ್ಥನಾಮತಿಃ । ಶರಣಾಗತಿರಿತ್ಯುಕ್ತಾ ಸಾದೇವೇಸ್ಮಿನ್ ಪ್ರಯುಜ್ಯತಾಂ** " ಎಂಬಲ್ಲೂ ವ್ಯಕ್ತವು. ಈ ಯಾಚನೆಯು "**ಸಕೃದೇವ**" ಮಾಡತಕ್ಕದ್ದೆಂದಿರುತ್ತದೆ. "**ಸಕೃದೇವ ಪ್ರಸನ್ನಾಯ ತವಾಸ್ಮೀತಿಚಯಾಚತೇ। ಅಭಯಂ ಸರ್ವಭೂತೇಭ್ಯೋದದಾಮ್ಯೇದ್ವ್ರತಂ ಮಮ**" ಎಂದಿರುವುದರಿಂದ ಮುಕುಂದನು ಮೋಕ್ಷವನ್ನು ಕೊಡುವನೆಂದು ವಾಗ್ದಾನವಾಯಿತು. ಅಂತಹ ಸಂದರ್ಭದಲ್ಲಿ ಈತನು ಪುನಃ ಮೋಕ್ಷವನ್ನು ಕೊಡು ಎಂದು ಕೇಳುವುದು ಈ ಪ್ರಪನ್ನನ ಸ್ವರೂಪಕ್ಕೂ ಕುಂದಕವು; ಏಕೆಂದರೆ ಮಹಾವಿಶ್ವಾಸದಲ್ಲಿ ಆಗ ನ್ಯೂನತೆಯನ್ನು ಹೇಳಬೇಕಾಗಿ ಬರುತ್ತದೆ. ವರವೋದಾರನನ್ನು ಕುರಿತು ಪುನಃ ಪುನಃ ಮೋಕ್ಷವನ್ನು ಕೊಡು ಎಂದು ಕೇಳಿದರೆ ಆತನ ನಿರತಿಶಯೋದಾರಭಾವಕ್ಕೂ ನ್ಯೂನತೆಯು. ಆದುದರಿಂದಲೇ ಪುರುಷಾರ್ಥ ಕಾಷ್ಠಾಧಿಕಾರದಲ್ಲಿ ಶ್ರೀದೇಶಿಕರು ತಾವು ಐಹಿಕಾಮುಷ್ಮಿಕವಾದ ಯಾವಪುರುಷಾರ್ಥಗಳನ್ನೂ ಅಪೇಕ್ಷಿಸುವುದಿಲ್ಲವೆಂದು ಪುರುಷಾರ್ಥ ಕಾಷ್ಠಾಧಿಕಾರದ ಪ್ರಥಮ ಶ್ಲೋಕದಲ್ಲಿ ಹೇಳಿದ್ದಾರೆ. ಆ ಶ್ಲೋಕವು ಯಾವುದೆಂದರೆ :—"**ನಾಥೇ ನಸ್ತೃಣಮನ್ಯ ದನ್ಯದ ಪಿ ವಾ ತನ್ನಾಭಿನಾಳೀಕಿನೀ ನಾಳೀಕ ಸ್ಪೃಹಣೀಯ ಸೌರಭ ಮುಚಾ ವಾಚಾನಯಾಚಾಮಹೇ** " ಎಂಬುದು. ಇಲ್ಲಿ ಐಹಿಕೈಶ್ವರ್ಯಾದಿ ಭೋಗಗಳು ತೃಣವೆಂದು ಹೇಳಿದರು. ಕೈವಲ್ಯವೂ ಅಂತಾದ್ದೇ. ಮೋಕ್ಷವನ್ನೂ ತಮ್ಮ ವಾಕ್ಕಿನಿಂದ ಯಾಚಿಸುವುದಿಲ್ಲವೆಂದು ಹೇಳಿದರು. ಶರಣಾಗತಿ ಕಾಲದಲ್ಲಿ ಯಾಚಿಸಿದ್ದಾಯಿತು : '**ದತ್ತಮಸ್ಯಾಭಯಂ ಮಯಾ**' ಎಂದು ಅಭಯವನ್ನು ಹೇಳಿದ್ದಾಯಿತು. ಆದುದರಿಂದ ಯಾಚಿಸುವುದಿಲ್ಲವೆಂದರು. ಹಾಗೆಯೇ ಭಾಗವತದಲ್ಲೂ "**ನನಾಕ**

**ತವದಾಸ್ಯ ಸುಖೈಕಸಂಗಿನಾಂ ಭವನೇಷ್ವಸ್ತ್ವಪಿ ಕೀಟಜನ್ಮಮೇ ।
ಇತರಾವಸಥೇಷು ಮಾಸ್ಮ ಭೂದಪಿ ಮೇ ಜನ್ಮ ಚತುರ್ಮುಖಾತ್ಮನಾ ॥೫೫॥**

---

**ಪ್ಯಷ್ಠಂ ನಚ ಸಾರ್ವಭೌಮಂನ ಪಾರಮೇಷ್ಠ್ಯಂ ನ ರಸಾಧಿಪತ್ಯಮ್। ನ ಯೋಗಸಿದ್ಧೀ ರಪುನರ್ಭವಂವಾ ವಾಂಛಂತಿ ಯತ್ಪಾದರಜಃ ಪ್ರಪನ್ನಾಃ"** ಯಾವ ಪ್ರಸಿದ್ಧ ಪರಮಪುರುಷನ ಪಾದಕಮಲದಲ್ಲಿ ಶರಣಾಗತಿಯನ್ನನುಷ್ಠಿಸಿದ ಪ್ರಪನ್ನನು ಸ್ವರ್ಗಲೋಕವನ್ನಾಗಲೀ ಬ್ರಹ್ಮಲೋಕವನ್ನಾಗಲಿ ವರುಣ, ಕುಬೇರ ಲೋಕಗಳನ್ನಾಗಲಿ ಇಹಲೋಕದ ಸಾರ್ವಭೌಮಪದವಿಯನ್ನಾಗಲಿ, **ಅಪುನರ್ಭವಂವಾ** ಎಂದರೆ ಕೈವಲ್ಯವನ್ನಾಗಲಿ ಅಪೇಕ್ಷಿಸುವುದಿಲ್ಲವು. ಎಂದು ಹೇಳಲ್ಪಟ್ಟಿರುತ್ತದೆ, ಆಗಲಿ ಪ್ರಪನ್ನನಿಗೆ ದೇಹಯಾತ್ರೆ ನಡೆಯಬೇಕಲ್ಲವೇ ? ಎಂದರೆ ಪ್ರಪನ್ನನು ಯಾಚಿಸದೇನೇ ಸರ್ವೇಶ್ವರನು ಕೊಡುವನು. ವಿಭೀಷಣನು ಕೇಳಿಕೊಳ್ಳದೆ ಲಂಕಾ ರಾಜ್ಯವನ್ನು ಹೊಂದಿದನು. ಕುಚೇಲರೂ ಕೇಳಿಕೊಳ್ಳದೆ ಸರ್ವ ಸಮೃದ್ಧಿಯನ್ನು ಹೊಂದಿದರು. ಆದುದರಿಂದ ಪ್ರಪನ್ನನು ಯಾವ ಐಹಿಕಾದಿ ಶ್ರೇಯಸ್ಸುಗಳನ್ನು ಯಾಚಿಸಕೂಡದು. ಸ್ವಾಮಿಯಲ್ಲಿ ಭಕ್ತಿ, ಆತನನ್ನು ಧ್ಯಾನಿಸುವ ಮತ್ತು ಆತನಿಗೆ ಶೇಷ ಭೂತನಾಗಿರಬೇಕೆಂಬ ಸುಜ್ಞಾನ, ಇಂತವುಗಳನ್ನು ಕೊಡು ಎಂದು ಯಾಚಿಸುವುದರಲ್ಲೇನೂ ವಿರೋಧವಿಲ್ಲವು. **"ತತ್ಪಾದ ಭಕ್ತಿ ಜ್ಞಾನಾಭ್ಯಾಂ ಫಲಮನ್ಯತ್ಕದಾಚನ। ನ ಯಾಚೇತ್ಪುರುಷೋ ವಿಷ್ಣುಂ ಯಾಚನಾನ್ನಶ್ಯತಿಧ್ರುವಂ''** ಎಂಬುದು ಅನುಸಂಧೇಯವು. ದಶರಥನು ಪುತ್ರ ಪ್ರಾಪ್ತಿಗಾಗಿ ಯಾಚಿಸಿ ಪುತ್ರಕಾಮೇಷ್ಟಿಯನ್ನು ನಡೆಸಿದನು. ಆ ಪುತ್ರೋತ್ಪತ್ತಿಯೇನೋ ಆಯಿತು. ಆದರೆ ಪುತ್ರರ ವಿಯೋಗವೇ ಈತನಿಗೆ ಮರಣಹೇತುವಾಯಿತು. ನಾಲ್ಕು ಜನರು ಪುತ್ರರಿದ್ದರೂ ಸಾಯುವ ಕಾಲದಲ್ಲಿ ಒಬ್ಬರೂ ಹತ್ತಿರವಿರಲಿಲ್ಲವು. ಮೊದಲು ಅನೇಕ ವರ್ಷಗಳು ಬದುಕಿದ್ದರೂ ಉಪಾಯಾನುಷ್ಠಾನವನ್ನು ನಡೆಸದೇ ಮುಕ್ತಿ ಇಲ್ಲದೆ ಸ್ವರ್ಗ ಪ್ರಾಪ್ತಿಯುಂಟಾಯಿತು. ಆದುರಿಂದ ಮೋಕ್ಷ ಮತ್ತು ತತ್ಸಾಧನಾದಿ ಶ್ರೇಯಸ್ಸುಗಳ ಯಾಚನೆಯು ಹೀನವಾದುದಲ್ಲವು.

**ಅವತಾರಿಕೆಯು**— ಮೇಲಿನ ಮಹತ್ತಾದ ಶ್ಲೋಕದ ಉಪಪಾದನೆಯಲ್ಲಿ ಜ್ಞಾನ ಭಕ್ತಿಗಳನ್ನು ಅಪೇಕ್ಷಿಸಿದುದು ಉಪಲಕ್ಷಣವಾಗಿ ಭಾಗವತ ಸಂಬಂಧವೂ ಕೂಡ ಅಪೇಕ್ಷಿತವೆಂದು ಸೂಚಿಸಲ್ಪಟ್ಟಿತು. ಆದುದರಿಂದ ಜ್ಞಾನ ಭಕ್ತಿಗಳು ಮಾತ್ರವೇ ಅಲ್ಲದೆ ತದೀಯರಾದ ಮಹಾ ಭಾಗವತೋತ್ತಮರ ಸಂಬಂಧವೂ ತಮಗೆ ಅಪೇಕ್ಷಿತವೆಂದು ತಿಳಿಸುತ್ತಾರೆ. ಅದೂ ಅಲ್ಲದೆ ಶರಣಾಗತಿ ಶಾಸ್ತ್ರದ ಇನ್ನೊಂದು ಮುಖ್ಯ ವಿಷಯವನ್ನೂ ಈ ಶ್ಲೋಕದಲ್ಲಿ ಉಪಪಾದಿಸುತ್ತಾರೆ. ಪರಮ ಭಾಗವತನು ಮಾಡುವ ಶರಣಾಗತಿಯಲ್ಲಿ **"ಮಾಂಮದೀಯಂಚ ನಿಖಿಲಂ"** ಎಂಬಲ್ಲಿ ಹೇಳಿರುವ ಹಾಗೆ ಆತನಿಗೆ ಸಂಬಂಧಿಸಿರುವವರಿಗೂ ಆತನೊಂದಿಗೆ

ಸುಸುಖವಾಗಿ ಪರಮ ಪ್ರಾಪ್ಯಪ್ರಾಪ್ತಿಯು ಸಿದ್ಧವೆಂಬುದನ್ನೂ ತಿಳಿಸುತ್ತಾರೆ. ವಿಭೀಷಣನನ್ನು ತಮ್ಮ ಸಂಗಡಕ್ಕೆ ಸೇರಿಸಿಕೊಳ್ಳಬಹುದೇ ಕೂಡದೇ ಎಂಬ ವಿಷಯದಲ್ಲಿ ಸ್ವಲ್ಪ ವಿವಾದ ಉಂಟಾಗಿ ಕಡೆಗೆ ಭಾಗವತೋತ್ತಮನಾದ ಆಂಜನೇಯನ ಸಂಬಂಧದಿಂದ ಫಲಪ್ರಾಪ್ತಿಯುಂಟಾಯಿತು ಆಗ ವಿಭೀಷಣನೊಂದಿಗೆ ಬಂದ ಮಹಾ ಭಾಗವತರಾದ ನಾಲ್ಕು ರಾಕ್ಷಸರಾದರೋ ಏನೊಂದೂ ವಿವಾದವಿಲ್ಲದೆ ವಿಭೀಷಣನೊಂದಿಗೇನೇ ಉಪಾದೇಯರಾಗಿ ರಕ್ಷಿಸಲ್ಪಟ್ಟರು. ಹೀಗೆ ಪರಮ ಭಾಗವತ ಸಮಾಶ್ರಯಣಕ್ಕೆ ವಿಶೇಷ ಮಹಾತ್ಮ್ಯೆಯು ಹೇಳಲ್ಪಟ್ಟಿರುತ್ತದೆ. "**ನಹ್ಯಮ್ಮಯಾನಿತೀರ್ಥಾನಿ ನದೇವೋಮ್ಮೃಚ್ಛಿಲಾಮಯಃ । ತೇಪುನನ್ತ್ಯುರುಕಾಲೇನ ದರ್ಶನಾದೇವ ಸಾಧವಃ**'' ಪುಣ್ಯ ತೀರ್ಥಗಳಲ್ಲಿ ಅವಗಾಹನೆಯೂ, ಪುಣ್ಯ ಕ್ಷೇತ್ರಗಳಲ್ಲಿನ ಶ್ರಿಯಃಪತಿಯ ಸೇವೆಯೂ ಬಹುಕಾಲದ ಮೇಲೆ ಸಿದ್ಧಿಯನ್ನುಂಟು ಮಾಡೀತು. ಮಹಾ ಭಾಗವತನ ದಿವ್ಯ ಕಟಾಕ್ಷದಿಂದಲೋ ಒಡನೇ ಫಲ ಸಿದ್ಧಿ ಎಂದು ಹೇಳಲ್ಪಟ್ಟಿರುತ್ತದೆ; ಎಂಬ ಭಾಗವತ ಶ್ಲೋಕವು ಅನುಸಂಧೇಯವು- ಶೂದ್ರಾದಿಗಳಿಗೆ ಸದ್ಗತಿಯು ಭಾಗವತ ಸಂಶ್ರಯಣದಿಂದಲೇಯಾಗಿ ಬಹು ಸುಕರವಾಗಿರುವುದರಿಂದ **ಶೂದ್ರಸ್ಸಾಧುಃ** ಎಂದರೆ ಶೂದ್ರನು ಪುಣ್ಯಶಾಲಿ ಎಂಬ ವ್ಯಾಸೋಕ್ತಿಯಿರುತ್ತದೆ.

**ಅರ್ಥವು**—**ತವ**—ಸರ್ವಶೇಷಿಯಾದ ನಿನ್ನ, **ದಾಸ್ಯಸುಖೈಕಸಂಗಿನಾಂ**— ಪ್ರಣವದಲ್ಲಿ ಸ್ಥಾಪಿತವಾಗಿರುವ ದಾಸಭಾವದ ಸುಖದಲ್ಲೇ ಮುಖ್ಯವಾಗಿ ಸಂಗವುಳ್ಳ ಭಾಗವತರಾದ ಪರಮೈಕಾನ್ತಿಗಳ, **ಭವನೇಷು**—ಮನೆಗಳಲ್ಲಿ, **ಮೇ**- ನನಗೆ **ಕೀಟಜನ್ಮಾಪಿ**—ಒಂದು ಹುಳುವಿನ ಜನ್ಮವಾದರೂ **ಅಸ್ತು**—ಉಂಟಾಗಲಿ. ಅಂತೂ ಪರಮೈಕಾನ್ತಿಯ ಸನ್ನಿಕರ್ಷವು ನನಗೆ ಮುಖ್ಯವಾಗಿ ಬೇಕು ಎಂದರ್ಥವು. ಇದನ್ನೇ ಮುಖ್ಯವಾಗಿ ಪ್ರಪನ್ನನು ಅಪೇಕ್ಷಿಸತಕ್ಕದ್ದೆಂಬ ತಾತ್ಪರ್ಯವು **ಇತರಾವಸಥೇಷು**-ಪರಮೈಕಾನ್ತಿಗಳಲ್ಲದವರ ಮನೆಗಳಲ್ಲಿ, **ಮೇ**—ನನಗೆ ಜನ್ಮ- ಜನ್ಮವು, ಇರುವಿಕೆಯು, **ಚತುರ್ಮುಖಾತ್ಮನಾ ಅಪಿ**—ಎಷ್ಟು ಉತ್ಕೃಷ್ಟನಾಗಿ, ಚತುರ್ಮುಖನಾಗಿಯೂ ಕೂಡ, **ಮಾಸ್ಮಭೂತ್**—ಆಗಬೇಡ. ಪರಮೈಕಾನ್ತಿಗಳಲ್ಲದವರ ಮನೆಯಲ್ಲಿ ಉತ್ಕೃಷ್ಟಜನ್ಮವಾದರೂ ಬೇಡ, ಪರಮೈಕಾನ್ತಿಗಳ ಮನೆಯಲ್ಲಿ, ಒಳ್ಳೇ ಜನ್ಮವಾದರಂತೂ ಸರಿ. ಹಾಗಾಗದಿದ್ದರೆ ಒಂದು ಕೀಟ ಜನ್ಮವಾದರೂ ಆಗಬಹುದು ಎಂಬುದು ತಾತ್ಪರ್ಯವು. ಮುಖ್ಯಾಭಿಪ್ರಾಯವು ತಮಗೆ ಪರಮೈಕಾನ್ತಿಯೊಂದಿಗೆ ಸಮಾಗಮವು ಬೇಕೆಂಬ ಪ್ರಾರ್ಥನೆಯು.

**ಉಪಪಾದನೆಯು**—**ದಾಸ್ಯಸುಖೈಕಸಂಗಿನಾಂ**—ದಾಸಭೂತನಾದ ಚೇತನನಿಗೆ ನಿರತಿಶಯ ಸುಖವು ಯಾವುದೆಂದರೆ ಭಗವನ್ತನಿಗೂ ತದೀಯರಿಗೂ ಕೈಂಕರ್ಯ ಮಾಡುವುದೇ. ಆದುದರಿಂದಲೇ ಪರಮೈಕಾನ್ತಿಗಳು ಇಲ್ಲಿಯೂ ಭಗವದ್ಭಾ

ಗವತ ಕೈಂಕರ್ಯದಲ್ಲಿ ನಿರತರಾಗಿರುವುದು. ಮುಕ್ತದೆಶೆಯಲ್ಲೂ ಶ್ರೀಪರವಾಸು ದೇವನಿಗೆ ಮಾಡುವ ಕೈಂಕರ್ಯವೇ ನಿರತಿಶಯ ಪುರುಷಾರ್ಥವು. ಇದನ್ನೇ ಶ್ರೀ ದೇಶಿಕರು "ಕಿಂಕರೆತ್ವಾಧಿರಾಜ್ಯಂ" ಎಂದು ಕೊಂಡಾಡಿರುತ್ತಾರೆ. ಇದರ ಮಹಾತ್ಮ್ಯೆಯನ್ನು ಅರಿತವನು ಲಕ್ಷ್ಮಣನು. "ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಃ ಸ್ವಪತಶ್ಚತೆ" ಸದಾ ಕೈಂಕರ್ಯನಿರತನಾಗಿರುವೆನು. ನಿನ್ನ ಸಂಗಡ ಅರಣ್ಯಕ್ಕೆ ಕರೆದುಕೊಂಡು ಹೋಗು ಎಂದು ಬೇಡುತ್ತಾನೆ. ವನವಾಸ ಕಳೆದು ಶ್ರೀರಾಮಪ್ರಭುವು ಪಟ್ಟಾಭಿಷಿಕ್ತನಾದಾಗ "ತಾಂ ಯೌವರಾಜ್ಯೇ ಧುರಮುದ್ವಹಸ್ವ" ಯುವರಾಜ್ಯಾಭಿಷಿಕ್ತನಾಗು ಎಂದು ಲಕ್ಷ್ಮಣನಿಗೆ ಹೇಳಿದರೂ "ನಸೌಮಿತ್ರಿರುಪೈತಿಯೋಗಂ" ಸಮ್ಮತಿಸಲಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಏಕೆಂದರೆ ಭಗವಂತನಿಗೆ ಕೈಂಕರ್ಯ ಮಾಡುವುದೇ ತನಗೆ ಸ್ವರೂಪವೆಂದು ಅರಿತವನಾದುದರಿಂದ ಅಂತಹ ಪರಮೈಕಾನ್ತಿಗಳೊಂದಿಗೆ ಸಂಸರ್ಗವನ್ನು ಸಹ ಭಗವದ್ಭಕ್ತಿಯೊಂದಿಗೆ ಪ್ರಾರ್ಥಿಸುತ್ತಾರೆ. ಅಂತಹ ಪರಮೈಕಾನ್ತಿಗಳೊಂದಿಗೆ ಸಂಸರ್ಗವು ನಿರತಿಶಯಸುಖಕ್ಕೆ ದ್ವಾರಭೂತವಾದುದರಿಂದಲೇ ಅಂತವರ ಮನೆಯಲ್ಲಿ ಒಂದು ಕೀಟ ಜನ್ಮವೂ ಕೂಡ ಉತ್ತಮವು ಎಂದು ಹೇಳಿ ಉತ್ತರಾರ್ಧದಲ್ಲಿ ಅಪ್ರಪನ್ನ ಸಂಸರ್ಗವಿರುವ ಚತುರ್ಮುಖಾದಿ ಉತ್ಕೃಷ್ಟ ಜನ್ಮವೂ ಬೇಡವೆನ್ನುತ್ತಾರೆ. ದಾಸ್ಯ ಸುಖೈಕಸಂಗಿನಾಂ ಎಂಬುದರಿಂದ ಅವರುಗಳು ವಿಷಯ ಸುಖ ಸಂಗಿಗಳಲ್ಲವೆಂದು ಹೇಳಿದಂತಾಯಿತು. ಪರಮೈಕಾನ್ತಿಗೆ ಇದು (ವಿಷಯ ಸುಖ ಸಂಗವು) ಸ್ವರೂಪ ಯೋಗ್ಯವಲ್ಲವೆಂದು ನಿಂದಿಸಲ್ಪಟ್ಟಿರುತ್ತದೆ. "ಏಕಾನ್ತಶೀಲಸ್ಯ ದೃಢವ್ರತಸ್ಯ ಪಂಚೇಂದ್ರಿಯ ಪ್ರೀತಿ ನಿವರ್ತಕಸ್ಯ । ಅಧ್ಯಾತ್ಮವಿದ್ಯಾ ಗತಮಾನಸಸ್ಯ ಮೋಕ್ಷೋಧ್ರುವೋನಿತ್ಯಮ ಹಿಂಸಕಸ್ಯ." ಪರಮಾತ್ಮನನ್ನೇ ಸದಾ ಚಿಂತಿಸುವವನಾಗಿ, ಶಾಸ್ತ್ರರೀತ್ಯಾ ನಡೆಯಬೇಕೆಂಬ ದೃಢವ್ರತನಾಗಿ ಐದು ಇಂದ್ರಿಯಗಳ ಪ್ರೀತಿಯಿಂದಲೂ ನಿವರ್ತಿಸಿರುವ ಆತ್ಮೋಜ್ಜೀವನ ವಿದ್ಯೆಯಲ್ಲಿ ಸಕ್ತವಾದ ಮನಸ್ಸುಳ್ಳ ಮತ್ತು ಪ್ರಾಣಿ ಮಾತ್ರಕ್ಕೆ ಹಿಂಸೆ ಮಾಡದಿರುವವನಿಗೆ ಮೋಕ್ಷವೆಂಬುದು ಸಿದ್ಧವು. ಹೀಗೆ ವಿಷಯ ವೈರಾಗ್ಯದಿಂದಿರುವವರು ತನ್ನಿಂದಲೂ ಇತರರಿಂದಲೂ ಶ್ಲಾಘಿಸಲ್ಪಡುವವರೆಂದು ಹೇಳಲ್ಪಟ್ಟಿರುತ್ತದೆ. "ಮದ್ಭಕ್ತಜನವಾತ್ಸಲ್ಯಂ ಪೂಜಾಯಾಂ ಚಾನುಮೋದನಂ । ಮತ್ಕಥಾಶ್ರವಣೇ ಭಕ್ತಿ: ಸ್ವರ ನೇತ್ರಾಂಗ ವಿಕ್ರಿಯಾ । ಸ್ವಯಮಾರಾಧನೇಯತ್ನೋ ಮಮಾರ್ಥೇದಂಭ ವರ್ಜನಂ । ಮಮಾನುಸ್ಮರಣಂ ನಿತ್ಯಂ ಯೋಚನಾಂ ನೋಪಜೀವತಿ । ಭಕ್ತಿ ರಷ್ಟವಿಧಾ ಹ್ಯೇಷಾ ಯಸ್ಮಿನ್ ಮ್ಲೇಚ್ಛೇಪಿ ವರ್ತತೇ । ಸವಿಪ್ರೇಂದ್ರೋ ಮುನಿ ಶ್ರೀಮಾನ್ ಸಯತಿಃ ಸಚ ಪಂಡಿತಃ । ತಸ್ಮೈದೇಯಂ ತತೋಗ್ರಾಹ್ಯಂ ಸಚ ಪೂಜ್ಯೋಯಥಾಹ್ಯಹಂ ॥" ಇವು ಗರುಡಪುರಾಣ ವಾಕ್ಯಗಳು. ಇದರ ಅರ್ಥಕ್ಕೆ ದಾಸನು ಅಚ್ಚು ಹಾಕಿಸಿರುವ ಪುರುಷಾರ್ಥ ಕಾಷ್ಠಾಧಿಕಾರದ ೧೩೬ನೆಯ ಪುಟವನ್ನು ನೋಡಿ.

ಇವುಗಳಿಗೆ ಸರಿಯಾದ ಅರ್ಥಗಳನ್ನು ಶ್ರೀದೇಶಿಕರವರೇ ಪ್ರಭಾವ ವ್ಯವಸ್ಥಾಧಿಕಾರದಲ್ಲಿ ಉಪಪಾದಿಸಿರುತ್ತಾರೆ. ೨೫೫೮-೯ ನೆಯ ಪುಟಗಳನ್ನು ನೋಡಿ. ಮೋಕ್ಷಧರ್ಮದಲ್ಲೂ **"ಬ್ರಹ್ಮಾದಿಭಿರ್ಯೋಪಿ ಭಕ್ತ್ಯಾನ್ವೈ ಪರಯಾ ಯತ್ಪ್ರಯುಜ್ಯತೇ । ತತ್ಸರ್ವಂ ದೇವದೇವಸ್ಯ ಚರಣೌ ಪ್ರಣಾಪತಿಷ್ಠತೇ ॥** ಚತುರ್ಮುಖ ಬ್ರಹ್ಮ ಮೊದಲಾದವರುಗಳಿಂದ ಯಾವುದು ಶ್ರೇಷ್ಠವಾದ ಭಕ್ತಿಯಿಂದ ಸಮರ್ಪಿಸಲ್ಪಡುತ್ತದೋ ಅವೆಲ್ಲವೂ ದೇವ ದೇವನ ಪಾದಗಳನ್ನು ಹೋಗಿ ಸೇರುತ್ತವೆ, ಎಂದಾರಂಭಿಸಿ ಅನಂತರ **"ಯಾಃ ಕ್ರಿಯಾಃ ಸಂಪ್ರಯುಕ್ತಾಸ್ಸ್ಯುಃ ಏಕಾನ್ತಗತಬುದ್ಧಿಭಿಃ । ತಾಸ್ಸರ್ವಾ ಶ್ಶಿರಸಾದೇವಃ ಪ್ರತಿಗೃಹ್ಣಾತಿ ವೈ ಸ್ವಯಂ"** ಯಾವ ಭಗವದಾರಾಧನ ರೂಪಕ್ರಿಯೆಗಳು ಏಕಾನ್ತವನ್ನು ಹೊಂದಿರುವ ಬುದ್ಧಿಯನ್ನು ಹೊಂದಿರುವುದರಿಂದ ಚೆನ್ನಾಗಿ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ಸಮರ್ಪಿಸಲ್ಪಡುವುವೋ ಅವೆಲ್ಲವನ್ನೂ ಸ್ವಾಮಿಯು ತಾನೇ ಶಿರಸಾ ಅಂಗೀಕರಿಸುವನೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ ಇನ್ನೊಂದು ಕಡೆಯಲ್ಲಿಯೂ **"ಅಹೋಹ್ಯೇಕಾನ್ತಿನಸ್ಸರ್ವಾನ್ ಪ್ರೀಣಾತಿ ಭಗವಾನ್ ಹರಿಃ । ವಿಧಿಪ್ರಯುಕ್ತಾಂ ಪೂಜಾಂ ಚ-ಗೃಹ್ಣಾತಿ ಶಿರಸಾ ಸ್ವಯಂ"** ಎಂದು ಆ ಅಭಿಪ್ರಾಯವೇ ಹೇಳಲ್ಪಟ್ಟಿರುತ್ತದೆ. ಆದರೆ ಆ ಪೂಜೆಯು ವಿಧಿಪ್ರಯುಕ್ತವಾಗಿ ಎಂದರೆ ಶಾಸ್ತ್ರೋಕ್ತವಾಗಿರಬೇಕು ಎಂಬ ಭಾವವು. ಇವೆಲ್ಲಾ ಸಮರ್ಪಣ ರೂಪ ಕಾರ್ಯವು. ಸ್ವಾಮಿಯು ಪರಿಗ್ರಹಿಸಬೇಕಾದರೆ, ಅವು ತುಂಬಾ ಭಕ್ತಿಯಿಂದ ಸಮರ್ಪಿಸಲ್ಪಡತಕ್ಕದ್ದೆಂದು **"ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾ ಪ್ರಯಚ್ಛತಿ । ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ"** ಎಂಬಲ್ಲಿ ಹೇಳಿರುವ ಹಾಗೆ ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿತು. ಪರಮೈಕಾನ್ತಿ ಸಂಸರ್ಗದ ಮಾಹಾತ್ಮ್ಯಕ್ಕಾಗಿ ಅನೇಕ ಪ್ರಮಾಣಗಳನ್ನೂ ಉದಾಹರಿಸಿದೆ.

**"ಸಂಭಾಷಾ ದರ್ಶನಂ ಸ್ಪರ್ಶಃ ಕೀರ್ತನಂ ಸ್ಮರಣಂ ನತಿಃ ।**
**ಪಾವನಾನಿ ಕಿಲೈತಾನಿ ಸಾಧೂನಾಮಿತಿ ಶುಶ್ರುಮ ॥"**

ಸಾಧುಗಳೊಂದಿಗೆ ಸಂಭಾಷಣೆಯೂ, ಅವರುಗಳ ದರ್ಶನವೂ ಅವರನ್ನು ಸ್ಪರ್ಶಿಸುವುದೂ (ಮೈಯ್ಯನ್ನುಜ್ಜಿ ಸ್ನಾನಾದಿಗಳನ್ನು ಮಾಡಿಸುವುದು) ಅವರುಗಳ ಗುಣಕೀರ್ತನವೂ, ಅವರನ್ನು ಧ್ಯಾನಿಸುವುದೂ, ಅವರಿಗೆ ನಮಸ್ಕರಿಸುವುದು, **ಏತಾನಿ**—ಇವುಗಳೆಲ್ಲಾ, **ಪಾವನಾನಿಕಿಲ**—ಪಾಪವನ್ನು ಹೋಗಲಾಡಿಸಿ ಪರಿಶುದ್ಧಿಯನ್ನು ಮಾಡುವಂತಹವಲ್ಲವೇ ? ಹಾಗೆ ತಾನೇ ನಾವು ಕೇಳಿರುವುದು "

**"ಸೇವ್ಯಾಃ ಸೇವ್ಯಾರ್ಥಿಭಿಸ್ಸನ್ತಃ ಪುಣ್ಯತೀರ್ಥ ಫಲೋಪಮಾಃ ।**
**ಕ್ಷಣೋಪಾಸನ ಯೋಗೋಽಪಿ ನತೇಷಾಂ ನಿಷ್ಫಲೋಭವೇತ್ "**

**ಪುಣ್ಯತೀರ್ಥ ಫಲೋಪಮಾ :**—ಪುಣ್ಯತೀರ್ಥಗಳಲ್ಲಿ ಅವಗಾಹನೆಯಿಂದುಂಟಾಗುವ ಫಲಕ್ಕೆ ಸಮಾನಗಳಾದ, ಎಂದರೆ ಅವುಗಳ ಹಾಗೆ ಪಾಪ

ಪರಿಹಾರ ಮಾಡುವ ಶಕ್ತಿಯುಳ್ಳ, ಸತ್ಪುರುಷರು ಶ್ರೇಯಸ್ಸನ್ನು ಅಪೇಕ್ಷಿಸುವವರಿಂದ ಸೇವಿಸಲ್ಪಡಲು ಯೋಗ್ಯರು. ಅವರುಗಳನ್ನು ಒಂದುಕ್ಷಣಕಾಲ ಸೇವಿಸಿದರೂ ಕೂಡ ನಿಷ್ಫಲವಾಗುವುದಿಲ್ಲವು.

**ಸಾಧೂನಾಂ ದರ್ಶನಂ ಪುಣ್ಯಂ ತೀರ್ಥಭೂತಾಹಿ ಸಾಧವಃ।**
**ಕಾಲೇನ ಫಲದಂ ತೀರ್ಥಂ ಸದ್ಯಸ್ಸಾಧು ಸಮಾಗಮಃ"**

ಸಾಧುಗಳ ದರ್ಶನವು ಸುಕೃತ ರೂಪವಾಗಿ ಪವಿತ್ರಕರವು. ಏಕೆಂದರೆ ಸಾಧುಗಳು ಪವಿತ್ರ ಭೂತರಾಗಿ ನಮ್ಮಗಳನ್ನು ಪವಿತ್ರಮಾಡುವವರು. ಪುಣ್ಯ ತೀರ್ಥದಲ್ಲಿ ಅವಗಾಹನೆಯು ಸ್ವಲ್ಪ ಕಾಲದನಂತರ ಫಲಕೊಡುವಂತಾದ್ದು. ಆದರೆ ಸಾಧು ಜನರ ಸಮಾಗಮವು ಒಡನೆ ಫಲ ಕೊಡುವಂತಹದು. ಎಂದರೆ ಅವರು ಕಟಾಕ್ಷಿಸಿದ ಒಡನೆ ಪಾಪಗಳೆಲ್ಲಾ ತೊಲಗುತ್ತವೆ ಎಂಬ ಭಾವವು. ಹಾಗೆಯೇ ಭಾಗವತದಲ್ಲಿ

**" ನಹ್ಯಮ್ಮಯೋನಿ ತೀರ್ಥಾನಿ ನದೇವಾ ಮೃಚ್ಛಿಲಾಮಯಾಃ।**
**ತೇ ಪುನನ್ತ್ಯುರು ಕಾಲೇನ ದರ್ಶನಾ ದೇವ ಸಾಧನಃ"**

ಜಲರೂಪಗಳಾದ ಪುಣ್ಯ ತೀರ್ಥಗಳು ಎಂದರೆ ಅವುಗಳಲ್ಲಿ ಅವಗಾಹನೆಯೂ ಮತ್ತು ದೇವಾಲಯದಲ್ಲಿರುವ ಮೃತ್, ಶಿಲಾ, ಇವುಗಳಿಂದ ಮಾಡಲ್ಪಟ್ಟ ದಿವ್ಯ ಮಂಗಳ ವಿಗ್ರಹಗಳನ್ನು ಧರಿಸಿರುವ ಮೂರ್ತಿಗಳೂ ಬಹುಕಾಲ ಸೇವಾನನ್ತರ ನಮ್ಮ ಪಾಪಗಳನ್ನು ಹೋಗಲಾಡಿಸುತ್ತವೆ. ಸಾಧುಗಳಾದರೋ ಅವರ ದರ್ಶನ ಮಾತ್ರದಿಂದಲೇ ಪಾಪಗಳನ್ನು ಹೋಗಲಾಡಿಸಿ ಪವಿತ್ರತೆಯನ್ನುಂಟು ಮಾಡಬಲ್ಲರು. "ವಿಪಶ್ಚಿತೋ ಘ್ನಂತಿ ಮುಹೂರ್ತ ಸೇವಯಾ" ಹಿಂದೆ ಪಾಪಗಳನ್ನು ಎಂದಿರುತ್ತದೆ. ಆ ಪಾಪಗಳನ್ನೆಲ್ಲಾ ಮಹಾಜ್ಞಾನಿಗಳಾದ ಭಾಗವತೋತ್ತಮರು ಒಂದು ಮುಹೂರ್ತ ಸೇವೆಯಿಂದ ನಾಶಮಾಡುತ್ತಾರೆಂಬ ಭಾಗವತೋಕ್ತಿ ಇರುತ್ತದೆ. ಸ್ವಾಮಿ ದೇಶಿಕರವರು ಅಂತಹ ಭಾಗವತನಿರುವ ಸ್ಥಳವು, **"ತದಕ್ಷತೆ ತಪೋವನಂ ತವಚ ರಾಜಧಾನೀಸ್ಥಿರಾ"** ಬದರಿಕಾದಿ ಪುಣ್ಯಕ್ಷೇತ್ರಕ್ಕೂ ಸಮಾನವೆಂದೂ ಅದು ದಿವ್ಯ ವೈಕುಂಠವೇ ಎಂದೂ ಅಭೀತಿಸ್ತವದಲ್ಲಿ ಹೇಳಿರುತ್ತಾರೆ. ಹಾಗೆಯೇ

**" ಸದ್ಭಿರೇವ ಸಹಾಸೀತ ಸದ್ಭಿಃ ಕುರ್ವೀತ ಸಂಗಮಮ್।**
**ಸದ್ಭಿರ್ವಿವಾದಂ ಮೈತ್ರೀಂಚ ನಾಸದ್ಭಿಃ ಕಿಂಚಿದಾಚರೇತ್"**

ಸತ್ಪುರುಷರಾದ ಭಾಗವತರೊಂದಿಗೇ ಇರತಕ್ಕದ್ದು, ಅವರೊಂದಿಗೆ ಸಮಾಗಮವನ್ನು ಮಾಡತಕ್ಕದ್ದು. ಅವರೊಂದಿಗೆ ಚರ್ಚೆಯನ್ನು ಮಾಡಬಹುದು. ಮೈತ್ರಿಯನ್ನು ಅಪೇಕ್ಷಿಸತಕ್ಕದ್ದು. ಸತ್ಪುರುಷರಲ್ಲದವರೊಡನೆ ಯಾವ ವಿಧವಾದ ವ್ಯಾಪಾರವೂ ಕೂಡದು.

**"ಅಹನ್ಯಹನಿ ಧರ್ಮಸ್ಯ ಯೋನಿಸ್ಸಾಧುಸಮಾಗಮಃ ।**
**ಮೋಹಜಾಲಸ್ಯ ಯೋನಿರ್ಹಿ ಮೂಢೈರೇವ ಸಮಾಗಮಃ"**

ಸಾಧುಗಳೊಂದಿಗೆ ಸಮಾಗಮವು ಪ್ರತಿದಿನದಲ್ಲೂ ಧರ್ಮಾಚರಣೆಗೆ ಕಾರಣವಾಗುತ್ತದೆ. ಹಾಗಲ್ಲದೆ ಮೂಢರೊಂದಿಗೆ ಸಮಾಗಮವು ಮೋಹಪರಂಪರೆಗಳಿಗೆ ಕಾರಣವಾಗುತ್ತದೆ **"ವಾಸೋ ಯಥಾ ರಾಗವಶಂ ಪ್ರಯಾತಿ ತಥಾ ಸತಾಂ ವಶಮಭ್ಯುಪೈತಿ । ಸತ್ಸನ್ನಿಕರ್ಷೇ ಪರಿವರ್ತಿತವ್ಯಂ ವಿದ್ಯಾಧಿಕಾರಾಪಿ ನಿಷೇವಣೀಯಾಃ"** ಬಟ್ಟೆಯು ಹೇಗೆ ಬಣ್ಣವನ್ನು ಕೊಡುವ ದ್ರವ್ಯಕ್ಕೆ ವಶವಾಗಿ ಆ ಬಣ್ಣವನ್ನೇ ಹೊಂದುತ್ತದೋ, ಹಾಗೆಯೇ ವಿದ್ಯಾಧಿಕರಾದರೂ ಕೂಡ ಸತ್ಪುರುಷರ ಸಾನ್ನಿಧ್ಯದಲ್ಲೇ ಇದ್ದು ಅವರ ವಶವನ್ನು ಹೊಂದಿ ಸತ್ಪುರುಷರಾಗತಕ್ಕದ್ದು. **"ಸುವರ್ಣತಾಂ ಗಚ್ಛತಿಸನ್ನಿಕರ್ಷಾನ್ನಿಲಃ ಖಗೋ ಮೇರುಮಿವಾಶ್ರಯನ್ನೈ"** ಸುವರ್ಣ ಪರ್ವತವಾದ ಮೇರುವನ್ನು ಆಶ್ರಯಿಸುವುದರಿಂದ ಅದರ ಮೇಲೆ ಕೂತಿರುವ ಕಪ್ಪಾದ ಪಕ್ಷಿಯು ಸುವರ್ಣದ ವರ್ಣವನ್ನು ಹೇಗೆ ಹೊಂದುತ್ತದೋ ಹಾಗೆಯೇ ಸಾಧುಗಳೊಂದಿಗೆ ಸಮಾಗಮವು ಎಂಬ ಭಾವವು. ಈ ಶ್ಲೋಕದಲ್ಲಿ ನಿಕೃಷ್ಟಕೀಟ ಜನ್ಮವನ್ನು ಹೇಳಿದುದನ್ನೇ **"ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋ ಭಿಜಾಯತೇ"** ಎಂದು ಗೀತೆಯಲ್ಲಿ ಕರ್ಮಯೋಗವನ್ನು ಆರಂಭಿಸಿದ ಸುಕೃತಿಯೂ ಕೆಡುವುದಿಲ್ಲವು. ಮುಂದಿನ ಜನ್ಮದಲ್ಲಿ ಯೋಗಾರಮ್ಭಸರ್ವಾನುಕೂಲವಿರುವ ಶ್ರೀಮಂತನ ಮನೆಯಲ್ಲಿ ಆ ಸುಕೃತಿಯು ಜನಿಸುತ್ತಾನೆಂದು ಹೇಳಿರುತ್ತದೆ. ಇದು ಹಾಗಿರಲಿ, ಜ್ಞಾನ ಶೂನ್ಯವಾದ ಪಶುಪಕ್ಷಿಗಳೆಲ್ಲಾ ಪರಮೈಕಾನ್ತಿಯು ಮಾಡುವ ಶರಣಾಗತಿಯಲ್ಲೇ ಅಂತರ್ಗತರಾಗಿ ಆ ಪರಮೈಕಾನ್ತಿಯೊಡನೇ ಮೋಕ್ಷವನ್ನು ಹೊಂದುವರೆಂದು **"ಪಶುರ್ಮನುಷ್ಯಃ ಪಕ್ಷೀವಾ ಯೇಚ ವೈಷ್ಣವ ಸಂಶ್ರಯಾಃ । ತೇನೈವ ತೇಪ್ರಯಾಸ್ಯನ್ತಿತದ್ವಿಷ್ಣೋಃ ಪರಮಂಪದಂ"** ಎಂಬಲ್ಲಿ ಹೇಳಿರುವುದನ್ನನುಸರಿಸಿ ಇಲ್ಲಿ ಕೀಟ ಜನ್ಮವೆಂದು ಹೇಳಿ ಶಾಸ್ತ್ರಾರ್ಥವನ್ನು ಪ್ರಕಟಿಸಿದರು. ಹಿಂದೆ ಇರುವ **ಅಪಿ** ಶಬ್ದದಿಂದ ದೃಢನಿಶ್ಚಯವು ಬೋಧಿತವು. ಇದರಲ್ಲಿ ಸಂಶಯವು ಸ್ವಲ್ಪವೂ ಇಲ್ಲವೆಂಬ ಭಾವವು. ಸರ್ವೇಶ್ವರನೇ ತನ್ನ ಭಕ್ತರ ಭಕ್ತರಲ್ಲಿ ತನಗೆ ವಿಶೇಷ ಪ್ರೀತಿಯೆಂದು ಹೇಳಿಕೊಂಡಿರುತ್ತಾನೆ. **"ಮಮ ಮದ್ಭಕ್ತಭಕ್ತೇಷು ಪ್ರೀತಿರಭ್ಯಧಿಕಾಭವೇತ್ । ತಸ್ಮಾನ್ಮದ್ಭಕ್ತಭಕ್ತಾಶ್ಚ ಪೂಜನೀಯಾ ವಿಶೇಷತಃ"** ಎಂದು ಹೇಳಲ್ಪಟ್ಟಿರುತ್ತದೆ. ಇತಿಹಾಸ ಸಮುಚ್ಚಯದಲ್ಲಿ **"ತಸ್ಮಾದ್ವಿಷ್ಣು ಪ್ರಸಾದಾಯ ವೈಷ್ಣವಾನ್ ಪರಿತೋಷಯೇತ್। ಪ್ರಸಾದಸುಮುಖೋವಿಷ್ಣುಃ ತೇನೈವಸ್ಯಾನ್ನ ಸಂಶಯಃ"** ಆ ಕಾರಣದಿಂದ ವಿಷ್ಣುವಿನ ಪ್ರಸನ್ನತೆಗಾಗಿ ವಿಷ್ಣು ಭಕ್ತರನ್ನು ಅವರಿಗೆ ಮಾಡುವ ಕೈಂಕರ್ಯದಿಂದಲೂ ಸಚ್ಚರಿತ್ರೆಗಳಿಂದಲೂ ಅವರುಗಳನ್ನು ಪ್ರಕಾಶಪಡಿಸುವುದೇ ಮೊದಲಾದುವುಗಳಿಂದಲೂ ಸಂತೋಷಪಡಿಸತಕ್ಕದ್ದು. ಹಾಗೆ ಅನುಗ್ರಹಮಾಡಬೇಕೆಂಬುದನ್ನೇ ಎದುರು ನೋಡುತ್ತಿರುವ ವಿಷ್ಣುವು, ಆ ತನ್ನ ಭಕ್ತರ ಕೈಂಕರ್ಯಾದಿ

ಗಳಿಂದಲೇ ಪ್ರೀತನಾಗುವನು. ಇದರಲ್ಲಿ ಸಂದೇಹವಿಲ್ಲವು. ಶಾಂಡಿಲ್ಯಸ್ಮೃತಿಯಲ್ಲಿ **"ಸಿದ್ಧಿರ್ಭವತಿ ವಾ ನೇತಿ ಸಂಶಯೋ ಚ್ಯುತಸೇವಿನಾಂ । ನ ಸಂಶಯೋತ್ರ ತದ್ಭಕ್ತ ಪರಿಚರ್ಯಾರತಾತ್ಮನಾಂ''** ಅಚ್ಯುತನನ್ನು ಸೇವಿಸುವವರಿಗೆ ಸಿದ್ಧಿಯು ಉಂಟೋ ಇಲ್ಲವೋ ಎಂಬ ಸಂದೇಹವಿದ್ದರೂ ಇರಬಹುದು. ಆದರೆ ಆತನ ಭಕ್ತರ ಕೈಂಕರ್ಯದಲ್ಲಿ ನಿರತರಾಗಿರುವವರಿಗೆ ಸಿದ್ಧಿಯ ವಿಷಯದಲ್ಲಾದರೋ ಸಂಶಯವು ಇಲ್ಲವೇ ಇಲ್ಲವು **"ಕೇವಲಂ ಭಗವತ್ಪಾದಸೇವಯಾ ವಿಮಲಂ ಮನಃ। ನಜಾಯತೇ ಯಥಾ ನಿತ್ಯಂ ತದ್ಭಕ್ತ ಚರಣಾರ್ಚನಾತ್''** ಪ್ರತಿನಿತ್ಯವೂ ಭಗವದ್ಭಕ್ತರ ಪಾದಾರ್ಚನದಿಂದ ಮನಸ್ಸು ಪರಿಶುದ್ಧವಾಗುವಷ್ಟು ಕೇವಲ ಭಗವತ್ಪಾದ ಸೇವೆಯಿಂದ ಮಾತ್ರವೇ ಆಗುವುದಿಲ್ಲವು. ಎಂದು ಹೇಳಲ್ಪಟ್ಟಿರುತ್ತದೆ. ಶ್ರೀ ಪೌಷ್ಕರದಲ್ಲಿ **ದುರ್ಲಭಾ ಭಗವದ್ಯೋಗ ಭಾವಿನೋ ಭುವಿಮಾನವಾಃ । ತದ್ದರ್ಶನಾತ್ತದಾಲಾಪಾತ್ಸು ಲಭಂ ಶಾಶ್ವತಂ ಪದಂ''** ಈ ಲೋಕದಲ್ಲಿ ಭಗವಂತನಲ್ಲಿ ಭಕ್ತಿಯೋಗವನ್ನು ಕೈಕೊಂಡ ಮನುಷ್ಯರು ತುಂಬಾ ದುರ್ಲಭರು. ಅಂತವರು ಒಂದು ವೇಳೆ ಲಭಿಸಿದರೆ ಅವರ ದರ್ಶನದಿಂದ ಅವರೊಂದಿಗೆ ಸಂಭಾಷಣೆಯಿಂದ ದಿವ್ಯ ವೈಕುಂಠದಲ್ಲಿನ ಶಾಶ್ವತವಾದ ಪದವು ಸುಲಭವಾಗಿ ದೊರೆಯುತ್ತದೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ **ಆರಾಧನಾನಾಂ ಸರ್ವೇಷಾಂ ವಿಷ್ಣೋ ರಾಧನಂ ಪರಂ । ತಸ್ಮಾತ್ಪರತರಂ ಪ್ರೋಕ್ತಂ ತದೀಯಾರಾಧನಂ ಪರಮ್''** ಅನ್ಯದೇವತೆಗಳ ಸಮಸ್ತ ಆರಾಧನೆಗಳಿಗಿಂತಲೂ ವಿಷ್ಣುವಿನ ಆರಾಧನವು ಶ್ರೇಷ್ಠವಾದುದು. ಅದಕ್ಕೂ ಶ್ರೇಷ್ಠವಾದುದು ವಿಷ್ಣು ಭಕ್ತರ ಆರಾಧನೆಯು **ತಸ್ಯ ಯಜ್ಞವರಾಹಸ್ಯ ವಿಷ್ಣೋ ರಮಿತತೇಜಸಃ । ಪ್ರಣಾಮಂ ಯೇಪಿ ಕುರ್ವನ್ತಿ ತೇಷಾಮಪಿ ನಮೋನಮಃ''** ಯಜ್ಞಸ್ವರೂಪನಾದ ಅಂದರೆ ಯಜ್ಞಹವಿಸ್ಸುಗಳ ಭೋಕ್ತೃವಾದ ವರಹಾ ರೂಪಿಯಾಗಿ ಇಷ್ಟೆಂದು ಹೇಳಲು ಸಾಧ್ಯವಿಲ್ಲದ ತೇಜಸ್ಸನ್ನುಳ್ಳ ವಿಷ್ಣುವಿಗೆ ಯಾರು ಪ್ರಣಾಮ ಮಾಡುವ ಭಾಗವತರಿದ್ದಾರೋ ಅವರಿಗೂ ಕೂಡ ಪುನಃ ಪುನಃ ನಮಸ್ಕಾರವು ಎಂದೂ ಹೇಳಲ್ಪಟ್ಟಿರುತ್ತದೆ. ಹೀಗೆ ಅನೇಕ ಪ್ರಮಾಣಗಳನ್ನು ಅವಲೋಕಿಸತಕ್ಕದ್ದು.

**"ಇತರಾವಸಥೇಷುಮಾಸ್ಮ ಭೂದಪಿ ಮೇ ಜನ್ಮ ಚತುರ್ಮುಖಾತ್ಮನಾ–** ಅಪ್ರಪನ್ನರ ಸಮಾಗಮವಿರುವ ಚತುರ್ಮುಖ ರೂಪದಲ್ಲಿ ಜನ್ಮವೂ ಕೂಡ ಬೇಡವೆಂದು ಹೇಳಿರುವುದರಿಂದ ದೇವತೆಗಳ ಮೂಲ ಪುರುಷನಾಗಿ ಜನ್ಮವೂ ಬೇಡವೆಂಬುದರಿಂದ ಅಂತಹ ಮಾನುಷ ಜನ್ಮವಂತೂ ಬೇಡವೆಂದೇ ಹೇಳಿದಂತಾಯಿತು. ಅಪ್ರಪನ್ನರ ಸಮಾಗಮವು ಇತರರಿಗೆ ಹೇಗಾದರೂ ಆಗಲಿ. ನನ್ನ ಮುಖ್ಯ ಪ್ರಾರ್ಥನೆಯಾದರೋ ಅಂತವರ ಸಂಸರ್ಗವು ನನಗೆ ಸುತರಾಂ ಬೇಡವೆಂದು **ಮೇ** ಎಂಬುದನ್ನು ಉತ್ತರಾರ್ಧದಲ್ಲೂ ಪುನಃ ಪ್ರಯೋಗಿಸಿರುತ್ತಾರೆ. ಇದರಿಂದ ಭಾಗವತ್ತೋತ್ತಮರು ಅಭಾಗವತರ ಸಂಸರ್ಗವನ್ನು ಎಂದಿಗೂ ಮಾಡ

ರೆಂಬುದು ವಿದಿತವು. ಹಾಗೆಯೇ ಬಹ್ವೃಚ ಶ್ರುತಿಯೂ **"ನೇದಂವಿದವಿದಂ ವಿದಾ ಸಮುದ್ದಿಶೇನ್ನ ಸಹಭುಂಜೀತ ನಾವಸಥಮಾ ವಿಶ್ಯಾತ್"** ಈ ವಸ್ತುವನ್ನು ಎಂದರೆ ಪರಬ್ರಹ್ಮನನ್ನು ತಿಳಿದವನು ಅವನನ್ನು ತಿಳಿಯದ ಅಜ್ಞಾನಿಯೊಂದಿಗೆ ಕೂತುಕೊಳ್ಳಕೂಡದು. ಅವನೊಂದಿಗೆ ಊಟ ಮಾಡಬಾರದು. ಅವನಿರುವ ಸ್ಥಳದಲ್ಲಿ ವಾಸಮಾಡಬಾರದು ಎಂದು ವಿಧಿಸಿರುತ್ತದೆ ಹಾಗೆಯೇ ಸ್ಮೃತಿಯಲ್ಲೂ **"ಶೈವಾನ್ ಪಾಶುಪತಾನ್‌ಸ್ಪೃಷ್ಟ್ವಾ ಲೋಕಾಯತಿಕ ನಾಸ್ತಿಕಾನ್ ವಿಕರ್ಮಸ್ಥಾನ್ ದ್ವಿಜಾನ್ ಶೂದ್ರಾನ್ ಸಹಸಾ ಜಲಮಾವಿಶೇತ್"** ಶೈವರನ್ನೂ ಪಾಶುಪಾತರನ್ನೂ ನಾಸ್ತಿಕರನ್ನೂ ವರ್ಣಾಶ್ರಮ ಧರ್ಮಗಳಿಗೆ ವಿರುದ್ಧಾಚರಣೆಗಳನ್ನುಳ್ಳ ಬ್ರಾಹ್ಮಣರನ್ನೂ ಶೂದ್ರರನ್ನೂ ಸ್ಪರ್ಶಿಸಿದ ದೋಷವುಂಟಾದರೆ ಒಡನೆಯೇ ಸಚೇಲ ಸ್ನಾನವನ್ನು ಮಾಡತಕದ್ದೆಂದಿದೆ. ಪುನಃ **"ಅಸತಾಂ ದರ್ಶನಾತ್ಸ್ಪರ್ಶಾತ್ಸಂಪರ್ಕಾಚ್ಚ ಸಹಾಸನಾತ್। ಧರ್ಮಾಚಾರಾಃ ಪ್ರಣಶ್ಯಂತಿ ಯಥಾ ಸೈಕತ ಮಂಭಸಾ"** ಆ ಸಾಧುಜನಗಳ ನೋಟಗಳಿಂದಲೂ ಸ್ಪರ್ಶದಿಂದಲೂ ಸಂಪರ್ಕದಿಂದಲೂ ಅವರೊಂದಿಗೆ ಆಸನದಲ್ಲಿ ಕೂಡುವುದರಿಂದಲೂ ನೀರಿನ ಹೊಡೆತದಿಂದಲೂ ಮರಳು ಕೊಚ್ಚಿಕೊಂಡು ಹೋಗುವ ಹಾಗೆ ವರ್ಣಾಶ್ರಮ ಧರ್ಮಗಳಿಂದ ಕೂಡಿದ ಆಚಾರಗಳೆಲ್ಲಾ ನಾಶ ಹೊಂದುತ್ತವೆಂದು ಹೇಳಲ್ಪಟ್ಟಿದೆ.

ಶಾಂಡಿಲ್ಯ ಸ್ಮೃತಿಯಲ್ಲಿ **"ಮೂಢೈಃ ಪಾಪರತೈಃ ಕ್ರೂರೈಃ ಸದಾಗಮ ಪರಾಙ್ಮುಖೈಃ। ಸಂಬಂಧಂ ನಾಚರೇದ್ಭಕ್ತಃ ನಶ್ಯತ್ಯೇತೈಸ್ಸಂಗಮಾತ್"** ಅಜ್ಞಾನಿಗಳೊಂದಿಗೂ, ಪಾಪಮಾಡುವುದರಲ್ಲಿ ಆಸಕ್ತಿಯುಳ್ಳವರೊಂದಿಗೂ ಕ್ರೂರ ಸ್ವಭಾವವುಳ್ಳವರೊಂದಿಗೂ ಸಚ್ಛಾಸ್ತ್ರ ಪರಾಙ್ಮುಖರೊಂದಿಗೂ ಸಂಬಂಧವನ್ನು ಅನುಷ್ಠಿಸತಕ್ಕದ್ದಲ್ಲವು. ಹಾಗೆ ಅವರೊಂದಿಗೆ ಸಂಬಂಧ ಹೊಂದಿದರೆ ಅವುಗಳಿಂದ ಪರಮಾತ್ಮನಲ್ಲಿ ಭಕ್ತಿಯು ನಾಶವಾಗುತ್ತದೆ ಎಂದಿರುತ್ತದೆ.

ವಿಷ್ಣು ಪುರಾಣದಲ್ಲೂ **"ಪುಂಸಾಂ ಜಟಾಭರಣ ಮೌಂಡ್ಯರತಾಂ ವೃಥೈವ ಮೋಘಾಶಿನಾಮಖಿಲ ಶೌಚ ಬಹಿಷ್ಕೃತಾನಾಂ। ತೋಯಪ್ರದಾನ ಪಿತೃಪಿಂಡ ವಿನಾಕೃತಾನಾಂ ಸಂಭಾಷಣಾದಪಿ ನರಾ ನರಕಂಪ್ರಯಾನ್ತಿ"** ಕಾರಣವಿಲ್ಲದೇನೇ ಇತರರನ್ನು ಮರುಳು ಮಾಡುವುದಕ್ಕಾಗಿ ಜಡೆಯನ್ನು ಬೆಳೆಯಿಸಿ ಧರಿಸಿರುವ, ಕಾರಣವಿಲ್ಲದೆ ತಲೆಕೂದಲನ್ನೆಲ್ಲಾ ತೆಗೆದು ಹಾಕಿ ಬೋಳು ತಲೆಯನ್ನು ಮಾಡಿಕೊಂಡಿರುವವರ, ದೇವಭಾಗವತಾರಾಧನೆಯಿಲ್ಲದೆ ತನ್ನ ಹೊಟ್ಟೆಪಾಡಿಗಾಗಿ ಮಾತ್ರ ಮಾಡಿದ ಅನ್ನವನ್ನು ಭುಜಿಸುವವರ, ಯಾವ ವಿಧವಾದ ಪರಿಶುದ್ಧಿಯೂ ಇಲ್ಲದವರ, ಅಮಾವಾಸ್ಯೆ, ಸಂಕ್ರಮಣ. ಗ್ರಹಣ ದಿನಗಳಲ್ಲಿ ಪಿತೃಗಳಿಗೆ ತರ್ಪಣಾದಿಗಳನ್ನು ಮಾಡದಿರುವ, ಶ್ರಾದ್ಧದಿನಗಳಲ್ಲಿ ಪಿಂಡಪ್ರದಾನ ಮಾಡದಿರುವವರ ಸಂಗಡ ಸಂಭಾಷಣೆ ಮಾಡುವ ಮಾತ್ರದಿಂದಲೂ ಸಹ ಮನುಷ್ಯರು ನರಕಕ್ಕೂ ಹೋಗುವರೆಂಬ ಪ್ರಮಾಣವಿರುತ್ತದೆ.

ಇನ್ನೊಂದು ಕಡೆಯಲ್ಲೂ "ವರಂಹುತವಹ ಜ್ವಾಲಾ ಪಂಜರಾನ್ತರ್ವ್ಯವಸ್ಥಿತಿಃ । ನಶೌರಿಚಿನ್ತಾ ವಿಮುಖ ಜನಸಂವಾಸವೈಶಸಂ" ಅಗ್ನಿಜ್ವಾಲಾ ಮಧ್ಯದೊಳಗಿರುವ ಅವಸ್ಥೆಯಾದರೂ ಉತ್ತಮವು- ಆ ಕೃಷ್ಣನ ಧ್ಯಾನ ವಿಮುಖರೊಂದಿಗಿರುವ ಕ್ಲೇಶವು ಸುತರಾಂ ಬೇಡವೆಂಬ ಹೇಳಿಕೆಯುಂಟು.

ಹಾಗೆಯೇ "ಅದ್ಯಪ್ರಭೃತಿ ಹೇ ಲೋಕಾಃ ಯೂಯಂ ಯೂಯಂ ವಯಂ ವಯಂ। ಅರ್ಥಕಾಮ ಪರಾಯೂಯಂ ನಾರಾಯಣ ಪರಾವಯಂ॥ ನಾಸ್ತಿಸಂಗತಿ ರಸ್ಮಾಕಂ ಯುಷ್ಮಾಕಂಚ ಪರಸ್ಪರಂ । ವಯಂ ತು ಕಿಂಕರಾ ವಿಷ್ಣೋಃ ಯೂಯ ಮಿಂದ್ರಿಯ ಕಿಂಕರಾಃ" ಇನ್ನು ಮುಂದೆ ಓ ಜನಗಳೇ ನಿಮ್ಮಷ್ಟಕ್ಕೆ ನೀವು, ನಮ್ಮಷ್ಟಕ್ಕೆ ನಾವು. ಏಕೆಂದರೆ ನೀವುಗಳು ದ್ರವ್ಯ ಮತ್ತು ಕಾಮನೆಗಳಲ್ಲಿ ಆಶೆಯುಳ್ಳವರು. ನಾವಾದರೋ ನಾರಾಯಣನಲ್ಲಿ ವಿಶ್ವಾಸವುಳ್ಳವರು. ಹೀಗೆ ನಿಮಗೂ ನಮಗೂ ಪರಸ್ಪರ ಯಾವ ಸಂಬಂಧವೂ ಇಲ್ಲವು. ನಾವಾದರೋ ವಿಷ್ಣುವಿಗೆ ದಾಸರು. ನೀವೋ ಇಂದ್ರಿಯಗಳಿಗೆ ದಾಸರು. ಪಿತೃಗಳಿಂದ ಹೇಳಲ್ಪಟ್ಟಿರುವುದೇನೆಂದರೆ "ಮಾಜನಷ್ಟ ಸನೋವಂಶೇ ಜಾತೋ ವಾದ್ರಾಗ್ನಿ ಪದ್ಯತಾಂ । ಅಜನ್ಮ ಮರಣಂ ಯಸ್ಯ ವಾಸುದೇವೋ ನದೈವತಮ್" ಯಾರಿಗೆ ಜನ್ಮ ಪ್ರಭೃತಿ ಮರಣ ಉಂಟಾಗುವವರೆಗೆ ವಾಸುದೇವನೇ ಪರದೇವತೆ ಎಂಬ ಭಾವನೆ ಇಲ್ಲವೋ ಅಂತವನು ನಮ್ಮ ವಂಶದಲ್ಲೇ ಹುಟ್ಟಬೇಡ. ಒಂದು ವೇಳೆ ಹುಟ್ಟಿದರೂ ಒಡನೆಯೇ ಸಾಯಲಿ. ಎಂಬುದಾಗಿ. "ಅವೈದ್ಯಃ ಪ್ರಾಕೃತಃ ಪ್ರೋಕ್ತೋ ವೈದ್ಯೋ ವೈಷ್ಣವ ಉಚ್ಯತೇ । ಅವೈದ್ಯೇನ ನಕೇನಾಪಿ ವೈದ್ಯಃ ಕಿಂಚಿತ್ಸಮಾಚರೇತ್" ಪರಮಾತ್ಮನನ್ನು ತಿಳಿಯದವನು ಪ್ರಾಕೃತ ಮನುಷ್ಯನೆಂದು ನಿಂದಿಸಲ್ಪಟ್ಟಿರುವನು. ಆತನನ್ನು ತಿಳಿದವನಾದರೋ ವೈಷ್ಣವನೆಂದು ಹೊಗಳಲ್ಪಟ್ಟಿರುವನು. ಆದುದರಿಂದ ವೈಷ್ಣವನು ಅವೈಷ್ಣವನೊಂದಿಗೆ ಸರಸಸಲ್ಲಾಪ ಮೊದಲಾದ ಯಾವ ನಡತೆಯನ್ನೂ ಇಡಕೂಡದು. ಹೀಗೆ ವಿಷ್ಣುದಾಸ್ಯ ಮಹಿಮೆಯನ್ನು ತಿಳಿಯದವನೊಂದಿಗೆ ಯಾವ ವಿಧವಾದ ಸಂಬಂಧವೂ ತಮಗೆ ಬೇಡವೆಂದು "ಇತರಾವ ಸಥೇಷು ಮಾಸ್ಮಭೂತ್" ಎಂದು ಹೇಳಿದರು. ಹಿಂದೆ ಭಗವದ್ಭಕ್ತಿಯುಂಟಾಗುವ ಹಾಗೆ ಮಾಡು ಎಂದು ಪ್ರಾರ್ಥಿಸಿದರು. ಇಲ್ಲಿ ಭಾಗವತ ಭಕ್ತಿಯೂ ಅವಶ್ಯಕವೆಂದು ಹೇಳಿದರು. ಏಕೆಂದರೆ ಭಾಗವತ ಸಂಶ್ರಯಣವು ಸಂಸಿದ್ಧಿಗೆ ತುಂಬಾ ಸುಲಭೋಪಾಯವು ಪುರಂದರದಾಸರೂ, ತ್ಯಾಗರಾಜರೂ ಕೂಡ, ಶಬರಿಯು ಮತಂಗ ಋಷಿಯನ್ನು ಆಶ್ರಯಿಸಿದುದರಿಂದ ಶ್ರೀ ರಾಮಾನುಗ್ರಹವನ್ನು ಪಡೆದಳಲ್ಲವೇ ಏನು ಭಾಗ್ಯಮಾಡಿದಳೋ ಎಂದು ಇಬ್ಬರೂ ತಮ್ಮ ಕೃತಿಯಲ್ಲಿ ಕೊಂಡಾಡಿರುತ್ತಾರೆ.

ಆದರೆ ಪರಮೈಕಾನ್ತಿಯ ಮನೆಯಲ್ಲಿ ಕೀಟಜನ್ಮವಾದರೂ ತಮಗೆ ಉಂಟಾಗಲಿ ಎಂದು ಇಲ್ಲಿ ಪ್ರಾರ್ಥಿಸಿರುವುದರಿಂದ ಇವರು ಹಿಂದೆ ಮಾಡಿದ ಶರಣಾಗತಿಯೇ ನಿರರ್ಥಕವಲ್ಲವೋ ? ಏಕೆಂದರೆ ಪುನರ್ಜನ್ಮದ ಮಾತನ್ನು ಎತ್ತಿದುದರಿಂದ ಮಹಾ

ವಿಶ್ವಾಸವೇ ಶರಣಾಗತಿಯ ಕಾಲದಲ್ಲಿ ಇಲ್ಲವೆಂದು ಆಗುವುದಿಲ್ಲವೇ? ಎಂಬ ಪೂರ್ವ ಪಕ್ಷಕ್ಕೆ ಸಮಾಧಾನ ಹೇಗೆಂದರೆ—ಈಗ ತಮಗೆ ಪ್ರಾಪ್ತವಾಗಿರುವ ಉತ್ಕೃಷ್ಟ ಜನ್ಮದ ಮಾತು ಹಾಗಿರಲಿ. ತುಂಬಾ ಭಾಗವತಾಗ್ರೇಸರರಾದ ನಾಥಮುನಿ, ಶ್ರೀ ಉಯ್ಯಕ್ಕೊಂಡಾರ್, ಶ್ರೀ ಮಣಕ್ಕಾಲ್ ನಂಬಿ, ಇಂತಹ ಪರಮೈಕಾನ್ತಿಗಳ ಸಂಬಂಧವೀಗ ಸರ್ವೋತ್ಕೃಷ್ಟವಾದುದು. ಹೀಗೆ ಅಂತಹ ಸಂಬಂಧಕ್ಕಾಗಿ ಮನುಷ್ಯ ನಾಗಿಯೇ ಹುಟ್ಟಬೇಕೆಂಬ ಅವಶ್ಯಕತೆಯೂ ಇಲ್ಲವು. ಅವರುಗಳಿರುವ ಸ್ಥಳಗಳಲ್ಲಿ ಒಂದು ಕೀಟಜನ್ಮವಾದರೂ ಸಾಕು. ಅವರುಗಳ ಸಂಬಂಧದಿಂದ ಅವರೊಂದಿಗೆ ಈ ಕೀಟವಾದ ತಮಗೂ ಕೂಡ ಮೋಕ್ಷ ಉಂಟು. ಶರಣಾಗತಿ ಶಾಸ್ತ್ರದ ಮಹಾತ್ಮ್ಯೆಯು ಹೀಗೆ ನಿರತಿಶಯವಾದುದು, ಎಂದು ತಿಳಿಸಿ, ಭಾಗವತ ಸಮಾ ಶ್ರಯಣವು ಪರಮನಿಶ್ಶ್ರೇಯಸ್ಸನ್ನು ಉಂಟುಮಾಡಬಲ್ಲದೆಂಬ ಶಾಸ್ತ್ರಾರ್ಥವನ್ನು ಇಲ್ಲಿ ಉಪದೇಶಿಸಿರುತ್ತಾರೆ. ಇದನ್ನೇ ಮುಂದೆ ೬೫ನೆಯ ಶ್ಲೋಕದಲ್ಲಿ "**ಪಿತಾ ಮಹಂ ನಾಥಮುನಿಂ ವಿಲೋಕ್ಯ**" ಎಂಬಲ್ಲಿ ಅನುವದಿಸಿ ಹೇಳುತ್ತಾರೆ. ಹೀಗೆ ಸಮಾಧಾನ ಹೇಳಿದ ಪಕ್ಷದಲ್ಲಿ ಮುಂದಿನ ಶ್ಲೋಕದಲ್ಲಿ ಹೇಳಿರುವ, ಅಂತಹ ಪ್ರಪನ್ನರಾಗಿ ಪರಮೈಕಾನ್ತಿಗಳ ಸಂಸರ್ಗದೊರೆತು ತತ್ಫಲವಾಗಿ ಶ್ರೇಯ ಸ್ಸುಂಟಾಗಲಿ ಎಂಬ ಪ್ರಾರ್ಥನೆಯು ವಿರುದ್ಧವಾಗುವುದಿಲ್ಲವೇ ? ಈ ಶ್ಲೋಕದಲ್ಲಿ ಭಾಗವತ ಸಂಬಂಧದ ಮಾಹಾತ್ಮ್ಯೆಯನ್ನುಪಪಾದಿಸಿರುವುದನ್ನೇ ಮುಂದಿನ ಶ್ಲೋಕದಲ್ಲಿ ಬೇಡುತ್ತಾರೆ. ಹೀಗಿರುವಾಗ ಕೀಟಜನ್ಮವನ್ನೆತ್ತಬೇಕೆಂಬ ಆಶೆಯ ಮಾತು ಹೇಗೆ ಕೂಡುತ್ತದೆ ? ಎಂದರೆ, ೨೨ನೆಯ ಶ್ಲೋಕದಿಂದ ಈಚಿನ ಈ ಸ್ತೋತ್ರ ಭಾಗವನ್ನೆಲ್ಲಾ ಶರಣಾಗತಿಯ ಉತ್ತರಕಾಲಕ್ಕೆ ಸೇರಿದು ದೆಂದು ಭಾವಿಸುವುದಕ್ಕೆ ಏನೊಂದೂ ಆಧಾರವಿಲ್ಲವು. ಆಕಿಂಚನ್ಯವನ್ನೂ ಅನನ್ಯ ಗತಿತ್ವವನ್ನೂ ಬೋಧಿಸುವ ಕೆಲವು ಶ್ಲೋಕಗಳಿವೆ ಅವೂ ಶರಣಾಗತಿಯನ್ನು ಅನುಷ್ಠಿಸುವ ಕಾಲದ ಗೋಪ್ತೃತ್ವವರಣದಲ್ಲೇ ಸೇರಿದವೆಂಬ ಭಾವನೆಯಲ್ಲಿ ಏನೊಂದೂ ತೊಂದರೆ ಇಲ್ಲವು. "**ನನುಪ್ರಪನ್ನಃ**" ಎಂಬ ಶ್ಲೋಕದಲ್ಲೂ "**ಕಿಮಿದಂ ವ್ರತಂತೇ**" ಎಂಬ ವಾಕ್ಯವನ್ನು ಉತ್ತರ ಕಾಲದ್ದೆಂದು ಭಾವಿಸಿದರೆ ಉಪಾಯಾನುಷ್ಠಾನ ಕಾಲದಲ್ಲಿ ಮಹಾವಿಶ್ವಾಸಕ್ಕೆ ನ್ಯೂನತೆಯನ್ನು ಭಾವಿಸು ವುದರ ಮೂಲಕ ಮುಖ್ಯವಾದ ಅಂಗವೇ ಇಲ್ಲದುದರಿಂದ ಶರಣಾಗತಿಯೇ ಆಗಲಿಲ್ಲ ವೆಂದು ಊಹಿಸಬೇಕಾಗಿ ಬರುತ್ತದೆ. ಆ ಕಾರಣದಿಂದ ಗೋಪ್ತೃತ್ವವರಣಾಂಗದ ಪ್ರಭೇದಗಳನ್ನಾಗಿ ಭಾವಿಸುವುದರಲ್ಲಿ ಏನೊಂದೂ ತೊಂದರೆಇಲ್ಲವು. ಆದುದರಿಂದ ಈ ಸ್ತೋತ್ರಭಾಗವನ್ನೆಲ್ಲಾ ಶರಣಾಗತಿಯನ್ನನುಷ್ಠಿಸುವ ಕಾಲದಲ್ಲಿನ ಪ್ರಾರ್ಥನೆ ಎಂದೂ ಭಾವಿಸಬಹುದು. ತಮಗೇನೋ ಮಹಾ ವಿಶ್ವಾಸವುಂಟು. ಆದರೆ ನೀನು ನನ್ನನ್ನು ಭರನ್ಯಾಸಕ್ಕೆ ತಕ್ಕ ಅಧಿಕಾರಿ ಎಂದು ಭಾವಿಸತಕ್ಕದ್ದು. ಇದು ಏನಾದರೂ ನ್ಯೂನತೆಗಳಿಂದ ಭರನ್ಯಾಸವಾಗದಿದ್ದರೆ ಆಗ ಭಾಗವತನ ಮನೆಯಲ್ಲಿ ಭಾಗವತ ಸಂಸರ್ಗದಲ್ಲಿ ಅತ್ಯಾದರವಿರುವುದರಿಂದ ಕೀಟಜನ್ಮವನ್ನಾದರೂ ಉಂಟುಮಾಡು

ಸಕೃತ್ತ್ವದಾಕಾರ ವಿಲೋಕನಾಶಯಾ
ತೃಣೀಕೃತಾನುತ್ತಮ ಭುಕ್ತಿ ಮುಕ್ತಿಭಿಃ ।
ಮಹಾತ್ಮಭಿ ರ್ಮಾ ಮವ ಲೋಕ್ಯತಾಂ ನಯ
ಕ್ಷಣೇಪಿ ತೇ ಯದ್ವಿರಹೋ ತಿದುಸ್ಸಹಃ ॥ ೫೬ ॥

---

ಎಂದು ಪ್ರಾರ್ಥಿಸುವುದರಲ್ಲಿ ಏನೊಂದೂ ವಿರೋಧವಿಲ್ಲವು. ನಾನಾದರೋ ಏನೊಂದೂ ಸಂಶಯವಿಲ್ಲದೇ ಅನುಷ್ಠಿಸಿರುತ್ತೇನೆ. ಅದರಿಂದ ನೀನು ಪ್ರೀತನಾದರಲ್ಲವೇ ನನಗೆ ಶ್ರೇಯಸ್ಸು. ಪರೀಕ್ಷೆಯಲ್ಲಿ ತೇರ್ಗಡೆಯಾಗುವುದರಲ್ಲಿ ಸಂದೇಹವಿಲ್ಲದಂತೆ ಉತ್ತರ ಬರೆದಿರಬಹುದು. ಆದರೆ ಪರೀಕ್ಷಕನು ಸಂತುಷ್ಟನಾದರಲ್ಲವೇ ಇವನಿಗೆ ತೇರ್ಗಡೆಯು ಹಾಗೆಯೇ ಇಲ್ಲಿಯೂ **ಕೀಟಜನ್ಮ** ಪ್ರಾರ್ಥನೆಯು ತಮಗೆ ಸಂಶಯದಿಂದ ಹೇಳಿದುದಲ್ಲವು. ಮುಂದೆ **ನಾಥಮುನಿಂ ವಿಲೋಕ್ಯ ಪ್ರಸೀದ** ಎಂಬಲ್ಲೂ ಅಂತಹ ನಿಸ್ಸಂದೇಹ ಪ್ರಾರ್ಥನೆಯೇ ಇರುತ್ತದೆ.

**ಅವತಾರಿಕೆಯು** ಹಿಂದೆ ಮಹಾಭಾಗವತ್ತೋತ್ತಮರ ವಾಸಸ್ಥಾನದಲ್ಲಿ ಜ್ಞಾನಶೂನ್ಯವಾದ ಒಂದು ಕೀಟ ಜನ್ಮವೂ ಕೂಡ ಪರಮಶ್ರೇಯಸ್ಕರವೆಂದು ಹೇಳಿದರು. ಈಗ ತಾವು ಸ್ವಾಮಿಯ ಅನುಗ್ರಹ ವಿಶೇಷದಿಂದ ಪರಮಭಾಗವತರಾದ ನಾಥಮುನಿಗಳ ವಂಶದಲ್ಲಿ ಜನಿಸಿರುವುದನ್ನು ಮನಸ್ಸಿನಲ್ಲಿಟ್ಟುಕೊಂಡು ಅಂತಹ ಮಹನೀಯರ ಶಿಷ್ಯರಾದ ಉಯ್ಯಕ್ಕೊಂಡಾರ್, ಮಣಕ್ಕಾಲ್ ನಂಬಿ ಮೊದಲಾದ ಪರಮ ಭಾಗವತರುಗಳ ಅನುಗ್ರಹ ದೊರೆಯುವ ಹಾಗೆ ಅವರ ಕೃಪಾಕಟಾಕ್ಷಕ್ಕೆ ಪಾತ್ರನಾಗುವ ಹಾಗೆ, ಮಾಡು ಎಂಬುದಾಗಿ ಪ್ರಾರ್ಥನೆಯ ಸೂಚನೆಯಾಗಿರುತ್ತದೆ ಈ ಶ್ಲೋಕವು

**ಅರ್ಥವು—ಸಕೃತ್ತ್ವದಾಕಾರ ವಿಲೋಕನಾಶಯಾ ಸಕೃತ್**—ಒಂದಾವರ್ತಿ, **ತ್ವದಾಕಾರ**—ನಿನ್ನ ಮಂಗಳವಿಗ್ರಹದ, **ವಿಲೋಕನಾಶಯಾ**-ಸಾಕ್ಷಾತ್ಕಾರ ಮಾಡಬೇಕೆಂಬ ಆಶೆಯಿಂದ, **ತೃಣೀಕೃತಾನುತ್ತಮ ಭುಕ್ತಿ ಮುಕ್ತಿಭಿಃ**—ತೃಣವಾಗಿ ಭಾವಿಸಲ್ಪಟ್ಟ ಉತ್ತಮವಾದ ಬ್ರಹ್ಮರುದ್ರೇಂದ್ರಾದಿ ಲೋಕಗಳ ಐಶ್ವರ್ಯವೇನು, ಇಹಲೋಕದ ಸಾರ್ವಭೌಮಾದಿ ಸಕಲೈಶ್ವರ್ಯಗಳೇನು, ಕ್ರಮೇಣ, ಹೇಯರೂಪವಾದ ದೇಹದಿಂದ ವಿಯುಕ್ತವಾದ, ಪರಿಶುದ್ಧಾತ್ಮ ಸ್ವರೂಪಪ್ರಾಪ್ತಿ ರೂಪವಾದ ಕೈವಲ್ಯವೇನು, ಇವುಗಳನ್ನುಳ್ಳ, **ಮಹಾತ್ಮಭಿಃ** ಮಹಾತ್ಮರಾದ ಪರಮೈಕಾನ್ತಿಗಳಿಂದ, **ಮಾಂ**—ನನ್ನನ್ನು, **ಅವಲೋಕ್ಯತಾಂ**—ಅನುಗ್ರಹ ಮಾಡುವ ದಿವ್ಯ ಕಟಾಕ್ಷಕ್ಕೆ ಪಾತ್ರನನ್ನಾಗಿ, **ನಯ**— ಹೊಂದಿಸು. ಅವರು ಎಂತಹ ಮಾಹಾತ್ಮ್ಯಯುಳ್ಳವರೆಂದರೆ, **ಕ್ಷಣೇಪಿ**— ಒಂದು ಕ್ಷಣದಲ್ಲೂ ಕೂಡ, **ತೇ**— '**ಜ್ಞಾನೀತ್ವಾತ್ಮೈವ ಮೇಮತಂ**' ಎಂದು ಹೇಳಿ ಭಕ್ತಪರಾಧೀನನಾದ ನಿನಗೆ, **ಯದ್ವಿರಹಃ**—ಯಾವ ಪರಮೈಕಾನ್ತಿಗಳನ್ನು ಅಗಲಿರೋಣವು.

**ಅತಿದುಸ್ಸಹಃ**—ವಿಶೇಷ ಸಹಿಸಲು ಅಸಾಧ್ಯವೋ ಅಂತಹ ಮಹನೀಯರ ಅನುಗ್ರಹಕ್ಕೆ ಪಾತ್ರನಾಗಿಮಾಡು ಎಂದು ಪ್ರಾರ್ಥನೆಯು. ಐಹಿಕವೆಲ್ಲವೂ ಮತ್ತು ಸ್ವರ್ಗಾದಿ ಇತರ ಲೋಕಗಳ ಐಶ್ವರ್ಯಗಳೂ ಕೂಡ ಅಶಾಶ್ವತಗಳಾಗಿ ತೃಣಸಮಾನಗಳಾದುದರಿಂದ ಅವುಗಳಲ್ಲಿ ಯಾವುದನ್ನೂ ಅಪೇಕ್ಷಿಸುವುದಿಲ್ಲವು. ಹಾಗಾದರೆ ಅಪೇಕ್ಷಿಸುವುದೇನು ? ಎಂದರೆ ಪರಮಪುರುಷನೂ ಕೂಡ ಯಾವ ಪರಮೈಕಾನ್ತಿಗಳ ವಿಶೇಷವನ್ನು ದುಸ್ಸಹವಾಗಿ ಭಾವಿಸುವನೋ ಅಂತಹ ಪರಮೈಕಾನ್ತಿಗಳ ಕೃಪಾಕಟಾಕ್ಷಕ್ಕೆ ಪಾತ್ರನಾಗಿಮಾಡು. ಅದೇ ತಮಗೆ ಪುರುಷಾರ್ಥ ಕಾಷ್ಠೆಯು. ಅದೇ ತಮಗೆ ದಿವ್ಯ ವೈಕುಂಠಪ್ರಾಪ್ತಿಗೆ ದ್ವಾರವಾದುದೆಂಬ ಭಾವನೆಯಿಂದ **ಅವಲೋಕ್ಯತಾಂ**ನಯೆ ಎಂಬ ಪ್ರಾರ್ಥನೆಯು.

**ಉಪಪಾದನೆಯು**—ಸಕೃತ್ತ್ವದಾಕಾರ ವಿಲೋಕನಾಶಯಾ—ಇದರಿಂದ ಭಕ್ತಾಗ್ರೇಸರರು ಸಮಸ್ತ ಐಶ್ವರ್ಯಾದಿಗಳನ್ನೂ ತೃಣವಾಗಿ ಭಾವಿಸಿರುತ್ತಾರೆಂದು ಹೇಳಿರುತ್ತಾರೆ. ಈ "ಮಹಾತ್ಮ"ರೇನು ಭಕ್ತಿಯೋಗ ನಿಷ್ಠರಾದ ಉಪಾಸಕರೇ ? ಅಥವಾ ಭರನ್ಯಾಸನಿಷ್ಠರೇ? ಎಂಬ ಪ್ರಶ್ನೆಯುಂಟಾಗಬಹುದು. ಶ್ರೀ ಆಳವಂದರ್ರವರ ಕಾಲಕ್ಕೆ ಮುಂಚೆ ಅವರ ಪಿತಾಮಹರಾದ ನಾಥಮುನಿ ಮೊದಲಾದವರೆಲ್ಲಾ ಉಪಾಸನಾನಿಷ್ಠರೇ. ಅವರಿಂದೀಚೆಗೆ ಪ್ರಪದನವು ಬಹಳವಾಗಿ ಸಂಪ್ರದಾಯಕ್ಕೆ ಬಂತು, ಹೀಗೆ ಹೇಳಿದುದರಿಂದ ಭರನ್ಯಾಸವು ನಾಥಮುನಿಗಳ ಕಾಲಕ್ಕೆ ಹಿಂದೆ ಇರಲೇಇಲ್ಲ ವೆಂಬ ಅಭಿಪ್ರಾಯವಲ್ಲವು ನಮ್ಮಾಳ್ವಾರ್ರವರೂ ಭರನ್ಯಾಸ ನಿಷ್ಠರೇ. "**ಅಗಲಕಿಲ್ಲೇಬ್**" ಎಂಬ ಪಾಶುರವನ್ನು ನೋಡಿ. ಅದೂ ಅಲ್ಲದೆ ಅಭಿಜಾತ್ಯದಿಂದ ನಮ್ಮಾಳ್ವಾರ್ರವರು ಉಪಾಸನೆಗೆ ಶ್ರೀ ವಿದುರರಹಾಗೆ ಅನರ್ಹರು. ಆದರೂ ಪರಮಾತ್ಮನನ್ನು ಧ್ಯಾನಿಸುತ್ತಾರೆ. ಆದುದರಿಂದ ಪರಭಕ್ತಿ, ಪರಜ್ಞಾನ, ಪರಮಭಕ್ತಿಗಳನ್ನು ಹೊಂದಿರುತ್ತಾರೆ ಪಾಶುರದಲ್ಲಿ ಸಕೃತ್ ಆತನ ದಿವ್ಯಮಂಗಳ ವಿಗ್ರಹವನ್ನು ವಿಲೋಕಿಸಿ ಒಡನೆ ಅದು ನಿವರ್ತಿಸಿಹೋಯಿತೆಂದು ತಿಳಿಸಿರುತ್ತಾರೆ. ಆದುದರಿಂದ ಈ ವಿಶೇಷಣವು. ಎರಡು ವಿಧ ಉಪಾಯನಿಷ್ಠರಿಗೂ ಅನ್ವಯಿಸುತ್ತದೆ. ಉಪಾಸಕರಂತೂ ಉಪಾಸನಾ ಕಾಲದಲ್ಲಿ ಸಾಕ್ಷಾತ್ಕರಿಸುತ್ತಾರೆ. ಭರನ್ಯಾಸನಿಷ್ಠರೂ ಸಹ ಅಧಿಕಾರವಿದ್ದುದಾದರೆ ಮೂಲ ಮಂತ್ರ, ದ್ವಯ, ಚರಮ ಶ್ಲೋಕಗಳ ಜಪಕಾಲದಲ್ಲಿ ಪರಮ ಪುರುಷನ ದಿವ್ಯಮಂಗಳ ವಿಗ್ರಹವನ್ನು ಧ್ಯಾನಿಸುವ ಸಂಪ್ರದಾಯವು ಈಗಲೂ ಇರುತ್ತದೆ. ಶ್ರೀಯತಿವರ್ಯರ ಅನುಷ್ಠಾನವು ಹೀಗೆಯೇ ಎಂದು ಅವರ ಚರಿತ್ರೆಯಿಂದ ಹೊರಪಡುತ್ತದೆ. ಹೀಗೆ ಭಕ್ತಿಯಿಂದ ಧ್ಯಾನಿಸಿದುದರಿಂದ ಭಕ್ತಿಯು ವೃದ್ಧಿಯನ್ನು ಹೊಂದಿ ಪರಭಕ್ತಿ, ಪರಜ್ಞಾನ, ಪರಮಭಕ್ತಿ ರೂಪವನ್ನು ಹೊಂದುತ್ತದೆ. ಶ್ರೀ ಶರಣಾಗತಿ ಗದ್ಯದಲ್ಲಿ ಪ್ರಥಮತಃ ಶ್ರೀಶರಣಾಗತಿಯನ್ನೂ ಅನಂತರ ಪರಮಪುರುಷನ ಶರಣಾಗತಿಯನ್ನೂ ಅನುಷ್ಠಿಸಿರುತ್ತಾರೆ. ಅಲ್ಲಿ ಧ್ಯೇಯರೂಪ ಪರಮಪುರುಷನು ಹೇಗಿರುವನು ಎಂಬುದನ್ನು ವರ್ಣಿಸಿ, ಆತನನ್ನು ಸಾಕ್ಷಾತ್ಕರಿಸಿ, ಆತನೊಂದಿಗೆ ಸಂವಾದಮಾಡಿ ಪ್ರಾರ್ಥಿಸುವ

ಕಾಲದಲ್ಲಿ **"ಪರಭಕ್ತಿ ಪರಜ್ಞಾನ, ಪರಮ ಭಕ್ತ್ಯೇಕ ಸ್ವಭಾವಂ ಮಾಂ ಕುರುಷ್ವ"** ಎಂದು ಪ್ರಾರ್ಥಿಸಿರುತ್ತಾರೆ. ಈ ಧ್ಯಾನದಲ್ಲಿ ಸ್ವಲ್ಪ ಕಣ್ಣೆದುರಿಗೆ ಬಂದ ಹಾಗೆ ಸೇವೆಕೊಟ್ಟು ಅನಂತರ ಮಾಯವಾಗುವುದರಿಂದ **ಸಕೃತ್** ಎಂಬ ಪ್ರಯೋಗವು. ಕರುಣಾಕರನಿಗೆ ಇಷ್ಟುಮಾತ್ರದಿಂದಲೇ ಅನುಗ್ರಹಿಸಬೇಕೆಂಬ ಅಭಿಸಂಧಿಯುಂಟಾಗುತ್ತದೆ. ಈ ಸಕೃತ್ ಉಂಟಾದುದರಿಂದಲೇ ಪುರುಷಾರ್ಥ ಭೂಯಸ್ತ್ವ ಉಂಟೆಂಬುದು ಅಯೋಧ್ಯಾವಾಸಿಗಳಿಂದ ವ್ಯಕ್ತವು. **"ಅಲಮದ್ಯ ಹಿಭುಕ್ತೇನ ಪರಮಾರ್ಥೈರ ಲಂ ಚ ನಃ । ಯಥಾ ಪಶ್ಯಾಮ ನಿರ್ಯಾಸ್ತಂ ರಾಮಂ ರಾಜ್ಯೇಪ್ರತಿಷ್ಠಿತಮ್"** ಈಗ ನಾವು ಅನುಭವಿಸಿರುವ ಐಶ್ವರ್ಯಗಳಿಂದಲೂ ಸಾಕು. ಇತರ ಪ್ರಯೋಜನಗಳಿಂದಲೂ ಸಾಕು. ಈಗ ವನವಾಸಕ್ಕೆ ತೆರಳಿರುವ ಶ್ರೀ ರಾಮಚಂದ್ರನನ್ನು ರಾಜ್ಯದಲ್ಲಿ ಸ್ಥಾಪಿಸಿರುವುದನ್ನು ನಾವು ನೋಡಿ ಕಣ್ಣಿಗೆ ಸಾರ್ಥಕ್ಯವನ್ನುಂಟು ಮಾಡಿಕೊಳ್ಳತಕ್ಕದ್ದಾಗಿರುತ್ತದೆ. ಎಂದು ಪುರಜನರು ಹೇಳಿಕೊಂಡಿರುತ್ತಾರೆ. ಹಾಗೆಯೇ **"ಇಚ್ಛಾವೋಹಿ ಮಹಾಬಾಹುಂ ರಘುವೀರಂ ಮಹಾಬಲಂ । ಗಜೇನ ಮಹತಾಯಾನ್ತಂ ರಾಮಂ ಛತ್ರಾವೃತಾನನಂ"** ಆಜಾನುಬಾಹುವಾಗಿಯೂ, ಮಹಾ ಪರಾಕ್ರಮಿಯಾಗಿಯೂ ಇರುವ ರಘುಕುಲತಿಲಕನು ಮಹತ್ತಾದ ಪಟ್ಟದಾನೆಯನ್ನಲಂಕರಿಸಿ ಶ್ವೇತಚ್ಛತ್ರದಿಂದ ಆವರಿಸಲ್ಪಟ್ಟ ಮುಖವುಳ್ಳವನಾಗಿ ಬರುವುದನ್ನು ನಾವೆಲ್ಲರೂ ನೋಡಲು ಅಪೇಕ್ಷಿಸುವೆವು. ಇದು ಸತ್ಯವಾದುದು. ಇದೂ ಅಯೋಧ್ಯಾವಾಸಿಗಳ ಆಶೆಯು. ಇನ್ನೊಂದುಕಡೆಯಲ್ಲಿ **ಮೇಘಶ್ಯಾಮಂ ಮಹಾ ಬಾಹುಂ ಸ್ಥಿರಸತ್ವಂ ದೃಢವ್ರತಂ । ಕದಾದ್ರಕ್ಷ್ಯಾ ಮಹೇ ರಾಮಂ ಜಗತಶ್ಶೋಕನಾಶನಂ"** ನೀಲಮೇಘಶ್ಯಾಮನಾದ, (ಸರ್ವಸಂತಾಪ ಹರನೆಂಬ ಭಾವವು ಇದರಿಂದ ಸೂಚಿತವು.) ಆಜಾನುಬಾಹುವಾದ, ಶಾಶ್ವತವಾದ ವ್ಯಾಪಾರಗಳನ್ನುಳ್ಳ ಭಕ್ತರಕ್ಷಣ ವಿಷಯದಲ್ಲಿ ದೃಢವಾದ **"ನ ತ್ಯಜೇಯಂ ಕಥಂಚನ"** ಎಂದು ಹೇಳುವ ವ್ರತವುಳ್ಳ ಜಗತ್ತಿನ ಶೋಕವನ್ನೆಲ್ಲಾ ಹೋಗಲಾಡಿಸುವ ಶಕ್ತಿಯುಳ್ಳ ಶ್ರೀ ರಾಮಚಂದ್ರ ಪ್ರಭುವನ್ನು ನೋಡುವ ಸುಕೃತವು ಯಾವಾಗ ಲಭ್ಯವೋ ಎಂದು ಹೇಳುತ್ತಾ, ಶ್ರೀ ಭರತಾಳ್ವಾರರೊಂದಿಗೆ ನಾಗರಿಕರು ಚಿತ್ರಕೂಟಕ್ಕೆ ಬಂದಾಗ ಹೇಳಿದ ಶೋಕಪೂರಿತ ವಾಕ್ಯವು, ಶ್ರೀ ರಾಮನನ್ನು ನೋಡಬೇಕೆಂಬ ಉತ್ಕಟೇಚ್ಛೆಯನ್ನು ಪ್ರದರ್ಶಿಸುತ್ತದೆ. ಇದರ ಮುಂದಿನ ಶ್ಲೋಕದಲ್ಲಿ ಅಂತಹ ದಿವ್ಯ ಸುಂದರ ಮೂರ್ತಿಯನ್ನು ನೋಡುವ ಸುಕೃತವು ಒದಗಿತು. ಎಂದು ಹರ್ಷವನ್ನು ಪ್ರದರ್ಶಿಸಿ ಅಂತಹ ದರ್ಶನದ ಫಲವನ್ನು ಹೇಳುತ್ತಾರೆ—**"ದೃಷ್ಟ ಏವ ಹಿನ ಶ್ಶೋಕ ಮಪನೇಷ್ಯತಿ ರಾಘವಃ । ತಮ ಸ್ಸರ್ವಸ್ಯ ಲೋಕಸ್ಯ ಸಮುದ್ಯನ್ನಿವ ಭಾಸ್ಕರಃ"** ಈಗ ನಮ್ಮ ಭಾಗ್ಯೋದಯದಿಂದ ದೃಷ್ಟಿಪಥಕ್ಕೆ ಸಿಕ್ಕಿರುವುದರಿಂದ ಆತನ ವಿಶ್ಲೇಷದಿಂದುಂಟಾದ ನಮ್ಮ ಶೋಕ ಮತ್ತು ಕ್ಲೇಶವನ್ನೆಲ್ಲಾ ಶ್ರೀ ರಾಮನು ಹೋಗಲಾಡಿಸುವನು. ಹೇಗೆಂದರೆ ಉದಯನಾದ ಸೂರ್ಯನು

ಲೋಕದ ಕರ್ತೃತೆಯನ್ನೆಲ್ಲಾ ಹೀಗೆ ಹೋಗಲಾಡಿಸುವನೋ ಹಾಗೆ ಆತನು ದೃಷ್ಟನಾಗುವ ಹಾಗೆ ಸಾಧನಾವಲಂಬನವಿದ್ದರೇನೇ ಶೋಕವನ್ನು ಹೋಗಲಾಡಿಸುವನು. ಇಲ್ಲವಾದರೆ ಇಲ್ಲವು. ಆದುದರಿಂದ ನಮ್ಮ ಯತ್ನ ನಿರಪೇಕ್ಷವಾಗಿಯೇ ಆತನು ರಕ್ಷಿಸುವನೆಂಬ ವಾದವು ಇದರಿಂದ ನಿರಸ್ತವು (ರಾ. ಅಯೋ೧೭-೮,೯) ಹಾಗೆಯೇ ಇನ್ನೊಂದು ಕಡೆಯಲ್ಲೂ "ಯಶ್ಚ ರಾಮಂ ನಪಶ್ಯೇತ್ತು ಯಂಚ ರಾಮೋ ನಪಶ್ಯತಿ। ನಿಂದಿತಃ ಸಭವೇಲ್ಲೋಕೇಸ್ವಾತ್ಮಾಪ್ಯೇನಂ ವಿಗರ್ಹತಿ" ಯಾವನು ಶ್ರೀರಾಮಚಂದ್ರನನ್ನು ಜಗದ್ರಕ್ಷಕನನ್ನಾಗಿಯೂ ಆಶ್ರಿತರನ್ನು ಮುಖ್ಯವಾಗಿ ಪರಿಪಾಲಿಸುವವನನ್ನಾಗಿಯೂ ನೋಡುವುದಿಲ್ಲವೋ, ಹಾಗೆ ಆತನನ್ನು ತಿರಸ್ಕರಿಸಿದುದರಿಂದ ಅಂತಹವನನ್ನು ಶ್ರೀರಾಮನು ಕೃಪಾಕಟಾಕ್ಷದಿಂದ ಈಕ್ಷಿಸುವುದಿಲ್ಲವೋ ಅಂತವನು ಎಲ್ಲರಿಂದಲೂ ನಿಂದಿತನಾಗಿ ಲೋಕದಲ್ಲಿ ವಸಿಸುವುದಲ್ಲದೆ, ತನ್ನ ಮನಸ್ಸೇ ತನ್ನನ್ನು, ಎಂತಹ ನಿರ್ಭಾಗ್ಯನು ತಾನು, ಆತ್ಮೋಜ್ಜೀವನವನ್ನು ಮಾಡುವುದಕ್ಕಾಗಿಯೇ ಸ್ವಾಮಿಯು ಅವತಾರವನ್ನೆತ್ತಿ ದರ್ಶನ ಕೊಟ್ಟರೂ ಅಂತಹ ಸಮಯವನ್ನು ನಿರಾಕರಿಸಿದೆನೇ' ಎಂದು ನಿಂದಿಸುತ್ತದೆಂಬ ಭಾವವು.—ಆದುದರಿಂದ ಪರಮೈಕಾನ್ತಿಗಳಾದ ಮಹಾತ್ಮರಾದರೆ ಸ್ವಾಮಿಯ ದಿವ್ಯ ಮಂಗಳ ವಿಗ್ರಹದ ಸಕೃದ್ದರ್ಶನದಿಂದಲೇ ದೇಹವು ಪರವಶವಾಗುತ್ತದೆಂದು ಹೇಳಿರುತ್ತದೆ. "ಭಗವದ್ದರ್ಶನಾಹ್ಲಾದ ಬಾಷ್ಪಪರ್ಯಾಕುಲೇಕ್ಷಣಃ। ಪುಲಕಾಂಕಿತ ಔತ್ಸುಕ್ಯಾತ್ಸ್ವಾಖ್ಯಾನೇನಾಶಕನ್ನೃಪ" ಮಹಾಭಾಗವತರಾದ ಅಕ್ರೂರರು ಶ್ರೀ ಕೃಷ್ಣನನ್ನು ದರ್ಶನಮಾಡಿದಾಗ ಅವರಿಗೆ ಉಂಟಾದ ಆಹ್ಲಾದ, ಪುಲಕಗಳಿಂದ ಕೂಡಿದ ದೇಹಾದಿಗಳ ಅವಸ್ಥೆಯಿಂದ ಶ್ರೀಕೃಷ್ಣನನ್ನು ಕುರಿತು, ಇಗೋ ನಾನು ನಮಸ್ಕರಿಸುತ್ತೇನೆ ಎಂದು ಹೇಳಲು ಕೂಡ ಆಗಲಿಲ್ಲವೆಂದು ಹೇಳಲ್ಪಟ್ಟಿದೆ. ಇದರ ಮುಂದಿನ ಶ್ಲೋಕದಲ್ಲಿ ಸ್ವಾಮಿಯು ಅದನ್ನು ಕಂಡು ಅಕ್ರೂರರನ್ನು ತನ್ನ ಚಕ್ರದಿಂದ ಸ್ಪರ್ಶಿಸಿ ಇನ್ನೂ ಹೆಚ್ಚಾದ ಸುಜ್ಞಾನವನ್ನುಂಟುಮಾಡಿ ಅವರನ್ನು ಬಿಗಿದಪ್ಪಿದನೆಂದು ಹೇಳಲ್ಪಟ್ಟಿರುತ್ತದೆ. ಸ್ವಾಮಿಯು ಹಾಗೆ ಅಂತಹ ಭಾಗವತರನ್ನು ಅಗಲಿರಲಾರದೆಂಬುದೂ ವ್ಯಕ್ತವು. ಹಾಗೆಯೇ ಶ್ರೀಕೃಷ್ಣ ಪ್ರಭುವು ಉದ್ಧವಾರ್ಜುನಾದಿಗಳನ್ನೂ ಅಗಲಿರಲಾರನು. ಅವರುಗಳು ತನಗೆ ಪ್ರಾಣವೆಂದೇ ಹೇಳಿಕೊಂಡಿರುತ್ತಾನೆ. ಮತ್ತು "ಜ್ಞಾನೀತ್ವಾತ್ಮೈವ ಮೇಮತಮ್" (ಗೀ ೭-೧೮) ಎಂದೂ ಹೇಳಿಕೊಂಡಿರುತ್ತಾನೆ.

ಆಮಹಾತ್ಮರು ಎಂತಹವರೆಂದರೆ? ತೃಣೀಕೃತಾನುತ್ತಮ ಭುಕ್ತಿಮುಕ್ತಿಭಿಃ- ಭುಕ್ತಿಯು ಅನುತ್ತಮವೆಂದು ಹೇಳಿದುದು ಹೇಗೆ? ವೈಕುಂಠಲೋಕದ ಭೋಗವು ಅನುತ್ತಮವೆಂದು ಹೇಳಿದರೆ ಒಪ್ಪಬಹುದು. ಬ್ರಹ್ಮ ರುದ್ರೇಂದ್ರ ಲೋಕಗಳ ಭೋಗವು ಅನುತ್ತಮವೆಂಬುದು ಹೇಗೆ? ಎಂದರೆ ಈ ಲೀಲಾವಿಭೂತಿಯಲ್ಲಿ ಅನುತ್ತಮ ಎಂದು ಇಟ್ಟುಕೊಳ್ಳಬೇಕು. ಆಗ ಅವುಗಳಿಗಿಂತ ಉತ್ತಮವಾದುವು

ಇಲ್ಲವೆಂಬ ಭಾವದಿಂದ ಹಾಗೆ ಹೇಳಲ್ಪಟ್ಟಿತು. ಭುಕ್ತಿಯು **ಅನುತ್ತಮವೆಂದು** ಹೇಳಿರುವುದರಿಂದ ಶ್ರೇಷ್ಠಗಳಾದ, ಪ್ರಜಾಪತಿ, ಪಶುಪತಿ, ಇಂದ್ರಾದಿ ಲೋಕಗಳ ಭೋಗಗಳು ನಶ್ವರಗಳಾದುದರಿಂದ ಅವುಗಳನ್ನು ತೃಣದಂತೆ ಭಾವಿಸುವವರು, ಆದರೆ ಭುಕ್ತಿಯ ವಿಷಯದಲ್ಲಿ ಅಂತೂ ಸರಿಹೋಯಿತು. ಮುಂದೆ **ಮುಕ್ತಿಭಿಃ** ಎಂದು ಇರುವುದರಿಂದ ಮುಕ್ತಿಯನ್ನೂ ತೃಣವಾಗಿ ಭಾವಿಸಿರುವವರು, ಎಂಬ ಅರ್ಥವು ಸರಿಹೋಗುವುದಿಲ್ಲವಾದುದರಿಂದ ಮುಕ್ತಿ ಶಬ್ದಕ್ಕೆ ಈ ಹೇಯ ದೇಹದಿಂದ ಬಿಡುಗಡೆ ಎಂದು ಅರ್ಥಮಾಡಿ ಪ್ರಕೃತಿ ವಿಯುಕ್ತ ಆತ್ಮಸ್ವರೂಪವೇ ಪ್ರಾಪ್ಯವಾಗಿರುವ ಕೈವಲ್ಯವನ್ನೂ ಸಹ ತೃಣದ ಹಾಗೆ ಭಾವಿಸುವವರೆಂದು ಅರ್ಥ ಮಾಡಬಹುದು. ಆಗಲಿ ಕೈವಲ್ಯಕ್ಕೆ ಹಾಗೆ ಭಾವನೆ ಉಂಟೋ? ಎಂದರೆ ಭಾಗವತ ಮತ್ತು ಗೀತೆಯಲ್ಲೂ ಸಹ ಹಾಗೆ ಉಂಟು **"ನನಾಕಪೃಷ್ಠಂ ನಚ ಸಾರ್ವಭೌಮಂ ನ ಪಾರಮೇಷ್ಠ್ಯಂ ನ ರಸಾಧಿಪತ್ಯಮ್ । ನ ಯೋಗ ಸಿದ್ಧೀರಪುನರ್ಭವಂವಾ ವಾಂಛನ್ತಿಯತ್ಪಾದ ರಜಃ ಪ್ರಪನ್ನಾಃ"** (ಭಾ ೧೦-೧೬-೩೭) ಸ್ವಾಮಿಯ ಪಾದರಜಸ್ಸನ್ನು ಆಶ್ರಯಿಸಿದ ಭರನ್ಯಾಸನಿಷ್ಠರು ಚತುರ್ಮುಖ ಲೋಕಪ್ರಾಪ್ತಿ, ಸ್ವರ್ಗಪ್ರಾಪ್ತಿ, ಕುಬೇರನ ಅಣಿಮಾದ್ಯೈಶ್ವರ್ಯ ಪ್ರಾಪ್ತಿ, ಕೈವಲ್ಯ, ಇವು ಯಾವುದನ್ನೂ ಅಪೇಕ್ಷಿಸುವುದಿಲ್ಲವು. ಹಾಗೆಯೇ **ಅಪುನರ್ಭವಂ ವಾ** ಎಂದರೆ ಮೋಕ್ಷವೆಂಬರ್ಥವನ್ನು ಹೇಳಬಹುದಾದರೆ, **ನವಾಂಛನ್ತಿ** ಎಂದು ಅರ್ಥ ಮಾಡಬೇಕಾಗಿರುವುದರಿಂದ ಭಾಗವತ ಭಾಷ್ಯವಾದ ವೀರರಾಘವೀಯದಲ್ಲಿ ಕೈವಲ್ಯವೆಂದೇ ಅರ್ಥಮಾಡಿರುತ್ತಾರೆ. ಹಾಗೆಯೇ ಗೀತೆಯಲ್ಲೂ **"ಓ ಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ ಮಾ ಮನುಸ್ಮರನ್ । ಯಃ ಪ್ರಯಾತಿ ತ್ಯಜನ್ ದೇಹಂ ಸ ಯಾತಿ ಪರಮಾಂಗತಿಂ"** ಎಂಬಲ್ಲೂ **ಪರಮಾಂ ಗತಿಂ** ಎಂಬದುರಿಂದ ಮೋಕ್ಷವೆಂದು ಹೇಳಬಹುದಾದರೂ ಪ್ರಕರಣವಶಾತ್ ಕೈವಲ್ಯವೆಂದು ಅರ್ಥಮಾಡಬೇಕಾಗಿರುತ್ತದೆ. ಆಗಲಿ ಕೈವಲ್ಯಕ್ಕೆ ಮುಕ್ತಿ ಶಬ್ದ ಪ್ರಯೋಗ ಹೇಗೆ? ಎಂದರೆ ಛಾಂದೋಗ್ಯದ **"ತದ್ಯ ಇತ್ಥಂ ವಿದುಃ"** ಎಂಬ ಶ್ರುತಿಯಲ್ಲಿ ಕ್ರಮೇಣ ಪಂಚಾಗ್ನಿ ವಿದ್ಯಾನಿಷ್ಠನಾದ ಕೈವಲ್ಯನಿಗೂ ಪರಮಾತ್ಮೋಪಾಸಕನಿಗೂ ಅರ್ಚಿರಾದಿಗತಿಯ ಮೂಲಕ ಮೋಕ್ಷ ಪ್ರಾಪ್ತಿ ಎಂದು ಹೇಳಿರುತ್ತದೆ. ಇಲ್ಲಿ ಮುಕ್ತಿ ಶಬ್ದಕ್ಕೆ ಏನು ಅರ್ಥವೆಂದರೆ ಈ ಹೇಯ ದೇಹದಿಂದ ಉಂಟಾಗುವ ಬಿಡುಗಡೆ. ಆತ್ಮಾನುಭವ ಉಂಟಾಗುವ ಕೈವಲ್ಯವು. ಆದುದರಿಂದ **ತೃಣೀ ಕೃತಾನುತ್ತಮ ಭುಕ್ತಿ ಮುಕ್ತಿಭಿಃ** ಎಂದರೆ ತೃಣವಾಗಿ ಭಾವಿಸಿದ ಇಹಲೋಕದ ಬ್ರಹ್ಮಾದಿ ಲೋಕಗಳ ಭೋಗ ಮತ್ತು ಕೈವಲ್ಯಗಳನ್ನುಳ್ಳವರು ಎಂಬರ್ಥವು ಪರಿಪೂರ್ಣ ಬ್ರಹ್ಮಾನುಭವಕ್ಕಿಂತ ಬೇರೆ ಇನ್ನು ಯಾವುದನ್ನೂ ಅವರುಗಳು ಅಪೇಕ್ಷಿಸುವುದಿಲ್ಲವೆಂಬ ತಾತ್ಪರ್ಯವು. ಮಹಾತ್ಮರು ಎಂತವರೆಂದರೆ ಪ್ರಮಾಣಗಳ ಮೂಲಕ ತಿಳಿಸುತ್ತಾರೆ. **"ಪ್ರಜಾನಾಂ ಪತ್ಯೈರೈಶ್ವರ್ಯಂ ಪಶೂನಾಂವಾ ನ ಕಾಮಯೇ । ಅಹಂ ಕದಂಬೋ ಭೂಯಾಸಂ ಕುಂದೋ**

**ನಾ ಯಮುನಾ ತಟೇ''** ಪ್ರಜಾಪತಿಯಾದ ಬ್ರಹ್ಮನ ಐಶ್ವರ್ಯವನ್ನಾಗಲಿ **ಪಶೂನಾಂ ಪತ್ಯುಃ**-ಪಶುಪತಿ ಎನಿಸಿಕೊಳ್ಳುವ ರುದ್ರನ, **ಐಶ್ವರ್ಯಂವಾ**-ಐಶ್ವರ್ಯ ವನ್ನಾಗಲಿ, **ನ ಕಾಮಯೇ**—ಅಪೇಕ್ಷಿಸುವುದಿಲ್ಲವು. ಇನ್ನು ಯಾವುದನ್ನು ಅಪೇಕ್ಷಿಸುತ್ತೀ ಎಂದರೆ ಹೇಳುತ್ತಾರೆ ಸರ್ವೇಶ್ವರನ ಸಾಂನಿಧ್ಯ ಮತ್ತು ಸಂಬಂಧ ವನ್ನೇ ಅಪೇಕ್ಷಿಸುವ **ಅಹಂ**—ನಾನು **ಯಮುನಾ ತಟೇ**—ಶ್ರೀ ಕೃಷ್ಣನು, ಗೋಪಿಕಾ ಸ್ತ್ರೀಯರಾಗಿ ಅವತರಿಸಿರುವ ಮಹರ್ಷಿಗಳೊಂದಿಗೆ ಕ್ರೀಡಿಸುವ ಯಮುನಾತೀರದಲ್ಲಿ **ಕದಂಬಃ**-ಆತನಿಗೆ ಪರಮಪ್ರಿಯವಾದ ಕದಂಬ ಪುಷ್ಪವಾಗಿ ಯಾಗಲಿ, **ಕುಂದೋವಾ**—ಕುಂದ ಪುಷ್ಪವಾಗಿಯಾಗಲಿ, **ಭೂಯಾಸಂ**-ಆಗು ವೆನು ಎಂದರೆ ಆಗಬೇಕೆಂಬ ಪ್ರಾರ್ಥನೆಯು, ಇದಕ್ಕೆ ನಿದರ್ಶನವಾಗಿ ಹೇಳಲ್ಪಟ್ಟಿ ರುವುದೇನೆಂದರೆ-**"ತೃಣಂ ನಾರೀ ವಿರಕ್ತಸ್ಯ ತೃಣಂ ಶೂರಸ್ಯ ಜೀವಿತಮ್ । ತೃಣಂ ಬ್ರಹ್ಮವಿದೋ ವಿಶ್ವಂ ನಿಸ್ಪೃಹಸ್ಯ ತೃಣಂ ನೃಪಃ''** ಎಂದರೆ ವಿರಕ್ತ ನಾದ ಪ್ರಪನ್ನನಿಗೆ ಸುಂದರಸ್ತ್ರೀಯೂ ತೃಣವು. ಶೂರನಿಗೆ ತನ್ನ ಜೀವವೂ ಕೂಡ ತೃಣವು. ಬ್ರಹ್ಮಸ್ವರೂಪವನ್ನು ತಿಳಿದವನಿಗೆ ವಿಶ್ವವೇ ತೃಣವು ಆಶೆ ಇಲ್ಲ ದವನಿಗೆ ರಾಜನೂ ಕೂಡ ತೃಣವು ಎಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ **"ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿ ಮಾಶ್ರಿತಾಃ । ಭಜನ್ತ್ಯ ನನ್ಯಮನಸೋ ಜ್ಞಾತ್ವಾ ಭೂತಾದಿ ಮವ್ಯಯಂ''** (ಗೀ ೯-೧೩) ಪೂರ್ವ ಜನ್ಮದ ಸುಕೃತ ಪರಿಪಾಕದಿಂದ ನನ್ನನ್ನು ಶರಣಹೊಂದಿದ ಸಂಜಯ ಉದ್ಧವಾ ಕ್ರೂರಾದಿಗಳಾದ ಮಹಾತ್ಮರಾದರೋ ಸತ್ವಗುಣಾಧಿಕ್ಯದಿಂದ ದೈವೀಸ್ವಭಾವವನ್ನು ಹೊಂದಿ ನಾನು ಸರ್ವಭೂತಗಳಿಗೆ ಆದಿ ಎಂದೂ ನಾನು ಚ್ಯುತಿರಹಿತನೆಂದೂ ಸಾಧುಪರಿತ್ರಾಣಕ್ಕಾಗಿ ಅವತರಿಸಿದ ಪರಮಪುರುಷನೆಂದೂ ತಿಳಿದು ಅನನ್ಯ ಮನಸ್ಸಿನಿಂದ ಭಜಿಸುವರು. **"ವಾಸುದೇವಸ್ಸರ್ವಮಿತಿ ಸಮಹಾತ್ಮಾ ಸುದುರ್ಲಭಃ''** (ಗೀ ೭-೧೯) ಮಹಾತ್ಮರು ತಮಗೆ ವಾಸುದೇವನೇ ಸರ್ವಸ್ವ ವೆಂದು ಭಾವಿಸುವರೆಂದು ಹೇಳಲ್ಪಟ್ಟಿತು ಶ್ರೀ ಕೃಷ್ಣಭಗವಾನೇ ಮಹಾತ್ಮರು ಎಂತಹವರೆಂಬುದನ್ನು ತಿಳಿಸಿರುತ್ತಾರೆ ಇಲ್ಲಿರುವ **ಮಹಾತ್ಮಭಿಃ** ಎಂಬುದನ್ನು ಬಹುವಚನವಿರುವುದರಿಂದ ಅಂತಹ ಮಹಾತ್ಮರು ಅನೇಕರಿದ್ದಾರೆಂದು ಭಾವಿಸುವುದಕ್ಕಿಂತ, **"ಸಮಹಾತ್ಮಾ ಸುದುರ್ಲಭಃ''** ಎಂದು ಹೇಳಿರುವುದರಿಂದ **"ಗುರುಭ್ಯಸ್ತದ್ಗುರುಭ್ಯಶ್ಚ''** ಎಂಬಲ್ಲಿರುವಂತೆ ಗೌರವಾರ್ಥಕ್ಕಾಗಿ ಬಹುವಚನ ವೆಂದು ಭಾವಿಸಬೇಕು. ಇಲ್ಲಿ **ಮಾಂ** ಎಂಬುದರಿಂದ ಇದುವರೆಗೂ ಭಗವದ್ಭಾಗ ವತ ಕಟಾಕ್ಷ ದೊರೆಯದೆ ಹೀನಸ್ಥಿತಿಯಲ್ಲಿದ್ದವನಿಗೆ ಈ ಸುಕೃತ ಪರಿಪಾಕವು ಒದಗಿ ನಿನ್ನ ಚರಣಾರವಿಂದದಲ್ಲಿ ಭರನ್ಯಾಸವನ್ನು ಅನುಷ್ಠಿಸಿದ ನನ್ನನ್ನು ಎಂಬ ಭಾವವು ತೋರುತ್ತದೆ. ಈಗ ಭರನ್ಯಾಸವನ್ನು ನೀನು ಮಾಡಿದುದರಿಂದ ನಿನ್ನ ಕೃಪೆಯು ದೊರಕಿತು. ಅದಕ್ಕನುಗುಣವಾಗಿ ಪ್ರಪನ್ನನಿಗೆ ಉತ್ತರ ಕೃತ್ಯವಾಗಿ ಬೇಕಾದುದು ಭಾಗವತ ಕೈಂಕರ್ಯವೂ ಅವರ ಪ್ರಪನ್ನತೆಯೂ. ಇದನ್ನೇ

ಪುರುಷಾರ್ಥ ಕಾಷ್ಠೆ ಎಂದು ಹೇಳುವುದರಿಂದ ಅದೀಗ ಪ್ರಾರ್ಥನೀಯವಾದುದರಿಂದ **ಅವಲೋಕ್ಯತಾಂ ನಯ** ಎಂದು ಪ್ರಾರ್ಥಿಸಿರುತ್ತಾರೆ. ಮಹಾತ್ಮರುಗಳು ತಮ್ಮನ್ನು ಪರಮಪ್ರೀತಿಯಿಂದ ದೃಷ್ಟಿಸುವುದೀಗ ಪರಮಪಾವನ ರೂಪವಾದುದು. ಅವರ ದರ್ಶನಮಾತ್ರ ಸಿಕ್ಕಿದರೆ ಮೋಕ್ಷವೆಂಬುದು ಕರಗತವಾದ ಹಾಗೆಯೇ. ಆದುದರಿಂದ ಅವರ ಪ್ರೀತಿಗೆ ಪಾತ್ರನಾಗುವ ಯೋಗ್ಯತೆಯುಂಟಾಗುವಂತೆ ಮಾಡು ಎಂದು ಬೇಡುತ್ತಾರೆ. ನೀನೇ ಸಿದ್ಧೋಪಾಯನಾಗಿ ಕರುಣಿಸಿ ಉಪಾಯಾನುಷ್ಠಾನವನ್ನು ಮಾಡುವ ಹಾಗೆ ಮಾಡಿರುತ್ತೀಯೆ. ನೀನೇ ಇನ್ನು ಮುಂದಕ್ಕೂ ದೇಹಾವಸಾನ ಪರ್ಯನ್ತವಾಗಿ ನಾನು ಸರಿಯಾದ ಮಾರ್ಗವನ್ನವಲಂಬಿಸುವಂತೆ ಮಾಡಬೇಕು ಆ ಭಾರವೂ ನಿನ್ನದೇ, ಆದುದರಿಂದ ಮಹಾತ್ಮರ ಕಟಾಕ್ಷಕ್ಕೆ ಪಾತ್ರನನ್ನಾಗಿ ಮಾಡಿ ನನ್ನನ್ನು ಉದ್ಧಾರ ಮಾಡು. ಅದೇನು ನೀನು ಆ ಪರಮೈಕಾಂತಿಗಳ ದಿವ್ಯಕಟಾಕ್ಷವನ್ನು ಪ್ರಾರ್ಥಿಸುವುದು? ಎಂದು ಕೇಳುತ್ತೀಯೋ, ಎಂದರೆ ಅವರುಗಳ ಒಂದುಕ್ಷಣ ವಿಶ್ಲೇಷವನ್ನೂ ಸಹ ನೀನೇ ದುಸ್ಸಹವೆಂದು ಭಾವಿಸಿದ ನಂತರ ನನಗೂ ಅದು ದುಸ್ಸಹವಲ್ಲವೋ? "**ಕ್ಷಣೇಪಿತೇ ಯದ್ವಿರಹೋತಿದುಸ್ಸಹಃ**" ಎಂದಲ್ಲವೇ ಹೇಳಲ್ಪಟ್ಟಿತು? **ನಹ್ಯಮ್ಮಯಾನಿ ತೀರ್ಥಾನಿ ನ ದೇವಾಮೃಚ್ಛಿಲಾಮಯಾಃ ತೇ ಪುನನ್ತ್ಯುರು ಕಾಲೇನ ದರ್ಶನಾ ದೇವಸಾಧವಃ**" ಅನೇಕಕಾಲ ಪುಣ್ಯತೀರ್ಥಗಳಲ್ಲಿ ಅವಗಾಹನವನ್ನೂ ವಿಷ್ಣ್ವಾಲಯಗಳಲ್ಲಿ ಅನೇಕಕಾಲ ಸೇವೆಗಳನ್ನೂ ಮಾಡಿ ಉಂಟಾಗುವ ಪಾವನತ್ವವು ಮಹಾತ್ಮರ ದರ್ಶನಮಾತ್ರದಿಂದಲೇ ಲಭಿಸುತ್ತದೆಂದು ಭಾಗವತದಲ್ಲಿ ಹೇಳಲ್ಪಟ್ಟಿರುತ್ತದೆ. ಮತ್ತು "**ಯಸ್ಯಾನುಭವ ಪರ್ಯನ್ತಾ ಬುದ್ಧಿಸ್ತತ್ವೇ ಪ್ರತಿಷ್ಠಿತಾ। ತದ್ದೃಷ್ಟಿ ಗೋಚರಾಸ್ಸರ್ವೇ ಮುಚ್ಯನ್ತೇ ಕಿಲ್ಬಿಷೈರ್ನರಾಃ**" ಎಂದರೆ ಯಾವ ಮಹಾತ್ಮನಿಗೆ ಬುದ್ಧಿಯು ಅನುಭವ ಪರ್ಯನ್ತವಾಗಿ ಪರಮಪುರುಷನಲ್ಲೇ ಪ್ರತಿಷ್ಠಿತವೋ ಎಂದರೆ ಯಾವನು ಪರಮಪುರುಷನನ್ನು ಆಶ್ರಯಿಸಿ ಪರಮೈಕಾನ್ತಿ ಪುರುಷನಾಗಿ ಮಹಾತ್ಮನೆಂದು ಹೇಳಿಸಿಕೊಳ್ಳುವನೋ ಅಂತವನ ದರ್ಶನದಿಂದ ಎಲ್ಲರೂ ಸಕಲಪಾಪಗಳಿಂದಲೂ ಬಿಡಲ್ಪಡುವರು ಎಂದು ಹೇಳಲ್ಪಟ್ಟಿರುತ್ತದೆ. ಭಾಗವತ ಮಾಹಾತ್ಮ್ಯವನ್ನು ಸ್ವಾಮಿಯು ತನ್ನ ಅನುಷ್ಠಾನಗಳಿಂದಲೇ ಪ್ರದರ್ಶಿಸಿರುತ್ತಾನೆ. ವಿಶ್ವಾಮಿತ್ರ, ವಸಿಷ್ಠ, ಭರದ್ವಾಜ, ಶರಭಂಗ, ಅಗಸ್ತ್ಯಾದಿಗಳಲ್ಲಿ ತೋರಿಸಿದ ಮಹಾವಿಶ್ವಾಸವು ಅಭಿನಂದನೀಯವಾದುದು. "**ಇಮೌಸ್ಮ ಮುನಿಶಾರ್ದೂಲ ಕಿಂಕರೌ ಸಮುಪಸ್ಥಿತೌ। ಆಜ್ಞಾಪಯ ಯಥೇಷ್ಟಂವೈ ಶಾಸನಂ ಕರವಾವ ಕಿಮ್**" ಎಂದು ಶ್ರೀರಾಮ ಲಕ್ಷ್ಮಣರು ವಿಶ್ವಾಮಿತ್ರರನ್ನು ಪ್ರಾರ್ಥಿಸುವುದು ಅನುಸಂಧೇಯವು. ಚಿತ್ರಕೂಟ ವಾಸವು ಶ್ರೀರಾಮಚಂದ್ರ ಪ್ರಭುವಿಗೆ ತುಂಬಾ ಉಪಾದೇಯವಾಗಿ "**ಕುರುಷ್ವಾವ ಸಥಂ ಸೌಮ್ಯವಾಸೇ ಮೇಽಭಿರತಂ ಮನಃ**" ಇಲ್ಲಿ ಆಶ್ರಮವನ್ನು ರಚಿಸು, ಎಂದು ಆಜ್ಞಾಪಿಸಿದರು. ಏಕೆಂದರೆ "**ಮುನಯಶ್ಚ ಮಹಾತ್ಮಾನಃ ವಸಂ**

**ತ್ಯಸ್ಮಿನ್ ಶಿಲೋಚ್ಚಯೇ"** ಮಹಾತ್ಮರಾದ ವಾಲ್ಮೀಕಾದಿ ಮುನಿಗಳು ಇಲ್ಲಿ ವಾಸಮಾಡುತ್ತಾರೆಯಷ್ಟೆ. ಆದುದರಿಂದಲೇ ಚಿತ್ರಕೂಟಕ್ಕೆ ಮಾಹಾತ್ಮ್ಯೆಯು ಎಂದು ಹೇಳಿದರು. ಹಾಗೆಯೇ ಕೃಷ್ಣಾವತಾರಿಯಾಗಿ, ಸಾಂದೀಪಿನಿ ಎಂಬ ಆಚಾರ್ಯರಲ್ಲಿ ತೋರಿಸಿದ ನಿರತಿಶಯ ಭಕ್ತಿಯೂ, ಕುಚೇಲರು ತನ್ನ ದರ್ಶನಕ್ಕಾಗಿ ಬಂದಾಗ ಅವರ ಕಾಲನ್ನು ತನ್ನ ಪತ್ನಿಯೊಡಗೂಡಿ ತೊಳೆದು ಆ ತೀರ್ಥವನ್ನು ತಾನೂ ಮತ್ತು ತನ್ನ ಪತ್ನಿಯೂ ಪ್ರೋಕ್ಷಿಸಿಕ್ಕೊಂಡ ಇತಿಹಾಸವೂ ಸಹ ಮಹಾತ್ಮರಲ್ಲಿ ತನಗಿರುವ ವಿಶ್ವಾಸವನ್ನೂ ಮತ್ತು ಅವರ ಮಾಹಾತ್ಮ್ಯೆಯನ್ನೂ ಸಹ ಪ್ರಕಟಿಸುತ್ತದೆ. ಆದುದರಿಂದ ಅಂತಹ ಮಹಾತ್ಮರನ್ನು ಸ್ವಾಮಿಯೇ ಅಗಲಿ ಇರಲಾರನು; ಏಕೆಂದರೆ ಆತನೇ **"ನತ್ಯಜೇಯಮ್"** ಎಂದೂ **"ಜ್ಞಾನೀತ್ವಾತ್ಮೈವ ಮೇ ಮತಮ್"** ಎಂದೂ "ಮಮ ಪ್ರಾಣಾಹಿ ಪಾಂಡವಾಃ" ಎಂದೂ ಹೇಳಿಕೊಂಡಿರುತ್ತಾನೆ. ನೀನು ಹೇಗೆ ಅಂತಹ ಮಹಾತ್ಮರನ್ನು ಅಗಲಿರಲಾರೆಯೋ ಹಾಗೆಯೇ ಆ ಮಹಾತ್ಮರೂ ಕೂಡ ನಿನ್ನನ್ನಗಲಿರಲಾರರು. **ಯದ್ವಿರಹೋತಿ ದುಸ್ಸಹಃ**—ಗೋಪಿಕಾ ಸ್ತ್ರೀಯರು ಕಣ್ಣಿಗೆ ರೆಪ್ಪೆ ಪಾಟವನ್ನುಂಟುಮಾಡಿ ಶ್ರೀ ಕೃಷ್ಣನನ್ನು ಸದಾ ನೋಡಿ ಅನುಭವಿಸುವುದಕ್ಕೆ ವಿಘ್ನವನ್ನುಂಟುಮಾಡಿದ ಚತುರ್ಮುಖನನ್ನು ಮಂದನೆಂದು ಗೋಪಿಕಾ ಗೀತೆಯಲ್ಲಿ ನಿಂದಿಸಿರುತ್ತಾರೆ. **"ಅಟತಿ ಯದ್ಭವಾನನ್ಹಿ ಕಾನನಂ ತ್ರುಟಿ ಯುಗಾಯತೇ ತ್ವಾಮ ಪಶ್ಯತಾಂ। ಕುಟಿಲ ಕುನ್ತಲಂ ಶ್ರೀಮುಖಂ ಚತೇ ಜಡ ಉದೀಕ್ಷತಾಂ ಪಕ್ಷ್ಮಕೃದ್ದ ಶಾಮ್"** ಎಂದಿರುತ್ತದೆ.

"**ಪರಾಙ್ಮುಖಾನಾಂ ಗೋವಿನ್ದೇ ವಿಷಯಾಸಕ್ತಚೇತಸಾಮ್। ತೇಷಾಂತತ್ಪರಮಂ ಬ್ರಹ್ಮ ದೂರಾದ್ದೂರತರೇ ಸ್ಥಿತಮ್" "ತನ್ಮಯತ್ವೇನ ಗೋವಿನ್ದೇ ಯೇನರಾನ್ಯಸ್ತ ಚೇತಸಃ। ವಿಷಯ ತ್ಯಾಗಿನಸ್ತೇಷಾಂ ವಿಜ್ಞೇಯಂ ಚ ತದನ್ತಿಕೇ"** ವಿಷಯ ಸುಖಗಳಲ್ಲಿ ಸಕ್ತವಾದ ಮನಸ್ಸುಳ್ಳವರಾದುದರಿಂದಲೇ ಗೋವಿದ್ದನಲ್ಲಿ ಮನಸ್ಸನ್ನು ಇಡದವರಿಗೆ ಪರಬ್ರಹ್ಮವು ಅತ್ಯಂತ ದೂರವಾಗಿರುವುದು. ಹಾಗಲ್ಲದೆ ವಿಷಯ ಸುಖಗಳನ್ನು ತ್ಯಾಗಮಾಡಿದವರಾಗಿ ಆ ಕಾರಣದಿಂದ ಪರಮಾತ್ಮನಲ್ಲೇ ಇಟ್ಟ ಮನಸ್ಸುಳ್ಳವರಾದ ಮತ್ತು ಐಹಿಕದಲ್ಲಿ ರಮಿಸದಿರುವ ಪ್ರಪನ್ನರಿಗೆ ಪರಮ ಪುರುಷನು ಬಹು ಸಮೀಪದಲ್ಲೇ ಇರುವನು ಎಂದು ತಿಳಿಯತಕ್ಕದ್ದು.

"**ಮಹಾತ್ಮಭಿಃ ಅವಲೋಕ್ಯತಾಂ ನಯ** ಎಂದು ಹೇಳಿರುವುದೂ, ಹಿಂದಿನ ಶ್ಲೋಕದಲ್ಲಿ ಕೀಟ ಜನ್ಮವನ್ನಾದರೂ, ಮಹಾ ಭಾಗವತರ ಮನೆಯಲ್ಲಿ ಉಂಟುಮಾಡು ಎಂದು ಹೇಳಿರುವುದೂ, ಅಂತವರ ದಿವ್ಯ ಕಟಾಕ್ಷವು ತಮ್ಮ ಮೇಲೆ ಬೀಳುವ ಹಾಗೆ ಮಾಡು ಎಂಬ ಭಾವದಿಂದ ಎಂದು ತಿಳಿಸಿರುತ್ತಾರೆ **"ಯಸ್ಯಾನುಭವ ಪರ್ಯನ್ತಾ ಬುದ್ಧಿಸ್ತತ್ವೇ ಪ್ರತಿಷ್ಠಿತಾ। ತದ್ದೃಷ್ಟಿಗೋಚರಾ**

**ಸ್ಸರ್ವೇ ಮುಚ್ಯನ್ತೇ ಸರ್ವ ಕಿಲ್ಬಿಷೈಃ** " ಎಂದರೆ ಯಾವ ಮಹಾತ್ಮನಿಗೆ ಅನುಭವ ಪರ್ಯನ್ತವಾಗಿರುವ ಬುದ್ಧಿಯು ಪರತತ್ವದಲ್ಲೇ ಪ್ರತಿಷ್ಠಿತವಾಗಿ ನೆಲೆಸಿರುವುದೋ ಅಂತಹ ಭಾಗವತೋತ್ತಮರ ದೃಷ್ಟಿಗೆ ಗೋಚರರಾದ ಸಮಸ್ತರೂ ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವರೆಂದು ಹೇಳಲ್ಪಟ್ಟಿರುತ್ತದೆ. ಹಾಗೆಯೇ "**ತೇಪುನನ್ತ್ಯುರುಕಾಲೇನ ದರ್ಶನಾ ದೇವಸಾಧವಃ** ಎಂದೂ ಭಾಗವತದಲ್ಲಿ ಹೇಳಲ್ಪಟ್ಟಿರುತ್ತದೆ. **ನಯ** ಎಂದು ಹೇಳಿರುವುದರ ಭಾವವೇನೆಂದರೆ ನೀನೇ ಸಿದ್ಧೋಪಾಯನು ಆ ಉಪಕಾರವನ್ನೂ ನೀನೇ ಮಾಡಬೇಕೇ ವಿನಾ ನಾನೇ ಸ್ವತಂತ್ರನಾಗಿ ನಡೆಸಲಾರೆನೆಂಬ ಭಾವವು. ಶರಣಾಗತಿಯನ್ನನುಷ್ಠಿಸು, ಎಲ್ಲಾ ಭಾರವನ್ನೂ ನಾನೇ ವಹಿಸುವೆನು, ಎಂದು ಚರಮ ಶ್ಲೋಕದಲ್ಲಿ ಹೇಳಿರುವುದರಿಂದ ನೀನೇ ನನ್ನನ್ನು ಭಾಗವತರ ದೃಷ್ಟಿಗೆ ಗೋಚರನಾಗುವ ಹಾಗೆ ಮಾಡುತ್ತೀ ಎಂಬ ದೃಢನಂಬಿಕೆ ಮಾತ್ರ ಉಂಟು, ಹಾಗೆಯೇ **ನಾರಾಯಣೇತಿಯ ಸ್ಯಾಸ್ಯೇ ವರ್ತ್ತತೇ ನಾಮಮಂಗಳಮ್ । ನಾರಾಯಣಸ್ತಮನ್ವಾಸ್ಯೇ ವತ್ಸಂ ಗೌರಿವ ವತ್ಸಲಾ** " ಯಾರ ಬಾಯಲ್ಲಿ ಮಂಗಳಕರ ನಾಮವಾದ ನಾರಾಯಣ ಎಂಬುದು ಇರುತ್ತದೆಯೋ ಅಂತಹವನನ್ನು, ಹೇಗೆ ಹಸುವು ಕರುವನ್ನು ಹಾಕಿ ಅದರಲ್ಲಿ ಅತಿ ವಿಶ್ವಾಸದಿಂದ ಕೂಡಿ ತನ್ನ ಕರುವನ್ನು ಕುರಿತು ಹೋಗುತ್ತದೋ ಹಾಗೆ, ನಾರಾಯಣನು ಅನುಸರಿಸಿಕ್ಕೊಂಡು ಹೋಗುವನು, ಎಂಬ ಭಾವವು. "**ವಸನ್ತಿ ವೈಷ್ಣವಾಯತ್ರ ತತ್ರಸನ್ನಿಹಿತೋಹರಿಃ**" ವಿಷ್ಣುಭಕ್ತರಾದ ಪ್ರಪನ್ನರು ಎಲ್ಲಿರುವರೋ ಅಲ್ಲಿಯೇ ಶ್ರೀಹರಿಯ ಸಾನ್ನಿಧ್ಯವುಂಟು, ಹೀಗೆ ಅನೇಕ ಪ್ರಮಾಣಗಳು ಭಕ್ತನ ವಿಶ್ಲೇಷವನ್ನು ಸ್ವಾಮಿಯು ಸಹಿಸನೆಂಬುದನ್ನು ಪ್ರದರ್ಶಿಸುತ್ತವೆ. ಸ್ವಾಮಿಯು ಎಲ್ಲರನ್ನೂ ವ್ಯಾಪಿಸಿ ಎಲ್ಲರ ಹೃದಯದಲ್ಲೂ ವಾಸಿಸುವನೆಂದು ಶಾಸ್ತ್ರ ಪ್ರಮಾಣಗಳು ಹೇಳುವಾಗ ವಿರಹಶಬ್ದಾರ್ಥವೇನು ? ಎಂದರೆ ತನ್ನ ದಿವ್ಯ ಮಂಗಳ ವಿಗ್ರಹ ದರ್ಶನದ ಅನುಭವಕ್ಕೆ ವಿಚ್ಛೇದವು. ಆ ಕಾರಣದಿಂದಲೇ ಶ್ರೀ ಕೃಷ್ಣಾವತಾರದಲ್ಲಿ ಋಷಿಗಳಿಗೂ ಗೋಪಿಕಾಸ್ತ್ರೀಯರಿಗೂ ತನ್ನ ದಿವ್ಯ ಮಂಗಳ ವಿಗ್ರಹದ ದರ್ಶನವಿತ್ತು ತನ್ನ ಪರತ್ವವನ್ನು ವ್ಯಕ್ತಪಡಿಸಿರುತ್ತಾರೆ— **ಅತಿದುಸ್ಸಹಃ** ಎಂಬುದರಿಂದ ಪರಮ ಪುರುಷನು ಅಂತಹ ಮಹಾತ್ಮರಿಗೆ ತನ್ನ ದಿವ್ಯ ಮಂಗಳ ವಿಗ್ರಹವನ್ನು ತೋರದೇ ಇರುವುದನ್ನು ಹಿತವಾಗಿ ಭಾವಿಸನು ಎಂದು ಇಷ್ಟುಮಾತ್ರವೇ ಅರ್ಥವೇ ವಿನಾ ಆ ವಿರಹದಿಂದ ಖೇದಪಡುವನು ಎಂಬರ್ಥವಲ್ಲವು "**ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ** " ಎಂದು ಮಹರ್ಷಿಯು ಶ್ರೀರಾಮನನ್ನು ಕುರಿತು ಹೇಳಿರುತ್ತಾರಲ್ಲಾ ಎಂದರೆ ಇಹಲೋಕ ವಿಡಂಬನ ಮಾತ್ರವೆಂದು ಅರ್ಥಮಾಡಬಹುದು. ಹಾಗೆ ವ್ಯಸನ ಪ್ರದರ್ಶನವನ್ನು ತೋರಿಸಿದ ಇತಿಹಾಸ ಉಂಟೋ ? ಎಂದರೆ ಸಮುದ್ರ ತರಣವಾದ ಒಡನೆಯೇ ಶ್ರೀರಾಮನು ಸುಗ್ರೀವಾದಿ ವಾನರ ಸೇನೆಯೊಂದಿಗೆ ಸುವೇಲ ಪರ್ವತವನ್ನು ಹತ್ತಿ ರಾವಣನ ಸೈನ್ಯವನ್ನವಲೋಕಿಸುತ್ತಿರುವಾಗ, ಸುಗ್ರೀವನು

**ನದೇಹಂ ನಪ್ರಾಣಾ ನ ಚ ಸುಖ ಮಶೇಷಾಭಿಲಷಿತಮ್**
**ನಚಾತ್ಮಾನಂ ನಾನ್ಯತ್ಕಿಮಪಿತವ ಶೇಷತ್ವವಿಭವಾತ್ ।**
**ಬಹಿರ್ಭೂತಂ ನಾಥ ಕ್ಷಣಮಪಿ ಸಹೇ ಯಾತುಶತಧಾ**
**ವಿನಾಶಂ ತತ್ಸತ್ಯಂ ಮಧು ಮಥನ ವಿಜ್ಞಾಪನ ಮಿದಮ್** ॥ ೫೭ ॥

---

ರಾವಣನು ಮಾಡಿದ ದ್ರೋಹವನ್ನು ಸಹಿಸದೆ, ರಾವಣನ ಎದೆಯಲ್ಲಿ ಮುಷ್ಟಿ ಪ್ರಹಾರವನ್ನು ಮಾಡಿ ಆತನ ಕಿರೀಟವು ಕೆಳಗೆಬೀಳುವ ಹಾಗೆ ಮಾಡಿ ದ್ವಂದ್ವ ಯುದ್ಧವನ್ನೆಸಗಿ ತಪ್ಪಿಸಿಕೊಂಡು ರಾಮ ಲಕ್ಷ್ಮಣರ ಸನ್ನಿಧಿಗೆ ಬಂದು ಸೇರಿದಾಗ, ಶ್ರೀರಾಮಚಂದ್ರ ಪ್ರಭುವು ಹೇಳುತ್ತಾನೇನೆಂದರೆ—"**ತ್ವಯಿ ಕಿಂಚಿತ್ಸಮಾಪನ್ನೇ ಕಿಂಕಾರ್ಯಂ ಸೀತಯಾ ಮಮ**" ಎಂದು ಹಾಗೆಯೇ ಇನ್ನೊಂದು ಕಡೆಯಲ್ಲಿ, ಲಕ್ಷ್ಮಣನು ಯುದ್ಧದಲ್ಲಿ ಮೂರ್ಛಿತನಾಗಿದ್ದಾಗ, ವ್ಯಸನದಿಂದ ಹೇಳುತ್ತಾರೇನೆಂದರೆ? "**ದೇಶೇದೇಶೇ ಕಳತ್ರಾಣಿ ದೇಶೇದೇಶೇಚ ಬಾಂಧವಾಃ । ತಂತು ದೇಶಂನ ಪಶ್ಯಾಮಿ ಯತ್ರಭ್ರಾತಾ ಸಹೋದರಃ**" ದೇಶದೇಶದಲ್ಲೂ ಕಳತ್ರರನ್ನು ಕಾಣಬಹುದು. ಸಹೋದರರು ಇರುವ ದೇಶವನ್ನು ಕಾಣುವದು ಅಸಾಧ್ಯವೆಂದು ಹೇಳಿರುತ್ತಾರೆ. ಹಾಗೆಯೇ ಪಿತುರ್ಮರಣ ವೃತ್ತಾಂತವನ್ನು ಕೇಳಿದಾಗಲೂ ಸೀತೆಯೇ ನಿನ್ನಮಾವಂದರು "**ಸೀತೇ ಮೃತಸ್ತೇಶ್ವಶುರಃ**" ಎಂದು ದುಃಖಪಟ್ಟಿರುವದು ಲೋಕಬಡಂಬನಾರ್ಥವಾಗಿ ಎಂದು ತಿಳಿಯತಕ್ಕದ್ದು. "**ಅವಬೋಧಿತವಾ**" ನೆಂದಾರಂಭಿಸಿ ಹೇಳಿದ ಮೂರು ಶ್ಲೋಕಗಳಿಂದ ಸ್ವಯಂ ಪ್ರಯೋಜನವಾದ ಉತ್ತರ ಕೃತ್ಯದಲ್ಲಿ ಪರಾಕಾಷ್ಠೆದಶೆಯನ್ನು ಹೊಂದಿದುದು ಭಾಗವತ ಸಂಶ್ರಯಣವೆಂದು ಹೇಳಲ್ಪಟ್ಟಿತು. ಇದರಿಂದ ಕಾಮ್ಯ ಮತ್ತು ನಿಷಿದ್ಧ ಕರ್ಮಗಳ ಲವಲೇಶವೂ ಕೂಡದೆಂಬುದು ಸೂಚಿತವು.—

**ಅವತಾರಿಕೆಯು**– ಹಿಂದಿನ ಶ್ಲೋಕಗಳಲ್ಲಿ ಪ್ರಪನ್ನನ ಉತ್ತರ ಕೃತ್ಯದಲ್ಲಿ ಭಾಗವತ ಸಂಶ್ರಯಣವು ಪರಮ ಹಿತವಾದುದಾಗಿ ಹೇಳಿಕೊಂಡರು. ಇಂತಹ ಭಾಗವತ ಕೈಂಕರ್ಯಕ್ಕೂ ಭಗವತ್ಕೈಂಕರ್ಯಕ್ಕೂ ಸ್ವಾಮಿಯು ಅನುಗ್ರಹಿಸಿರುವ ಕರಣ ಕಳೇಬರಯೋಗಗಳೂ ಮತ್ತು ಕಳತ್ರಸುತಾದಿ ವಿಭೂತಿ ವರ್ಗವೂ ಸಹ ಅನುಕೂಲವಿಲ್ಲದುದಾದರೆ ಅಂತಹ ಅನಿಷ್ಟವಾದ ಪ್ರತಿಕೂಲ ವರ್ಗದಿಂದ ತಮಗೇನೂ ಆಗತಕ್ಕದ್ದಿಲ್ಲವೆಂದೂ ಅವೆಲ್ಲಾ ನಾಶ ಹೊಂದಬಹುದೆಂದೂ ಅದೇ ತಮ್ಮ ಮುಖ್ಯ ವಿಜ್ಞಾಪನೆ ಎಂದೂ ಹೇಳಿಕೊಳ್ಳುತ್ತಾರೆ—

**ಅರ್ಥವು. ಹೇನಾಥ**—ಓ ಸ್ವಾಮಿಯೇ! ಇದರಿಂದ "**ಮಮನಾಥ**" ಎಂಬ ಶ್ಲೋಕದಲ್ಲಿ ಉಪಪಾದಿಸಲ್ಪಟ್ಟ ಅಭಿಪ್ರಾಯವಾದ, ತಾವೂ, ತಮ್ಮ ದೇಹ ಮತ್ತು ತಮಗೆ ಸೇರಿದ ವರ್ಗವೆಲ್ಲಕ್ಕೂ ಸರ್ವೇಶ್ವರನೇ ಶೇಷಿಯು, ಎಲ್ಲವೂ ಆತನ ಸ್ವತ್ತಾಗಿ ಶೇಷಭೂತವೆಂಬುದು ಪ್ರದರ್ಶಿತವು ತವ—"ಪತಿಂ ವಿಶ್ವಸ್ಯ"

ಎಂಬಲ್ಲಿ ಉಪಪಾದಿತವಾಗಿ ಸರ್ವಶೇಷಿಯಾದ ನಿನ್ನ **ಶೇಷತ್ವೆ ವಿಭವಾತ್**— ಎಲ್ಲವೂ ನಿನಗೆ ಶೇಷ ಭೂತವಾಗಿ, ಆದುದರಿಂದ ನಾನೂ ಕೂಡ ಶೇಷಭೂತನಾಗಿ ಸ್ವಾಮಿಯಾದ ನಿನಗೆ ಕೈಂಕರ್ಯ ಮಾಡುವುದೇ ಸ್ವರೂಪವಾಗಿರುವ ಮಹಿಮೆಯು ದೆಸೆಯಿಂದ, **ಭಹಿರ್ಭೂತಂ ಯದಿ**—ಹೊರಗಾದುದು ಎಂದರೆ ನಿನ್ನ ಕೈಂಕರ್ಯಕ್ಕೇ ಯೋಗ್ಯವಾಗಿ ನಿನಗೆ ಭೋಗ್ಯಭೂತವಾದುದಲ್ಲದೇ ಹೋದರೆ, **ನ ದೇಹಂ ಸಹೇ**- ನನ್ನ ದೇಹವನ್ನೂ ಕೂಡ ನಾನು ಸಹಿಸಲಾರೆನು; ನನಗೆ ಬೇಕಿಲ್ಲವೆಂಬ ಭಾವವು. ಹಾಗೆಯೇ **ನ ಪ್ರಾಣಾ್ ಸಹೇ**— ನಾನು ಪ್ರಾಣವನ್ನೂ ಸಹಿಸ ಲಾರೆನು. ಹಾಗೆಯೇ ಸುಖಂ-ಸಮಸ್ತ ಅನುಕೂಲತೆಯನ್ನೂ, **ಅಶೇಷಾಭಿ ಲಷಿತಮ್**— ಇಹಲೋಕದಲ್ಲಿ ಜನರು ಕೋರುವ ಸರ್ವಾಭೀಷ್ಟವನ್ನೂ, **ನಸಹೇ**— ನಾನು ಸಹಿಸಲಾರೆನು ಎಂದರೆ ಅಂತಹ ಅಭೀಷ್ಟವು ನನಗೆ ಬೇಕಾಗಿಲ್ಲವು. ಇವೆಲ್ಲಾ ಹಾಗಿರಲಿ. **ನಚಾತ್ಮಾನಂ**— ನನ್ನ ಆತ್ಮ ಸ್ವರೂಪಕೂಡ, ನಿನಗೆ ಕೈಂಕರ್ಯಕ್ಕೆ ಉಪ ಯುಕ್ತವಾದರಂತೂ ಸರಿ, ಹಾಗಲ್ಲದಿದ್ದರೆ ಆ ಆತ್ಮಸ್ವರೂಪವನ್ನೂ ಸಹ **ನಸಹೇ; ಅನ್ಯತ್ಕಿಮಪಿ**— ಹೀಗೆ ಹೇಳಿದುದರಲ್ಲಿ ಇನ್ನು ಯಾವುದಾದರೂ ಬಿಟ್ಟು ಹೋಗಿದ್ದ ಪಕ್ಷದಲ್ಲಿ ಬೇರೆ ಇನ್ನು ಯಾವುದೇ ಆಗಲಿ, **ನಸಹೇ**— ಹಾಗೆ ನಿನ್ನ ಶೇಷತ್ವಕ್ಕಾಗಿ ಅಲ್ಲದೆ ಯಾವುದಾದರೂ ಇದ್ದುದೇ ಆದರೆ, ಅದು, ಶತಧಾ-ಅನೇಕ ವಿಧವಾಗಿ, ಶತಶಬ್ದವು ಅನೇಕ ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುತ್ತದೆ. **ವಿನಾಶಂ**— ಸಂಪೂರ್ಣನಾಶವನ್ನು **ಯಾತು** – ಹೊಂದಲಿ, **ಹೇ ಮಧು ಮಥನ** – ಮಧು ವೆಂಬ ರಾಕ್ಷಸನನ್ನು ಕೊಂದವನೇ, **ತತ್**— ಆ ನನ್ನ ಮಾತು, ಸತ್ಯಂ— ತುದಿ ನಾಲಿಗೆಯ ತುದಿಮಾತಲ್ಲವು ಯಥಾರ್ಥವು. **ಇದಮ್**—ಇದೇ, **ವಿಜ್ಞಾಪನಂ**- ನನ್ನ ಮುಖ್ಯವಾದ ವಿಜ್ಞಾಪನೆಯು. ನಾನೂ ಮತ್ತು ನನಗೆ ಸೇರಿದ ನಿಯಾ ಮ್ಯವರ್ಗವೆಂದು ನೀನು ದಯಪಾಲಿಸಿರುವುದೆಲ್ಲವೂ ನಿನಗೆ ಶೇಷ ಭೂತವಾಗಿ ನಿನ್ನ ಕೈಂಕರ್ಯಕ್ಕೆ ಅನುಕೂಲವಾಗಿರುವ ಪಕ್ಷದಲ್ಲಿ ಚಿಂತೆ ಇಲ್ಲವು. ಹಾಗಲ್ಲದ ಪಕ್ಷದಲ್ಲಿ ಅವುಗಳಿಂದ ನನಗಾಗುವುದು ಏನೂ ಇಲ್ಲವು. ಅವುಗಳು ಒಡನೆಯೇ ಸಂಪೂರ್ಣ ವಾಗಿ ನಾಶವಾಗಲಿ; ಇವೆಲ್ಲಾ ನಿನ್ನ ಶೇಷತ್ವಕ್ಕಾಗಿ ಅಲ್ಲದೇ ಹೋದರೆ ಅವು ವಿರೋಧಿ ವರ್ಗಕ್ಕೆ ಸೇರಿದವು. ಆಗ ಸಂಪೂರ್ಣವಾಗಿ ಪರಿಹರಣೀಯವೇ ಎಂಬ ಭಾವವು. ಇದೀಗ ತನ್ನ ಸತ್ಯವಾದ ವಿಜ್ಞಾಪನೆಯೆಂದು ಹೇಳಿಕೊಂಡರು. ಇದ ರಿಂದ ನಿಷಿದ್ಧಕಾಮ್ಯ ಕರ್ಮಗಳಲ್ಲಿ ಪ್ರವೃತ್ತಿ ಬೇಡವೆಂಬ ಮಹಾ ವೈರಾಗ್ಯವು ಪ್ರದರ್ಶಿಸಲ್ಪಟ್ಟಿತು.

**ಉಪಪಾದನೆಯು**— ಹಿಂದೆ ಭಾಗವತ ದಿವ್ಯ ಕಟಾಕ್ಷ ಮಹಿಮೆಯು ಹೇಳ ಲ್ಪಟ್ಟಿದುದರಿಂದ, ಅಂತಹ ಮಹಾತ್ಮರ ಉಪದೇಶದಿಂದ ಉಂಟಾದ ಮುಖ್ಯ ಜ್ಞಾನವು, ಸರ್ವವೂ, ನಾನೂ ಸಹ ನಿನಗೆ ಶೇಷಭೂತವೆಂಬುದು. ಆದುದರಿಂದ ನಾನೂ ಮತ್ತು ನನಗೆ ಸೇರಿದವರೂ ಸಹ, ನಿನ್ನ ಕೈಂಕರ್ಯಕ್ಕಾಗಿಯೇ, ಹಾಗಲ್ಲದೆ

ನಿನಗೆ ಪ್ರತಿ ಕೂಲವಾದರೆ ಅವು ಆಗ ವಿರೋಧಿ ವರ್ಗಕ್ಕೆ ಸೇರಿದವವಾಗುವುದ ರಿಂದ ಅವುಗಳು ಒಂದು ಕ್ಷಣಕಾಲ ಕೂಡ ತಮಗೆ ಬೇಡವು. ಅವೆಲ್ಲಾ ನಾಶ ಹೊಂದಲೆಂದು ಬೇಡುತ್ತಾರೆ. ಇತರರು ತಮ್ಮನ್ನು ವೈರಾಗ್ಯ ಶಿಖಾಮಣಿಗಳೆಂದು ಹೊಗಳಲಿ ಎಂದು ಮಾಡಿದ ಪ್ರಾರ್ಥನೆಯಲ್ಲವು ಸತ್ಯವಾದ ವಿಜ್ಞಾಪನೆಯು ಎನ್ನುತ್ತಾರೆ. ಹೇನಾಥ ಎಂಬ ಸಂಬೋಧನೆಯಿಂದಲೇ ಶ್ರೀ ಮನ್ನಾರಾಯಣನೇ ವಿಶ್ವಕ್ಕೆಲ್ಲಾ ಶೇಷಿಯೆಂದೂ ಎಲ್ಲವೂ ಆತನ ಸ್ವತ್ತು ಎಂಬ ಭಾವವೂ ಪ್ರದರ್ಶಿತವು. **ಕ್ಷಣಮಪಿ ನಸಹೇ** ಎಂಬುದನ್ನು ದೇಹಂ, ಪ್ರಾಣಾನ್, ಮೊದಲಾದ ಎಲ್ಲಾ ದ್ವಿತೀಯಾಂತ ಪದಗಳಿಗೂ ಅನ್ವಯಿಸತಕ್ಕದ್ದು. ಭಹಿರ್ಭೂತಂ ಎಂಬುದನ್ನು **ತವ ಶೇಷತ್ವವಿಭವಾತ್** ಬಹಿರ್ಭೂತಂ ಎಂದೂ ಅನ್ವಯಿಸತಕ್ಕದ್ದಾಗಿದೆ, ಇವೆಲ್ಲವೂ ಮತ್ತು ವಿಶ್ವವೆಲ್ಲವೂ ನಾಥನಾದ ಸ್ವಾಮಿಯ ಶೇಷತ್ವಕ್ಕೆ ಸೇರಿದವುಗಳೇ. ಅವು ಬಹಿರ್ಭೂತವಾಗಲು ಸಾಧ್ಯವೇ ಇಲ್ಲವು. ಆದುದರಿಂದ ಬಹಿರ್ಭೂತವು ಹೇಗಾದೀತು ಎಂದರೆ ಸರ್ವೇಶ್ವರನ ಕೈಂಕರ್ಯಕ್ಕೂ ತನ್ಮೂಲಕವಾಗಿ ಆತನ ಪ್ರೀತಿಗೂ ಅನುಕೂಲವಾಗದೇ ಇದ್ದರೀಗ ಬಹಿರ್ಭೂತವೆನಿಸುತ್ತದೆ ಆಗ ವಿರೋಧಿ ವರ್ಗಕ್ಕೆ ಸೇರಿದುವಾಗಿ ಪರಿಹರಣೀಯವೆಂಬುದು ತಾತ್ಪರ್ಯವು. **ಸಕಲಂ ತದ್ಧಿ ತವೈವ** ಎಂಬ ಜ್ಞಾನವಿದ್ದುದಾದರೆ ವಿರೋಧಿವರ್ಗವೆಂಬ ಭಾವನೆಯೇ ಇಲ್ಲ ವಾಗುತ್ತದೆ. ಎಲ್ಲವೂ ಆಗ ಭಗವದರ್ಪಣ ಬುದ್ಧಿಯಿಂದ ನಡೆಯುವುದರಿಂದ ತೊಂದರೆ ಇಲ್ಲವು. ಆದರೆ ಪರಮೈಕಾಂತಿಯಾದ ಆರ್ತನು ಈ ದೇಹ, ಪ್ರಾಣ ಮೊದಲಾದವುಗಳನ್ನೆಲ್ಲಾ ಹೊಂದಿರುವ ಅವಸ್ಥೆಯನ್ನು ಬೆಂಕಿಯ ಮಧ್ಯದಲ್ಲಿ ಇರುವ ಹಾಗೆ ಭಾವಿಸುವನಾದುದರಿಂದ ಆತನಿಗೆ ಇವೆಲ್ಲವೂ ವಿರೋಧಿ ವರ್ಗಕ್ಕೆ ಸೇರಿದವುಗಳಾಗಿ ಅವುಗಳ ಸಂಬಂಧವು ಎಷ್ಟು ಬೇಗನೆ ತೊಲಗಿದರೆ ಅಷ್ಟು ಒಳ್ಳೆ ಯದೆಂದು ಭಾವಿಸುವನು. ಪರಮೈಕಾನ್ತಿಗಳ ಸಿದ್ಧಾನ್ತವು ಅನನ್ಯ ಭೋಗ್ಯತ್ವಾ ದಿಗಳಿಂದ ಲಕ್ಷ್ಮೀಸಿದ್ಧಾನ್ತಕ್ಕೆ ಸಮಾನವೆಂದು ಶ್ರೀ ನಿಗಮಾನ್ತ ದೇಶಿಕರವರು "**ಶುದ್ಧಾ ನಾಂತು ಲಭೇಮಹಿ ಶುದ್ಧಾನ್ತ ಸಿದ್ಧಾನ್ತಿ ನಾಂ**" ಎಂಬಲ್ಲಿ ಹೇಳಿರು ತ್ತಾರೆ. ಶುದ್ಧಾನ್ತವೆಂದರೆ ಅಂತಃಪುರದ ಸಿದ್ಧಾನ್ತವೆಂದರೆ ಲಕ್ಷ್ಮಿಯ ಅಭಿ ಪ್ರಾಯವು. ಲಕ್ಷ್ಮಿಯು ಎಂದಿಗೂ ಪರಮಾತ್ಮನನ್ನಗಲಿ ಇರಲಾರಳು. ಆದುದರಿಂದ "**ಯಸ್ತ್ವಯಾ ಸಹಸ ಸ್ವರ್ಗೋ ನಿರಯೋಯಸ್ತ್ವಯಾ ವಿನಾ**" ಇದು ಶ್ರೀರಾಮ ಚಂದ್ರನು ಸೀತೆಯನ್ನು ವನಕ್ಕೆ ಬರಬೇಡವೆಂದು ನಿರೋಧಿಸಿದಾಗ ಹೇಳುವ **ಸೀತಾ** ವಾಕ್ಯವು. ನಿನ್ನೊಡನಿರುವುದೇ ನನಗೆ ಸ್ವರ್ಗವು. ನಿನ್ನನ್ನಗಲಿರು ವುದು ನರಕವು. ಎಂದು ಹೇಳಿರುತ್ತಾಳೆ. ಇದರ ಉತ್ತರಾರ್ಧವು "**ಇತಿ ಜಾನನ್ ಪರಾಂಪ್ರೀತಿಂ ಗಚ್ಛ ರಾಮಮಯಾ ಸಹ,**" ಎಂಬುದು. (ರಾ. ಅಯೋ ೩೦–೧೮) ಹಾಗೆಯೇ ಲಕ್ಷ್ಮಣೋಕ್ತಿಯೂ ಇರುತ್ತದೆ. "**ನದೇವ ಲೋಕಾ ಕ್ರಮಣಂ ನಾಮರತ್ವ ಮಹಂ ವೃಣೇ। ಐಶ್ವರ್ಯಂ ವಾಪಿ ಲೋಕಾನಾಂ ಕಾಮಯೇನತ್ವಯಾ ವಿನಾ**" (ರಾ–ಅ–೩೧–೫) ಲಕ್ಷ್ಮಣನು ಶ್ರೀರಾಮಚಂದ್ರ

ಪ್ರಭುವನ್ನು ಕುರಿತು ಹೇಳುತ್ತಾನೆ. ನಿನ್ನ ಸಾನ್ನಿಧ್ಯದಲ್ಲಿದ್ದುಕೊಂಡು ನಿನಗೆ ಎಸಗುವ ಕೈಂಕರ್ಯವೇ ನನಗೆ ಮುಖ್ಯವಾದುದರಿಂದ ನಿನ್ನನ್ನು ಬಿಟ್ಟು ಯಾವ ಐಶ್ವರ್ಯವನ್ನೂ ನಾನು ಬಯಸುವುದಿಲ್ಲವೆನ್ನುತ್ತಾರೆ. ಇಲ್ಲಿ **"ಐಶ್ವರ್ಯಂ ವಾಪಿ ಲೋಕಾನಾಂ"** ಎಂಬುದರಿಂದ ಪ್ರಜಾಪತಿ, ಪಶುಪತಿ, ಸುರಪತಿಗಳ ಐಶ್ವರ್ಯವನ್ನೂ ನೀನಿಲ್ಲದೆ ನಾನು ಅಪೇಕ್ಷಿಸುವುದಿಲ್ಲವು.

**ನಾಮರತ್ವಮಹಂ ವೃಣೇ**—ಮೇಲೆ ಹೇಳಿದವುಗಳಿಗಿಂತ ವಿಲಕ್ಷಣವಾಗಿರಬೇಕಾಗಿರುವುದರಿಂದ ಜರಾಮರಣಾದಿಗಳಿಲ್ಲದ ಅಮರತ್ವವೆಂಬುದರಿಂದ ಪ್ರಕೃತಿ ವಿಯುಕ್ತ ಜೀವಾತ್ಮಾವಸ್ಥೆಯನ್ನು ಅನುಭವಿಸುವ ಕೈವಲ್ಯವು ಹೇಳಲ್ಪಟ್ಟಿತು **"ನದೇವಲೋಕಾಕ್ರಮಣಂ ಅಹಂ ವೃಣೇ" ದೇವಾನಾಂ ಪೂರಯೋಧ್ಯಾ** ಎಂಬಲ್ಲಿ ಹೇಳಿರುವ ಹಾಗೆ ದೇವಲೋಕವು ನಿತ್ಯಸೂರಿಗಳ ಪಟ್ಟಣವಾದ ದಿವ್ಯ ವೈಕುಂಠವು ಅದರ **ಆಕ್ರಮಣಂ** ಎಂಬುದರಿಂದ ಅಲ್ಲಿನ ವಾಸದಿಂದುಂಟಾಗುವ ಸುಖವನ್ನೂ ನಿನ್ನ ಅನುಭವ, ಕೈಂಕರ್ಯಗಳು ಅಲ್ಲಿ ಇಲ್ಲದೇ ಹೋದರೆ ಅದನ್ನೂ ನಾನು ಪ್ರಾರ್ಥಿಸುವುದಿಲ್ಲವೆಂದು ಹೇಳಿಕೊಂಡಿರುತ್ತಾನೆ ಆದುದರಿಂದ ಶ್ರೀರಾಮನು ಯುವರಾಜನಾಗು ಎಂದು ಹೇಳಿದರೂ ಇಷ್ಟಪಡಲಿಲ್ಲವು. ಹಾಗೆಯೇ ಇನ್ನೊಂದು ಕಡೆಯಲ್ಲಿಯೂ ಆತನೇ ಹೇಳುತ್ತಾನೇನೆಂದರೆ **"ನ ಚ ಸೀತಾ ತ್ವಯಾ ಹೀನಾ ನ ಚಾ ಹ ಮಪಿ ರಾಘವ। ಮುಹೂರ್ತ ಮಪಿ ಜೀವಾವೋ ಜಲಾನ್ಮತ್ಸ್ಯಾ ವಿವೋದ್ಧೃತೌ"** ಸೀತೆಯಾಗಲಿ ನಾನೇಯಾಗಲಿ ನಿನ್ನಗಲಿ ಒಂದು ಮುಹೂರ್ತವಾಗಲಿ ಜೀವಿಸಿರಲಾರೆವು ನೀರನ್ನು ಬಿಟ್ಟು ಮತ್ಸ್ಯಗಳು ಹೇಗೆ ಇರಲಾರವೋ ಹಾಗೆ ಎಂದು ಹೇಳಿಕ್ಕೊಂಡಿರುತ್ತಾನೆ. ಇಂತಹ ಅಭಿಪ್ರಾಯವನ್ನೇ ಸೀತೆಯೂ ಸಹ ಪ್ರದರ್ಶಿಸಿರುತ್ತಾಳೆ. **ನಹಿಮೇ ಜೀವಿತೇನಾರ್ಥೋ ನೈವಾರ್ಥೈರ್ನಚ ಭೂಷಣೈಃ। ವಸಂತ್ಯಾ ರಾಕ್ಷಸೀ ಮಧ್ಯೇ ವಿನಾ ರಾಮಂ ಮಹಾರಥಂ** ಈ ಘೋರ ರಾಕ್ಷಸಿಯರ ಮಧ್ಯದಲ್ಲಿ ವಾಸಿಸುತ್ತಾ ಮಹಾ ಸಮರ್ಥನಾದ ರಾಮನನ್ನಗಲಿರುವ ನನಗೆ ಬದುಕಿರುವುದಿಂದೇನು ಪ್ರಯೋಜನವು? ದ್ರವ್ಯಗಳಿಂದೇನು? ಭೂಷಣಗಳಿಂದೇನು! ಎಂದು ಹಂಬಲಿಸುತ್ತಾಳೆ, ಇದರಿಂದ ಭಗವತ್ಕೈಂಕರ್ಯವನ್ನು ಆತನ ಸನ್ನಿಧಿಯಲ್ಲಿದ್ದುಕೊಂಡು ಮಾಡುವುದೇ ಪರಮ ಪುರುಷಾರ್ಥವೆಂಬುದನ್ನು ಮೇಲಿನ ಪ್ರಮಾಣಗಳಿಂದ ಗ್ರಹಿಸಬಹುದು. ಹಾಗಲ್ಲದೆ ವಿರೋಧಿ ವರ್ಗಗಳೊಂದಿಗಿರುವ ಅವಸ್ಥೆಯು ತಮಗೆ ಬೇಕಾಗಿಲ್ಲವು. ಅವುಗಳೆಲ್ಲಾ ಸಾವಿರ ಪಾಲಾಗಿ ನಶಿಸಿಹೋಗಲಿ ಎಂದರು. ಹೀಗೆ **ಶತಧಾ** ವಿನಾಶವನ್ನು ಬೇಡಿರುವುದರಲ್ಲಿ **ನಚಾತ್ಮಾನಂ** ಎಂದು ತಮ್ಮ ಆತ್ಮಾವನ್ನು ಸೇರಿಸಿ ಹೇಳಿದರು. ಆತ್ಮಾ ಅಣುವು, ನಿರವಯುವ ವಸ್ತುವು. ನಾಶವಾಗುವವಸ್ತುವೂ ಅಲ್ಲ, ನಿತ್ಯವಾದುದು. ಹೀಗಿರುವಾಗ ಅದೂ **ಶತಧಾ ವಿನಾಶ** ಹೊಂದಲಿ ಎಂದರೇನು? ಎಂದರೆ ಆಕ್ಷೇಪಗಳು ಉಂಟಾಗುತ್ತವೆ. ಅವುಗಳಿಗೆ ಸಮಾಧಾನವು ಹೇಗೆಂದರೆ, **"ದಾಸಭೂತಾಃ ಸ್ವತಸ್ಸರ್ವೇ"** ಎಂಬಲ್ಲಿ ಹೇಳಿರುವ ಹಾಗೆ ದಾಸ

**ದುರನ್ತಸ್ಯಾನಾದೇರ ಪರಿಹರಣೀಯಸ್ಯ ಮಹತಃ
ನಹೀನಾಚಾರೋಽಹಂ ನೃಪಶು ರಶುಭಸ್ಯಾಸ್ಪದಮಪಿ ।
ದಯಾಸಿಂಧೋ ಬಂಧೋ ನಿರವಧಿಕ ವಾತ್ಸಲ್ಯ ಜಲಧೇ
ತವಸ್ಮಾರಂ ಸ್ಮಾರಂ ಗುಣಗಣ ಮಿತೀಚ್ಛಾಮಿ ಗತಭೀಃ ॥ ೫೮ ॥**

---

ತ್ವವೂ, ಸ್ವಾಮಿಗೆ ಕೈಂಕರ್ಯವೂ ಈ ಆತ್ಮಾವಿನ ಸ್ವರೂಪಕ್ಕೇ ಸೇರಿದವುಗಳು. ಇವುಗಳಿಗೆ ಅನುಕೂಲವಿಲ್ಲದ ಸ್ವರೂಪತಾನೇ ಏತಕ್ಕೆ ಎಂಬ ಭಾವದಿಂದ ಹೇಳಿದುದು ಎಂದು ಭಾವಿಸತಕ್ಕದ್ದು. ಅಥವಾ "**ವಾಲಾಗ್ರಶತ ಭಾಗಸ್ಯಶತಧಾ ಕಲ್ಪಿತಸ್ಯಚ**'' ಎಂಬ ಆತ್ಮ ಸ್ವರೂಪವನ್ನು ಹೇಳುವ ಪ್ರಮಾಣವನ್ನನುಸರಿದುದು ಎಂದು ಭಾವಿಸಬಹುದು.

ಇಂತಹ ಪ್ರಾರ್ಥನೆಯು ಖ್ಯಾತಿಗೋಸ್ಕರವಾಗಿ ತುದಿನಾಲಿಗೆಯ ಮಾತಲ್ಲವು ಎಂದು **ತತ್ಸತ್ಯಂ** ಎಂದು ಪ್ರಮಾಣಮಾಡಿ ಹೇಳುವ ಮಾತಾಗಿದೆ. **ಮಧುಮಥನ** ಎಂಬ ಸಂಬೋಧನೆಯು ಸಾರ್ಥವತ್ತಾಗಿರುತ್ತದೆ ಪ್ರಬಲನಾದ ಮಧು ಎಂಬ ರಾಕ್ಷಸನನ್ನು ನಾಶಮಾಡಿದವನೀಗ ಪ್ರಬಲ ಶತ್ರುಗಳಾದ ವಿರೋಧಿ ವರ್ಗವನ್ನು ಪರಿಹರಿಸುವ ಶಕ್ತಿಯುಳ್ಳವನೆಂಬ ಭಾವವು ಸೂಚಿತವು. "**ದಶೇಂದ್ರಿಯಾನನಂ ಘೋರಂ ಯೋಮನೋ ರಜನೀ ಚರಂ । ವಿವೇಕಶರ ಜಾಲೇನ**— ಎಂಬುದು ಇಲ್ಲಿ ಅನುಸಂಧೇಯವು. ದಶಮುಖನಾದ ರಾವಣನನ್ನು ನಿಗ್ರಹಿಸಲು ಶ್ರೀರಾಮನೇ ಹೇಗೆ ಶಕ್ತನೋ, ಹಾಗೆಯೇ ಈ ದಶೇಂದ್ರಿಯಗಳೆಂಬ ಹತ್ತು ಮುಖಗಳುಳ್ಳ ಈ ಮನಸ್ಸೆಂಬ ರಾವಣನನ್ನೂ ನಿರೋಧಿಸಲು ಆತನೇ ಸಿದ್ಧೋಪಾಯನಾಗಿ ಶಕ್ತನೆಂಬ ಭಾವವನ್ನು ಈ ಸಂಬೋಧನೆಯು ತಿಳಿಸುತ್ತದೆ **ಸತ್ಯಂ** ಎಂಬ ಪದವನ್ನು ವಿಜ್ಞಾಪನೆಯು ಸತ್ಯವೆಂದೂ ಅನ್ವಯಿಸಬಹುದು. ವಿಶೇಷ ಗೌರವ ಮತ್ತು ಭಕ್ತಿ ವಿಶ್ವಾಸಗಳಿರುವವರಲ್ಲಿ ಮಾಡಿದ ಪ್ರಾರ್ಥನೆಯನ್ನು ವಿಜ್ಞಾಪನೆಯೆಂದು ಹೇಳುವುದು ದಾಸಭೂತನಿಗೆ ಸ್ವರೂಪವಾದುದರಿಂದ **ವಿಜ್ಞಾಪನಮಿದಂ** ಎಂದು ಪ್ರಯೋಗವು ಹಿಂದೆಯೂ ಕೂಡ "**ಶೃಣು ವಿಜ್ಞಾಪನ ಮೇಕ ಮಗ್ರತಃ**" ಎಂದು ಪ್ರಾರ್ಥಿಸಿರುತ್ತಾರೆ (ಶ್ಲೋ ೫೦)

ಇದರಿಂದ ಮುಖ್ಯವಾಗಿ ಇಲ್ಲಿ ಹೇಳಲ್ಪಟ್ಟಿರುವುದು ಏನೆಂದರೆ ನಿಶ್ಚಯವಾದ ಶೇಷತ್ವ ಜ್ಞಾನವು. ತಾನೂ ತನಗೆ ಕೊಟ್ಟಿರುವ ಕಳತ್ರ ಪುತ್ರಗೃಹ ಕ್ಷೇತ್ರಗಳು ಎಲ್ಲವೂ ಆತನ ಸ್ವತ್ತು, ಆತನಿಗೆ ಅಧೀನವು ಎಂಬ ಜ್ಞಾನವು. ಆದುದರಿಂದ ಸ್ವಾಮಿಯ ಕೈಂಕರ್ಯಕ್ಕೆ ಅನುಪಯುಕ್ತವಾದುದೂ, ತನ್ಮೂಲಕವಾಗಿ ತದೀಯರ ಕೈಂಕರ್ಯಕ್ಕೆ ಅನುಪಯುಕ್ತವಾದುದು ಮುಮುಕ್ಷುವಿಗೆ ಬೇಕಿಲ್ಲವು ಎಂಬುದು—

**ಅವತಾರಿಕೆಯು**— ಹಿಂದಿನ ಶ್ಲೋಕದಲ್ಲಿ ತಾನೂ, ತನಗೆ ಸೇರಿದವೂ ಭಗವತ್ಕೈಂಕರ್ಯಕ್ಕೆ ಅನರ್ಹವಾದುದಾದರೆ ಯಾವುದೂ ಬೇಡ. ಅವೆಲ್ಲವೂ ನಾಶ ಹೊಂದಲಿ ಎಂದು ಹೇಳಿ, ದಿವ್ಯ ವೈಕುಂಠ ಪ್ರಾಪ್ತಿಯನ್ನೂ ನನ್ನ ಕೈಂಕರ್ಯವನ್ನೂ ಅಪೇಕ್ಷಿಸಿರುವೆಯಲ್ಲಾ, ನಿನ್ನಲ್ಲಿರುವ ಯಾವ ಸುಕೃತ ವಿಶೇಷವನ್ನು ಮೂಲ ಮಾಡಿಕೊಂಡು ಹಿಂದೆ ೪೮ ನೆಯ ಶ್ಲೋಕದಲ್ಲೇ "ಕೃಪಯಾ ಕೇವಲಮಾತ್ಮಸಾತ್ಕುರು." ಎಂದು ನಿರ್ಭಯದಿಂದ ಪ್ರಾರ್ಥಿಸಿರುವೆ ? ಎಂದು ಭಗವಂತನು ಆಕ್ಷೇಪಿಸಬಹುದೆಂದು ಭಾವಿಸಿ ಹೇಳುತ್ತಾರೇನೆಂದರೆ, ನನ್ನಲ್ಲಿ ಎಲ್ಲಿ ಹುಡುಕಿ ನೋಡಿದರೂ ಒಳ್ಳೆಯ ವಿಷಯವು ಯಾವುದೂ ಸಿಕ್ಕಲಾರದು. ಆದರೂ ನೀನು ದಯಾಸಿಂಧುವು, ನಿರ್ಹೇತುಕವಾಗಿ ಸರ್ವವಿಧ ಬಂಧುವು. ಆಶ್ರಿತ ರಕ್ಷಣೋಪಯುಕ್ತವಾದ ಕಲ್ಯಾಣ ಗುಣ ಸಾಗರನು. ಮತ್ತು ಮುಖ್ಯವಾಗಿ ನಿರವಧಿಕ ವಾತ್ಸಲ್ಯ ಜಲಧಿಯು. ಹೀಗಿರುವಾಗ ನಿರ್ಭಯನಾಗಿ ಸರ್ವ ಸಮರ್ಥನಲ್ಲಿ ನನ್ನ ಕೋರಿಕೆಯನ್ನು ಹೇಳಿಕೊಳ್ಳುವುದರಲ್ಲಿ ತಪ್ಪೇನು ಎಂಬ ಭಾವದಿಂದ ಹೇಳುತ್ತಾರೆ—

**ಅರ್ಥವು**—ತಾವು ತುಂಬಾ ನಿಕೃಷ್ಟ ದೆಶೆಯಲ್ಲಿರುವುದನ್ನು ಪ್ರಥಮತಃ ತಿಳಿಸುತ್ತಾರೆ ಪಾಪಗಳನ್ನು ಪರಿಹರಿಸಿಕೊಳ್ಳುವ ಯೋಗ್ಯತೆ ಇದೆಯೋ ಎಂದರೆ ಇಲ್ಲವೆಂದು **ನಿಹೀನಾ ಚಾರಃ**— ನಿತರಾಂ ಸಂಪೂರ್ಣವಾದ ಹೀನಾಚಾರಗಳುಳ್ಳವರು. ಹೋಗಲಿ ಜ್ಞಾನವಾದರೂ ಉಂಟೋ ಎಂದರೆ **ನೃಪಶುಃ**—ಮನುಷ್ಯ ಜನ್ಮವೇನೋ ಹೌದು. "**ಜ್ಞಾನೇನ ಹೀನಃ ಪಶುಭಿಸ್ಸಮಾನಃ**" ಎಂಬ ಹೇಳಿಕೆಗನುಸಾರವಾಗಿ ಮನುಷ್ಯ ಜಾತಿಯ ಪಶುವು. ಹೋಗಲಿ ಸುಕೃತವೇನಾದರೂ ಉಂಟೋ ಎಂದರೆ **ದುರಂತಸ್ಯ**—ಕೊನೆಯೇ ಇಲ್ಲದಿರುವ, **ಅನಾದೇಃ**—ಅನಾದಿಯಾಗಿ ಬಂದ, ಆ ಕಾರಣದಿಂದಲೇ, **ಅಪರಿಹರಣೀಯಸ್ಯ**-ಪ್ರಾಯಶ್ಚಿತ್ತಾದಿಗಳಿಂದ ಪರಿಹರಿಸಲು ಸಾಧ್ಯವೇ ಇಲ್ಲದಿರುವ **ಅಶುಭಸ್ಯ**—ಅಮಂಗಳಗಳು ಎಂದರೆ ಮಹಾ ಪಾತಕಗಳಿಗೆ, **ಆಸ್ಪದಮಪಿ**—ವಶನಾಗಿದ್ದೂ ಕೂಡ, ಅಪಿಶಬ್ದವನ್ನು **ನಿಹೀನಾಚಾರಃ ನೃಪಶುಃ** ಇವುಗಳಿಗೂ ಅನ್ವಯಿಸತಕ್ಕದ್ದು. ಹೀಗೆಲ್ಲಾ ಇದ್ದರೂ **ಅಹಂ**—ಅಂತಹ ನಾನು, ನಿರವಧಿಕಾತಿಶಯ ಮಾಹಾತ್ಮ್ಯಯುಳ್ಳ ಪರಿಪೂರ್ಣ ಬ್ರಹ್ಮಾನುಭವ ನಿತ್ಯ ಕೈಂಕರ್ಯ ಇವುಗಳನ್ನು ನಾಚಿಕೆ ಇಲ್ಲದೆ ಅಪೇಕ್ಷಿಸಬಹುದೋ ? ಎಂದರೆ ನಿರ್ಭಯನಾಗಿಯೇ ಅಪೇಕ್ಷಿಸುತ್ತೇನೆ ಎನ್ನುತ್ತಾರೆ. ಏನನ್ನು ಸ್ಮರಿಸಿ ಹಾಗೆ ಅಪೇಕ್ಷಿಸುತ್ತೀ ಎಂದರೆ ವಿಜ್ಞಾಪಿಸಿಕೊಳ್ಳುತ್ತಾರೆ. **ಹೇ ದಯಾಸಿಂಧೋ**—ಓ ಕರುಣಾ ಸಾಗರನೇ, **ಬಂಧೋ**—ಓ ಸರ್ವವಿಧ ಬಂಧುವೇ, ತಾಯಿ ತಂದೆ, ಮಿತ್ರ ಮೊದಲಾದ ಬಂಧುವೇ ; ಇಷ್ಟು ಮಾತ್ರವೇ ಅಲ್ಲದೆ **ಹೇ ನಿರವಧಿಕ ವಾತ್ಸಲ್ಯ ಜಲಧೇ**-ಆಶ್ರಿತದಲ್ಲಿ ಅವಧಿಯಲ್ಲಿ ವಾತ್ಸಲ್ಯಾಂಬುಧಿಯೇ, ಇಂತಹ, **ತವ**-ನಿನ್ನ, **ಗುಣಗಣಂ**-ಕಲ್ಯಾಣ ಗುಣಗಳನ್ನು **ಸ್ಮಾರಂ ಸ್ಮಾರಂ**—ಸ್ಮರಿಸುತ್ತಾ ಸ್ಮರಿಸುತ್ತಾ, ಇತಿ—ಹೀಗೆ **ಕೇವಲ ಮಾತ್ಮ ಸಾತ್ಕುರು**

ಎಂದು ಹೇಳಿದ ಹಾಗೆ, **ಗತಿಭೀಃ**—ಸ್ವಲ್ಪವೂ ಭಯವಿಲ್ಲದವನಾಗಿ, ಭಯವೇತಕ್ಕೆ ಎಂದರೆ, ಅಶುಭಗಗಳ ಆನಂತ್ಯದಿಂದಲೂ ಪ್ರಾಪ್ತಿವಿರೋಧವು ಹೀಗೆ ಬಲಿಷ್ಠವಾಗಿದೆ ಎಂಬ ಭಯವು ಸ್ವಲ್ಪವೂ ಇಲ್ಲದೆ ಎಂಬ ಭಾವವು. **ಇಚ್ಛಾಮಿ**—ಅಪೇಕ್ಷಿಸುತ್ತೇನೆ. ಪ್ರಾರ್ಥಿಸುತ್ತೇನೆ.

**ಉಪಪಾದನೆಯು**–ನೀನು ಅಪೇಕ್ಷಿಸುವುದಾದರೋ ಅತ್ಯಂತ ಮಾಹಾತ್ಮ್ಯೆಯುಳ್ಳದ್ದು. ಪರಿಪೂರ್ಣ ಬ್ರಹ್ಮಾನುಭವ ನಿತ್ಯ ಕೈಂಕರ್ಯಗಳನ್ನು ಅಪೇಕ್ಷಿಸುತ್ತೀ. ಇವುಗಳಿಗೆ ತುಂಬಾ ಅನರ್ಹವಾದ ಅವಸ್ಥೆಯಲ್ಲಿ ನೀನಿರುವಾಗ ಯಾವುದನ್ನು ಮನಸ್ಸಿನಲ್ಲಿಟ್ಟು ಹೀಗೆಲ್ಲಾ ನಿನ್ನ ಪ್ರಾರ್ಥನೆಯು, ಎಂದೇನಾದರೂ ಸ್ವಾಮಿಯು ಪ್ರಶ್ನಿಸಬಹುದೆಂದು ಭಾವಿಸಿ ಅದಕ್ಕೆ ಸಮಾಧಾನವನ್ನು ಹೇಳುತ್ತಾರೆ. ಆಚಾರ ನೋಡಿದರೋ ಹೀನಾಚಾರನು. ಜ್ಞಾನ ವಿಷಯದಲ್ಲೋ ನರಪಶುವು. ಪಾಪಗಳಾದರೋ ಅಸಂಖ್ಯೆಯಗಳಾಗಿ ಪರಿಹರಿಸಲು ಅಸಾಧ್ಯವಾದುವು. ಇಂತಹ ಅನರ್ಹಸ್ಥಿತಿಯಲ್ಲಿದ್ದರೂ ಆಶ್ರಿತರ ವಿಷಯದಲ್ಲಿ ನಿನಗಿರುವ ಕಾರುಣ್ಯ, ವಾತ್ಸಲ್ಯ ಸೌಲಭ್ಯ, ಸೌಶಿಲ್ಯಾದಿ ಗುಣಗಳನ್ನೂ, ಅವರಿಗೆ ಸರ್ವವಿಧ ಬಂಧುವಾಗಿರುವುದನ್ನೂ ಕಂಡು ಪ್ರಾಪ್ತಿ ವಿರೋಧಿಗಳಾನಂತ್ಯಕ್ಕೆ ಭಯಪಡದೆ ನಿನ್ನನ್ನು ಪ್ರಾರ್ಥಿಸುತ್ತೇನೆ ಎನ್ನುತ್ತಾರೆ– **ದುರಂತಸ್ಯ**–ಈ ಷಷ್ಠ್ಯಂತಗಳೆಲ್ಲಾ "ಅಶುಭಸ್ಯ" ಎಂಬುದಕ್ಕೆ ವಿಶೇಷಣಗಳು, ಅಂದರೆ ಕೊನೆಯೇ ಇಲ್ಲದುದು ಎಂಬರ್ಥವು. ಅಪರಾಧಗಳು ಜನ್ಮಸಂತತಿಗಳಿಂದ ಅನುಸರಿಸಿ ಬಂದವು. ಆಗಲಿ ಪ್ರಾಯಶ್ಚಿತ್ತಗಳಿಂದ ಕಳೆಯಬಹುದಲ್ಲಾ ಎಂದರೆ ಪ್ರಾಯಶ್ಚಿತ್ತಗಳನ್ನು ಅನುಷ್ಠಿಸುವ ಬುದ್ಧಿ ಸಂಕಲ್ಪಾದಿಗಳೇ ಇಲ್ಲವು. ಈಗ ಬುದ್ಧಿ ಬಂದಿದೆಯಲ್ಲಾ ಎಂದರೆ ಒಬ್ಬನ ಜೀವಮಾನದಲ್ಲಿ ಪ್ರಾಯಶ್ಚಿತ್ತಗಳಿಂದ ಕಳೆಯಲು ಅಸಾಧ್ಯವಾದುದರಿಂದ **ದುರಂತಸ್ಯ**–ಎಂಬ ಪ್ರಯೋಗವು. ಹಾಗಾಗಲು ಕಾರಣವೇನು ಎಂದರೆ **ಅನಾದೇಃ** ಎಂಬುದರಿಂದ ಅನಾದಿಯಾಗಿ ಪ್ರಾಪ್ತವಾದವು. ಹಿಂದೆ ಕೂಡ ಯಾವಾಗಿನಿಂದ ಉಂಟಾಯಿತೆಂದು ತಿಳಿಯಲು ಅಸಾಧ್ಯವಾದುದು. ಇದರಿಂದ ಸೃಷ್ಟಿಗೆ ಮೊದಲು ಈ ಅಪರಾಧಗಳಿದ್ದುವೆಂದೂ ತದನುಗುಣವಾಗಿ ಕಲ್ಪಾದಿಯಲ್ಲಿ ಸರ್ವೇಶ್ವರನು ಕರಣ ಕಳೇಬರಯೋಗವನ್ನುಂಟುಮಾಡುವನೆಂಬ ಶಾಸ್ತ್ರಾರ್ಥವು ಬೋಧಿತವು. ಇದನ್ನೇ ಶ್ರೀದೇಶಿಕವರ್ಯರು "**ಕರ್ಮಾವಿದ್ಯಾದಿ ಚಕ್ರೇ ಪ್ರತಿಪುರುಷ ಮಿಹಾನಾದಿ ಚಿತ್ರಪ್ರವಾಹೇ**" ಎಂದು ಉಪಪಾದಿಸಿರುತ್ತಾರೆ. ಹೀಗೆ ಅನಾದಿಯಾಗಿ ಬಂದುದರಿಂದಲೇ **ಅಪರಿಹರಣೀಯಸ್ಯ**–ಆ ಅಪರಾಧಗಳನ್ನು ಪರಿಹರಿಸಲು ಸಾಧ್ಯವೇ ಇಲ್ಲವು. ಈ ಅಭಿಪ್ರಾಯವೇ ಕ್ಷಮಾಷೋಡಶಿಯಲ್ಲಿ ಸ್ವಲ್ಪ ಅತಿಶಯೋಕ್ತಿಯಿಂದ ವರ್ಣಿಸಲ್ಪಟ್ಟಿದೆ "**ನದ್ವಿತ್ರಾಣಿ ಕೃತಾನ್ಯನೇನ ನಿರಯೈರ್ನಾಲಂಪುನಃ ಕಲ್ಪಿತೈಃ ಪಾಪಾನಾ ಮಿತಿ ಮತ್ಕೃತೇ ತದಧಿಕಾರ್ ಕರ್ತುಂ ಪ್ರವೃತ್ತೇತ್ವಯಿ। ತೇಭ್ಯೋಽಪ್ಯಧಿಕಾನಿ ತಾನ್ಯಹಮಪಿ ಕ್ಷುದ್ರಃ ಕರೋಮಿ ಕ್ಷಣಾತ್ ತದ್ಯತ್ನಸ್ತವ ನಿಷ್ಫಲಃ**

**ಖಲಭವೇತ್ತ ತ್ತತ್ಕ್ಷ್ಣನ್ಯೈವ ಕ್ಷಮಮ್"** ಇದರ ತಾತ್ಪರ್ಯವೇನೆಂದರೆ ನಾನು ಮಾಡಿದ ಲೆಕ್ಕವಿಲ್ಲದ ಪಾಪಗಳಿಗನುಣವಾಗಿ ನರಕಗಳನ್ನು ನೀನು ಸೃಷ್ಟಿಸುತ್ತಾ ಹೋದರೆ ಪಾಪಿಯಾದ ನಾನು ಇನ್ನೂ ಹೆಚ್ಚಾಗಿ ಪಾಪಗಳನ್ನು ಮಾಡಬಹುದು. ಆದುದರಿಂದ ನಿನ್ನ ಪ್ರಯತ್ನವು ನಿಷ್ಫಲವಾದೀತಾದುದರಿಂದ ನಿನ್ನ ಕ್ಷಮಾಗುಣಗಳಿಂದ ನನ್ನ ಪಾಪಗಳನ್ನು ಕ್ಷಮಿಸಿಬಿಡುವುದೇ ಯೋಗ್ಯವಾದುದರಿಂದ ಕ್ಷಮಿಸಿ ಬಿಡು ಎಂಬ ಪ್ರಾರ್ಥನೆಯು. ಆದುದರಿಂದ **ಅಪರಿಹರಣೀಯವು,** ಹಾಗಾದರೆ ಪರಿಹರಣೀಯವಲ್ಲದೆ "**ಕ್ಷಿಪಾಮ್ಯ ಜಸ್ರಂ ಆಸುರಿಷ್ವೇವ ಯೋನಿಷು**" ಎಂದು ಹೇಳಿರುವ ಹಾಗೆ ಸತತ ಶಿಕ್ಷೆಯೇ ? ಎಂದರೆ ಹಾಗಲ್ಲವು. ಹಾಗೆ ಹೇಳಿದುದು ಆಸುರಸ್ವಭಾವನು ಸ್ವಾಮಿಯನ್ನು ಆಶ್ರಯಿಸದೇ ಇರುವತನಕವು ಮಾತ್ರ. ಆಶ್ರಯಿಸಿದುದಾದರೆ ಸ್ವಾಮಿಯ ಕಾರುಣ್ಯ ಕ್ಷಮಾಗುಣಗಳಿಂದ ಪರಿಹರಣೀಯವು. ಆದುದರಿಂದ **ಅಪರಿಹರಣೀಯಸ್ಯ** ಎಂಬುದಕ್ಕೆ ಸರಿಯಾದ ಅರ್ಥವೇನೆಂದರೆ ಸರ್ವಶಕ್ತನಾದವನ ಕೃಪಾ ಕ್ಷಮಾಗುಣಗಳಲ್ಲದೆ ಬೇರೆ ಯಾವ ವಿಧದಿಂದಲೂ ಪರಿಹರಿಸಲು ಸಾಧ್ಯವಲ್ಲದ ಎಂಬರ್ಥವು. ಆಗಲಿ ನಿತ್ಯ ಕರ್ಮಾನುಷ್ಠಾನಗಳನ್ನು ಸರಿಯಾಗಿ ನಡೆಸಿದುದಾದರೆ, ವಿರೋಧಿ ಪಾಪಗಳು ನಾಶವಾಗುವುದೆಂಬ ಶಾಸ್ತ್ರ ಪಂಕ್ತಿಗಳಿವೆಯಲ್ಲಾ, ಹಾಗೆ ಶಾಸ್ತ್ರ ವಿಧಿಗಳನ್ನು ನಡೆಸಿ ಪಾಪಗಳನ್ನು ಕಳೆದು ಕೊಳ್ಳಬಹುದಲ್ಲಾ "**ಕಷಾಯೇ ಕರ್ಮಭಿಃ ಪಕ್ವೇತತೋ ಜ್ಞಾನಂ ಪ್ರವರ್ತತೇ**" ಎಂದೂ "**ಧರ್ಮೇಣ ಪಾಪ ಮಪನುದತಿ**" ಇತ್ಯಾದಿ ಪ್ರಮಾಣಗಳಿಗನುಗುಣವಾಗಿ ನಡೆಸಿಪಾಪಗಳನ್ನು ಕಳೆದುಕೊಳ್ಳಬಹುದಲ್ಲಾ ಎಂದರೆ **ನಹೀ ನಾಚಾರೋಹಂ** ತುಂಬಾ ನಿಕೃಷ್ಟಾಚಾರವುಳ್ಳವನೆಂದು ಹೇಳಿಕೊಂಡರು–"**ಆಚಾರ ಹೀನಂ ನಪುನಂತಿದೇವಾಃ**" ಎಂದು ಹೇಳಲ್ಪಟ್ಟಿರುತ್ತದೆ. ಆಚಾರ ಶಬ್ದದ ತಾತ್ಪರ್ಯವೇನೆಂದರೆ ಶಾಂಡಿಲ್ಯದ ಪ್ರಕಾರ "**ಪಂಚೇಂದ್ರಿಯಸ್ಯ ದೇಹಸ್ಯ ಬುದ್ಧೇಶ್ಚ ಮನಸಸ್ತಥಾ । ದ್ರವ್ಯ ದೇಶಕ್ರಿಯಾಣಾಂಚ-ಶುದ್ಧಿರಾಚಾರ ಇಷ್ಯತೇ**" ಇಂದ್ರಿಯಗಳ, ದೇಹದ, ಬುದ್ಧಿಯ, ಮನಸ್ಸಿನ ಶುದ್ಧಿಯೂ ಮತ್ತು ಆತನಲ್ಲಿರುವ ದ್ರವ್ಯಗಳು, ದೇಶವು, ವ್ಯಾಪಾರಗಳು ಇವೆಲ್ಲವುಗಳ ಶುದ್ಧಿಯೂ ಆಚಾರವೆನಿಸುತ್ತದೆ. ಶಾಸ್ತ್ರವಿಹಿತವಾದ ವಿಧಿವಾಕ್ಯಗಳಿಗನುಸಾರವಾಗಿ ನಡೆದುಕೊಳ್ಳುವುದೇ ಆಚಾರವೆನಿಸುತ್ತದೆ. ಅದು ಸತ್ಸಂಪ್ರದಾಯಾನುಗುಣವಾಗಿಯೂ ಇರತಕ್ಕದ್ದು. ಆದುದರಿಂದ ವಿಹಿತವರ್ಣಾಶ್ರಮ ಧರ್ಮಗಳು ಮುಖ್ಯವಾಗಿ ನಡೆಸತಕ್ಕವುಗಳಾಗಿವೆ. ಈತನು ಮಾಡುವ ಧನಾರ್ಜನೆ ಮೊದಲಾದವುಗಳಲ್ಲಿ ಅಧರ್ಮವಿಲ್ಲದೆ ಧರ್ಮಯುಕ್ತಗಳಾಗಿರಬೇಕು. ಅಂತಹ ಆಚಾರ ಹೀನನನ್ನು "ನಪುನಂತಿದೇವಾಃ" ಎಂದು ಹೇಳಲ್ಪಟ್ಟಿರುತ್ತದೆ ಇವುಗಳಲ್ಲೇನಾದರೂ ನ್ಯೂನತೆಗಳುಂಟಾಗಿವೆಯೋ ಎಂಬ ಶಂಕಾದಿಂದ **ನಹೀನಾಚಾರೋಹಂ** ಎಂದು ಹೇಳಿಕೊಂಡರು.

ಕರ್ಮನಿಷ್ಠೆಯೂ ಇಲ್ಲವು ಎಂದು ಹೇಳಿದರು. ಅದು ಯಾವಾಗ ಇಲ್ಲವೋ ಆ ಕಾರಣದಿಂದ ಸರಿಯಾದ ಜ್ಞಾನವೂ ಇಲ್ಲವೆಂದು **ನೃಪಶುಃ** ಎಂದು ಹೇಳಿ

ಕೊಂಡರು. ಸರಿಯಾದ ಜೀವಾತ್ಮ ಪರಮಾತ್ಮ ಸ್ವರೂಪ ಸ್ವಭಾವಗಳ ಜ್ಞಾನ ವಿಲ್ಲದುದರಿಂದಾಗಲಿ ನೃಪಶುಃ. ಇಲ್ಲಿ ಅಶುಭ ಶಬ್ದದಿಂದ ಭಗವದಪರಾಧಗಳೂ ಭಾಗವತಾಪರಾಧಗಳೂ ಹೇಳಲ್ಪಟ್ಟು ಇವುಗಳಿಗೆ ತಾವೂ ಆಸ್ಪದವಾಗಿರುವುದು ಹೇಳಲ್ಪಟ್ಟಿತು.

**ಅಪಿ** ಶಬ್ದ ಸ್ವಾರಸ್ಯದಿಂದ ಇಷ್ಟು ಅವಗುಣಗಳು ತುಂಬಿದ್ದರೂ ಹಿಂದೆ **ಕೇವಲಮಾತ್ಮ ಸಾತ್ಕುರು** ಎಂಬ ಪ್ರಾರ್ಥನೆಯು ಹೇಗೆ ? ಭಗವದನುಗ್ರಹಕ್ಕೆ ಪ್ರತ್ಯುತ ವಿರುದ್ಧವೇ ಇದ್ದರೆ ಪ್ರಾರ್ಥನೆಯು ಹೇಗೆ ಕೈಗೂಡುತ್ತದೆ ? ಎಂದರೆ ಮೂರು ಸಂಬೋಧನೆಗಳಿಂದ, ತಮ್ಮ ಪ್ರಾರ್ಥನೆಯು ನಿರರ್ಥಕವೆಂದಿಗೂ ಆಗ ಲಾರದೆಂದು ನಿರ್ಭಯನಾಗಿ ಪ್ರಾರ್ಥಿಸುತ್ತೇನೆ ಎಂದು ಹೇಳಿರುತ್ತಾರೆ. **ದಯಾ ಸಿಂಧೋ** ಎಂಬುದರಿಂದ ಕರುಣಾ ಸಾಗರನಾದುದರಿಂದ ಸಹಸ್ರಾಪರಾಧಗಳು ಇದ್ದರೆ ತಾನೇ ಏನು ತೊಂದರೆ ? ಆಶ್ರಿತನನ್ನು ನೀನು ಖಂಡಿತವಾಗಿಯೂ ರಕ್ಷಿಸುವಿ. ದಯಾಸಾಗರನಾದುದರಿಂದ ಪಾಪಗಳು ಎಷ್ಟು ಉನ್ನತ ರಾಶಿ ಇದ್ದರೂ ಮುಳುಗಿಸಿಬಿಡುತ್ತದೆ ಎಂಬ ಉತ್ಪ್ರೇಕ್ಷೆಯು. ಉತ್ಪ್ರೇಕ್ಷೆ ಎಂದು ಹೇಳಿ ದುದಕ್ಕೆ ಕಾರಣವೇನೆಂದರೆ ಪಾಪವು ದ್ರವ್ಯವೂ ಅಲ್ಲವು ಅದರ ರಾಶಿ ಎಂದರೆ ಅರ್ಥವಾಗುವದಿಲ್ಲವು. ಪಾಪವು ಒಂದು ಕರ್ಮವು. ಅದು ನಡೆದು ಹೋಯಿತು. ಅದರ ಫಲವು ಯಾವುದೆಂದರೆ ಭಗವಂತನ ನಿಗ್ರಹವು. "**ನತ್ಯಜೇಯಂ ಕಥಂಚನ**" ಎಂದು ಹೇಳಿ "**ದೋಷೋಯದ್ಯಪಿ ತಸ್ಯ ಸ್ಯಾತ್ಸತಾ ಮೇತ ದಗರ್ಹಿತಂ**" ದೋಷಗಳಿದ್ದರೇನು ? ಪೂಜ್ಯರಿಗೆ ಅಂತಹ ದೋಷಿಯ ರಕ್ಷಣೆಯೂ ನಿಂದಿತವಲ್ಲ ವೆಂದು ತಿಳಿಸಿ, ಮಹಾಪರಾಧಿಯಾದ ರಾವಣನೇ ಶರಣಾಗತನಾದರೂ ಆತನೂ ರಕ್ಷ್ಯನೇ ಎಂದು ನಿನ್ನ ವ್ರತವನ್ನು ಪ್ರಕಟಿಸಿದ **ದಯಾಸಿಂಧು** ವಲ್ಲವೆ ? ಎಂಬ ಭಾವನೆಯು. ಶ್ರೀನಿಗಮಾಂತ ಮಹಾದೇಶಿಕರು, ಸ್ವಾಮಿಯು "**ಗುಣಾನಾಮಾ ಕರೋ ಮಹಾನ್**" ಎಂಬ ತಾರಾವಾಕ್ಯದ ಹಾಗೆ ಕಲ್ಯಾಣ ಗುಣಾಕರನಾಗಿದ್ದರೂ ದಯೆ ಎಂಬ ಗುಣಕ್ಕೆ ತುಂಬಾ ಪ್ರಾಶಸ್ತ್ಯವನ್ನಿತ್ತಿರುತ್ತಾರೆ. **ವೃಷಗಿರಿಗೃಹಮೇಧಿ ಗುಣಾ ಬೋಧ ಬಲೈಶ್ವರ್ಯ ವೀರ್ಯಶಕ್ತಿ ಮುಖಾಃ। ದೋಷಾಭವೇಯುರೇತೇ ಯದಿನಾಮ ದಯೇತ್ಯಸೌ ವಿನಾಭೂತಾಃ** (ದ.ಶ. ೧೫) ಸರ್ವೇಶ್ವರನ ಸಮಸ್ತ ಗಳಾದ ಇತರ ಜ್ಞಾನ ಶಕ್ತಿ ಬಲಾದಿ ಕಲ್ಯಾಣ ಗುಣಗಳೆಲ್ಲವೂ, ಶ್ರೀನಿವಾಸನ ದಯೆಯೇ ! ನೀನು ಮಾತ್ರ ಇಲ್ಲದಿದ್ದರೆ ನಿರರ್ಥಕವಾಗುತ್ತಿದ್ದುವು. ಎಂದು ಹೇಳಿ ರುತ್ತಾರೆ. **ಬಂಧೋ** ಎಂಬ ಸಂಬೋಧನೆಯಿಂದ ಸರ್ವೇಶ್ವರನೊಬ್ಬನೇ ನಮಗೆ ನಿರುಪಾಧಿಕ ಬಂಧುವು. ಈ ಸೋಪಾಧಿಕ ಬಂಧುಗಳಾದ ತಾಯಿ, ತಂದೆ, ಕಳತ್ರ, ಸುತ, ಮಿತ್ರಾದಿಗಳು ಯಾರೂ ಸರ್ವೇಶ್ವರನ ಹಾಗೆ ರಕ್ಷಕರಾಗುವುದಿಲ್ಲ ವೆಂಬ ಭಾವವು. ಅಷ್ಟು ಮಾತ್ರವೇ ಅಲ್ಲದೆ ಬ್ರಹ್ಮರುದ್ರೇಂದ್ರಾದಿಗಳೂ ಕೂಡ ರಕ್ಷಕರಾಗಲಾರರೆಂಬುದು ದ್ಯೋತಿತವು. ಇಲ್ಲಿ ಗೀತಾವಾಕ್ಯವು ಅನುಸಂಧೇಯವು.

**“ಮಿತಂದದಾತಿಹಿ ಪಿತಾ ಮಿತಂ ಮಾತಾ ಮಿತಂ ಸುತಃ। ಅಮಿತಸ್ಯಹಿದಾ ತಾರಂ ಭರ್ತಾರಂ ಕಾನಪೂಜಯೇತ್”** ಐಹಿಕ ಪಿತಾ ಕೊಡುವುದು ಇತರ ಮಕ್ಕಳಿಗೂ ತನಗೂ ಭಾಗಗಳನ್ನಿಟ್ಟುಕೊಂಡು, ಅಲ್ಪ ಭಾಗವನ್ನು ಕೊಡುವುದ ರಿಂದ ಮಿತವಾದುದು. ಹಾಗೆಯೇ ತಾಯಿಕೊಡುವುದೂ ಮಿತವು. ಮಗನೂ ಸಹ ತನ್ನ ಹೆಂಡತಿ ಮಕ್ಕಳಿಗೂ ತನಗೂ ಭಾಗಗಳನ್ನಿಟ್ಟುಕೊಂಡು ತಾಯಿ ಎಂಬುದಾಗಿ ಸ್ವಲ್ಪ ಕೊಡುವುದರಿಂದ ಮಿತವು. ಲೋಕದಲ್ಲಿ ಗಂಡ ಹೆಂಡರಿಗೆ **ಸವಿಭಾಗಃ** ಎಂದಿರುವುದರಿಂದ ಅಮಿತಸ್ಯದಾತಾ ನನುಗಾದರೋ ಆತನೊಬ್ಬನೇ ಭರ್ತಾ. ನಾವೆಲ್ಲರೂ ಭಾರ್ಯಾವಾಗಿ ಭರ್ತೃ ಭಾರ್ಯಾ ಸಂಬಂಧವಿರುವುದರಿಂದಲೂ “ನಿರಂಜನಃ **ಪರಮಂ ಸಾಮ್ಯ ಮುಪೈತಿ**” ಎಂದು ಹೇಳಿರುವ ಮೇರೆಗೆ ತನಗೆ ಸಮಾನವಾದ ಆನಂದವನ್ನು ದಯಪಾಲಿಸುವುದರ ಮೂಲಕ ಆತನು **ಅಮಿತಸ್ಯ ದಾತಾ**. ಎಷ್ಟು ವಿರೋಧಿವರ್ಗವೂ ಅಪರಾಧಾ ನಂತ್ಯವೂ ಇದ್ದರೂ, ಎಲ್ಲವನ್ನೂ ತನ್ನ ಕ್ಷಮಾಗುಣದಿಂದ ಮರೆತು ತನ್ನಸಾನ್ನಿಧ್ಯವನ್ನು ಕೊಡುವವನಾದುದರಿಂದ ಲೋಕ ಭರ್ತಾ ಆತನು. ಅಂತಹ ಮಹಾನುಭಾವನನ್ನು ಯಾರು ತಾನೇ ಪೂಜಿಸ ದಿರುವರು ? ಎಂಬುದರಿಂದ ಅಜ್ಞಾನಿ ಈಗ ಪೂಜಿಸದೇ ಇರಬಹುದು. **ಕಾ** ಎಂಬ ಸ್ತ್ರೀಲಿಂಗದಿಂದ ಸ್ವಾಮಿಯೊಬ್ಬನೇ ಪುರುಷ ಸೂಕ್ತಾದಿಗಳಲ್ಲಿ ಹೇಳಿರುವ ಪ್ರಮ ಪುರುಷನು, ಮಿಕ್ಕ ಚೇತನರೆಲ್ಲಾ “**ಸ್ತ್ರೀ ಪ್ರಾಯಮಿತರತ್**” ಎಂಬಲ್ಲಿ ಹೇಳಿ ರುವ ಹಾಗೆ ಸ್ತ್ರೀ ಶಬ್ದವಾಚ್ಯರಾದುದರಿಂದ ಇಲ್ಲಿ **ಕಾ ನ ಪೂಜಯೇತ್** ಎಂದು ಸ್ತ್ರೀಲಿಂಗವು. ಎಲ್ಲಾ ಪ್ರಪನ್ನರು “ಶುದ್ಧಾಂತ ಸಿದ್ಧಾಂತಿ” ಗಳು, ಲಕ್ಷ್ಮಿಗೆ ಹೇಗೆ ಅನನ್ಯದೈವತ್ವ, ಅನನ್ಯಭೋಗ್ಯತ್ವವೋ ಹಾಗೆಯೇ ಈ ಪ್ರಪನ್ನರೂ ಆದುದರಿಂದ ಕಾ ಎಂಬ ಶಬ್ದದಿಂದ ತನಗೆ ಅನ್ವಯಿಸುವಾಗ ತನ್ನ ಸಿದ್ಧಾಂತವನ್ನೇ ಅನುಸರಿಸಿ ರುವ ಈ ಪ್ರಪನ್ನರಿಗೂ ಅರ್ಥವಾಗುವ ಹಾಗೆ ಹೇಳಿರುತ್ತಾಳೆ. ಇಂತಹ ವಿಶೇಷಾ ರ್ಥಗಳನ್ನು ಈ ಅಮೋಘ ಶ್ಲೋಕವು **ಬಂಧು** ಶಬ್ದದ ತಾತ್ಪರ್ಯವನ್ನು ಪ್ರಕಟಿಸು ತ್ತದೆ. ಹೇಗೆ ಸರ್ವವಿಧ ಬಂಧುವೆಂಬುದನ್ನು ತಾವೇ ಮುಂದೆ ೬೦ ನೆಯ ಶ್ಲೋಕ ದಲ್ಲಿ ಉಪಪಾದಿಸಿರುತ್ತಾರೆ. ಶ್ರೀ ಯತಿವರ್ಯರು ಶರಣಾಗತಿ ಗದ್ಯದಲ್ಲಿ **ತ್ವಮೇವ ಮಾತಾಚ ಪಿತಾತ್ವ ಮೇವ ತ್ವಮೇವ ಬಂಧುಶ್ಚ ಗುರುಸ್ತ್ವಮೇವ**” ಎಂದು ಉದಾಹರಿಸಿರುತ್ತಾರೆ. ಶ್ರುತಿಯೂಸಹ “**ಮಾತಾ** ಪಿತಾ **ಭ್ರಾತಾ ಸುಹೃದ್ಗತಿ ನಾರಾಯಣಃ**” ಎಂದು ಹಾಗೆಯೇ ಹೇಳುತ್ತದೆ. ಲೋಕದಲ್ಲಿ ಮಾತಾ ಗರ್ಭ ಧಾರಣೆ ಪೋಷಣೆಗಳಿಗೂ, ಪಿತಾ ಗರ್ಭವನ್ನುಂಟುಮಾಡುವುದಕ್ಕೂ, ವಿದ್ಯಾಪ್ರದ ತ್ವಕ್ಕೂ ಹೀಗೆ ಒಬ್ಬೊಬ್ಬರು ಒಂದೊಂದಕ್ಕೆ ಕಾರಣಭೂತರು. ಸರ್ವೇಶ್ವರನಾದರೋ ಎಲ್ಲಕ್ಕೂ ಕಾರಣ ಭೂತನಾದುದರಿಂದ “**ವಾಸುದೇವಸ್ಸರ್ವಂ**” ಎಂದು ಹೇಳಿಸಿ ಕೊಳ್ಳುವನೆಂದು ಭಾವನೆ ಇರತಕ್ಕದ್ದು.

**ನಿರವಧಿಕ ವಾತ್ಸಲ್ಯ ಜಲಧೇ**—ಎಂಬ ಸಂಬೋಧನೆಯು, ಪ್ರಪನ್ನನಿಗೆ ಸ್ವಾಮಿಯಲ್ಲಿರುವ ಆದರವನ್ನು ಸೂಚಿಸುತ್ತದೆ. ನಿರವಧಿಕವಾದುದು ವಾತ್ಸಲ್ಯವು

ಹೇಗೆ ಎಂದರೆ "**ರಿಪೂಣಾಮಪಿ ವತ್ಸಲಃ**" ಶತ್ರುಗಳು ಬಂದು ಆಶ್ರಯಿಸಿದರೆ ಅವರಲ್ಲೂ ಕೂಡ ವಾತ್ಸಲ್ಯವನ್ನಿಟ್ಟಿರುವವನು. ಆದುದರಿಂದಲೇ "**ಯದಿವಾರಾವಣಸ್ಸ್ವಯಮ್**" ಎಂದು ತಾನೇ ಹೇಳಿಕ್ಕೊಂಡಿರುತ್ತಾನೆ. ಈ ಸಂದರ್ಭದಲ್ಲಿ ಲೋಕಮಾತೆಯಾದ ಸೀತೆಯ ವಾಕ್ಯವು ಅಮೋಘವಾದುದು. ಶರಣಾಗತ ವತ್ಸಲತ್ವವನ್ನು ವಿಶೇಷವಾಗಿ ಪ್ರಕಟಿಸುತ್ತದೆ. "**ವಿದಿತಃ ಸಹಿಧರ್ಮಜ್ಞಃ ಶರಣಾಗತ ವತ್ಸಲಃ। ತೇನ ಮೈತ್ರೀ-ಭವತು ತೇ ಯದಿ ಜೀವಿತು ಮಿಚ್ಛಸಿ। ಪ್ರಸಾದಯಸ್ವ ತ್ವಂ ಚೈನಂ ಶರಣಾಗತವತ್ಸಲಂ। ಮಾಂಚಾಸ್ಮೈ ಪ್ರಯತೋ ಭೂತ್ವಾ ನಿರ್ಯಾತಯಿತು ಮರ್ಹಸಿ**" ಎಂದು ಶತ್ರುವಾದ ರಾವಣನಿಗೂ ಹಿತೋಪದೇಶ ಮಾಡುವುದರಲ್ಲಿ ಶ್ರೀ ರಾಮನಲ್ಲಿರುವ ನಿರವಧಿಕಾಶ್ರಿತ ವಾತ್ಸಲವನ್ನೂ ವ್ಯಕ್ತಪಡಿಸಿರುತ್ತಾಳೆ. ಶ್ರೀರಾಮನು ಶರಣಾಗತ ವತ್ಸಲನೆಂಬುದು ವಿದಿತಃ ಲೋಕ ಪ್ರಸಿದ್ಧವಾದುದು. ಶ್ರುತಿಪ್ರಸಿದ್ಧವಾದುದು. ವಿಭವಾವತಾರ ಸಮಯಗಳಲ್ಲಿ ವ್ಯಕ್ತವಾದುದು. ಆದುದರಿಂದ ವಿದಿತಃ ಎಂದು ಹೇಳಿದರು. ಕಾಕ ಸುಗ್ರೀವಾದಿ ವೃತ್ತಾಂತಗಳಿಂದಲೇ ಸುಪ್ರಸಿದ್ಧವು. ಆದುದರಿಂದಲೇ ವಿದಿತಸ್ಸಹಿ ಎಂಬಲ್ಲಿ **ಹಿ** ಶಬ್ದವು. ಆತನು **ಧರ್ಮಜ್ಞನು** ನೀನು ಇಲ್ಲಿಂದಲೇ ಶರಣಾಗತಿಯನ್ನನುಷ್ಠಿಸಿದರೆ ಅದನ್ನೂ ತಿಳಿದು ನಿನ್ನನ್ನು ವಾತ್ಸಲ್ಯದಿಂದ ನೋಡುವ, ಕೃಪಾ, ಸರ್ವಜ್ಞತೆ ಮತ್ತು ಸಾಮರ್ಥ್ಯಗಳನ್ನುಳ್ಳವನು. ಇದಕ್ಕೆ ದ್ರೌಪದಿಯೇ ನಿದರ್ಶನವು. ಆತನು ಶರಣಾಗತವತ್ಸಲ ನಲ್ಲವೇ? ಆತನು ಪರಮ ಸುಹೃತ್ತು. ಆತನೊಂದಿಗೆ ನೀನು ವೈರವನ್ನು ತ್ಯಜಿಸಿ, **ತೇ ಮೈತ್ರೀ ಭವತು** ಮೈತ್ರಿಯನ್ನು ಸಂಪಾದಿಸು. ನಿನಗೆ ಆತ್ಮೋಜ್ಜೀವನವನ್ನು ಮಾಡಿಕೊಳ್ಳಬೇಕೆಂಬ ಆಶೆ ಇದ್ದುದಾದರೆ ನನ್ನ ಹಿತೋಪದೇಶವನ್ನು ಗಮನಿಸು. ಅದು ಯಾವುದೆಂದರೆ **ಪ್ರಸಾದಯಸ್ವ ತ್ವಂ ಚೈನಂ** ಆತನನ್ನು ಪ್ರಸನ್ನನನ್ನಾಗಿ ಮಾಡಿಕೋ. ಎಂದರೆ ಆತನು ಶರಣಾಗತವತ್ಸಲನು ಎಂದು ಇನ್ನೊಂದು ಸಲ, ಮುಖ್ಯವಾದುದರಿಂದ, ಹೇಳುತ್ತಾಳೆ. ಹಾಗೆ ಪ್ರಸನ್ನನನ್ನಾಗಿ ಮಾಡಿಕೊಳ್ಳುವಾಗ ಲಕ್ಷ್ಮಿಯ ಪ್ರಸನ್ನತೆಯು ಆವಶ್ಯಕ ವೆಂಬುದು ಮುಂದೆ ಇರುವ **ಮಾಂಚೈವ** ಎಂಬುದರಿಂದ ಧ್ವನಿತವಾಗಿ ಸುಚಿತವು. ಮಾಶಬ್ದವು ಲಕ್ಷ್ಮೀವಾಚಕವು ಮತ್ತು ಇಲ್ಲಿ ಲಕ್ಷ್ಮಿಯೇ ಸೀತೆಯಾಗಿರುವುದರಿಂದ ನನ್ನನ್ನು ಪ್ರಸನ್ನಳಾಗಿ ಮಾಡಿಕೋ ಇಲ್ಲಿ ಲಕ್ಷ್ಮಿಯ ವತ್ಸಲತ್ವವೂ ವ್ಯಕ್ತವು. ಅದಕ್ಕಾಗಿ ನೀನು ಮಾಡತಕ್ಕದ್ದೇನೆಂದರೆ **ಅಸ್ಮೈ** ಈ ನಿರವಧಿಕ ವಾತ್ಸಲ್ಯನಿಧಿಗೆ, **ಪ್ರಯತೋಭೂತ್ವಾ**-ಶರಣಾಗತಿಯನ್ನನುಷ್ಠಿಸಿ **ನಿರ್ಯಾತಯಿತುಮರ್ಹಸಿ**- ಸಮರ್ಪಿಸಿ ಬಿಡಲು ಯೋಗ್ಯನಾಗು. ಅಥವಾ ಇನ್ನೊಂದು ವಿಧವಾಗಿಯೂ ಅರ್ಥವನ್ನು ಹೇಳಬಹುದು. **ಮಾಂ ಚಾಸ್ಮೈ ಪ್ರಯತೋ ಭೂತ್ವಾ ನಿರ್ಯಾತಯಿತು ಮರ್ಹಸಿ** ಎಂದರೆ ಅಹಂ ಶಬ್ದದದ್ವಿತೀಯೇ ಮಾಂ ಎಂಬುದಾದುದರಿಂದ "**ಅಹಂ ಅಹಂ**" ಎಂದು ತೋರಿಬರುವ ಪ್ರತ್ಯಗಾತ್ಮವನ್ನು, ಆತನಿಗೆ ನಮಸ್ಕರಿಸಿ, ಅದು ಆತನ ಸ್ವತ್ತಾಗಿದ್ದೂ ಇಷ್ಟು

**ಅನಿಚ್ಛನ್ನಪ್ಯೇವಂ ಯದಿಪುನರಿತೀಚ್ಛನ್ನಿವ ರಜ**
**ಸ್ತಮುಚ್ಛನ್ನಚ್ಛದ್ಮಸ್ತುತಿವಚನ ಭಂಗೀಮರಚಯಮ್ ।**
**ತಥಾ ಪೀತ್ಥಂ ರೂಪಂ ವಚನ ಮವಲಂಬ್ಯಾಪಿ ಕೃಪಯಾ**
**ತ್ವಮೇವೈವಂ ಭೂತಂ ಧರಣಿಧರ ಮೇ ಶಿಕ್ಷಯ ಮನಃ ॥ ೫೯ ॥**

---

ದಿನವೂ ನನ್ನದು ಎಂದು ಚೋರಕೃತ್ಯ ಮಾಡಿದುದರಿಂದ ಆತನ ಸ್ವತ್ತನ್ನು ನಿರ್ಯಾತಯಿತು ಮರ್ಹಸಿ ಆತನಿಗೆ ಹಿಂತಿರುಗಿ ಸಮರ್ಪಿಸಿ ಬಿಡುವುದು ಉಚಿತವು. ಯದ್ಯಪಿ ನೀನು ಶತ್ರುವಾದರೂ ನಿನ್ನನ್ನೂ ಅನುಗ್ರಹಿಸುವನು. ಸತ್ಯವು. ಏಕೆಂದರೆ ಆವನು ನಿರವಧಿಕವಾತ್ಸಲ್ಯ ಜಲಧಿಯು. ಈ ಸೀತಾ ವಾಕ್ಯದಲ್ಲಿ **ಶರಣಾಗತೆ ವತ್ಸಲಃ** ಎಂದು ಎರಡುಸಲ ಏತಕ್ಕೆ ಹೇಳಲ್ಪಟ್ಟಿತು ಎಂಬ ಪ್ರಶ್ನೆಗೆ ಚಮತ್ಕಾರ ವಾಗಿ ಕಾರಣ ಹೇಳಬಹುದು. ಹೇಗೆಂದರೆ ಆತನು ಶರಣಾಗತವತ್ಸಲನಾದುದರಿಂದ ನೀನು ಶರಣಾಗತನಾದರೆ ನಿನ್ನನ್ನು ರಕ್ಷಿಸಿಬಿಡುವನು. ಪ್ರಸನ್ನನಾಗಿ ಮೋಕ್ಷಾ ರ್ಹನಾಗುವಿ. ಕೃತಕೃತ್ಯನಾಗುವಿ. ನನ್ನನ್ನು ಇನ್ನೂ ಅಶೋಕವನದಲ್ಲಿ ಸೆರೆಯಲ್ಲಿ ಇಟ್ಟಿರುವುದರಿಂದ ಉತ್ತರಾಘವುಂಟಾಯಿತು. ಅದಕ್ಕೆ ಪ್ರಾಯಶ್ಚಿತ್ತ ರೂಪದಲ್ಲಿ ಪುನಃ ಶರಣಾಗತಿಯನ್ನು ನೀನು ಅನುಷ್ಠಿಸ ಬೇಕಾಗುತ್ತದೆಂದು **ಶರಣಾಗತೆ ವತ್ಸಲಃ** ಎಂದು ಎರಡನೆಯ ಸಲ ರಾವಣನನ್ನು ಕುರಿತು ಹೇಳಿದಳೆಂದು ಭಾವಿಸ ಬಹುದು. ಇಂತಹ ಆಶ್ರಿತೋಪಯುಕ್ತ ಕಲ್ಯಾಣ ಗುಣಗಳು ನಿನ್ನಲ್ಲಿವೆ ಎಂಬುದು ಶಾಸ್ತ್ರಸಿದ್ಧವೂ ಹೌದು. ಲೋಕ ಸಿದ್ಧವೂ ಹೌದು ಆಶ್ರಿತರಲ್ಲಿ ವಾತ್ಸಲ್ಯವನ್ನಿಟ್ಟು ಅವರನ್ನು ಕರುಣಿಸಿ ಸಂಕಟಗಳನ್ನು ಪರಿಹರಿಸುವುದೇನು, ಇಷ್ಟಾರ್ಥಸಿದ್ಧಿ ಏನು ಇವುಗಳಿಂದ ಪ್ರೀತರಾದವರು ತಮ್ಮ ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ ತಿರುಮಲೆಗೆ ಪ್ರತಿದಿನವೂ ಸಹಸ್ರ ಸಂಖ್ಯೆಯಿಂದ ಹೋಗುತ್ತಿರುವುದೇ ಆತನ ನಿರುಪಾಧಿಕಾಶ್ರಿತವತ್ಸಲತ್ವದ ದೃಶ್ಯವಲ್ಲವೇ? ಇವನ್ನೆಲ್ಲಾ **ಸ್ಮಾರಂ ಸ್ಮಾರಂ** ಸ್ಮರಿಸಿ ಸ್ಮರಿಸಿ, **ಗತಭೀಃ** ನಿರ್ಭಯನಾಗಿರುತ್ತೇನೆ ಎಂದು ಹೇಳಿಕೊಂಡಿರುತ್ತಾರೆ. ಸಾವಿರಾರು ವಿರೋಧ ವರ್ಗವಿದ್ದರೆ ತಾನೇ ಏನು ಭಯವು. **ನಿರ್ಭರೋ ನಿರ್ಭ ಯೋಸ್ಮಿ** ಎಂದು ಹೇಳಿ "**ವಿಲಾಸ ವಿಕ್ರಾನ್ತ**" ಎಂಬಲ್ಲೂ "**ಅವಬೋಧಿತವಾ**" ಎಂಬಲ್ಲೂ "**ಅಪರಾಧ ಸಹಸ್ರ ಭಾಜನಂ**" ಎಂಬಿವೇ ಮೊದಲಾದ ಸಂದರ್ಭದಲ್ಲಿ ಮಾಡಿದುದನ್ನೆಲ್ಲಾ ಮರೆತು ನಿರ್ಭಯನಾಗಿ ಇಚ್ಛಿಸುತ್ತೇನೆಂದು ಹೇಳಲ್ಪಟ್ಟಿತು.

**ಅವತಾರಿಕೆಯು**— ನೀನು ಗತಭೀಃ ನಿರ್ಭಯನಾದುದರಿಂದ ನನ್ನ ಕಾರುಣ್ಯ ವಾತ್ಸಲ್ಯಾದಿಗಳಲ್ಲಿ ನಂಬಿಕೆಯನ್ನಿಟ್ಟು ನಿತ್ಯ ಕೈಂಕರ್ಯವನ್ನು ಮಾಡ ಬೇಕೆಂದು ಈ ಸ್ತೋತ್ರ ಮುಖೇನ ಏನೋ ಅಪೇಕ್ಷಿಸಿರುತ್ತೀನೆ ಎಂದು ಹೇಳಿರು ತ್ತೀಯೇ ನಿನ್ನಲ್ಲಿ ಆಚಾರವೂ ಜ್ಞಾನವೂ ಇಲ್ಲವು ಎಂದು ಹೇಳಿಕೊಂಡ ನಂತರ ರಜಸ್ತಮೋ ಗುಣಗಳಿಂದ ಆವೃತನೆಂದು ನೀನೇ ಒಪ್ಪಿರುತ್ತೀಯೇ. ನಿನ್ನ ಪ್ರಾರ್ಥ ನೆಯಲ್ಲಿ ಮಹಾ ವಿಶ್ವಾಸವನ್ನು ಹೇಗೆ ಇಡಲು ಸಾಧ್ಯವು? ಹೀಗೆ ಕಪಟ ಪ್ರಾರ್ಥ

ನೆಯೋ ಏನೋ ಎಂದೇನಾದರೂ ನೀನು ಹೇಳುವುದಾದರೆ ಆ ಕಪಟ ಪ್ರಾರ್ಥನೆಯನ್ನೇ ಕರುಣಾ ಸಾಗರನಾದ ನೀನು ವ್ಯಾಜಮಾಡಿಕೊಂಡು ಅಂಗೀಕರಿಸಿ ನನ್ನ ಮನಸ್ಸಿನಲ್ಲಿ ಕಪಟವಿಲ್ಲದ ಹಾಗೇ ಮಾಡು ಎಂದು ಈ ಶ್ಲೋಕದಲ್ಲಿ ಬೇಡುತ್ತಾರೆ. ಆ ಭಾವವೂ ನಿನ್ನದೇ ಎಂಬ ಭಾವದಿಂದ ಹೇಳುತ್ತಾರೆ.

**ಅರ್ಥವು. ರಜಸ್ತಮಶ್ಛನ್ನಃ**— ರಜಸ್ತಮೋ ಗುಣಗಳಿಂದ ತಿರೋಹಿತ ಜ್ಞಾನವುಳ್ಳ (ಅಹಂ) ನಾನು ಏವಂ-ಈ ಪರಿಯಾಗಿ, ಅನಿಚ್ಛನ್ನಪಿ—ನಿಜವಾದ ಇಚ್ಛೆ ಇಲ್ಲದಿದ್ದರೂ, ಇಚ್ಛನ್ನಿವ-ನಿಜವಾಗಿಯು ಅಪೇಕ್ಷಿಸುವವನ ಹಾಗೆ, ಇತಿ-ಈ ಮೇಲೆ ಹೇಳಿದ ರೀತಿಯಲ್ಲಿ, **ಛದ್ಮಸ್ತುತಿ ವಚನ ಭಂಗೀಂ**- ಕಪಟ ಸ್ತುತಿ ವಾಕ್ಯಗಳ ವೇಷವನ್ನು, **ಅರಚಯಮ್**- ರಚಿಸಿದೆನು ; **ಯದಿ ಪುನಃ** ಎಂದೇನಾವರೂ ಇತರರು ಭಾವಿಸಿದರೂ ಎಂಬ ಭಾವವು. **ತಥಾಪಿ** ಹಾಗಾದರೂ, **ಇತ್ಥಂ ರೂಪಂ ವಚನಂ**-ಇಂತಹ ಕಪಟ ಸ್ತುತಿವಚನವನ್ನೇ, **ಕೃಪಯಾ**— ನೀನು ಕೃಪಾ ಸಾಗರನಾದುದರಿಂದ ಕರುಣಿಸಿ, **ಅವಲಂಬ್ಯಾಪಿ**—ಸ್ವೀಕರಿಸಿಯಾದರೂ, **ಹೇ ಧರಣಿಧರ**-ಈ ಭೂಮಿಯನ್ನು ಅತಿಪ್ರೀತಿಯಿಂದ ಉದ್ಧರಿಸಿ ಅದಕ್ಕೆ ನೇತ್ರಾದಾಯಕನೇ! ಈ ಧರಣಿಯನ್ನು ಲೀಲಾ ವಿಭೂತಿಯಾಗಿ ಮಾಡಿಕೊಂಡು ರಮಿಸುವವನೇ! ಅಥವಾ **"ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ"** ಎಂಬಲ್ಲಿ ಹೇಳಿರುವ ಹಾಗೆ ಭೂಮಿದೇವಿಯನ್ನು ಧರಿಸಿರುವವನೇ! ಅಥವಾ ಮಹಾವರಾಹಾವತಾರಿಯಾಗಿ ಭೂಮಿಯನ್ನು ಕೋರೆ ಹಲ್ಲಿನಲ್ಲಿ ಧರಿಸಿದವನೇ! **ಮೇ**-ನನ್ನ, **ಮನಃ** ಕಾಪಟ್ಯದಿಂದಾವೃತವಾದ ಮನಸ್ಸನ್ನು, **ಶಿಕ್ಷಯ**-ಶಿಕ್ಷಿಸು ಎಂದರೆ ಅದನ್ನು ಹೋಗಲಾಡಿಸಿ ಋಜುಭಾವವುಂಟಾಗುವ ಹಾಗೆ ಮಾಡು ಎಂಬ ಭಾವವು.

**ಉಪಪಾದನೆಯು** — ಮನಸ್ಸಿನಲ್ಲಿ ಬೇರೆ ಭಾವಗಳನ್ನು ಹೊಂದಿ ತುದಿ ನಾಲಿಗೆ ಮಾತುಗಳಿಂದ ನನ್ನನ್ನು ಸ್ತುತಿಸಿ ಶಾಸ್ತ್ರಗಳ ಸರಿಯಾದ ಪರಿಚಯವಿಲ್ಲದ, ನಿನ್ನ ಸ್ವರೂಪ ಸ್ವಭಾವಗಳ ಮತ್ತು ನನ್ನ ಸ್ವರೂಪ ಸ್ವಭಾವಗಳ ಯಥಾರ್ಥ ಜ್ಞಾನವಿಲ್ಲದ್ದು, ನಿನ್ನ ಈ ಪ್ರಾರ್ಥನೆಯು ಎಂದೇನಾದರೂ ಸ್ವಾಮಿಯು ಆಕ್ಷೇಪಿಸಬಹುದು ಎಂದು ಶಂಕಿಸಿ, ಅದಕ್ಕೂ ಸಮಾಧಾನವನ್ನು ಹೇಳುತ್ತಾರೆ. ಈ ಶ್ಲೋಕ ಮೊದಲುಗೊಂಡು ಏಳು ಶ್ಲೋಕಗಳ ಮೂಲಕ ಸ್ವಾಮಿಯು ತಮ್ಮನ್ನು ಶಿಕ್ಷಿಸಿ ಸರಿಯಾದ ಬುದ್ಧಿ ಯೋಗವನ್ನುಂಟುಮಾಡುವುದಕ್ಕೂ ಅನಂತರ ಕೃಪಯಾ ರಕ್ಷಿಸುವುದಕ್ಕೂ ತಾವು ಸರಿಯಾದ ಪಾತ್ರವೆಂಬುದಕ್ಕೆ ಕಾರಣಗಳನ್ನು ತಿಳಿಸುತ್ತಾರೆ—ಉತ್ತರಾರ್ಧದಲ್ಲಿ **ತಥಾಪಿ** ಎಂದಿರುವುದರಿಂದ **ಯದಿ** ಎಂಬುದಕ್ಕೆ **ಯದ್ಯಪಿ** ಎಂದು ಸೇರಿಸಿ ಅರ್ಥಮಾಡತಕ್ಕದ್ದಾಗಿರುತ್ತದೆ. ಪ್ರಾರ್ಥನೆಯಲ್ಲಿ ಶ್ರದ್ಧಾ ವಿಶ್ವಾಸಗಳಿರತಕ್ಕದ್ದು. ರಜೋಗುಣತಮೋಗುಣಗಳ ವಿಲಾಸದಿಂದಲೂ, ಪೂರ್ವಜನ್ಮದ ಅಂತಹ ಗುಣ ವಿಶಿಷ್ಟ ಪ್ರವೃತ್ತಿಗಳಿಂದುಂಟಾದ ವಾಸನಾ ಬಲದಿಂದಲೂ, ಮೇಲಿನ ಭಕ್ತಿ ಮೊದಲಾದುವುಗಳಿಲ್ಲದೆ ಇತರ ವಿಷಯಗಳಲ್ಲೂ ಇಚ್ಛೆ

ಯನ್ನಿಟ್ಟು ಬಾಯಲ್ಲಿ ಮಾತ್ರ ಈ ಸ್ತೋತ್ರರೂಪದಿಂದ ಇಚ್ಛೆ ಇರುವವನ ಹಾಗೆ ಬರೀ ನಟನೆಯಾದರೂ **ತಥಾಪಿ**— ನೀನು ಕೃಪೆ ಇಟ್ಟು ಈ ಸ್ತೋತ್ರವನ್ನು ಸ್ವೀಕರಿಸತಕ್ಕದ್ದೆಂದು ಪ್ರಾರ್ಥಿಸಿ, ನಿನ್ನಲ್ಲಿ ಪರಮ ವಿಶ್ವಾಸವುಂಟಾಗುವ ಹಾಗೆ ನನ್ನ ಮನಸ್ಸನ್ನು ರಕ್ಷಿಸು, ಎನ್ನುತ್ತಾರೆ, ಇಂತಹ ಸಹೃದಯವಲ್ಲದ ಸ್ತೋತ್ರವು ಸ್ವಾಮಿಗೆ ಹೇಗೆ ಗ್ರಾಹ್ಯವು ? ಎಂದರೆ ಕೃಪಾಸಾಗರನು ಅಂತಹ ವಾಚಾಕೈಂಕರ್ಯವನ್ನೂ ಪರಿಗ್ರಹಿಸುವನೆಂಬುದಕ್ಕೆ ಅನೇಕ ಪ್ರಮಾಣಗಳಿವೆ.

(೧) **"ಸಾಂಕೇತ್ಯಂ ಪಾರಿಹಾಸ್ಯಂವಾ ಸ್ತೋಭಂ ಹೇಳನಮೇವವಾ । ವೈಕುಂಠನಾಮ ಗ್ರಹಣಂ ಅಶೇಷಾಘಹರಂ ವಿದುಃ"** ಸಂಕೇತದಿಂದಲಾಗಲೀ, ಪರಿಹಾಸ್ಯದಿಂದಲಾಗಲಿ ಅರ್ಥವಿಲ್ಲದೆ ಬರೀ ಶಬ್ದ ಪ್ರಯೋಗದಿಂದಲಾಗಲಿ ಕುಚೋದ್ಯದಿಂದಲಾಗಲಿ ಪರಮ ಪುರುಷ ನಾಮವನ್ನು ಹೇಳುವಿಕೆಯು ಸಮಸ್ತ ಪಾಪನಾಶಕ್ಕೆ ಕಾರಣವಾಗುತ್ತದೆ.

(೨) **"ಹರಿರ್ಹರತಿ ಪಾಪಾನಿ ದುಷ್ಟಚಿತ್ತೈ ರಪಿಸ್ಮೃತಃ । ಅನಿಚ್ಛಯಾಪಿ ಸಂಸ್ಪೃಷ್ಟಃ ದಹತ್ಯೇವಹಿ ಪಾವಕಃ"** ಶ್ರೀಹರಿಯು ದುಷ್ಟಮನಸ್ಸನ್ನು ಹೊಂದಿದವರಿಂದ ಸ್ಮರಿಸಲ್ಪಟ್ಟರೂ ಕೂಡಾ ಅವರ ಪಾಪಗಳನ್ನು ನಾಶಮಾಡುವನು. ಹೇಗೆಂದರೆ ಅಗ್ನಿಯನ್ನು ಮುಟ್ಟಬೇಕೆಂಬ ಇಚ್ಛೆ ಇಲ್ಲದೇ ಮುಟ್ಟಿದರೂ ಸುಡುತ್ತದೆಂಬುದು ಸಿದ್ಧವಷ್ಟೆ.

(೩) **ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ । ಪುಮಾನ್ ವಿಮುಚ್ಯತೇ ಸದ್ಯಃ ಸಿಂಹತ್ರಸ್ತೈರ್ಮೃಗೈರಿವ ॥** ಹೇಳಬೇಕೆಂಬ ಇಚ್ಛೆಇಲ್ಲದೆ ಯಾದೃಚ್ಛಿಕವಾಗಿ ಯಾಗಲಿ ಯಾವ ಮಹಾನುಭಾವನ ನಾಮವು ಹೇಳಲ್ಪಟ್ಟರೆ, ಪರಿಶುದ್ಧ ಸ್ವಭಾವವುಳ್ಳ ಈ ಜೀವಾತ್ಮನು, ಸಿಂಹವನ್ನು ಕಂಡು ಭಯಪಟ್ಟು ಓಡಿಹೋಗುವ ಜಿಂಕೆ ಮೊದಲಾದ ಮೃಗಗಳಿಂದ ಹೇಗೋ ಹಾಗೆ ಒಡನೇ ಪಾಪಗಳಿಂದ ಬಿಡಲ್ಪಡುವನು.

(೪) **"ಏತಾವತಾಲ ಮಘನಿರ್ಹರಣಾಯ ಪುಂಸಾಂ ಸಂಕೀರ್ತನಂ ಭಗವತೋಗುಣ ಕರ್ಮ ನಾಮ್ನಾಂ । ಆಕ್ರುಶ್ಯಪುತ್ರ ಮಘವಾನ್ ಯದಜಾಮಿಳೋಽಪಿ ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಮ್"** ಮನುಷ್ಯರಿಗೆ ಅವರ ಪಾಪಗಳು ತೊಲಗುವುದಕ್ಕೆ ಕಲ್ಯಾಣಗುಣಗಳ, ದಿವ್ಯ ಚೇಷ್ಟಿತಗಳ, ದಿವ್ಯನಾಮಗಳ ಸಂಕೀರ್ತನ ಮಾತ್ರವೇ ಸಾಕಾಗಿರುತ್ತದೆ. ಹೇಗೆಂದರೆ ತುಂಬಾ ಪಾಪಿಷ್ಠನಾದ ಅಜಾಮಿಳನು ಕೂಡ ತನ್ನ ಪುತ್ರನಾದ ನಾರಾಯಣನನ್ನು ದೇಹಾವಸಾನ ಕಾಲದಲ್ಲಿ ಘಟ್ಟಿಯಾಗಿ ಕೂಗಿದ್ದೇ ಮೂಲವಾಗಿ ಮುಕ್ತಿಯನ್ನು ಹೊಂದಿದನಷ್ಟೆ.

(೫) "**ನಾರಾಯಣೇತಿ ಶಬ್ದೋಽಸ್ತಿ ವಾಗಸ್ತಿವಶವರ್ತಿನೀ | ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್**" ನಾರಾಯಣನೆಂಬ ನಾಮ ವಿದೆ. ವಾಕ್ಕು ನಮ್ಮ ವಶದಲ್ಲಿರುತ್ತದೆ. ಹೀಗಿದ್ದರೂ ಅಂತಹ ನಾಮವನ್ನುಚ್ಚರಿಸದೆ ನರಕದಲ್ಲಿ ಜನರು ಬೀಳುತ್ತಿರುವುದು ಪರಮಾಶ್ಚರ್ಯವಾದುದು.

(೬) **ರೋಗಾಪದ್ಭಯದುಃಖೇಭ್ಯೋಮುಚ್ಯಂತೇ ನಾತ್ರಸಂಶಯಃ| ಅಪಿನಾರಾಯಣೇ ತ್ಯೇತಚ್ಛಬ್ದಸ್ಯೈವ ಪ್ರಲಾಪಿತಃ** " ಸುಮ್ಮನೆ ನಾರಾಯಣ ಎಂಬ ಶಬ್ದ ಮಾತ್ರವನ್ನು ಉಚ್ಚರಿಸುವವರು ಕೂಡ ರೋಗ ಆಪತ್ತು, ಭಯ ದುಃಖಗಳಿಂದ ಬಿಡಲ್ಪಡುವರು. ಈ ವಿಷಯದಲ್ಲಿ ಸಂಶಯವಿಲ್ಲವು.

**ರಜಸ್ತಮಶ್ಛನ್ನಃ** ಎಂದು ಹೇಳಿದುದರಿಂದ ಪುನರ್ಜನ್ಮದಲ್ಲಿ ಕರಣಕಳೇಬರ ಯೋಗವು ಹಿಂದಿನ ಜನ್ಮದಲ್ಲಿ ಮಾಡಿದ ದುಷ್ಕೃತಗಳಿಗನುಸಾರವಾಗಿ ರಜಸ್ತಮೋ ಗುಣಗಳಿಂದ ಆವರಿಸಲ್ಪಟ್ಟಿರುವೆಂದು ಹೇಳಿದಂತಾಯಿತು ಸರ್ವೇಶ್ವರನಲ್ಲಿ ವೈಷಮ್ಯ ನೈರ್ಘೃಣ್ಯಗಳಿಲ್ಲವು ಇವರುಗಳ ಪುನರ್ಜನ್ಮ ಪ್ರವೃತ್ತಿಗಳಿಗನುಸಾರ ವಾಗಿ ಸಂಸಾರ ಪ್ರಾಪ್ತಿಯೂ, ಅನುಭವವೂ ಎಂದು ಹೇಳಿದಂತಾಯಿತು. ಹೀಗೆ ದುಷ್ಕೃತಗಳಿಂದುಂಟಾದ ರಜಸ್ತಮೋಗುಣಗಳಿಂದ ತನ್ನ ಸ್ವರೂಪ ಸ್ವಭಾವ ಗಳೇನು ? ಪರಮ ಪುರುಷನ ಸ್ವರೂಪ ಸ್ವಭಾವಗಳೇನು ? ಎಂಬುದರ ಜ್ಞಾನ ಶೂನ್ಯನಾಗಿರುವನು ಆದುದರಿಂದ ಛನ್ನಃ ಎಂದು ಹೇಳಲ್ಪಟ್ಟಿತು. ಆ ಕಾರಣ ದಿಂದ ಈಗ ತಾವು ಮಾಡಿರುವ ಈ ಸ್ತೋತ್ರವು **ಛದ್ಮಸ್ತುತಿ ವಚನ ಭಂಗೀ** ಎಂದು ಹೇಳಿಕೊಂಡರು. ಸ್ತುತಿಯು ಯಥಾರ್ಥವಾದುದಲ್ಲದೆ ಕಪಟಸ್ತುತಿ ಎಂದು **ಛದ್ಮಸ್ತುತಿ** ಎಂದು ಹೇಳಿಕೊಂಡರು. **ವಚನ ಭಂಗೀಂ** ಎಂದು ಹೇಳಿರುವುದ ರಿಂದ ಸ್ತುತಿರೂಪವೇಷವೆಂದು ಭಂಗೀ ಶಬ್ದ ಪ್ರಯೋಗವು. ಭಂಗೀ ಶಬ್ದವು ಜೈನರ ಮೊದಲಾದವರುಗಳ ಸಪ್ತ ಭಂಗೀವಾದದ ಹಾಗೂ ಭೇದಾ ಭೇದವಾದಿಗಳ ಹಾಗೂ ಸ್ತುತಿಯೂ ಕೂಡ ಕೆಲವು ಸ್ಥಳಗಳಲ್ಲಿ ಪರಸ್ಪರ ವಿರುದ್ಧವಾಗಿರಬಹುದು ಎಂಬ ಭಾವವು. **ತಥಾಪಿ** ಎಂದು ಏಕೆ ಹೇಳಲ್ಪಟ್ಟಿತು ಎಂದರೆ ಋಜುಸ್ವಭಾವನಿಗೆ "**ಯನ್ಮನಸಾಧ್ಯಾಯತೇ ತದ್ವಾಚಾವದತಿ ತತ್ಕರ್ಮಣಾ ಕರೋತಿ**" ಹೀಗೆ ಮನಸ್ಸುವಾಕ್ಕು ಕರ್ಮವೂ ಸಹ ಒಂದರಲ್ಲೇ ಸಕ್ತವಾಗಿರುವುದುಂಟು. ಹಾಗಿರದೆ ತಮ್ಮ ಪ್ರವೃತ್ತಿಯು ಹೇಗೆ ಎಂದರೆ ಮನಸ್ಸಾದರೋ ಒಂದು ವಿಧವು ಐಹಿಕ ವಿಷಯದಲ್ಲಿ ಸಕ್ತವಾಗಿರೋಣ ; ಏಕೆಂದರೆ **ರಜಸ್ತಮಶ್ಛನ್ನ** ವಾಗಿರುವುದರಿಂದ ವಾಕ್ಕಾದರೋ ದ್ವಯಮಂತ್ರಾರ್ಥವನ್ನುಚ್ಚರಿಸುತ್ತೇನೆಂದು ಛದ್ಮಸ್ತುತಿ ರೂಪವಾದ ವಾಚಾ ಕೈಂಕರ್ಯವನ್ನೆನಗಿದುದೇನು ? ಇವುಗಳು ಸರಿಯಾಗಿ ನೋಡಿದರೆ ನಿನ್ನ ಅನುಗ್ರಹಕ್ಕೆ ಯೋಗ್ಯವಿಲ್ಲದಿದ್ದರೂ ಎಂಬ ಭಾವದಿಂದ **ತಥಾಪಿ ಇತ್ಥಂ ರೂಪಂ ವಚನಂ** ಎಂಬ ಪ್ರಯೋಗಗಳು. ಹೀಗೆ ಮನಸ್ಸೂ ವಾಕ್ಕೂ ಏಕೀಭವಿಸದಿದ್ದರೂ ನೀನು ಮಹಾ ಕೃಪಾಸಾಗರನಾದುದರಿಂದ ಅಂತಹ ಕೈಂಕರ್ಯವನ್ನೂ ಸ್ವೀಕರಿಸುವೆ

ಎಂಬ ನಂಬಿಕೆ ಉಂಟೆಂಬುದನ್ನು ಪ್ರದರ್ಶಿಸುವುದಕ್ಕೆ **ಅವಲಂಬ್ಯಾಪಿ** ಗ್ರಾಹ್ಯ ವಾಗಿ ಎಣಿಸಿ ಅನುಗ್ರಹಿಸು ಎಂದು ಪ್ರಾರ್ಥಿಸುತ್ತಾರೆ. ಇಂತಹ ಸಂದರ್ಭದಲ್ಲೂ ಅನುಗ್ರಹವೇ ಶಾಸ್ತ್ರದಲ್ಲಿ ವಿಹಿತವೇ ವಿನಾ ಯಮ ಭಯ ರೂಪನಿಗ್ರಹ ವಿಲ್ಲವು. ಏಕೆಂದರೆ— "**ಕಮಲನಯನ ವಾಸುದೇವ ವಿಷ್ಣೋ ಧರಣಿಧರಾಚ್ಯುತ ಶಂಖ ಚಕ್ರಪಾಣೇ । ಭವಶರಣ ಮಿತೀರಯನ್ತಿಯೇವೈ ತ್ಯಜ ಭಟ ದೂರತ ರೇಣ ತಾನ ಪಾಪಾ**ನ್" ಯಮನು ತನ್ನ ಭಟನನ್ನು ಕುರಿತು ಹೇಳುತ್ತಾನೇ ನೆಂದರೆ-ಯಾರು, ಕಮಲನಯನನೇ, ವಾಸುದೇವನೇ, ಧರಣಿಧರನೇ, ಅಚ್ಯುತನೇ, ಶಂಖ ಚಕ್ರಗಳನ್ನು ಕೈಯಲ್ಲಿ ಧರಿಸಿರುವವನೇ ನೀನೇ ನಮಗೆ ಸಿದ್ಧೋಪಾಯ ನಾಗತಕ್ಕದ್ದು, ಎಂದು ಹೇಳುತ್ತಾರೋ ಅಂತವರ ತಂಟೆಗೆ ನೀವು ಹೋಗದೆ ಅಂತಹ ಸುಕೃತಿಗಳನ್ನು ನೀವು ದೂರದಿಂದಲೇ ಬಿಡತಕ್ಕದ್ದೆಂದು ಆಜ್ಞಾಪಿಸುತ್ತಾ ನೆಂದು ವಿಷ್ಣು ಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ—ಅದೂ ಅಲ್ಲದೆ ನೀನೇ **ನತ್ಯ ಜೇಯಂ ಕಥಂಚನ । ದೋಷೋಯದ್ಯಪಿ ತಸ್ಯಸ್ಯಾತ್** ಅಂತವನನ್ನೂ ಬಿಡುವುದಿಲ್ಲವು, ಆತನಲ್ಲಿ ದೋಷವಿದ್ದರೆ ತಾನೇ ಏನು ? ಎಂದು ಸತ್ಯಸಂಕಲ್ಪ ನಾದ ನೀನೇ ಕೃಪಯಾ ಹೇಳಿರುತ್ತೀಯಷ್ಟೇ ಎಂಬ ಭಾವವು ವಿಭೀಷಣನ ಮನಸ್ಸನ್ನು ಪರೀಕ್ಷಿಸತಕ್ಕದ್ದೆಂದು ನಿನ್ನ ಭಕ್ತರೇ ಹೇಳಿದರೂ ನಿರಾಕರಿಸಿ, **ರಾಘವಂ ಶರಣಂಗತಃ** ಎಂದು ಹೀಗೆ ಹೇಳುವಾಗ ಆತನ ಮನಸ್ಸಿನ ಪರಿ ಸ್ಥಿತಿಯು ಅನ್ಯಥಾ ಇರಬಹುದೋ ಏನೋ ಎಂದು ಸ್ವಲ್ಪವೂ ಶಂಕಿಸದೆ ನೀನು ರಕ್ಷಿಸಲಿಲ್ಲವೇ ? ಆ ವಾಕ್ಯವನ್ನು ನೀನು ಹೇಗೆ **ಅವಲಂಬ್ಯ** ಆತನನ್ನು ರಕ್ಷಿಸಿ ದೆಯೋ ಹಾಗೆಯೇ ರಕ್ಷಿಸುವುದು ನ್ಯಾಯವು ಎಂಬುದೂ ಸೂಚಿತವು—

**ತ್ವಮೇವ** ಎಂಬಲ್ಲಿರುವ ಏವಕಾರದಿಂದ ಹಾಗೆ "**ಶರಣಂಗತಃ**" ಇಷ್ಟುಮಾತ್ರ, ಹೇಳಿದುದನ್ನು ವ್ಯಾಜಮಾಡಿಕೊಂಡು ರಕ್ಷಿಸುವ ದಯಾರ್ದ್ರ ಹೃದಯವೂ ಶಕ್ತಿಯೂ ಇನ್ನು ಯಾರಿಗೂ ಇಲ್ಲವು. ಸಿದ್ಧೋಪಾಯನಾದ ಲಕ್ಷ್ಮೀಪತಿಯಾದ ನೀನೇ ರಕ್ಷಿಸುವ ಸಾಮರ್ಥ್ಯವುಳ್ಳವನೆಂಬ ಭಾವವು ದ್ಯೋತಿತವು. ನೀನೇ "**ಸುಹೃದಂ ಸರ್ವಭೂತಾನಾಂ**" ಎಂಬಲ್ಲಿ ಪ್ರಾಣಿಗಳಿಗೆಲ್ಲಾ ಪರಮ ಸುಹೃತ್ತಾದುದರಿಂದ, ಮನಸ್ಸು ಸರಿಯಾದ ಸ್ಥಿತಿಯಲ್ಲಿ ಇಲ್ಲದಿದ್ದರೆ "**ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾಂತಿ ತೇ**" (ಗೀ ) ಎಂಬಲ್ಲಿ ಹೇಳಿರುವ ಹಾಗೆ ಮನಸ್ಸನ್ನು ಶಿಕ್ಷಿಸಿ ಒಳ್ಳೆಯ ಬುದ್ಧಿಯನ್ನು ನಾನೇ ಕೊಡುವೆನೆಂದು ಹೇಳಿಕೊಂಡಿರುತ್ತೀಯೆ. ಆದುದರಿಂದ **ಶಿಕ್ಷಯಮನಃ** ಎಂದು ಬೇಡುತ್ತಾರೆ. ಹಾಗೆ ಸಿದ್ಧೋಪಾಯನಾಗಿ ನನಗೆ ಅನುಗ್ರಹಿಸುವುದಕ್ಕೆ ನೀನೇ ಪರಮಕರುಣಾಳುವಾಗಿಯೇ ಇರುವುದಲ್ಲದೆ ಅನುಗ್ರಹಮಯಳಾದ ನಿತ್ಯಾನ ಪಾಯಿನಿಯ ಜತೆಯಲ್ಲಿಯೂ ಇರುವುದಲ್ಲದೆ, ನೀನು ಧರಣಿಧರನು. ಆಕೆಯು **ಸರ್ವಂಸಹೆ**, ಪ್ರಾಣಿಗಳ ಸರ್ವಾಪರಾಧಗಳನ್ನು ಸಹಿಸಿಕೊಳ್ಳುವಳು, ಕ್ಷಮಾ ಯುಕ್ತಳು. ಅಂತಹ ಇಬ್ಬರು ಪತ್ನಿಯರ ಮಧ್ಯದಲ್ಲಿರುವವನಿಗೆ ಅನುಗ್ರಹ

ಬುದ್ಧಿ ಇಲ್ಲದೆ ನಿಗ್ರಹ ಬುದ್ಧಿಯು ಎಂದಿಗೂ ಬರಲಾರದೆಂಬುದು ಈ ಸಂಬೋಧನೆ ಯಿಂದ ವ್ಯಕ್ತವು. ಅಥವಾ ವರಾಹಾವತಾರಿಯಾಗಿ ಧರಣಿಯನ್ನು ಮೇಲಕ್ಕೆತ್ತಿ ಉದ್ಧರಿಸಿದವನು ನೀನು. ನಿನಗಾದರೋ ನಿನ್ನ ಪತ್ನಿಯರಿಗಿಂತ ನಿನ್ನ ಆಶ್ರಿತರಲ್ಲಿ ನಿನಗೆ ವಿಶೇಷ ಪ್ರೀತಿ ಎಂದು "**ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾಸೀತೇ ಸಲಕ್ಷ್ಮಣಾಂ । ನಹಿಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ**" ಎಂಬಲ್ಲಿ ಹೇಳಿಕೊಂಡಿರುತ್ತೀಯೆ. ಆದುದರಿಂದ ಧರಣಿಯನ್ನು ಎತ್ತಿ ಹೇಗೆ ಉದ್ಧಾರಮಾಡಿದೆಯೋ ಹಾಗೆಯೇ ನನ್ನನ್ನೂ ಉದ್ಧಾರಮಾಡುತ್ತೀ ಎಂದು ಭಾವಿಸಿ **ಧರಣಿಧರ** ಎಂಬ ಸಂಬೋಧನೆಯ ಪ್ರಯೋಗವು ಭಗವಚ್ಛಾಸ್ತ್ರದಲ್ಲಿ "**ನಮಸ್ಸಕಲ ಕಲ್ಯಾಣದಾಯಿನೇ ಚಕ್ರಪಾಣಯೇ । ವಿಷಯಾರ್ಣವ ಮಗ್ನಾನಾಂ ಸಮುದ್ಧರಣ ಹೇತವೇ**" ಸಮಸ್ತ ಶ್ರೇಯಸ್ಸುಗಳನ್ನೂ ಕೊಡುವ ಚಕ್ರವನ್ನು ಕೈಯ್ಯಲ್ಲಿ ಧರಿಸಿರುವನೇ, ವಿಷಯಗಳೆಂಬ ಸಮುದ್ರದಲ್ಲಿ ಮುಳುಗಿರು ವವನನ್ನು ಮೇಲಕ್ಕೆತ್ತಿ ರಕ್ಷಿಸುವ ಮೂಲಕಾರಣನೇ ! ನಿನಗೆ ನಮಸ್ಕಾರವು. ಈ ಧರಣಿಧರ ಶಬ್ದದಿಂದ ಸೂಚಿತಾರ್ಥವು ಉಪಪಾದಿತವು. ಸಮುದ್ರದಲ್ಲಿ ಹಿರಣ್ಯಾಕ್ಷನಿಂದ ಮುಳುಗಿಸಲ್ಪಟ್ಟಿದ್ದ ಧರಣಿಯನ್ನು ಹೇಗೆ ಕರುಣೆಯಿಂದ ಎತ್ತಿ ದೆಯೋ, ಹಾಗೆಯೇ ಕ್ರೂರಗಳಾದ ಇಂದ್ರಿಯಗಳಿಂದ ವಿಷಯ ಸಮುದ್ರದಲ್ಲಿ ಮುಳುಗಿಸಲ್ಪಟ್ಟ ನನ್ನನ್ನೂ ಉದ್ಧಾರಮಾಡು ಎಂಬ ಭಾವವು ತೋರಿಬರುತ್ತದೆ-

**ಮೇ ಏವಂ ಭೂತಂ ಮನಃ**—ಇಲ್ಲಿ ಮೇ ಎಂದು ಹೇಳಿರುವುದು ಇತರ ರಿಂದ ಶಿಕ್ಷಿಸಲು ಅಶಕ್ತನಾಗಿ ನಿನ್ನೊಬ್ಬನಿಂದಲೇ ಶಿಕ್ಷಿಸಲು ಯೋಗ್ಯವಾದುದು ನನ್ನ ಮನಸ್ಸು ಎಂದು ಹೇಳಿಕೊಂಡರು "**ಏಕಶ್ಶಾಸ್ತಾ ನದ್ವಿತೀಯೋಸ್ತಿ ಶಾಸ್ತಾ ವಿಷ್ಣುರ ಶೇಷಸ್ಯ**" ಹೀಗೆ ಪ್ರಮಾಣಗಳು ವಿಷ್ಣು ಒಬ್ಬನೇ ಶಾಸ್ತ್ರ ಎರಡನೆಯವನೇ ಇಲ್ಲವೆಂದು ಹೇಳುತ್ತವೆ. **ಏವಂ ಭೂತಂ**—ಮೇಲೆ ಹೇಳಿದ ಹಾಗೆ ದೋಷಯುಕ್ತವಾದುದು ಎಂಬ ಅಭಿಪ್ರಾಯವು. ನೀನು ಸರ್ವಜ್ಞನು. ಸಮಸ್ತರ ಇಂಗಿತವನ್ನೂ ತಿಳಿದವನು. ಹೀಗಿದ್ದರೂ ನನ್ನ ಮನಸ್ಸು ನಿನ್ನನ್ನು ಕೂಡ ವಂಚಿಸಲು ಪ್ರಯತ್ನ ಪಟ್ಟಂತಹ **ಏವಂ ಭೂತಂ ಮನಃ** ಎಂಬ ಅರ್ಥ ವಾಗಬಹುದು. **ಮನಃ ಶಿಕ್ಷಯ** ಎಂಬುದರಿಂದ ಛದ್ಮನೆಯಿಲ್ಲದೆ ಮನಸ್ಸನ್ನು ಋಜು ಭಾವವನ್ನು ಹೊಂದುವ ಹಾಗೆ ಮಾಡು; ನೀನು ಕರುಣಿಸಿದರೆ ಒಡನೇ ಸಾಧ್ಯವು. ಧ್ರುವನು ನಿನ್ನನ್ನು ಕುರಿತು ತಪಸ್ಸು ಮಾಡಿದುದಕ್ಕೆ ನೀನು ಸೇವೆಯ ನ್ನಿತ್ತರೂ ಅದನ್ನು ತಿಳಿಯಲು, ತಿಳಿದು ನನ್ನನ್ನು ಸ್ತುತಿಸಲು ಯೋಗ್ಯತೆ ಇಲ್ಲದಿ ರುವಾಗ ಬಾಲನನ್ನು ನೀನು ಶಂಖದ ತುದಿಯಿಂದ ಮುಟ್ಟಿದುದರ ಫಲವಾಗಿ ನಿರ್ಮಲ ಜ್ಞಾನವನ್ನು ಹೊಂದಿ ನಿನ್ನನ್ನು ಸ್ತುತಿಸಲಿಲ್ಲವೇ ? "**ಶಂಖ ಪ್ರಾಂತೇನ ಗೋವಿಂದಸ್ತಂ ಪಸ್ಪರ್ಶ ಕೃತಾಂಜಲಿಂ । ಉತ್ತಾನಪಾದ ತನಯಂ ಮುನಿ ವರ್ಯಂ ಜಗತ್ಪತಿಃ । ತತಃ ಪ್ರಸನ್ನವದನ ಸ್ತತ್ಕ್ಷಣಾನ್ನೃಪನಂದನಃ । ತುಷ್ಟಾವ ಪ್ರಣತೋಭೂತ್ವಾ ಭೂತಾಧಾತಾರಮಚ್ಯುತಮ್**" ಎಂಬುದು

ಪಿತಾತ್ವಂ ಮಾತಾತ್ವಂ ದಯಿತ ತನಯಸ್ತ್ವಂ ಪ್ರಿಯಸುಹೃತ್
ತ್ವಮೇವತ್ವಂ ಮಿತ್ರಂ ಗುರುರಸಿ ಗತಿಶ್ಚಾಸಿ ಜಗತಾಮ್ ।
ತ್ವದೀಯ ಸ್ತ್ವದ್ಭೃತ್ಯಸ್ತವ ಪರಿಜನ ಸ್ತ್ವದ್ಗತಿ ರಹಂ
ಪ್ರಸನ್ನ ಶ್ಚೈವಂ ಸತ್ಯಹ ಮಪಿ ತವೈವಾಸ್ಮಿಹಿ ಭರಃ ॥೬೦॥

---

ಅನುಸಂಧೇಯವು. ಅಂಜಲಿ ಬದ್ಧನಾಗಿ ಧ್ಯಾನಿಸುತ್ತಿದ್ದ ಧ್ರುವನನ್ನು ಶಂಖದ ತುದಿಯಿಂದ ಶ್ರೀಮನ್ನಾರಾಯಣನು ಮುಟ್ಟಲು, ಒಡನೆ ಜ್ಞಾನದೀಪ್ತಿಯಿಂದ ಬೆಳಗುತ್ತಾ ಶ್ರಿಯಃ ಪತಿಯನ್ನು ತನ್ನ ದಿವ್ಯಸ್ತೋತ್ರದಿಂದ ಮೆಚ್ಚಿಸಿ ನಮಸ್ಕರಿಸಿ ಆತನ ಪ್ರಸನ್ನತೆಯನ್ನು ಹೊಂದಿದನೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ಅನುಗ್ರಹಿಸಿ ಶಿಕ್ಷಣ ರಕ್ಷಣೆಗಳಿಗೆ ನೀನಲ್ಲದೆ ಇನ್ನು ಯಾರಿಗೂ ಯೋಗ್ಯತೆಯಿಲ್ಲವು. ಆದುದರಿಂದ ನನ್ನ ಮನಸ್ಸನ್ನು ಶಿಕ್ಷಿಸು. ನಿನ್ನನ್ನು ಯಥಾರ್ಥವಾಗಿ ಸ್ತುತಿಸುವ ಹಾಗೆ ಮಾಡು ಎನ್ನುತ್ತಾರೆ—

**ಅವತಾರಿಕೆಯು.** ಸಿದ್ಧೋಪಾಯನಾಗಿ ಛದ್ಮಸ್ತುತಿಯಲ್ಲಿ ಪ್ರವರ್ತಿಸುವ ನನ್ನ ಮನಸ್ಸನ್ನು ಪರಿಶುದ್ಧವಾದುದನ್ನಾಗಿ ಮಾಡು ಎಂದು ಹಿಂದಿನ ಶ್ಲೋಕದಲ್ಲಿ ಪ್ರಾರ್ಥಿಸಿದರು. ಹಾಗೆ ನೀನು ಮಾಡುವಿ ಎಂಬ ಪರಿಪೂರ್ಣನಂಬಿಕೆಯುಂಟು ಎಂಬುದಕ್ಕೆ ಅನೇಕ ಕಾರಣಗಳನ್ನು ತಿಳಿಸುತ್ತಾರೆ—

**ಅರ್ಥವು. ಪಿತಾತ್ವಂ**–ನೀನೇ ನನಗೆ ಕಾರಣಭೂತನೂ ಅಲ್ಲದೆ ಸನ್ಮಾರ್ಗದಲ್ಲಿರುವ ಹಾಗೆ ಮಾಡುವ ಹಿತಪ್ರವರ್ತಕನು ; **ಮಾತಾತ್ವಂ**-**ಗರ್ಭಭೂತಾಸ್ತಪೋಧನಾಃ** ಎಂಬಲ್ಲಿ ತೋರಿಬರುವ ಹಾಗೆ ಗರ್ಭದಲ್ಲಿರುವಾಗಲೂ ಅನಂತರ ಸ್ತನ್ಯಪಾನಾದಿಗಳಿಂದಲೂ ರಕ್ಷಿಸುವ ಹಾಗೂ ರಕ್ಷಿಸಿ ಐಹಿಕ ಮೊದಲಾದ ಶ್ರೇಯಸ್ಸನ್ನು ಹೊಂದಿಸುವವನೂ ನೀನೇ., **ದಯಿತ ತನಯಸ್ತ್ವಂ**—ತುಂಬಾ ಪ್ರೀತಿಪಾತ್ರನಾಗಿಯೂ ಪುನ್ನಾಮ ನರಕದಿಂದ ತಪ್ಪಿಸುವುದರಿಂದಲೂ ಕೊನೆಗೆ ರಕ್ಷಕನಾಗುವುದರಿಂದಲೂ ಪ್ರೇಮ ಪುತ್ರನೂ ನೀನೇ, **ಪ್ರಿಯಸುಹೃತ್ತ್ವಂ**—ಕಷ್ಟಕಾಲಕ್ಕೆ ಒದಗುವ ಪ್ರಿಯಸ್ನೇಹಿತನೂ ಹಿತೈಷಿಯೂ ನೀನೇ, **ತ್ವಮಿತ್ರಂ**-ಕೊನೆಗೆ ಸಮಾನನೆಂದು ಭಾವಿಸಿ ನಿನಗೆ ಯಾವ ಆನಂದವೋ ಅಂತಹ ಆನಂದವನ್ನೇ ಕೊಟ್ಟು ಕಾಪಾಡುವ ಸೌಶಿಲ್ಯವುಳ್ಳವನು ನೀನೇ, **ಗುರುರಸಿ**- ದುಷ್ಟವಾಸನಾ ಮೂಲಕ ಪ್ರಾಪ್ತವಾದ ಜ್ಞಾನತಿರೋಧಾನವನ್ನು ಹೋಗಲಾಡಿಸಿ ಉಪದೇಶ ಮೂಲಕ ಜ್ಞಾನವಿಕಾಸವನ್ನುಂಟುಮಾಡುವವನೂ ಆಗಿದ್ದೀಯೇ, **ಜಗತಾಂಗತಿಃ**-ಜಗತ್ತಿಗೆಲ್ಲಾ ಉಪಾಯನೂ ಪ್ರಾಪ್ಯನೂ ಆಗಿದ್ದೀಯೆ. ಪೂರ್ವಾರ್ಧದಿಂದ ಆತನ ವಿಷಯವಾದ ಸಂಬಂಧಗಳು ಉಪಪಾದಿಸಲ್ಪಟ್ಟವು. ಉತ್ತರಾರ್ಧದಿಂದ ತಮ್ಮ ವಿಷಯವಾದ ಸಂಬಂಧಗಳು ಹೇಳಲ್ಪಡುವುವು. **ತ್ವದೀಯಃ**— ನಿನಗೆ ಶೇಷಭೂತನಾದವನು ನಾನು. **ತ್ವದ್ಭೃತ್ಯಃ**– ನಿನ್ನ ದಾಸನು ನಾನು, **ತವಪರಿಜನಃ**-

ನಿನ್ನ ಕೈಂಕರ್ಯ ಪರನು ನಾನು **ತ್ವದ್ಗತಿರಹಂ**-ನಿನ್ನನ್ನೇ ಗತಿಯಾಗಿ ಉಳ್ಳವನು ನಾನು, **ಪ್ರಸನ್ನಶ್ಚ**-ನಿನ್ನ ಮಾತುಗಳಲ್ಲಿ ಪೂರ್ಣ ವಿಶ್ವಾಸವಿಟ್ಟು ಈ ನನ್ನ ಆತ್ಮಾವನ್ನು ನಿನ್ನ ಪಾದಾರವಿಂದದಲ್ಲಿ ಸಮರ್ಪಿಸಿದವನೂ ಆಗಿದ್ದೇನೆ. **ಏವಂ ಸತಿ**-ಹೀಗೆ ನಿನಗೂ ನನಗೂ ಸಂಬಂಧಗಳಿರಲಾಗಿ, **ಅಹಮಪಿ**-ನಾನೂ ಕೂಡ, **ತವೈವ**-ನಿನಗೇ **ಭರೋಸ್ಮಿಹಿ**—ರಕ್ಷ್ಯವಸ್ತುವೆಂಬ ಭಾರವನ್ನು ಒಪ್ಪಿಸಿರುವೆನೆಂಬುದು ಸಿದ್ಧವು. ಇದರಿಂದ ನಿರ್ಭರರಾಗಿಯೂ ನಿರ್ಭಯರಾಗಿಯೂ ಇದ್ದೇನೆಂಬ ಕೃತಕೃತ್ಯ ಭಾವವನ್ನು ಸೂಚಿಸಿರುತ್ತಾರೆ.

**ಉಪಪಾದನೆಯು**— ತಮಗೆ ತಂದೆ ತಾಯಿ ಮೊದಲಾದ ಸರ್ವವಿಧ ಬಂಧುವೂ ನೀನೇ ಎಂದು ಹೇಳಿ, ಹೀಗೆ ನಿನ್ನವನು, ನಿನಗೆ ಶೇಷ ಭೂತನು, ನಿನಗೆ ಕೈಂಕರ್ಯ ಪರನು, ನಿನ್ನ ಸ್ವತ್ತೂ ಆದುದರಿಂದ ನೀನೇ ಗತಿ ಎಂದು ಪರಮ ವಿಶ್ವಾಸದಿಂದ ನಿನ್ನ ಪಾದಾರವಿಂದದಲ್ಲಿ ಶರಣಾಗತಿಯನ್ನ ನುಷ್ಠಿಸಿರುವುದರಿಂದ ತಮ್ಮನ್ನು ರಕ್ಷಿಸುವ ಭಾರವು ನಿನ್ನನ್ನೇ ಸೇರಿದುದು ಎಂದು ಅರಿಕೆ ಮಾಡುತ್ತಾರೆ. **ಪಿತಾತ್ವಂ ಮಾತಾತ್ವಂ**—ಪುತ್ರನಿಗೆ ಪಿತಾ ಮಾತಾ ಹೇಗೆ ಕಾರಣ ಭೂತರೋ ಹಾಗೆಯೇ ನಮಗೂ ನೀನು ಪಿತಾ, ಕಾರಣ ಭೂತನು "**ಪಿತಾಹಮಸ್ಯ ಜಗತಃ ಮಾತಾ ಧಾತಾ ಪಿತಾಮಹಃ**" (ಗೀ ೯-೧೭) ಎಂದು ಭಗವದ್ವಾಕ್ಯವೇ ಇರುತ್ತದೆ "**ಅಹಂ ಬೀಜಪ್ರದಃ ಪಿತಾ**" (ಗೀ ೧೪-೪) ಎಂಬ ಪ್ರಯೋಗವನ್ನೂ ಕಾಣಬಹುದು. ಶ್ರುತಿಯಲ್ಲೂ "**ಯೋನಃ ಪಿತಾ ಜನಿತಾಯೋ ವಿಧಾತಾ**" (ಋಗ್ವೇದ) "**ಪಿತಾಚರಕ್ಷಕ ಶ್ಶೇಷೀ ಭರ್ತಾಜ್ಞೇಯೋ ರಮಾಪತಿಃ । ಸ್ವಾಮ್ಯಾಧಾರೋಮಮಾತ್ಮಾಚ ಭೋಕ್ತಾ ಚಾದ್ಯಮನೂದಿತಃ**" ಎಂಬಲ್ಲಿ ಹೇಳಿರುವ ನವವಿಧ ಸಂಬಂಧದಲ್ಲಿ ಪಿತೃ ಪುತ್ರ ಸಂಬಂಧವು ಇಲ್ಲಿ ಹೇಳಲ್ಪಟ್ಟಿತು ಪಿತಾ ಹೇಗೆ ಪುತ್ರನನ್ನು ಶಿಕ್ಷಿಸಿ ಹಿತಪ್ರವೃತ್ತಿಯುಂಟಾಗುವ ಹಾಗೆ ಮಾಡುತ್ತಾನೋ, ಹಾಗೆಯೇ ಸ್ವಾಮಿಯೂ ನಿರುಪಾಧಿಕ ಪಿತಾ, ಆಶ್ರಯಿಸಿದವರಿಗೆ ಹಿತಪ್ರವೃತ್ತಿಯನ್ನುಂಟುಮಾಡುವುದರಿಂದ. ತಾಯಿಯು ಹೇಗೆ ಗರ್ಭದಲ್ಲಿರುವಾಗಲೂ ಅನಂತರವೂ ರಕ್ಷಿಸುತ್ತಾಳೋ ಹಾಗೆಯೇ ರಕ್ಷಕನು. ಲಕ್ಷ್ಮಣನು ಶ್ರೀರಾಮನನ್ನು ಕುರಿತು ಹೇಳುತ್ತಾನೆ. "**ಅಹಂತಾವನ್ಮಹಾರಾಜೇಪಿತೃತ್ವಂ ನೋಪಲಕ್ಷಯೇ । ಭರ್ತಾ ಬಂಧುಶ್ಚಭ್ರಾತಾಚ ಪಿತಾ ಚ ಮಮ ರಾಘವಃ**" ದಶರಥನು ಸೋಪಾಧಿಕಪಿತಾವಾದುದರಿಂದ ಆತನಲ್ಲಿ ಸರಿಯಾದ ಪಿತೃತ್ವವನ್ನು ಕಾಣಲಿಲ್ಲವು. ಜ್ಯೇಷ್ಠ ಪುತ್ರನನ್ನು ಕಾಡಿಗೆ ಕಳುಹಿಸುವನೇ ? ಆದುದರಿಂದ ತಮಗೆ ಶ್ರೀರಾಮಚಂದ್ರ ಪ್ರಭುವೇ ನಿರುಪಾಧಿಕಪಿತಾ ಎಂದು ಹೇಳಿಕೊಂಡಿರುತ್ತಾನೆ ನೀನು **ದಯಿತ ತನಯನೂ** ಹೌದು, ಮಗನಿಗೆ ತಂದೆಯಲ್ಲಿ ವಿಶೇಷ ಪ್ರೀತಿ ಗೌರವಗಳು ಆದರಂತೆಯೇ ನಿನ್ನ ಭಕ್ತರ ವಿಷಯದಲ್ಲಿ "**ಮಮ ಮದ್ಭಕ್ತ ಭಕ್ತೇಷು ಪ್ರೀತಿರಭ್ಯಧಿಕಾ ಭವೇತ್**" ಎಂದೂ "**ಜ್ಞಾನೀತ್ವಾತ್ಮೈವ ಮೇಮತಂ**" ಎಂದೂ "**ಮಮ ಪ್ರಾಣಾಹಿ ಪಾಂಡವಾಃ**" ಎಂದೂ ಅಹಂ "**ಭಕ್ತಪರಾಧೀನಃ**" ಎಂದೂ

ಹೀಗೆಲ್ಲಾ ಹೇಳಿರುವುದರಿಂದ ಮಗನು ತಂದೆಗೆ ಹೇಗೆ ಅಧೀನನೋ ಹಾಗೆಯೇ ನೀನೂ ಭಕ್ತರಿಗೆ ಅಧೀನನಾಗಿಯೇ ನಡೆದುಕೊಂಡಿರುತ್ತೀಯೆ. ಮಗನು ಹೇಗೆ ತಂದೆಯನ್ನುಪಚರಿಸುವನೋ ಹಾಗೆಯೇ ನೀನು ವಸಿಷ್ಠವಿಶ್ವಾಮಿತ್ರ ಭರದ್ವಾಜಾದಿ ಅನೇಕ ಋಷಿವೃದ್ಧರನ್ನು ಸುತನ ಹಾಗೆ ಉಪಚರಿಸಿರು ತ್ತೀಯೆ **"ಇಮೌಸ್ಮ ಮುನಿಶಾರ್ದೂಲ ಕಿಂಕರೌಸಮುಪಸ್ಥಿತೌ। ಆಜ್ಞಾಪಯ ಯಥೇಷ್ಟಂವೈ ಶಾಸನಂ ಕರವಾವ ಕಿಮ್"** ಹೀಗೆ ವೃದ್ಧಪಿತಾವನ್ನು ಸೇವಿಸುವ ತನಯನ ಹಾಗೆ ನಟಿಸಿರುತ್ತೀಯೆ. ಆಳ್ವಾರಾಚಾರ್ಯಾದಿಗಳು ಈ ಪಿತಾ ಪುತ್ರಾದಿ ಸಂಬಂಧಗಳನ್ನು ಅನೇಕ ಕಡೆಗಳಲ್ಲಿ ಕೊಂಡಾಡಿರುತ್ತಾರೆ. **"ತಾಯುಂ ತನ್ದೈಯುಮಾಯಿಉಲಗಿನಿಲ್‌ವಾಯು ಮೀಶನ್ ಮಣಿವ ನ್ಣೆಣ್ಣನ್ದೈಯೇ"** (ತಿರುವಾಯ್ ಮೊಳಿ ೧–೧೦–೬) ಎಂಬ ಪ್ರಯೋಗವನ್ನು ಕಾಣಬಹುದು.

**ಪ್ರಿಯ ಸುಹೃತ್** ಎಂಬುದರಿಂದ ನಿರತಿಶಯಾನಂದಸ್ವರೂಪನಾಗಿ ತನಗೆ ಸಮನಾದ ಆನಂದವನ್ನು ಕೊಡುವನೆಂಬುದು ಆನಂದಮಯಾಧಿ ಕರಣದಲ್ಲಿ ನಿಪುಣತರವಾಗಿ ಉಪಪಾದಿತವು. **"ರಸೋವೈಸಃ। ರಸಂ ಹ್ಯೇವಾಯಂ ಲಬ್ಧ್ವಾನಂದಯಾತಿ"** ಎಂದು ತೈತ್ತಿರೀಯಾನಂದವಲ್ಲಿಯು ಬಹುಸ್ವಾರಸ್ಯವಾಗಿ **"ಶ್ರೋತ್ರಿಯಸ್ಯಚಾಕಾಮಹತಸ್ಯ."** ಎಂಬಲ್ಲಿ ಈ ಎಲ್ಲಾ ಆನಂದವೂ ಪರಬ್ರಹ್ಮಾನಂದವೂ ಮುಕ್ತನಿಗೆ ಉಂಟೆಂದು ಉದ್ಘೋಷಿಸುತ್ತದೆ ಈ ಅರ್ಥವೇ ಸೂಕ್ಷ್ಮವಾಗಿ **"ನಿರಂಜನಃ ಪರಮಂ ಸಾಮ್ಯ ಮುಪೈತಿ"** ಎಂದು ಛಾಂದೋಗ್ಯದಲ್ಲಿ ಹೇಳಲ್ಪಟ್ಟಿರುತ್ತದೆ ಇದರ ಅರ್ಥವನ್ನೇ ವಿವರಿಸಿ ಮೋಕ್ಷಧರ್ಮದಲ್ಲಿ ವಸಿಷ್ಠ ಕರಾಳ ಸಂವಾದದಲ್ಲಿ ಮಹರ್ಷಿಯು ವ್ಯಕ್ತಪಡಿಸಿರುತ್ತಾರೆ. ನನಗೆ ಕರಣ ಕಳೇಬರಗಳನ್ನು ದಯಪಾಲಿಸಿ, ಮನಸ್ಸಿನ ಅಂಧಕಾರ ತೊಲಗುವುದಕ್ಕಾಗಿ ಶಾಸ್ತ್ರ ದೀಪವನ್ನೂ ವಿವೇಕ ಜ್ಞಾನವನ್ನೂ ಕೊಟ್ಟು, ಶಾಸ್ತ್ರಗಳನ್ನು ಭ್ರಮಾದಿಗಳು ಸ್ವಲ್ಪವೂ ಇಲ್ಲದ ಹಾಗೆ ಉಪದೇಶಕರನ್ನು ಒದಗಿಸಿಕೊಟ್ಟು, ಹೀಗೆಲ್ಲಾ ನಿತ್ಯ ಹಿತೈಷಿತ್ವವನ್ನು ಪ್ರಕಟಿಸಿರುವುದರಿಂದಲೂ **ಪ್ರಿಯಸುಹೃತ್.** ಇಂತಹ ಸುಹೃತ್ ಇನ್ನು ಬೇರೆ ಇಲ್ಲವೇ ಇಲ್ಲವೆಂದು ಹೇಳುವುದಕ್ಕಾಗಿ **ಪ್ರಿಯಸುಹೃತ್ತ್ವಮೇವ** ಎಂಬ ಅವಧಾರಣವು ಈ ಏವ ಎಂಬುದನ್ನು ಪಿತಾ ಮಾತಾ ಮೊದಲಾದ ಎಲ್ಲಾ ಪದಗಳೊಡನೆಯೂ ನಹ ಸೇರಿಸಿಕೊಳ್ಳತಕ್ಕದ್ದು. ಸುಬಾಲೋಪನಿಷತ್ತಿನ **"ನಿವಾಸ ಶ್ಶರಣಂ ಸುಹೃತ್"** ಎಂಬ ವಾಕ್ಯವನ್ನು ಈ ಪ್ರಯೋಗವು ಸೂಚಿಸುತ್ತದೆ. ಹಾಗೆಯೇ ಗೀತೆಯಲ್ಲೂ **"ಪಿತಾಹಮಸ್ಯ ಜಗತಃ ಮಾತಾ ಧಾತಾ ಪಿತಾಮಹಃ"** ಎಂದೂ (ಗೀ ೯-೧೭) **"ಗತಿರ್ಭರ್ತಾ ಪ್ರಭುಸ್ಸಾಕ್ಷೀನಿವಾಸ ಶ್ಶರಣಂ ಸುಹೃತ್"** ಎಂದೂ ಸ್ವಾಮಿಯೇ ಹೇಳಿಕೊಂಡಿರುತ್ತಾರೆ. ದಾಸನು ಬರೆದಿರುವ ಗೀತೆಯ ಆಚಾರ್ಯ ಹೃದಯಾನ್ವೇಷಿಣೀವ್ಯಾಖ್ಯಾನವನ್ನು ಪರಾಂಬರಿಸಿ. **ಮಿತ್ರಂ-**

ಹಿತ ಕಾರ್ಯಗಳಲ್ಲಿ ಪ್ರವರ್ತಕನು ತನ್ನ ಭಕ್ತರಾದ ಶಬರನಾದ ಗುಹ, ರಾಕ್ಷಸನಾದ ವಿಭೀಷಣ, ವಾನರರಾದ ಸುಗ್ರೀವಾಂಜನೇಯರು, ಕ್ಷತ್ರಿಯನಾದ ಅರ್ಜುನ, ಗೋಪಾಲರು ಮೊದಲಾದವರೊಂದಿಗೆ ಇದ್ದು ಅವರಿಗೆ ಹಿತವಾಗುವ ಹಾಗೆ ಪ್ರೇರಿಸುವವನು. ಅಥವಾ ಮಿತ್ರ ಶಬ್ದವು ಶರಣಾಗತಿಯನ್ನನುಷ್ಠಿಸಿದ ಪ್ರಪನ್ನನನ್ನು ಸಮಭಾವದಿಂದ ನೋಡುವ ಸ್ವಭಾವವುಳ್ಳವನೆಂದು ಸೂಚಿಸುತ್ತದೆ. ಅಥವಾ ಪ್ರಪನ್ನರನ್ನು ಸ್ನೇಹಿತರನ್ನಾಗಿ ಭಾವಿಸುವುದರ ಮೂಲಕ ಸಾಧು ಪರಿತ್ರಾಣವು ಬೋಧಿತವು. "**ಮಿತ್ರಮೌಪಯಿಕಂ ಕರ್ತುಂ**" ಎಂಬ ಮತ್ತು "**ತೇನಮೈತ್ರೀ ಭವತುತೇ ಯದಿ ಜೀವಿತು ಮಿಚ್ಛಸಿ**" ಎಂದು ರಾವಣನಿಗೆ ಸೀತೆಯ ಹಿತೋಕ್ತಿಯು. ಹಾಗೆಯೇ "**ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ**" "**ಅಹೋಭಾಗ್ಯ ಮಹೋಭಾಗ್ಯಂ ನಂದಗೋಪವ್ರಜೌಕಸಾಂ । ಯನ್ಮಿತ್ರಂ ಪರಮಾನಂದಂ ಪೂರ್ಣಂ ಬ್ರಹ್ಮಸನಾತನಮ್**" ಎಂಬುವುಗಳು ಅನುಸಂಧೇಯಗಳು—

**ಗುರುರಸಿ**- ಅವರವರುಗಳ ಅಧಿಕಾರಾನುಗುಣವಾಗಿ ನೀನು ಲೋಕಗುರುವಾಗಿದ್ದೀ ಎಂಬರ್ಥವು. ಏಕೆಂದರೆ "**ಮನ್ಮನಾಭವ ಮದ್ಭಕ್ತಃ**" "**ಮಾಮೇಕಂ ಶರಣಂ ವ್ರಜ**" ಎಂದು ಹೀಗೆಲ್ಲಾ ತತ್ವಹಿತ ಪುರುಷಾರ್ಥಗಳನ್ನು ಬೋಧಿಸುವುದರಿಂದ ಗುರುವು ಗುರುಶಬ್ದಾರ್ಥವೇ ಹಾಗಿರುತ್ತದೆ. "**ಗುಶಬ್ದ ಸ್ತ್ವಂಧಕಾರಸ್ಸ್ಯಾ ದ್ರುಶಬ್ದಸ್ತನ್ನಿರೋಧಕಃ। ಅಂಧಕಾರ ನಿರೋಧಿತ್ವಾದ್ಗುರುರಿತ್ಯಭಿಧೀಯತೇ**" **ಗು** ಶಬ್ದವು ಅಂಧಕಾರವನ್ನೂ **ರು** ಶಬ್ದವು ಅದನ್ನು ಹೋಗಲಾಡಿಸುವುದರಿಂದ ಆಚಾರ್ಯನು ಗುರುವೆಂದು ಹೇಳಿಸಿಕೊಳ್ಳುವನೆಂಬರ್ಥವು. ಸರ್ವೇಶ್ವರನು ಹೇಗೆ ಲೋಕಗುರುವೆಂದು ಹೇಳಿಸಿಕೊಳ್ಳುವನೆಂಬುದನ್ನು ಆರು ಕಾರಣಗಳಿಂದ ಗುರು ಪರಂಪರಾಸಾರದಲ್ಲಿ ಸಮರ್ಥಿಸಿರುತ್ತಾರೆ. ದಾಸನು ಅದಕ್ಕೆ ಅರ್ಥಬರೆದಿರುವ ಪುಟಗಳನ್ನು ಪರಾಂಬರಿಸಿ. **ಗತಿ**—ಶಬ್ದದಿಂದ ಸಿದ್ಧೋಪಾಯನೆಂದೂ ಪ್ರಾಪ್ಯನೆಂದೂ ಹೇಳಲ್ಪಟ್ಟಿತು. '**ಅಮೃತಸ್ಯೈಷಸೇತುಃ**" ಸಂಸಾರಾಬ್ಧಿಯನ್ನು ದಾಟಿ ಮುಕ್ತಿಯನ್ನು ಹೊಂದುವುದಕ್ಕೆ ಈತನೇ ಸೇತುವು, ಮತ್ತು "**ಯಮೇವೈಷವೃಣುತೇ ತೇನ ಲಭ್ಯಃ**" "ನಾದ್ಯೋಪಾಯಾನುಷ್ಠಾನ ಮಾಡಿದ ಯಾವನನ್ನು ಸರ್ವೇಶ್ವರನು ಯೋಗ್ಯನೆಂದು ಭಾವಿಸುವನೋ ಅಂತಹ ಪ್ರಪನ್ನನಿಂದ ಲಭ್ಯನು" ಇತ್ಯಾದಿಶ್ರುತಿ ಪ್ರಮಾಣಗಳೇ ಇವೆ. **ನಾರಾಯಣ** ಶಬ್ದದ **ಅಯನ** ಶಬ್ದಾರ್ಥವೇ ಇದು. ಹೀಗೆ ಆತನು ಗತಿಯಾಗಲು ಆತನನ್ನು ವಶೀಕರಿಸಬೇಕು. ಹಾಗೆ ವಶೀಕರಿಸಲು ಉಪಾಯವು ಯಾವುದೆಂದರೆ "**ತಸ್ಯಚ-ವಶೀಕರಣಂ ತಚ್ಛರಣಾಗತಿರೇವ**" ಆತನ ಪಾದಗಳನ್ನು ಆಶ್ರಯಿಸುವುದೇ ಪರಮಹಿತವಾದ ಅನುಷ್ಠಾನವು. ಇದು ಎರಡು ಉಪಾಯಗಳಿಗೂ ಅವಶ್ಯಕವು. ಇದೇ ಸರ್ವ ಶಾಸ್ತ್ರಾರ್ಥಸಾರವಾದ ಅದ್ಭುತವಾದ ಅಮೋಘವಾದ ಶ್ರೀಯತಿವರ್ಯರ ದಿವ್ಯಸೂಕ್ತಿಯು.—

ಜಗತಾಂ ಎಂಬ ಪ್ರಯೋಗದಿಂದ ಈ ಲೋಕದ ಪ್ರಪನ್ನರಿಗೆ ಮಾತ್ರವೇ ಗತಿ ಎಂದು ಭಾವಿಸತಕ್ಕದ್ದಲ್ಲವು. ಬ್ರಹ್ಮರುದ್ರೇಂದ್ರಾದಿ ಸಕಲ ಲೋಕದವರಿಗೂ ಮೋಕ್ಷ ವಿಷಯದಲ್ಲಿ ಅರ್ಥಿತ್ವ ಸಾಮರ್ಥ್ಯಗಳಿರುವುದರಿಂದ ಅವರುಗಳೂ ನಾಥ್ಯೋಪಾಯವನ್ನನುಷ್ಠಿಸಿದರೆ ಅವರಿಗೂ ಮುಕ್ತಿಯುಂಟೆಂದು **"ತದುಪರ್ಯಪಿ ಬಾದರಾಯಣಃ ಸಂಭವಾತ್"** ಎಂಬ ಬ್ರಹ್ಮಸೂತ್ರದಲ್ಲಿ ಉಪಪಾದಿತವಾಗಿರುವುದರಿಂದ ಅವರಿಗೂ ಕೂಡ ಗತಿಯು. ಈ ಮುಂದಿನ ಪ್ರಮಾಣಗಳು ಈ ಸಂದರ್ಭದಲ್ಲಿ ಅನುಸಂಧೇಯಗಳು **"ಪಿತಾಹಮಸ್ಯ ಜಗತಃ"** ಎಂದು ಮೇಲೆ ಉದಾಹರಿಸಿದ ಗೀತಾವಾಕ್ಯವು ಈ ಲೋಕಕ್ಕೆ ಪಿತಾಮಾತಾ ಎಂದು ಹೇಳಿತು. **"ಭೂತಾನಾಂ ಯೋಽವ್ಯಯಃ ಪಿತಾ"** ಎಂಬುದು ಸರ್ವಲೋಕಗಳ ಭೂತಗಳಿಗೂ ಎಂದು ಹೇಳುತ್ತದೆ **"ಚರಾಚರ ಗುರುಂ ಹರಿಮ್"** ಎಂಬುದು ನಾಲ್ಕುವಿಧ ಪ್ರಾಣಿಗಳಿಗೂ ಗುರು ಎಂದು ಬೋಧಿಸುತ್ತದೆ. **"ಮಮಾಪ್ಯಖಿಲ ಲೋಕಾನಾಂ ಗುರುರ್ನಾರಾಯಣೋ ಗುರುಃ"** (ವಿ. ಪು. ೫-೧-೧೪) ಇದು ಭೂಮಿಯ ವಾಕ್ಯವು. ಇದರ ಪೂರ್ವಾರ್ಧವು **"ಅಗ್ನಿಸ್ಸುವರ್ಣಸ್ಯಗುರುಃ ಗವಾಂ ಸೂರ್ಯಪರೋ ಗುರುಃ" "ಅಗ್ನೇರಪತ್ಯಂ ಪ್ರಥಮಂ ಸುವರ್ಣಂ ಭೂರ್ವೈಷ್ಣವೀ ಸೂರ್ಯಸುತಾಶ್ಚಗಾವಃ"** ಎಂಬ ಸ್ಮೃತಿಯ ಉಪಪಾದನವು ಇದು. ಅಗ್ನಿಯು ಸುವರ್ಣದ ಮಲಗಳನ್ನೆಲ್ಲಾ ಹೋಗಲಾಡಿಸಿ ಸುವರ್ಣತ್ವವನ್ನುಂಟುಮಾಡುವುದರಿಂದ ಸುವರ್ಣಕ್ಕೆ ಅಗ್ನಿಯು ಗುರುವು. ಆಕಳ ಜಾತಿಗೆ, ಸೂರ್ಯನು ಮಳೆಯನ್ನುಂಟುಮಾಡಿ ಹಸುರು ಹುಲ್ಲು ಮೊದಲಾವುಗಳನ್ನು ಕೊಟ್ಟು ಪುಷ್ಟೀಕರಿಸುವುದರಿಂದ ಗುರುವು. ಅದರ ಹಾಗೆಯೇ ಭೂಮಿಯಾದ ನನಗೆ ಕೂಡ ಶ್ರೀಮನ್ನಾರಾಯಣನೇ ಗುರುವು ; ಏಕೆಂದರೆ ಶ್ರೀಮನ್ನಾರಾಯಣನೇ ಅಖಿಲ ಲೋಕದವರಿಗೂ ಸಾಧುಪರಿತ್ರಾಣನಾಗಿ, ಅದಕ್ಕಾಗಿ ದುಷ್ಟರನ್ನು ನಾಶಮಾಡಿ ಭೂಭಾರವನ್ನು ಕಳೆದು ಧರ್ಮಸಂಸ್ಥಾಪನೆಯನ್ನು ಮಾಡಿ ಮನಸ್ಸಿನ ಮಲಗಳನ್ನೆಲ್ಲಾ ಹೋಗಲಾಡಿಸುವುದರಿಂದ ಗುರುವು ಎಂಬರ್ಥವು. **"ತಮಿಮಂ ಸರ್ವ ಸಂಪನ್ನಮಾಚಾರ್ಯಂ ಪಿತರಂ ಗುರುಮ್ । ಅರ್ಚ್ಯಮರ್ಚಿತು ಮಿಚ್ಛಾಮ ಸ್ಸರ್ವೇಸಂಮಂತುಮರ್ಹಥಃ"** ಇದು ಸಭಾ ಪರ್ವದಲ್ಲಿ ಬರುವ ಭೀಷ್ಮೋಕ್ತಿಯು. ಅಗ್ರಪೂಜೆಗೆ ಅನೇಕ ಜ್ಞಾನವೃದ್ಧರಾಗಿರುವವರಿದ್ದರೂ ಕೂಡ ಶ್ರೀಕೃಷ್ಣನೇ ಅರ್ಹನೇ ವಿನಾ ಇತರರಲ್ಲವೆಂದು ಹೇಳುವ ಪ್ರಕರಣವು. **ತಂ** ಅಂತಹ ಪ್ರಸಿದ್ಧನಾದ, **ಇಮಂ**- ಈ, ನಮಗೆ ಹಿತೈಷಿಯೂ, ಬಂಧುವೂ ಆದ, **ಸರ್ವಸಂಪನ್ನಂ** ಆತ್ಮಗುಣಗಳೇನು, ರೂಪ ಗುಣಗಳೇನು, ಸಮಸ್ತ ವಿಭೂತಿಮತ್ವವೇನು, ಹೀಗೆ ಸರ್ವಸಮೃದ್ಧಿಯಿಂದ ಕೂಡಿರುವ **ಆಚಾರ್ಯಂ**- ಶಾಸ್ತ್ರಾನುಗುಣವಾಗಿಯೂ, ಸಂಪ್ರದಾಯಾನುಸಾರವಾಗಿಯೂ ನಡೆಯುವ, **ಪಿತರಂ**-ಲೋಕಕ್ಕೆ ಮೂಲಕಾರಣನಾಗಿಯೂ ಹಿತಪ್ರವರ್ತಕನಾಗಿಯೂ ಇರುವ **ಗುರುಮ್**- ಲೋಕದ ಅಜ್ಞಾನಾಂಧಕಾರವನ್ನು ತನ್ನ ಉಪದೇಶದ ಮೂಲಕ ಹೋಗಲಾಡಿಸುವ, **ಅರ್ಚ್ಯಂ**- ಪೂಜಿಸಲು

ಪರಮಯೋಗ್ಯನಾದ ಶ್ರೀಕೃಷ್ಣನನ್ನು **ಅರ್ಚಿತುಮಿಚ್ಛಾಮಃ**-ಅಗ್ರ ಪೂಜೆಯಿಂದ ಸೇವಿಸಲು ಅಪೇಕ್ಷಿಸುವೆವು. ಎಲ್ಲರೂ ಸಮ್ಮತಿಸಲು ಅರ್ಹರಾಗಿರುವಿರಿ. ಎಂಬರ್ಥವು. ಇದಕ್ಕೆ ಯಾರಾದರೂ ವಿರೋಧವನ್ನು ಮಾಡಿದರೆ ಅವರ ತಲೆಯಮೇಲೆ ತನ್ನ ಪಾದವೆಂದು ಸಹದೇವನು ಹೇಳುವನು. ಇದಕ್ಕೆ ಶಿಶುಪಾಲನು ತುಂಬಾ ಕುಪಿತನಾಗಲು, ಶ್ರೀಭೀಷ್ಮರು ಶ್ರೀಕೃಷ್ಣಮಹಾತ್ಮ್ಯೆಯನ್ನು ಹೇಳಲಾರಂಭಿಸುವರು. ಈ ಪ್ರಮಾಣಗಳಲ್ಲಿ **ಅಖಿಲ ಲೋಕಾನಾಂ** ಎಂಬ ಪ್ರಯೋಗದಿಂದ ಸರ್ವಲೋಕಗಳಿಗೂ ಗುರುವೆಂಬುದು ವ್ಯಕ್ತವು ಹಾಗೆಯೇ ಗೀತೆಯಲ್ಲಿ ಅರ್ಜುನೋಕ್ತಿಯೂ **"ಪಿತಾಸಿಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚಗುರುರ್ಗರೀಯಾನ್"** (ಗೀ ೧೧-೪೩) ಎಂದು ಇರುವುದರಿಂದ ಸರ್ವಲೋಕದಲ್ಲಿರುವ ದೇವದಾನವಾದಿಗಳಿಗೂ ಕೂಡ ಗುರುವೆಂದು ಹೇಳಲ್ಪಟ್ಟಿತು. ದಾಸನು ಬರೆದಿರುವ ಗೀತಾ ವ್ಯಾಖ್ಯಾನವನ್ನು ನೋಡಿ. ತ್ವಂತ್ವಂ ಎಂದು ಅನೇಕಾವರ್ತಿ ಹೇಳಿದುದು **ವಾಸುದೇವಸ್ಸರಂ** ಎಂಬುದನ್ನು ಸೂಚಿಸುತ್ತದೆ.

ಉತ್ತರಾರ್ಧದಿಂದ **ತವೈವಾಸ್ಮಿಹಿಭರಃ** ಎಂದು ಹೇಳಲು ತನ್ನ ಮೂಲಕನಾಗಿ ಉಂಟಾದ ಸಂಬಂಧಗಳಿಂದ ತಾನು ರಕ್ಷ್ಯ ವಸ್ತುವೆಂದು ಹೇಳುತ್ತಾರೆ.

**ತ್ವದೀಯಃ**— ನಿನ್ನವನು ನಾನು, ಆದುದರಿಂದ ರಕ್ಷ್ಯನು, ಏಕೆಂದರೆ **"ಸಕೃದೇವ ಪ್ರಸನ್ನಾಯ ತವಾಸ್ಮೀತಿಚತೇ । ಅಭಯಂ ಸರ್ವ ಭೂತೇಭ್ಯೋ ದದಾಮ್ಯೇತದ್ವ್ರತಂ ಮಮ"** ನಿನ್ನವನೆಂದು ಹೇಳಿ ನಿನ್ನನ್ನು ಒಂದು ಸಲ ಆಶ್ರಯಿಸಿ ಬಿಟ್ಟರೆ ಆತನಿಗೆ ಪುನರ್ಜನ್ಮದ ಭಯವಿಲ್ಲದಹಾಗೆ ಮಾಡುವುದೇ ನನ್ನ ವ್ರತವೆಂದು ಹೇಳಿಕೊಂಡಿರುತ್ತೀಯೆ. **ತ್ವದ್ಭೃತ್ಯಃ**- ನಿನಗೆ ಶೇಷಭೂತನೆಂಬ ಜ್ಞಾನವುಳ್ಳವನಾದುದರಿಂದ ನಿನ್ನ ಸೇವಕನು. ಆದುದರಿಂದ ನಿನ್ನಿಂದಲೇ ಧರಿಸಲ್ಪಡಲು ಯೋಗ್ಯನು, ಪೋಷಿಸಲ್ಪಡಲೂ ಯೋಗ್ಯನು. ನನ್ನ ಹಿತವನ್ನು ನೀನೇ ಅರಿತು ನಿನ್ನ ಇಷ್ಟಬಂದಂತೆ ವಿನಿಯೋಗಿಸಿಕೊಳ್ಳಲು ಅರ್ಹನಾದವನು. **ತವಪರಿಜನಃ**- ಸ್ವರೂಪತಃ ನಿನಗೆ ಯಾವಾಗಲೂ ಕೈಂಕರ್ಯಮಾಡುವುದೇ ನನಗೆ ಸ್ವರೂಪವು. ಆದುದರಿಂದ ನಿನ್ನ ಈ ಸ್ತುತಿರೂಪ ಕೈಂಕರ್ಯದಲ್ಲಿ ನಿನ್ನಿಂದಲೇ ನಿಯುಕ್ತನಾಗಿರುವನೆಂಬ ಭಾವವು.

ಬರೀ ಇಷ್ಟೇ ಅಲ್ಲವು ; **ಪ್ರಪನ್ನಶ್ಚ**— **"ನನ್ನನ್ನು ಶರಣಹೊಂದು ಸರ್ವ ಪಾಪಗಳಿಂದಲೂ ಬಿಡಿಸುವೆನು"** ಎಂಬ ನಿನ್ನ ಅಮೋಘೋಕ್ತಿಯನ್ನನುಸರಿಸಿ **"ಅಕಿಂಚನೋನನ್ಯಗತಿಃ ಶರಣ್ಯ ! ತ್ವತ್ಪಾದಮೂಲಂ ಶರಣಂ ಪ್ರಪದ್ಯೇ"** ಎಂದು ನಿನ್ನ ಪಾದಮೂಲದಲ್ಲಿ ಉಪಾಯಾನುಷ್ಠಾನವನ್ನು ಮಾಡಿದವನು, ಇವರಿಂದ **"ಸೋಹಂತ್ವಾಂ ಶರಣಂಮಪಾರಮಪ್ರಮೇಯಂ ಸಂಪ್ರಾಪ್ತಃ ಪರಮಪದಂ ಯತೋ ನಕಿಂಚಿತ್"** ಎಂದರೆ "ಅಂತಹ ನಾನು, ಅನಂತನಾಗಿ, ಇಂತಹ ಮಹಿಮೆಯುಳ್ಳವನೆಂದು ತಿಳಿಯಲು ಅಸಾಧ್ಯನಾದ ನಿನ್ನನ್ನು ಶರಣ

ಹೊಂದಿದೆನು ; ಅಂತಹ ಶರಣಾಗತಿಗಿಂತಲೂ ಶ್ರೇಷ್ಠನಾಗಿ ಹೊಂದಲಸಾಧ್ಯವಾಗಿರುವುದು ಯಾವುದೂ ಇಲ್ಲವೋ ಆಕಾರಣದಿಂದ" ಎಂಬ ಮತ್ತು ಆಹಮಾತ್ಮಾ ನ **ದೇಹೋಸ್ಮಿ ವಿಷ್ಣು ಶೇಷೋಪರಿಗ್ರಹಃ । ತಮೇವ ಶರಣಂ ಪ್ರಾಪ್ತಃ ತತ್ಕೈಙ್ಕರ್ಯ ಚಿಕೀರ್ಷಯಾ** ಎಂದರೆ ನಾನು ಆತ್ಮಾ, ದೇಹವಲ್ಲವು, ಭಗವಂತನಿಗೇ ಶೇಷ ಭೂತನು, ಅನ್ಯದೇವತೆಗಳಿಗಲ್ಲವು **ಅಪರಿಗ್ರಹಃ**—ನನಗೆ ಸೇರಿದುದು ಯಾವುದೂ ಇಲ್ಲವು ಎಲ್ಲಕ್ಕೂ ನೀನೇ ಸ್ವಾಮಿಯು ಅಂತಹ ನಿನ್ನನ್ನೇ, ನಿನಗೆ ಸರ್ವದಾ ಕೈಂಕರ್ಯ ಮಾಡುತ್ತಿರಬೇಕೆಂಬ ಆಶೆಯಿಂದ ಶರಣಹೊಂದಿರುತ್ತೇನೆ. ಎಂದೂ ಹೇಳಿರುವ ಹಾಗೆ **ಪ್ರಪನ್ನಃ**-ಎಂಬುದರಿಂದ ಪ್ರಪನ್ನನಾಗಿರುವ; ಇಂತಹ ಸ್ವನಿಷ್ಠೆಯು ಇಲ್ಲಿ ಬೋಧಿತವು ಭಗವತ್ಪ್ರಪನ್ನನಿಗೆ **"ದೇವರ್ಷಿಭೂತಾತ್ಮನೃಣಾಂ ಪಿತೃಣಾಂ ನ ಕಿಂಕರೋ ನಾಯ ಮೃಣೀಚ ರಾಜನ್ । ಸರ್ವಾತ್ಮನಾಯ ಶ್ಶರಣಂ ಶರಣ್ಯಂ ನಾರಾಯಣಂ ಲೋಕಗುರುಂ ಪ್ರಪನ್ನಃ"** ಓ ರಾಜನೇ! ಯಾವನು ಉಪಾಯವಾಗಿ ಮತ್ತು ರಕ್ಷಕನನ್ನಾಗಿ ಲೋಕಗುರುವಾದ ನಾರಾಯಣನನ್ನು ಸರ್ವಭಾವದಿಂದಲೂ ಹೊಂದುವನೋ ಅಂತಹ ಪ್ರಪನ್ನನು, ದೇವತೆಗಳು, ಋಷಿಗಳು, ತಾನು, ಇತರ ಮನುಷ್ಯರು, ಇವರುಗಳಿಗೆ ಯಾರಿಗೂ ಋಣಿಯಾಗುವುದಿಲ್ಲವು" ಎಂದು ಪ್ರಪನ್ನನಿಗೆ ವೈಲಕ್ಷಣ್ಯವು ಹೇಳಲ್ಪಟ್ಟಿರುತ್ತದೆ.

**ತ್ವದ್ಗತಿಃ** ಎಂದೂ **ಪ್ರಪನ್ನಶ್ಚ** ಎಂದೂ ಎರಡು ವಿಶೇಷಣಗಳಿಂದ, ಅನನ್ಯ ಪ್ರಯೋಜನಭಾವದಿಂದ ಭಗವಂತನನ್ನು ಆಶ್ರಯಿಸಿದವರಿಗೆ ನರಕಾದಿ ನಿವೃತ್ತಿಯು ಸೂಚಿಸಲ್ಪಟ್ಟಿತು. ಹಾಗೆಯೇ ರಹಸ್ಯಾಮ್ನಾಯದಲ್ಲಿ **"ತತ್ಕಿಮು ಮಿಾಯಮ ವಿಷಯಾಗಚ್ಛನ್ತಿ । ಯಮೋವೈತಾ ಯಾತಯತೀತಿ ನಭೋ ಇತ್ಯಾಹ, ನಖಲು ಭಾಗವತಾ ಯಮ ವಿಷಯಂ ಗಚ್ಛನ್ತಿ । ಕಿಂತರ್ಹೀ ಹ್ಯೇಷಾಂ ಕೇಚಿದು ಪಕ್ಲೇಶಾ ಭವನ್ತಿಕಾಣಾಭವನ್ತಿ"** ಎಂದರೆ "ಇವರುಗಳು ಯಮ ಲೋಕವನ್ನು ಹೊಂದುತ್ತಾರೆಯೇ? ಯಮನು ಯಾತನೆಯನ್ನು ಕೊಡುತ್ತಾನೆಯೇ? ಎಂದರೆ ಹಾಗಲ್ಲವು. ಇಲ್ಲಿ ಕೇಳಿರಿ, ಪ್ರಪನ್ನರಾದ ಭಾಗವತರು ಯಮ ಲೋಕಕ್ಕೆ ಎಂದಿಗೂ ಹೋಗುವುದಿಲ್ಲವು. ಹೇಗೆಂದರೆ ಅವರುಗಳು ಅಪರಾಧಗಳನ್ನು ಸಂಪಾದಿಸಿಕೊಂಡರೆ, ಪ್ರಪನ್ನರಾದುದರಿಂದ ಇಲ್ಲೇ ಅಲ್ಪಶಿಕ್ಷೆ ಹೊಂದಿ ಕೆಲವರು ದುಃಖವನ್ನು ಹೊಂದುವರಾಗುವರು ಇನ್ನು ಕೆಲವರು ಕುರುಡರಾಗುವರು." ಎಂದು ಆರಂಭಿಸಿ ಹೇಳಿ **"ತಾನು ಪಕ್ಲೇಶಾ ಸಹೇರನ್"** ಇಂತಹ ದುಃಖಗಳನ್ನು ಪ್ರಪನ್ನರು ಸಹಿಸಿಕೊಳ್ಳತಕ್ಕದ್ದು. ಹಾಗೆಯೇ ವಿಷ್ಣು ಪುರಾಣದಲ್ಲೂ **"ಸ್ವಪುರುಷ ಮಭಿವೀಕ್ಷ್ಯಪಾಶ ಹಸ್ತಂ ವದತಿಯಮಃ ಕಿಲತಸ್ಯ ಕರ್ಣ ಮೂಲೇ । ಪರಿಹರ ಮಧುಸೂದನ ಪ್ರಪನ್ನಾನ್ ಪ್ರಭುರಹಮನ್ಯ ನೃಣಾಂ ನವೈಷ್ಣವಾನಾಂ"** ಯಮನು ತನ್ನ ಭಟರು ಕೈಯ್ಯಲ್ಲಿ ಪಾಶವನ್ನು ಹಿಡಿದು ಬಂದುದನ್ನು ಕಂಡು ಅವರ ಕಿವಿಯಲ್ಲಿ ಗೋಪ್ಯವಾಗಿ ಹೇಳುತ್ತಾನೇ

ನೆಂದರೆ ಮಧು ಸೂದನನಲ್ಲಿ ಶರಣಾಗತಿಯನ್ನನುಷ್ಠಿಸಿದವರಿಗೆ ನಾನು ಸ್ವಾಮಿಯಲ್ಲವು. ಇತರರೀಗ ನನ್ನ ವಶರು, "ವಿಷ್ಣುಭಕ್ತರು ನನಗೆ ವಶರಲ್ಲವು" ಎಂದು ಹೇಳಲ್ಪಟ್ಟಿರುತ್ತದೆ ವಾಮನ ಪುರಾಣದಲ್ಲಿ **"ದೇವಂ ಶಾರ್ಙ್ಗಧರಂ ವಿಷ್ಣುಂ ಯೇ ಪ್ರಪನ್ನಾಃ ಪರಾಯಣಂ। ನತೇಷಾಂ ಯಮಸಾಲೋಕ್ಯಂ ನಚತೇ ನರಕೌಕಸಃ"** ಯಾರು, ಶಾರ್ಙ್ಗವೆಂಬ ಧನುಸ್ಸನ್ನು ಧರಿಸಿರುವ ದೇವನಾದ ವಿಷ್ಣುವನ್ನು **ಪರಾಯಣಮ್**--ಶ್ರೇಷ್ಠನಾದ ಪ್ರಾಪ್ಯ ಪ್ರಾಪಕಗತಿಯನ್ನಾಗಿ **ಪ್ರಪನ್ನಾಃ** ಭಾವಿಸಿ ಶರಣಾಗತಿಯನ್ನು ಅನುಷ್ಠಿಸುವರೋ ಅವರುಗಳಿಗೆ ಯಮ ಲೋಕವನ್ನು ಸೇರಿ ಯಮನೊಂದಿಗಿರಬೇಕಾದುದಿಲ್ಲವು ಅವರುಗಳು ನರಕವಾಸಿಗಳೂ ಆಗುವುದಿಲ್ಲವು. ನಾರಸಿಂಹ ಪುರಾಣದಲ್ಲಿ **ಪುಂಡರೀಕಾಕ್ಷ ದೇವೇಶ ನರಸಿಂಹ ತ್ರಿವಿಕ್ರಮ। ತ್ವಾಮಹಂ ಶರಣಂ ಪ್ರಾಪ್ತ ಇತಿಯಸ್ತಂ ಸಮುದ್ಧರ"** ಎಂದರೆ ಕಮಲನಯನ, ದೇವೇಶ, ನರಸಿಂಹ, ತ್ರಿವಿಕ್ರಮ, ನನ್ನನ್ನು ಉಪಾಯ ವನ್ನಾಗಿಭಾವಿಸಿ ಶರಣಾಗತಿಯನ್ನನುಷ್ಠಿಸುವೆನು ಎಂದು ಯಾರು ಹೇಳುವರೋ ಅವರನ್ನು ಉದ್ಧಾರಮಾಡು. ಇನ್ನೊಂದು ಕಡೆಯಲ್ಲಿ **"ಯಸ್ಮಿನ್ಕಸ್ಮಿನ್ಕುಲೇ ಜಾತಾ ಯತ್ರಕುತ್ರನಿವಾಸಿನಃ। ವಾಸುದೇವರತಾ ನಿತ್ಯಂ ಯಮಲೋಕಂ ನಯಾನ್ತಿತೇ"** ಎಂದರೆ ಯಾವ ಕುಲದಲ್ಲೋ ಹುಟ್ಟಿದವರೇ ಆಗಲಿ, ಯಾವ-ಪ್ರದೇಶದಲ್ಲೋ ವಾಸಿಸುವರೇ ಆಗಲಿ ವಾಸುದೇವನನ್ನು ಆಶ್ರಯಿಸಿ ಆತನಲ್ಲೇ ಯಾವಾಗಲೂ ಸಕ್ತರಾಗಿರುವರೋ ಅವರು ಯಮಲೋಕವನ್ನು ಕುರಿತು ಹೋಗುವುದಿಲ್ಲವೆಂದು ಹೇಳಲ್ಪಟ್ಟಿರುತ್ತದೆ.

**ಏವಂ ಸತಿ** ಎಂಬುದರ ತಾತ್ಪರ್ಯವೇನೆಂದರೆ ನೀನು ಶರಣಾಗತನ ಭರಸ್ವೀಕಾರವನ್ನು ಮಾಡಲು ಅರ್ಹನಾಗಿಯೂ ಕಂಕಣ ಬದ್ಧನಾಗಿಯೂ, ನಾನು ಭರ ಸ್ವೀಕಾರ ಪ್ರಾರ್ಥನೆಯನ್ನು ಮಾಡುವನಾಗಿಯೂ, **ಏವಂಸತಿ** ಹೀಗಿರಲಾಗಿ ಎಂಬ ಭಾವವು.

**ಅಹಮಪಿ**—ನನ್ನಂತವನೂ ಕೂಡ, ಎಂದು ಅಪಿಶಬ್ದ ಸ್ವಾರಸ್ಯದಿಂದ ತೋರುವ ಅರ್ಥವೇನೆಂದರೆ? ಸಮಸ್ತ ದೋಷಗಳಿಗೂ ಆಕರನಾಗಿಯೂ, ಸ್ತೋತ್ರಮಾಡುತ್ತೇನೆಂಬ ಛದ್ಮಸ್ತುತಿಯನ್ನವಲಂಬಿಸಿದವನಾಗಿಯೂ, ಇರುವ ನನ್ನನ್ನೂ ಕೂಡ ಎಂಬ ತಾತ್ಪರ್ಯವು, ಅಥವಾ, ಹಿಂದೆ ಇದ್ದ ಮಹಾತ್ಮರುಗಳಾದ ಅನೇಕರು ನಿನ್ನಲ್ಲಿ ಶರಣಾಗತಿಯನ್ನು ಅನುಷ್ಠಿಸಿ, ಭರಸಮರ್ಪಣೆಮಾಡಿ ಹೇಗೆ ಕೃತಾರ್ಥರಾದರೋ ಹಾಗೆಯೇ ನಾನೂ ಕೂಡ ಎಂದಾಗಲಿ ಅರ್ಥಮಾಡ ಬಹುದು. ನೀನೇ ಅವರುಗಳ ಭರಸಮರ್ಪಣೆಯನ್ನು ಸ್ವೀಕರಿಸಿ ಅವರುಗಳಿಗೆ ಮುಕ್ತಿಯನ್ನು ಕೊಟ್ಟಿರುತ್ತೇನೆಂದು ಭಾಗವತೋತ್ತಮರಾದ ಉದ್ಧವರಿಗೆ ಹೇಳಿರುತ್ತೀಯೆ. **"ಬಹವೋ ಮತ್ಪದಂ ಪ್ರಾಪ್ತಾಃ ತ್ವಾಷ್ಟ್ರ ಕಾಯಾದವಾದಯಃ।**

ವೃಷಪರ್ವಾ ಬಲಿರ್ಬಾಣೋ ಮಯಶ್ಚಾಥ ವಿಭೀಷಣಃ । ಸುಗ್ರೀವೋ ಹನುಮಾನ್ ಋಕ್ಷೋ ಗಜೋಗೃಧ್ರೋ ವಣಿಕ್ಪಥಃ । ವ್ಯಾಧಃ ಕುಬ್ಜಾ ವ್ರಜೇಗೋಪ್ಯೋ ಯಜ್ಞ ಪತ್ನ್ಯಸ್ತಥಾಪರೇ । ತೇನಾಧೀತ ಶ್ರುತಿಗಣಾ ನೋಪಾಸಕ ಮಹತ್ತಮಾಃ ಎಂಬಲ್ಲಿ ಹೇಳಿರುವ ಹಾಗೆ, ಭಾಗವತ ಸಂಶ್ರಯಣ ಮೂಲಕ ಶರಣಾಗತಿಯನ್ನು ಅನುಷ್ಠಿಸಿದವರನ್ನು ಹೇಳಿ ಅವರುಗಳು ಯಜ್ಞದಾನ ತಪಸ್ಸೇ ಮೊದಲಾದ ಕರ್ಮಯೋಗಗಳಲ್ಲಿ ಅಧಿಕಾರ ಮತ್ತು ಶಕ್ತಿ ಇಲ್ಲದವರೆಂದೂ ಹಾಗೆಯೇ ಉಪಾಸನೆ ಮಾಡುವದಕ್ಕು ಅಧಿಕಾರವಿಲ್ಲದವರೆಂದೂ ತಿಳಿಸಿ, ಮುಂದೆ ಉದ್ಧವರಿಗೆ ಉಪದೇಶಿಸಿರುವದೇನೆಂದರೆ ?— "ಮಾಮೇಕಮೇವ ಶರಣಂ ಆತ್ಮಾನಂ ಸರ್ವದೇಹಿನಾಂ । ಯಾಹಿಸರ್ವಾತ್ಮ ಭಾವೇನ ಯಾಸ್ಯಸ್ಯಕುತೋ ಭಯಮ್" ಇದರಿಂದ ನೀನು ಭರನ್ಯ್ವೀಕಾರಮಾಡುವ ಮಹಾನುಭಾವನೆಂದು ಹೇಳಿರುತ್ತಿಯೇ. ತ್ವಮೇವ ಎಂಬುದರಿಂದ ಇಂತಹ ಭರನ್ಯ್ವೀಕಾರವನ್ನು ಮಾಡುವುದರಲ್ಲಿ ನೀನೊಬ್ಬನೇ ಸಮರ್ಥನು, ಇತರರು ಯಾರೂ ಅಲ್ಲವೆಂಬ ಭಾವವೂ, ಹಾಗೆಯೇ ತಾವೂ ಕೂಡ ರಕ್ಷಿಸಿಕೊಳ್ಳಲು ಅಸಮರ್ಥರೆಂಬ ಭಾವವೂ, ಅವಧಾರಣದಿಂದ ತೋರಿಬರುತ್ತದೆ. ಹಿ ಶಬ್ದದಿಂದ ಭರಸಮರ್ಪಣವನ್ನು ಸ್ವೀಕರಿಸುವ ಸಾಮರ್ಥ್ಯದಲ್ಲಿ ಈಷದಪಿ ಸಂದೇಹವಿಲ್ಲವೆಂಬುದು ತೋರಿಬರುತ್ತದೆ. ಈ ಸಂದರ್ಭದಲ್ಲಿ "ಮನೀಷಿಣೋಹಿಂಯೇ ಕೇಚಿದ್ಯತಯೋ ಮೋಕ್ಷಕಾಂಕ್ಷಿಣಃ । ತೇಷಾಂವೈ ಛಿನ್ನತೃಷ್ಣಾನಾಂ ಯೋಗಕ್ಷೇಮವಹೋಹರಿಃ" ಎಂದರೆ "ಪ್ರಾಜ್ಞರಾದ ಯಾವ ಕೆಲವು ಯತಿಗಳು ಮೋಕ್ಷ ಕಾಂಕ್ಷಿಗಳಾಗಿ ಇದ್ದಾರೋ, ಹೀಗೆ ಐಹಿಕ ಭೋಗಗಳನ್ನೆಲ್ಲಾ ತೊರೆದಿರುವ ಅವರುಗಳ ಯೋಗಕ್ಷೇಮವನ್ನು ವಹಿಸುವವನು ಶ್ರೀಹರಿಯು. ಹಿ— ಇದರಲ್ಲಿ ಸಂದೇಹವಿಲ್ಲವು ಎಂಬುದರಿಂದಲೂ ಮತ್ತು "ಸ್ಥಿತೇ ಮನಸಿ ಸುಸ್ವಸ್ಥೇ ಶರೀರೇ ಸತಿ ಯೋ ನರಃ । ಧಾತು ಸಾಮ್ಯೇ ಸ್ಥಿತೇ ಸ್ಮರ್ತಾ ವಿಶ್ವರೂಪಂ ಚ ಮಾ ಮಜಂ। ತತಸ್ತಂ ಮ್ರಿಯಮಾಣಂತು ಕಾಷ್ಠ ಪಾಷಾಣ ಸನ್ನಿಭಮ್। ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂ ಗತಿಮ್" ಇದು ವರಾಹ ಪುರಾಣದ ಅಮೋಘ ವಾಕ್ಯವು. ಮನಸ್ಸು ಶಾಂತತೆಯನ್ನೂ, ಶರೀರವು ಧಾತು ಸಾಮ್ಯವನ್ನೂ ಹೊಂದಿರಲಾಗಿ, ಅಜನಾದ–ಅನಾದಿಯಾದ ಮತ್ತು ವಿಶ್ವರೂಪನಾದ ನನ್ನನ್ನು ಆಶ್ರಯಿಸಿ ಸ್ಮರಿಸುವನೋ, ಅಂತವನು ದೇಹಾವಸಾನಕಾಲದಲ್ಲಿ ಕಾಷ್ಠ ಪಾಷಾಣಗಳ ಹಾಗೆ ಜ್ಞಾನಶೂನ್ಯನಾಗಿದ್ದರೂ, ಅಂತ್ಯಕಾಲದಲ್ಲಿ ಅವನು ನನ್ನನ್ನು ಸ್ಮರಿಸದಿದ್ದರೂ ಕೂಡ, ಅಂತಹ ನನ್ನ ಭಕ್ತನನ್ನು ನಾನು ಸ್ಮರಿಸಿದವನಾಗಿ ಅವನಿಗೆ ಸರ್ವೋತ್ಕೃಷ್ಟವಾದ ಸ್ಥಿತಿಯನ್ನುಂಟುಮಾಡುವೆನು. ಎಂಬೀಭಗವದ್ವಾಕ್ಯದಿಂದ ನಿಸ್ಸಂಶಯತ್ವವು ತೋರಿಬರುತ್ತದೆ. ಅಥವಾ ನನ್ನ ಆ ಭರಸಮರ್ಪಣೆಯನ್ನು ಅಂಗೀಕರಿಸಿದ್ದೇ ಆಯಿತು ಎಂಬುದು ಸಿದ್ಧವೆಂಬ ಭಾವಕ್ಕಾಗಲಿ ಹಿ ಪ್ರಯೋಗವು. ಭರಃ ಎಂಬ ಶಬ್ದದಿಂದ ತೋರಿ

**ಜನಿತ್ವಾಹಂ ವಂಶೇ ಮಹತಿ ಜಗತಿ ಖ್ಯಾತಯಶಸಾಂ**
**ಶುಚೀನಾಂ ಯುಕ್ತಾನಾಂ ಗುಣ ಪುರುಷ ತತ್ತ್ವ ಸ್ಥಿತಿವಿದಾಮ್ ।**
**ನಿಸರ್ಗಾ ದೇವತ್ವಚ್ಚರಣ ಕಮ ಲೈಕಾನ್ತ ಮನಸಾಮ್**
**ಅಧೋಽಧಃ ಪಾಪಾತ್ಮಾ ಶರಣದ ನಿಮಜ್ಜಾಮಿ ತಮಸಿ ।।೬೧।।**

ಬರುವ ಭಾವವೇನೆಂದರೆ "ರಕ್ಷಿತವ್ಯಾಸ್ತ್ವಯಾ ರಾಜನ್ ಗರ್ಭ ಭೂತಾಸ್ತ್ಪೋಧನಾಃ" ಓ ಭಕ್ತರ ಮನಸ್ಸಿಗೆ ಆಹ್ಲಾದಕರನಾದ ರಾಮಚಂದ್ರ ಪ್ರಭುವೇ, ನಿನ್ನ ಉದರದಲ್ಲಿ ರಕ್ಷಿಸಲು ಯೋಗ್ಯರಾದ ಶಿಶುಪ್ರಾಯರಾದ, ತಪಸ್ಸನ್ನೇ ಧನವಾಗಿ ಉಳ್ಳ ನಾವು ನಿನ್ನಿಂದಲೇ, ನಮ್ಮ ವ್ಯಾಪಾರಗಳ್ಯಾವುವನ್ನೂ ಅಪೇಕ್ಷಿಸದೆ ರಕ್ಷಿಸಲ್ಪಡಲು ಯೋಗ್ಯರು. ಶಿಶುಗಳು ಏನನ್ನು ಮಾಡಲು ಯೋಗ್ಯರು ? ಶಿಶುಗಳಿಗೆ ಹೇಗೆ ಯೋಗ್ಯತೆ ಇಲ್ಲವೋ ಹಾಗೆಯೇ ಸ್ವತಃ ನಮ್ಮನ್ನು ರಕ್ಷಿಸಿಕೊಳ್ಳಲು ಯೋಗ್ಯತೆ ಇಲ್ಲವು. ಆದುದರಿಂದ ತವೈವಾಸ್ಮಿಹಿ ಭರಃ ಎಂದು ಹೇಳಿದರು—

**ಅವತಾರಿಕೆಯು**- ಹಿಂದಿನ ಶ್ಲೋಕದಲ್ಲಿ "ಅಹಮಪಿತವೈವಾಸ್ಮಿಹಿ ಭರಃ" ಎಂದು ಭರಸಮರ್ಪಣೆಯನ್ನು ಮಾಡಿ, ಸ್ವೀಕರಿಸು ಎಂದು ಪ್ರಾರ್ಥಿಸಿದರು. ಈಗ ಸ್ವಾಮಿಯು ಹೇಳಬಹುದು ಏನೆಂದರೆ ? ನಾನೇ ಪರಮ ಕೃಪಯಾ ನಿನ್ನನ್ನು ಮಹಾತ್ಮರಾದ ನಾಥಮುನಿಗಳ ವಂಶದಲ್ಲಿ ಹುಟ್ಟುವಹಾಗೆ ಮಾಡಿರುವೆನು, ಅವರು ಸಾಮಾನ್ಯರಲ್ಲವು. ಮಧುರಕವಿಯಾಳ್ವಾರವರ ಕಣ್ಣಿನುಣ್ ಶಿರತ್ತಾಂಬನ್ನು ಹತ್ತು ಸಾವಿರಸಲ ಜಪಿಸಿ ನಮ್ಮಾಳ್ವಾರವರನ್ನು ಧ್ಯಾನಿಸಿ ಅವರ ಕೃಪೆಯಿಂದ ತಿರುವಾಯ್ಮೊಳಿಯನ್ನೆಲ್ಲಾ ಅಧಿಕರಿಸಿದ ಜಗದ್ವಿಖ್ಯಾತವಾದ ಯಶಸ್ಸನ್ನು ಹೊಂದಿದವರು, ತತ್ವತ್ರಯಗಳ ಸ್ವರೂಪ ಸ್ವಭಾವಗಳನ್ನು ಚೆನ್ನಾಗಿ ವಿಮರ್ಶಿಸಿ ತಿಳಿದ ಪ್ರಾಜ್ಞರು. ಆಚಾರನಿಷ್ಠೆ ಜ್ಞಾನನಿಷ್ಠೆಗಳಿಂದ ಶೋಭಿಸುವಂತವರು. ಕರ್ಮಯೋಗ ಜ್ಞಾನಯೋಗಗಳ ಬಲದಿಂದ ಆತ್ಮಾವಲೋಕನ ಸಿದ್ಧಿಯನ್ನು ಹೊಂದಿ ಭಕ್ತಿಯೋಗದ ಮೂಲಕ ದಿವ್ಯ ವೈಕುಂಠವನ್ನು ಸೇರಿದ ಮಹನೀಯರು. ನೀನಾದರೋ ಅಂತವರ ಪೌತ್ರನು. ಅವರ ಶಿಷ್ಯವರ್ಗದಿಂದ ಅಧೀತನು. ಇಂತವನು ಅವರು ಆಚರಿಸಿದ ಗುರೂಪಾಯವನ್ನು ತ್ಯಜಿಸಿ ಈ ಲಘುವಾದ ಭರನ್ಯಾಸವನ್ನು ಅನುಷ್ಠಿಸುವುದು ನ್ಯಾಯವೋ? ಎಂದರೆ ಅಂತಹ ಮಹನೀಯರ ಪೌತ್ರನಾಗಿ ಜನಿಸುವ ಹಾಗೆ ನೀನು ಮಾಡಿದ್ದರೂ, ಅಂತಹ ಆಭಿಜಾತ್ಯ ಬಲವನ್ನೆಲ್ಲಾ ಕಳೆದುಕೊಂಡು ಅಜ್ಞಾನಾಂಧಕಾರದಲ್ಲಿ ಮುಳುಗಿರುವೆನು. ಆದುದರಿಂದ ಓ **ಶರಣದ**-ಅವರವರ ಯೋಗ್ಯತಾನುಸಾರವಾಗಿ ಸಾಧ್ಯೋಪಾಯವನ್ನು ಒದಗಿಸಿಕೊಡುವ ಸಿದ್ಧೋಪಾಯನೇ, **ಈ ತವೈವಾಸ್ಮಿಹಿಭರಃ** ಎಂಬ ಪ್ರಾರ್ಥನೆಯು ಎಂದು ಭರನ್ಯಾಸಾನುಷ್ಠಾನಕ್ಕೆ ಹೇತುವನ್ನು ಸಮರ್ಥಿಸುತ್ತಾರೆ.

ಅಥವಾ ಇನ್ನೊಂದು ವಿಧವಾಗಿಯೂ ಅವತಾರಿಕೆಯನ್ನು ಕೊಡಬಹುದು; ಹೇಗೆಂದರೆ? ಯಾವಾಗ ಇಂತಹ ನಿಷ್ಠೆಗಳುಳ್ಳ ಮತ್ತು ಪರಮ ಯಶಸ್ಸುಳ್ಳವರ ಕುಲದಲ್ಲಿ ಹುಟ್ಟುವಹಾಗೆ ಮಾಡಿದೆಯೋ ಆಗ ನಿನ್ನ ಕೃಪೆಯುಂಟೆಂಬುದು ಸ್ವತಸ್ಸಿದ್ಧವು. ನನ್ನ ಸ್ಥಿತಿಯಾದರೋ ಪರಮ ಶೋಚನೀಯವಾದುದು. ಆದುದರಿಂದ ಮುಂದಕ್ಕೂ ದಯೆಯನ್ನು ತೋರಿಸುವುದಕ್ಕೆ ಅರ್ಹನಾದ ಪಾತ್ರವು. ಆದುದರಿಂದಲೇ ನಿನ್ನಲ್ಲಿ ಈ ಭರಸಮರ್ಪಣೆಯು ಎಂದು ಹೇಳುತ್ತಾರೆ—

**ಅರ್ಥವು**—**ಅಹಂ**—ಈಗ ನಿನ್ನ ಪಾದಕಮಲಗಳಲ್ಲಿ ಭರಸಮರ್ಪಣೆಯನ್ನು ಮಾಡಿದ ನಾನು, **ಜಗತಿ**—ಈ ಲೋಕದಲ್ಲಿ, **ಖ್ಯಾತೆ ಯಶಸಾಂ**—ತುಂಬಾ ಪ್ರಸಿದ್ಧವಾದ ಯಶಸ್ಸುಳ್ಳ, **ಶುಚೀನಾಂ**— ಸಂಪ್ರದಾಯ ರೀತ್ಯಾ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಿಂದ ಮಹಾ ಪರಿಶುದ್ಧಿಮನಸ್ಕರಾದ, **ಯುಕ್ತನಾಂ**— ಕರ್ಮಯೋಗ ಜ್ಞಾನಯೋಗಗಳಿಂದ ಅನುಗ್ರಹೀತವಾದ ಭಕ್ತಿಯೋಗನಿಷ್ಠರಾದ ಅಥವಾ ಸ್ವಾಮಿಯನ್ನು ನಿರಂತರವೂ ಧ್ಯಾನಿಸುತ್ತಾ ಆತನಲ್ಲೇ ಇಟ್ಟಮನಸ್ಸುಳ್ಳ ಪರಮೈಕಾನ್ತಿಗಳಾದ, **ಗುಣಪುರುಷತತ್ತ್ವ ಸ್ಥಿತಿವಿದಾಮ್**— ಗುಣವೆಂದರೆ ತ್ರಿಗುಣಗಳಾದ ಸತ್ತ್ವರಜಸ್ತಮೋಗುಣಗಳುಳ್ಳ ಅಚಿತ್ತೂ, **ಪುರುಷ**— ಚಿತ್ತೂ, ಇವುಗಳಿಗಿರುವ **ಸ್ಥಿತಿವಿದಾಮ್**—ವೈಲಕ್ಷಣ್ಯವನ್ನರಿತ ಪ್ರಾಜ್ಞರಾದ, ನಾಥಮುಹಾಮುನಿಗಳ, **ಮಹತಿ ವಂಶೇ**-ಮಹಾತ್ಮಾದ ವಂಶದಲ್ಲಿ, **ಜನಿತ್ವಾ**- ಹುಟ್ಟಿಯೂ ಕೂಡ **ಹೇಶರಣದೆ**-ಅವರವರುಗಳ ಯೋಗ್ಯತಾನುಸಾರವಾಗಿ ಉಪಾಯವನ್ನು ಏರ್ಪಡಿಸುವ ಶರಣ್ಯನೇ, **ತಮಸಿ**- ಅಜ್ಞಾನಾಂಧಕಾರದಲ್ಲಿ, **ಅಧೋಧಃ**- ಕೆಳಕೆಳಗೆ, **ನಿಮಜ್ಞಾಮಿ**-ಮುಳುಗಿರುತ್ತೇನೆ. ಅಥವಾ **ಅಧೋಧಃ**-ಆ ವಂಶದ ಮಾಹಾತ್ಮ್ಯೆಯಿಂದ ಕೆಳಕೆಳಗೆ, **ತಮಸಿ**-ಅಜ್ಞಾನಾಂಧಕಾರದಲ್ಲಿ, **ನಿಮಜ್ಞಾಮಿ**—ಸಂಪೂರ್ಣವಾಗಿ ಮುಳುಗಿರುವೆನು. ಆದುದರಿಂದಲೇ ನಮ್ಮ ಪಿತಾ ಮಹರನುಷ್ಠಿಸಿದ, ಮಹತ್ತಾದ ಯೋಗವನ್ನು ತ್ಯಜಿಸಿ, ನಿನ್ನಲ್ಲಿ ಭರನ್ಯಾಸವನ್ನು ಅನುಷ್ಠಿಸಿರುವೆನು. ಎಂಬ ಭಾವವು.

**ಉಪಪಾದನೆಯು**—ವಿದುರನೀತಿಯಲ್ಲಿ, ಪುರುಷನಿಗೆ ಐದು ವಿಧವಾದ ಬಲಗಳಲ್ಲಿ ನಾಲ್ಕನೆಯ ಬಲವಾದ ಆಭಿಜಾತ್ಯ ಬಲವು ಶ್ರೇಷ್ಠವಾದುದೆಂದು **"ಯತ್ತ್ವಸ್ಯ ಸಹಜಂ ರಾಜನ್ ಪಿತ್ರ್ಯ ಪೈತಾಮಹಂ ಬಲಮ್। ಅಭಿಜಾತಬಲಂ ನಾಮ ತಚ್ಚತುರ್ಥಂ ಬಲಂ ಸ್ಮೃತಮ್"** ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. ಈ ಬಲವೇನೋ ಸ್ವಾಮಿಯ ಕೃಪೆಯಿಂದ ತಮಗುಂಟು. ಆದರೆ ಅದಕ್ಕೂ ಶ್ರೇಷ್ಠವಾದ **"ಯದ್ಬಲಾನಾಂ ಬಲಂ ಶ್ರೇಷ್ಠಂ ತತ್ಪ್ರಜ್ಞಾ ಬಲಮುಚ್ಯತೇ"** ಎಂಬಲ್ಲಿ ಹೇಳಿರುವ ಪ್ರಜ್ಞಾಬಲ ಮಾತ್ರ ತಮಗಿಲ್ಲವೆಂದು ಹೇಳಿ, ಆಕಾರಣದಿಂದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳಿಗೆ ಅಸಮರ್ಥರೆಂದೂ ಭರನ್ಯಾಸವೇ ಅಜ್ಞಾನಾಂಧಕಾರದಲ್ಲಿ ಮುಳುಗಿರುವವರಿಗೆ ಸಾಧ್ಯೋಪಾಯವೆಂದು ನೀನೇ

ಏರ್ಪಡಿಸಿರುತ್ತೀ ಎಂಬ ಭಾವವನ್ನು ಪ್ರಕಟಿಸುತ್ತಾರೆ. ಪ್ರಜ್ಞಾ ಬಲಕವಿಸ್ಮೃತಮಾದುದರಿಂದಲೇ ನಿಮಜ್ಜಾಮಿತಮಸಿ ಎಂದು ಹೇಳಿಕೊಳ್ಳುತ್ತಾರೆ.

**ಜನಿತ್ವಾಹಂ ವಂಶೇ ಮಹತಿ**—ಎಂದು ಹೇಳಿರುವುದರ ಅಭಿಪ್ರಾಯವೇನೆಂದರೆ ? ಹೀಗೆ ಮಹತ್ತಾದ, ಖ್ಯಾತಿವಂತರಾದ ಪಿತೃಪಿತಾಮಹರ ಕುಲದಲ್ಲಿ ಜನಿಸುವುದು ಭಗವಂತನ ಪರಮಕೃಪಯಾ ಲಭಿಸತಕ್ಕದ್ದಾದುದರಿಂದ ಗೀತೆಯಲ್ಲಿ **ದುರ್ಲಭತರ** ವೆಂದು ಏತದ್ಧಿ **ದುರ್ಲಭತರಂ ಲೋಕೇಜನ್ಮಯದೀದೃಶಂ**" ಎಂಬಲ್ಲಿ ಹೇಳಲ್ಪಟ್ಟಿರುತ್ತದೆ. **ಜನಿತ್ವಾ** ಎಂಬಲ್ಲಿ **ಜನಿತ್ವಾಪಿ** ಎಂದು ಇಟ್ಟುಕೊಳ್ಳಬೇಕು. ಹೀಗೆ ಸತ್ಕುಲ ಪ್ರಸೂತರಿಗೆ ಅವರ ಶಿಷ್ಯವರ್ಗದ ಮೂಲಕ ಜ್ಞಾನಪ್ರಾಪ್ತಿಗೆ ವಿಶೇಷಾನುಕೂಲವುಂಟು. ಹಾಗಿದ್ದರೂ ಕೂಡ ಅಂತಹ ಸನ್ನಿವೇಶವನ್ನು ಕಳೆದುಕೊಂಡೆನೇ ಎಂಬ ಪರಿತಾಪದಿಂದ ಹೇಳುವ ಶ್ಲೋಕವಾಗಿರುತ್ತದೆ. ನಾಥಮುನಿಗಳು "**ನಾಥೋಪಜ್ಞಂ ಪ್ರವೃತ್ತಂ**" ಎಂಬಲ್ಲಿ ಹೇಳಿರುವ ಹಾಗೆ ನಮ್ಮ ಸಿದ್ಧಾನ್ತಕ್ಕೆ ಸ್ಥಿರವಾದ ತಳಹದಿಯನ್ನು ಸ್ಥಾಪಿಸಿದ ಪ್ರಸಿದ್ಧರು. ಇವರ ಮಕ್ಕಳಾದ ಈಶ್ವರ ಭಟ್ಟಾಳ್ವಾನ್ ಎಂಬುವರ ಮಕ್ಕಳೇ ಆಳವಂದಾರ್ರವರು. ಇವರು ಚೋಳದೇಶದ ರಾಜನ ಹತ್ತಿರ ಆಸ್ಥಾನಪಂಡಿತನಾದ **ಅಕ್ಕಿಯಾಳ್ವಾನ್** ಎಂಬ ಶೈವ ಪಂಡಿತನನ್ನು ಗೆದ್ದು, ರಾಜನಿಂದ ಅರ್ಧ ರಾಜ್ಯಾಡಳಿತವನ್ನು ಹೊಂದಿದುದರಿಂದ ನಾಥಮುನಿಗಳ ಶಿಷ್ಯರ ಮೂಲಕ ಜ್ಞಾನೋಪದೇಶವನ್ನು ಹೊಂದಲು ಸಮಯವಿಲ್ಲದೇ ಹೋಯಿತು. ನಾಥಮುನಿಗಳು ಯೋಗರಹಸ್ಯವನ್ನೆಲ್ಲಾ ಚೆನ್ನಾಗಿ ಅರಿತವರಾಗಿ ಅದರ ಮಹಿಮೆಯಿಂದ ೩೩೦ ವರ್ಷಗಳು ಬದುಕಿದ್ದರೆಂದು ಹೇಳಲ್ಪಟ್ಟಿರುತ್ತದೆ. ಇವರಿಗೆ ಇಬ್ಬರು ಮುಖ್ಯ ಶಿಷ್ಯರು. ಉಯ್ಯಕ್ಕೊಂಡಾರ್, ಕುರುಹೈಕ್ಕಾವಲಪ್ಪನ್ ಎಂಬುದಾಗಿ. ನಾಥಮುನಿಗಳು ದೇಹಾವಸಾನ ಕಾಲದಲ್ಲಿ ಇವರಿಬ್ಬರನ್ನೂ ಕರೆದು ಉಯ್ಯಕ್ಕೊಂಡಾರ್ರಿಗೆ, ತಮ್ಮ ಪೌತ್ರರಿಗೆ, ಮಂತ್ರ, ಮಂತ್ರಾರ್ಥ ರಹಸ್ಯಗಳನ್ನು ಉಪದೇಶಿಸತಕ್ಕದ್ದೆಂದೂ ಕುರುಹೈಕ್ಕಾವಲಪ್ಪನ್‌ರವರನ್ನು ಕರೆದು ತಮ್ಮ ಪೌತ್ರರಿಗೆ ಯೋಗರಹಸ್ಯವನ್ನು ಉಪದೇಶಿಸತಕ್ಕದ್ದೆಂದೂ ಆಜ್ಞಾಪಿಸಿದರು. ಶ್ರೀ ಆಳವಂದಾರ್ರವರು ರಾಜ್ಯಾಡಳಿತದಲ್ಲಿ ಮಗ್ನರಾಗಿದ್ದುದರಿಂದ, ಶ್ರೀನಾಥಮುನಿಗಳ ಆಜ್ಞೆಯನ್ನು ನೆರವೇರಿಸಲು ಅನುಕೂಲವಿಲ್ಲದೇ ಹೋಯಿತು. ಉಯ್ಯಕ್ಕೊಂಡಾರ್ರವರು ಮಾತ್ರ ತಮ್ಮ ಶಿಷ್ಯರಾದ ಮಣಕ್ಕಾಲ್ ನಂಬಿಯನ್ನು ಕುರಿತು ತಾವು ತಮ್ಮ ಗುರುವಿನ ಆಜ್ಞೆಯನ್ನು ನೆರವೇರಿಸಲು ಇಲ್ಲವಾಯಿತು ನೀವಾದರೂ ಆಳವಂದಾರ್ರಿಗೆ ಉಪದೇಶಿಸತಕ್ಕದ್ದು ಎಂದು ನಿಯಮಿಸಿದುದರಿಂದ ತುಂಬಾ ಶ್ರಮಪಟ್ಟು ಇವರಿಗೆ ರಹಸ್ಯೋಪದೇಶಗಳನ್ನು ಮಾಡಿದರು. ಆದರೆ **ಕುರುಹೈಕ್ಕಾವಲಪ್ಪನ್** ರವರು "ತಮಗೆ ಅಂತಿಮದೆಶೆಯು ಬರುವ ಪುಷ್ಯಮಾಸ ಪುಷ್ಯನಕ್ಷತ್ರದಲ್ಲಿ ಪ್ರಾಪ್ತವಾಗುವುದರಿಂದ ಆ ವೇಳೆಗೆ ಮುಂಚಿತವಾಗಿ ಬಂದರೆ ಉಪದೇಶಿಸುವುದಾಗಿ ಹೇಳಿದ್ದರು. ಆದರೆ ಯಾಮುನಮುನಿಗಳು

ಆದನ್ನು ಮರೆತು ಬಿಟ್ಟರು. ಆದುದರಿಂದ ಸತ್ಕುಲಪ್ರಸೂತರಾಗಿದ್ದರೂ ಅಂತಹ ಅನುಕೂಲವನ್ನು ಕಳೆದುಕೊಂಡದ್ದರಿಂದ, **ಅಧೋಧಃ ಪಾಪಾತ್ಮಾ ಶರಣದೆ ನಿಮಜ್ಜಾಮಿ ತಮಸಿ** ಎಂದು ತಮ್ಮನ್ನು ತಾವೇ ನಿಂದಿಸಿಕೊಂಡು ಪರಿತಾಪ ಪಡುವಹಾಗೆ ತೋರುತ್ತದೆ ಇದುದರಿಂದ **ಜನಿತ್ವಾಪಿ** ಎಂದು ಇಟ್ಟುಕೊಳ್ಳಬೇಕು. ನಾಥಮುನಿ, ಯಾಮುನಮುನಿಗಳ ಸಂಗ್ರಹ ಚರಿತ್ರೆಗೆ ದಾಸನು ಬರೆದಿರುವ ಗುರು ಪರಂಪರಾಸಾರದ ೭೫ ರಿಂದ ೯೪ ನೆಯ ಪುಟಗಳನ್ನು ಪರಾಂಬರಿಸಿ.

ಅಹಂ- ಅಂತಹ ಮಹನೀಯರ ವಂಶದಲ್ಲಿ ಅಂತಹ ಅನುಕೂಲತೆಗಳೆನ್ನೆಲ್ಲಾ ದುರುಪಯೋಗ ಪಡಿಸಿದ ನಾನು ಹುಟ್ಟಬಹುದೇ ಎಂಬ ಭಾವವನ್ನು ಈ ಅಸ್ಮಚ್ಛಬ್ದವು ಸೂಚಿಸುತ್ತದೆ. ತಮ್ಮ ನಿರ್ಭಾಗ್ಯತೆಯನ್ನು ಪ್ರಕಟಿಸುವ ನೈಚ್ಯಾನುಸಂಧಾನವು ತೋರಿಬರುತ್ತದೆ. ಮಹಾಪ್ರಾಜ್ಞರಾಗಿ ಅಮೋಘಗಳಾದ **ಎಂಟು** ಗ್ರಂಥಗಳನ್ನು ದಯಪಾಲಿಸಿದ್ದರೂ, ಹಾಗೆ ನೈಚ್ಯಾನುಸಂಧಾನವು. **ವಂಶೇ ಮಹತಿ** ಎಂಬುದರಿಂದ ಯೋಗರಹಸ್ಯವನ್ನೆಲ್ಲಾ ಅರಿತು ಭಕ್ತಿಯೋಗ ನಿಷ್ಠರಾದುದರಿಂದ ಗೀತೆಯಲ್ಲಿ "**ಅಮಾನಿತ್ವ ಮದಂಭಿತ್ವಂ**" ಇತ್ಯಾದಿಯಾಗಿ ಹೇಳಿರುವ ಅಮಾನಿತ್ವಾದಿ ೨೦ ಗುಣಗಳಿಂದ ಶೋಭಿಸುವ ನಾಥಮುನಿಗಳ ಮಹತ್ತಾದ ವಂಶದಲ್ಲಿ ತಮಗೆ ಜನ್ಮವೆಂದು ಹೇಳಿಕ್ಕೊಂಡರು. ಅದು ಪರಮ ಭಾಗವತರ ಕುಲವಾಗಿ "**ಭೂತಲೇಶ್ಲಾಘ್ಯ ಮೇತದ್ಧಿ ಕುಲಂ ವಿಷ್ಣುಪರಿಗ್ರಹಮ್**" ಎಂದರೆ ಈ ಭೂತಲದಲ್ಲಿ ವಿಷ್ಣುವಿನಿಂದ ಅನುಗ್ರಹಿಸಲ್ಪಟ್ಟ ಕುಲವೇ ಬಹು ಶ್ಲಾಘ್ಯವಾದುದುದು. ಎಂದು ಹೇಳಿರುವಹಾಗೆ ಶ್ರೇಷ್ಠತರವಾದುದು. ಇಂತಹ ಶ್ಲಾಘ್ಯತರವಾದ ಕುಲದಲ್ಲಿ ಜನ್ಮವೆತ್ತುವುದು ತುಂಬಾ ಕಷ್ಟತರವೆಂದು ವಾರಾಹ ಪುರಾಣದಲ್ಲಿ ಹೇಳಲ್ಪಟ್ಟಿರುತ್ತದೆ. "**ವರ್ಣಾಶ್ರಮಾಚಾರಪರ ಸ್ಸಪ್ತಜನ್ಮಾನಿ ಯೋ ದ್ವಿಜಃ। ಏಕಾನ್ತ ಸೂರ್ಯಭಕ್ತಸ್ಸ್ಯಾತ್ ಸವಿಪ್ರಸ್ಸಪ್ತ ಜನ್ಮಸು । ತತ್ರಸತ್ಪುಣ್ಯ ಮಾಹಾತ್ಮ್ಯದ್ರುದ್ರ ಭಕ್ತೋಭವಿಷ್ಯತಿ । ತಥೈವಸಪ್ತ ಜನ್ಮಾನಿ ಶಿವಭಕ್ತ ಪರಾಯಣಃ । ಮಹತಾತೇನ ಪುಣ್ಯೇನ ವೈಷ್ಣವತ್ವಂ ಲಭೇತಸಃ । ವಿಷ್ಣು ಭಕ್ತ ಪರಸ್ತದ್ವತ್ ಸಪ್ತ ಜನ್ಮಾನಿ ಮಾನವಃ । ಏಕಾನ್ತ ಭಗವದ್ಯಾಜೀ ವಿಪ್ರೋಭಾಗವತಾನ್ವಯೇ । ತತಸ್ಸಲಭತೇಜನ್ಮ ದೇವೈರತ್ಯಂತ ದುರ್ಲಭಮ್**" ಎಂದರೆ ನಿತ್ಯನೈಮಿತ್ತಿಕಾನುಷ್ಠಾನ ನಿರತನಾದದ್ವಿಜನು ಏಳು ಜನ್ಮಗಳನಂತರ ಸೂರ್ಯಭಕ್ತನಾಗುವನು. ಹಾಗೆ ಸೂರ್ಯಭಕ್ತನಾಗಿ ಏಳು ಜನ್ಮವೆತ್ತಿದವನು ರುದ್ರ ಭಕ್ತನಾಗುವನು. ಅನಂತರ ಏಳು ಜನ್ಮ ಕಳೆದನಂತರ ವಿಷ್ಣು ಭಕ್ತನಾಗುವನು. ಅನಂತರ ಏಳು ಜನ್ಮಕಳೆದ ನಂತರ ದೇವತೆಗಳಿಗೂ ಕೂಡ ದುರ್ಲಭವಾದ ಪರಮ ಭಾಗವತರ ವಂಶದಲ್ಲಿ ಏಕಾಂತದಿಂದ ಭಗವಂತನನ್ನು ಆರಾಧಿಸುವಂತಹ ದುರ್ಲಭವಾದ ಜನ್ಮವನ್ನೆತ್ತುವನು ಎಂಬರ್ಥವು.

**ಜಗತಿ ಖ್ಯಾತೆ ಯಶಸಾಂ**—ತುಂಬಾ ಹಣಕಾಸು ಕ್ಷೇತ್ರಗಳುಳ್ಳವನೆಂಬ ಖ್ಯಾತಿಯು ಇಲ್ಲಿ ಹೇಳಲ್ಪಡಲಿಲ್ಲವು. ಸದಾಚಾರನಿಷ್ಠೆ ಮತ್ತು ಜ್ಞಾನನಿಷ್ಠೆ ಇವುಗಳಿಂದ ಶೋಭಿಸುವ ಬ್ರಹ್ಮವಿದ್ಯಾ ನಿಷ್ಠರು. ಎಂಬ ಪ್ರಖ್ಯಾತ ಯಶಸ್ಸುಳ್ಳವರು ಮತ್ತು ವೇದಾಧ್ಯಯನ ಮಾಡಿ ವೇದಾರ್ಥವಿತ್ತುಗಳೆಂಬ ಯಶಸ್ಸುಳ್ಳವರು.

**ಶುಚೀನಾಂ**-**"ಯೋಽರ್ಥೇ ಶುಚಿಸ್ಸಹಿಂಶುಚಿರ್ನಮೃದ್ವಾರಿಶುಚಿ ಶ್ಶುಚಿಃ"** ಎಂಬಲ್ಲಿ ಹೇಳಿರುವಂತೆ ಯಾವನು ಧರ್ಮದಿಂದ ಗಳಿಸಿದ ಧನದಲ್ಲಿ ಪರಿಶುದ್ಧನಾಗಿರುವನೋ ಅವನೀಗ ಶುಚಿಯು ; ಬರೀ ಮೃತ್ತಿಕಾಶೌಚ ಮೃತ್ತಿಕಾ ಸ್ನಾನ ಮೊದಲಾದವುಗಳಿಂದ ಶುಚಿಯು ಶುಚಿಯಲ್ಲವು. ಆಹಾರದಲ್ಲೂ ಮತ್ತು ಮನೋವಾಕ್ಕಾಯಗಳ ಪ್ರವೃತ್ತಿಗಳಲ್ಲೂ ಯಾವನು ಸಾತ್ವಿಕನಾಗಿರುವನೋ ಅವನೇ ಶುಚಿಯು. ಮತ್ತು ಯಾವನು ನಿತ್ಯನೈಮಿತ್ತಿಕ ರೂಪವಾದ ಆಜ್ಞಾ ಕೈಂಕರ್ಯಗಳನ್ನು ನೆರವೇರಿಸಿ ಪಾಪಗಳನ್ನು ಪರಿಹರಿಸಿಕೊಳ್ಳುತ್ತಾನೋ ಅವನು ಶುಚಿಯು ಎಂದು ಭಾವಿಸತಕ್ಕದ್ದು. ಹೀಗೆ ತನ್ನ ಪಿತಾಮುಹಾದಿಗಳು ಮಹಾ ಪರಿಶುದ್ಧರೆಂಬ ಭಾವವು. ಇದರಿಂದ ಇತರ, ಐಹಿಕ ಪ್ರಯೋಜನ. ಅಸುರ ಸ್ವಭಾವರಸಂಗ, ಇವೇ ಮೊದಲಾದ ಅಶುದ್ಧಿಗಳಿಂದ ದೂರವಾದವರೆಂಬುದೂ ಸೂಚಿತವು.

**ಯುಕ್ತಾನಾಂ**-ಎಂಬುವರಿಂದ ಕರ್ಮಯೋಗ ಜ್ಞಾನಯೋಗಗಳ ಮೂಲಕ ಆತ್ಮಾವಲೋಕನ ಸಿದ್ಧಿಯನ್ನು ಹೊಂದಿ ಭಕ್ತಿಯೋಗ ನಿಷ್ಠರಾದವರು. ಅಥವಾ ನಿನ್ನಲ್ಲೇ ಮನಸ್ಸನ್ನಿಟ್ಟು ನಿನ್ನೊಂದಿಗೆ ನಿತ್ಯ ಯೋಗವನ್ನಪೇಕ್ಷಿಸುವರು. ಅಥವಾ ಸತತವಾಗಿ ನಿನ್ನ ಧ್ಯಾನಿಸುವುದರಿಂದ ನಿನ್ನನ್ನೇ ಯಾವಾಗಲೂ ಸಾಕ್ಷಾತ್ಕಾರ ಮೂಲಕ ಅನುಭವಿಸುತ್ತಿರುವವರು ಎಂದು ಹೇಳಲ್ಪಟ್ಟಿತು. **"ತಮೇವಂ ವಿದ್ವಾನ್ ಅಮೃತ ಇಹಭವತಿ"** ಎಂಬಲ್ಲಿ ಹೇಳಿರುವಹಾಗೆ ಪರಿಪೂರ್ಣಕಾಮರಾಗಿ ಅನುಭವಿಸುವರು. **ಗುಣಪುರುಷ ತತ್ವ ಸ್ಥಿತಿವಿದಾಂ**—ಇಲ್ಲಿ ಗುಣವೆಂದರೆ ಸತ್ವರಜಸ್ತಮೋಗುಣಗಳುಳ್ಳ ತ್ರಿಗುಣವು ಪ್ರಕೃತಿಯು ಮತ್ತು ಪುರುಷನೆಂದರೆ ಜೀವಾತ್ಮರುಗಳು, ಇವರುಗಳ ಯಾಥಾತ್ಮ್ಯ ಸ್ಥಿತಿಯನ್ನು ಬಲ್ಲವರು, ತಮ್ಮ ಪಿತಾಮುಹರೇ ಮೊದಲಾದವರು. ಇದರಿಂದ ಅವರು ದೇಹಾತ್ಮಭ್ರಾಂತಿಇಲ್ಲದವರೆಂದು ಹೇಳಿದಂತಾಯಿತು. ಶ್ರೀನಿಗಮಾಂತ ದೇಶಿಕರವರು—**"ಪ್ರಕೃತ್ಯಾತ್ಮ ಭ್ರಾನ್ತಿರ್ಗಳತಿ ಚಿದಚಿಲ್ಲಕ್ಷಣಧಿಯಾ"** ಎಂದು ಚಿತ್ ಮತ್ತು ಅಚಿತ್ತುಗಳ ಯಥಾರ್ಥವಾದ ಸ್ಥಿತಿಯು ತಿಳಿದರೆ ದೇಹವೇ ಆತ್ಮಾ ಎಂಬ ಭ್ರಾನ್ತಿಯು ತೊಲಗುತ್ತದೆಂದು ತಿಳಿಸಿರುತ್ತಾರೆ. ಅಥವಾ, ಪ್ರಕೃತಿಯು ಅಚಿತ್ತು, ಸ್ವರೂಪ ಸ್ವಭಾವಗಳೆರಡರಲ್ಲಿಯೂ ವಿಕಾರ ಹೊಂದುವಂತಾದ್ದು, ಜಡವಾದುದು ಆದುದರಿಂದ ಪರಾಕ್ತ್ವ ಮಾತ್ರವೇ ಉಳ್ಳದ್ದು. ಪುರುಷನು ಸ್ವರೂಪದಲ್ಲಿ ವಿಕಾರವಿಲ್ಲದೆ ಸ್ವಭಾವದಲ್ಲಿ ಮಾತ್ರ ವಿಕಾರ ಹೊಂದುವನು. ಜ್ಞಾನ ಸ್ವರೂಪನು, ಜ್ಞಾನ ಸ್ವಭಾವನು, ಹೀಗೆ ಎರಡಕ್ಕೂ

ವೈಲಕ್ಷಣ್ಯವೆಂದು ಅವುಗಳ ಯಾಥಾತ್ಮ್ಯಸ್ಥಿತಿಯ ಜ್ಞಾನವುಳ್ಳವರು. ಇನ್ನೂ ಎಂತವರು, ತಮ್ಮ ಕುಲಕ್ಕೆ ಸೇರಿದವರು? ಎಂಬಲ್ಲಿ **ನಿಸರ್ಗಾದೇವ ತ್ವಚ್ಚರಣ ಕಮಲೈಕಾಂತ ಮನಸ್ಕರು**-ನಿನ್ನ ಪಾದಕಮಲದಲ್ಲೇ ಏಕಾಂತವಾದ ಮನಸ್ಸನ್ನುಳ್ಳವರು. ಅದು ಉಂಟಾದುದು **ನಿಸರ್ಗಾದೇವ** ಸ್ವಾಭಾವಿಕವಾಗಿಯೇ ಉಂಟಾದುದು. ಎಲ್ಲರೂ ಸುಕೃತಪರಿಪಾಕದ ಮೂಲಕ ಭಗವದನುಗ್ರಹವನ್ನು ಸಂಪಾದಿಸಿದವ ರಾದುದರಿಂದ, ನಿನ್ನ ಪಾದಾರವಿಂದದಲ್ಲೇ ಸಕ್ತವಾದ ಮನಸ್ಸುಳ್ಳವರು. ಅಥವಾ ಮಹಾಪ್ರಾಜ್ಞರಾಗಿ "**ದಾಸಭೂತಾಸ್ಸ್ವತಸ್ಸರ್ವೇಹ್ಯಾತ್ಮಾನಃ ಪರಮಾತ್ಮನಃ**" ಎಂಬ ಪ್ರಮಾಣ ರೀತ್ಯಾ ನಿನಗೆ ದಾಸರಾಗಿರುವಿಕೆಯು ನಮಗೆ ಸ್ವಾಭಾವಿಕವಾದು ದೆಂಬ ಜ್ಞಾನವುಳ್ಳವರು. ಇಲ್ಲಿರುವ ಅವಧಾರಣದಿಂದ ಸತ್ಕುಲಪ್ರಸೂತತ್ವದ ಮಾಹಾತ್ಮ್ಯೆಯಿಂದ ಸ್ವಾಭಾವಿಕವಾಗಿ ಪ್ರಾಪ್ತವಾದುದೇವಿನಾ' ಈ ಮೇಲೆ ಹೇಳಿದ ಜ್ಞಾನವು ಕಷ್ಟವಾದ ಉಪದೇಶಾದಿಗಳಿಂದ ಸಂಪಾದಿಸಿದುದಲ್ಲವೆಂಬ ಭಾವವು ತೋರಿಬರುತ್ತದೆ ಇಂತಹ ಸಂಸ್ಕಾರ ಮಾಹಾತ್ಮ್ಯೆಯು ತಮ್ಮ ಕುಲದವರೆಲ್ಲರಿಗೂ ಸಹಜವಾಗಿದ್ದರೂ ತಮ್ಮೊಬ್ಬರಿಗೆ ಮಾತ್ರ ಇಲ್ಲದೇ ಹೋದುದರಿಂದ ತಾವು **ಪಾಪಾತ್ಮಾ** ಎಂದು ನಿಂದಿಸಿಕೊಳ್ಳುತ್ತಾರೆ.

ಇಲ್ಲಿ **ಯುಕ್ತಾನಾಂ, ಗುಣಪುರುಷ ತತ್ವೆ ಸ್ಥಿತಿವಿದಾಂ, ತ್ವಚ್ಚರಣಕ ಮಲೈಕಾಂತ ಮನಸಾಂ** ಎಂಬ ಮೂರು ಪ್ರಯೋಗಗಳಿಂದ ಕರ್ಮಯೋಗವನ್ನು ಪ್ರಕೃತಿ ಪುರುಷ ವೈಲಕ್ಷಣ್ಯ ಜ್ಞಾನದಿಂದ ಅನುಷ್ಠಿಸಿ ಅದರಿಂದಲಾದರೂ ಅಥವಾ ಜ್ಞಾನಯೋಗದಿಂದಲಾದರೂ ಆತ್ಮಾವಲೋಕವನ್ನು ಹೊಂದಿ ಅನಂತರ ಭಕ್ತಿಯೋಗವನ್ನವಲಂಬಿಸಿ ಪರಮ ಪುರುಷನನ್ನೇ ಏಕಾಂತಭಕ್ತಿಯಿಂದ ಉಪಾಸಿಸುವರೆಂಬ ಭಾವವು ವ್ಯಕ್ತಪಡುತ್ತದೆ. ಶ್ರೀ ನಾಥಮುನಿಗಳು ಬ್ರಹ್ಮವಿದ ಗ್ರೇಸರರಾಗಿ ಭಕ್ತಿಯೋಗವನ್ನೇ ಉಪಾಯವನ್ನಾಗಿ ಅವಲಂಬಿಸಿದವ ವರೆಂಬುದೂ ಇದರಿಂದ ವ್ಯಕ್ತವು. ಈ ಷಷ್ಠ್ಯಂತ ಪದಗಳೆಲ್ಲಾ ಶ್ರೀನಾಥಮುನಿ ಗಳನ್ನುದ್ದೇಶಿಸಿಯೇ ಹೇಳಲ್ಪಟ್ಟವು. ಇಂತಹ ಮಹನೀಯರ ಕುಲದಲ್ಲಿ ತಾವು ಭಗವದನುಗ್ರಹದಿಂದ ಹುಟ್ಟಿದವರೆಂದು ಹೇಳಿಕೊಂಡರು. ಆದರೂ ತಾವು ಪಾಪಾತ್ಮಾ ಎಂದು ಹೇಳಲು ಕಾರಣವೇನೆಂದರೆ ತಮ್ಮ ಪಿತಾ ಮಹರು ಪರಮಕೃಪೆಯಿಂದ ಕೂಡಿದವರಾಗಿ ತಮಗೆ (ಯಾಮುನ ಮುನಿಗಳಿಗೆ) ಮಂತ್ರ ರಹಸ್ಯವನ್ನೂ ಯೋಗ ರಹಸ್ಯವನ್ನೂ ಉಪದೇಶಿಸಬೇಕೆಂದು ತಮ್ಮ ಶಿಷ್ಯರಿಗೆ ಆಜ್ಞಾಪಿಸಿದ್ದರೂ, ಅವರಿಗೆ ವಶವಾಗದೆ ಅದನ್ನು ಅಧಿಕರಿಸದೇ ಹೋದೆನಲ್ಲಾ ಎಂಬ ಪರಿತಾಪದಿಂದ **"ಅಧೋಽಧಃ ಪಾಪಾತ್ಮಾನಿಮಜ್ಜಾಮಿ ತಮಸಿ"** ಅಜ್ಞಾನಾಂಧಕಾರದಲ್ಲಿ ಮುಳುಗುರುತ್ತೇನೆಂದು ಹೇಳುತ್ತಾರೆ. **ಪಾಪಾತ್ಮಾ** ಎಂದರೆ **ಪಾಪಗಳಲ್ಲೇ**, ಆತ್ಮಾ-ಮನಸ್ಸುಳ್ಳವನೆಂದಾಗಲಿ, ಅಥವಾ ಪಾಪವನ್ನೇ ಸ್ವರೂಪ ಸ್ವಭಾವವಾಗಿ ಉಳ್ಳವನೆಂದಾಗಲಿ ಅರ್ಥ ಹೇಳಬಹುದು. ಮಾನುಷ ಜನ್ಮವು

ಸುಕೃತ ಪರಿಪಾಕದಿಂದ ದೊರೆಯುವಂತಾದ್ದು. **"ದುರ್ಲಭೋ ಮಾನುಷೋ ದೇಹಃ"** ಎಂದೂ **"ಮಾನುಷ್ಯಂ ಪ್ರಾಪ್ಯಲೋಕೇಸ್ಮಿ ನ್ಮೂಕೋಪಿಬಧಿರೋಪಿನಾ । ನಾಪಕ್ರಾಮತಿ ಸಂಸಾರಾತ್ಸಖಲು ಬ್ರಹ್ಮಹಾಭವೇತ್"** ಎಂದರೆ ಮನುಷ್ಯ ಜನ್ಮವನ್ನು ಹೊಂದಿ ಈ ಲೋಕದಲ್ಲಿ, ಮೂಗನಾಗಿರಲಿ, ಕಿವುಡನಾಗಿರಲಿ ಹೇಗೆಯೇ ಇದ್ದರೂ ಈ ಸಂಸಾರದಿಂದ ದಾಟದೇ ಇರುವವನು ತನ್ನನ್ನೇ ನಾಶ ಮಾಡಿಕೊಂಡ ಬ್ರಹ್ಮ ಘಾತುಕನಲ್ಲವೇ? ಎಂದು ಸ್ಮೃತಿಯಲ್ಲೂ, ಸಾತ್ವತ ಪುರಾಣದಲ್ಲಿ **"ಲಬ್ಧ್ವಾತು ಮಾನುಷಂದೇಹಂ ಪಂಚಭೂತ ಸಮನ್ವಿತಮ್ । ಮಾಮೇವ ನ ಪ್ರಪದ್ಯಂತೇ ತತೋ ದುಃಖತರಂ ನು ಕಿಮ್"** ಪೃಥಿವ್ಯಪ್ತೇಜೋ ವಾಯ್ವಾಕಾಶ ರೂಪಪಾಂಚಭೌತಿಕವಾದ ಈ ಮನುಷ್ಯ ದೇಹವನ್ನು ಹೊಂದಿದ್ದರೂ ತನ್ಮೂಲಕ ವಿವೇಕ ಜ್ಞಾನಾದಿಗಳುಂಟಾಗಿದ್ದರೂ ನನ್ನಲ್ಲೇ ಶರಣಾಗತಿಯನ್ನನುಷ್ಠಿಸಿ ಆಶ್ರಯಿಸದೇ ಇದ್ದರೆ ಅದಕ್ಕಿಂತ ದುಃಖಕರವಾದ ವಿಷಯವೇನಿರುತ್ತದೆ. ಅದು ತುಂಬಾ ಶೋಚನೀಯವಾದ ವಿಷಯವೆಂಬ ಭಾವವು ಎಂದೂ, ನಾರಸಿಂಹ ಪುರಾಣದಲ್ಲೂ **"ಶುಭ ಮಿದಮುಪಲಭ್ಯ ಮಾನುಷತ್ವಂ ಸುಕೃತಶತೇನ ವೃಥೇನ್ದ್ರಿಯಾರ್ಥ ಹೇತೋಃ । ರಜಯತಿ ಕುರುತೇ ನ ಮೋಕ್ಷಮಾರ್ಗಂ ಸ ದಹತಿ ಚಂದನ ಮಾಶು ಭಸ್ಮಹೇತೋಃ"** ಎಂದರೆ ಅನೇಕ ಸುಕೃತಗಳಿಂದ, ಮಂಗಳಕರವಾದ ಈ ಮಾನುಷ ಜನ್ಮವನ್ನು ಹೊಂದಿ ವ್ಯರ್ಥವಾಗಿ ಇಂದ್ರಿಯಗಳ ಮೂಲಕ ವಿಷಯೋಪ ಭೋಗಗಳಿಗಾಗಿ ಪ್ರವೃತ್ತಿಗಳುಳ್ಳವನಾಗುತ್ತಾನೆಯೇ ವಿನಾ ಮೋಕ್ಷವನ್ನು ಹೊಂದಲು ಸಾಧನವನ್ನು ಮಾಡಿಕೊಳ್ಳುವುದಿಲ್ಲವು ಅಂತವನು ಭಸ್ಮಕ್ಕಾಗಿ ಚಂದನ ಮರವನ್ನು ಸುಡುವನಂತಾಗುವನು ಎಂದರೆ ಅದರ ಹಾಗೆಯೇ ತನ್ನ ಪರಿಶುದ್ಧನಾದ ಆತ್ಮಾವನ್ನು ಹಾಳು ಮಾಡಿಕ್ಕೊಳ್ಳುವನೆಂಬ ಭಾವವು" ಎಂದೂ ಹೇಳಿರುವ ಹಾಗೆ ಸುಕೃತ ಪರಿಪಾಕದಿಂದುಂಟಾದ ಮಾನುಷ ಜನ್ಮವೇನು, ಆದರಲ್ಲೂ ಮಹಾಭಾಗವತರ ಸರ್ವೋತ್ಕೃಷ್ಟವಾದ ಕುಲಸಂಬಂಧವೇನು, ಇಂತಹ ಅನುಕೂಲಗಳನ್ನು ಸರಿಯಾಗಿ ಉಪಯೋಗಿಸಿಕ್ಕೊಳ್ಳಲಿಲ್ಲವೇ ಎಂಬ ಪರಿತಾಪದಿಂದ "ಅಧೋಧಃ ಪಾಪಾತ್ಮಾ" ಎಂದು ಹೇಳಿಕ್ಕೊಂಡರು. ಆದರೂ ತುಂಬಾ ಅನರ್ಥಕ್ಕೆ ಕಾರಣವಿಲ್ಲವೆಂದು ಧೈರ್ಯ ವಿಶ್ವಾಸಾದಿಗಳನ್ನು ಹೊಂದಿ ನೀನೇ ಸಿದ್ಧೋಪಾಯನಲ್ಲವೇ? ನೀನೇ ಮಾರ್ಗದರ್ಶಿಯಲ್ಲವೇ? ಎಂದು ಶರಣದ ನನ್ನ ಅಧಿಕಾರಾನುಗುಣವಾಗಿ ನೀನೇ ಸಾಧ್ಯೋಪಾಯವನ್ನು ದಯಪಾಲಿಸು ಎಂಬ ಭಾವನೆಯಿಂದ ಸಂಬೋಧನೆಯು. ಅಥವಾ ನನ್ನ ಸ್ವಭಾವವು ಅಸತ್ಕಲ್ಪವಾಗಿದ್ದರೂ ಮಹಾ ಯೋಗಿಯಾದ ನಾಥಮುನಿವಂಶದಲ್ಲಿ ನನ್ನ ಜನ್ಮವನ್ನು ಸಾರ್ಥಕ್ಯವನ್ನು ಹೊಂದಿಸುವುದು ಕರುಣಾಕರನಾದ ನಿನಗೆ ಪ್ರಸ್ತುತ ವಿಷಯವಾದುದರಿಂದ ನನ್ನ ಶಿಕ್ಷಣವನ್ನು ವ್ಯಾಜ ಮಾಡಿಕೊಂಡು ಅಂಗೀಕರಿಸಿ ನನ್ನ ಉಪಾಯಾನುಷ್ಠಾನದ ಪೂರ್ತಿಯನ್ನು

ಮಾಡು ಎಂಬ ಅಭಿಪ್ರಾಯದಿಂದಲಾಗಲಿ **ಶರಣದೆ** ಎಂಬ ಸಂಬೋಧನೆಯು. ಮುಖ್ಯವಾಗಿ ಉಪಾಯಮಾರ್ಗವನ್ನು ತೋರಿಸಿಕೊಡುವ **"ಕೃಷ್ಣಂಧರ್ಮಂ ಸನಾತನಮ್"** ಎಂಬಲ್ಲಿ ಹೇಳಿರುವ ಹಾಗೆ ಸಿದ್ಧೋಪಾಯನು ನೀನೇ ಎಂಬ ಭಾವದಿಂದ ಶರಣದೆ ಎಂದು ಸಂಬೋಧಿಸಿರುತ್ತಾರೆ.

ತಮಸಿ ಅಧೋಧಃ ನಿಮಜ್ಜಾಮಿ ಎಂಬುದಾಗಿ ಅನ್ವಯವು. **ತಮಃ** ಶಬ್ದದಿಂದ, ಅಜ್ಞಾನ, ಅನ್ಯಥಾಜ್ಞಾನ, ವಿಪರೀತ ಜ್ಞಾನವೆಂಬ ಮೂರೂ ಹೇಳಲ್ಪಟ್ಟವು. **ಅಜ್ಞಾನವೆಂದರೆ** ತಿಳುವಳಿಕೆಯೇ ಇಲ್ಲದಿರೋಣವು. **ಅನ್ಯಥಾ ಜ್ಞಾನವೆಂದರೆ** ಧರ್ಮಿಯ ಧರ್ಮವನ್ನು ವ್ಯತ್ಯಸ್ತವಾಗಿ ಗ್ರಹಿಸೋಣವು. ಶಂಖವು ಪೀತವೆಂದು ಗ್ರಹಿಸೋಣವು ಪಿತ್ತೋಪಹತನಾದುದರಿಂದ ಹಾಗೆಯೇ ಹಾಲು ಕಹಿ ಎಂದು ಭಾವಿಸೋಣವು. ಅಸ್ವತಂತ್ರನಾದ ತಾನು ಸ್ವತಂತ್ರನೆಂಬ ಭಾವನೆಯು. **ವಿಪರೀತ ಜ್ಞಾನವು** ರಜ್ಜುವನ್ನು ಸರ್ಪವೆಂದೂ ಶುಕ್ತಿಯನ್ನು ರಜತವೆಂದೂ ಬೇರೆ ಧರ್ಮಿಯಾಗಿ ಭಾವಿಸೋಣವು. ಇಂತಹ ಅಜ್ಞಾನಾಂಧಕಾರವೆಂದು ತಮಶ್ಶಬ್ದಕ್ಕೆ ಅರ್ಥವನ್ನು ಹೇಳಬಹುದು ಅಥವಾ ತಮೋಗುಣ ವಿಶಿಷ್ಟವಾದ ಪ್ರಕೃತಿ ಎಂದಾಗಲಿ ಹೇಳಿ ದೇಹ ಮೂಲಕ ಉಂಟಾದ ಸಂಸಾರಾಂಬುಧಿಯ ಕೆಳಕೆಳಕ್ಕೆ ನೆಲವು ತಾಕುವವರೆಗೂ ನಿಮಜ್ಜಾಮಿ ಎಂದರ್ಥವಾಗಲಿ ಆಗಬಹುದು. ತಮಸ್ಸು ಎಂದರೆ ಅಂಧಕಾರ, ಅಜ್ಞಾನ ಎಂಬರ್ಥವಾಗುವುದರಿಂದ ತನ್ನ ಸ್ವರೂಪಸ್ವಭಾವಗಳ ಮತ್ತು ಸರ್ವೇಶ್ವರನ ಸ್ವರೂಪ ಸ್ವಭಾವಗಳ ಯಾಥಾತ್ಮ್ಯ ಜ್ಞಾನವು ತಮಗಿಲ್ಲವೆಂಬ ನೈಚ್ಯಾನುಸಂಧಾನವು ತೋರಿಬರುತ್ತದೆ. ನನ್ನ ವಂಶದ ಮಹನೀಯರುಗಳು ಇವುಗಳ ಯಾಥಾತ್ಮ್ಯದ ಅನುಭವವೆಂಬ ಸಾಗರದಲ್ಲಿ ಮುಳುಗಿದವರು, ನಾನಾದರೋ ಅಂತಹ ಜ್ಞಾನಶೂನ್ಯತೆ ಎಂಬ ಸಾಗರದಲ್ಲಿ ಮುಳುಗಿದವನು, ಎಂಬ ಪರಿತಾಪವು ಸೂಚಿತವು. **"ಮಹತಾಪುಣ್ಯಪಣ್ಯೇನ ಕ್ರೀತೇಯಂ ಕಾಯನೌಸ್ತ್ವಯಾ। ಪ್ರಾಪ್ತುಂ ದುಃಖೋದಧೇಃ ಪಾರಂತ್ವರಯೊಾವನ್ನ ಭಿದ್ಯತೇ"** ಮಹತ್ತಾದ ಸುಕೃತಗಳೆಂಬ ಧನದ ಮೂಲಕವಾಗಿ ನಿನ್ನಿಂದ ಈ ಶರೀರವೆಂಬ ಹಡಗು ಕೊಂಡುಕೊಳ್ಳಲ್ಪಟ್ಟಿರುತ್ತದೆ ಈ ನಾವೆಯು ಬಹಳ ದಿವಸ ವಿರುವುದಿಲ್ಲವು. ಅದು ಒಡೆದು ಹೋಗುವುದರೊಳಗೇ ನೀನು ಈ ಸಂಸಾರ ದುಃಖವೆಂಬ ಸಮುದ್ರವನ್ನು ದಾಟಿ ಆಚೇ ದಡವನ್ನು ಹೋಗಿ ಸೇರಲು ತ್ವರೆ ಮಾಡು ವಿಳಂಬ ಮಾಡಿದರೆ ಸುಸಮಯವು ತಪ್ಪಿಹೋಗುತ್ತದೆಂಬ ಭಾವವು" ಎಂಬಲ್ಲಿ ಹೇಳಿರುವ ಹಾಗೆ ಸಂಸಾರ ಸಮುದ್ರವನ್ನು ದಾಟುವುದಕ್ಕಾಗಿ ನೀನು ದಯಪಾಲಿಸಿರುವ ಶರೀರದೊಂದಿಗೆ ಈಗ ಸಲಮುಟ್ಟುವ ಹಾಗೆ ಸಂಪೂರ್ಣವಾಗಿ ಮುಳುಗಿ ಹೋಗಿರುತ್ತೇನೆಂಬ ಭಾವವು. ಹೀಗೆ ಮುಳುಗಿ ಹೋದವನು ಮೇಲಕ್ಕೆ ಬರಲು ನನಗೂ ಶಕ್ತಿ ಇಲ್ಲವು ನನ್ನನ್ನು ಮೇಲಕ್ಕೆತ್ತಲು ಇನ್ನು ಯಾರಿಗೂ ಶಕ್ತಿ ಇಲ್ಲವು. ನೀನೇ ಸಮರ್ಥನಾದುದರಿಂದ ನೀನೇ ಮೇಲಕ್ಕೆತ್ತಬೇಕೆಂದೂ ಸೂಚಿತವು.

**ಅಮರ್ಯಾದಃ ಕ್ಷುದ್ರಶ್ಚಲಮತಿ ರಸೂಯಾಪ್ರಸವಭೂಃ ।**
**ಕೃತಘ್ನೋ ದುರ್ಮಾನೀ ಸ್ಮರಪರವಶೋ ವಂಚನಪರಃ ॥**
**ನೃಶಂಸಃ ಪಾಪಿಷ್ಠಃ ಕಥಮಹಮಿತೋ ದುಃಖಜಲಧೇಃ ।**
**ಅಪಾರಾದುತ್ತೀರ್ಣಸ್ತವ ಪರಿಚರೇಯಂ ಚರಣಯೋಃ ॥ ೬೨ ॥**

---

ಇದರಿಂದ ಉಪಾಯಾಂತರವಾದ ಭಕ್ತಿಯೋಗ ನಿಷ್ಠೆಗೆ ತಾವು ಸರ್ವಾತ್ಮನಾ ಅಶಕ್ತರು. ಅದರ ಸ್ಥಾನದಲ್ಲಿ ನೀನೇ ನಿಂತು, ನಾನು ಮಾಡಿರುವ ಈ ಭರನ್ಯಾಸ, ಈ ಸ್ತುತಿಗಳ ವ್ಯಾಜಮೂಲಕ ನೀನೇ ಮೇಲಕ್ಕೆ ಎತ್ತಿ ರಕ್ಷಿಸಬೇಕೇ ವಿನಾ ಬೇರೇ ಗತಿಯೇ ಇಲ್ಲವೆಂಬ ವಿಜ್ಞಾಪನೆಯು ತೋರಿಬರುತ್ತದೆ.

**ಅವತಾರಿಕೆಯು**— ಹಿಂದಿನ ಶ್ಲೋಕದಲ್ಲಿ **ಪಾಪಾತ್ಮಾ ಶರಣದ ನಿಮಜ್ಜಾಮಿ ತಮಸಿ** ಎಂದು ತಮ್ಮ ಈಗಿನ ದುಃಸ್ಥಿತಿಯಿಂದುಂಟಾದ ಕಾರ್ಪಣ್ಯವನ್ನು ಪ್ರಕಟಿಸಿದರು. ಅದನ್ನೇ ಸಮರ್ಥಿಸಿ, ವಿಸ್ತರಿಸಿ, ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಸರ್ವಶಕ್ತನಾಗಿಯೂ ಪರಮ ಕಾರುಣಿಕನಾಗಿಯೂ ಇರುವ ನೀನು ಅಕಿಂಚನನಾಗಿಯೂ ಪ್ರಪತ್ತಿ ವಾಕ್ಯವಾದ ದ್ವಯವನ್ನು ಆಚಾರ್ಯರ ಮೂಲಕ ಉಚ್ಚರಿಸುತ್ತಿರುವ ನನ್ನ ಶಿಕ್ಷಣ ರಕ್ಷಣೆಗಳಲ್ಲಿ ಪ್ರವರ್ತಿಸದೇ ಇದ್ದರೆ ಈ ಸಂಸಾರ ಸಮುದ್ರದಲ್ಲಿ ಮುಳುಗಿ ಬಾಧೆ ಪಡುವುದು ತಪ್ಪಿ ಮೇಲಕ್ಕೆ ಬಂದು ನಿನ್ನ ಪಾದಕಮಲದಲ್ಲಿ ಶಾಶ್ವತವಾಗಿ ನಿತ್ಯ ಕೈಂಕರ್ಯವನ್ನು ಮಾಡುವ ಸುಕೃತವನ್ನು ಹೇಗೆ ಹೊಂದಲಾದೀತು; ಎಂದು ಹಿಂದೆ ಪ್ರಕಟಿಸಿದ ಕಾರ್ಪಣ್ಯರೂಪ ದುಃಸ್ಥಿತಿಯಿಂದ ಭೀತರಾಗಿ ಶರಣ್ಯನಾದ ನಿನ್ನ ಕಲ್ಯಾಣಗುಣಗಳಿಂದ ಸಮಾಧಾನ ಹೊಂದಿದುದನ್ನು ಸಮರ್ಥನ ಮಾಡುವುದಕ್ಕಾಗಿ ಹಿಂದೆ **ಪಾಪಾತ್ಮಾ** ಎಂದು ಸಂಗ್ರಹವಾಗಿ ಹೇಳಿದುದನ್ನು ವಿಸ್ತರಿಸಿ ಹೇಳುತ್ತಾರೆ. ಈ ಆಕಿಂಚನ್ಯವು ಪ್ರಪತ್ತ್ಯುತ್ತರ ಕಾಲದಲ್ಲಿ ಕೂಡದಾದುದರಿಂದ ತಾನು ಉತ್ತರ ಕಾಲದಲ್ಲಿ ಕೃತಕೃತ್ಯನಾಗಿ, ನಿರ್ಭರನಾಗಿ, ನಿರ್ಭಯನಾಗಿ ಹೃಷ್ಟಮನಸ್ಕನಾಗಿರಬೇಕಾದುದು ಯುಕ್ತವಾದುದರಿಂದ ಶರಣಾಗತಿ ಶಾಸ್ತ್ರರಹಸ್ಯವನ್ನೆಲ್ಲಾ ಚೆನ್ನಾಗಿ ತಿಳಿದ ಪ್ರಾಜ್ಞರಾದವರು ಇಲ್ಲಿ ಆಕಿಂಚನ್ಯವನ್ನು ಪ್ರಕಟಿಸಿರುವುದು ಭರನ್ಯಾಸ ಕಾಲದ ಆಕಿಂಚನ್ಯದ ಪ್ರಕಟನೆ ಎಂದೇ ಭಾವಿಸತಕ್ಕದ್ದಾಗಿರುತ್ತದೆ. ಸ್ವಾಮಿ ಸ್ತೋತ್ರವೆಲ್ಲಾ ತತ್ಕಾಲದ ಸ್ತೋತ್ರವೆಂದೇ ಭಾವನೆಯು ಅತ್ಯಾವಶ್ಯಕವು. ಹಾಗಿಲ್ಲದಿದ್ದರೆ ಪ್ರಾಜ್ಞತೆಗೆ ನ್ಯೂನತೆಯನ್ನು ಕಲ್ಪಿಸಿದ ಹಾಗಾಗುತ್ತದೆ ಈ ಸ್ತೋತ್ರವೆಲ್ಲಾ ಶರಣಾಗತಿಯನ್ನು ಅನುಷ್ಠಿಸುವ ಕಾಲಕ್ಕೆ ಸೇರಿದುದೆಂದೇ ಭಾವಿಸತಕ್ಕದ್ದಾಗಿರುತ್ತದೆ.

**ಅರ್ಥವು** — **ಅಮರ್ಯಾದಃ**-ತಾವು ಹೇಗೆ **ಪಾಪಾತ್ಮಾ** ಎಂದರೆ ಹೇಳುತ್ತಾರೆ. ಶ್ರುತಿಸ್ಮೃತಿ ಇತಿಹಾಸಗಳಲ್ಲಿ ಹೇಳಿರುವ ಮರ್ಯಾದೆಯನ್ನು ದಾಟಿದವನಾದ, **ಕ್ಷುದ್ರಃ** — ಭಕ್ತ್ಯುಪಾಯದಾರಿದ್ರ್ಯ ಹೇಯಪುರುಷಾರ್ಥದಲ್ಲಿ ಅಪೇಕ್ಷೆ, ಇರುವ

**ಚಲಮತಿಃ**–ಚಂಚಲ ಮನಸ್ಸನಾಗಿರುವ **ಅಸೂಯಾ ಪ್ರಸವಭೂಃ**–ದೋಷಗಳಿಲ್ಲ ದವರಲ್ಲಿ ದೋಷವನ್ನಾರೋಪಿಸುವ ತೌರುಮನೆಯಾಗಿರುವ. **ಕೃತಘ್ನಃ**–ಉಪ ಕಾರವನ್ನು ಸ್ಮರಿಸದಿರುವ, ಕೃತಜ್ಞತೆ ಇಲ್ಲದಿರುವವನಾದ, **ದುರ್ಮಾನೀ**––ತಾನು ಉತ್ಕೃಷ್ಟನೆಂಬ ದುರಭಿಮಾನವುಳ್ಳ, **ಸ್ಮರಪರವಶಃ**––ಐಹಿಕ ಕಾಮಭೋಗಗಳಿಗೆ ವಶನಾದ, **ವಂಚನಪರಃ**––ಇತರರನ್ನು ವಂಚಿಸುವುದರಲ್ಲಿ ಆಸಕ್ತನಾಗಿರುವ, **ನೃಶಂಸಃ**––ಇತರರಿಗೆ ಪೀಡೆಯನ್ನುಂಟುಮಾಡುವ ಪಾಪ ಬುದ್ಧಿಯುಳ್ಳ, **ಪಾಪಿಷ್ಠಃ**–ಹೀಗೆಲ್ಲಾ ಅಪರಾಧ ಮಾಡುವ ಶೀಲವುಳ್ಳ ಇಂತಹ, **ಅಹಂ**–ನಾನು, **ಅಪಾರಾತ್**–ಆಚೆ ದಡ ಸಿಕ್ಕುವುದೇ ಕಷ್ಟವಾಗಿ ದಡವೇ ಇಲ್ಲವೇನೋ ಎಂಬ ಹಾಗಿರುವ, **ದುಃಖ ಜಲಧೇಃ** ದುಃಖಗಳಿಗೆ ಆಕರವಾಗಿರುವ ಸಂಸಾರ ಸಮುದ್ರದ ದೆಶೆಯಿಂದ **ಕಥಂ**–ಹೇಗೆ, **ಉತ್ತೀರ್ಣಃ**–ಮೇಲಕ್ಕೆ ಬಂದು ಅದನ್ನು ದಾಟಿದವನಾಗಿ, ತವ–ನಿನ್ನ **ಚರಣಯೋಃ**–ಪಾದಗಳಲ್ಲಿ, **ಪರಿಚರೇಯಮ್**–ನಿತ್ಯಕೈಂಕರ್ಯವನ್ನೆಸಗಲು ಯೋಗ್ಯನಾಗುವೆನೋ? ತಿಳಿಯದು ಎಂಬ ತಾತ್ಪರ್ಯವು. ಶರಣಾಗತಿಯನ್ನು ಎಂತಹವನಲ್ಲಿ ಮಾಡಿ ಆಶ್ರಯಿಸತಕ್ಕದ್ದು ಎಂದರೆ ಪರಮ ಸಮರ್ಥನಾಗಿಯೂ ಪರಮಕಾರುಣಿಕನಾಗಿಯೂ ಇರುವವನನ್ನೇ ಶರಣ ಹೊಂದ ತಕ್ಕದ್ದು ಅಂತಹವನು ನೀನೇ ಯಾದುದರಿಂದ ಆಶ್ರಯಿಸಿರುತ್ತೇನೆ. ಆದರೆ ಅಂತಹ ಸಮರ್ಥನೂ ಕರುಣಾಳುವೂ ಆದ ನಿನ್ನನ್ನು ಬಿಟ್ಟರೆ, ನನ್ನಲ್ಲೇನಾದರೂ ರಕ್ಷಣೆಗೆ ಉಚಿತವಾದ ಗುಣಗಳೇನಾದರೂ ಉಂಟೋ? ಎಂದರೆ ಎಳ್ಳಷ್ಟು ಕೂಡ ಇಲ್ಲವು ಅನುಗ್ರಹಕ್ಕೆ ಬದಲಾಗಿ ನಿಗ್ರಹ ಯೋಗ್ಯಗುಣಗಳೇ ಇವೆ ಎಂದು ಪುನಃ ತಮ್ಮ ಶರಣಾಗತಿಕಾಲದ ಆಕಿಂಚನ್ಯವನ್ನೇ ಉಪಪಾದಿಸುತ್ತಾರೆ.

**ಉಪಪಾದನೆಯು**–ಈ ಶ್ಲೋಕದಲ್ಲಿ ಹೇಳಿರುವ ದುರ್ಗುಣಗಳನ್ನೆಲ್ಲಾ ನೈಚ್ಯಾನುಸಂಧಾನದಿಂದ ಹೇಳಿರಬಹುದೆಂದಾಗಲಿ, ಅಥವಾ ಪೂರ್ವ ಜನ್ಮಗಳಲ್ಲಿ ಮಾಡಿದ ಕರ್ಮವಾಸನಾ ಮೂಲಕವೆಂದಾಗಲಿ, ಅಥವಾ ಈ ಜನ್ಮದಲ್ಲೇ ಸುಕೃತ ವಿಶೇಷದಿಂದ ಸತ್ಕುಲ ಜನ್ಮವು ಪ್ರಾಪ್ತವಾಗಿದ್ದರೂ, ಸ್ವಲ್ಪ ಮಟ್ಟಿಗೆ ತಾನು ಮಾರ್ಗತಪ್ಪಿದೆನೇ ಎಂಬ ಪರಿತಾಪ ಭಾವನೆಯಿಂದಾಗಲಿ ಹೇಳಿದುದು ಎಂದು ಭಾವಿಸಬಹುದು ಆದರೆ **ಕಥಂ ಉತ್ತೀರ್ಣಃ ಪರಿಚರೇಯಮ್** ಎಂದು ಸಂಶಯಾವಿಷ್ಟರಾದರೆಂದು ಅರ್ಥಮಾಡತಕ್ಕದ್ದಲ್ಲವು ಹಾಗೆ ಅರ್ಥಮಾಡಿದರೆ, ಇದು ಪ್ರಪತ್ತ್ಯುತ್ತರ ಕಾಲದಲ್ಲಿ ಹೇಳಿದುದು ಎಂದರೆ ಮಹಾವಿಶ್ವಾಸವು ಪ್ರಪತ್ತಿ ಕಾಲದಲ್ಲೇ ಇಲ್ಲವಾಗಿ ಅದು ಪ್ರಪತ್ತಿಯೇ ಅಲ್ಲವೆಂದಾಗುತ್ತದೆ. ಪ್ರಪತ್ತಿ ಕಾಲ ದಲ್ಲೇ ಸಂದೇಹವೆಂದು ಹೇಳಿದರೂ ಆಗಲೂ ಮಹಾ ವಿಶ್ವಾಸವಿಲ್ಲವಾಗಿ ಪ್ರಪ ತ್ತಿಯು ಫಲಿಸದು. ಆದುದರಿಂದ ಇಲ್ಲಿ ಸಂದೇಹದಿಂದ ಹೇಳಿದರೆಂದು ಭಾವಿಸಲು ಸರ್ವಾತ್ಮನಾ ಸಾಧ್ಯವಿಲ್ಲವು. ಹಾಗಾದರೆ ಈ ನೈಚ್ಯಾನುಸಂಧಾನ ರೂಪವಾದ ಆತ್ಮನಿಂದನೆಯು ಏತಕ್ಕೆ ? ಎಂದರೆ ಸರ್ವಸಮರ್ಥನಾಗಿ ಕರುಣಾ ಸಾಗರನಾದ ನಿನ್ನನ್ನು ಈಗ ಆಶ್ರಯಿಸಿ ಸರ್ವ ಭರವನ್ನೂ ನಿನ್ನಲ್ಲಿ ಇಡದೇ ಇದ್ದ ಪಕ್ಷದಲ್ಲಿ

**ಕಥಂ ಉತ್ತೀರ್ಣಃ ಪರಿಚರೇಯಂ** ಎಂಬ ಭಾವನೆಯು. "**ಯದಿವಾರಾವಣ ಸ್ಸ್ವಯಂ**" ಎಂದು ಹೇಳಿದ ಮಹನೀಯನನ್ನು ಆಶ್ರಯಿಸುವುದರಿಂದಲ್ಲವೇ ನಾನು ಗೆದ್ದೆನು. ಇಲ್ಲವಾದರೆ ನನಗೆ ಗತಿ ಎಲ್ಲಿಯದು ? ಎಂಬ ಭಾವವು ಸೂಚಿತವು, **ಅಮರ್ಯಾದಃ**— ಶ್ರುತಿಸ್ಮೃತ್ಯಾದಿ ಮರ್ಯಾದೆಗಳನ್ನು ಅತಿಕ್ರಮಿಸಿದವನು ನಾನು, ಬ್ರಾಹ್ಮಣ ವೃತ್ತಿಯನ್ನು ತ್ಯಜಿಸಿ ಕ್ಷತ್ರಿಯ ಧರ್ಮವನ್ನು ಕೆಲವು ಕಾಲ ಬುದ್ಧಿ ಶೂನ್ಯತೆಯಿಂದ ಅವಲಂಬಿಸಿದೆನೇ ಎಂಬ ಪರಿತಾಪವಿರಹುದು. ಆ ಕಾರಣದಿಂದಲೇ **ಕ್ಷುದ್ರಃ ಚಲಮತಿಃ** ಎಂದೂ ಹೇಳಿಕೊಂಡಿರಬಹುದು. "**ವಯಸಃ ಕರ್ಮಣೋಽರ್ಥಸ್ಯ ಶ್ರುತಸ್ಯಾಭಿಜನಸ್ಯ ಚ । ವೇಷವಾಗ್ವೃತ್ತಿಸಾರೂಪ್ಯಮಾಚರನ್ನಿಚರೇದಿಹ**" ಎಂದರೆ "ತನ್ನ ವಯಸ್ಸಿಗೂ, ಕರ್ಮಕ್ಕೂ, ಪ್ರಯೋಜನಕ್ಕೂ, ಶಾಸ್ತ್ರಜ್ಞಾನಕ್ಕೂ ಸತ್ಕುಲ ಪ್ರಸೂತತೆಗೂ, ವೇಷ, ವಾಕ್ಕು, ವೃತ್ತಿಗೂ ಅನುಗುಣವಾಗಿ ಈ ಲೋಕದಲ್ಲಿ ಪ್ರತಿಯೊಬ್ಬನೂ ಆಚರಿಸತಕ್ಕದ್ದು" ಎಂದು ಹೇಳಿರುವಾಗ, ಬ್ರಾಹ್ಮಣ ವೃತ್ತಿಯನ್ನು ತ್ಯಜಿಸಿ ಕ್ಷತ್ರಿಯ ವೃತ್ತಿಯನ್ನು ಅವಲಂಬಿಸಿದುದರಿಂದ **ಅಮರ್ಯಾದಃ**

**ಕ್ಷುದ್ರಃ** ಈ ಶಬ್ದಕ್ಕೆ ನಿಘಂಟುವಿನಲ್ಲಿ ದರಿದ್ರ, ಕೃಪಣ, ನೃಶಂಸ, ಅಲ್ಪ, ನಿಕೃಷ್ಟನು ಎಂಬ ಅರ್ಥಗಳು ಹೇಳಲ್ಪಟ್ಟಿವೆ ಆದರೆ **ನೃಶಂಸಃ** ಎಂದು ಮುಂದೆ ಪೃಥಕ್ಕಾಗಿ ಹೇಳಿರುವುದರಿಂದ ಅದನ್ನು ಬಿಟ್ಟು ಮಿಕ್ಕ ನಾಲ್ಕು ಅರ್ಥಗಳಲ್ಲಿ ಯಾವುದನ್ನಾದರೂ ಹೇಳಬಹುದು. "**ಪಂಡಿತೈರರ್ಥ ಕಾರ್ಪಣ್ಯಾತ್ಪಣ್ಯಸ್ತ್ರೀಭಿರಿವಸ್ವಯಂ । ಆತ್ಮಾಸಂಸ್ಕೃತ್ಯ ಸಂಸ್ಕೃತ್ಯ ಪರೋಪಕರಣೀಕೃತಃ**" ಎಂಬ ಶ್ಲೋಕವನ್ನು ಶ್ರೀ ನಿಗಮಾಂತರು ಉದಾಹರಿಸಿರುತ್ತಾರೆ. ಅರ್ಥ ಸಂಗ್ರಹಣಕ್ಕಾಗಿ ಹೇಗೋ ಹಾಗೆ ದ್ರವ್ಯಾಕಾಂಕ್ಷೆಯಿಂದ, ತಮ್ಮ ಆತ್ಮಾವೇ ಚೆನ್ನಾಗಿ ಪರಿಷ್ಕರಿಸಲ್ಪಟ್ಟಿದ್ದರೂ ಇತರರಿಗಾಗಿ ಮಾಡಲ್ಪಟ್ಟಿತು. ಭಗವತ್ಪ್ರೀತಿ ಸಂಪಾದಕವಲ್ಲದೆ ಇತರರಿಗಾಗಿ ಮಾಡಲ್ಪಟ್ಟಿತೆಂಬ ತಾತ್ಪರ್ಯವು. ಸರಿಯಾದ ಸ್ವಾರಸ್ಯಾರ್ಥವೂ ಇಲ್ಲಿ ತೋರಿಬರುತ್ತದೆ— ಹೇಗೆಂದರೆ ಶಾಸ್ತ್ರಜ್ಞಾನವುಳ್ಳ ಪಂಡಿತರಿಂದ, ಅವರಿಗೆ **ಅರ್ಥ ಕಾರ್ಪಣ್ಯಾತ್**— ಇಹಲೋಕದ ಪ್ರಯೋಜನಗಳ ದಾರಿದ್ರ್ಯದಿಂದ ಎಂದರೆ ಇವು ಯಾವುವೂ ಬೇಡವಾದುದರಿಂದ **ಪಣ್ಯಸ್ತ್ರೀಭಿರಿವ**— ವೇಶ್ಯಾಸ್ತ್ರೀಗಳ ಅಲಂಕಾರವು ತನಗಲ್ಲದೆ ವಿಟಪುರುಷನಿಗೆ ಭೋಗ್ಯಕ್ಕಾಗಿ ಹೇಗಿರಬೇಕೋ ಹಾಗೆ ತಮ್ಮ ಆತ್ಮಾವೇ ಚೆನ್ನಾಗಿ ಪರಿಷ್ಕರಿಸಲ್ಪಟ್ಟು **ಪರೋಪಕರಣೀಕೃತಃ**— ಪರನಾದ ಭಗವಂತನಿಗೇ ಭೋಗ್ಯಗಿರುವ ಹಾಗೆ ಮಾಡಲ್ಪಟ್ಟಿತು ಎಂದೂ ಅರ್ಥಮಾಡಬಹುದು. ಆದರೆ ಇದು ಪ್ರಕೃತವಿಲ್ಲವು. ಮೇಲಿನ ಅರ್ಥವು **ಕ್ಷುದ್ರಃ** ಎಂಬುದರ ಅರ್ಥವನ್ನು ಪ್ರಕಟಿಸುತ್ತದೆ.

**ಚಲಮತಿಃ**— ಅನೇಕರಿಂದಲೂ ಬಹುವಿಧವಾಗಿ ಚೆನ್ನಾಗಿ ಶಾಸ್ತ್ರಾರ್ಥವು ಬೋಧಿತವಾಗಿದ್ದರೂ ಪ್ರತಿಷ್ಠಿತವಾಗದೇ ಇರುವ ಚಂಚಲ ಬುದ್ಧಿಯುಳ್ಳನು.

ಆದರೆ ಚೆನ್ನಾಗಿ ಶಾಸ್ತ್ರಾರ್ಥಗಳನ್ನು ಅರಿತ ಆಚಾರ್ಯರುಗಳ ಸದುಪದೇಶ ಸಂಸ್ಕಾರ ವಿಲ್ಲದೆ ತನ್ನ ಮನಬಂದಂತೆ ಸ್ಥಿರಮತಿಯಾಗಿ ಅಭಿಪ್ರಾಯವನ್ನು ಹೊಂದಿರುವುದೂ ದೋಷಾವಹವು. **"ದೃಢಪೂರ್ವ ಶ್ರುತೋಮೂರ್ಖೋ ಧರ್ಮಾಣಾಮ ವಿಶಾರದಃ । ವೃದ್ಧಾನ ಪೃಚ್ಛನ್ ಸಂದೇಹಾನಂಧಃ ಶ್ವಭ್ರಮಿವರ್ತತಿ"** ಎಂಬುದು ಇಲ್ಲಿ ಅನುಸಂಧೇಯವು. ಇದು ಕೃಷ್ಣನು ಅರ್ಜುನನಿಗೆ ಹೇಳುವ ವಾಕ್ಯವು. (ಭಾ. ಕರ್ಣ ೭೨-೫೪) ಗಾಂಡೀವವು ನಿನಗೇತಕ್ಕೆ ? ಶ್ರೀಕೃಷ್ಣನಲ್ಲಿ ಸಮರ್ಪಿಸಿಬಿಡು ಎಂದು ಹೇಳಿದ ಯುಧಿಷ್ಠಿರನ ವಾಕ್ಕಿಗೆ ಕೋಪಗೊಂಡು ಅರ್ಜುನನು ಧರ್ಮರಾಜನನ್ನು ವಧಿಸಲು ಯತ್ನಿಸಿದಾಗ ಶ್ರೀಕೃಷ್ಣನು ಅರ್ಜುನನ್ನು ನಿಂದಿಸಿ ಹೇಳುವ ಉಪದೇಶವು. ಇದರ ಅರ್ಥ ತಾತ್ಪರ್ಯಗಳಿಗೆ ದಾಸನು ಬರೆದಿರುವ ಸಿದ್ಧೋಪಾಯ ಶೋಧನಾಧಿಕಾರದ ೨೧೫೭-೮ ಪುಟಗಳನ್ನು ನೋಡಿ, ಇಲ್ಲಿ **ದೃಢ ಪೂರ್ವಶ್ರುತಃ**–ಸರಿಯಾದ ಗುರುಗಳಿಂದಲ್ಲದೆ ಯಾರೋ ಒಬ್ಬರಿಂದ ಹಿಂದೆ ಕೇಳಿದ ಅಭಿಪ್ರಾಯವನ್ನೇ ದೃಢವಾಗಿಟ್ಟುಕೊಂಡವನು, ಇಂತವನು ಮೂರ್ಖನಾಗಿ ಧರ್ಮವಿಷಯದಲ್ಲಿ ಪ್ರಾಜ್ಞತೆಇಲ್ಲದೆ ಪ್ರಾಜ್ಞರಾದ ಜ್ಞಾನವೃದ್ಧರಲ್ಲಿ ಪ್ರಶ್ನಿಸಿ ಜ್ಞಾನೋಪದೇಶವನ್ನು ಹೊಂದದೆ, ಕುರುಡನು ಹಳ್ಳದಲ್ಲಿ ಬಿದ್ದು ನಾಶವಾಗುವ ಹಾಗೆ ನಾಶವನ್ನು ಹೊಂದುವನು ಎಂದು ಅಭಿಪ್ರಾಯವು ಮತ್ತು **"ವ್ಯವಸ್ಥಿತಃ ಪ್ರಶಾಂತಾತ್ಮಾ ಕುಪಿತೋಪ್ಯಭಯಂಕರಃ । ಅವ್ಯವಸ್ಥಿತ ಚಿತ್ತಾನಾಂ ಪ್ರಸಾದೋಪಿ ಭಯಂಕರಃ"** ವಿಮರ್ಶಿಸಿ ಚೆನ್ನಾಗಿ ತಿಳಿದ ಪ್ರಾಜ್ಞನು ಶಾಂತಚಿತ್ತನಾಗಿರುವನು. ಒಂದು ವೇಳೆ ಕೋಪಿಸಿದರೂ ತೊಂದರೆ ಇಲ್ಲವು ಆದರೆ ಹಾಗೆ ವಿಮರ್ಶಿಸಿ ತಿಳಿಯದ ಅಜ್ಞನ ಅನುಗ್ರಹವೂ ಕೂಡ ಭಯಂಕರವಾದುದೇ ಎಂದು ಹೇಳಲ್ಪಟ್ಟಿರುತ್ತದೆ. ಚಲಮತಿಯನ್ನು ನಂಬುವುದು ಕಷ್ಟವೆಂದು ಹೇಳಲ್ಪಟ್ಟಿತು.

**ಅಸೂಯಾ ಪ್ರಸವಭೂಃ** ಒಳ್ಳೆಯ ಗುಣಗಳಿರುವವರಲ್ಲಿ ದೋಷಾರೋಪಣೆಯು **ಅಸೂಯೆ** ಎನಿಸುತ್ತದೆ, ಅದಕ್ಕೆ ಉತ್ಪತ್ತಿ ಸ್ಥಾನವು ಎಂಬ ಭಾವವು. ಈ ಸಂದರ್ಭದಲ್ಲಿ **"ರಾಜನ್ ಸರ್ಷಪ ಮಾತ್ರಾಣಿ ಪರಚ್ಛಿದ್ರಾಣಿ ಪಶ್ಯಸಿ । ಆತ್ಮನೋ ಮೇರುಮಾತ್ರಾಣಿ ಪಶ್ಯನ್ನಪಿನಪಶ್ಯಸಿ"** ಎಂದರೆ ಓ ರಾಜನೇ ಇತರರ ದೋಷಗಳು ಸಾಸಿವೆ ಕಾಳಿನಷ್ಟು ಅಲ್ಪವಾಗಿದ್ದರೂ ಕಣ್ಣಿಗೆ ಚೆನ್ನಾಗಿ ಕಾಣುತ್ತವೆ. ತನ್ನ ದೋಷಗಳು ಮೇರು ಪರ್ವತದಷ್ಟು ದೊಡ್ಡದಾಗಿ ಕಣ್ಣಿಗೆ ಬಿದ್ದರೂ ಕೂಡ ಅವು ಕಾಣುವುದೇ ಇಲ್ಲವು. ಇದೀಗ ಅಸೂಯೆಯ ಸ್ವಭಾವವು. ಹಾಗೆಯೇ **"ಅಸೂಕಾಯಾ ನೃಜವೇ ಜನಾಯ ನಮಾಂಬ್ರೂಯಾಃ" ಅಸೂಕಾಯ ಮಾಂಮಾದಾಃ"** ಎಂದರೆ ಅಸೂಯೆ ಮತ್ತು ಕಪಟವುಳ್ಳ ಜನರಿಗೆ ನನ್ನನ್ನು ಹೇಳಬೇಡ ಎಂದೂ ಮತ್ತು "ಅಸೂಯೆಯುಳ್ಳವರಿಗೆ ನನ್ನನ್ನು ಕೊಡಬೇಡ" ಎಂಬ ಶ್ರುತಿಗಳು ಅನುಸಂಧೇಯವು ಹಾಗೆಯೇ ಗೀತೆಯಲ್ಲಿ **ನಚಮಾಂ ಯೋಭ್ಯಸೂಯತಿ"** ಭಗವಂತನಾದ ನನ್ನ ವಿಷಯದಲ್ಲಿ ಯಾವ

ದುರದೃಷ್ಟನು ಅಸೂಯೆ ಪಡುತ್ತಾನೋ ಆತನಿಗೆ ಉಪದೇಶಿಸಬೇಡ ಎಂದು ಅರ್ಜುನನಿಗೆ ಹೇಳುವ ಸಂದರ್ಭವು. ಹೀಗೆ ಅಸೂಯಾಪರನಿಗೆ ಬ್ರಹ್ಮವಿದ್ಯೋಪದೇಶಾದಿಗಳು ನಿಷೇಧಿಸಲ್ಪಟ್ಟಿವೆ. ಶ್ರೀ ಭಾಷ್ಯಕಾರರೂ ಅವರ ಗುರುಗಳೂ, ಶಿಷ್ಯರುಗಳೂ ಸಹ ನಮ್ಮ ಸಿದ್ಧಾಂತ ವಿಷಯದಲ್ಲಿ ಬಹುಸ್ವಾರಸ್ಯವಾಗಿಯೂ ನಿಪುಣತರವಾಗಿಯೂ ವಿಶದವಾಗಿಯೂ ಉಪದೇಶಿಸಿರುವುದರಿಂದ ಮುಂದಿನವರು ಆ ವಿಷಯದಲ್ಲಿ ಇನ್ನೇನೂ ಮಾಡತಕ್ಕದ್ದಿಲ್ಲವು. ಪರಸ್ಪರಾನುರಾಗದಿಂದ ಇರಬೇಕೇ ವಿನಾ ಅಸೂಯೆಯು ಸರ್ವಾತ್ಮನಾ ಕೂಡದೆಂದು ಸಂಕಲ್ಪಸೂರ್ಯೋದಯದಲ್ಲಿ ಈ ಮುಂದಿನ ಶ್ಲೋಕದ ಮೂಲಕ ತಿಳಿಸುತ್ತಾರೆ "**ಅಪಾದ ಚೂಡಮನಪಾಯಿನಿದರ್ಶನೇಸ್ಮಿನ್ ಆಶಾಸನೀಯಮಪರಂ ನವಿಪಕ್ಷ ಹೇತೋಃ । ಆಪಾತಶಾನ್ತಿ ಮಧುರಾಸ್ಸನ ರಸ್ಮದೀಯಾ ನನ್ಯೋನ್ಯ ವೈರ ಜನನೀ ವಿಜಹಾತ್ವಸೂಯಾ**" ಅಸೂಯೆಯು ವಿಸ್ಮಾಡುತ್ತದೆ ಎಂದರೆ ಅನ್ಯೋನ್ಯ ವೈತ್ರೀಸ್ಥಳದಲ್ಲಿ ಅನ್ಯೋನ್ಯದ್ವೇಷವನ್ನುಂಟು ಮಾಡುತ್ತದೆಂದು ಹೇಳಲ್ಪಟ್ಟಿರುತ್ತದೆ—

ಕೃತಘ್ನಃ—ಭಗವಂತನಾದ ನಿನ್ನಿಂದ ಮಾಡಲ್ಪಟ್ಟ ಅನಂತೋಪಕಾರಗಳನ್ನೂ ಮತ್ತು ಇತರರಿಂದಲೂ ಮಾಡಲ್ಪಟ್ಟ ಉಪಕಾರಗಳನ್ನೂ ಮರೆಯೋಣವೇನು, ಮತ್ತು ಪ್ರತ್ಯುತ ವಿರುದ್ಧವಾಗಿ ಅಪಕಾರಗಳನ್ನೆಸಗೋಣವೇನು, ಇವುಗಳಿಂದ ಕೂಡಿದವನು ಯಾವ ಪಾಪಿಷ್ಠನು ಮಿಕ್ಕ ಎಲ್ಲರಿಗಿಂತಲೂ ಹೆಚ್ಚಾದ ಅಪರಾಧಿಯೆಂದು ಸ್ಮೃತಿಗಳಲ್ಲಿ ಹೇಳಲ್ಪಟ್ಟಿರುತ್ತದೆ ಎಂದರೆ—"**ಗೋಘ್ನೇಚೈವ ಸುರಾಪೇಚ ಚೋರೇಭಗ್ನ ವ್ರತೇ ತಥಾ । ನಿಷ್ಕೃತಿ ರ್ವಿಹಿತಾ ಸದ್ಭಿಃ ಕೃತಘ್ನೇನಾಸ್ತಿ ನಿಷ್ಕೃತಿಃ**" ಗೋವನ್ನು ಕೊಂದವನ ವಿಷಯದಲ್ಲೂ ಬ್ರಾಹ್ಮಣನಾಗಿ ಹೆಂಡ ಕುಡಿಯುವ ಕಳ್ಳತನ ಮಾಡುವನ ಮತ್ತು ವ್ರತವನ್ನು ಹಾಳು ಮಾಡಿದವನ ವಿಷಯದಲ್ಲೂ ಶಾಸ್ತ್ರಗಳಲ್ಲಿ ಪ್ರಾಯಶ್ಚಿತ್ತಗಳು ವಿಧಿಸಲ್ಪಟ್ಟಿವೆ. ಆದರೆ ಇವೆಲ್ಲಕ್ಕಿಂತ ಮಹಾಪರಾಧಿಯಾದ ಕೃತಘ್ನನ ವಿಷಯದಲ್ಲಿ ಮಾತ್ರ ಪ್ರಾಯಶ್ಚಿತ್ತವೇ ಇಲ್ಲವು ಎಂದು ಹೇಳಲ್ಪಟ್ಟಿರುತ್ತದೆ ಈ ಶ್ಲೋಕವು ಬ್ರಹ್ಮನಿಂದ ಹೇಳಲ್ಪಟ್ಟಿತೆಂದು "ಗೀತೋಯಂ ಬ್ರಹ್ಮಣಾ ಶ್ಲೋಕಃ" (ರಾ ಕಿ ೩೪ ೧೨) ಎಂದು ಹೇಳಲ್ಪಟ್ಟಿರುತ್ತದೆ "**ಗೋಘ್ನೇಚೈವ**" ಎಂಬುದಕ್ಕೆ ಬದಲಾಗಿ "**ಬ್ರಹ್ಮಘ್ನೇಚ**" ಎಂದು ಇರುತ್ತದೆ. ಗೋಬ್ರಾಹ್ಮಣ ವಧೆಗಳು ಸಮಾನಗಳಾದ ಅಪರಾಧಗಳಾಗಿ ಭಾವಿಸಲ್ಪಟ್ಟಿವೆ ಮತ್ತು "**ಸತ್ಕೃತಾಶ್ಚ ಕೃತಾರ್ಥಾಶ್ಚ ಮಿತ್ರಾಣಿ ನಭವಂತಿಯೇ । ತಾನ್ಮೃತಾನ ವಿಕ್ರವ್ಯಾದಾಃ ಕೃತಘ್ನಾನ್ನೋಪಭುಂಜತೇ**" (ರಾ ಕಿ. ೩೦–೭೩) ಸತ್ಕರಿಸಲ್ಪಟ್ಟವರಾಗಿಯೂ ಉಪಕರಿಸಲ್ಪಟ್ಟವರಾಗಿಯೂ ಇರುವವರು ಯಾರೋ ಅವರು ಮಿತ್ರರುಗಳಾಗಿ ಆಗುವುದಿಲ್ಲವೋ ಎಂದರೆ ಉಪಕಾರ ಸ್ಮರಣೆಇಲ್ಲದೆ ಕೃತಜ್ಞತಾ ಶೂನ್ಯರಾಗಿರುವ ಕೃತಘ್ನರೋ ಅವರುಗಳನ್ನು ಸತ್ತನಂತರ ಪಿಶಾಚಿಗಳೂ ಕೂಡ ಅವರ ದೇಹಗಳನ್ನು ಭಜಿಸುವುದಿಲ್ಲವು

ಎಂದು ಸುಗ್ರೀವನನ್ನು ಕುರಿತು ಹೇಳು ಎಂದು ಶ್ರೀರಾಮಚಂದ್ರಪ್ರಭುವು ಲಕ್ಷ್ಮಣನನ್ನು ಕುರಿತು ಹೇಳುತ್ತಾರೆ. ಅಂತಹ ಕೃತಘ್ನರು ಪ್ರಾಯಶ್ಚಿತ್ತವನ್ನು ಮಾಡಿಕೊಂಡರೂ ಸಂಸರ್ಗಕ್ಕೆ ಅನರ್ಹರು ಎಂಬ ಸ್ಮೃತಿವಾಕ್ಯವಿರುತ್ತದೆ. **"ಶರಣಾಗತ ಬಾಲಸ್ತ್ರೀ ಹಿಂಸಕಾನ್ ಸಂವಸೇನ್ನತು । ಚೀರ್ಣ ವ್ರತಾನಪಿ ಸತಃ ಕೃತಘ್ನ ಸಹಿತಾನಿಮಾನ್"** ಎಂದರೆ ಶರಣಾಗತನೇನು, ಬಾಲನೇನು ಸ್ತ್ರೀಯೇನು ಇವರುಗಳನ್ನು ಹಿಂಸಿಸುವವರನ್ನೂ **ಕೃತಘ್ನಸಹಿತಾ ನಿಮಾನ್**— ಮಾಡಿದ ಉಪಕಾರಗಳನ್ನು ಮರೆತಿರುವ ಕೃತಘ್ನರೊಂದಿಗೆ ಇವರೆಲ್ಲರನ್ನೂ, ಪ್ರಾಯಶ್ಚಿತ್ತ ಮಾಡಿಕೊಂಡವರಾದರೂ ಸಂಸರ್ಗಕ್ಕೆ ಅನರ್ಹರನ್ನಾಗಿ ಭಾವಿಸ ತಕ್ಕದ್ದು.

**ದುರ್ಮಾನೀ** ದುರಹಂಕಾರ ಭಾವವುಳ್ಳವನು, ತಾನು ನಿಕೃಷ್ಟನಾಗಿದ್ದರೂ **"ಈಶ್ವರೋಽಹ ಮಹಂಭೋಗೀ"** (ಗೀ ) ತಾನೇ ಸ್ವಾಮಿಯು, ತಾನೇ ಭೋಗಿಯು ಎಂದು ರಾಜಸ ತಾಮಸಭಾವದಿಂದ ಹೇಳಿಕೊಳ್ಳುವನಾಗಿ ತಾನೇ ಉತ್ಕೃಷ್ಟನೆಂದು ತಿಳಿಯುವವನು. ಇಂತವನಿಗೆ ತನಗಿಂತ ಉತ್ಕೃಷ್ಟರಿಲ್ಲವೆಂಬ ದುರಭಿಮಾನವಿರುವುದರಿಂದ ಉತ್ಕೃಷ್ಟರನ್ನು ಹೀಯಾಳಿಸುವನು, ನಿಂದಿಸುವನು, ಇದಕ್ಕೆ ಶಿಶುಪಾಲ, ಹಿರಣ್ಯಕಶಿಪು, ರಾವಣ, ಇಂದ್ರಜಿತ್ತು ಮೊದಲಾದವರುಗಳು ನಿದರ್ಶನವು. ರಾವಣನು ಸೀತೆಯನ್ನು ಕುರಿತು ಹೇಳುತ್ತಾನೆ. **"ನ ರಾಮಸ್ತಪಸಾದೇವಿ ನಬಲೇನ ನವಿಕ್ರಮ್ಯೈಃ । ನಧನೇನ ಮಯಾತುಲ್ಯಃ ತೇಜಸಾ ಯಶಸಾಪಿವಾ"** ತಪಸ್ಸು ಬಲ ವಿಕ್ರಮ ಧನ, ತೇಜಸ್ಸು ಯಶಸ್ಸು ಇವೆಲ್ಲವು ಗಳಿಂದ, ರಾಮನು ನನಗೆ ಸಮನಾಗುವುದಿಲ್ಲವೆಂದು ಹೇಳಿಕೊಂಡಿರುತ್ತಾನೆ. **"ಕ್ಲೀಬೇ ದಾರಕ್ರಿಯಾ ಯಾದೃಕ್ ಅಂಧೇವಾ ರೂಪದರ್ಶನಮ್। ಅರಾಜ್ಞೀ ರಾಜವತ್ಪೂಜಾ ತಥಾತೇ ಮಧುಸೂದನಃ"** ಎಂದು ಶಿಶುಪಾಲನು ಹಿಯ್ಯಾಳಿಸಿರುತ್ತಾನೆ. ಈ ಸಂದರ್ಭದಲ್ಲಿ ಶಾಂಡಿಲ್ಯರು ಹೇಳಿರುತ್ತಾರೆ **"ಮೂರ್ಖಾಶ್ಚ ಪಂಡಿತಂ ಮನ್ಯಾಃ ಅಧರ್ಮಾಧಾರ್ಮಿಕಾ ಇವ । ಧರ್ಮಯುಕ್ತಾನ್ ಪ್ರಬಾಧಂತೇ ಸಾಧೂನಾಂ ಲಿಂಗಮಾಸ್ಥಿತಾಃ"** "ಏನೂ ತಿಳಿಯದ ಮೂಢರು ತಾವೇ ಪಂಡಿತರೆಂದು ಭಾವಿಸಿ ವಿಧಿನಿಷೇಧವಾಕ್ಯಗಳಿಂದ ಹೇಳಲ್ಪಟ್ಟ ಶಾಸ್ತ್ರಪಂಕ್ತಿಗಳ ಜ್ಞಾನವಿಲ್ಲದವರಾಗಿ ಧರ್ಮವನ್ನು ತಿಳಿದ ಮಹಾಪ್ರಾಜ್ಞರು ತಾವು ಎಂದು ಭಾವಿಸಿಕೊಂಡು ಒಳ್ಳೆಯ ಸತ್ಪುರುಷರು ತಾವು ಎಂಬ ವೇಷವನ್ನು ಧರಿಸಿದವರಾಗಿ ಜನನ್ನಾ ಧರ್ಮವನ್ನು ತಿಳಿದ ಸಾಧುಜನರನ್ನು ಹಿಂಸಿಸುವರು" ಎಂಬುದಾಗಿ ಆರು ಮಹಾ ದೋಷಗಳಲ್ಲಿ **ಅತಿಮಾನವೂ** ಒಂದು ಎಂದು ಶ್ರೀವಿದುರರು ಹೇಳಿರುತ್ತಾರೆ. **"ಅತಿಮಾನೋಽತಿವಾದಶ್ಚ ತಥಾತ್ಯಾಶಾನರಾಧಿಪ । ಕ್ರೋಧಶ್ಚಾತಿವಿವಿತ್ಸಾಚ ಮಿತ್ರದ್ರೋಹಶ್ಚತಾ ನಿಷಟ್ । ಏತ ಏವಾಯಸಾಃ ತೀಕ್ಷ್ಣಾಃ ಕೃಂತಂತ್ಯಾಯೂಂಷಿ ದೇಹಿನಾಮ್ । ಏತಾನಿ ಮಾನವಾನ್ಘ್ನಂತಿನಮೃತ್ಯುರ್ಭದ್ರಮಸ್ತುತೇ"** "ಓ ರಾಜನಾದ ಧೃತರಾಷ್ಟ್ರನೇ ಅಧಿಕಾಭಿಮಾನವೂ

ಹೆಚ್ಚಾದ ವಾದವೂ, ಹೆಚ್ಚಾದ ಸಂಗವೂ ಹೆಚ್ಚಾದ ಕೋಪವೂ, ವಿಶೇಷ ಸಂಶಯವೂ ಮಿತ್ರನಲ್ಲಿ ದ್ರೋಹವೂ ಈ ಆರು ದೋಷಗಳೂ ಬಹು ತೀಕ್ಷ್ಣವಾದ ಕತ್ತಿಗಳು ಮನುಷ್ಯರ ಆಯುಸ್ಸುಗಳನ್ನು ಕತ್ತರಿಸಿಬಿಡುತ್ತವೆ. ಇವುಗಳೇ ಮನುಷ್ಯರನ್ನು ಕೊಲ್ಲುತ್ತವೆಯೇ ಹೊರತು ಮೃತ್ಯುವು ಅವರುಗಳನ್ನು ಕೊಲ್ಲುವುದಿಲ್ಲವು, ಓ ರಾಜನೇ ನಿನಗೆ ಮಂಗಳವಾಗಲಿ " ಎಂದು ವಿದುರೋಕ್ತಿಯಿರುತ್ತದೆ-

**ಸ್ಮರಪರವಶಃ** -ಐಹಿಕ ಕಾಮಗಳಿಗೆ ಅಧೀನನಾದವನು. ಮುಖ್ಯವಾಗಿ ವಿರುದ್ಧಗಳಾದಕಾಮೋಪಭೋಗಗಳಲ್ಲಿ ಆಸಕ್ತಿಯಿಂದ ಚಂಚಲಚಿತ್ತನಾದವನೆಂಬ ಭಾವವು. ಕ್ಲಿಪ್ತವಾಗಿ ಶಾಸ್ತ್ರವಿಹಿತಕಾಲಗಳಲ್ಲಿ ತನ್ನ ಧರ್ಮಪತ್ನಿಯೊಂದಿಗೆ ರತಿಸುಖವೂ, ಭಗವದ್ಭಾಗವತ ಕೈಂಕರ್ಯಗಳಿಗಾಗಿ ಧನಾರ್ಜನೆಯೂ, ದೇಹಯಾತ್ರೆಗಾಗಿ ಭಗವನ್ನಿವೇದಿತ ಮೃಷ್ಟಾನಸೇವನೆಯೂ, ನಿಂದಿತವಲ್ಲವು, ಆದರೆ ಹೀಗಿದ್ದರೂ ಆಶೆ ಮೊದಲಾದವುಗಳಿಗೆ ಪರವಶನಾದವನು ತಾನು ಸ್ವತಂತ್ರನೆಂದು ಭಾವಿಸುವುದು ಸುತರಾಂ ಮೌಢ್ಯವೆಂದು ತಿಳಿಯತಕ್ಕದ್ದು." **ಅಂಗಾರ ಸದೃಶಾನಾರೀ ಘೃತಕುಂಭ ಸಮಃ ಪುಮಾನ್। ತಸ್ಮಾನ್ನಾ ರೀಷುಸಂಸರ್ಗಂ ದೂರತಃ ಪರಿವರ್ಜಯೇತ್"** ಮುಖ್ಯವಾಗಿ ತನ್ನ ಭಾರ್ಯೆ ಅಲ್ಲದೆ ಪರಸ್ತ್ರೀಗಳೊಂದಿಗೆ ಸಂಸರ್ಗವು ಕೂಡದೆಂದು ಬೋಧಿಸುತ್ತದೆ. ಸ್ತ್ರೀಯು ಬೆಂಕಿಗೆಸಮಾನಳು. ಪುರುಷನಾದರೋ ತುಪ್ಪದಕೊಡವು. ಅಗ್ನಿಯಿಂದ ತುಪ್ಪವು ಹತ್ತಿಕೊಂಡು ಉರಿದು ಹೋಗುವ ಹಾಗೆ ಸ್ತ್ರೀಯಿಂದ ಪುರುಷನು ನಾಶಹೊಂದುವನು. ಆದುದರಿಂದ ಇತರರ ಹೆಂಗಸರುಗಳೊಂದಿಗೆ ಸಂಗವನ್ನು ದೂರದಿಂದಲೇ ತ್ಯಜಿಸತಕ್ಕದ್ದು ಎಂಬ ಉಪದೇಶವು. " **ರಾಗಾದ್ಯಪೇತಂ ಹೃದಯಮ್ ವಾಗದುಷ್ಟಾನೃತಾದಿನಾ। ಹಿಂಸಾದಿರಹಿತಃ ಕಾಯಃ ಕೇಶವಾರಾಧನಂತ್ರಯಮ್** "॥ ಮನಸ್ಸು ಆಶೆ ಮೊದಲಾದವುಗಳಿಂದ ಕೂಡದೆಯೂ, ಆದಿ ಶಬ್ದದಿಂದ ಕ್ರೋಧವೂ ಹೇಳಲ್ಪಟ್ಟಿತು. ವಾಕ್ಕು ಅನೃತವೇ ಮೊದಲಾದವುಗಳಿಂದ ದುಷ್ಟವಲ್ಲದೆಯೂ, ಶರೀರವು ಇತರರಿಗೆ ಹಿಂಸೆ ಮೊದಲಾದವುಗಳನ್ನು ಮಾಡದೆಯೂ ಇದ್ದುದಾದರೆ, ಈ ಮನಸ್ಸೂ, ವಾಕ್ಕೂ, ಶರೀರವೂ ಇವು ಮೂರೂ ಕೇಶವನ ಆರಾಧನೆಗೆ ಯೋಗ್ಯವಾಗಿ ಆತನ ಅನುಗ್ರಹಕ್ಕೆ ಪಾತ್ರವಾದುವಾಗುತ್ತವೆಂಬ ಭಾವವು-"**ಪರದ್ರವ್ಯೇಷು ಜಾತ್ಯಂಧಾಃ ಪರದಾರೇಷ್ವಪುಂಸಕಾಃ। ಪರೀವಾದೇಷುಯೇ ಮೂಕಾಸ್ತೇತೀವದಯಿತಾಮಮ"** ಎಂದರೆ ಯಾರು ಇತರರ ದ್ರವ್ಯದ ವಿಷಯದಲ್ಲಿ ಹುಟ್ಟು ಕುರುಡರೋ, ಯಾರು ಇತರರ ಹೆಂಡತಿಯರ ವಿಷಯದಲ್ಲಿ ನಪುಂಸಕರೋ, ಯಾರು ಇತರರನ್ನು ನಿಂದಿಸುವುದರಲ್ಲಿ ಮೂಕರೋ ಅವರುಗಳು ನನಗೆ ವಿಶೇಷ ಪ್ರಿಯರಾದವರೆಂಬ ಭಗವದುಕ್ತಿಯು ಇದೆ. ಈ ಮೊದಲಿನ ಶ್ಲೋಕದಲ್ಲಿರುವ ಆದಿಪದಗಳಿಂದ

ವಾರಾಹ ಪುರಾಣದಲ್ಲಿ ಹೇಳಿರುವ ಮಾನಸ ವಾಚಿಕ ಕಾಯಿಕ ದೋಷಗಳು ಹೇಳಲ್ಪಟ್ಟಿವು. ಅವುಗಳೂ ಇಲ್ಲದಿದ್ದರೆ ಶ್ರೀ ಹರಿಯ ಆರಾಧನೆಗೆ ಯೋಗ್ಯವೆಂಬ ಭಾವವು.

**" ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟಚಿಂತನಮ್ ।**
**ವಿತಥಾಭಿನಿವೇಶಶ್ಚ ಮಾನಸಂ ತ್ರಿವಿಧಂ ಸ್ಮೃತಮ್ ।**
**ಪಾರುಷ್ಯ ಮನೃತಂಚೈವ ಪೈಶುನ್ಯಮಪಿ ಸರ್ವಶಃ ।**
**ಅನಿಬದ್ಧ ಪ್ರಲಾಪಶ್ಚ ವಾಚಿಕಂ ಸ್ಯಾಚ್ಚತುರ್ವಿಧಮ್ ।**
**ಅದತ್ತಾನಾಮುಪಾದಾನಂ ಹಿಂಸಾ ಚೈವಾ ವಿಧಾನತಃ ।**
**ಪರದಾರೋಪ ಸೇವಾಚ ಕಾಯಿಕಂ ತ್ರಿವಿಧಂ ಸ್ಮೃತಮ್ "**

ಎಂಬಿವು ಅನುಸಂಧೇಯಗಳು. ಗುರು ಪರಂಪರಾಸಾರ ೬೩ನೆಯ ಪುಟ ನೋಡಿ. ಕಾಮ ಒಂದು ಉಂಟಾದರೂ ಅದರೊಂದಿಗೆ ಈ ದೋಷಗಳೆಲ್ಲಾ ಅನುಸರಿಸಿ ಪ್ರಾಪ್ತವಾಗುತ್ತವೆ. **"ಸಂಗಾತ್ಸಂ ಜಾಯತೇ ಕಾಮಃ ಕಾಮಾತ್ಕ್ರೋ ಧೋಽಭಿಜಾಯತೇ ।"** ಎಂದು ಆರಂಭಿಸಿ **" ಬುದ್ಧಿನಾಶಾತ್ಪ್ರಣಶ್ಯತಿ"** ಎಂದು ಹೇತು ಹೇತು ಮದ್ಭಾವದಿಂದ ಹೇಳಲ್ಪಟ್ಟಿರುತ್ತದೆ. ಆದುದರಿಂದ ಮನುಷ್ಯನಿಗೆ ತುಂಬಾ ಪ್ರಬಲ ಶತ್ರುವು **ಕಾಮ** ವಾದುದರಿಂದ **ಸ್ಮರಪರವಶಃ** ಎಂಬ ಪ್ರಯೋಗವು. ಗೀತೆಯಲ್ಲಿ ಇನ್ನೊಂದು ಕಡೆಯಲ್ಲೂ ಈ ಅಭಿಪ್ರಾಯವು **"ಕಾಮ ಏಷಃ ಕ್ರೋಧ ಏಷಃ ರಜೋಗುಣ ಸಮುದ್ಭವಃ । ಮಹಾಶನೋ ಮಹಾ ಪಾಪ್ಮಾ ವಿದ್ಧ್ಯೇನಮಿಹವೈರಿಣಂ"** ಎಂಬಲ್ಲಿ ಪ್ರಕಟಿಸಲ್ಪಟ್ಟಿರುತ್ತದೆ. **ವಂಚನಪರ** :—ಪರದ್ರವ್ಯ ಮೊದಲಾದುವುಗಳನ್ನು ಅಪಹರಿಸುವುದಕ್ಕಾಗಿ ತಾನು ಬಹು ಋಜುವಾದವನು, ನ್ಯಾಯವಾದಿ, ಎಂದು ಇತರರಿಗೆ ತೋರ್ಪಡಿಸಿಕೊಂಡು, ಅವರು ತನ್ನನ್ನು ನಂಬುವ ಹಾಗೆ ಮಾಡಿ ಮೋಸ ಮಾಡುವುದರಲ್ಲಿ ಇಷ್ಟವುಳ್ಳವನು. ಇಂತವರು ಪಾಷಂಡಿಗಳೆಂದೂ ಬಕವೃತ್ತಿಗಳೆಂದೂ ಬೈಡಾಲವ್ರತಿಗಳೆಂದೂ ಈ ಮುಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟಿವೆ. **"ಪಾಷಂಡಿನೋ ವಿಕರ್ಮಸ್ಥಾ ಬೈಡಾಲ ವ್ರತಿಕಾನ್ ಶಠಾ । ಹೈತುಕಾನ್ ಬಕವೃತ್ತೀಂಶ್ಚ ವಾಂಙ್ಮಾತ್ರೇ ಣಾಪಿ ನಾರ್ಚಯೇತ್"** ಪಾಷಂಡಿಗಳು ಎಂದರೆ ಅಸಚ್ಛಾಸ್ತ್ರವನ್ನು ಹೇಳುವ ಚಾರ್ವಾಕಾದಿ ವೇದ ಬಾಹ್ಯರನ್ನೂ, ವರ್ಣಾಶ್ರಮ ಧರ್ಮಗಳಿಗೆ ವಿರುದ್ಧ ಮಾರ್ಗ ದಲ್ಲಿರುವವರನ್ನೂ. ಬೆಕ್ಕಿನ ವ್ರತವನ್ನು ಅನುಸರಿಸುವವರಾಗಿಯೂ ವಂಚಕರು ಗಳಾಗಿಯೂ ಶಾಸ್ತ್ರವನ್ನು ದೂರೀಕರಿಸಿ ತರ್ಕ ಮಾಡುವವರಾಗಿಯೂ, ಹತ್ತಿರ ಬಂದ ಮೀನನ್ನು ನುಂಗುವ ಬಕಪಕ್ಷಿಯ ವೃತ್ತಿಯನ್ನು ಅವಲಂಬಿಸಿದವರಾಗಿಯೂ ಇರುವವರನ್ನು ಮಾತಿನಿಂದಲೂ ಕೂಡ ಉಪಚರಿಸಬಾರದು. ಹಾಗೆಯೇ

**"ಧರ್ಮಧ್ವಜಸ್ಸದಾಲುಬ್ಧಃ ಛಾದ್ಮಿಕೋ ಲೋಕಡಾಂಭಿಕಃ। ಬೈಡಾಲ ವ್ರತಿಕೋಜ್ಞೇಯಃ ಹಿಂಸ್ರಸ್ಸರ್ವಾತಿಸಂಧಕಃ"** ಎಂದರೆ ಯಾವಾಗಲೂ ಪ್ರಸಿದ್ಧಿಗೋಸ್ಕರ ಧರ್ಮಾಚರಣೆಯುಳ್ಳ, ದ್ರವ್ಯವನ್ನು ಸತ್ಪಾತ್ರದಲ್ಲಿ ವಿನಿಯೋಗಿಸದೆ ಲೋಭಿಯಾದ, **ಛಾದ್ಮಿಕಃ**–ಕಪಟ ವೃತ್ತಿ ಸ್ವಭಾವಗಳುಳ್ಳವನಾಗಿರುವ ಲೋಕದ ಜನರಿಗೆ ಡಂಭಾಚಾರವುಳ್ಳವನಾಗಿರುವ, ಇತರರನ್ನು ಹಿಂಸಿಸುವ **ಸರ್ವಾತಿ ಸಂಧಕಃ** ಎಲ್ಲರನ್ನೂ ಮೋಸಗೊಳಿಸುವವನನ್ನು ಬೆಕ್ಕಿನ ಹಾಗೆ ವಂಚಕನನ್ನಾಗಿ ತಿಳಿಯತಕ್ಕದ್ದು.

**ನೃಶಂಸಃ**–ತನ್ನ ಹತ್ತಿರವಿರುವ ಜನಗಳ ವಿಷಯದಲ್ಲಿ ಘಾತುಕ ಮೃಗವಾದ ಹುಲಿಯ ಹಾಗೆ ಕ್ರೂರ ವ್ಯಾಪಾರವುಳ್ಳವನು, ಹಾಗಲ್ಲದೇ ಇರುವ ಸಾತ್ವಿಕ ಸ್ವಭಾವವು **"ಆನೃಶಂಸ್ಯಂ ಪರೋಧರ್ಮಃ"** ಇತರರನ್ನು ಈಷದಪಿ ಮನಸ್ಸಿನಲ್ಲೂ ಕೂಡ ಹಿಂಸಿಸದೇ ಇರೋಣವು, ಸರ್ವೋತ್ಕೃಷ್ಟ ಧರ್ಮವೆಂದು ಕೊಂಡಾಡಲ್ಪಟ್ಟಿರುತ್ತದೆ. **"ಉದ್ವೇಜನೀಯೋ ಲೋಕಾನಾಂ ನೃಶಂಸಃ ಪಾಪಕರ್ಮಕೃತ್। ತ್ರಯಾಣಾಮಪಿ ಲೋಕಾನಾ ಮೀಶ್ವರೋಽಪಿ ನತಿಷ್ಠತಿ"** ಪರಪೀಡೆಯನ್ನುಂಟು ಮಾಡುವ ನೃಶಂಸನು ಮೂರು ಲೋಕಗಳಿಗೆ ಒಡೆಯನಾಗಿದ್ದರೂ ಬಾಳುವುದಿಲ್ಲ ವೆಂಬ ಮಹರ್ಷಿಯ ಉಕ್ತಿಯು ಇರುತ್ತದೆ.

**ಪಾಪಿಷ್ಠ:**–ಹೀಗೆ ಬಹುಪಾಪಗಳಿಂದ ಕೂಡಿದವನೆಂದು ಹೇಳಿಕೊಂಡರು. ಇವೆಲ್ಲವೂ ವಾಸ್ತವವಾಗಿ ಶ್ರೀ ಯಾಮುನ ಮುನಿಗಳಲ್ಲುಂಟು ಎಂಬ ಭಾವವು ಕೂಡದು. ಹಿಂದೆ ಅನೇಕ ಜನ್ಮಗಳ ಪ್ರವೃತ್ತಿಯು ಗೋಚರವಾಗುವುದಿಲ್ಲವಾದುದರಿಂದ ಎಂತಹ ಮಹತ್ತಾದ ಅಪರಾಧಗಳನ್ನು ಮಾಡಿದ್ದೇನೆಯೋ ಎಂಬ ಶಂಕಾದಿಂದುಂಟಾದ ನೈಚ್ಯಾನು ಸಂಧಾನವೆಂದು ಭಾವಿಸತಕ್ಕದ್ದಾಗಿರುತ್ತದೆ. ಇಂತಹ ನೃಶಂಸ ಸ್ವಭಾವ ವಿಲ್ಲದಿರೋಣವು ಉತ್ಕೃಷ್ಟ ಧರ್ಮವೆಂದು **"ಆನೃಶಂಸ್ಯಂಪರೋಧರ್ಮಃ"** ಎಂದು ರಾಮಾವತಾರಿ ಯಾಗಿ ತಮ್ಮಿಂದ ಹೇಳಲ್ಪಟ್ಟಿತೆಂಬ ಭಾವವು ತೋರಿ ಬರುತ್ತದೆ. ಇಂತಹ ನೃಶಂಸ ಸ್ವಭಾವವು ತಮ್ಮಲ್ಲಿರಬಹುದೆಂದು ಯೋಚಿಸಿ ಹಿಂದಿನಶ್ಲೋಕದಲ್ಲಿ **ಪಾಪಾತ್ಮಾ** ಎಂದು ಹೇಳಿಕೊಂಡದ್ದನ್ನು ಜ್ಞಾಪಿಸುವುದಕ್ಕಾಗಿ ಇಲ್ಲಿ **ಪಾಪಿಷ್ಠಃ** ಎಂಬ ಪ್ರಯೋಗವು. ಯಾವ ಯಾವುವು ಮಹಾಪಾತಕಗಳೆಂಬುವುದಕ್ಕೆ ಶ್ರೀ ದೇಶಿಕರವರು ಅನೇಕ ಪ್ರಮಾಣಗಳನ್ನು ಉದಾಹರಿಸಿರುತ್ತಾರೆ. **"ಅನೃತಂ ಚ ಸಮುತ್ಕರ್ಷೇ ರಾಜಗಾಮಿಚ ಪೈಶುನಮ್। ಗುರೋಶ್ಚಾಲೀಕ ನಿರ್ಬಂಧಃ ಸಮಾನಿ ಬ್ರಹ್ಮ ಹತ್ಯಯಾ"** ತನ್ನ ಪ್ರಶಂಸೆಗಾಗಿ ಸುಳ್ಳುಹೇಳವುದೂ, ಧರ್ಮೋದ್ಧಾರಕನಾದ ರಾಜನ ವಿಷಯದಲ್ಲಿ ಇಲ್ಲದ ಆರೋಪಣೆ ಮಾಡುವುದೂ ತನ್ನ ಗುರುವಿನ ವಿಷಯದಲ್ಲಿ ನಿಂದಾರೂಪವಾದ ನಿರ್ಬಂಧವೂ ಇವುಗಳು ಬ್ರಾಹ್ಮಣನನ್ನುಕೊಂದ ಬ್ರಹ್ಮಘಾತುಕನ

ಅಪರಾಧಕ್ಕೆ ಸಮಾನಗಳು –**"ಪಿಶುನೋ ಯಶ್ಚವಿಪ್ರಾಣಾಂ ರಂಧ್ರಾನ್ವೇಷಣ ತತ್ಪರಃ । ದದ್ಯಾನ್ಮರ್ಮಾಂತಿಕಂ ಶೋಕಂ ಸೋಕ್ಷಯಂ ನರಕಂ ವ್ರಜೇತ್"** ಯಾವನು ಬ್ರಾಹ್ಮಣರ ವಿಷಯದಲ್ಲಿ ಚಾಡೀಕೋರನಾಗಿಯೂ, ಅವರಲ್ಲಿ ದೋಷಗಳೇನಿವೆ ಎಂದು ಹುಡುಕುವುದರಲ್ಲೇ ಆಸಕ್ತಿಯುಳ್ಳವನಾಗಿಯೂ, ಅವರ ಮರ್ಮವನ್ನು ಭೇದಿಸುವ ಶೋಕವನ್ನುಂಟುಮಾಡುವವನಾಗಿಯೂ ಇರುವನೋ ಅವನು ಶಾಶ್ವತವಾದ ನರಕವನ್ನು ಹೊಂದುವನು. **ದಹ್ಯಮಾನಾಸ್ಸುತೀವ್ರೇಣನೀಚಾಃ ಪರಯಶೋಗ್ನಿನಾ। ಅಶಕ್ತಾಸ್ತತ್ಪದಂ ಗಂತುಂ ತತೋನಿಂದಾಂ ಪ್ರಕುರ್ವತೇ** ನೀಚರಾದವರು ತುಂಬಾತೀಕ್ಷ್ಣವಾದ, ಇತರರಿಗುಂಟಾದ ಯಶಸ್ಸೆಂಬ ಅಗ್ನಿಯಿಂದ ಬೆಂದು ಹೋದ ಹೊಟ್ಟೇಕಿಚ್ಚಿನವರು, ಅಂತವರ ಉತ್ಕೃಷ್ಟದೆಶೆಯನ್ನು ಹೊಂದಲು ಅಶಕ್ತರಾಗಿ ಅಂತಹ ಮಹಾನುಭಾವರನ್ನು ನಿಂದಿಸುವರು.

**ಯೋರಾಜ್ಞಃ ಪ್ರಗೃಹ್ಯೈವ ಶೋಚಿತವ್ಯೇಪ್ರಹೃಷ್ಯತಿ। ಸನಜಾನಾತಿ ಮೂಢಾತ್ಮಾ ನರಕಾನೇಕ ವಿಂಶತಿಮ್"** ಯಾವನು ರಾಜನಮೂಲಕ ಉಪಕಾರ ಪಡೆದೂ ಆತನನ್ನು ಕುರಿತು ದುಃಖಿಸಬೇಕಾದ ವಿಷಯಗಳಲ್ಲಿ, ಆತನಿಗೆ ಹಾಗೆ ಆಗಬೇಕು ಎಂದು ಹೇಳಿ ಸಂತೋಷ ಪಡುವನೋ, ಅವನು ವಿವೇಕವಿಲ್ಲದ ಮೂಢನಾಗಿ ತನಗೆ ಇಪ್ಪತ್ತೊಂದು ನರಕಗಳು ಕಾದಿವೆ ಎಂಬುದನ್ನು ತಿಳಿಯನು. **ಕೃಷ್ಣಾಜಿನಪ್ರತಿಗ್ರಾಹೀ ರೇತಸಶ್ಚೈವ ವಿಕ್ರಯೀ! ಗಜಚ್ಛಾಯಾಸು ಭೋಕ್ತಾ ಚನ ಭೂಯಃ ಪುರುಷೋಭವೇತ್"** ಎಂದರೆ ಕೃಷ್ಣಾಜಿನವನ್ನು ದಾನವಾಗಿ ಪರಿಗ್ರಹಿಸುವವನು, ರೇತಸ್ಸನ್ನು ವಿಕ್ರಯಿಸುವವನೂ ಎಂದರೆ ಸ್ವಭಾರ್ಯೆಯಲ್ಲದ ಇತರ ಸ್ತ್ರೀಯರಲ್ಲಿ ಪ್ರಜೋತ್ಪತ್ತಿಗಾಗಿ ದ್ರವ್ಯವನ್ನು ತೆಗೆದುಕೊಳ್ಳುವವನೂ. ಗಜಚ್ಛಾಯಾ ದಿನಗಳಲ್ಲಿ ಊಟಮಾಡುವವನೂ ಇವರು ಮಹಾಪರಾಧಿಗಳಾದುದರಿಂದ ಪುನಃ ಪುರುಷರಾಗಿ ಜನ್ಮವೆತ್ತುವುದಿಲ್ಲವು ಎಂದರೆ ತಿರ್ಯಕ್ ಮೊದಲಾದ ಜನ್ಮವನ್ನೆತ್ತುವರೆಂಬ ಭಾವವು. **"ವಾದೇನ ಬ್ರಾಹ್ಮಣಂ ಜಿತ್ವಾ ಹೃಷ್ಟೋ ಭವತಿಯೋ ದ್ವಿಜಃ। ಶ್ಮಶಾನೇ ಪಾದಪಸ್ಸಸ್ಯಾತ್ ಗೃಧ್ರಕಂಕ ನಿಷೇವಿತಃ"** ವಾದದಿಂದ ಬ್ರಾಹ್ಮಣನನ್ನು ಜಯಿಸಿ ಯಾವ ದ್ವಿಜನು ಸಂತುಷ್ಟನಾಗುತ್ತಾನೋ ಆತನು ಸ್ಮಶಾನದಲ್ಲಿ ಹದ್ದು, ನರಿಗಳಿಗೆ ಆಶ್ರಯವಾದ ಮರವಾಗಿ ಹುಟ್ಟುವನು ಎಂಬ ಭಾವವು. ಇಲ್ಲಿ ಸಂತೋಷಪಡದೆ ತಪ್ಪು ತಿಳುವಳಿಕೆಯುಳ್ಳವನನ್ನು ಸರಿಯಾದ ತಿಳುವಳಿಕೆಯುಳ್ಳವನನ್ನಾಗಿ ಮಾಡುವುದಕ್ಕಾಗಿ ಮಾಡಿದ ವಾದವು ನಿಂದಿಸಲ್ಪಡಲಿಲ್ಲವು. **"ಗುರುಂತ್ವಂ ಕೃತ್ಯ ಹುಂ ಕೃತ್ಯ ವಿಪ್ರಂ ನಿರ್ಜಿತ್ಯ ವಾದತಃ । ಅರಣ್ಯೇ ನಿರ್ಜಲೇದೇಶೇಭವತಿ ಬ್ರಹ್ಮರಾಕ್ಷಸಃ"** ಗುರುವನ್ನು ನೀನು, ತಾನು ಎಂದು ಹೇಳಿ **ಹುಂ** ಎಂದು ಬೆದರಿಸಿ, ಬ್ರಾಹ್ಮಣನನ್ನು ವಾದದಲ್ಲಿ ಜಯಿಸಿದರೆ, ಆತನು ಅರಣ್ಯದಲ್ಲಿ ನೀರಿಲ್ಲದ ಪ್ರದೇಶದಲ್ಲಿ ಬ್ರಹ್ಮರಾಕ್ಷಸನಾಗುವನು.

**"ಯೋ ಮೋಹಾದಥವಾಲಸ್ಯಾದ ಕೃತ್ವಾದೇವತಾರ್ಚನಂ। ಭುಂಕ್ತೇಸ ಯಾತಿನರಕಾ‌ನ್ ಸೂಕರೇಷ್ವ ವಿಜಾಯತೇ"** ಯಾರು ಮೋಹದಿಂದಲಾಗಲಿ ಅಥವಾ ಆಲಸ್ಯದಿಂದಾಗಲಿ ದೇವತಾರ್ಚನೆಯನ್ನು ಮಾಡದೆ ಅಡಿಗೆಯನ್ನು ದೇವರಿಗೆ ಅರ್ಪಿಸದೆ ಊಟ ಮಾಡುತ್ತಾನೋ ಆತನು ನರಕವನ್ನಾಗಲಿ ಹಂದಿಯ ಜನ್ಮವನ್ನಾಗಲಿ ಹೊಂದುವನು. ಗೀತೆಯಲ್ಲಿ **"ತೇತ್ವ ಘಂ ಭುಂಜತೇ ಪಾಪಾಯೇ ಪಚಂತ್ಯಾತ್ಮ ಕಾರಣಾತ್"** ತನಗೋಸ್ಕರ ಯಾರು ಅಡಿಗೆ ಮಾಡಿ ಊಟ ಮಾಡುತ್ತಾರೆಯೋ ಅವರು ಪಾಪಿಗಳು ಅವರು ಪಾಪವನ್ನೇ ಭುಜಿಸುತ್ತಾರೆಂದು ಹೇಳಿದೆ. **"ಪಿತರಂ ಮಾತರಂ ವಾಪಿ ತಥಾದತ್ತಾ ಭಯಂ ಸುತಮ್। ತ್ಯಜೇಚ್ಚ ತರುಣೀಂ ಭಾರ್ಯಾಂ ತಂ ವಿದ್ಯಾದ್ಬ್ರಹ್ಮ ಘಾತುಕಮ್"** ತಂದೆಯನ್ನಾಗಲಿ ತಾಯಿಯನ್ನಾಗಲಿ, ಹಾಗೆಯೇ ಕಾಪಾಡುತ್ತೇನೆಂದು ಅಭಯವನ್ನು ಹೊಂದಿದವನನ್ನಾಗಲಿ ಮಗನನ್ನಾಗಲಿ ಮತ್ತು ಇನ್ನೂ ಚಿಕ್ಕವಳಾದ ಹೆಂಡತಿಯನ್ನಾಗಲಿ ಯಾವನು ಬಿಟ್ಟುಬಿಡುತ್ತಾನೋ ಅಂತವನನ್ನು ಬ್ರಹ್ಮ ಹತ್ಯವನ್ನು ಮಾಡಿದವನನ್ನಾಗಿ ತಿಳಿ. ಅಂತವನಿಗೆ ಸಮನಾಗಿ ತಿಳಿಯತಕ್ಕದ್ದೆಂದು ಭಾವವು. **"ರಾಕ್ಷಸಾಃ ಕಲಿಮಾಶ್ರಿತ್ಯ ಜಾಯನ್ತೇ ಬ್ರಹ್ಮಯೋನಿಷು। ಬ್ರಾಹ್ಮಣಾನೇವ ಬಾಧನ್ತೇ ವಿಷ್ಣುಭಕ್ತಾನ್ವಿಶೇಷತಃ"** ರಾಕ್ಷಸರು ಕಲಿಪುರುಷನನ್ನು ಆಶ್ರಯಿಸಿ ಎಂದರೆ ಅಧರ್ಮವನ್ನು ಮಾಡುತ್ತಾ ಬ್ರಾಹ್ಮಣ ಯೋನಿಗಳಲ್ಲೇ ಹುಟ್ಟುತ್ತಾರೆ. ಬ್ರಾಹ್ಮಣರನ್ನೇ ವಿಶೇಷವಾಗಿ ವಿಷ್ಣುಭಕ್ತರನ್ನೇ ಬಾಧಿಸುತ್ತಾರೆ. **"ವಿದ್ಯಾಚೋರೋ ಗುರುದ್ರೋಹೀ ವೇದೇಶ್ವರ ವಿದೂಷಕಃ। ತಏತೇ ಬಹುಪಾಪ್ಮಾನಃ ಸದ್ಯೋದಂಡ್ಯಾ ಇತಿಶ್ರುತಿಃ"** ಆಚಾರ್ಯರಿಂದ ಉಪದೇಶವನ್ನು ಹೊಂದಿ ಅದನ್ನು ಸತ್ಪಾತ್ರದಲ್ಲಿ ಉಪದೇಶಿಸದೇ ಇರುವವನು ವಿದ್ಯಾಚೋರನೆನಿಸುವನು. ಅವನೂ, ಆ ಕಾರಣದಿಂದಲೇ ಗುರುದ್ರೋಹಿಯೂ ಎಂದು ಅರ್ಥಮಾಡಬಹುದು. ಅಥವಾ ಬೇರೆ ಕಾರಣದಿಂದ ಗುರುವಿಗೆ ದ್ರೋಹ ಮಾಡುವವನೂ ಎಂದಾಗಲಿ ಅರ್ಥವಾಗಬಹುದು. ವೇದವನ್ನೂ ಈಶ್ವರನನ್ನೂ ದೂಷಿಸುವವನೂ. ಇವರೆಲ್ಲಾ ಬಹು ಪಾಪಗಳನ್ನು ಮಾಡಿದವರು. ಒಡನೆಯೇ ಶಿಕ್ಷಿಸಲು ಯೋಗ್ಯರು ಎಂದು ಶ್ರುತಿಯು ಹೇಳುತ್ತದೆ. **"ಪರ (ದ್ರೋಹೇ) ದ್ರವ್ಯೇಷ್ವ ಭಿಧ್ಯಾನಂ ಮನಸಾನಿಷ್ಟಚಿಂತನಮ್। ವಿತಥಾಭಿನಿವೇಶಶ್ಚ ತ್ರಿವಿಧಂ ಮಾನಸಂಸ್ಮೃತಮ್। ಪಾರುಷ್ಯ ಮನೃತಂ ಚೈವ ಪೈಶುನ್ಯಂಚೈವ ಸರ್ವಶಃ। ಅನಿಬದ್ಧ ಪ್ರಲಾಪಶ್ಚ ವಾಙ್ಮಯಂ ತಚ್ಚತುರ್ವಿಧಂ। ಅದತ್ತಾನಾ ಮುಪಾದಾನಂ ಹಿಂಸಾಚೈವಾ ವಿಧಾನತಃ। ಪರದಾರೋಪ ಸೇವಾಚಶಾರೀರಂ ತ್ರಿವಿಧಂಸ್ಮೃತಮ್।** ಇತರರ ದ್ರವ್ಯದಲ್ಲಿ ಚಿಂತೆಯೂ ಅಥವಾ ಇತರರಿಗೆ ದ್ರೋಹ ಮಾಡುವ ಆಲೋಚನೆಯೂ, ಮನಸ್ಸಿನಲ್ಲಿ ಕೆಟ್ಟದ್ದು ಮಾಡಬೇಕೆಂಬ

ಆಲೋಚನೆಯೂ ವ್ಯರ್ಥವಾಗಿ ದುರಾಲೋಚನೆಯೂ, ಈ ಮೂರು ಮನಸ್ಸಂಬಂಧವಾದ ಪಾಪಗಳು. ಕ್ರೂರವಾಗಿ ಮಾತನಾಡೋಣವೂ ಅನೃತವನ್ನು ಹೇಳುವುದೂ, ಚಾಡಿ ಹೇಳುವುದೂ ನಿಷ್ಕಾರಣವಾಗಿ ಕೂಗಾಡುವುದೂ ವಾಕ್ಕಿನ ಮೂಲಕವಾದ ನಾಲ್ಕು ವಿಧ ಪಾಪಗಳು. ಇತರರು ದಾನವಾಗಿಕೊಡದೇ ಇರುವುದನ್ನು ತಾನೆ ಪರಿಗ್ರಹಿಸುವುದೂ ಕದಿಯುವುದೂ, ಇತರರನ್ನು ಕಾರಣವಿಲ್ಲದೆ ಹಿಂಸಿಸುವುದೂ ಇತರರ ಹೆಂಡತಿಯನ್ನು ಪರಿಗ್ರಹಿಸುವುದೂ, ಈ ಮೂರೂ ಶರೀರ ಸಂಬಂಧವಾಗಿ ಮಾಡುವ ಪಾಪಗಳು, ಹೀಗೆ ಮೇಲೆ ಹೇಳಿದ ಪಾಪಗಳು ಪೂರ್ವ ಜನ್ಮಗಳಲ್ಲಿ ನೆಡೆದಿರಬಹುದೆಂಬ ಬಾವನೆಯಿಂದ **ಪಾಪಿಷ್ಠಃ** ಎಂದು ಹೇಳಿಕೊಂಡರು. **ಕಥಮಹಂ-** ಎಂಬಲ್ಲಿ ಇಂತಹ ಸಹಸ್ರಾಪರಾಧಿಯು ತಾನು ಎಂಬುದನ್ನು ಅಸ್ಮಚ್ಛಬ್ದವು ಬೋಧಿಸುತ್ತದೆ. ಅಥವಾ "**ದಯಾ ಸರ್ವಭೂತೇಷು ಕ್ಷಾಂತಿ ರನಸೂಯಾ ಶೌಚ ಮನಾಯಾಸೋ ಮಂಗಳ ಮಕಾರ್ಪಣ್ಯ ಮಸ್ಪೃಹಾ**" ಎಂದರೆ ಸರ್ವಪ್ರಾಣಿಗಳಲ್ಲೂ ದಯೆಯೂ, ಕ್ಷಮಾಗುಣ,ಅಸೂಯೆ ಇಲ್ಲದಿರೋಣವು, ಬಹಿ ಮತ್ತು ಅಂತಃ ಪರಿಶುದ್ಧತೆಯೂ, ಆಯಾಸವಿಲ್ಲದಿರೋಣವೂ ಮಂಗಳವೂ ಕಾರ್ಪಣ್ಯ ಮತ್ತು ಆಸೆ ಇಲ್ಲದಿರೋಣವೂ, ಇವುಗಳು ಯಾವುದೂ ಇಲ್ಲದ ಭಾವವನ್ನೂ ತೋರಿಸುವುದಕ್ಕಾಗಿ **ಅಹಂ** ಎಂಬ ಪ್ರಯೋಗವು.

**ಕಥಮಹ ಮುತ್ತೀರ್ಣಃ** ಎಂದಿರುವುದರಿಂದ ಆ ಉತ್ತೀರ್ಣತೆಗೆ ತನ್ನಲ್ಲಿ ಯಾವ ವಿಧ ಯೋಗ್ಯತೆಯೂ ಇಲ್ಲವೆಂಬ ಭಾವವು. ಇದರಿಂದ ಶರಣಾಗತ ವತ್ಸಲನೆಂಬ ಬಿರುದನ್ನು ಧರಿಸಿರುವ ನಿನ್ನ ಕೃಪೆಯಿಂದ ಏನಾದರೂ ಸಾಧ್ಯವಾಗಬೇಕೇ ವಿನಾ ಅನ್ಯಥಾ ಸಾಧ್ಯವಿಲ್ಲವೆಂಬ ಅಭಿಪ್ರಾಯವು ತೋರಿಬರುತ್ತದೆ. "**ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ**" ಎಂದು ಹೇಳಿ ಆಶ್ರಯಿಸಿದರೆ "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚಯಾ ಚತೇ | ಅಭಯಂ ಸರ್ವಭೂತೇಭ್ಯೋದದಾಮ್ಯೇತದ್ವ್ರತಂಮಮ**" ಎಂದು ಹೇಳಿರುವುದರಿಂದ ನಿನ್ನ ಕೃಪೆಯೊಂದೇ ತಾರಕವೇ ವಿನಾ ಇನ್ನು ಯಾವುದೂ ಅಲ್ಲವೆಂಬ ರಹಸ್ಯಾರ್ಥವು ಇಲ್ಲಿ ಬೋಧಿತವು. ಇದಕ್ಕೆ ನಿದರ್ಶನಗಳು ಕ್ಷತ್ರಬಂಧು, ವೃತ್ರಾಸುರಾದಿಗಳು. ಹಾಗೇ ಅಲ್ಲವೇ ಶರಣ್ಯನು ಗೀತೆಯಲ್ಲೂ ಹೇಳಿರುವುದು ? "**ಅಪಿಚೇತ್ಸು ದುರಾಚಾರೋ ಭಜತೇ ಮಾಮನನ್ಯಭಾಕ್ | ಸಾಧುರೇವ ಸಮಂತವ್ಯಸ್ಸಮ್ಯಗ್ವ್ಯವಸಿತೋಹಿಸಃ | ಕ್ಷಿಪ್ರಂಭವತಿ ಧರ್ಮಾತ್ಮಾ ಶಶ್ವತ್ ಶಾಂತಿಂನಿಗಚ್ಛತಿ | ಕೌನ್ತೇಯ ಪ್ರತಿಜಾನೀಹಿ ನಮೇ ಭಕ್ತಃ ಪ್ರಣಶ್ಯತಿ**" "ಈಗ ನನ್ನನ್ನು ಆಶ್ರಯಿಸಿರುವವನು ಹಿಂದೆ ಎಷ್ಟು ದುರಾಚಾರಿಯೋ ಆಗಲಿ, ಆತನು ಮುಂದಕ್ಕೆ ವಿಹಿತ ವೃತ್ತಿಯಲ್ಲಿದ್ದುಕೊಂಡು ನನ್ನನ್ನು ಆಶ್ರಯಿಸಬೇಕೆಂಬ ದೃಢಸಂಕಲ್ಪನಾಗಿರುವುದರಿಂದ ಪರಮಗ್ರಾಹ್ಯನಾಗಿ ಆತನನ್ನು ಸಾಧುವೆಂದೇ

ಭಾವಿಸತಕ್ಕದ್ದು. ಹೀಗೆ ಆತನು ಇಂತಹ ದೃಢಸಂಕಲ್ಪವುಳ್ಳವನಾಗುವುದರಿಂದ ಶೀಘ್ರವಾಗಿ ನನ್ನ ಪ್ರೀತಿಯನ್ನು ಸಂಪಾದಿಸಿಕೊಂಡು ಹಿಂದಿನ ಪಾಪಗಳೆಲ್ಲಾ ನಷ್ಟವಾಗಿ ಧರ್ಮಾತ್ಮನಾಗುತ್ತಾನೆ. ನನ್ನ ಪ್ರಾಪ್ತಿಗೆ ಅನುಕೂಲವಾದ ಶಾಂತಿಯನ್ನು ಹೊಂದುತ್ತಾನೆ. ಓ ಕುಂತೀ ಪುತ್ರನೇ, ನನ್ನ ಭಕ್ತನು ಎಂದಿಗೂ ಕೆಡುವುದಿಲ್ಲವೆಂಬ ವಿಷಯದಲ್ಲಿ ನೀನೇ ದೃಷ್ಟಾಂತವಾದುದರಿಂದ ನೀನೇ ನನಗಾಗಿ ಪ್ರತಿಜ್ಞೆಯನ್ನು ಮಾಡಬಹುದು." ಈ ಧರ್ಮಸೂಕ್ಷ್ಮವು ಇಲ್ಲಿ ಸೂಚಿತವು. ಶ್ರೀ ವೈಷ್ಣವ ಧರ್ಮಶಾಸ್ತ್ರದಲ್ಲೂ ಹೀಗೆಯೇ ಹೇಳಿರುತ್ತದೆ. **"ಅಪಿ ಪಾಪೇಷ್ವಭಿರತಾ ಮದ್ಭಕ್ತಾಃ ಪಾಂಡುನಂದನ | ಮುಚ್ಯಂತೇ ಪಾತಕೈಸ್ಸರ್ವೈಃ ಪದ್ಮಪತ್ರಮಿವಾಂಭಸಾ"** ಹಿಂದೆ ಎಷ್ಟು ಪಾಪಾನುಷ್ಠಾನಗಳಲ್ಲಿ ಅಭಿರುಚಿಯುಳ್ಳವರಾಗಿದ್ದರೂ ಯಾವಾಗ ನನ್ನ ಭಕ್ತರಾದರೋ ಅವರು, ಓ ಪಾಂಡುಕುಮಾರನೇ! ಸಮಸ್ತ ಪಾಪಗಳಿಂದಲೂ ಕಮಲದ ಎಲೆಯು ನೀರಿನಿಂದ ಅಂಟಲ್ಪಡದೇ ಇರುವ ಹಾಗೆ, ಬಿಡಲ್ಪಡುತ್ತಾರೆ. ಶ್ರೀ ಪುಂಡರೀಕ ನಾರದ ಸಂವಾದದಲ್ಲೂ ಹೀಗೆಯೇ ಹೇಳಲ್ಪಟ್ಟಿರುತ್ತದೆ. **"ಅಶ್ವಮೇಧ ಶತೈರಿಷ್ಟ್ವಾ ವಾಜಪೇಯ ಶತೇನಚ | ನ ಪ್ರಾಪ್ನುವಂತಿ ಸುಗತಿಂ ನಾರಾಯಣ ಪರಾಙ್ಮುಖಾಃ | ಯೇ ನೃಶಂಸಾ ದುರಾತ್ಮಾನಾಃ ಪಾಪಾಚಾರರತಾಸ್ತಥಾ | ತೇಪಿಯಾಂತಿ ಪರಂಧಾಮ ನಾರಾಯಣ ಸಮಾಶ್ರಯಾಃ"** ನೂರು ಅಶ್ವಮೇಧ ಯಾಗಗಳಿಂದಲೂ, ನೂರು ವಾಜಪೇಯ ಯಾಗಗಳಿಂದಲೂ ಯಜ್ಞಾನುಷ್ಠಾನ ಮಾಡಿದರೂ, ಶ್ರೀಮನ್ನಾರಾಯಣನಲ್ಲಿ ಶರಣಾಗತಿಯನ್ನು ಅನುಷ್ಠಿಸದವರು ಸದ್ಗತಿಯನ್ನು ಹೊಂದುವುದಿಲ್ಲವು. ಹಾಗಲ್ಲದೆ ಹಿಂದೆ ಯಾರು ಪ್ರಾಣಿಹಿಂಸಕರಾಗಿಯೂ ಕೆಟ್ಟ ಮನಸ್ಸುಳ್ಳವರಾಗಿಯೂ ಪಾಪಾಚರಣೆಯಲ್ಲೇ ಆಸಕ್ತಿಯುಳ್ಳವರಾಗಿದ್ದರೂ, ಅಂತವರೂ ಕೂಡ ಐಹಿಕದಲ್ಲಿ ಆಶೆಯನ್ನು ತೊರೆದವರಾಗಿ ನಾರಾಯಣನಾದ ನನ್ನನ್ನು ಆಶ್ರಯಿಸಿ, ಎಂದರೆ ನನ್ನಲ್ಲಿ ಶರಣಾಗತಿಯನ್ನನುಷ್ಠಿಸಿ ದಿವ್ಯ ವೈಕುಂಠವನ್ನು ಸೇರುವರು. ಹಾಗೆಯೇ ಸಾತ್ವತದಲ್ಲಿ ಹೇಳಿರುವುದೇನೆಂದರೆ **" ದುರಾಚಾರೋಪಿ ಸರ್ವಾಶೀ ಕೃತಘ್ನೋ ನಾಸ್ತಿಕಃ ಪುರಾ | ಸಮಾಶ್ರಯೇ ದಾದಿದೇವಂ ಶ್ರದ್ಧಯಾ ಶರಣಂ ಯದಿ | ನಿರ್ದೋಷಂ ವಿದ್ಧಿತಂ ಜಸ್ತುಂ ಪ್ರಭಾವಾತ್ಪರಮಾತ್ಮನಃ"** "ಹಿಂದೆ ಎಷ್ಟು ದುಷ್ಟವಾದ ಆಚಾರವುಳ್ಳವನಾಗಿಯೂ, ಎಲ್ಲವನ್ನೂ ಎಂದರೆ ದೋಷ ದುಷ್ಟಗಳಾದ ಎಲ್ಲಾ ರಾಜಸ ತಾಮಸ ಪದಾರ್ಥಗಳನ್ನು ಸೇವಿಸುವವನಾಗಿಯೂ, ಮಾಡಿದ ಉಪಕಾರವನ್ನು ಸ್ಮರಿಸದೆ ಅಪಕಾರ ಮಾಡುವವನಾಗಿಯೂ, ನಾಸ್ತಿಕನಾಗಿಯೂ ಇದ್ದರೂ ಕೂಡ, ಆದಿದೇವನಾದ ಭಗವಂತನನ್ನು ಶ್ರದ್ಧೆಯಿಂದ ಈಗ ಉಪಾಯವನ್ನಾಗಿ ವರಿಸಿ ಶರಣಾಗತಿಯ ಮೂಲಕ ಆಶ್ರಯಿಸಿದುದಾದರೆ, ಅಂತಹ ಪ್ರಾಣಿಯನ್ನು ಪರಮಪುರುಷನ ಪ್ರಭಾವದಿಂದ ನಿರ್ದೋಷಿ ಎಂಬುದಾಗಿ ತಿಳಿ" ಎಂದು ಹೇಳಲ್ಪಟ್ಟಿರುತ್ತದೆ. ಏಕೆಂದರೆ ಶಾಸ್ತ್ರದಲ್ಲಿ ಹೇಳಿರುವುದು, ಉಪಾಯಾನುಷ್ಠಾನವನ್ನು

ಮಾಡಿದ ಪ್ರಪನ್ನನಿಗೆ ಹಿಂದಿನ ಪಾಪಗಳೆಲ್ಲಾ ನಾಶವಾಗುತ್ತವೆ, ಮುಂದಿನ ಅಬುದ್ಧಿಪೂರ್ವಕವಾದ ಪಾಪಗಳು ಲೇಪಿಸುವುದಿಲ್ಲವು. ಬುದ್ಧಿಪೂರ್ವಕವಾಗಿ ಪ್ರಮಾದದಿಂದ ಅಪರಾಧವು ನಡೆದು ಹೋದರೆ ಅಲ್ಪದಂಡನೆಯನ್ನು ಕೊಟ್ಟು ಭಗವಂತನು ಅಂತವನಿಗೂ ಮೋಕ್ಷವನ್ನೀಯುವನೆಂದು ಶಾಸ್ತ್ರಗಳಲ್ಲಿ ವಿದಿತವು. ಹಾಗೆಯೇ ಇನ್ನೊಂದು ಕಡೆಯಲ್ಲೂ "**ಮೇರು ಮಂದರ ಮಾತ್ರೋಪಿರಾಶಿಃ ಪಾಪಸ್ಯ ಕರ್ಮಣಃ | ಕೇಶವಂ ವೈದ್ಯ ಮಾಸಾದ್ಯ ದುರ್ವ್ಯಾಧಿರಿವ ನಶ್ಯತಿ,**" ಮತ್ತು "**ಸಕೃತ್ ಸ್ಮೃತೋಪಿ ಗೋವಿಂದೋನೃಣಾಂ ಜನ್ಮಶತೈಶ್ಚಿತಮ್ | ಪಾಪರಾಶಿಂ ದಹತ್ಯಾಶು ತೂಲರಾಶಿ ಮಿವಾನಲಃ**" ಎಂದರೆ "ಪಾಪಕರ್ಮಗಳ ರಾಶಿಯು, ಮೇರು ಮತ್ತು ಮಂದರ ಪರ್ವತಗಳ ಹಾಗೆ ವಿಪರೀತವಾಗಿದ್ದರೂ ಕೇಶವನೆಂಬ ವೈದ್ಯನಿಂದ ಕೆಟ್ಟ ವ್ಯಾಧಿಯೋಪಾದಿಯಲ್ಲಿ ನಾಶವಾಗುತ್ತದೆ." ಮತ್ತು "ಒಂದು ಸಲ ಸ್ಮರಿಸಿದರೂ ಕೂಡ ಎಂದರೆ ಶರಣಾಗತಿಯನ್ನನುಷ್ಠಿಸಿ ಆಶ್ರಯಿಸಿದರೂ, ಗೋವಿಂದನು, ಮನುಷ್ಯರಿಂದ ಅನೇಕ ಜನ್ಮಗಳಿಂದ ಕೂಡಿ ಹಾಕಲ್ಪಟ್ಟ ಪಾಪರಾಶಿಯನ್ನು, ಅಗ್ನಿಯು ಹತ್ತಿಯ ರಾಶಿಯನ್ನು ಬೇಗ ಸುಟ್ಟು ಬಿಡುವ ಹಾಗೆ ದಹಿಸಿಬಿಡುವನು.

ಇಲ್ಲಿ ಯಾಮುನ ಮುನಿಗಳು **ಅಮರ್ಯಾದಃ ಕ್ಷುದ್ರಃ** ಹೀಗೆಲ್ಲಾ ಹೇಳಿರುವುದರಿಂದ ಅವರಲ್ಲೇ ಇಂತಹ ಸಹಸ್ರ ದೋಷಗಳೆಲ್ಲಾ ಇದ್ದವೆಂದೂ ಅದಕ್ಕಾಗಿ ಪರಿತಾಪ ಪಟ್ಟರೆಂದೂ ಅರ್ಥಮಾಡಿದರೆ ಅರ್ಥ ಸ್ವಾರಸ್ಯವೂ ಇಲ್ಲವಾಗುವುದು ಮಾತ್ರವೂ ಅಲ್ಲದೆ ಭರನ್ಯಾಸಾನುಷ್ಠಾನ ಮಾಡಿದ ಅನಂತರವೂ, ಈ ದುಃಖ ಜಲಧಿಯಿಂದ ಉತ್ತೀರ್ಣನಾಗುವುದೆಂತು ಎಂದು ಅರ್ಜುನನಿಗೆ ಕೊನೆಯಲ್ಲಿ ಶೋಕವೇಗವುಂಟಾದ ಹಾಗೆ, ಶೋಕಿಸಿದರು ಎಂದು ಅರ್ಥ ಹೇಳಬೇಕಾಗಿ ಬರುವುದರಿಂದ, ಮಹಾ ವಿಶ್ವಾಸ ರೂಪವಾದ ಅಂಗವೇ ಅವರಿಗೆ ಭರನ್ಯಾಸ ಕಾಲದಲ್ಲಿರಲಿಲ್ಲವೆಂದಾಗುತ್ತದೆ. ಇದು ಶಾಸ್ತ್ರವಿರುದ್ಧವಾದುದಾಗುತ್ತದೆ. ಅಭಿಪ್ರಾಯವೇನೆಂದರೆ ಸ್ವಾಮಿಯ ಕಾರುಣ್ಯವೂ, ಸರ್ವಶಕ್ತತೆಯೂ ಇಲ್ಲದೆ ಹೋಗಿದ್ದರೆ ಪರಿತಾಪಕ್ಕೆ ಕಾರಣವೇ ವಿನಾ ಈಗ ಅಂತಹ ಪರಿತಾಪಕ್ಕೆ ಕಾರಣವಿಲ್ಲವೆಂಬುದು ಮುಖ್ಯಾಭಿಪ್ರಾಯವು. ಇದನ್ನೇ ಮುಂದಿನ ಶ್ಲೋಕವಾದ "ರಘುವರ" ಎಂಬ ಶ್ಲೋಕವಲ್ಲಿ ಉಪಪಾದಿಸುತ್ತಾರೆ. ಮಹಾ ಕೃಪಾಳುವಾದುದರಿಂದ ಈ ಸರ್ವಾಪರಾಧಗಳನ್ನೂ ನೀನು ಕ್ಷಮಿಸಿ ರಕ್ಷಿಸುತ್ತೀ ಎಂದು ಹೇಳುತ್ತಾರೆ. ಪ್ರಪನ್ನನಿಗೆ ಆಶ್ರಯಕ್ಕೆ ಪೂರ್ವಭಾವಿಯಾಗಿ ಇಂತಹ ಸಹಸ್ರಾಪರಾಧಗಳಿದ್ದರೂ ಎಲ್ಲವೂ ನಶಿಸಿ ಹೋಗುತ್ತವೆಂಬುದು ಸಾರಭೂತಾರ್ಥವು. "**ನಮೇ ಭಕ್ತಃಪ್ರಣಶ್ಯತಿ**" ಎಂಬುದನ್ನೇ ಮುಖ್ಯವಾಗಿ ಗಮನಿಸತಕ್ಕದ್ದಾಗಿರುತ್ತದೆ.

ಈ ಶ್ಲೋಕದಲ್ಲಿ **ಇತಃ** ಎಂಬುದರ ಅಭಿಪ್ರಾಯವು ಊರ್ಮಿಷಟ್ಕಗಳ ಬಾಹುಳ್ಯ ದಿಂದ ಅತಿ ದುಸ್ಸಹವಾದ ಅವಸ್ಥೆಯ ದೆಶೆಯಿಂದ ಎಂಬುದು. ದುಃಖಶಬ್ದವು ವಿಷದಿಂದ ಕೂಡಿದ ಮಧುವಿನ ನ್ಯಾಯದಿಂದ ಸಂಸಾರದಲ್ಲಿ "**ಸುಖ ಸ್ಯಾನಂತರಂ ದುಃಖಂ, ದುಃಖ ಸ್ಯಾನಂತರಂ ಸುಖಂ**" ಎಂಬಲ್ಲಿ ಹೇಳಿರುವ ಹಾಗೆ ಸುಖ ದುಃಖಗಳು ಮಿಳಿತವಾಗಿರುವುದರಿಂದ ಸುಖವು ಅಶಾಶ್ವತವಾಗಿ ಅಲ್ಪವಾದುದಾದು ದರಿಂದ ಈ ಸುಖವೂ ಈ ದುಃಖಶಬ್ದದಿಂದಹೇಳಲ್ಪಟ್ಟಿತು. ಮಗುವಿಲ್ಲವೆಂಬ ಕಾಮನೆಯಿಂದ ಪುತ್ರನನ್ನು ಹೊಂದುವಸುಖವನ್ನು ಹೊಂದಿ ತನ್ಮೂಲಕ ನಾನಾವಿಧ ದುಃಖಗಳಿಗೆ ಗುರಿಯಾಗಿರುವುದನ್ನು ಕಂಡಿರುವೆವು. **ದುಃಖ** ಬಾಹುಳ್ಯದಿಂದ **ಜಲಧಿ** ಎಂದು ರೂಪಕಮಾಡಿ, ಅದನ್ನು ದಾಟುವುದು ದುಸ್ತರವೆಂದು ತಿಳಿಸುವುದಕ್ಕಾಗಿ **ಅಪಾರಾತ್** ಎಂಬ ಪ್ರಯೋಗವು. ಯಾವಾಗ ಪಾರವಿಲ್ಲವೋ ಆಗ ನಿಮಜ್ಜಾ ಮಿ-ಮುಳುಗಿ ಹೋಗುತ್ತೇನೆ ಎಂದು **ಶರಣದ** ಎಂದೂ ಹಿಂದೆ ಘಟ್ಟಿಯಾಗಿ ಕೂಗಿಕೊಂಡರು.

**ಉತ್ತೀರ್ಣ** ಶಬ್ದದಿಂದ ಇಷ್ಟಪ್ರಾಪ್ತಿಯಾದ **ತವಚರಣಯುಗ್ಮಗಳಲ್ಲಿ ಪರಿ ಚರಣಕ್ಕೆ ಸಂಪೂರ್ಣಾನಿಷ್ಟ ನಿವೃತ್ತಿಯು** ಬೋಧಿತವು. ಸರ್ವ ಪಾಪಗಳಿಂದ ವಿಪ್ರಮೋಕ್ಷವೇ ಉತ್ತೀರ್ಣತೆಯು ಎಂಬ ಭಾವವು. ಪರಿಶುದ್ಧವಾದ ಪ್ರಾಪ್ಯವಾಗಿ ರುವ ನಿನಗೆ, ಇಂತಹ ಸಹಸ್ರಾಪರಾಧಿಯಾದ ನಾನು ನಿನ್ನ ಕೃಪಾ ಪ್ರಭಾವ ಮಾತ್ರ ಇಲ್ಲದೇ ಹೋದುದಾದರೆ ಹೇಗೆ, ನಿತ್ಯ ಕೈಂಕರ್ಯವನ್ನೆಸಗುವ ನಿರತಿಶಯ ಸುಕೃತವನ್ನು ಹೊಂದುವೆನು ? ಎಂಬುದು ಸ್ವಾರಸ್ಯಾರ್ಥವು.

**ತವಪರಿಚರೇಯಂ ಚರಣಯೋಃ** ಎಂಬುದರಿಂದ ಮುಕ್ತದೆಶೆಯಲ್ಲಿ ಈ ಚೇತನನಿಗೆ ಉಂಟಾಗುವ ಸರ್ವಾತಿಶಯಗಳೂ ಶ್ರುತಿಯಲ್ಲಿ ಹೇಳಿರುವಂತೆ ಎಲ್ಲಾ ಬೋಧಿತವು. "**ಯೇನ ಯೇನ ಧಾತಾಗಚ್ಛತಿ ತೇನ ತೇನ ಸಗಚ್ಛತಿ ತರ್ಯಥಾ ತರುಣ ವತ್ಸಾ ವತ್ಸಲ ವತ್ಸೋಽಪಾ ಮಾತರಂ ಛಾಯಾ ವಾಸತ್ವಲ ಅನುಗಚ್ಛೇತ್ ತಥಾ ಪ್ರಕಾರಮ್**" ಎಂದರೆ "ಯಾವ ಯಾವ ಮಾರ್ಗಗಳಲ್ಲಿ ಸೃಷ್ಟಿಕರ್ತನು ಹೋಗುವನೋ ಆಯಾ ಮಾರ್ಗಗಳಲ್ಲೇ ಆತನನ್ನು ಅನುಸರಿಸಿ ಈ ಮುಕ್ತನೂ ಹೋಗುವನು. ಹೇಗೆ ಎಳೇ ಕರುವುಳ್ಳ ಧೇನುವು ತನ್ನ ಕರುವನ್ನಾಗಲಿ, ಕರುವು ತನ್ನ ತಾಯಿಯನ್ನಾಗಲಿ, ಛಾಯೆಯು ಪ್ರಾಣಿ ಯನ್ನಾಗಲಿ ಹೇಗೆ ಅನುಸರಿಸಿ ಹೋಗುತ್ತದೋ ಹಾಗೆ ಈ ಮುಕ್ತನೂ ಹೋಗುವನು" ಎಂದೂ, "**ಏತಮಾನಂದಮಯ ಮಾತ್ಮಾನಮುಪಸಂಕ್ರಮ್ಯ। ಇಮಾನ್ಲೋಕಾನ್‌ಕಾಮಾನ್ನೀ ಕಾಮರೂಪ್ಯನು ಸಂಚರನ್**" (ತೈಭೃಗು) ಆನಂದವೇ ಸ್ವರೂಪ ಮತ್ತು ಗುಣಗಳನ್ನಾಗಿ ಉಳ್ಳ ಭಗವಂತನನ್ನು ಹೊಂದಿ ಆತನ ಕಲ್ಯಾಣ ಗುಣಗಳನ್ನು ಅನುಭವಿಸುತ್ತ ತನ್ನಿಷ್ಟಾನುಸಾರ ರೂಪಗಳನ್ನು

**ರಘುವರ ಯದ ಭೂಸ್ತ್ವಂ ತಾದೃಶೋ ವಾಯಸಸ್ಯ**
**ಪ್ರಣತ ಇತಿ ದಯಾಳು ರ್ಯಚ್ಚ ಚೈದ್ಯಸ್ಯ ಕೃಷ್ಣಃ |**
**ಪ್ರತಿ ಭುವಮಪರಾದ್ಧು ರ್ಮುಗ್ಧ ಸಾಯುಜ್ಯದೋಭೂಃ**
**ವದ ಕಿ ಮಪದ ಮಾಗಸ್ತಸ್ಯ ತೇಸ್ತಿ ಕ್ಷಮಾಯಾಃ ||೬೩||**

ಧರಿಸಿಕೊಂಡು, ಈ ಲೋಕಗಳಲ್ಲೂ ಅಕಾಮರೂಪಿಯಾದ ಭಗವಂತನನ್ನು ಅನುಸರಿಸಿ ಸಂಚರಿಸುವನು. ಇಲ್ಲಿ ಸ್ವಾಮಿಯು ಭೋಗ್ಯವಾಗಿಯೂ ಈ ಮುಕ್ತ ಚೇತನನು ಭೋಕ್ತಾವಾಗಿಯೂ ಇರುವ ಭಾವವು ಉಪಪಾದಿಸಲ್ಪಟ್ಟಿರುವುದರಿಂದ ಮುಕ್ತದೇಶೆಯಲ್ಲಿ ಅದ್ವೈತಿಗಳು ಹೇಳುವ ಸ್ವರೂಪೈಕ್ಯಭಾವವು ನಿರಸ್ತವು. ಈ ವಾಕ್ಯದ ಹಿಂದೆ ಪರಮಾತ್ಮನು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯನೆಂದು ಹೇಳಿ ಕೊನೆಗೆ ಆನಂದಮಯನೆಂದು ಹೇಳಲ್ಪಟ್ಟಿರುವುದು ಹೇಗೆ ಎಂದರೆ ತತ್ತಚ್ಛರೀರಕ ಪರಮಾತ್ಮನೆಂದು ಆ ಸಂದರ್ಭಗಳಲ್ಲಿ ಭಾವಿಸ ತಕ್ಕದಾಗಿರುತ್ತದೆ. ಈ ಲೋಕದಿಂದ ದೇಹಾವಸಾನದಲ್ಲಿ ಹೊರಟು ಅರ್ಚಿರಾದಿ ಗತಿಯನ್ನು ಹೊಂದಿ, ಸಮಷ್ಟಿವ್ಯಷ್ಟಿವಿಭೂತಿಕನಾದ, ನಿರತಿಶಯಾನಂದಮಯ ನಾದ ಭೋಗ್ಯಭೂತನಾದ, ಪರಮಾತ್ಮನನ್ನು ಭೋಕ್ತವಾದ ಈ ಮುಕ್ತ ಚೇತನನು ಹೊಂದಿ ಆತನನ್ನು ಅನುಭವಿಸಿ, ಆತನನ್ನು ಸ್ತುತಿಸಿ ಆತನಿಗೆ ಕೈಂಕರ್ಯವನೆಸಗುವ ನೆಂಬುದು ಶ್ರುತಿವಾಕ್ಯಗಳ ತಾತ್ಪರ್ಯವು. ಹೀಗಿರುವಾಗ ಸ್ವರೂಪೈಕ್ಯವನ್ನು ಯಾವ ಧೈರ್ಯದಿಂದ ಹೇಳುವರೋ ತಿಳಿಯದು. "**ಸತತ್ರ ಪರ್ಯೇತಿ ಜಕ್ಷತ್ರೀಡ ನ್ರಮಮಾಣಃ**" ಇತ್ಯಾದಿ (ಛಾಂದೋಗ್ಯ) ಹಿಂದೆ "**ಸ ಉತ್ತಮಃ ಪುರುಷಃ**" ಎಂದಿರುತ್ತದೆ. ಹೇಯ ಭಾವವನ್ನು ಕಳೆದುಕೊಳ್ಳುತ್ತಾನೆ. ಮುಕ್ತದೆಶೆಯಲ್ಲಾ ದುದರಿಂದ ಪರಮ ಪುರುಷನಿಗೆ ಸಮಾನನಾಗಿ ಆತನ ಕಲ್ಯಾಣ ಗುಣಗಳನ್ನೂ, ದಿವ್ಯ ಮಂಗಳ ವಿಗ್ರಹವನ್ನೂ, ಪರಿಪೂರ್ಣನಾಗಿರುವ ವೈಭವವನ್ನೂ ಅನುಭವಿಸು ವನು ; ಅಥವಾ ಮೇಲಿನ ಶ್ರುತಿವಾಕ್ಯಕ್ಕನುಸಾರವಾಗಿ ಭಗವಂತನನ್ನು ಹಿಂಬಾಲಿಸಿ ಸಂಚರಿಸುವನು. ತನ್ನ ಇಷ್ಟಾನುಸಾರ ಸಂಚರಿಸುವನು, ಭೋಗಗಳನ್ನು ಅನುಭವಿಸುವನು. ಹೀಗೆ ಪರಮಾತ್ಮನೊಂದಿಗೆ ಸೇರಿ ಸಂಚಾರ ಅನುಭವಾದಿಗಳು ಹೇಳಿರುವಾಗ ಸ್ವರೂಪೈಕ್ಯದ ಉಪಪಾದನೆಯು ತುಂಬಾಕಷ್ಟವು.

**ಅವತಾರಿಕೆಯು:**-ಹಿಂದಿನ **ಶ್ಲೋಕ**ದಲ್ಲಿ ವಿವರಿಸಿದ ಹಾಗೆ ಲೆಖ್ಖವಿಲ್ಲದ ಪಾಪಗಳನ್ನು ಮಾಡಿರುವ ತಾವು **ಕಥಂ** ಹೇಗೆ ಈ ಸಂಸಾರವೆಂಬ ದುಃಖಜಲಧಿ ಯನ್ನು ದಾಟಿ ಸ್ವಾಮಿಯ ಸಾಯುಜ್ಯವನ್ನು ಹೊಂದುವುದು ? ಎಂಬುದಕ್ಕೆ ಮಹಾ ವಿಶ್ವಾಸದಿಂದ ಹೇಳುತ್ತಾರೇನೆಂದರೆ "**ವಿದಿತಸ್ಸಹಿ ಧರ್ಮಜ್ಞಶ್ಶರಣಾಗತ ವತ್ಸಲಃ**" ಎಂದು ನಿನ್ನ ಪತ್ನಿಯು ಅಪರಾಧ ಚಕ್ರವರ್ತಿಯಾದ ದುರುಳ ದಶಕಂಠನಿಗೆ ಬೋಧಿಸಿರುವ ರೀತಿಯಲ್ಲಿ, ಎಷ್ಟು ಅಪರಾಧಿಯಾಗಿದ್ದರೂ ನೀನು ಮನ್ನಿಸಿರುವುದನ್ನು, ರಾಮಾವತಾರಿಯಾಗಿ ದುಷ್ಟ ವಾಯಸನಿಗೆ ಪ್ರಾಣದಾನವನ್ನೂ,

ಕೃಷ್ಣಾವತಾರಿಯಾಗಿ ಶಿಶುಪಾಲನಿಗೆ ಸಾಯುಜ್ಯವನ್ನೂ ದಯಪಾಲಿಸಿದ ತೆರದಿ, ಯೋಚಿಸಿದರೆ, ತಮಗೂ ನಿನ್ನ ಕ್ಷಮೆಯು ಏರ್ಪಡುವುದರಲ್ಲಿ ಸಂದೇಹವೇ ಇರುವು ದಿಲ್ಲವು. ನಿನ್ನ ಕ್ಷಮಾಗುಣದ ಎದುರಿಗೆ ಯಾವ ಅಪರಾಧ ತಾನೇ ನಿಂತೀತು ? ನೀನೇ ಹೇಳತಕ್ಕದ್ದಾಗಿರುತ್ತದೆ ಎಂದು ಉಪಾಯಾನುಷ್ಠಾನಕಾಲದ ಮಹಾವಿಶ್ವಾಸ ವನ್ನು ಪೂರ್ವ ಪಕ್ಷ ಸಿದ್ಧಾನ್ತ ರೂಪದಲ್ಲಿ ಸ್ಥಾಪಿಸುತ್ತಾರೆ.

**ಅರ್ಥವು**–ಹೇ **ರಘುವರ** – ರಘುಕುಲದಲ್ಲಿ ದಶರಥಪುತ್ರನಾಗಿ ಹುಟ್ಟಿದುದ ರಿಂದ ರಘುಕುಲೋತ್ತಮನೆಂದು ಹೇಳಿಸಿಕೊಳ್ಳುವನೇ; **ತ್ವಂ** –"**ರಾಘವಂ** ಶೋಭಯನ್ತ್ಯೇತೇ" ಎಂಬಲ್ಲಿ ಹೇಳಿರುವ ಹಾಗೆ ಷಾಡ್ಗುಣ್ಯ ಪರಿಪೂರ್ಣನಾದ ನೀನು, **ತಾದೃಶಃ**–ನಾನು ಹಿಂದಿನ ಶ್ಲೋಕದಲ್ಲಿ ಹೇಳಿದ ಅಪರಾಧಗಳಿಗೂ ಮೀರಿದ ಅಪರಾದ ಮಾಡಿದುದರಿಂದ ಅಂತಹ ಅಪರಾಧಿಯೇ ಎಂದೇ ಇಟ್ಟುಕೊಳ್ಳ ಬಹುದಾದ, **ವಾಯಸಸ್ಯ**–ಇಂದ್ರನ ಮಗನೆಂಬ ಹೆಮ್ಮೆಯಿಂದ ಅಂತಃಪುರದ್ರೋಹಿ ಯಾದ ವಾಯಸನಿಗೆ, **ಪ್ರಣತ ಇತಿ**–ಅಲ್ಲಿ ಇಲ್ಲಿ ಹೋಗಿ, ರಕ್ಷಿಸು ಎಂದು ಬೇಡಿ, ಯಾರೂ ಸಹಾಯ ಮಾಡದೆ ಕಡೆಗೆ ಬಂದು ನಿನ್ನ (ಶ್ರೀರಾಮನ) ಪಾದದಲ್ಲೇ ಬಿದ್ದು ನಮಸ್ಕರಿಸಿದನು, ಶರಣಾಗತನಾದನು ಎಂದು ಭಾವಿಸಿ **ದಯಾಳುಃ**– ದಯೆಗೆ ಅನರ್ಹನಾಗಿದ್ದರೂ ದಯೆಯನ್ನು ತೋರಿಸುವ ಸ್ವಭಾವನಾಗಿ, **ಯತ್ ಅಭೂಃ** ಯಾವ ಕಾರಣದಿಂದ ಆದೆಯೋ; ಮತ್ತು **ಕೃಷ್ಣಃ** ಕೃಷ್ಣಾವತಾರಿ ಯಾಗಿ ನೀನು, **ಹೆಮುಗ್ಧ**–"**ಅವಿಜ್ಞಾತಾ**" ಎಂದು ಸಹಸ್ರ ನಾಮದಲ್ಲಿ ಹೇಳಿರುವ ಹಾಗೆ ಆಶ್ರಿತನ ಅಪರಾಧಗಳ ವಿಷಯದಲ್ಲಿ ಜ್ಞಾನವೇ ಇಲ್ಲದಿರುವ, **ಪ್ರತಿಭವಂ**– ಪ್ರತಿಯೊಂದು ಜನ್ಮದಲ್ಲೂ ಎಂದರೆ ಹಿಂದೆ ಹಿರಣ್ಯಕಶಿಪುವಾಗಿಯೂ ಅನಂತರ ರಾವಣನಾಗಿಯೂ, ಈ ಮೂರನೆಯ ಜನ್ಮದಲ್ಲಿ ಶಿಶುಪಾಲನಾಗಿಯೂ **ಅಪರಾದ್ಧುಃ**–ಇದಕ್ಕೂ ಹೆಚ್ಚಾದ, ತನ್ನ ಭಕ್ತನ ವಿಷಯದಲ್ಲಿ ನಾನಾವಿಧ ಚಿತ್ರ ಹಿಂಸೆಯ ರೂಪವಾದ ಅಪರಾಧಗಳೇನು, ನಿನ್ನ ಪತ್ನಿಗೆ ಅಪರಾಧ ಅಪಹಾರವೇನು, ಇಂತಹ ಕ್ರೂರಗಳಾದ ಅಪರಾಧಗಳನ್ನು ಸದಾ ಮಾಡುತ್ತಿದ್ದ, **ಚೈದ್ಯಸ್ಯ**–ಅದಕ್ಕೂ ಹೆಚ್ಚಾದ ಅಪರಾಧವನ್ನು ಸದಾ ಮಾಡುತ್ತಿರುವ ಶಿಶುಪಾಲನಿಗೆ **ದಯಾಳುಃ**– ದಯಾಶೀಲನಾಗಿ **ಸಾಯುಜ್ಯದಃ**–ಹೀಗಿದ್ದರೂ ಸಾಯುಜ್ಯವನ್ನು ಕೊಟ್ಟವನು, **ಯತ್ ಅಭೂಃ**–ಯಾವ ಕಾರಣದಿಂದ ಆದೆಯೋ, ಆ ಕಾರಣದಿಂದ, **ತಸ್ಯ**–ಅಂತಹ ಮಹಿಮೆಯುಳ್ಳ. **ತೇ**–ಕರುಣಾನಿಧಿಯಾಗಿಯೂ ಸಮರ್ಥ ನಾಗಿಯೂ ಇರುವ ನಿನ್ನ. **ಕ್ಷಮಾಯಾಃ**–ಕ್ಷಮಾಗುಣಕ್ಕೆ **ಅಪದಂ**–ವಿಷಯವಲ್ಲ ದಿರುವ, **ಆಗಃ**–ಅಪರಾಧವು **ಕಿಂ ಅಸ್ತಿ** – ಯಾವುದು ತಾನೇ ಇದೆ. ಹಾಗೆ ಏನಾದರೂ ಇದ್ದ ಪಕ್ಷದಲ್ಲಿ, **ವದ**–ನನಗೆ ತಿಳಿಸು. ಅಂತಹ ನಿನ್ನ ಕ್ಷಮಾಗುಣಕ್ಕೆ ವಶವಿಲ್ಲದ ಅಪರಾಧವೇ ಇಲ್ಲವು. ಇದೆ ಎಂದು ನಿನಗೆ ಹೇಳಲೂ ಸಾಧ್ಯವಿಲ್ಲವು.

ನಿನ್ನ ಕ್ಷಮಾಗುಣವು ಮನ್ನಿಸದೇ ಇರುವ ಯಾವ ಪಾಪತಾನೇ ಇರುತ್ತದೆ. ಎಂಬ ಭಾವವು. ನಿನ್ನ ಕ್ಷಮಾಗುಣವು ಸರ್ವಾಪರಾಧಗಳನ್ನೂ ಮರೆಯುವ ಹಾಗೆ ಮಾಡುತ್ತದೆಂಬುದು ಮುಖ್ಯ ತಾತ್ಪರ್ಯವು. ಈ ಶ್ಲೋಕದಿಂದ, ಯಾಮುನಮುನಿ ಗಳಿಗೆ ಶರಣಾಗತಿಕಾಲದಲ್ಲೂ ಅನಂತರವೂ ಮಹಾವಿಶ್ವಾಸವು ಇರಲಿಲ್ಲವೆಂಬ ಆಕ್ಷೇಪವು ನಿರಸ್ತವು.

**ಉಪಪಾದನೆಯು.**– ನಾನು ಹಿಂದಿನ ಶ್ಲೋಕದಲ್ಲಿ ಹೇಳಿದ ಅಪರಾಧಗಳನ್ನು ಹೇಗೆ ಮನ್ನಿಸುತ್ತೀ ಎಂದು ಹೇಳಿದ ಮಾತು ಹಾಗಿರಲಿ, ನಿನ್ನ ವಿಷಯದಲ್ಲೇ ಮಾಡ ಬಾರದ, ಕ್ಷಂತವ್ಯವೇ ಅಲ್ಲದ, ಅಪರಾಧಗಳನ್ನೂ ಮನ್ನಿಸಿರಕ್ಷಿಸಿರುವ ನಿದರ್ಶನಗಳಿರು ವಾಗ, ಅದರಮುಂದೆ, ನನ್ನ ಅಪರಾಧಗಳನ್ನು ಮನ್ನಿಸುವುದೆಂಬುದರಲ್ಲಿ ಸಂದೇಹ ವೆಲ್ಲಿಯದು ? ಆದುದರಿಂದ ನಿನ್ನ ನಿರತಿಶಯ ದಯಾಕ್ಷಮಾಗುಣ ಗಳಿಂದ ನಿವಾರಣೆ ಯನ್ನು ಹೊಂದದ ಯಾವ ಅಪರಾಧವಿರುತ್ತದೆಂದು ಕೇಳುತ್ತಾರೆ. ಸರ್ವಶಕ್ತನಿಗೆ ಎಂತಹ ಹೀನಾಪರಾಧವನ್ನೂ ಹೋಗಲಾಡಿಸಲು ಅಶಕ್ತತೆ ಇಲ್ಲವೆಂಬ ಭಾವವು. ಏಕೆಂದರೆ **"ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕಥಂಚನ"** ನಾನು ಸರ್ವ ರಕ್ಷಕನೆಂದು ಭಾವಿಸಿ ಆಶ್ರಯಿಸಿದವನನ್ನು ಅಥವಾ **"ಸರ್ವಸ್ಯ ಶರಣಂ ಸುಹೃತ್"** ಎಂದು ಭಾವಿಸಿ ಬಂದವನನ್ನು ಕೈಬಿಡಲು ನನಗೆ ಶಕ್ತಿ ಇಲ್ಲವೆಂದು ನೀನೇ ಹೇಳಿಕೊಂಡಿರುತ್ತೀಯೆ. ಆಗಲಿ ಮಹಾಪರಾಧಿಯಾದರೂ ಕೈಬಿಡುವುದಿ ದಿಲ್ಲವೋ ಎಂದರೆ **"ದೋಷೋಯದ್ಯಪಿ ತಸ್ಯಸ್ಯಾತ್ಸ ತಾಮೇತದಗರ್ಹಿತಮ್"** ದೋಷವಿದ್ದರೇನು ? ಅಂತಹವನನ್ನೂ ರಕ್ಷಿಸುವುದೇನೂ ಸತ್ಪುರುಷರಿಗೆ ನಿಂದಿತ ವಾದುದಲ್ಲವೆಂದು ಹೇಳಿದ ಅಭಯ ಪ್ರದಾನ ವಾಕ್ಯವನ್ನು ಈ ಶ್ಲೋಕವು ಸೂಚಿಸುತ್ತದೆ.

**ರಘುವರ** ಎಂಬ ಸಂಬೋಧನೆಯಿಂದ, ರಘುವಂಶದವರು ಶರಣಾಗತ ರಕ್ಷಣದಲ್ಲಿ ದೀಕ್ಷಿತರು, ಬದ್ಧಕಂಕಣರು ಎಂದು ಭಾವಿಸಿ, ತಾನು ಶರಣಾಗತವತ್ಸಲ ನೆಂಬುದನ್ನು ಪ್ರಕಟಿಸಲು ರಘುವಂಶವೇ ಸರ್ವಶ್ರೇಷ್ಠವೆಂದು ಭಾವಿಸಿ, ದಶರಥನನ್ನು **"ಪಿತರಂ ರೋಚಯಾ ಮಾಸ"** ಪಿತಾವಾಗಿ ಮಾಡಿಕೊಂಡು ಅವತರಿಸುವ ಸಂಕಲ್ಪವನ್ನು ಹೊಂದಿದನೆಂಬುದು ಸೂಚಿತವು. ಆದುದರಿಂದ **ರಾಘವ** ಶಬ್ದವು ಶ್ರೀರಾಮಚಂದ್ರನಿಗೆ ಪರಮಪ್ರಿಯವೆಂದು ಭಾವಿಸಿ ವಿಭೀಷಣನು **"ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ। ನಿವೇದಯತ"** ಎಂಬಲ್ಲಿ **ರಾಘವಾಯ ನಿವೇದಯತ** ಎಂದು ಆತ್ಮಸಮರ್ಪಣೆಯನ್ನು ಮಹಾಭಾಗವತರ ಮೂಲಕ ಮಾಡಿರುತ್ತಾನೆ. ಹಾಗೆ ಶರಣಾಗತಿ ಧರ್ಮ ಮಹಾತ್ಮ್ಯೆಯನ್ನು ರಘುವೂ ಆತನ ವಂಶೀಕರೂ ಪ್ರಕಟಿಸಿರುವುದರಲ್ಲಿ ಈತನೇ ಸರ್ವಶ್ರೇಷ್ಠನಾದುದ ರಿಂದ **ರಘುವರ** ಎಂಬ ಪ್ರಯೋಗವು. ಹಾಗೆ ಶರಣಾಗತವತ್ಸಲನು ರಘುವರ

ನೆಂದು ಸೀತೆಯು ಪರಮ ಕೃಪೆಯಿಂದ ದುರುಳ ರಾವಣನಿಗೆ ಉಪದೇಶಿಸುತ್ತಾಳೆ. **ವಿದಿತಸ್ಸಹಿ ಧರ್ಮಜ್ಞಶ್ಶರಣಾಗತವತ್ಸಲಃ | ತೇನ ಮೈತ್ರೀ ಭವತು ತೇಯದಿ ಜೀವಿತು ಮಿಚ್ಛಸಿ"** ಶರಣಾಗತವತ್ಸಲನೆಂಬುವುದು ಲೋಕವಿಶ್ರುತವೆಂದು ಹೇಳಿರುತ್ತಾಳೆ. ಅಂತಹ ಶರಣಾಗತರಕ್ಷಕರ ವಂಶದಲ್ಲಿ ಅವತರಿಸಿ, ಆ ಧರ್ಮವನ್ನು ನಡೆಸಿಕೊಂಡು ಬರುವುದೇ "**ವ್ರತಂಮಮ**" ನನ್ನ ವ್ರತವೆಂದು ಪ್ರಸಿದ್ಧಿ ಪಡಿಸಿದು ದರಿಂದ **ಹೇ ರಘುವರ** ಎಂಬ ಸಂಬೋಧನೆಯು. ಈ ಶರಣಾಗತ ರಕ್ಷಣೆಯಲ್ಲಿ ಜಾತಿ, ಕುಲ, ಗುಣ ವಿಶೇಷಗಳನ್ನು ಈವಪಪಿ ಪರಿಗಣಿಸದೆ ರಕ್ಷಿಸಿರುತ್ತೀಯೆ, "**ನಿಷಾದಾನಾಂ ನೇತಾ ಕಪಿ ಕುಲಪತಿಃ ಕಾಪಿ ಶಬರೀ**" (ದಯಾ) ಒಬ್ಬ ಶಬರ ರಾಜನು, ಒಬ್ಬ ವಾನರ ಪತಿ, ಒಬ್ಬ ಶಬರ ಸ್ತ್ರೀ ಇಂತಹವರನ್ನೆಲ್ಲಾ ಸಮ ವಾಗಿ ನೋಡಿ ರಕ್ಷಿಸಿರುವ ಶರಣಾಗತವತ್ಸಲನೆಂಬ ಭಾವವು. ಕ್ಷಮಾಗುಣವು ಅಶಕ್ತನಿಗೆ ಸಂಬಂಧಿಸಿದುದು ಎಂದು ಭಾವಿಸತಕ್ಕದ್ದಲ್ಲವು. ಸರ್ವಶಕ್ತನಲ್ಲಿಯೇ ಆ ಕ್ಷಮಾಗುಣವು ಶೋಭಿಸುತ್ತದೆ. ಸರ್ವಶಕ್ತನೆಂಬುದು ಮಹಾಪ್ರಾಜ್ಞನಾದ ಆಂಜನೇಯನ ಉಕ್ತಿಯಿಂದ ವ್ಯಕ್ತವು. "**ಬ್ರಹ್ಮಾ ಸ್ವಯಂಭೂಶ್ಚ ತುರಾನನೋ ವಾ ರುದ್ರಸ್ತ್ರಿ ನೇತ್ರಸ್ತ್ರಿ ಪುರಾನ್ತಕೋವಾ| ಇಂದ್ರೋ ಮಹೇಂದ್ರಸ್ಸುರ ನಾಯಕೋವಾ ತ್ರಾತುಂ ನಶಕ್ತಾಯುಧಿ ರಾಮವಧ್ಯಮ್**" ಆಶ್ರಿತರಲ್ಲಿ ಕ್ಷಮಾಗುಣವು, ಅನಾಶ್ರಿತರಾಗಿ, ದುರ್ಮಾರ್ಗಪ್ರವರ್ತಕರಾಗಿ, ಲೋಕಕಂಟಕರಾಗಿ ದ್ದರೆ ಅಂತವರು ವಧ್ಯರೆಂದು ಸಂಕಲ್ಪಿಸಿಬಿಡುವನು. ಅಂತಹವರನ್ನು ಸ್ವಾಮಿಯ ಕೋಪದ ದೆಶೆಯಿಂದ ರಕ್ಷಿಸಲು ಯಾರೂ ಸಮರ್ಥರಾಗಲಾರರು. ಸಾಕ್ಷಾತ್ ಸ್ವಾಮಿಯ ನಾಭೀಕಮಲದಿಂದ ಹುಟ್ಟಿ ನಾಲ್ಕು ಮುಖಗಳು ಎಂಟು ಕಣ್ಣುಗಳನ್ನು ಹಾಕಿಕೊಂಡು ಬಂದ ಚತುರ್ಮುಖನಿಂದಲೂ ಸಹ, ರಾಮನು ವಧಿಸಲು ಯೋಗ್ಯ ನೆಂದು ಸಂಕಲ್ಪಿಸಿದವನನ್ನು ರಕ್ಷಿಸಲು ಸಾಧ್ಯವಿಲ್ಲವು. ಹಾಗೆಯೇ ಮಹಾಪರಾಕ್ರಮಿ ಯಾಗಿ ತನ್ನ ರೋದನದಿಂದಲೇ ಜಗತ್ತನ್ನೆಲ್ಲಾ ನಡುಗಿಸಿ ಮೂರು ಕಣ್ಣು ಹಾಕಿ ಕೊಂಡು ತಾನು ತ್ರಿಪುರಾಂತಕನೆಂಬ ಹೆಮ್ಮೆಯಿಂದಿರುವ ರುದ್ರನಿಂದಲೂ ಸಾಧ್ಯವಿಲ್ಲವು. ಹಾಗೆಯೇ ವಿಪುಲವಾದ ಐಶ್ವರ್ಯವನ್ನು ಹೊಂದಿ ಅದರಿಂದ ಇಂದ್ರನೆಂದೆನಿಸಿ ದೇವತೆಗಳಿಗೆಲ್ಲಾ ಶ್ರೇಷ್ಠನಾಗಿ ಸಾವಿರಕಣ್ಣುಗಳನ್ನು ಧರಿಸಿಬಂದ ದೇವೇಂದ್ರನಿಂದಲೂ ರಕ್ಷಿಸಲು ಸಾಧ್ಯವಿಲ್ಲವು. ಓ ರಾವಣನೇ ಅಂತಹ ಪರಾಕ್ರಮಿಯು ಶ್ರೀರಾಮನು. ಅಂತಹವನಲ್ಲಿ ಮಹತ್ತಾದ ಅಪರಾಧವನ್ನು ಮಾಡಿರುವುದರಿಂದ ನೀನು ವಧ್ಯನು ಎಂದು ಆಂಜನೇಯನು ರಾವಣನನ್ನು ಎಚ್ಚರಿಸುವ ಸಂದರ್ಭವು. ಹಾಗೆಯೇ "**ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂ ಚೈವ ರಾಕ್ಷಸಾನ್ | ಅಂಗುಳ್ಯ ಗ್ರೇಣತಾನ್ ಹನ್ಯಾ ಮಿಚ್ಛನ್ ಹರಿಗಣೇಶ್ವರ**" ಪಿಶಾಚರನ್ನೂ ದಾನವರನ್ನೂ ಯಕ್ಷರನ್ನೂ ಭೂಮಿಯಲ್ಲಿರುವ

ಎಲ್ಲಾ ರಾಕ್ಷಸರನ್ನೂ ಒಂದು ಬೆರಳಿನ ತುದಿಯಿಂದಲೇ, ಸಂಕಲ್ಪಿಸಿದನಾದರೆ, ವಾನರಯೂಥಕ್ಕೆ ಸ್ವಾಮಿಯಾದ ಓ ಸುಗ್ರೀವನೇ, ನಾನು ಕೊಲ್ಲಲು ಶಕ್ತಿಯುಳ್ಳವನೆಂದು ತಿಳಿ, ಎಂದು ಶ್ರೀರಾಮಚಂದ್ರ ಪ್ರಭುವೇ ಹೇಳಿಕೊಂಡಿರುತ್ತಾರೆ. ಹೀಗೆ ಇಂತಹ ಪ್ರಭಾವಗಳಿಸಿದ ಪ್ರಸಿದ್ಧನಾದ ಸರ್ವಶಕ್ತನೇ ಆಶ್ರಿತರಾದ ಸಾಪರಾಧಿಗಳನ್ನು ರಕ್ಷಿಸಲು ಅರ್ಹನು. ೧೪,೦೦೦ ರಾಕ್ಷಸರನ್ನು ಮೂರೂಮುಕ್ಕಾಲು ಘಳಿಗೆಯಲ್ಲಿ ಕೊಂದಿರುವುದು. ಇತ್ಯಾದಿ ಸಂಭವಗಳಾದ ಅಘಟನ ಘಟನಾ ಶಕ್ತಿಯು ಶ್ರೀರಾಮನಿಗೆ ಉಂಟೆಂಬುದು ವ್ಯಕ್ತವು. ಆದುದರಿಂದ **ರಘುವರ** ಎಂಬ ಸಂಬೋಧನೆಯು.

**ತಾದೃಶಃ** ಎಂಬುದರಿಂದ ಹಿಂದಿನ ಶ್ಲೋಕದಲ್ಲಿ ಹೇಳಿದ ಅಂತಹ ಅಪಚಾರಗಳ ಮಾತು ಹಾಗಿರಲಿ. ನಿನಗೆ ಪರಮಪ್ರಿಯಳಾದ ದೇವಿಯ ವಿಷಯದಲ್ಲೇ ವಿಶೇಷಾಪಚಾರವನ್ನು ಮಾಡಿದವನ ವಿಷಯದಲ್ಲೇ ನೀನು ಕ್ಷಮಿಸಿರುತ್ತೀಯೆ ಎಂಬ ಭಾವವು.

**ವಾಯಸಸ್ಯ** ಎಂಬುದರಿಂದ ದರ್ಪದಿಂದ ಮದಿಸಿರುವವನೆಂದೂ **"ಪುತ್ರಃ ಕಿಲಸಶಕ್ರಸ್ಯವಾಯಸಃ ಪತತಾಂವರಃ। ಧರಾನ್ತರಚರಶ್ಶೀಘ್ರಂ ಪವನಸ್ಯ ಗತೌಸಮಃ"** ಇಂದ್ರ ಪುತ್ರನಾದುದರಿಂದ ಆಭಿಜಾತ್ಯಬಲವುಂಟೆಂದೂ ಇದೂ ಅಲ್ಲದೆ ಚಿರಜೀವಿಯಾದುದರಿಂದ ತನಗೆ ಮೃತ್ಯುಭಯವಿಲ್ಲವೆಂದೂ, ವಾಯುವಿಗೆ ಸಮಾನವಾದ ಗತಿಯುಳ್ಳೋಣದರಿಂದ ಶೀಘ್ರವಾಗಿ ಹಾರಿ ಹೋಗಿ ವಿಪತ್ತಿನಿಂದ ತಪ್ಪಿಸಿಕೊಳ್ಳುವನೆಂದೂ ಹೆಮ್ಮೆ ಹೊಂದಿದ್ದನೆಂದು ಹೇಳಲ್ಪಟ್ಟಿದೆ. ಹೀಗೆ ಬಲಿಷ್ಠನಾದುದರಿಂದಲೇ ರಾಮಚಂದ್ರ ಪ್ರಭುವು **"ಸದರ್ಭಂ ಸಂಸ್ತರಾದ್ಗೃಹ್ಯ ಬ್ರಾಹ್ಮೇಣಾಸ್ತ್ರೇಣ ಯೋಜಯೇತ್"** ಎಂಬಲ್ಲಿ ಹೇಳಿರುವ ಹಾಗೆ ಒಂದು ದರ್ಭೆಯನ್ನೇ ಬ್ರಹ್ಮಾಸ್ತ್ರವಾಗಿ ಅಭಿಮಂತ್ರಿಸಿ ಬಿಡಬೇಕಾಗಿ ಬಂದಿತು, ಈ ವಾಯಸವೇ ಮೊದಲಿಗೆ ಇಂದ್ರಸುತನಾದ ಜಯನ್ತನೆಂದೂ ಇನ್ನು ಕೆಲವರು ವಾಯಸನಾಗಿಯೇ ಜನಿಸಿದನೆಂದೂ ಹೇಳುವರು. ಆದರೆ ಸ್ತ್ರೀ ಕಾಮುಕನಾಗಿ ಈ ವಾಯಸನು ಬಂದನೆಂಬುದಾಗಿ ಶ್ರೀಮದ್ರಾಮಾಯಣದಲ್ಲಿ ಹೇಳಲಿಲ್ಲವೆಂದು ಶ್ರೀ ದೇಶಿಕರವರು ವ್ಯಾಖ್ಯಾನದಲ್ಲಿ ತಿಳಿಸುತ್ತಾರೆ. ಏಕೆಂದರೆ ಅಲ್ಲಿ ಹೇಳಿರುವುದು **"ನಚಾಪ್ಯುಪಾರಮನ್ಮಾಂ ಸಾಧ್ಭಕ್ಷಾರ್ಥೀ ಬಲಿಭೋಜನಃ"** ಎಂದೂ **"ಭಕ್ಷ ಗೃಧ್ನೇನ ಕಾಕೇನದಾರಿತಂ ವೈ ಸ್ತನಾಂತರೇ"** ಎಂದೂ ಹೇಳಿರುವುದರಿಂದ ಮಾಂಸಾರ್ಥಿಯಾಗಿ ಈ ಹೀನಕೃತ್ಯವನ್ನು ನಡೆಸಿ ಮಹಾಪರಾಧಿಯಾದನು. ಆದುದರಿಂದ ಈತನೂ ವಾನರನಾದ ವಾಲಿಯ ಹಾಗೆಯೇ ಇಂದ್ರಪುತ್ರನಾದ ಕಾಕನು ಎಂದು ಭಾವಿಸತಕ್ಕದ್ದು. ಇಂತಹ ಆಭಿಜಾತ್ಯ, ಸ್ವಪೌರುಷಾದಿ ಭ್ರಮೆಗಳು ಕಾಕನಲ್ಲಿದ್ದರೂ, ಅಂತಹವನನ್ನು ನಿಗ್ರಹಿಸುವುದು ಸುಲಭವಾಗಿದ್ದರೂ, ತನ್ನ ಪತಿಯು

ತನ್ನಲ್ಲಿರುವ ಪ್ರೇಮಾತಿಶಯದಿಂದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದರೆಂದು ಸೀತೆಯು **"ಮತ್ಕೃತೇ ಕಾಕಮಾತ್ರೇ ತು ಬ್ರಹ್ಮಾಸ್ತ್ರಂ ಸಮುದೀರಿತಮ್"** ಎಂದು ಆಂಜನೇಯನಲ್ಲಿ ಹೇಳಿಕೊಂಡಿರುತ್ತಾಳೆ.

**ಪ್ರಣತೆ ಇತಿ**–ಕಾಕನು ಬ್ರಹ್ಮಾಸ್ತ್ರ ಪೀಡಿತನಾಗಿ **"ಸ ಪಿತ್ರಾ ಚ ಪರಿತ್ಯಕ್ತಃ ಸುರೈಶ್ಚ ಸಮಹರ್ಷಿಭಿಃ | ತ್ರೀನ್ ಲೋಕಾನ್ಸ ಪರಿಕ್ರಮ್ಯ ತಮೇವ ಶರಣಂ ಗತಃ"** ತಂದೆಯಾದ ಇಂದ್ರನೂ ದೇವತೆಗಳೂ ಯಾರೂ ಈ ಕಾಕನನ್ನು ಬ್ರಹ್ಮಾಸ್ತ್ರ ದಿಂದ ರಕ್ಷಿಸಲು ಶಕ್ತರಲ್ಲದೇ ಹೋಗಲು ಈ ಕಾಕನು ಪುನಃ ಬಂದು ಶ್ರೀರಾಮನ ಪಾದದಲ್ಲಿ ಬಿದ್ದು ಶರಣು ಹೊಂದಿದನೆಂದು ಹೇಳಿರುವುದರಿಂದ **ಪ್ರಣತ** ಶಬ್ದಕ್ಕೆ ಶರಣಾಗತನೆಂಬುದರಲ್ಲೇ ತಾತ್ಪರ್ಯವು. ಇದರಿಂದ ಸ್ವಾಮಿಯು ನಿಗ್ರಹ ಸಂಕಲ್ಪ ಯುಕ್ತನಾದರೆ ಅಂತಹ ಚೇತನನನ್ನು ರಕ್ಷಿಸಲು ಯಾರೊಬ್ಬರೂ ಶಕ್ತರಲ್ಲವೆಂಬುದು ವ್ಯಕ್ತವು. **"ಬ್ರಹ್ಮಾ ಸ್ವಯಂಭೂಃ"** ಎಂಬ ಶ್ಲೋಕವು ಅನುಸಂಧೇಯವು. ಹೆಂಡತಿಗೆ ಅಪರಾಧ ಮಾಡಿದುದರಿಂದ ಕಾಕನು ವಿಷ್ಣುದ್ವೇಷಿಯಾದನು. **"ಯೋ ವಿಷ್ಣುಂ ಸತತಂದ್ವೇಷ್ಟಿತಂ ವಿದ್ಯಾದನ್ತ್ಯರೇತಸಂ"** ಎಂದು ಹೇಳಿರು ವುದರಿಂದ ಚಂಡಾಳತ್ವವುಂಟಾಯಿತು. ಆದುದರಿಂದ **"ಚಂಡಾಳಃ ಪಕ್ಷಿಣಾಂ ಕಾಕಃ"** ಎಂದಿರುವುದರಿಂದ ಕಾಕನು ನಮ್ಮ ವಟಾರಕ್ಕೆ ಬರಕೂಡದು. ಬಂದರೆ ತಮಗೆ ಅನರ್ಥವೆಂದು ಕಾಗೆಯನ್ನು ಯಾರೂ ಮನೆಯೊಳಕ್ಕೆ ಸೇರಿಸುವುದಿಲ್ಲವು. ಆದುದರಿಂದ **ಪರಿತ್ಯಕ್ತಃ** ಎಂಬ ಪ್ರಯೋಗವು. ಒಂದು ವೇಳೆ ಕಾಣದೆ ಮನೆಯೊ ಳಕ್ಕೆ ಕಾಗೆಯು ನುಗ್ಗಿದರೆ ಗೃಹವನ್ನು ಕೆಲವು ಕಾಲ ಬಿಡಬೇಕೆಂಬ ವಿಧಿಯುಂಟು. ನಮನ, ಪ್ರಣಾಮ, ಶರಣಾಗತಿ, ಈ ಪದಗಳೆಲ್ಲಾ ಸಮಾನಾರ್ಥಕಗಳು. ಶರಣಾಗತ ನಾದನೇ ಎಂದು ರಘುವರನು ದಯಾಪ್ರೇರಿತನಾದನು. ಆದುದರಿಂದಲೇ **ದಯಾಳುಃ** ಎಂಬ ಪ್ರಯೋಗವು **"ಸತಂ ನಿಪತಿತಂ ಭೂಮೌ ಶರಣ್ಯ ಶ್ಶರಣಾ ಗತಮ್ | ವಧಾರ್ಹಮಪಿ ಕಾಕುತ್ಸ್ಥಃ ಕೃಪಯಾ ಪರ್ಯಪಾಲಯತ್"** ಎಂಬಲ್ಲಿ ವಧಾರ್ಹನಾಗಿದ್ದರೂ ಕೃಪೆಯಿಂದ ರಕ್ಷಿಸಲ್ಪಟ್ಟನೆಂದು ಹೇಳಲ್ಪಟ್ಟಿರುತ್ತದೆ. ಪ್ರಣತನಾದುದರಿಂದಲೇ ನಿಗ್ರಹಸಙ್ಕಲ್ಪವು ತೊಲಗಿ ಅನುಗ್ರಹ ಸಂಕಲ್ಪವೂ ದಯೆಯಿಂದುಂಟಾಗುತ್ತದೆಂಬ ಭಾವವು. ಆದುದರಿಂದಲೇ ಶ್ರೀ ಯತಿವರ್ಯರು **"ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ"** ಎಂದು ಏವಕಾರವನ್ನು ಉಪಯೋಗಿಸಿರುತ್ತಾರೆ. ಸ **ತಂ ನಿಪತಿತಂ ಭೂಮೌ** ಎಂಬಲ್ಲಿ ಕಾಲಲ್ಲಿ ಬಿದ್ದುದು **ಪ್ರಣತ** ನಾದುದು ಒಂದೇ ಸಲವಾದುದರಿಂದ ಶರಣಾಗತಿಯು **ಸಕೃದೇವ** ಅನುಷ್ಠೇಯವೆಂಬುದೂ ದ್ಯೋತಿತವು. ಶರಣಾಗತ ರಕ್ಷಣ ದೀಕ್ಷೆಯು ಕಕುತ್ಸ್ಥ ವಂಶೀಯರಿಗೆ ಅಸಾಧಾರಣ ಧರ್ಮವೆಂಬುದನ್ನು **ಕಾಕುತ್ಸ್ಥ** ಶಬ್ದವು ಸೂಚಿಸುತ್ತದೆ. ರಕ್ಷಣೆಗೆ ಶರಣಾಗತಿಯೇ ಆವಶ್ಯಕವೆಂಬುದು **"ಕಾಕಂ ತಂ ಚ ವಿಭೀಷಣಂ**

**ಶರಣಮಿತ್ಯುಕ್ತಿಕ್ಷವಾ ರಕ್ಷತಃ**" ಎಂಬ ಶ್ರೀ ಪರಾಶರ ಭಟ್ಟರ ಉಕ್ತಿಯಿಂದ ವ್ಯಕ್ತವು (ಶ್ರೀಗುಣ.)

**ದಯಾಳುಃ** ಎಂದು ಹೇಳಲ್ಪಟ್ಟಿತಲ್ಲಾ, ಶರಣಾಗತನಾದರೂ ಕಾಕನಿಗೆ ಒಂದು ಕಣ್ಣನ್ನು ಕಿತ್ತುಹಾಕಿದ ನಂತರ ಹೇಗೆ **ದಯಾಳು?** ಎಂದರೆ, ಧೃತದಂಡರು ರಾಜರುಗಳು, ತಪ್ಪಿತಸ್ಥರನ್ನು ಅಲ್ಪದಂಡಕ್ಕಾದರೂ ಗುರಿ ಮಾಡುವುದು ನ್ಯಾಯ. ಹಾಗಾದರೆ ಶರಣಾಗತಿಯ ಮಹಿಮೆಗೆ ನ್ಯೂನತೆಯಲ್ಲವೇ? ಎಂದಾಕ್ಷೇಪಿಸಿದರೆ, ಅದಕ್ಕೆ ಸಮಾಧಾನವೇನೆಂದರೆ, ಕಾಕನು ಪ್ರಾಣರಕ್ಷಣೆಗಾಗಿಯೇ ಶರಣಾಗತಿಯನ್ನು ಮಾಡಿದುದು. ಪ್ರಪತ್ತಿಫಲವು ಪ್ರಾಣರಕ್ಷಣೆಯಿಂದ ಸಂಪೂರ್ಣವಾಗಿ ಸಿದ್ಧಿಸಿತು. ಬ್ರಹ್ಮಾಸ್ತ್ರವುನಿಷ್ಫಲವಾದುದಾಗ ಕೂಡದು. ಇದೂ ಅಲ್ಲದೆ ಈತನು ಮುಂದಕ್ಕೆ ಇಂತಹ ದುಷ್ಕೃತವನ್ನು ಆಚರಿಸದ ಹಾಗೆ ಮಾಡಬೇಕೆಂದು ಹಿತಚಿಂತನೆಯಿಂದ "**ಹಿನಸ್ತಿಸ್ಮಸವಕ್ಷಿಣಮ್**" ಎಂದು ಹೇಳಲ್ಪಟ್ಟಿತು. ಆ ಸಂದರ್ಭದಲ್ಲೂ ಕಾಕನಿಗೆ ಹಿತವನ್ನೇ ಮಾಡಿರುತ್ತಾರೆ. ಒಂದು ಕಣ್ಣಿಗೇನೇ ಎರಡು ಕಣ್ಣುಗಳಿಂದಾಗತಕ್ಕ ಕಾರ್ಯ ಶಕ್ತಿಯನ್ನು ದಯಪಾಲಿಸಿರುತ್ತಾರೆ. ಇದೇ ಈಗಲೂ ಎಲ್ಲಾ ಕಾಕ ಸಮೂಹದಲ್ಲೂ ಅನುಸರಿಸಿ ಬರುತ್ತಿದೆ. ಹೀಗೆ **ಏಕದೃಷ್ಟಿಯಾಗಿ** ಮಾಡಿದುದೂ ದಯಾಕಾರ್ಯವೇ ಎಂದು ದಯಾಶತಕದಲ್ಲಿ ಉಪಪಾದಿಸಿರುತ್ತಾರೆ. "**ಕೃಪೇಕಾಕಸ್ಯೈಕಂ ಹಿತಮಿತಿ ಹಿನಸ್ತಿಸ್ಮನಯನಮ್**" ಓ ಶ್ರೀನಿವಾಸನ ಕೃಪೆಯೇ ಕಾಕನಿಗೆ ಹಿತಮಾಡು–ವುದಕ್ಕಾಗಿ ಯಲ್ಲವೇ ನೀನು ಆತನ ಒಂದು ಕಣ್ಣನ್ನು ಕಿತ್ತು ಹಾಕಿರುತ್ತೀಯೆ ಎಂದು ಹೇಳಿರುತ್ತಾರೆ (ದಯಾ ೬೪). ಈ ಕಾಕಸಂಬಂಧವೃತ್ತಾಂತದಲ್ಲಿ ಕೊನೆಯಲ್ಲಿ ಕಾಕನು ದಶರಥನ ಅನುಜ್ಞೆಯನ್ನೂ ಪಡೆದು ಹೊರಟು ಹೋದನೆಂದು, ಸೀತೆಯು ಆಂಜನೇಯನಲ್ಲಿ ಹೇಳುವ ಸಂದರ್ಭದಲ್ಲಿ "**ಸ ರಾಮಾಯ ನಮಸ್ಕೃತ್ಯ ರಾಜ್ಞೇ ದಶರಥಾಯಚ**" ಎಂದೂ, ಈ ವೃತ್ತಾಂತವನ್ನೇ ಆಂಜನೇಯನು ಶ್ರೀರಾಮನಲ್ಲಿ ಹೇಳುವಾಗಲೂ "**ರಾಮತ್ವಾಂ ಸ ನಮಸ್ಕೃತ್ಯ ರಾಜ್ಞೇ ದಶರಥಾಯಚ**"ಎಂದು ಹೇಳಿರುತ್ತದೆ. ದಶರಥನು ಆ ಸಂದರ್ಭದಲ್ಲಿ ಇದ್ದುದು ಹೇಗೆ? ಎಂಬ ಪ್ರಶ್ನೆಯು ಅನೇಕರನ್ನು ಬಾಧಿಸುತ್ತದೆ. ಇದು ಅಪ್ರಸ್ತುತವಾದರೂ ಪ್ರಶ್ನೆಗೆ ಉತ್ತರವನ್ನೀಯುವುದು ಆವಶ್ಯಕವು. ದಶರಥನು ಉಪಾಯಾನುಷ್ಠಾನವಿಲ್ಲದೆ ಯಜ್ಞಯಾಗಾದಿಗಳನ್ನು ಚೆನ್ನಾಗಿ ನಡೆಸಿದುದರಿಂದ ಇಂದ್ರಲೋಕವನ್ನು ಹೊಂದಿದನೇ ವಿನಾ ದಿವ್ಯ ವೈಕುಂಠ ಪ್ರಾಪ್ತಿಯುಇಲ್ಲವು. ಕಾಕನು ಇಂದ್ರಲೋಕಾಧಿಪತಿಯ ಮಗನಾದುದರಿಂದ ಅವರೆಲ್ಲರೂ ದಶರಥನೂ ಸಹ ಕಾಕನ ಮೂಲಕ ಆತನವೃತ್ತಾಂತವನ್ನು ತಿಳಿದುದರಿಂದ ಈ ಕೌತುಕವನ್ನು ನೋಡಲು ದೂರವಾಗಿ ನಿಂತು ನೋಡುತ್ತಿದ್ದರೆಂದು ಭಾವಿಸಬಹುದಾಗಿರುತ್ತದೆ. ಮಹರ್ಷಿಯು ಈ ವಾಕ್ಯದಿಂದ ಉಪಾಯಾನುಷ್ಠಾನವಿಲ್ಲದೆ ಮುಕುಂದನು ಮುಕ್ತಿಯನ್ನು ದಯಪಾಲಿಸುವುದಿಲ್ಲವೆಂಬ ತತ್ವವನ್ನು ತಿಳಿಸುವುದಕ್ಕಾಗಿ ಈ ಪ್ರಯೋಗ ಮಾಡಿದರೆಂದು ಭಾವಿಸಬಹುದಾಗಿದೆ.

ಅಂತಹ ದಯಾಕ್ಷಮೆಗಳೇ ತಮಗೂ ಸಹ ತಾರಕಗಳೆಂದು ಇನ್ನೊಂದು ದೃಷ್ಟಾಂತವನ್ನು ಹೇಳುತ್ತಾರೆ.

**ಯತ್ ಅಪರಾದ್ಧುಃ ಚೈದ್ಯಸ್ಯ ಕೃಷ್ಣಃ ಸಾಯುಜ್ಯದಃ ದಯಾಳುಃ ಭೂತ್** (೩) ಕೃಷ್ಣಾವತಾರಿಯಾಗಿ, ಮಹಾಪರಾಧಿಯಾದ ಶಿಶುಪಾಲನಿಗೆ ನೀನು ಸಾಯುಜ್ಯವನ್ನಿತ್ತು ಯಾವ ಕಾರಣದಿಂದ ದಯಾಳುವೆಂದಾದೆಯೋ, ಎಂದು ಎರಡನೆಯ ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ದ್ವಾಪರ ಯುಗದಲ್ಲಿ ಕೃಷ್ಣಾವತಾರಿಯಾಗಿ ಜನಿಸಿದ ನಿನ್ನಲ್ಲಿ ಈ ದಯಾ ಕ್ಷಮಾಗುಣಗಳು ನಿರತಿಶಯವಾದುವು. ಏಕೆಂದರೆ ಹಿಂದಿನ ಕಾಕಾಪರಾಧಕ್ಕಿಂತಲೂ, ಮೂರು ಜನ್ಮಗಳಿಂದಲೂ ಅಪರಾಧವನ್ನು ಎಸಗಿದುದರಿಂದ ಅಪರಾಧಾಧಿಕ್ಯವು ವ್ಯಕ್ತವು. ತನ್ನಲ್ಲಿ ಮಾಡಿದ ಅಪರಾಧಗಳನ್ನು ಅಷ್ಟು ತೀವ್ರವಾದುದಾಗಿ ಭಾವಿಸತಕ್ಕವನಲ್ಲವು. ತನ್ನ ಭಕ್ತರಾದ. ಪ್ರಹ್ಲಾದ, ಋಷಿಗಳು, ಪಾಂಡವರು ಇವರುಗಳಿಗೆ ಮಾಡಿದ ಅಪರಾಧಗಳು ತುಂಬಾ ಕ್ರೂರವಾದವುಗಳಾಗಿ ಭಾವಿಸುವವನು. **"ಶ್ರೀ ವಿಷ್ಣೋರವ ಮಾನನಾತ್ ಗುರುತರಂ ಶ್ರೀ ವೈಷ್ಣವೋಲ್ಲಂಘನಮ್"** ಎಂದು ವಿಷ್ಣುವಿಗೆ ಅವಮಾನ ಮಾಡುವುದಕ್ಕಿಂತ ಅವನ ಭಕ್ತರಿಗೆ ಮಾಡಿದ ಅಪಮಾನವು ಗುರುತರವಾದುದು. ಎಂದು ಹೇಳಲ್ಪಟ್ಟಿರುತ್ತದೆ, ಮೂರು ಜನ್ಮದಲ್ಲೂ ಸನಕ ಸನಂದನರ ಶಾಪಾಕ್ರಾಂತರಾಗಿ, ಹಿರಣ್ಯಾಕ್ಷ ಹಿರಣ್ಯಕಶಿಪು ಎಂದೂ, ರಾವಣ ಕುಂಭಕರ್ಣರೆಂದೂ ಶಿಶುಪಾಲ ದಂತವಕ್ತ್ರರೆಂದೂ ಜನಿಸಿ, ಸ್ವಾಮಿಗೆ ಸರ್ವದಾ ವಿರೋಧಿಗಳಾಗಿ ಜನ್ಮವೆತ್ತಿದುದರಿಂದ **ಪ್ರತಿಭವ ಮಪರಾದ್ಧುಃ** ಎಂಬ ಪ್ರಯೋಗವು. ಹೀಗಾದರೂ ಒಂದು ಕಾಲದಲ್ಲಿ ತನಗೆ ಕೈಂಕರ್ಯವನ್ನೆಸಗಿದವರೆಂಬ ವಿಶ್ವಾಸದಿಂದ ಅವರುಗಳು ಮಾಡಿದ ಸಹಸ್ರಾಪರಾಧಗಳನ್ನೂ ಮರೆತು ನೀನು, ವರಾಹ, ಲಕ್ಷ್ಮೀನೃಸಿಂಹ, ಶ್ರೀರಾಮ, ಶ್ರೀಕೃಷ್ಣಾವತಾರಿಯಾಗಿ ಕೊನೆಗೆ ದಿವ್ಯಪದವಿಯನ್ನಿತ್ತುದುದರಿಂದ **"ಮುಗ್ಧ"** ಎಂಬ ಸಂಬೋಧನೆಯು. ಮುಗ್ಧಶಬ್ದಕ್ಕೆ ಸಹಸ್ರನಾಮದಲ್ಲಿ **ಅವಿಜ್ಞಾತಾ** ಎಂಬ ನಾಮದಲ್ಲಿನಹಾಗೆ ಭಕ್ತರ ಕ್ರೂರ ಪಾಪಗಳನ್ನು ಸ್ಮರಿಸುವ ಯೋಗ್ಯತೆ ಇಲ್ಲದವನೆಂಬ ಭಾವವು. ಅಂತವರನ್ನೂ ಕೂಡ **"ನತ್ಯಜೇಯಂ ಕಥಂಚನ"** ಎಂದು ಹೇಳಿದ ಕೃಪಾಕರನು, ಕ್ಷಮಾನಾಗರನು.

**ಚೈದ್ಯಃ**—ಎಂದರೆ ಚೇದಿವಂಶದಲ್ಲಿ ಹುಟ್ಟಿದವನಾದುದರಿಂದ, ಶಿಶುಪಾಲನು; ಈತನು ಧರ್ಮರಾಯನ ರಾಜಸೂಯ ಯಾಗದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆಯು ಕೂಡದೆಂದು ನಾನಾವಿಧ ನಿಂದೆಯಿಂದ ನಿರೋಧಿಸಿ ಭೀಷ್ಮ, ದ್ರೋಣ, ಉಗ್ರಸೇನ ಕೃಪ ಮೊದಲಾದವರುಗಳನ್ನೆಲ್ಲಾ ತ್ಯಜಿಸಿ ಶ್ರೀಕೃಷ್ಣನಿಗೆ ಅಗ್ರಪೂಜೆ ಎಂದರೇನು

ಎಂಬುದಾಗಿ **"ಕ್ಲೀಬೇದಾರ ಕ್ರಿಯಾಯಾದೃಗಂಧೇ ರೂಪದರ್ಶನವು! ಅರಾಜ್ಞೇ ರಾಜವತ್ಪೂಜಾ ತಥಾತೇ ಮಧುಸೂದನ"** ನಪುಂಸಕನಿಗೆ ಹೆಂಡತಿಯನ್ನು ಕೊಟ್ಟು ವಿವಾಹವು ಹೇಗೋ, ಕುರುಡನಿಗೆ ದಿವ್ಯಮಂಗಳ ವಿಗ್ರಹದ ದರ್ಶನವು ಹೇಗೋ, ರಾಜನಲ್ಲದವನಿಗೆ ರಾಜಮರ್ಯಾದೆಗಳು ಹೇಗೋ ಹಾಗೆ ಓ, ಮಧುಸೂದನನೇ, ನಿನಗೆ ಅಗ್ರಪೂಜೆಯು ಎಂದು ನಿಂದಿಸಿದನು. ಭೀಷ್ಮರಿಂದ ಶ್ರೀ ಕೃಷ್ಣಮಹಾತ್ಮ್ಯೆಯು ಬಹು ವಿಸ್ತರವಾಗಿ ಹೇಳಲ್ಪಟ್ಟರೂ ಅದಕ್ಕೆ ಮನಗೊಡದೆ ಯುದ್ಧಮಾಡಿ ಚೈದ್ಯನು ಮಡಿದನು. ಆಗ ಆತನ ತೇಜಸ್ಸು ಶ್ರೀ ಕೃಷ್ಣನನ್ನು ಪ್ರವೇಶಿಸಿತು, ಎಂದು **"ತತಃ ಕಮಲ ಪತ್ರಾಕ್ಷಂ ಕೃಷ್ಣಂ ಲೋಕ ನಮಸ್ಕೃತಂ! ವವಂದೇ ತತ್ತದಾ ತೇಜೋ ವಿವೇಶ ಚ ನರಾಧಿಪ"** (ಭಾ. ಸಭಾ. ೭೦-೫೨) ಎಂಬಲ್ಲಿ ಹೇಳಲ್ಪಟ್ಟಿರುತ್ತದೆ.

**ಕೃಷ್ಣಃ**–ನೀಲಮೇಘಶ್ಯಾಮನೆಂದಾಗಲಿ, ಅಥವಾ **"ಕೃಷಿರ್ಭೂ ವಾಚಕ ಶ್ಯಬ್ದೋ ಣಶ್ಚ ನಿರ್ವೃತಿ ವಾಚಕಃ| ತಯೋರೈಕ್ಯಂ ಪ್ರಕುರ್ವೀತ ಕೃಷ್ಣ ಇತ್ಯಭಿಧೀಯತೇ"** **ಕೃಷಿ** ಶಬ್ದವು ಭೂಮಿಯನ್ನೂ **ಣ** ಶಬ್ದವು ಸುಖವನ್ನೂ ಬೋಧಿಸುತ್ತವೆ. ಇವೆರಡಕ್ಕೂ ಐಕ್ಯವನ್ನುಂಟುಮಾಡುವವನು ಯಾವನೋ ಅವನು ಕೃಷ್ಣನೆನಿಸುವನು ಎಂಬ ನಿರುಕ್ತಿಯ ಬಲದಿಂದಾಗಲಿ ಆಗಬಹುದು

**ಸಾಯುಜ್ಯದೋಽಭೂಃ** – ಮುಕ್ತದೆಶೆಯಲ್ಲಿ ಚೇತನನಿಗೆ ಉಂಟಾಗುವ ದೆಶೆಯು ಎಂತಾದ್ದೆಂಬ ವಿವೇಚನೆಯಲ್ಲಿ ಸಾಯುಜ್ಯವನ್ನು ಪರವಾಸುದೇವನಾದ ವೈಕುಂಠಪತಿಯು ಕೊಡುವನೆಂದು ಹೇಳಲ್ಪಟ್ಟಿತು. ಸಾಯುಜ್ಯವೆಂದರೆ ಸಯುಕ್ಕಿನ ಭಾವವೆಂದು ಶ್ರೀ ನಿಗಮಾಂತರು ವಿವೇಕಿಸಿ ಹೇಳಿರುತ್ತಾರೆ. ಪರಮಾತ್ಮನೊಂದಿಗೆ ವಿಶೇಷ ಪ್ರೀತಿಯಿಂದ ಸೇರಿ ಆತನನ್ನು ಅನುಭವಿಸುವುದೆಂದು ಹೇಳಲ್ಪಟ್ಟಿರುತ್ತದೆ. ಆದುದರಿಂದ ನಮಗೆ ಮುಕ್ತಿಯು ಪರಿಪೂರ್ಣ ಬ್ರಹ್ಮಾನುಭವ ರೂಪವಾಗಿ ಆತನಿಗೆ ನಿತ್ಯ ಕೈಂಕರ್ಯವನ್ನು ಮಾಡುತ್ತಿರುವುದು, ಮೂರು ಸಿದ್ಧಾಂತದವರೂ ಈ ಸ್ಥಿತಿ ಎಂತಾದ್ದೆಂಬ ಸಂದರ್ಭದಲ್ಲಿ ಭಾರ್ಯಾ ತನ್ನ ಪ್ರಿಯತಮನಾದ ಭರ್ತಾವೊಂದಿಗೆ ವಿಶೇಷ ಪ್ರೀತಿಯಿಂದ ಸೇರಿರುವುದೆಂದು ವರ್ಣಿಸಿರುತ್ತಾರೆ. ಶ್ರೀ ಶಂಕರರ ಅಭಿಪ್ರಾಯವೂ ಹೀಗೆಯೇ ಇರುವಾಗ ನಿತ್ಯವಿಭೂತಿ ಎಂಬುದು ಇಲ್ಲವೆಂದೂ ಮೋಕ್ಷವೆಂದರೆ ಸ್ವರೂಪೈಕ್ಯವೆಂದೂ ಅವರ ಈಚಿನ ಅದ್ವೈತಿಗಳು ಹೇಗೆ ಹೇಳುತ್ತಾರೋ ತಿಳಿಯದು. ಶ್ರುತಿಯಲ್ಲಿ ಐಕ್ಯವು ಎಲ್ಲಿಯೂ ಹೇಳಲ್ಪಡಲಿಲ್ಲವು. **"ಬ್ರಹ್ಮಣಃ ಸಾಯುಜ್ಯಂಗ್ ಸಮಾನ ಲೋಕತಾಂ ಯನ್ತಿ! ಏತಾಸಾ ಮೇವ ದೇವತಾನಾಂ ಸಾಯುಜ್ಯಂ! ಸಾರ್ಷ್ಟಿ ತಾಗ್ಂ ಸಲೋಕತಾಯನ್ತಿ! ಯ ಏತದುಪಯನ್ತಿ"** ಹೀಗೆ ಸಾರ್ಷ್ಟಿತೆಯನ್ನು ಹೊಂದುವನು. ಸಾಯುಜ್ಯ ಶಬ್ದಕ್ಕೆ ಪರಮಾತ್ಮನೊಂದಿಗೆ ಐಕ್ಯವೆಂದು ಕೆಲವರು ಅರ್ಥ ಹೇಳಿರು

ವುದು ಸರಿಯಲ್ಲವೆಂದು ಇದರಿಂದ ವ್ಯಕ್ತವು. ಸಾಯುಜ್ಯವೆಂದರೆ "**ಸಪ್ರಕಾರ ಬ್ರಹ್ಮಮಾಕಿರ ಭೋಗ್ಯತ್ತಿಲೇ ಬ್ರಹ್ಮಮುಂ ಮುಕ್ತನುಂ ಕೂಡ ಭೋಕ್ತಾಕ್ಕಳಾಯ್ ಅನ್ವಯಿಕ್ಕೈಯಾಲೇ ಮುಕ್ತನ್ನೈಸಯುಕ್ಕೆನ್ನಿರಂದು** ಎಂದು ಶ್ರೀ ನಿಗಮಾಂತ ದೇಶಿಕರು ಅಪ್ಪಣೆ ಕೊಡಿಸಿರುತ್ತಾರೆ. ದಾಸನು ಬರೆದಿರುವ ರಹಸ್ಯತ್ರಯಸಾರದ ೧೫೮ನೆಯ ಪುಟ ನೋಡಿ ಸಾಯುಜ್ಯಕ್ಕೂ ಸಾರ್ಷ್ಟಿತ್ವಕ್ಕೂ ಏನು ವ್ಯತ್ಯಾಸವೆಂಬುದು ಅಲ್ಲಿಯೇ ಸ್ಪಷ್ಟವು.

"**ನಿರಂಜನಃ ಪರಮಂ ಸಾಮ್ಯಮುಪೈತಿ**" ಎಂಬ ಶ್ರುತಿವಾಕ್ಯವೇ ಸ್ಮೃತಿಯಲ್ಲಿ "**ಇದಂ ಜ್ಞಾನ ಮುಪಾಶ್ರಿತ್ಯ ಮಮ ಸಾಧರ್ಮ್ಯ ಮಾಗತಾಃ**" ಎಂದು ವ್ಯಾಖ್ಯಾನ ಮಾಡಲ್ಪಟ್ಟಿರುವುದರಿಂದ, ಆತನೊಂದಿಗೆ ಸಮಾನ ಭಾವವನ್ನು ಹೊಂದುವನು. ಸಮಾನ ಭಾವವು ಎಲ್ಲಿ ಹೇಳಿತೋ ಅಲ್ಲಿ ಸಮಾನತ್ವವು ಕೆಲವು ವಿಷಯಗಳಲ್ಲಿ ಮಾತ್ರವೇ, ಮಿಕ್ಕ ವಿಷಯಗಳಲ್ಲಿ **ಅಸಮತ್ವವೇ**. ಶ್ರೀ ವ್ಯಾಸ ಮಹರ್ಷಿಯು, ಸಾಮ್ಯತ್ವವನ್ನು ಎಲ್ಲಿ ಎಂದರೆ "**ಭೋಗ ಮಾತ್ರ ಸಾಮ್ಯ ಲಿಂಗಾಚ್ಚ**" ಅಸಮತ್ವವನ್ನು ಎಲ್ಲಿ ಎಂದರೆ "**ಜಗದ್ವ್ಯಾಪಾರ ವರ್ಜಂ**" ಎಂಬ ಸೂತ್ರದಲ್ಲೂ ಬೋಧಿಸಿರುತ್ತಾರೆ. ಎಂದರೆ ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿ ವ್ಯಾಪಾರಗಳಲ್ಲಿ ಮುಕ್ತನಿಗೆ ಅನ್ವಯವಿಲ್ಲವು ಎಂದು ಹೇಳಿರುತ್ತಾರೆ. "**ಯಥೋದಕಂ ಶುದ್ಧೇ ಶುದ್ಧ ಮಾಸಿಕ್ತಂ ತಾದೃಗೇವ ಭವತಿ ಏವಂ ಮುನೇರ್ವಿಜಾನತ ಅತ್ಮಾಭವತಿ ಗೌತಮ**" ಓ ಗೌತಮರೇ, ಶುದ್ಧವಾದ ನೀರಿನಲ್ಲಿ ಇನ್ನೊಂದು ಶುದ್ಧವಾದ ನೀರು ಹೋಗಿ ಸೇರುವ ಹಾಗೆ ಉಪಾಯಾನುಷ್ಠಾನಮಾಡಿದ ಆತ್ಮಾ ಪರಮಾತ್ಮನೊಂದಿಗೆ ಸೇರುತ್ತದೆ. ಆಗಲಿ ಇಲ್ಲಿಯೂ ತತ್ತೇಜೋ ವಿವೇಶ ಎಂದಿರುತ್ತದೆ. ಶ್ರೀ ಪರಾಶರರೂ ಈ ಸಂದರ್ಭದಲ್ಲೇ "**ತಾವಚ್ಚ ಭಗವಚ್ಚಕ್ರೇಣಾಶು ವ್ಯಾಪಾದಿತಃ ತತ್ಸ್ಮರಣ ದಗ್ಧಾಖಿಲಾಘ ಸಂಚಯಃ ಭಗವತಾಂತ ಮುಪನೀತಃ ತಸ್ಮಿನ್ನೇವಲ ಯಮುಪಯಯೌ**॥ ಶಿಶುಪಾಲನಿಂದ ಹೊರಟ ತೇಜಸ್ಸು ಭಗವಂತನಲ್ಲೇ ಲಯ ಹೊಂದಿತು ಎಂದಿರುತ್ತದೆ ಇವುಗಳಿಂದ ಸ್ವರೂಪೈಕ್ಯವನ್ನು ಹೊಂದಿ ಪ್ರತ್ಯೇಕ ಚೈತನ್ಯವಿಲ್ಲದೆ ಹೋಯಿತು ಎಂಬರ್ಥವಲ್ಲವು. ಹಾಗೆ ಹೇಳಿದರೆ ಜೀವಪ್ರಧ್ವಂಸವೇ ಉಂಟಾಯಿತೆಂದು ಹೇಳಬೇಕಾಗಿಬರುತ್ತದೆ. ನಿತ್ಯನಾದ ಜೀವನಿಗೆ ಅಭಾವವನ್ನು ಹೇಳುವುದು ಶ್ರುತಿ, ಸ್ಮೃತಿ, ಸೂತ್ರ, ಇತಿಹಾಸ ಮೊದಲಾದವುಗಳಿಗೆ ವಿರುದ್ಧವು. ಅವಸ್ಥಾಭೇದವನ್ನು ಹೇಳುವುದು ಮಾತ್ರವೇ ಶಾಸ್ತ್ರವಿಹಿತವಾದುದು. ಜೀವಾನಂತ್ಯ, ನಿತ್ಯತ್ವ ಅಣುತ್ವಾದಿಗಳು ಶ್ರುತಿಪ್ರೋಕ್ತವು. ಆದುದರಿಂದ ಇಲ್ಲಿ **ಲಯ** ಶಬ್ದವೂ **ವಿವೇಶ** ಶಬ್ದವೂ ಪರಮಾತ್ಮ ನೊಂದಿಗೆ ಸಾಯುಜ್ಯವನ್ನೂ ಸಾಮ್ಯವನ್ನೂ ಹೊಂದಿದನು ಎಂಬ ಭಾವವನ್ನು ಬೋಧಿಸುತ್ತವೆ ಹೇಗೆ ಸೇರಿರುತ್ತಾನೆಂಬ ಭಾವದಲ್ಲಿ ಪತಿಪತ್ನಿಯೋಪಾದಿ ಪರಸ್ಪರ ವಿಶೇಷ ಪ್ರೀತಿಯಿಂದ ಭೋಗ್ಯ ಭಾವ

ದಿಂದಿರುತ್ತಾರೆಂದು ಮೂವರು ಮತೋದ್ಧಾರಕರೂ ಒಪ್ಪಿರುತ್ತಾರೆ. ಹೀಗಿರುವಾಗ ಶ್ರೀ ಮಚ್ಛಂಕರಾಚಾರ್ಯರು ಸ್ವರೂಪೈಕ್ಯವನ್ನು ಬೋಧಿಸಿದರು ಎಂದರೆ ಅಭಿಪ್ರಾಯ ವೇನಂದರೆ ಸ್ವರೂಪದಲ್ಲಿ ಸ್ವಲ್ಪ ಮಟ್ಟಿಗೆ ಸಾಮ್ಯತೆಯನ್ನು ಗುಣಾಷ್ಟಕಗಳ ಆವಿರ್ಭಾವದಿಂದ ಹೊಂದಿದರು ಎಂಬ ಭಾವವು. ಸಾಮ್ಯ ಭಾವವು ಕೆಲವು ವಿಷಯಗಳಲ್ಲಿ, ಮಾತ್ರವೇ ವಿನಾ ಮಿಕ್ಕ ವಿಷಯಗಳಲ್ಲಿ ಅಸಾಮ್ಯತೆಯೇ ಎಂದು ಭಾವಿಸತಕ್ಕದ್ದು. ಸ್ವರೂಪೈಕ್ಯವಾದವು ಈ ಮುಂದಿನಸ್ತುತಿಯಲ್ಲಿ ನಿಷೇಧಿಸಲ್ಪಟ್ಟಿರುತ್ತದೆ. **"ಪರಮಾತ್ಮಾತ್ಮನೋ ರ್ಯೋಗಃ ಪರಮಾರ್ಥ ಇತೀಷ್ಯತೆ। ಮಿಥ್ಯೈತದನ್ಯ ದ್ರವ್ಯಂ ಹಿನೈತಿ ತದ್ದ್ರವ್ಯ ತಾಂಯತಃ"** ಪರಮಾತ್ಮ ಮತ್ತು ಜೀವಾತ್ಮ ಇವರಿಬ್ಬರ **ಯೋಗಃ**– ಸ್ವರೂಪೈಕ್ಯವು **ಪರಮಾರ್ಥಃ**– ಶ್ರೇಷ್ಠವಾದ ಮುಕ್ತದೆಶೆಯಲ್ಲಿನ ಪ್ರಯೋಜನವು **ಇತಿ**– ಎಂದು **ಇಷ್ಯತೆ**- ಒಪ್ಪಿದರೆ, **ಏತತ್**– ವಾದವು **ಮಿಥ್ಯಾ**– ಸುಳ್ಳಾದುದು ಏಕೆಂದರೆ **ಯತಃ**– ಯಾವಕಾರಣದಿಂದ **ಅನ್ಯದ್ದ್ರವ್ಯಂ**–ಬೇರೆ ದ್ರವ್ಯವು, **ತದ್ದ್ರವ್ಯತಾಂ**–ಆ ದ್ರವ್ಯ ಭಾವವನ್ನೇ **ನೈತಿ**–ಹೊಂದಲಾರದೋ ಆ ಕಾರಣದಿಂದ ಸತ್ಯವಲ್ಲವು. **ಹಿ**–ನಿಶ್ಚಯವು. **"ಬ್ರಹ್ಮವೇದ ಬ್ರಹ್ಮೈವ ಭವತಿ"** ಎಂದು ಹೇಳಿದೆಯಲ್ಲಾ ಎಂದರೆ ಪರ ಬ್ರಹ್ಮವನ್ನೂ ಉಪಾಸಿಸಿದವನು ಪರಬ್ರಹ್ಮನಾಗುತ್ತಾನೆ ಎಂದರೆ ಪರಬ್ರಹ್ಮನ ಪರಮಸಾಮ್ಯವನ್ನು ಹೊಂದುತ್ತಾನೆಂಬರ್ಥವು. **ಬ್ರಹ್ಮವೇದ** ಎಂಬಲ್ಲಿ ಇಬ್ಬರು ಬ್ರಹ್ಮ ಮತ್ತು ಬ್ರಹ್ಮವೇದನೂ ಭಿನ್ನಚೇತನರು ಎಂಬುದು ವ್ಯಕ್ತವು. ಕರ್ತೃವೂ ಕರ್ಮವೂ ಒಂದೇ ಆಗಲಾರದಷ್ಟೇ. ಶ್ರುತಿಯೂ **"ನಿರಂಜನಃ ಪರಮಂಸಾಮ್ಯ ಮುಪೈತಿ"** ಎಂದು ಹೇಳುತ್ತದೆ. ಇನ್ನೊಂದು ಶ್ರುತಿಯೂ **"ಯಥೋದಕಂ ಶುದ್ಧೇ ಶುದ್ಧಾ ಮಾಸಿಕ್ತಂ ತಾದೃಗೇ ವಭವತಿ ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ"** ಓ ಗೌತಮನೇ ಶುದ್ಧವಾದ ನೀರಿನಲ್ಲಿ ಬೇರೆ ಶುದ್ಧವಾದ ನೀರು ಸೇರಿದುದಾಗಿ ಅವರ ಹಾಗೆಯೇ ಹೇಗೆ ಆಗುತ್ತದೋ ಹಾಗೆಯೇ ಜೀವತ್ಮನೂ ಪರಿಶುದ್ಧನಾಗಿ ಪರಿಶುದ್ಧನಾದ ಪರಮಾತ್ಮನೊಂದಿಗೆ ಭಕ್ತಿಯೋಗದ ಮೂಲಕ ಪರಮಾತ್ಮನನ್ನು ಸಾಕ್ಷಾತ್ಕರಿಸಿದವನಾಗಿ ಸೇರಿದವನಾಗುವನು. ಸ್ಮೃತಿಯಲ್ಲೂ ಹಾಗೆಯೇ **"ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯ ಮಾಗತಾಃ"** ಎಂದು ಹೇಳಲ್ಪಟ್ಟಿರುತ್ತದೆ. (ಗೀ ೧೪–೨) ಓ ಅರ್ಜುನನೇ ಈಗ ನಾನು ಉಪದೇಶಿಸುವ ಭಕ್ತಿ ಯೋಗವನ್ನು ಅನುಷ್ಠಿಸುವುದಾದರೆ ನನ್ನೊಂದಿಗೆ ಪರಮಸಾಮ್ಯವನ್ನು ಹೊಂದುವರು. ಅಂತವರು ಪುನಃ ಸೃಷ್ಟಿ ಸ್ಥಿತಿಲಯಗಳಿಗೆ ಸಿಕ್ಕುವುದಿಲ್ಲವೆಂದು ಮುಂದೆ ಹೇಳಿರುತ್ತದೆ. ಈ ಅಭಿಪ್ರಾಯವನ್ನೇ ಶ್ರೀ ವ್ಯಾಸರು **ಭೋಗಮಾತ್ರ ಸಾಮ್ಯ ಲಿಂಗಾಚ್ಚ** (ಶಾ.ಸೂ. ೪.೪.೨೧) ಎಂಬ ಸೂತ್ರದಲ್ಲಿ ಉಪಪಾದಿಸಿರುತ್ತಾರೆ. ಸಾಲೋಕ್ಯ ಸಾರೂಪ್ಯಾದಿ ಶಬ್ದಗಳ ಹಾಗೆಯೇ ಸಾಯುಜ್ಯ ಶಬ್ದವೂ ಒಟ್ಟಾಗಿರುವುದನ್ನೇ ಹೇಳುತ್ತದೆ ವಿನಾ, ಎರಡೂ ಸೇರಿ ಒಂದೆ ಆತ್ಮಾವಾಗುತ್ತದೆ ಎಂಬ ಅಭಿಪ್ರಾಯಕ್ಕೆ ಅವಕಾಶವಿಲ್ಲವು.

ಸಾಯುಜ್ಯ ಮುಕ್ತಿನ ಭಾವವು ಅದು ಎಂತಾದ್ದೆಂದರೆ, ಸಮಸ್ತವೂ. ಭಗವಂತ ನಿಂದಲೂ ಈ ಮುಕ್ತನಿಂದಲೂ ಭೋಗ್ಯವಾಗಿ ಅನುಭವಿಸುವುದರ ಮೂಲಕ ಇಬ್ಬರ ಆನಂದವೂ ಒಂದೇ ಎಂಬುದು ಅಭಿಪ್ರಾಯವು. **"ತೇಸರ್ವಗಂ ಸರ್ವತಃ ಪ್ರಾಪ್ಯ ಧೀರಾಃ ಯುಕ್ತಾತ್ಮಾನಸ್ಸರ್ವ ಮೇವಾ ವಿಶಂತಿ"** ಭಕ್ತಿಯಿಂದಪರಮಾತ್ಮ ನನ್ನು ಉಪಾಸಿಸಿ, ಪ್ರಾಜ್ಞರಾಗಿ ಉಪಾಸನ ಸುಖವನ್ನನುಭವಿಸಿದವರು ಎಲ್ಲಾ ಸ್ಥಳ ದಲ್ಲೂ ಸಂಚರಿಸುವ ಸಮಸ್ತವನ್ನೂ ಹೊಂದುವವರಾಗಿ ಸಮಸ್ತವನ್ನೂ ಅನುಭವಿ ಸುವವರಾಗಿ ಸಮಸ್ತವನ್ನೂ ಪ್ರವೇಶಿಸುವರು." ಎಂದೂ. **"ಸರ್ವಂಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ"** "ಮುಕ್ತನು ಏಕಕಾಲದಲ್ಲೇ ಸಾಕ್ಷಾತ್ಕರಿಸುವ ಸರ್ವಜ್ಞನಾಗುವುದರಿಂದ ಎಲ್ಲವನ್ನೂ ನೋಡುವನು, ಎಲ್ಲವನ್ನೂ ಎಲ್ಲಾ ಸ್ಥಳದಲ್ಲೂ ಅನುಭವಿಸಿ ಆನಂದಿಸುವನು," ಹಾಗೆಯೇ ಇನ್ನೂ ಇತರ ಶ್ರುತಿಗಳಲ್ಲಿ ಮುಕ್ತನು **"ಕ್ರೀಡನ್ ರಮಮಾಣಃ"** ಎಂದೂ ಎಲ್ಲಾ ಕಡೆಯಲ್ಲಿ ಸಂಚರಿಸುವನೆಂದೂ, ಸ್ವಾಮಿಯ ಎದುರಿನಲ್ಲಿ ನಿಂತು ಸ್ತುತಿಸುವನೆಂದೂ, ಆತನಿಗೆ ನಿತ್ಯಕೈಂಕರ್ಯವನ್ನು ಎಸಗುವನೆಂದೂ ಹೇಳಿರುವುದರಿಂದ ಸ್ವರೂಪೈಕ್ಯವಾದಕ್ಕೆ ಅನುಕೂಲವಿಲ್ಲವು. ಆದುದರಿಂದ "ಬಹ್ಮವಿದ್ಬ್ರಹ್ಮೈವಭವತಿ" ಎಂಬುದಕ್ಕೂ "ಬ್ರಹ್ಮವಿದಾಪ್ನೋತಿ ಪರಮ್" ಎಂಬುದಕ್ಕೂ ವಿರೋಧವಿಲ್ಲದ ಹಾಗೆ ಅರ್ಥವನ್ನು ಹೇಳತಕ್ಕದ್ದಾಗಿರುತ್ತದೆ; ಇವುಗಳಲ್ಲಿ ಕರ್ತೃ ಕರ್ಮಗಳಿಗೆ ಭೇದವೇ ತೋರಿಸಲ್ಪಟ್ಟಿರುತ್ತದೆ. ಹೀಗೆ ಅನೇಕ ಶ್ರುತಿ ಸ್ಮೃತಿ ಸೂತ್ರಾಭಿಪ್ರಾಯಗಳನ್ನು ಚೆನ್ನಾಗಿ ವಿಮರ್ಶಿಸಿ ತಿಳಿಯದೆ ಸ್ವರೂ ಪೈಕ್ಯವೆಂದು ಹೇಳೋಣವು ಪರಮಾಶ್ಚರ್ಯವು ಆದುದರಿಂದ **ಸಾಯುಜ್ಯ ದೋಭೂಃ** ಎಂಬುದರಿಂದ ಸ್ವರೂಪೈಕ್ಯವಾದವು ನಿರಾಕರಿಸಲ್ಪಟ್ಟಿತೆಂದು ಭಾವಿಸತಕ್ಕದ್ದು. ಸಾಯುಜ್ಯ ಶಬ್ದಕ್ಕೆ ಐಕ್ಯಾರ್ಥವನ್ನು ಕಲ್ಪಿಸಿದರೆ **ಅನ್ಯದೇವತಾ ಸಾಯುಜ್ಯವೂ** ಶಾಸ್ತ್ರಗಳಲ್ಲಿ ಹೇಳಿರುವುದರಿಂದ ಅಲ್ಲಿಯೂ ಅನ್ಯದೇವತೈಕ್ಯವೆಂದು ಅರ್ಥ ಹೇಳಲು ಸಾಧ್ಯವೇ ? ಪರಮಾತ್ಮ ಸಾಯುಜ್ಯವನ್ನು ಹೊಂದಿದವರ ವಿಷಯದಲ್ಲಿ ಪರಮ ಸಂಹಿತೆಯು ಹೇಳಿರುವುದೇನಂದರೆ– **"ಸಾಯುಜ್ಯಂ ಪ್ರತಿಪನ್ನಾಯೇ ತೀವ್ರಭಕ್ತಾಸ್ತಪಸ್ವಿನಃ। ಕಿಂಕರಾ ಮಮ ತೇ ನಿತ್ಯಂ ಭವನ್ತಿ ನಿರುಪದ್ರವಾಃ"** ಯಜ್ಞ, ದಾನ, ತಪಸ್ಸು ನಿತ್ಯನೈಮಿತ್ತಿಕ ಪಂಚಮಹಾಯಜ್ಞಗಳನ್ನನುಷ್ಠಿಸುವ ಕರ್ಮಠರಾಗಿಯೂ, ಕಷ್ಟತರವಾದ ಭಕ್ತಿಯೋಗ ನಿಷ್ಠರಾಗಿಯೂ ಇದ್ದುದರಿಂದ ಯಾರು ಸಾಯುಜ್ಯವನ್ನು ಹೊಂದಿರುತ್ತಾರೋ ಅವರು ನನಗೆ ದಾಸರಾಗಿ ನಿತ್ಯಕೈಂಕರ್ಯವನ್ನು ಮಾಡುವರು, ಇಲ್ಲಿನ ಸಂಸಾರ ದುಃಖ ಕ್ಲೇಶಗಳಿಲ್ಲದೆ ನಿರತಿಶಯಾನಂದವನ್ನೂ ಹೊಂದುವರು ಎಂದು ಸಾಯುಜ್ಯವನ್ನು ಹೊಂದಿದವರ ವಿಷಯದಲ್ಲಿ ಹೇಳಿರುವುದರಿಂದ ಸ್ವರೂಪೈಕ್ಯವಾದವು ಶಾಸ್ತ್ರಸಮ್ಮತ ವಾದುದಲ್ಲವು. ಶಾಂಡಿಲ್ಯ ಸ್ಮೃತಿಯಲ್ಲಿ **"ಯಾದೃಗ್ರೂಪಸ್ತು ಭಗವಾನ್**

**ಯತ್ರ ಯತ್ರಾವತಿಷ್ಠತೇ| ಮುಕ್ತಸ್ತು ಪಂಚಕಾಲಜ್ಞಃ ತಾದೃಶಸ್ಸಹ ಮೋದತೇ"** ಎಂದರೆ ಭಗವಂತನು ಯಾವ ದಿವ್ಯ ಮಂಗಳ ವಿಗ್ರಹವನ್ನು ಹೊಂದಿ ಎಲ್ಲೆಲ್ಲಿ ಇರುತ್ತಾನೋ ಮುಕ್ತನೂ ಕೂಡ ಸರ್ವಜ್ಞನಾಗಿ ಹಾಗೆಯೇ ಅಂತಹ ಶರೀರವನ್ನು ಹೊಂದಿ ಆತನೊಂದಿಗೆ ಸಮಾನಾನಂದವನ್ನು ಅನುಭವಿಸುವನು. ಆದುದರಿಂದ ಸಾಯುಜ್ಯ ಶಬ್ದಕ್ಕೆ **"ಪ್ರಣವೋ ಧನುಶ್ಶರೋಹ್ಯಾತ್ಮಾಬ್ರಹ್ಮ ತಲ್ಲಕ್ಷ್ಯ ಮುಚ್ಯತೇ| ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋಭವೇತ್"** ಪ್ರಣವವು ಧನುಸ್ಸೆಂದೂ ಈ ಜೀವಾತ್ಮನು ಬಾಣವೆಂದೂ ಈ ಬಾಣಕ್ಕೆ ಗುರಿ ಪರಬ್ರಹ್ಮವೆಂದೂ ಹೇಳಲ್ಪಟ್ಟಿರುತ್ತದೆ. ಜಾಗರೂಕನಾಗಿ, ಪ್ರಣವ ಧನುಸ್ಸಿನಲ್ಲಿ ಈ ಆತ್ಮಾವಾದ ಶರವನ್ನು ಸೇರಿಸಿಬಿಟ್ಟರೆ ಆಗ ಅದು ಹೇಗೆ ಪರಬ್ರಹ್ಮನನ್ನು ಸೇರಿ ಅದರಂತೆಯೇ ಆಗುತ್ತದೋ ಎಂದರೆ ಗುಣಾಷ್ಟಕಗಳನ್ನು ಹೊಂದಿ ಭೋಗ್ಯವಾಗಿ ಸಮಾನಾನಂದವನ್ನು ಹೊಂದುತ್ತದೆಂಬ ಭಾವವು. ಇಲ್ಲಿ **ತನ್ಮಯ** ವೆಂದರೆ **ಪ್ರಾಚುರ್ಯಮಯಟ್,** ಎಲ್ಲೆಲ್ಲೂ ಅವನಿಗೆ ಪರಿಪೂರ್ಣ ಬ್ರಹ್ಮನೇ ಕಾಣುವನು. ಹೇಗೆಂದರೆ **"ವೃಕ್ಷೇ ವೃಕ್ಷೇ ಚ ಪಶ್ಯಾಮಿ ಚೀರ ಕೃಷ್ಣಾಜಿನಾಂಬರಂ"** ಎಂಬಲ್ಲಿ ಹೇಳಿರುವ ಹಾಗೆ.

ನಿನ್ನ ಕ್ಷಮಾಗುಣಕ್ಕೆ ವಶವಲ್ಲದ ಅಪರಾಧವೇ ಇಲ್ಲವೆಂದು ಮುಂದೆ ಹೇಳುತ್ತಾರೆ. **ಕಿಮುಪದ ಮಾಗಸ್ತ್ಯತೇಸ್ತಿಕ್ಷಮಾಯಾಃ**–ಹಾಗೆ ನಿನ್ನ ಕ್ಷಮಾಗುಣಕ್ಕೆ ವಶವಲ್ಲದ ಪಾಪಗಳು ಇದ್ದುದಾದರೆ ಅವುಗಳನ್ನು ಹೋಗಲಾಡಿಸಲು ನಿನಗೆ ಶಕ್ತಿ ಇಲ್ಲವೆಂದಾಗಿ ನಿನಗೆ ಸರ್ವಶಕ್ತನೆಂಬ ಬಿರುದೂ ಸಲ್ಲುವುದಿಲ್ಲವು. **"ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ"** ಎಂದು ಲೀಲಾ ಸಾರಥಿಯಾಗಿ ಹೇಳಿದ ಅಮೋಘೋಕ್ತಿಯೂ ಪರಮಾರ್ಥವಲ್ಲವೆಂದಾಗುತ್ತದೆಂಬ ಭಾವವು. ನಿನ್ನ ಕ್ಷಮಾಗುಣದಿಂದ ನಾಶಹೊಂದದ ಪಾಪವೇ ಇಲ್ಲವೆಂಬುದು ನನ್ನ ಅಭಿಪ್ರಾಯವು. ಹಾಗೆ ನಾಶ ಹೊಂದದಿರುವುದೇನಾದರೂ ನಿನಗೆ ತಿಳಿದಿದ್ದರೆ **ವದ** ಹೇಳು ಎನ್ನುತ್ತಾರೆ. ನಿನಗೂ ತಿಳಿದೂ ಇಲ್ಲವು. ನೀನು ಹೇಳಲೂ ಸಾಧ್ಯವಿಲ್ಲವು ಎಂಬ ಭಾವವು.

ಇಲ್ಲಿ ಕ್ಷಮೆಯು ಮಾತ್ರ ಹೇಳಲ್ಪಟ್ಟಿದ್ದರೂ ಕ್ಷಮೆಯು ದಯೆ ಇಲ್ಲದೇ ಇರುವುದಿಲ್ಲವಾದುದರಿಂದ ಎರಡೂ ಹೇಳಲ್ಪಟ್ಟುವೆಂದೇ ಭಾವಿಸತಕ್ಕದ್ದು. ಆದುದರಿಂದ ದಯೆಯ ವಿಷಯವಾಗಿ ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

ಸಾಯುವವರೆಗೂ ಅಪರಾಧವನ್ನೇ ಮಾಡುತ್ತಿದ್ದ ಶಿಶುಪಾಲನಿಗೆ ಮುಕ್ತಿಯು ಹೇಗೆ ಯೋಗ್ಯವು ? ಪಕ್ಷಪಾತದ ಹಾಗೆ ತೋರುವುದಿಲ್ಲವೇ ? ಎಂದರೆ ಶಾಪ ಮೂಲಕ ಪ್ರಾಪ್ತವಾದ ಜನ್ಮ ಶರೀರ ಪ್ರಾಪ್ತಿಗಳ ಮೂಲಕ ಅಪರಾಧವಾದರೂ ಅವರು ಮೊದಲು ಸ್ವಾಮಿಗೆ ಅಂತರಂಗ ಭೂತರಾಗಿ ಕೈಂಕರ್ಯವನ್ನು

ಮಾಡುತ್ತಿದ್ದುದರಿಂದಲೂ ಮತ್ತು ಮೂರನೆಯ ಜನ್ಮ ಸಮಾಪ್ತಿಯಲ್ಲಿ ಭಗವಂತನನ್ನೇ ವೃತ್ರಾಸುರನು ಸಂಕರ್ಷಣನನ್ನು ಸ್ಮರಿಸಿದ ಹಾಗೆ ನಿರಂತರ ಸ್ಮರಿಸುತ್ತಿದ್ದುದರಿಂದಲೂ ಸ್ವಾಮಿ ಸಾಯುಜ್ಯವನ್ನು ಹೊಂದಿದನು.

ಆದುದರಿಂದ ಸರ್ವಶಕ್ತನ ಕ್ಷಮಾಗುಣದಿಂದ ಸರ್ವ ಪಾಪಗಳೂ ತೊಲಗುವುವು. ಹೇಗೆಂದರೆ "**ತದ್ಯಥೇಷೀಕಾತೂಲ ಮಗ್ನೌ ಪ್ರೋತಂ ಪ್ರದೂಯೇತ | ಏವಂ ಹಾಸ್ಯ ಸರ್ವೇ ಪಾಪ್ಮಾನಃ ಪ್ರದೂಯನ್ತೇ**" ಶಣಬಿನ ಹತ್ತಿಯು ಬೆಂಕಿಯಲ್ಲಿ ಹಾಕಿದರೆ ಹೇಗೆ ಭುಗ್ಗೆಂದು ಹತ್ತಿ ಉರಿದು ಹೋಗುತ್ತದೋ ಹಾಗೆ ಸ್ವಾಮಿಯ ಕ್ಷಮಾಗುಣದಿಂದ ಉಪಾಯ ನಿಷ್ಠನ ಸರ್ವಪಾಪಗಳೂ ತೊಲಗುತ್ತವೆ. ಎಂದರೆ ಸ್ವಾಮಿಯು ನಿಗ್ರಹ ಸಂಕಲ್ಪವನ್ನು ತ್ಯಜಿಸುವನು ಎಂಬುದು ಪರಮಾರ್ಥವು.

ಹೀಗಿರುವಾಗ ಎಂದರೆ ನಿನ್ನ ದಯಾ ಮತ್ತು ಕ್ಷಮಾಗುಣಗಳು ಮಹತ್ತಾದ ಘೋರವಾದ ಪಾಪಗಳ ದೆಶೆಯಿಂದ ರಕ್ಷಕಗಳಾಗಿರುವಾಗ, "**ಅಮರ್ಯಾದಃ ಕ್ಷುದ್ರಃ**" ಇತ್ಯಾದಿ ಅಲ್ಪಾಪರಾಧಗಳನ್ನೆಸಗಿದ ನನಗೆ ರಕ್ಷಕಗಳಾಗುವುದಿಲ್ಲವೇ ? ಕೈಮುತಿಕನ್ಯಾಯದ ಮೂಲಕ ರಕ್ಷಣೆಯು ಸಿದ್ಧವೆಂಬ ತಾತ್ಪರ್ಯವು. ಇಲ್ಲಿ ಸ್ವಾಮಿಯಲ್ಲಿ ದಯೆಇದ್ದರೆ ಕ್ಷಮೆಯುಂಟು. ಕ್ಷಮೆಯಿದ್ದರೆ ದಯೆಯುಂಟೆಂದು ಭಾವಿಸತಕ್ಕದ್ದಾಗಿರುತ್ತದೆ. ಶ್ರೀ ಪರಾಶರರ "**ತಸ್ಮಿನ್ನೇವ ಲಯಮುಪಯಯೌ**" ಎಂಬುದಕ್ಕೆ ಕೆಲವರು ಸ್ವರೂಪೈಕ್ಯವೆಂದು ಅರ್ಥ ಹೇಳಿದರು. ವಿಷ್ಣು ಚಿತ್ತೀಯರು ಈ **ಲಯ** ಶಬ್ದಕ್ಕೆ ಸಾಯುಜ್ಯವೆಂದು ಅರ್ಥ ಹೇಳಿದರು. ಅದು ಹೇಗೆ ಎಂದು ವಿವರಿಸಲಿಲ್ಲವು. ಪರಾಶರರ ಪುತ್ರರಾದ ವ್ಯಾಸರು ಈ ವಿಷಯದಲ್ಲಿ ಹೇಳಿರುವುದು ಏನೆಂದರೆ "**ವವಂದೇ ತತ್ತದಾ ತೇಜೋ (ಶಿಶುಪಾಲನ) ವಿವೇಶಚ ನರಾಧಿಪ**" **(ಜನಮೇಜಯ)** ಎಂದೂ ಮುಂದೆ **ವಿವೇಶ ಪುರುಷೋತ್ತಮಂ** ಎಂದೂ **ವಿವೇಶ** ಶಬ್ದವಿರುವುದರಿಂದ ಆತ್ಮ ಸ್ವರೂಪ ಭೇದಗಳಲ್ಲಿ ಅಭಿಪ್ರಾಯ ಪಟ್ಟು ವ್ಯಾಸ ಸೂತ್ರದಲ್ಲಿ ಪರಮ ಸಾಮ್ಯ ಶ್ರುತಿಯ ಮೂಲಕ ಭೋಗದಲ್ಲಿ ಮಾತ್ರ ಸಾಮ್ಯವೆಂದೂ, ಜೀವಾತ್ಮನಿಗೆ "**ಜಗದ್ವ್ಯಾಪಾರ ವರ್ಜಂ**" ಎಂದೂ ಹೇಳಿ, ಗೀತೆಯಲ್ಲಿ **ಮಮಸಾಧರ್ಮ್ಯ ಮಾಗತಾಃ** ಎಂದು ವ್ಯಕ್ತಪಡಿಸಿರುತ್ತಾರೆ. ಆದುದರಿಂದ **ಲಯ** ಶಬ್ದಕ್ಕೆ ಸಾಯುಜ್ಯವೆಂದೇ ಅರ್ಥವು. "**ಪ್ರಣವೋ ಧನುಶ್ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯ ಮುಚ್ಯತೇ | ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್** ಎಂಬ ಶ್ರುತಿಯಲ್ಲಿ ಬ್ರಹ್ಮವೂ ಶರವೂ ಬೇರೆಯಾಗಿದ್ದು ಎರಡೂ ಒಟ್ಟಿಗೆ ಹೇಗೆ ಸೇರುತ್ತದೋ ಹಾಗೆಯೇ ಎಂದು ಭಾವಿಸತಕ್ಕದ್ದು. ಶ್ರೀ ವ್ಯಾಸಪುತ್ರರಾದ ಶ್ರೀ ಶುಕರು ಈ ಸಂದರ್ಭದಲ್ಲೇ ಹೇಳಿರುವುದೇನೆಂದರೆ "**ಚೈದ್ಯ ದೇಹೋತ್ಥಿತಂ ಜ್ಯೋತಿಃ ವಾಸುದೇವಮುಪಾವಿಶತ್**" ಇಲ್ಲಿಯೂ **ಉಪಾವಿಶತ್** ಎಂಬುದ

**ನನುಪ್ರಪನ್ನಸ್ಸಕೃದೇವನಾಥ**
**ತವಾಹಮಸ್ಮೀತಿಚ ಯಾಚಮಾನಃ |**
**ತವಾನುಕಂಪ್ಯಃ ಸ್ಮರತಃ ಪ್ರತಿಜ್ಞಾಂ**
**ಮದೇಕವರ್ಜಂ ಕಿಮಿದಂ ವ್ರತಂ ತೇ** ||೬೪||

---

ರಿಂದ ತಮ್ಮ ತಂದೆಯವರ ಪ್ರಯೋಗವಾದ **ವಿವೇಶ** ಎಂಬರ್ಥವನ್ನೇ ತಾವೂ ಪ್ರಯೋಗಿಸಿರುತ್ತಾರೆ. ಶ್ರೀ ವೀರ ರಾಘವೀಯ ವ್ಯಾಖ್ಯಾನದಲ್ಲಿ "**ತೇಜಃ**- ಜೀವಾತ್ಮಕಂ, **ವಾಸುದೇವಂ-ಶ್ರೀ ಕೃಷ್ಣಂ ಉಪಾವಿಶತೆ-ತಾವತ್ಪ್ರವಿಶ್ಯ ತತಸ್ಸಾಧರ್ಮ್ಯಮಾಪ**" ಎಂಬ ವ್ಯಾಖ್ಯಾನವು. ಹೀಗೆ ಶ್ರೀ ಕೃಷ್ಣನನ್ನು ನಿಂದಿಸಿದವನಿಗೆ ಮುಕ್ತಿಯು ಹೇಗೆ ಎಂದರೆ ರುಕ್ಮಿಣೀ ವಿವಾಹ ಕಾಲದಿಂದಲೂ ಶ್ರೀ ಕೃಷ್ಣನು ಶಿಶುಪಾಲನಿಗೆ ವೈರಿಯಾಗಿ ಶ್ರೀ ಕೃಷ್ಣನನ್ನೇ ಧ್ಯಾನಿಸುತ್ತಾ ಇದ್ದುದರಿಂದ ತನ್ಮಯತ್ವವು. ಅಂತಹ ಧ್ಯಾನದಿಂದ ಸ್ವಾಮಿಯ ಪಾದಾರವಿಂದವನ್ನು ಹೊಂದಿದನೆಂದು ಭಾವಿಸತಕ್ಕದ್ದು. "**ಜನ್ಮತ್ರಯಾನುಗೃಹೀತ ವೈರಸಂರಬ್ಧಯಾಧಿಯಾ| ಧ್ಯಾಯಂಸ್ತನ್ಮಯತಾಂಯಾತಃ ಭಾವೋಹಿಭವಕಾರಣಮ್**" ಎಂದು ಇರುತ್ತದೆ. ದಿವ್ಯಮಂಗಳ ವಿಗ್ರಹವು ಶುಭಾಶ್ರಯವು. ಯಾವ ಕಾರಣದಿಂದಲೇ ಆಗಲಿ ಅದನ್ನು ಧ್ಯಾನಿಸಿದರೆ ಸರ್ವಮಂಗಳವು.

**ಅವತಾರಿಕೆಯು:**– ಆದುದರಿಂದ **ತವಾಹಂ** ಎಂಬ ಶೇಷ ಶೇಷಿ ಸಂಬಂಧವನ್ನು ಗ್ರಹಿಸಿ, ನಿನ್ನಲ್ಲಿ ಭರನಮರ್ಪಣೆ ಮಾಡಿದ, ನಿನ್ನಲ್ಲಿ ಶರಣಾಗತಿಯನ್ನನುಷ್ಠಿಸಿದವನನ್ನು ಕೈಬಿಟ್ಟು "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚಯಾಚತೇ | ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ**" ಎಂಬ ನಿನ್ನ ಅಮೋಘೋಕ್ತಿಯಲ್ಲಿ ಪ್ರಕಟಿಸಿರುವ ನಿನ್ನ ವ್ರತವನ್ನೂ ಎಂದಿಗಾದರೂ ತ್ಯಾಗ ಮಾಡುತ್ತೀಯೋ? ಎಂದಿಗೂ ಇಲ್ಲವೆಂಬ ಭಾವನೆಯಿಂದ ಹೇಳುತ್ತಾರೆ. ಆದುದರಿಂದ ನಾನು ನಿರ್ಭಯನಾಗಿಯೂ ನಿರ್ಭರನಾಗಿಯೂ ಇದ್ದೇನೆ ಎಂಬ ಭಾವನೆಯನ್ನು ಈ "**ನನು ಪ್ರಪನ್ನಃ**" ಎಂಬ ಶ್ಲೋಕದಿಂದ ಸೂಚಿಸುತ್ತಾರೆ.

**ಅರ್ಥವು:**–ತಾವು ಎಂತಹವರೆಂಬುದು ಸರ್ವಜ್ಞನಾದ ನಿನಗೇನೇ ಗೊತ್ತಿಲ್ಲವೇ? ಅದು ಸ್ವತಸ್ಸಿದ್ಧವಾದ ವಿಷಯವೇ ಎಂಬ ಭಾವನೆಯಿಂದ **ನನು** ಎಂದು ಶ್ಲೋಕದ ಪ್ರಾರಂಭವು. ನೀನು ಕೃಪೆತೋರಲು ಏನೇನು ಹೇತುಗಳು ಬೇಕೋ ಅವೆಲ್ಲವೂ ತಮ್ಮಲ್ಲಿದೆ ಎಂಬ ಭಾವವನ್ನು ಸೂಚಿಸುತ್ತದೆ. ಪ್ರಥಮತಃ ನೀನು ನನಗೆ ನಾಥನು, ಸ್ವಾಮಿಯು ಆದುದರಿಂದ **ಹೇನಾಥ**– ಓ ಸ್ವಾಮಿಯೇ, ಸ್ವಾಮಿಭೃತ್ಯ, ಅಥವಾ ಶೇಷಿಶೇಷ ಸಂಬಂಧವುಂಟೆಂಬುದನ್ನು ಅರಿತಿರುವುದನ್ನು ಸೂಚಿಸುತ್ತದೆ. ಆದುದರಿಂದ ತಾವು **ಪ್ರಪನ್ನಃ**– ನಿನಗೇ ಶೇಷಭೂತನು, ದಾಸನು, ಆಗಿದ್ದೇನೆಂದು, **ಯಾಚಮಾನಃ**– ಯಾಚಿಸುತ್ತಿರುವೆನು, **ತವ**–ಶ್ರೀ ರಾಮಾವತಾರಿಯಾದ ನಿನ್ನ

**ಪ್ರತಿಜ್ಞಾಂ**–"**ಸಕೃದೇವ ಪ್ರಪನ್ನಾಯ**" ಎಂಬಲ್ಲಿ ವಿಭೀಷಣ ಶರಣಾಗತಿಯಲ್ಲಿ ಮಾಡಿದ ಪ್ರತಿಜ್ಞೆಯನ್ನು **ಸ್ಮರತಃ**–ಸ್ಮರಿಸುತ್ತಿರುವವನೂ, **ತವ**–ನಿನಗೆ, **ಅನುಕಂಪ್ಯಃ**–ದಯೆಯನ್ನು ತೋರಿಸಲು ಯೋಗ್ಯನೂ, ಆದ ನಾನು ಹೀಗಿರುವಾಗ, **ಮದೇಕವರ್ಜಂ**–ನನ್ನೊಬ್ಬನನ್ನು ಮಾತ್ರ ರಕ್ಷಿಸದೇ ತ್ಯಜಿಸೋಣವು, **ಇದಂ**–ಇದು, **ತೇ** ಕರುಣಾ ಕ್ಷಮಾಗುಣಗಳಿಗೆ ನಿಧಿಯಾದ ನಿನಗೆ, **ಕಿಂವ್ರತಂ**–ಇದು ನಿನ್ನ ವ್ರತ ವಾಗುತ್ತದೆಯೇ? ಆದುದರಿಂದ ನನ್ನಂಥವನನ್ನು ನೀನು **ನತ್ಯಜೇಯಂ** ಎಂದು ನೀನೇ ಹೇಳಿದ ಹಾಗೆ ಕೈಬಿಡುವುದೂ ಇಲ್ಲವು; ನಿನ್ನ ವ್ರತವನ್ನು ನೀನು ಕಾಪಾಡಿಕೊಳ್ಳದೇ ಇರುವುದೂ ಇಲ್ಲವು ಎಂಬ ಭಾವವು. ಅಥವಾ **ಮದೇಕವರ್ಜಂ** ನನ್ನೊಬ್ಬನನ್ನು ರಕ್ಷಿಸದೇ ಬಿಡೋಣವಾದ, **ಇದಂ**–ಇದು **ಕಿಂವ್ರತಂ**–ಹೇಗೆ ನಿನ್ನ ವ್ರತವಾದೀತು?

**ಉಪಪಾದನೆಯು**:–ಕೃಪಾ ಕ್ಷಮಾದಿಗಳಿಗೆ ಆಕರನಾಗಿ ಆಶ್ರಿತರು ಎಷ್ಟೇ ಮಹಾಪಾಪಿಗಳಾಗಿದ್ದರೂ ಎಂದಿಗೂ ಕೈಬಿಡುವುದಿಲ್ಲವೆಂದೂ ರಾಮಾವತಾರಿಯಾಗಿಯೂ ಕೃಷ್ಣಾವತಾರಿಯಾಗಿಯೂ ಶಪಥ ಮಾಡಿದ ನೀನು ಎಂದಿಗಾದರೂ ನಿನ್ನ ಸತ್ಯ ಸಂಕಲ್ಪವನ್ನು ನಡೆಯಿಸದೇ ಇರುತ್ತೀಯೋ? ಇಲ್ಲವೇ ಇಲ್ಲವು. ಆದುದರಿಂದ ನಿರ್ಭಯನಾಗಿಯೂ ನಿರ್ಭರನಾಗಿಯೂ ಇರುತ್ತೇನೆಂದು ಹೇಳುತ್ತಾರೆ. ಆತನು ಎಲ್ಲಾದರೂ ಕೈಬಿಟ್ಟಾನೋ ಎಂಬ ಸಂದೇಹದಿಂದಲಾಗಲಿ ಭಯದಿಂದಲಾಗಲಿ ಹೇಳಿದುದಲ್ಲವು. ಹಾಗೆ ಹೇಳಿದುದಾದರೆ ಶರಣಾಗತಿಶಾಸ್ತ್ರಕ್ಕೆ ವಿರುದ್ಧವಾಗುತ್ತದೆ. ಪ್ರಾಜ್ಞರಾದ ಯಾಮುನ ಮುನಿಗಳು ಎಂದಿಗೂ ಶಾಸ್ತ್ರವಿರುದ್ಧವಾದ ಅಭಿಪ್ರಾಯಗಳನ್ನು ಪ್ರಕಟಿಸರು. "**ಸಕೃದೇವ ಪ್ರಪನ್ನಾಯ**" ಎಂಬ ಶ್ಲೋಕದಲ್ಲಿ ಹೇಳಿದುದೂ "**ಸರ್ವಧರ್ಮಾ**" ಎಂಬ ಶ್ಲೋಕದಲ್ಲಿ ಹೇಳಿದುದೂ ಎಲ್ಲಾ ಪ್ರಪನ್ನರಿಗೂ ಹೇಳಿದುದಾದನಂತರ ನಾನು ಹೇಗೆ ವ್ಯಾವರ್ತಿಸಲ್ಪಟ್ಟೆನು? ನನಗೂ ಕೂಡ ಆ ವಾಕ್ಯಗಳು ಅನ್ವಯಿಸಿದವುಗಳೇ ಎಂಬುದರಲ್ಲಿ ಸಂದೇಹವಿಲ್ಲವು ಎಂದು ಹೇಳುತ್ತಾರೆ. **ಸಕೃತ್**–ಭರನ್ಯಾಸವು "**ಸಕೃದೇವಹಿ ಶಾಸ್ತ್ರಾರ್ಥಃ**" ಎಂತಲೂ "**ಸಕೃದೇವ ಪ್ರಪನ್ನಾಯ**" ಇತ್ಯಾದಿ ಪ್ರಮಾಣಗಳನ್ನನುಸರಿಸಿ **ಸಕೃದೇವ** ಎಂದು ಹೇಳಿದರು. **ಏವ** ಕಾರಾಭಿಪ್ರಾಯವೇನೆಂದರೆ ಇನ್ನೊಂದು ಉಪಾಯವಾದ ಪರಮಾತ್ಮೋಪಾಸನೆಯ ಅವಶ್ಯಕತೆಯೇ ಇಲ್ಲದೆ ಎಂಬ ಭಾವವನ್ನು ಸೂಚಿಸುತ್ತದೆ. ಅಥವಾ ಅನೇಕ ಸಲ ಭರನ್ಯಾಸವನ್ನು ಅನುಷ್ಠಿಸಬೇಕಾದ ಅವಶ್ಯಕತೆ ಇಲ್ಲವೆಂಬ ಭಾವದಿಂದಲಾದರೂ ಪ್ರಯೋಗವೆಂದು ಭಾವಿಸಬಹುದು. ಅಥವಾ ಆ ಸಕೃತ್ಪ್ರಣಾಮದಿಂದಲೇ, ಪ್ರಾಪ್ತಿ ವಿರೋಧಿಗಳಾದ ಸಮಸ್ತ ಪಾಪಗಳೂ ತೊಲಗುವುವು ಎಂಬ ಭಾವದಿಂದಲಾದರೂ ಹೇಳಲ್ಪಟ್ಟಿತೆಂದು ಭಾವಿಸಬಹುದು.–

ಕೆಲವರು **"ಸಕೃದೇವ ಪ್ರಪನ್ನಾಯ"** ಎಂಬ ಶ್ಲೋಕದಲ್ಲಿ ಉತ್ತರಾರ್ಧ ದಲ್ಲಿರುವ **"ಅಭಯಂ ಸರ್ವಭೂತೇಭ್ಯೋದದಾಮಿ"** ಎಂಬಲ್ಲಿರುವ **ದದಾಮಿ** ಎಂಬುದರೊಂದಿಗೆ **ಸಕೃದೇವ** ಎಂಬುದಕ್ಕೆ ಅನ್ವಯವೆಂಬುದಾಗಿ ಹೇಳಿ ಶೀಘ್ರವಾಗಿ ಭಗವಂತನು ಫಲವನ್ನು ಕೊಡುವೆನು ಎಂದು ಹೇಳಿದರೆಂದು ಅರ್ಥ ಮಾಡಿರುತ್ತಾರೆ. ಇದು ಪ್ರವತ್ತಿ ಶಾಸ್ತ್ರಕ್ಕೆ ವಿರೋಧವಾಗಿ ಉಚಿತವಲ್ಲವು. ಏಕೆಂದರೆ **"ಪ್ರಚಯಾಪಚಯ ಧ್ವಂಸ ಪ್ರತ್ಯೂಹ ರಹಿತಾ ಪ್ರಭೌ । ಪ್ರಪತ್ತಿಃ ಕ್ಲಪ್ತ ಕಾಲೇತು ಫಲತೀತ್ಯಪಿ ಸೂಚ್ಯತೇ"** ವೃದ್ಧಿಯನ್ನು ಹೊಂದುವುದು, ಹೀನದೆಶೆಯನ್ನು ಹೊಂದುವುದು, ನಾಶಹೊಂದುವುದು, ವಿಘ್ನಗಳು ಸಂಭವಿಸುವುದು, ಇವುಗಳಿಲ್ಲದ ಸಮರ್ಥನಾದ ಭಗವಂತನಲ್ಲಿ ಶರಣಾಗತಿಯು ಕ್ಲಿಪ್ತಕಾಲದಲ್ಲಿ ಫಲವನ್ನು ಕೊಡುತ್ತದೆಂಬುದನ್ನು ಸೂಚಿಸುತ್ತದೆ ಎಂದು ತಿಳಿಯತಕ್ಕದ್ದು. ಶ್ರೀ ಭರತಾಳ್ವಾರ್ ಅವರ ಶರಣಾಗತಿಯ ಫಲವು ೧೪ ವರ್ಷಗಳು ಕಳೆದನಂತರ ಸಿದ್ಧಿಸಿತು.

ಇಲ್ಲಿ **ನಾಥ** ಎಂಬ ಶಬ್ದದಿಂದ ಭಗವಂತನು ಸ್ವಾಮಿಯು ತಾವು ಅವನ ಸ್ವತ್ತು ಎಂಬ ಭಾವವೂ, ತನ್ನನ್ನು ತಾನು ರಕ್ಷಿಸಿಕೊಳ್ಳಲು ಶಕ್ತಿ ಇಲ್ಲದುದರಿಂದಲೂ ಸರ್ವಶಕ್ತನಾದ ಭಗವಂತನದೇ ತಮ್ಮನ್ನು ರಕ್ಷಿಸುವ ಕರ್ತವ್ಯವು ಎಂಬ ಭಾವವು. ಈ ಕಾರಣದಿಂದಲೇ **ತವಾಹಂ** ನಿನ್ನ ಸ್ವತ್ತು ನಾನು ಎಂದು ಹೇಳಿ ಶರಣಾಗತರಾದರೆಂಬ ಭಾವವು ತೋರಿಬರುತ್ತದೆ. ನಾಥನಾದವನು, ಶಕ್ತಿ ಇದ್ದರೆ ಆಶ್ರಯಿಸಿದವನನ್ನು ರಕ್ಷಿಸಲೇಬೇಕು. ಹಾಗೆ ರಕ್ಷಿಸದೇ ಇದ್ದರೆ **"ತತ್ಪಾಪಂ ಲೋಕಗರ್ಹಿತಮ್"** ಎಂದೂ ಮತ್ತು **"ಆದಾಯ ಸುಕೃತಂ ತಸ್ಯ ಸರ್ವಂಗಚ್ಛೇದ ರಕ್ಷಿತಃ"** ರಕ್ಷಿಸದೇ ಇದ್ದವನ ಸುಕೃತವನ್ನು ಕೊಂಡು ಹೋಗುವನೆಂದೂ **"ಅಸ್ವರ್ಗ್ಯಂ ಚಾ ಯಶಸ್ಯಂಚ ಬಲವೀರ್ಯ ವಿನಾಶನಮ್"** ಅಂತವನಿಗೆ ಸ್ವರ್ಗಪ್ರಾಪ್ತಿ ಇಲ್ಲದೆ ನರಕವೆಂದೂ ಯಶಸ್ಸಿಗೆ ಕುಂದಕವೆಂದೂ ಆತನ ಬಲ ವೀರ್ಯಗಳ ನಾಶ ಉಂಟು ಮಾಡುವುದೆಂದೂ ಹೇಳಲ್ಪಟ್ಟಿರುತ್ತದೆ. ಇದನ್ನೆಲ್ಲಾ ಉಪದೇಶಿಸುವುದಕ್ಕಾಗಿ **"ಲೋಕನಾಥಃ ಪುರಾಭೂತ್ವಾ ಸುಗ್ರೀವಂ ನಾಥಮಿಚ್ಛತಿ"** ಶ್ರೀ ರಾಮಚಂದ್ರಪ್ರಭುವು ತಾನೇ ಸಮರ್ಥನಾದ, ಲೋಕಕ್ಕೆಲ್ಲಾ ಸ್ವಾಮಿಯಾಗಿ ಹಿಂದೆಯೆಲ್ಲಾ ಆಗಿದ್ದರೂ ತನ್ನ ಕಾರ್ಯಕ್ಕಾಗಿ ಸುಗ್ರೀವನನ್ನು ತಮಗೆ ನಾಥನನ್ನಾಗಿ ಆಶ್ರಯಿಸಿದರು ಎಂದು ಹೇಳಲ್ಪಟ್ಟಿರುತ್ತದೆ. ಈ ಅಭಿಪ್ರಾಯಗಳನ್ನೆಲ್ಲಾ ನಾಥಶಬ್ದವು ಪ್ರಕಟಿಸುತ್ತದೆ.—**ನಾಥ**ನೆಂದು ಸಮರ್ಥನಾದ ಭಗವಂತನನ್ನು ಸಂಬೋಧಿಸಿ **ತವಾಹಂ** ಎಂದು ಹೇಳಿ ಆಶ್ರಯಿಸಿದನಂತರ ನೀನು ರಕ್ಷಿಸಲೇ ಬೇಕು ತಟಸ್ಥನಾಗಿರಲು ಸಾಧ್ಯವೇ ಇಲ್ಲವೆಂಬುದು ಸೂಚಿತವು. ಇದರಿಂದ ಸರ್ವರಿಗೂ ಶರಣ್ಯನಾಗಿರುವುದೂ ಚೇತನರು ಮಾಡುವ ಕೈಂಕರ್ಯಗಳೆಲ್ಲಕ್ಕೂ ಸರ್ವಶೇಷಿಯಾಗಿ ತಾನೇ ಉದ್ದೇಶ್ಯನೆಂಬ ಪ್ರಣವಾರ್ಥವೂ ಸೂಚಿತವು.

**ತವಾಹಮ್** ಎಂಬುದರಿಂದ **ತವದಾಸಭೂತೋಽಹಮ್, ತವ ನಿರಂತರ ಕಿಂಕರೋಽಹಮ್** ಎಂಬಲ್ಲಿ ತೋರುವ ಮೂಲ ಮಂತ್ರಾರ್ಥವು ಹೇಳಲ್ಪಟ್ಟಿತು. ಇಲ್ಲಿಯೂ ಸ್ವಾಮಿಗೆ ಶೇಷವೃತ್ತಿಯನ್ನೂ ದೇಹಾವಸಾನಾನಂತರವೂ ಶೇಷವೃತ್ತಿ ಯನ್ನೂ ಈ **ತವಾಹಂ** ಎಂಬುದರಿಂದ ಅಪೇಕ್ಷಿಸುತ್ತಾರೆ. ಅದಕ್ಕಾಗಿಯೇ **ಯಾಚಮಾನಃ** ಎಂಬ ಪ್ರಯೋಗವು. **ಅಸ್ಮಿ** ಹಾಗೆಯೇ **ಸ್ಯಾಂ**-ಆಗುವೆನು ಎಂಬ ಭಾವವು. ಇದರಿಂದ ಗೋಪ್ತೃತ್ವ ವರಣವೂ ಆತ್ಮ ನಿಕ್ಷೇಪವೂ ಹೇಳಲ್ಪಟ್ಟಿತೆಂದು ಕೆಲವರು ಹೇಳುವರು. ಇನ್ನು ಕೆಲವರು ಮಾನಸವಾಗಿಯೂ ವಾಚಿಕವಾಗಿಯೂ ಶರಣಾಗತಿರೂಪ ಪ್ರಾರ್ಥನೆಯು ಹೇಳಲ್ಪಟ್ಟಿತೆನ್ನುವರು. ಇನ್ನೂ ಕೆಲವರು ಪ್ರಪತ್ತಿಯೂ ಭಕ್ತಿಯೂ ಹೇಳಲ್ಪಟ್ಟಿತೆನ್ನುವರು.

**ಯಾಚಮಾನಃ**–ಎಂಬುದರಿಂದ ಶರಣಾಗತಿಯೂ ಆ ಶರಣಾಗತಿಯು ಯಾಚನಾರೂಪವಾದುದೆಂಬ ಭಾವವೂ ಸೂಚಿತವು. ಈ ಸಂದರ್ಭದಲ್ಲಿ ಭರತ ಮುನಿಯ ವಾಕ್ಯವಾದ **"ಅನನ್ಯಸಾಧ್ಯೇ ಸ್ವಾಭೀಷ್ಟೇ ಮಹಾವಿಶ್ವಾಸ ಪೂರ್ವಕಮ್। ತದೇಕೋಽಪಾಯತಾ ಯಾಚ್ಞಾ ಪ್ರಪತ್ತಿಃ ಶರಣಾಗತಿಃ"** ಎಂಬುದು ಅನುಸಂಧೇಯವು. ಬೇರೆ ಯಾವ ಸಾಧನದಿಂದಲೂ ಸಾಧಿಸಲು ಕಷ್ಟ ವಾಗಿರುವ ತನಗೆ ಬೇಕಾದ ಅಭೀಷ್ಟವನ್ನು ಹೊಂದಲು ನೀನೇ ಸಾಧನವಾಗಿರು ಎಂಬ ಮಹಾ ವಿಶ್ವಾಸಪೂರ್ವಕವಾಗಿ ಪ್ರಾರ್ಥನೆಯೇ ಶರಣಾಗತಿಯು ಎಂದು ಹೇಳಿ ರುವುದರಿಂದ **ಯಾಚಮಾನಃ**–ಎಂಬ ಪ್ರಯೋಗದಿಂದ ಶರಣಾಗತಿಯು ಪ್ರಾರ್ಥನಾ ರೂಪವಾದುದೂ **ತದೇಕೋಽಪಾಯತಾ** ಎಂಬರ್ಥವೇ **ತವಾಹಮಸ್ಮಿ** ಎಂಬಲ್ಲಿ ತೋರಿ ಬರುತ್ತದೆಂದೂ ಹೇಳಿದಂತಾಯಿತು. ಹಾಗೆಯೇ **"ತ್ವಮೇವೋಪಾಯ ಭೂತೋಮೇ ಭವೇತಿ ಪ್ರಾರ್ಥನಾಮತಿಃ। ಶರಣಾಗತಿರಿತ್ಯುಕ್ತಾ ಸಾದೇ ವೇಸ್ಮಿನ್ ಪ್ರಯುಜ್ಯತಾಮ್"** ಎಂಬ ಅಹಿರ್ಬುಧ್ನ್ಯ ಸಂಹಿತಾ ವಾಕ್ಯವೂ ಈ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ ಭಗವಂತನನ್ನು ಕುರಿತು ನೀನೇ ನನಗೆ ಉಪಾಯನಾಗಿರು ಎಂಬ ಪ್ರಾರ್ಥನೆಯಿಂದ ಕೂಡಿದ ಬುದ್ಧಿಯೇ ಶರಣಾಗತಿ ಎನಿಸುತ್ತದೆ. ಅದನ್ನೇ ಈ ಭಗವಂತನಲ್ಲಿ ಪ್ರಯೋಗಿಸಿರಿ ಎಂಬುದು ಶ್ಲೋಕಾರ್ಥವು.–

**ತವಾಹಂ** ಎಂಬುದರಿಂದ ಶೇಷವೃತ್ತಿಯೇ ನನಗೆ ಸಾಧಾರಣ ಸ್ವರೂಪದ ಅನುಸಂಧಾನವು, ಅದೇ ಶರಣಾಗತಿಯು, ಆಶೇಷ ವೃತ್ತಿಯೇ ಮೋಕ್ಷದೆಶೆಯಲ್ಲೂ ಇರಬೇಕೆಂಬುದೇ ಈ ಶರಣಾಗತಿಗೆ ಫಲವೆಂದೂ ಹೇಳಿದಂತಾಯಿತು. ಆದುದರಿಂದಲೇ ನಿರಂತರ ಕಿಂಕರರೆಂದು ಹೇಳಿಕೊಂಡರು.

**ತವಾನುಕಂಪ್ಯಃ**–ನೀನು ದಯೆಯನ್ನು ತೋರಿಸಲು ಯೋಗ್ಯನು. ಏಕೆಂದರೆ **ತವಾಹಮಸ್ಮೀತಿ** ನಾನು ನಿನಗೆ ದಾಸ ಭೂತನೆಂದು ತಿಳಿದು

ಆತ್ಮಸಮರ್ಪಣೆಯನ್ನು ಮಾಡಿರುವುದರಿಂದ ಶರಣಾಗತನ ವಿಷಯದಲ್ಲಿ ಏನೊಂದನ್ನೂ ಆತನಿಂದ ಅಪೇಕ್ಷಿಸದೆ ಆತನಿಗೆ ಅಭಯವನ್ನು ಕೊಡುವೆನು ಎಂದು ಶ್ರೀ ರಾಮಾವತಾರಿಯಾಗಿ ಸೀತಾ ಬಂಧ ವಿಮೋಚನೆಗಾಗಿ ದಕ್ಷಿಣ ಸಮುದ್ರ ತೀರವನ್ನು ಸೇರಿದ ಕಾಲದಲ್ಲಿ ವಿಭೀಷಣನು ಶರಣಾಗತನಾಗಲು ಆಗ "**ಸಕೃದೇವ ಪ್ರಪನ್ನಾಯ ತವಾಸ್ಮೀತಿಚಯಾಚತೇ| ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ**" ಪ್ರಪನ್ನರಾದ ಸರ್ವ ಪ್ರಾಣಿಗಳಿಗೂ ಇನ್ನು ಯಾವುದರ ವಿವೇಚನೆಯೂ ಇಲ್ಲದೆ ಅಭಯವನ್ನೀಯುವುದೇ ನನ್ನವ್ರತವೆಂದು ಹೇಳುರುತ್ತೀಯಷ್ಟೆ. ಇಂತಹ ನಿನ್ನ ಪ್ರತಿಜ್ಞೆಯನ್ನೇ ಯಾವಾಗಲೂ ಸ್ಮರಿಸುತ್ತಾ ಇದ್ದೀನೆಂದು **ಸ್ಮರತಃ ಪ್ರತಿಜ್ಞಾಂ** ಎಂಬ ಪ್ರಯೋಗವು. ಆದುದರಿಂದ ನನ್ನನ್ನು ಪಾತ್ರ ರಕ್ಷಿಸದೇ ಹೋದರೆ ನಿನ್ನ ದಯೆಗೆ ಸರಿಯಾದ ಪಾತ್ರವು ಇಲ್ಲವಾಗುತ್ತದೆ. ನಿನ್ನ ವ್ರತವೂ ಕೂಡ ಭಂಗವಾಗುತ್ತದೆ. ಆದುದರಿಂದ, ನೀನು ಎಂದಿಗೂ ನಿನ್ನ ಪ್ರತಿಜ್ಞೆಯನ್ನು ನಿರರ್ಥಕಮಾಡಿಕೊಳ್ಳುವುದಿಲ್ಲವು. ನಿನ್ನ ದಯೆಗೆ ಸರಿಯಾದ ಪಾತ್ರನೇ **ತವಾನು ಕಂಪ್ಯಃ** ಎಂಬ ಭಾವವು. ಆಗಲಿ, ವಿಭೀಷಣಾದಿಗಳಲ್ಲಿ ಹೇಳಿದ ಆ ಮಾತು ನಿನಗೆ ಹೇಗೆ ಅನ್ವಯಿಸೀತು? ಎಂದು ನೀನೇನಾದರೂ ಭಾವಿಸು ವುದಾದರೆ ಅದು ನಿನ್ನ ಮಾತಿಗೆ ವಿರೋಧವಾಗುತ್ತದೆ. ನೀನು ಆಗ "**ವಿಭೀಷಣೋವಾ ಸುಗ್ರೀವ ಯದಿವಾ ರಾವಣಸ್ಸಯಂ | ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾ ಭಯಂ ಮಯಾ**" ಯೋಗ್ಯನಾದ ವಿಭೀಷಣನಾದರೆ ಏನು, ಅಥವಾ ಮಹಾ ಪಾಪಿಷ್ಠನಾದ ರಾವಣನಾದರೇನು, ಅಥವಾ ವಿಭೀಷಣನೇ ರಾವಣನಾಗಿರಕೂಡದೇಕೆ, ಅಂತವನಿಗೂ ಕೂಡ ಅಭಯವನ್ನು ಕೊಟ್ಟಿರುವೆನು. ಓ ಸುಗ್ರೀವನೇ ನೀನು ಹೋಗಿ ಬೇಗ ಆತನನ್ನು ಕರೆದುಕೊಂಡು ಬಾ, ಎಂದು ಹೇಳಿದೆಯಲ್ಲವೇ ? ಆದುದರಿಂದ ನೀನು "**ರಾಮೋ ದ್ವಿರ್ನಾಭಿ ಭಾಷತೇ**" ಎಂದು ಹೇಳಿದ ಹಾಗೆ ಆಡಿದ ಮಾತಿಗೆ ತಪ್ಪುವನಲ್ಲವು. ನಿನ್ನ ಪ್ರತಿಜ್ಞೆಗೆ ಭಂಗ ವನ್ನು ನೀನು ಎಂದಿಗೂ ಉಂಟುಮಾಡಿಕೊಳ್ಳುವುದಿಲ್ಲವೆಂಬ ಭಾವವು.

**ವ್ರತಂತೇ** ಎಂದು ಪುನಃ **ತೇ** ಎಂಬ ಪದವನ್ನು ಪ್ರಯೋಗಿಸಿರುವುದರ ಅಭಿ ಪ್ರಾಯವೇನೆಂದರೆ ನೀನು ಸತ್ಯಸಂಧನು, ಸತ್ಯಸಂಕಲ್ಪನು ನಿನ್ನ ಸಂಕಲ್ಪಕ್ಕೆ ವಿರುದ್ಧವಾಗಿ ಎಂದಿಗೂ ನಡೆಯುವನಲ್ಲವು. ನೀನು ವಿಭೀಷಣನಿಗೆ ಲಂಕಾ ರಾಜ್ಯ ದಲ್ಲಿ ಪಟ್ಟಾಭಿಷೇಕ ಮಾಡುವುದಾಗಿ ಮೊದಲೇ ಸಂಕಲ್ಪಿಸಿ ರಾವಣನನ್ನು ಕೊಂದು ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಪಟ್ಟವನ್ನು ಕಟ್ಟಿಸಿ "**ಅಭಿಷಿಚ್ಯ ಚ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಮ್ | ಕೃತಕೃತ್ಯಸ್ತದಾ ರಾಮೋ ವಿಜ್ವರಃ ಪ್ರಮುಮೋದಹ**" (ರಾ. ೧. ೮೫) ತನ್ನ ಸಂಕಲ್ಪವು ಎಲ್ಲಿ ನಡೆಯದೇ ಹೋಗುತ್ತೋ ಎಂಬ ಪರಿತಾಪವನ್ನು ಕಳೆದುಕೊಂಡು ವಿಶೇಷ ಸಂತೋಷಪಟ್ಟು

**ಅಕೃತ್ರಿಮತ್ವಚ್ಚರಣಾರವಿಂದ**
**ಪ್ರೇಮಪ್ರಕರ್ಷಾವಧಿಮಾತ್ಮವನ್ತಮ್ ।**
**ಪಿತಾ ಮಹಂ ನಾಥಮುನಿಂ**
**ವಿಲೋಕ್ಯ ಪ್ರಸೀದ ಮದ್ವೃತ್ತಮ ಚಿನ್ತಯಿತ್ವಾ ॥೬೫॥**

“**ಅಹಂ ಹತ್ವಾ ದಶಗ್ರೀವಂ ಸಪ್ರಹಸ್ತಂ ಸಂಬಾಂಧವಮ್| ರಾಜಾನಂ ತ್ವಾಂ ಕರಿಷ್ಯಾಮಿ ಲಂಕಾಯಾಂ ರಾಕ್ಷಸೇಶ್ವರ**” ಎಂದು ಮಾಡಿದ ಪ್ರತಿಜ್ಞೆಯನ್ನು ಕಾಪಾಡಿಕೊಂಡೆಯಲ್ಲವೇ ! ವಾಲಿ ವಧೆಯನ್ನು ಮಾಡಿ ಸುಗ್ರೀವನಲ್ಲಿ ಮಾಡಿದ ಪ್ರತಿಜ್ಞೆಯನ್ನು ಕಾಪಾಡಿಕೊಂಡವನಲ್ಲವೇ ! ಶರಣಾಗತನಾದ ಪರಮ ಭಾಗವತ ನಾದ ಭರತನಿಗೆ ಕೊಟ್ಟ ವಾಗ್ದಾನವನ್ನು ಕಾಪಾಡಿಕೊಳ್ಳುವುದಕ್ಕಾಗಿ ಲಂಕೆಯಲ್ಲಿ ವಿಭೀಷಣನಿಂದ “**ವಸ ತಾವದಿಹ ಪ್ರಾಜ್ಞ**” ಇಲ್ಲಿ ಕೆಲವು ಕಾಲ ಸೀತಾಲಕ್ಷ್ಮಣ ರೊಂದಿಗೆ ಇರಬೇಕೆಂದು ವಿಶೇಷ ಪ್ರಾರ್ಥಿಸಲ್ಪಟ್ಟರೂ “**ತಂತು ಮೇಭ್ರಾತರಂ ದ್ರಷ್ಟುಂ ಭರತಂ ತ್ವರತೇ ಮನಃ| ಮಾಂ ನಿವರ್ತ್ತಯಿತುಂ ಯೋಸಾ ಚಿತ್ರಕೂಟ ಮುಪಾಗತಃ| ಶಿರಸಾಯಾಚಿತಃ ತಸ್ಯವಚನಂ ನ ಕೃತಂ ಮಯಾ**” ಖಂಡಿತವಾಗಿಯೂ ಇಲ್ಲಿ ನಿಲ್ಲಲು ಸಾಧ್ಯವಿಲ್ಲವು. ತಮ್ಮನಾದ ಭರತನನ್ನು ೧೪ ವರ್ಷದೊಳಗೆ ಹೋಗಿ ನೋಡಬೇಕು. ಚಿತ್ರಕೂಟಕ್ಕೆ ಬಂದು, ಹಿಂತಿರುಗಿ ಬರಬೇಕೆಂದು ತಲೆಬಾಗಿ ಬಹುವಾಗಿ ಬೇಡಿದರೂ ಆತನ ಪ್ರಾರ್ಥನೆಯನ್ನು ನಡೆ ಯಿಸಲಿಲ್ಲವೇ ಎಂದು ಪರಿತಾಪಪಟ್ಟು ಪುಷ್ಪಕವಿಮಾನವನ್ನೇರಿ ಬಂದು ತಮ್ಮನಿಗೆ ಸಂದರ್ಶನವನ್ನುಕೊಟ್ಟ ಸತ್ಯ ಸಂಧನಲ್ಲವೇ? ಹಾಗೆಯೇ ಪ್ರಪನ್ನಳಾದ ದ್ರೌಪದಿಯ ಮುಂದೆ ಮಾಡಿದ ಶಪಥವನ್ನೂ ಕಾಪಾಡಿಕೊಂಡವನಲ್ಲವೇ? ಇಂತಹ ಸತ್ಯಸಂಧ ನಾದ **ತೇ** ನಿನಗೆ ಎಂಬ ಭಾವವು. ಅಂತಹ ದಯಾ, ಕ್ಷಮಾ, ಔದಾರ್ಯ, ಸತ್ಯ ಸಂಕಲ್ಪ ಗಳನ್ನುಳ್ಳ ನೀನು ನನ್ನನ್ನು ಪರಿತ್ಯಾಗ ಮಾಡುವುದು ನಿನಗೆ ಹೇಗೆ ವ್ರತವಾದೀತು ? ಎಂದು **ಕಿಮಿದಂ ವ್ರತಂ ತೇ** ಎಂದು ಹೇಳಿದರು. ಎಂದರೆ ಪ್ರಪನ್ನನಾದ ನನ್ನನ್ನು ಕೈಬಿಡುವುದೂ ಇಲ್ಲವು. ನಿನ್ನ ವ್ರತವನ್ನು ಕಾಪಾಡಿಕೊಳ್ಳದೇ ಇರುವುದೂ ಇಲ್ಲವು. ಎಂಬುದು ಸಾರಭೂತಾರ್ಥವು. **ಕಿಮಿದಂ ವ್ರತಂತೇ** ಎಂದು ಸಂಶಯಾವಿಷ್ಟರಾಗಿ ಹೇಳಿದರು ಎಂಬರ್ಥವಲ್ಲವು. ಶ್ರೀಮದ್ರಾಮಾಯಣದ ಚರಮಶ್ಲೋಕವಾದ “**ಸಕೃದೇವ ಪ್ರಪನ್ನಾಯ**” ಎಂಬ ಶ್ಲೋಕದ ಉಪಪಾದನೆ ಎಂದು ಭಾವಿಸತಕ್ಕದ್ದು.

**ಅವತಾರಿಕೆಯು :**—ಇದುವರೆಗೂ ದ್ವಯಮಂತ್ರದಲ್ಲಿ ಹೇಳಿರುವ ಪ್ರಕಾರ ಪೂರ್ವಾರ್ಧದಲ್ಲಿ ಪ್ರೋಕ್ತವಾದ ಶರಣಾಗತಿಯನ್ನನುಷ್ಠಿಸಿ ಉತ್ತರ ಖಂಡದಲ್ಲಿ ಹೇಳಿರುವ ಪ್ರಾರ್ಥನೆಯನ್ನೂ ಮಾಡಿದರು. ಈ ಕೊನೆಯ ಶ್ಲೋಕದಲ್ಲಿ ಸದಾಚಾರ್ಯ

ಸಂಬಂಧವು ಅತ್ಯಾವಶ್ಯಕವೆಂದು ತಿಳಿಸುವುದಕ್ಕಾಗಿ ಪಿತಾಮಹರಾದ ಜ್ಞಾನಸಿಧಿಗಳ ಪೌತ್ರರು ತಾವು. ಆ ಕಾರಣದಿಂದಲಾದರೂ ಅನುಗ್ರಹಿಸು ಎಂದು ಪ್ರಾರ್ಥಿಸುತ್ತಾರೆ.

ಹಿಂದೆ ಕಾಕನಿಗೂ ಚೈದ್ಯನಿಗೂ ನೀನು ಕರುಣಿಸಲಿಲ್ಲವೇ ಹಾಗೆ ಕರುಣಿಸು ಎಂಬ ಪ್ರಾರ್ಥನೆಯಲ್ಲಿ, ಕಾಕ ವಿಷಯದಲ್ಲಾದರೋ ಅಲ್ಲಿ ಹೇಳಿರುವುದು **"ಸಪಿತ್ರಾಚ ಪರಿತ್ಯಕ್ತಃ ಸುರೈಶ್ಚ ಸಮಹರ್ಷಿಭಿಃ। ತ್ರೀನ್ಲೋಕಾನ್ಸಂಪರಿಕ್ರಮ್ಯ ತ ಮೇವ ಶರಣಂ ಗತಃ। ಸತಂ ನಿಪತಿತಂ ಭೂಮೌ ಶರಣ್ಯಶ್ಶರಣಾಗತಮ್। ಪರಿದ್ಯೂನಂ ವಿಷಣ್ಣಂ ಚ...."** ಎಂಬಲ್ಲಿ ಹೇಳಿರುವ ಹಾಗೆ ಅವಸ್ಥಾ ವಿಶೇಷವುಂಟು. ಚೈದ್ಯನಿಗಾದರೋ, ಪೂರ್ವಾವಸ್ಥೆಯಲ್ಲಿ ದ್ವಾರಪಾಲಕನು, ಇದಲ್ಲದೆ ತಾಯಿಯ ವರವೂ ಇದ್ದಿತು; ನಿನ್ನಲ್ಲಾದರೋ ನೀನೇ ಹೇಳಿಕೊಂಡ ಹಾಗೆ ಅಮರ್ಯಾದತ್ವ ಮೊದಲಾದ ಅವಗುಣಗಳಿಗೆ ಆಕರನಾಗಿ, ಶರಣಾಗತಿಯನ್ನು ಮಾಡಿರುತ್ತೇನೆ ಫಲವನ್ನು ಕೊಡು ಎಂದು ಹೇಳಿ ಈ ಛದ್ಮಸ್ತುತಿಯನ್ನು ಮಾಡಿದ ನಿನಗೆ ಯಾವ ಕಾರಣದಿಂದ ನಿನ್ನನ್ನು ಕ್ಷಮಿಸಿ, ಜ್ಞಾನವನ್ನು ಕೊಟ್ಟು ರಕ್ಷಿಸತಕ್ಕದ್ದು ಎಂಬ ಆಕ್ಷೇಪಕ್ಕೆ ಸಮಾಧಾನವಾಗಿ, ನಾನು **"ಪಿತಾತ್ವಂ ಮಾತಾತ್ವಂ"** ಎಂದೂ **"ದಯಾ ಸಿಂಧೋ ಬಂಧೋ"** ಎಂದೂ **"ರಘುವರ"** ಎಂದೂ ಶರಣ್ಯನನ್ನು ಹೊಂದಿದ ಕಲ್ಯಾಣಗುಣಗಳೂ ಪ್ರತಿಪಾದಿಸಲ್ಪಟ್ಟವು. ಅಂತಹ, ರಕ್ಷಣೆಗೆ ಉಪಯುಕ್ತಗಳಾದ ತಮ್ಮಲ್ಲಿರುವ ಆಕಿಂಚನ್ಯ, ಅನನ್ಯ ಗತಿಕತ್ವ, ಮುಂತಾದುವುಗಳನ್ನು ಪ್ರದರ್ಶಿಸಿ, ತಾವು ದಯನೀಯರು, ನಾಥನಾದ ನಿನಗೆ ಶೇಷಭೂತನು, ಕಿಂಕರನು, ಇತ್ಯಾದಿ ಕಾರಣಗಳನ್ನೂ ನಿಪುಣ ತರವಾಗಿ ಪ್ರದರ್ಶಿಸಿದರು. ಇವೆಲ್ಲಕ್ಕಿಂತಲೂ ಮೇಲಾದ ಮುಖ್ಯ ಕಾರಣವನ್ನು ತಿಳಿಸುವ ಉದ್ದೇಶ್ಯದಿಂದ, ಯದ್ಯಪಿ ಭಗವಂತನು ಸರ್ವ ಸ್ವತಂತ್ರನಾಗಿ ಸರ್ವೇಶ್ವರನಾಗಿದ್ದರೂ ಆತನೂ ಕೂಡ ಉಲ್ಲಂಘಿಸಿ ನಡೆಯಲು ಸಾಧ್ಯವಿಲ್ಲದ ಸರ್ವೇಶ್ವರನಿಗೆ ಅಸಾಧಾರಣವಾಗಿ ತಮ್ಮಂತಹ ಪ್ರಪನ್ನರನ್ನು ಅಂಗೀಕರಿಸಲು ಸಾಧಕವಾದ ವಿಶೇಷ ಕಾರಣವನ್ನು ಹೇಳುತ್ತಾರೆ. ಅದೇನೆಂದರೆ ಪರಮ ಭಾಗವತರ ಸಂಬಂಧವಿರುವ ನನ್ನನ್ನು ನೀನು ಎಂದಿಗೂ ಪರಿತ್ಯಾಗಮಾಡಲು ಸಾಧ್ಯವಿಲ್ಲವು. ಸುಗ್ರೀವ, ಅಂಗದ, ಜಾಂಬವಾದಿಗಳು, ವಿಭೀಷಣನನ್ನು ತ್ಯಜಿಸತಕ್ಕದ್ದೆಂದು ವಾದಿಸಿದರೂ, ಪರಮ ಭಾಗವತನಾದ ಆಂಜನೇಯನ ಸಂಬಂಧವು, ಆ ವಿಭೀಷಣನಿಗೆ ಇದ್ದುದರಿಂದ ಹೇಗೆ ಪರಿಗ್ರಹಿಸಲ್ಪಟ್ಟನೋ ಹಾಗೆಯೇ ನಾನೂ ನಿನ್ನ ಪರಮ ಭಕ್ತರಾದ ನಾಥಮುನಿಗಳ ಸಂಬಂಧವುಳ್ಳವನಾದುದರಿಂದ **ಪ್ರಸೀದ** ಎಂದು ಈ ಅದ್ಭುತ ಗ್ರಂಥದ ನಿಗಮನದಲ್ಲಿ ಪ್ರಾರ್ಥಿಸಿರುತ್ತಾರೆ.

**ಅರ್ಥವು:-ನಾಥಮುನಿಂ**-ನನ್ನ ಪಿತಾಮಹರಾದ ನಾಥಮುನಿಗಳನ್ನಾದರೂ, **ವಿಲೋಕ್ಯ**-ನೋಡಿ, ಅವರು ಮಹಾ ಭಾಗವತರಾಗಿ, ನಿನ್ನನ್ನೇ ಉಪಾಸಿಸಿ, ನಿನ್ನ ಪರಪ್ರೀತಿಗೆ ಪಾತ್ರರಾಗಿರುವವರೆಂಬುದನ್ನಾದರೂ ಮನಸ್ಸಿನಲ್ಲಿಟ್ಟು, **ಪ್ರಸೀದ,**

ಅನುಗ್ರಹಿಸು. ನಿನ್ನ ಪರಮ ಭಕ್ತರಲ್ಲಿ ನಿನಗೆ ಪೂರ್ಣಾನುಗ್ರಹವಿರುವುದರಿಂದ, ದಾಸನಾದ ನಾನು ಅವರ ಪೌತ್ರನಾದುದರಿಂದ ಅದನ್ನಾದರೂ ಮನಸ್ಸಿಗೆ ತಂದು ಕೊಂಡು ನನ್ನನ್ನು ಉದ್ಧಾರ ಮಾಡೆಂದು ಬೇಡುತ್ತಾರೆ. ನೀನೇ ಸ್ವಾಮಿಯು, ನೀನೇ ಕಾಪಾಡತಕ್ಕವನೆಂದು ನಂಬಿ ಉಪಾಯಾನು-ಷ್ಠಾನವನ್ನು ಮಾಡಿರುತ್ತೇನೆ, ನಿನ್ನನ್ನೇ ಆರಾಧಿಸಿರುತ್ತೇನೆ. ನಿನ್ನನ್ನೇ ಯಥಾಶಕ್ತಿ ಈ ಸ್ತೋತ್ರದ ಮೂಲಕ ಕೊಂಡಾಡಿರುತ್ತೇನೆ. ಗುರುಗಳ ಮೂಲಕ ನಿನ್ನ ಮಾಹಾತ್ಮ್ಯ ಜ್ಞಾನವನ್ನೂ, ನನ್ನ ಸ್ವರೂಪ ಜ್ಞಾನವನ್ನೂ ಹೊಂದಿರುತ್ತೇನೆ. ಇಂತಹ **ಮದ್ವೃತ್ತಂ**–ನಿನ್ನ ಕೃಪೆಯಾ ಉಂಟಾದ **ಸದ್ವೃತ್ತಿ** ಸದಾಚಾರಗಳನ್ನು **ಅಚಿಂತಯಿತ್ವಾ**–ಗಣನೆಗೆ ತರದೆ ಎಂದರೆ ಅವುಗಳಿಗೆ ನೀನು ಗಮನ ಕೊಡದಿದ್ದರೂ **ಎಂಬ** ಅರ್ಥವು. ಈ ಮೇಲೆ ಹೇಳಿದ ಪ್ರಶಸ್ತವಾದ ಅಭಿಜಾತ್ಯವನ್ನಾದರೂ ಗಮನಿಸಿ, **ಪ್ರಸೀದ** ಎಂದು ಪ್ರಾರ್ಥಿಸಿರುತ್ತಾರೆ. ಆಭಿಜಾತ್ಯವು ಹೇಗೆ ಪ್ರಶಸ್ತವು ? ಎಂದರೆ ಹೇಳುತ್ತಾರೆ. ಆ ನಾಥ ಮುನಿಗಳು ಎಂತಹವರೆಂದರೆ ಹೇಳುತ್ತಾರೆ. **"ಅಕೃತ್ರಿಮತ್ವಚ್ಚರಣಾರವಿಂದ ಪ್ರೇಮ ಪ್ರಕರ್ಷಾವಧಿಂ, ಅಕೃತಿಮ**–ಕಪಟವಿಲ್ಲದೆ ಯಥಾರ್ಥವಾದ, ಇದು ಮುಂದೆ ಇರುವ ಪ್ರೇಮಕ್ಕೆ ವಿಶೇಷಣವು. **ತ್ವಚ್ಚರಣಾರವಿಂದ ಪ್ರೇಮ** ನೀನೇ ಪ್ರಾಪ್ಯನೂ ಪ್ರಾಪಕನೂ ಎಂಬ ಭಾವದಿಂದ ನಿನ್ನ ಪಾದಕಮಲಗಳಲ್ಲಿಟ್ಟ ಪ್ರೇಮದ, **ಪ್ರಕರ್ಷಾವಧಿಂ**–ಆಧಿಕ್ಯದ ಎಲ್ಲೆಯನ್ನು ಹೊಂದಿದವರಾದ, ಮತ್ತು **ಆತ್ಮವಂತಂ**–ಜಿತಮನಸ್ಕರಾದ, ವೈರಾಗ್ಯಶಿಖಾಮಣಿಗಳಾದ ಎಂಬ ಅರ್ಥವು. **ಪಿತಾಮಹಂ**–ತಮ್ಮ ತಂದೆಗಳಾದ, ಈಶ್ವರ ಭಟ್ಟಾಳ್ವಾನರವರ ತಂದೆಯಾದ, ಇಂತಹ ನಾಥಮುನಿಗಳನ್ನಾದರೂ ಮನಸ್ಸಿನಲ್ಲಿಟ್ಟು ಪ್ರ**ಸೀದ** ಅನುಗ್ರಹಿಸು ಎಂಬ ಪ್ರಾರ್ಥನೆಯು.

**ಉಪಪಾದನೆಯು**:–ಹಿಂದೆ ತಮ್ಮ ನಡವಳಿಕೆಗಳೆಲ್ಲಾ ಮಹಾನುಭಾವನು ಪರಿಗ್ರಹಿಸಲು ಯೋಗ್ಯವಾದುವೇ ಎಂದು ಹೇಳಿಕೊಂಡರು. ಪರಮಾತ್ಮನನ್ನು ಆಶ್ರಯಿಸುವ ಮೋಕ್ಷಾರ್ಥಿಯು ಪ್ರಥಮತಃ ಐಹಿಕ ಪರಿತ್ಯಾಗವನ್ನು ಮಾಡಬೇಕು. ಹಾಗೆಯೇ ನಾನೂ ಭಗವಂತನಾದ ನೀನು ಅನುಗ್ರಹಿಸಿದ ರಾಜ್ಯವನ್ನು ತ್ಯಾಗ ಮಾಡಿದೆನು. ನೀನು ಅನುಗ್ರಹಿಸಿ ಒದಗಿಸಿಕೊಟ್ಟ ಆಚಾರ್ಯರಾದ ಮಣಕ್ಕಾಲ್ ನಂಬಿಯನ್ನು ಆಶ್ರಯಿಸಿದೆನು. ಅವರ ಮೂಲಕ ರಹಸ್ಯಾರ್ಥಗಳ ಜ್ಞಾನ ಸಂಪಾದನೆಯನ್ನು ಮಾಡಿ ನಿನ್ನ ಸರ್ವೋತ್ಕೃಷ್ಟತೆಯನ್ನೂ ಸರ್ವ ಶಕ್ತಿತ್ವವನ್ನೂ ಪರಮ ದಯಾಳುತ್ವವನ್ನೂ ಅರಿತೆನು. ಹಾಗೆಯೇ ನನ್ನ ಪರಾಧೀನತೆಯನ್ನೂ, ಆಕಿಂಚನ್ಯವನ್ನೂ ಅನನ್ಯ ಗತಿತ್ವವನ್ನೂ ತಿಳಿದುಕೊಂಡೆನು. ಆ ಮಹಾನುಭಾವರಾದ ಆಚಾರ್ಯರು ತಮ್ಮ ಪ್ರಾಚಾರ್ಯರಾದ ನಾಥಮುನಿಗಳು ಹೇಳಿ ಕಳುಹಿಸಿದ ಹಾಗೆ ಶ್ರೀರಂಗನಾಥನಾದ ನಿನ್ನನ್ನೇ "ಹಿರಣ್ಯನಿಧಿ" ಪರಮ ಧನವಾಗಿ ಭಾವಿಸಿದೆನು.

ಅವರ ಮೂಲಕವಾಗಿ "ತವಾಸ್ಮಿ" ಎಂದು ಶರಣಾಗತಿ ರೂಪವಾದ ಉಪಾಯಾನು ಷ್ಠಾನವನ್ನು ಮಾಡಿ ಈ ಸೋತ್ರದಮೂಲಕ ನಿನ್ನನ್ನು ಸುತ್ತಿಸಿದೆನು. ಇಂತಹ ನಿನ್ನ ಕೃಪೆಯಿಂದ ಬಂದ ಸದ್ವೃತ್ತಿಗಳೇ ನಿನ್ನ ಅನುಗ್ರಹಕ್ಕೆ ಕಾರಣವೆಂದು ನಂಬಿರುತ್ತೇನೆ. ಇವುಗಳು ನಾಲದುಎಂದು ನೀನು ಒಂದು ವೇಳೆ ಭಾವಿಸಿದರೂ, ಇನ್ನೊಂದು ಪ್ರಬಲ ಕಾರಣವುಂಟು. ತನ್ಮೂಲಕವಾಗಿ ಯಾವರೂ, ನೀನು ಭಕ್ತ ಪರಾಧೀನ್ನನಾದುದರಿಂದ, ನೀನು ಅನುಗ್ರಹಿಸಲೇ ಬೇಕು. ಅನ್ಯಥಾ ನಾಥ್ಯವೇ ಇಲ್ಲವೆಂದು ಹೇಳುತ್ತಾರೆ.

**ಮದ್ವೃತ್ತಮಚಿಂತಯಿತ್ವಾ**- ನನ್ನ ವೃತ್ತಗಳು ಎಂದರೆ ನಡವಳಿಕೆಗಳನು ನೀನು ಗಮನಿಸತಕ್ಕವೇ ಯಾದರೂ, ನೀನು ಒಂದು ವೇಳೆ ಗಮನಿಸಿದ್ದರೂ ಚಿಂತೆ ಇಲ್ಲವು. ನೀನು ಅನುಗ್ರಹಿಸಲು ಒಂದು ವಿಶೇಷ ಕಾರಣ ಉಂಟು, ನಿನ್ನ ಭಕ್ತರಾಗಿ ಪರಮಾಪ್ತರಾದ ನಾಥಮುನಿಗಳ ಪೌತ್ರನು ನಾನು ಎನ್ನುತ್ತಾರೆ.

ಆ ನಾಥಮುನಿಗಳು ಎಂತಹವರೆಂದರೆ **ಅಕೃತ್ರಿಮ ತ್ವಚ್ಚರಣಾರವಿಂದ ಪ್ರೇಮ ಪ್ರಕರ್ಷಾವಧಿಂ,** ಸ್ವಾಮಿಯಲ್ಲಿ ನಾವು ಇಡುವ ವಿಶ್ವಾಸವು **ಅಕೃತ್ರಿಮ**ವಾಗಿರ ಬೇಕು. ಯಾವಾಗ ಪ್ರೇಮವು ಕೃತ್ರಿಮ ವಾಗುತ್ತದೆಂದರೆ, ಮನುಷ್ಯರು ಶ್ಲಾಘಿಸಲಿ ಎಂಬ ಭಾವನೆಯಿಂದ ಮಾಡಿದ ವಿಶ್ವಾಸವು. ಇದು ನಿರರ್ಥಕವಾದುದು, ಮನಃ ಪೂರ್ವಕವಾದ ವಿಶ್ವಾಸವೇ ಸ್ವಾಮಿಯ ಅನುಗ್ರಹ ಸಂಪಾದಕವು. ಇಂತಹ ವಿಶ್ವಾಸವು " ಭಕ್ತಿ " ಎಂದು ಹೇಳಿಸಿಕೊಳ್ಳುತ್ತದೆ. ಈ ಭಕ್ತಿಯೇ ವೃದ್ಧಿ ಹೊಂದುತ್ತಾ, ಪರಭಕ್ತಿ ಪರಜ್ಞಾನ ಪರಮ ಭಕ್ತಿ ಎಂದೆನಿಸಿ ಕೊಳ್ಳುತ್ತದೆ. ಮನಃ ಪೂರ್ವಕವಾಗಿ ಉಪಾಸಿಸುವ ಕಾಲದಲ್ಲಿ ಭಕ್ತಿಯು " ಪರಭಕ್ತಿ " ಎನಿಸಿಕೊಳ್ಳುತ್ತ , ಉಪಾಸಿಸುತ್ತಾ ಹೋದರೆ ಪರಮಾತ್ಮ ಸಾಕ್ಷಾತ್ಕಾರ ಉಂಟಾಗುತ್ತದೆ. ಅಂತಹ ಭಕ್ತಿಗೆ 'ಪರ ಜ್ಞಾನ ವೆಂದು ಹೆಸರು. ಆ ಭಕ್ತ್ಯತಿಶಯದಿಂದ ಪರಮಾತ್ಮನನ್ನು ಅಗಲಿ ಇನ್ನಿರಲಾರೆನೆಂಬ ಉತ್ಕಟೇಚ್ಛೆಯುಂಟಾಗುತ್ತದೆ. ಅಂತಹ ಭಕ್ತಿಗೆ ' ಪರಮ ಭಕ್ತಿ ' ಎಂದು ಹೆಸರು. ಇಂತಹ ಭಕ್ತಿಯೇ ಈಗ **' ಅಕೃತ್ರಿಮ ಪ್ರೇಮ '** ಎಂಬುದರಿಂದ ಹೇಳಲ್ಪಟ್ಟಿತು. ಇಂತಹ **ಅಕೃತ್ರಿಮ ಪ್ರೇಮವನ್ನೇ** ಶ್ರೀ ಯತಿ ವರ್ಯರು ಶ್ರೀ ಶರಣಾಗತಿ ಗದ್ಯದಲ್ಲಿ " **ಪರಭಕ್ತಿ ಪರಜ್ಞಾನ ಪರಮ ಭಕ್ತಿ ಯುಕ್ತಂ ಮಾಂಕುರುಷ್ವ** " ಎಂದು ಪ್ರಾರ್ಥಿಸಿರುತ್ತಾರೆ. ಈ ಸಂದರ್ಭದಲ್ಲಿ " **ಪರಭಕ್ತಿರದೃಷ್ಟಾರ್ಥ ಪ್ರತ್ಯಕ್ಷಾಭಿನಿವೇಶನಮ್ । ಪರಜ್ಞಾನಂತು ತಸ್ಯೈವ ಸಾಕ್ಷಾತ್ಕಾರ ಪರಿಸ್ಫುಟಃ। ಪುನರ್ವಿಶ್ಲೇಷ ಭೀರುತ್ವಂ ಪರಮಾ ಭಕ್ತಿರುಚ್ಯತೇ** " ಎಂಬುದು ಅನುಸಂಧೇಯವು. ಇಲ್ಲಿ ವಿಚಾರ ಪರರಿಗೆ ಒಂದು ಪೂರ್ವ ಪಕ್ಷವು ಉದಯಿಸಬಹುದು. ಈ ಪರ ಜ್ಞಾನಾದಿ ಭಕ್ತ್ಯತಿಶಯಗಳು ಉಪಾಸಕನಿಗೆ ಉಂಟಾಗತಕ್ಕ ಅವಸ್ಥಾ ವಿಶೇಶಗಳಲ್ಲವೇ ? ನಾಥ ಮುನಿಗಳೇನೋ

ಉಪಾಸಕರು, ಆದುದರಿಂದ ಅಕೃತ್ರಿಮ ಪ್ರೇಮ ಯುಕ್ತರೆಂಬ ಹೇಳಿದುದೇನೋ ಸರಿಹೋಯಿತು. ಯಾಮುನ ಮುನಿಗಳು ಈ ದ್ವಯಾರ್ಥ ಬೋಧಕವಾದ ಈ ಸ್ತೋತ್ರರತ್ನದಿಂದ ಭರನ್ಯಾಸನಿಷ್ಠರೆಂಬುದು ಸಿದ್ಧವು. ಈ ಉಪಾಯುವೇ ಇವರಿಗೆ ಆಚಾರ್ಯರಾದ ಮಣಕ್ಕಾಲ್ ನಂಬಿಯಿಂದ ಉಪದಿಷ್ಟವು. ಹಾಗೆಯೇ ಶ್ರೀ ಶರಣಾಗತಿ ಗದ್ಯದಲ್ಲಿ ಶ್ರೀ ಯತಿವರ್ಯರೂ ಶರಣಾಗತಿ ರೂಪೋಪಾಯವನ್ನೇ ಅನುಷ್ಠಿಸಿರುತ್ತಾರೆಂಬುದೂ ವ್ಯಕ್ತವು. ಹೀಗಿರುವಾಗ **"ಪರಭಕ್ತಿ ಪರಜ್ಞಾನ** ಪರಮಭಕ್ತಿಯುಕ್ತಂ ಮಾಂಕುರುಷ್ವ" ಎಂಬ ಪ್ರಾರ್ಥನೆಯು ಹೇಗೆ? ಎಂದರೆ ಭರನ್ಯಾಸ ನಿಷ್ಠೆಯಲ್ಲೂ ಪ್ರಪನ್ನನು ಉತ್ತರ ಕಾಲದಲ್ಲಿ ಶ್ರೀಮನ್ನಾರಾಯಣನನ್ನು ಸಂಧ್ಯಾವಂದನಾಂಗವಾಗಿ ಮಾಡುವ ಮೂಲಮಂತ್ರ, ದ್ವಯ, ಚರಮಶ್ಲೋಕ ಗಳ ಜಪಕಾಲದಲ್ಲಿ ಧ್ಯಾನಿಸುವನಾದುದರಿಂದ, ಆ ಧ್ಯಾನದಿಂದಲೂ **ಪರಭಕ್ತಿ ಪರಜ್ಞಾನ ಪರಮ ಭಕ್ತಿಗಳು** ಉಂಟಾಗುತ್ತವೆಂದು ತಿಳಿಯತಕ್ಕದ್ದು. ಇಂತಹ ಅಕೃತ್ರಿಮ ಪ್ರೇಮ ಪ್ರಕರ್ಷದ ಅವಧಿಯನ್ನು ಹೊಂದಿದವರು ತಮ್ಮ ಪಿತಾಮಹರಾದ ನಾಥಮುನಿಗಳು ಎಂದು ಹೇಳಿದರು.

**ತ್ವಚ್ಚರಣಾರವಿಂದ** ಎಂಬಲ್ಲಿನ **ತ್ವಚ್ಛಬ್ದ**ದಿಂದ ಪ್ರಾಪಕತ್ವ ಪ್ರಾಪ್ಯತ್ವಗಳಿಗೆ ಉಪಯುಕ್ತವಾದ ದಯಾ ವಾತ್ಸಲ್ಯ, ಸೌಲಭ್ಯ, ಸೌಶೀಲ್ಯಾದಿ ಕಲ್ಯಾಣ ಗುಣಾಕರನ ಚರಣಾರವಿಂದವೆಂಬ ಭಾವವು ತೋರಿಬರುತ್ತದೆ. ಅಂತಹ ಚರಣಾರ ವಿಂದದಲ್ಲಿ ಪ್ರೇಮವು ಅಂತಹವರಿಗೆ ಸಹಜವು. ಏತರಿಂದ ಎಂದರೆ ಅದರಿಂದುಂಟಾದ ಗಂಗೆಯ ಪಾವನತ್ವವೇನು, ಅಹಲ್ಯೆಯ ಪಾವನತ್ವವೇನು, ಬಲಿಗುಂಟಾದ ಶ್ರೇಯಸ್ಸೇನು, ಪರೀಕ್ಷಿತ್ತಿಗುಂಟಾದ ಸತ್ತೆಯೇನು, ಇಂತಹ ದೃಷ್ಟಾಂತಗಳಿಂದ ತ್ವಚ್ಚರಣಾರವಿಂದದಲ್ಲಿ ಅವರಿಗೆ ಅಕೃತ್ರಿಮ ಪ್ರೇಮಾತಿಶಯವು. ಹೀಗೇ ಚರಣಾರವಿಂದ ಪ್ರಯೋಗದಿಂದ ತೋರುವ ಭಾವಗಳು ಯಾವುವೆಂದರೆ–ದಾಸಭೂತ ರಿಗೆ ಸ್ವತಃಪ್ರಾಪ್ತವಾದ ಶೇಷತ್ವವೂ ಪಾವನತಮತ್ವವೂ ನಿರತಿಶಯ ಭೋಗ್ಯ ತಮತ್ವವೂ ತಮ್ಮ ಪರಭಕ್ತಿಗೆ ಅರ್ಹತ್ವವೂ ಎಂಬಿವು ವ್ಯಕ್ತವು. ಲೋಕದಲ್ಲಿಯೇ, ರಾಜರಾದವರು ತಮ್ಮನ್ನಾಶ್ರಯಿಸಿದ ಭಕ್ತರನ್ನೂ ಅವರ ಅನುಬಂಧಿಗಳಾದ ಮಕ್ಕಳು ಮೊಮ್ಮಕ್ಕಳನ್ನೂ ರಕ್ಷಿಸಿರುವುದನ್ನು ಕಂಡಿರುವೆವು. ಹೀಗಿರುವಾಗ ನಿನ್ನ ಚರಣಾರವಿಂದದಲ್ಲಿ ನಿರತಿಶಯ ಭಕ್ತಿಯುಳ್ಳವರನ್ನೂ ಅವರ ಪುತ್ರ ಪೌತ್ರರನ್ನೂ ನೀನು ರಕ್ಷಿಸುವುದೇನೂ ಆಶ್ಚರ್ಯವಲ್ಲವೆಂಬ ಭಾವವೂ ಸೂಚಿತವು

**ಆತ್ಮವಂತಂ**–ಎಂಬುದರಿಂದ ಶ್ರೀ ನಾಥಮುನಿಗಳು ಜಿತಮನಸ್ಕರೆಂದು ಹೇಳಲ್ಪಟ್ಟಿತು. ಇದರಿಂದ ವೈಷಯಿಕ ಸುಖ ವಿಮುಖರು ಎಂದೂ ಆ ಕಾರಣದಿಂದ ಗೀತೆಯಲ್ಲಿ ಹೇಳಿರುವ ಹಾಗೆ **ಅಮಾನಿತ್ವಾದಿ** ೨೬ ಗುಣಗಳಿಂದ ಶೋಭಿಸುವರಾಗಿ

ಭಕ್ತಿಯೋಗ ನಿಷ್ಠೆಗೆ ಯೋಗ್ಯರೆಂದು ಹೇಳಿದಂತಾಯಿತು. ಹೀಗೆ ಅಂತಹವರ ಪೌತ್ರರಾದನಂತರ, ನೀವೂ ಭಕ್ತಿಯೋಗನಿಷ್ಠರಾಗಿರಬೇಕಲ್ಲವೇ ? ನೀವು ಭರನ್ಯಾಸ ನಿಷ್ಠರಾಗಲು ಕಾರಣವೇನು? ಎಂದರೆ ತಮ್ಮ ಪಿತಾಮಹರು ವಿಳಂಬವನ್ನು ಸಹಿಸಿದ ವರಾಗಿ ಯೋಗಮಹಿಮೆಯಿಂದ ೩೩೦ ವರ್ಷಗಳು ಜೀವಂತರಾಗಿದ್ದರು. ತಾವಾದರೋ ಅದಕ್ಕೆ ಯೋಗ್ಯತೆ ಇದ್ದರೂ ಅಷ್ಟು ವಿಳಂಬವನ್ನು ಸಹಿಸಲಾರರಾಗಿ **"ಪರಸ್ಯಾಶು ಪ್ರಾಪ್ತಿಃ"** ಎಂಬಲ್ಲಿ ಹೇಳಿರುವ ಹಾಗೆ ಕ್ಷಿಪ್ರದಲ್ಲೇ ನಿನ್ನ ಪಾದಾರ ವಿಂದವನ್ನು ಬಂದು ಸೇರಬೇಕೆಂಬ ಆಶೆಯಿಂದ ಹಾಗೆ ಭರನ್ಯಾಸ ರೂಪವಾದ ಉಪಾಯಾನುಷ್ಠಾನವನ್ನು ಮಾಡಿದರೆಂಬುದೂ ಸೂಚಿತವು.

ಅಥವಾ ಪೂರ್ವಾರ್ಧದಲ್ಲಿರುವ ಎರಡು ವಿಶೇಷಣಗಳಿಂದಲೂ, ಭಗವಂತನಲ್ಲಿ ಯಥಾರ್ಥವಾದ ಭಕ್ತಿಯಿಂದುಂಟಾದ ಉಪಾಸನ ದ್ವಾರಾ ಶುದ್ಧ ಸತ್ತ್ವಾಕರು ಶ್ರೀ ನಾಥಮುನಿಗಳು ಎಂದೂ ಅರ್ಥ ಮಾಡಬಹುದು. ಈ ಅಭಿಪ್ರಾಯವನ್ನು ಶ್ರೀ ಯಾಮುನ ಮುನಿಗಳು ತಾವು ಅನುಗ್ರಹಿಸಿರುವ ಗೀತಾರ್ಥ ಸಂಗ್ರಹದಲ್ಲಿ ಉಪಪಾದಿಸಿ, ಭಕ್ತಿಯೋಗನಿಷ್ಠನಿಗೆ ಇವು ಇರುತ್ತವೆ ಎಂದು ತಿಳಿಸಿರುತ್ತಾರೆ. ಹೇಗೆಂದರೆ **"ಜ್ಞಾನೀತು ಪರಮೈಕಾನ್ತೀ"** ಎಂದಾರಂಭಿಸಿ **"ಭಗವದ್ಧ್ಯಾನ ಯೋಗೋಕ್ತಿ ವಂದನಸ್ತುತಿ ಕೀರ್ತನೈಃ। ಲಬ್ಧಾತ್ಮಾ ತದ್ಗತಪ್ರಾಣ ಮನೋಬುದ್ಧೀಂದ್ರಿಯಕ್ರಮಃ"** ಎಂದರೆ ಭಗವಂತನನ್ನು ಧ್ಯಾನಿಸುವುದು, ಭಕ್ತಿಯಿಂದ ಉಪಾಸಿಸುವುದು, ಆತನನ್ನು ಸ್ತುತಿಸುವುದು, ಆತನ ಗುಣಗಳನ್ನು ಕೀರ್ತನೆ ಮಾಡುವುದು ಇವುಗಳಿಂದ ಹೊಂದಿದ ಸತ್ತೆಯುಳ್ಳವನಾಗಿ ಆ ಭಗವಂತ ನನ್ನು ಹೊಂದಿದ ಪ್ರಾಣ, ಮನಸ್ಸು, ಬುದ್ಧಿ, ಇಂದ್ರಿಯಗಳ ವ್ಯಾಪಾರವುಳ್ಳವನಾಗು ವನೆಂದು ಹೇಳಲ್ಪಟ್ಟಿರುತ್ತದೆ. ಇಂತಹ ವ್ಯಾಪಾರಗಳೆಲ್ಲಾ ತಮ್ಮ ಪಿತಾಮಹರಾದ ಶ್ರೀ ನಾಥಮುನಿಗಳಲ್ಲಿದ್ದುದರಿಂದ ಅವರನ್ನೇ ತಮಗೆ ಗುರುವಾಗಿ ಭಾವಿಸಿದರು. ಆಗಲಿ ತಮ್ಮ ಆಚಾರ್ಯರನ್ನು ಬಿಟ್ಟು ಪ್ರಾಚಾರ್ಯರ ಆಚಾರ್ಯರನ್ನು ಮುಖ್ಯವಾಗಿ ಹೇಳಲು ಕಾರಣವೇನು? ಎಂದು ಆಕ್ಷೇಪ ತೋರಬಹುದು. ನಾಥಮುನಿಗಳಾದರೋ ತಮ್ಮಲ್ಲಿ ಪೂರ್ಣ ವಿಶ್ವಾಸವಿಟ್ಟು ತಮ್ಮ ಶಿಷ್ಯರಾದ ಉಯ್ಯಕ್ಕೊಂಡಾರ್ ಮೂಲಕ ಮಣಕ್ಕಾಲ್ ನಂಬಿಯನ್ನು ಕುರಿತು, ನೀವು ಯಾಮುನರಿಗೆ ಮಂತ್ರಾರ್ಥಗಳನ್ನೆಲ್ಲಾ ಉಪದೇಶಿಸತಕ್ಕದ್ದೆಂದು ಆಜ್ಞಾಪಿಸಿದುದರಿಂದಲೂ ನ್ಯಾಯತತ್ತ್ವ, ಯೋಗರಹಸ್ಯ ಮೊದಲಾದ ಗ್ರಂಥಗಳನ್ನು ರಚಿಸಿದುದರಿಂದಲೂ, ಶಾಸ್ತ್ರಜ್ಞಾನ ವಿಶೇಷವಾಗಿದ್ದು, ಯಥಾರ್ಥ ತತ್ತ್ವಬೋಧಕರಾಗಿ ನಮ್ಮ ಸಿದ್ಧಾನ್ತಕ್ಕೆ **"ನಾಥೋಪಜ್ಞಂ ಪ್ರವೃತ್ತಂ"** ಎಂಬಲ್ಲಿ ಹೇಳಿರುವ ಹಾಗೆ ಸ್ಥಿರವಾದ ತಳಹದಿಯನ್ನು ಹಾಕಿದವ ರಾದುದರಿಂದಲೂ ಆಳ್ವಾರುಗಳ ದಿವ್ಯಪ್ರಬಂಧ ಬೋಧೆಯನ್ನು, ಸ್ಥಿರಪಡಿಸಿದುದ ರಿಂದಲೂ ಇಲ್ಲಿ ಪ್ರಾಚಾರ್ಯ ಸಂಬಂಧವನ್ನೇ ಕೊಂಡಾಡಿರುತ್ತಾರೆ. ಈ ಮೇಲು

ಪಂಕ್ತಿಯನ್ನನುಸರಿಸಿ, ಶ್ರೀ ಯತಿವರ್ಯರೂ ಈ ಯಾಮುನ ಮುನಿಗಳ ಜ್ಞಾನ ದೀಪ್ತಿಯ ಮಹಾತ್ಮ್ಯೆಯಿಂದ **"ಯತ್ಪದಾಂ ಭೋರುಹಧ್ಯಾನ ವಿಧ್ವಸ್ತಾಶೇಷ ಕಲ್ಮಷಃ। ವಸ್ತುತಾಮುಪಯಾತೋಽಹಂ ಯಾ ಮುನೇಯಂ ನಮಾಮಿ ತಮ್"** ಎಂಬ ಶ್ಲೋಕದಲ್ಲಿ ಪ್ರಾಚಾರ್ಯ ಸಂಬಂಧವನ್ನೇ ಕೊಂಡಾಡಿರುತ್ತಾರೆ. ಇದೇ ಅವರ ಗೀತಾಭಾಷ್ಯಕ್ಕೆ ಮಂಗಳ ಶ್ಲೋಕವು. ಇದರ ಅರ್ಥಕ್ಕೆ ದಾಸನು ಬರೆದಿರುವ ಗೀತಾಭಾಷ್ಯ ಪರಿವರ್ತನೆಯನ್ನು ಪರಾಂಬರಿಸಿ, ಆಚಾರ್ಯನು ಎಂತಹವನೆಂಬುದು ಈ ಮುಂದಿನಶ್ಲೋಕಗಳಲ್ಲಿ ಉಪಪಾದಿತವು.

**"ಆಚಾರ್ಯೋ ವೇದಸಂಪನ್ನೋ ವಿಷ್ಣುಭಕ್ತೋವಿಮತ್ಸರಃ।**
**ಮಂತ್ರಜ್ಞೋ ಮಂತ್ರ ಭಕ್ತಶ್ಚ ಸದಾ ಮಂತ್ರಾಶ್ರಯಶ್ಶುಚಿಃ।**
**ಗುರುಭಕ್ತಿ ಸಮಾಯುಕ್ತಃ ಪುರಾಣಜ್ಞೋ ವಿಶೇಷತಃ।**
**ಏವಂ ಲಕ್ಷಣ ಸಂಪನ್ನೋ ಗುರುರಿತ್ಯಭಿಧೀಯತೇ**

ಎಂದರೆ ಆಚಾರ್ಯಸ್ಥಾನಕ್ಕೆ ಯೋಗ್ಯನಾದವನು ವೇದಾರ್ಥಗಳನ್ನು ಯಥಾವತ್ತಾಗಿ ತಿಳಿದವನಾಗಬೇಕು. ವಿಷ್ಣುಭಕ್ತನಾಗಿಯೂ, ಮಾತ್ಸರ್ಯವಿಲ್ಲದವನಾಗಿಯೂ ಇರಬೇಕು. ಮೂಲ ಮಂತ್ರವೇ ಮೊದಲಾದವುಗಳ ರಹಸ್ಯ ಜ್ಞಾನವುಳ್ಳವನಾಗಿರಬೇಕು. ಆ ಮಂತ್ರಗಳಲ್ಲಿ ಭಕ್ತಿಯುಳ್ಳವನಾಗಿಯೂ ಇರಬೇಕು. ಬರೀ ಜ್ಞಾನವೇ ಸಾಲದು, ಯಾವಾಗಲೂ ಎಂದರೆ ನಿತ್ಯವೂ ಕ್ಲಿಪ್ತ ಕಾಲಗಳಲ್ಲಿಯೂ ಮತ್ತೆ ವಿರಾಮವಿರುವಾಗಲೂ ಮೂಲ ಮಂತ್ರ ಮತ್ತು ದ್ವಯಂಗಳನ್ನು ಉಚ್ಚರಿಸುವನಾಗಿಯೂ, ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಿಂದ ಶುಚಿಯಾಗಿಯೂ ಗುರುಭಕ್ತಿಯಿಂದ ಕೂಡಿದವನಾಗಿಯೂ, ಪುರಾಣಗಳು ಶ್ರುತಿಗೆ ಉಪಬೃಂಹಣಗಳಾದುದರಿಂದ ಶ್ರುತಿಗೆ ವಿರೋಧವಿಲ್ಲದ ಹಾಗೆ ಅರ್ಥಗಳನ್ನು ಗ್ರಹಿಸಿದವನಾಗಿಯೂ ಇರತಕ್ಕದ್ದು. ಇಂತಹ ಲಕ್ಷಣಗಳುಳ್ಳವನು **ಗುರು** ಎಂದು ಹೇಳಲ್ಪಡುವನು. ಇಂತಹ ಆಚಾರ್ಯರುಗಳಲ್ಲಿ ಸಾರಭೂತರಾಗಿ ಮುಖ್ಯರು ಎಂಬ ಭಾವದಿಂದ ತಮ್ಮ ಪಿತಾಮಹರು ತಮಗೆ ಆಚಾರ್ಯರು ಎಂದು ಹೇಳಿಕೊಂಡರು.

ಆಗಲಿ ಅವರೇನೋ ಪರಮಬ್ರಹ್ಮವಿತ್ತು, ಪ್ರಾಜ್ಞರು. ಎಂದೇನೋ ಒಪ್ಪಬಹುದು. ಅದರಿಂದ ನಿಮಗುಂಟಾದ ಪ್ರಯೋಜನವೇನು ? ಎಂದರೆ ಅವರು ತಮ್ಮ ಶಿಷ್ಯರಿಗೆ ಉಪದೇಶಿಸಿ ಕಳುಹಿಸಿದ ಮಹತ್ತಾದ ಉಪದೇಶವನ್ನೇ ನಾನು ಹೊಂದಿರುತ್ತೇನೆ. ಅಂತಹ ಮಹನೀಯರ ಕುಲದಲ್ಲೇ ಅವರ ಪೌತ್ರನಾಗಿ ಜನಿಸಿರುತ್ತೇನೆ. ಇಂತಹ ನನ್ನಲ್ಲಿ ಅವರಿಗೆ ಪರಮ ವಾತ್ಸಲ್ಯವಿಲ್ಲವೇ ? ಅವರು ನನಗಾಗಿ ಪ್ರಾರ್ಥಿಸಿರುವರೆಂಬ ಪೂರ್ಣನಂಬಿಕೆಯು ನನಗುಂಟು. ಆದುದರಿಂದ ಪ್ರಸೀದ ಎನ್ನುತ್ತಾರೆ. ಬ್ರಹ್ಮವಿತ್ತಿನ ಕುಲದಲ್ಲಿ ಹುಟ್ಟಿದವರು ಯಾರಾದರೂ ಕೆಟ್ಟುಹೋಗು

ವರೇ ? ಶ್ರುತಿಯು "**ನಾಸ್ಯಾ ವರಪುರುಷಾಃ ಕ್ಷೀಯನ್ತೇ| ನಾಸ್ಯಾ ಬ್ರಹ್ಮ ವಿತ್ಕುಲೇ ಭವತಿ**" ಎಂದು ಹೇಳುತ್ತದೆ. ಈ ಬ್ರಹ್ಮ ವಿತ್ತಿಗಿಂತ ಕೀಳಾದವರು, ಈತನ ಸಂಬಂಧವಿರುವರು ನಾಶವನ್ನು ಹೊಂದುವುದಿಲ್ಲವು ಮತ್ತು ಅಂತವನ ವಂಶದಲ್ಲಿ ಬ್ರಹ್ಮವಿತ್ತಲ್ಲದವನು ಜನ್ಮವೆತ್ತುವುದಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಈ ಅಭಿಪ್ರಾಯಗಳನ್ನು ಮನಸ್ಸಿನಲ್ಲಿಟ್ಟೇ **ಪಿತಾಮಹಂ ನಾಥಮುನಿಂ** ಎಂಬ ಪ್ರಯೋಗವು. ನಾಥ ಮುನಿಗಳ ಅಪರ ನಾಮಧೇಯವು, ಶ್ರೀ ರಂಗನಾಥರೆಂದಾ ದುದರಿಂದ ನಿನ್ನ ನಾಮವನ್ನು ಧರಿಸಿ ನಿನ್ನನ್ನೇ ಸ್ಮರಿಸುತ್ತಾ, ನಿನ್ನನ್ನೇ ಮನನ ಮಾಡುತ್ತಿರುವವರು ಎಂಬ ಭಾವವು ತೋರಿ ಬರುತ್ತದೆ. "**ನಾಥೇನ ಮುನಿನಾ ತೇನಭವೇಯಂ ನಾಥವಾನಹಮ್**" ಎಂಬುದಾಗಿ ಶ್ರೀ ದೇಶಿಕರವರು ಶ್ಲೇಷ ಮೂಲಕವಾಗಿ ಉಪಪಾದಿಸಿರುವುದರಿಂದ ಪರಮಾತ್ಮನು ಹೇಗೆ ನಾಥನೋ, ಹಾಗೆ ಆಚಾರ್ಯನೂ ನಾಥನೂ, ನಾಥ ಪ್ರಾಪಕನು ಎಂಬ ಭಾವವು ನಾಥಶಬ್ದದಿಂದ ತೋರಿಬರುತ್ತದೆ.

**ವಿಲೋಕ್ಯ** ಎಂದರೆ ನಿನ್ನ ದಿವ್ಯ ಕಟಾಕ್ಷದಿಂದ ಈಕ್ಷಿಸಿ **ಪ್ರಸೀದ**–ಪ್ರಸನ್ನ ನಾಗು, ಹುಟ್ಟುವಾಗಲೇ ನೀನು ನಿನ್ನ ದಿವ್ಯ ಕಟಾಕ್ಷದಿಂದ ನೋಡಿರಬೇಕು. ಹಾಗಿಲ್ಲದಿದ್ದರೆ ಇಂತಹ ಮಹನೀಯ ವಂಶದಲ್ಲಿ ನನಗೆ ಜನ್ಮ ಉಂಟಾಗಲು ಕಾರಣ ವಿಲ್ಲವು. ಏಕೆಂದರೆ "**ಜಾಯಮಾನಂ ಹಿ ಪುರುಷಂ ಯಂ ಪಶ್ಯೇನ್ಮಧುಸೂದನಃ| ಸಾತ್ವಿಕಃ ಸಹಿ ವಿಜ್ಞೇಯಃಸವೈ ಮೋಕ್ಷಾರ್ಥ ಚಿಂತಕಃ**" ಎಂದು ಹೇಳಿರು ವುದರಿಂದ ನಿನ್ನ ಕಟಾಕ್ಷವು ನನ್ನ ಜನ್ಮ ಕಾಲದಲ್ಲಿ ಇಲ್ಲದಿದ್ದಲ್ಲಿ ನನಗೆ ಈಗ ಮೇಲೆ ಹೇಳಿರುವಂತೆ ನಿನ್ನನ್ನು ಸ್ತೋತ್ರಮಾಡುವ ಬುದ್ಧಿಯೂ ಕೂಡ ಉಂಟಾಗುತ್ತಿರಲಿಲ್ಲ ವಷ್ಟೆ. ಆದುದರಿಂದ ಅಂತಹ ನನ್ನಲ್ಲಿ ಇನ್ನೊಂದು ಸಲ ನಿನ್ನ ಕಟಾಕ್ಷವು ಬಿದ್ದು ದಾದರೆ ನನಗೆ ನಿನ್ನ ಪ್ರಸನ್ನತೆಯು ಸಿದ್ಧವು. ನಿರಂತರ ನಿರತಿಶಯ ಸುಖಪ್ರಾಪ್ತಿ ಯಲ್ಲಿ ಸಂದೇಹವಿಲ್ಲವು. "**ಪಶುರ್ಮನುಷ್ಯಃ ಪಕ್ಷೀವಾ ಯೇ ಚ ವೈಷ್ಣವ ಸಂಶ್ರಯಾ: | ತೇನೈವತೇ ಪ್ರಯಾಸ್ಯಂತಿ ತದ್ವಿಷ್ಣೋಃ ಪರಮಂ ಪದಮ್**" (ಶಾಂಡಿಲ್ಯ ೧-೧೫) ಪಶುವೇ ಆಗಲಿ, ಮನುಷ್ಯನೇ ಆಗಲಿ ಅಥವಾ ಪಕ್ಷಿಯೇ ಆಗಲಿ, ಯಾವುವು ವಿಷ್ಣುಭಕ್ತನನ್ನು ಆಶ್ರಯಿಸಿರುವುವೋ ಅವುಗಳು ಆ ವಿಷ್ಣು ಭಕ್ತನೊಂದಿಗೇ ದಿವ್ಯ ವೈಕುಂಠವನ್ನು ಹೋಗಿ ಸೇರುವುವು. ಮತ್ತು "**ಸಿದ್ಧಿರ್ಭವತಿ ವಾನೇತಿ ಸಂಶಯೋಽಚ್ಯುತಸೇವಿನಾಮ್| ನಸಂಶಯೋಽಸ್ತಿ ತದ್ಭಕ್ತ ಪರಿಚರ್ಯಾ ರತಾತ್ಮನಾಮ್**" ಅಚ್ಯುತನನ್ನು ಆಶ್ರಯಿಸಿದವರಿಗೆ ಮೋಕ್ಷಪ್ರಾಪ್ತಿ ಯುಂಟೋ ಇಲ್ಲವೋ ಎಂಬ ಸಂಶಯವಿದ್ದರೂ ಇರಬಹುದು. ಭಗವದ್ಭಕ್ತನನ್ನು ಆಶ್ರಯಿಸಿ ಅಂತಹ ಗುರುವಿನ ಕೈಂಕರ್ಯದಲ್ಲಿ ಆಸಕ್ತನಾಗಿರುವವನಿಗೆ ಸಂದೇಹವೇ ಇಲ್ಲವು. (ಶಾ. ೦–೧–೯೫) ವಿಭೀಷಣನು ಬಂದು ಶರಣಾಗತಿಯನ್ನು ಅನುಷ್ಠಿಸಿದ ನಂತರ ಆತನನ್ನು ರಾಮಗೋಷ್ಠಿಗೆ ಸೇರಿಸಿಕೊಳ್ಳಬಹುದೋ ಕೂಡದೋ ಎಂಬ

ಜಿಜ್ಞಾಸೆ ನಡೆದು ಅನಂತರ ಸೇರಿಸಲ್ಪಟ್ಟನು. ಆದರೆ ಆ ವಿಭೀಷಣನನ್ನು ಆಶ್ರಯಿಸಿದ ನಾಲ್ಕು ಜನ ರಾಕ್ಷಸರನ್ನು ಸೇರಿಸಿಕೊಳ್ಳುವ ಸಂದರ್ಭದಲ್ಲಿ ಯಾವ ಚರ್ಚೆಯೂ ನಡೆಯಲಿಲ್ಲವು. ಹಾಗೆಯೇ " **ಬಾಲ ಮೂಕ ಜಡಾನ್ಧಾಶ್ಚ ಪಂಗವೋ ಬಧಿರಾಸ್ತಥಾ। ಸದಾಚಾರ್ಯೇಣ ಸಂದೃಷ್ಟಾಸ್ತೇಽಪಿ ಯಾನ್ತಿ ಪರಾಂಗತಿಮ್**" ಬಾಲರೂ, ಮೂಕರೂ, ಅಜ್ಞಾನಿಗಳೂ, ಕುರುಡರೂ, ಕುಂಟರೂ, ಕಿವುಡರೂ ಸಹ ಸದಾಚಾರ್ಯ ಕಟಾಕ್ಷವುಳ್ಳವರಾದರೆ ಉತ್ತಮ ಗತಿಯನ್ನು ಹೊಂದುವರು. ಎಂದು ಹೇಳಲ್ಪಟ್ಟಿರುತ್ತದೆ, ಆದುದರಿಂದ ಪರಮಭಾಗವತರಾದ ನಾಥಮುನಿಗಳನ್ನು ಆಚಾರ್ಯರನ್ನಾಗಿ ವರಿಸಿರುವಾಗ ನಿನ್ನ ಅನುಗ್ರಹದಲ್ಲಿ ಸಂಶಯವೇ ಇಲ್ಲವು ಎಂದು ಶಾಸ್ತ್ರವು ಉದ್ಘೋಷಿಸುವುದರಿಂದ **ಪ್ರಸೀದ** ಎಂಬ ಪ್ರಾರ್ಥನೆಯು.

ಇಂತಹ ಆಚಾರ್ಯ ಪ್ರಾಪ್ತಿಗೆ ಆರು ಹೇತುಗಳು ಹೇಳಲ್ಪಟ್ಟಿವೆ. " **ಈಶ್ವರಸ್ಯ ಚ ಸೌಹಾರ್ದಂ ಯದೃಚ್ಛಾ ಸುಕೃತಂ ತಥಾ। ವಿಷ್ಣೋಃ ಕಟಾಕ್ಷ ಮದ್ವೇಷಃ ಆಭಿಮುಖ್ಯಂಚ ಸಾತ್ವಿಕೈಃ। ಸಂಭಾಷಣಂ ಷಡೇತಾನಿ ಹ್ಯಾಚಾರ್ಯ ಪ್ರಾಪ್ತಿ ಹೇತವಃ**" ಈಶ್ವರ ಕೃಪೆ, ಸುಕೃತ ಪರಿಪಾಕ, ಜನನಕಾಲದ ವಿಷ್ಣು ಕಟಾಕ್ಷ, ಭಗವದ್ಭಾಗವತರಲ್ಲಿ ಆಭಿಮುಖ್ಯ, ಸಾತ್ವಿಕರಲ್ಲಿ ಸಂಭಾಷಣೆಯು ಇವು ಆರೂ ಸದ್ಗುರು ಪ್ರಾಪ್ತಿಗೆ ಸಾಧನಗಳೆಂದು ಹೇಳಲ್ಪಟ್ಟಿರುತ್ತದೆ. ಇಂತಹ ಪರಮಾಚಾರ್ಯ ಪ್ರಾಪ್ತಿಯು ನನಗೆ ಉಂಟಾಗಬೇಕಾದರೆ ನಿನ್ನ ಸೌಹಾರ್ದವೂ ಜನನ ಕಾಲದಲ್ಲಿ ನಿನ್ನ ಕಟಾಕ್ಷವೂ "**ಜಾಯಮಾನಂ ಹಿ ಪುರುಷಂ ಯಂಪಶ್ಯೇನ್ಮಧುಸೂದನಃ। ಸಾತ್ವಿಕಸ್ಸಹಿ ವಿಜ್ಞೇಯ ಸ್ಸವೈಮೋಕ್ಷಾರ್ಥಚಿಂತಕಃ**" ಎಂಬಲ್ಲಿ ಹೇಳಿರುವ ಹಾಗೆ ನನಗುಂಟೆಂಬುದುತೋರಿಬರುತ್ತದೆ. ಆಕಾರಣದಿಂದಲೇ ನಾನು ಮೋಕ್ಷಾರ್ಥ ಚಿಂತಕನಾಗಿರಬಹುದು. ಹೀಗೆ ನೀನು ಅನುಗ್ರಹಿಸಿರುವುದರಿಂದ ಈಗಲೂ ಇನ್ನೊಂದು ಸಲ ದಾಸನನ್ನು **ವಿಲೋಕ್ಯ ಪ್ರಸೀದ** ಎಂದು ಪ್ರಾರ್ಥಿಸುತ್ತಾರೆ. ಅನಾದ್ಯನಂತಾಪರಾಧಗಳನ್ನೆಲ್ಲಾ ಹೋಗಲಾಡಿಸಿ ನನ್ನನ್ನು ಪರಿಶುದ್ಧನನ್ನಾಗಿ ಮಾಡಿ ನಿನ್ನ ಸನ್ನಿಧಿಗೆ ಬರಮಾಡಿಕೊಂಡು ನಿನಗೆ ನಿರಂತರ ಕೈಂಕರ್ಯವನ್ನು ಮಾಡುವ ಸಾಮ್ರಾಜ್ಯ ಪದವಿಯನ್ನು ದಯಪಾಲಿಸೆಂದು ಬೇಡುತ್ತಾರೆ.

ಇಲ್ಲಿ ತಾವೇ ಸ್ವತಂತ್ರಿಸಿ ಭರನ್ಯಾಸವನ್ನು "**ನಧರ್ಮ ನಿಷ್ಠೋಽಸ್ಮಿ**" ಎಂಬಲ್ಲಿ ಅನುಷ್ಠಿಸಿ ಕೊನೆಯಲ್ಲಿ ಆಚಾರ್ಯ ಸಂಬಂಧವನ್ನು ಹೇಳಿಕೊಳ್ಳುವುದು ಹೇಗೆ ನ್ಯಾಯವು ? ಎಂದರೆ ಈ ದಿವ್ಯಸ್ತುತಿಯ ಪ್ರಥಮ ಶ್ಲೋಕದಲ್ಲೂ ತಮ್ಮ ಪಿತಾಮಹರಾದ ನಾಥಮುನಿಗಳನ್ನೇ ಕೊಂಡಾಡಿ ಅನಂತರ ಶರಣಾಗತಿ ಶ್ಲೋಕವನ್ನು ರಚಿಸಿರುತ್ತಾರೆ. ಆಚಾರ್ಯ ಸಂಬಂಧವನ್ನು ಪ್ರಥಮತಃ ಹೇಳಿ ಪ್ರಪತ್ತ್ಯನುಷ್ಠಾನ

ಮಾಡುವುದು ಉಚಿತವು ಎಂದು ಭಾವಿಸಿ ಹೇಳಲ್ಪಟ್ಟು ಅನಂತರ ಭರನ್ಯಾಸಾನುಷ್ಠಾನ ಶ್ಲೋಕವು ಹೇಳಲ್ಪಟ್ಟಿತು. ಆದುದರಿಂದ ಮೊದಲು ಭರನ್ಯಾಸಾನುಷ್ಠಾನ ಶ್ಲೋಕವೂ ಅನಂತರ ಈ ಶ್ಲೋಕವೂ ಬಂದುದರಿಂದ ಬೇರೆ ಬೇರೆ ಕಾಲಗಳಲ್ಲಿ ಹೇಳಿರುದೆಂದು ಭಾವಿಸಲು ಕಾರಣವಿಲ್ಲವು. ಶರಣಾಗತಿಯು ಪ್ರಾರ್ಥನಾರೂಪವಾದುದರಿಂದ ಈ ಎಲ್ಲಾ ಶ್ಲೋಕಗಲ್ಲಿ ಹೇಳಿರುವುದೂ ತಾತ್ಕಾಲಿಕ ಪ್ರಾರ್ಥನೆಗಳೇ ಎಂದು ಭಾವಿಸುವುದೇ ಸರ್ವ ಸಮಂಜಸವು. ಹಾಗಲ್ಲದೆ ಪೂರ್ವೋತ್ತರಕಾಲದ ಹೇಳಿಕೆಗಳು ಎಂಬ ವಾದವು ಶಾಸ್ತ್ರವಿರುದ್ಧವು. ಮಹಾ ವಿಶ್ವಾಸಾಂಗವೇ ಆಗ ಇಲ್ಲವೆಂದಾಗುವುದು. ಪರಮ ಪ್ರಾಜ್ಞರಾಗಿ ಅತ್ಯುತ್ತಮ ಶಾಸ್ತ್ರಗ್ರಂಥಗಳನ್ನು ಬರೆದ ಶ್ರೀ ಯಾಮುನ ಮುನಿಗಳು ಶಾಸ್ತ್ರವಿರುದ್ಧವಾಗುವ ಹಾಗೆ ಶ್ಲೋಕಗಳನ್ನು ತಮ್ಮ ಸ್ತೋತ್ರರತ್ನದಲ್ಲಿ ದಯಪಾಲಿಸುವರೇ? ಆ ಪ್ರಪದನಾನುಷ್ಠಾನಕಾಲದಲ್ಲಿ ಸ್ವಾಮಿಯ ಸ್ವರೂಪರೂಪ ಕಲ್ಯಾಣಗುಣಗಳೇನು, ಆಶ್ರಿತ ಪರಿಪಾಲನದಲ್ಲಿ ಆದರವೇನು, ತಮ್ಮ ಆಕಿಂಚನ್ಯ, ಅನನ್ಯಗತಿತ್ವ ಪರಾಧೀನತೆಗಳೇನು, ತಮ್ಮ ಅಪರಾಧಾನಂತ್ಯವೇನು ಇವೆಲ್ಲವನ್ನೂ ಹೇಳಿಕೊಂಡು ಭಗವಂತನು ಮೆಚ್ಚಿ ಕೃಪೆಗೈಯಲಿ ಎಂದು ತಮ್ಮ ವೃತ್ತವನ್ನೆಲ್ಲಾ ಹೇಳಿದರು. ಇವೆಲ್ಲಾ ನಿನ್ನ ಪ್ರೀತಿ ಸಂಪಾದಕಗಳಾಗದೆ ಎಲ್ಲಾ ಪ್ರತಿಕೂಲ ವೃತ್ತಗಳೇ, ನೀನು ರಚಿಸಿರುವ ಸ್ತೋತ್ರವೂ ಛದ್ಮಸ್ತುತಿ ಎಂದು ನೀನು ಭಾವಿಸುವುದಾದರೂ **"ಮದ್ವೃತ್ತಮ ಚಿಂತಯಿತ್ವಾ"** ಅವೆಲ್ಲವನ್ನೂ ನೀನು ಭಾವಿಸುವ ಕೆಲಸವಿಲ್ಲವು. ಇನ್ನೊಂದು ಮುಖ್ಯ ಕಾರಣ ಉಂಟು. ಅದೇನೆಂದರೆ ನಾನು ಸದಾಚಾರ್ಯ ಸಂಬಂಧಯುಕ್ತನು. **"ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್ | ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್"** ಎಂದರೆ ಪಾಪಿಷ್ಠನಾದ ಕ್ಷತ್ರಬಂಧುವೆಂಬ ನೀಚಕ್ಷತ್ರಿಯನೂ, ಪುಣ್ಯಶಾಲಿಯಾದ ಪುಂಡರೀಕನೂ ಶ್ರೀ ನಾರದರಾದ ಆಚಾರ್ಯರ ಸಂಬಂಧದಿಂದ ಮುಕ್ತಿಯನ್ನು ಹೊಂದಿದುದರಿಂದ ಆಚಾರ್ಯಸಂಬಂಧವುಳ್ಳವನಾಗು ಎಂಬ ಹಿತೋಕ್ತಿಯನ್ನನುಸರಿಸಿ ನಾನೂ ಪಿತಾಮಹರಾದ ನಾಥಮುನಿಗಳನ್ನೇ ಆಚಾರ್ಯರನ್ನಾಗಿ ವರಿಸಿರುವೆನು. ಈ ಕಾರಣದಿಂದ ನೀನು ನನ್ನನ್ನು ಪರಿತ್ಯಾಗಮಾಡಲು ಸಾಧ್ಯವಿಲ್ಲವಾದುದರಿಂದ ಪ್ರಸೀದ ಎಂದು ಪ್ರಾರ್ಥಿಸಿದರು. ಇದು ಪ್ರಬಲ ಕಾರಣವಾದುದರಿಂದ ಪ್ರಪದನಕಾಲದಲ್ಲೇ ಕೊನೆಯಲ್ಲಿ ಹೇಳಲ್ಪಟ್ಟಿತು. ಮದ್ವೃತ್ತಗಳಲ್ಲಿ ಏನಾದರೂ ನ್ಯೂನತೆಗಳು ಇದ್ದರೆ ಅವುಗಳನ್ನು ಪರಿಗಣಿಸದೆ ಹೀಗೆ ಪರಮಶ್ರೇಷ್ಠರಾದವರನ್ನು ನನಗೆ ಆಚಾರ್ಯರನ್ನಾಗಿ ಭಾವಿಸಿರುವೆನೆಂಬ ಕಾರಣದಿಂದಲಾದರೂ ಪ್ರಸನ್ನನಾಗು ಎಂಬ ಪ್ರಾರ್ಥನೆಯು. ||೬೫||

ಶ್ರೀ ನಿಗಮಾಂತ ಮಹಾದೇಶಿಕರವರು ಈ ೬೫ ಶ್ಲೋಕಗಳಲ್ಲೂ ಹೇಳಿರುವುದನ್ನು ಹೀಗೆ ಸಂಗ್ರಹಿಸಿರುತ್ತಾರೆ. **"ನ ದ್ವಯವಚನತಃ ಕ್ಷೇಮಕರಣಮ್"**

ದ್ವಯಮಂತ್ರಕ್ಕಿಂತ ಕ್ಷೇಮವನ್ನುಂಟುಮಾಡುವುದು ಇನ್ನು ಯಾವುದೂ ಇಲ್ಲವೆಂಬಲ್ಲಿ ಹೇಳಿರುವ ಹಾಗೆ ಯಾಮುನ ಮುನಿಗಳು ದ್ವಯಮಂತ್ರವನ್ನೇ ಈ ೬೫ ಶ್ಲೋಕಗಳಿಂದ ಕೊಂಡಾಡಲು ಉಪಕ್ರಮಿಸಿ ಮೊದಲು ೫ ಶ್ಲೋಕಗಳಿಂದ ತಮಗೆ ಯಥಾರ್ಥಜ್ಞಾನವನ್ನು ಶಿಷ್ಯಪ್ರಶಿಷ್ಯರ ಮೂಲಕ ದಯಪಾಲಿಸಿದುದಕ್ಕಾಗಿ ನಾಥಮುನಿಗಳನ್ನು ಕೃತಜ್ಞತಾಮೂಲಕ ಮೂರು ಶ್ಲೋಕಗಳಿಂದಲೂ ಅನಂತರ ಎರಡು ಶ್ಲೋಕಗಳಿಂದ ಶ್ರೀ ಪರಾಶರ ಮತ್ತು ನಮ್ಮಾಳ್ವಾರ್ ಅವರಿಗೂ ಕೃತಜ್ಞತಾಪೂರ್ವಕವಾಗಿ ನಮಸ್ಕಾರವನ್ನೆಸಗಿದರು. ಸರಿಯಾದ ಜ್ಞಾನವನ್ನು ಹೊಂದಲು ಶ್ರೀ ಪರಾಶರರ ವಿಷ್ಣುಪುರಾಣವೂ ನಮ್ಮಾಳ್ವಾರ್‌ರವರ ತಿರುವಾಯ್ಮೊಳಿಯೂ ತುಂಬಾ ಶಾಸ್ತ್ರ ಪರಿಚಯ ಮಾಡಿಕೊಳ್ಳಲು ಅವಕಾಶವಿಲ್ಲದವರಿಗೆ ಸಾಕು. ಎಂಬ ಭಾವವು ತೋರಿಬರುತ್ತದೆ. ೬ನೆಯ ಶ್ಲೋಕದಿಂದ ಸ್ತೋತ್ರಾರಂಭವು. ೭ನೆಯ ಶ್ಲೋಕದಲ್ಲಿ ಸ್ವಾಮಿಯ ಪರತ್ವವನ್ನು ಸಂಗ್ರಹಿಸಿ ಅಂತಹವನನ್ನು ಸ್ತುತಿಸಲು ಶಕ್ತಿ ಇಲ್ಲದಿದ್ದರೂ ಸ್ತುತಿಸಲು ಉದ್ಯಮಿಸಿ ಲಜ್ಜೆಗೆ ಗುರಿಮಾಡಿಕೊಂಡ ತಮಗೂ ಒಂದು ನಮಸ್ಕಾರವೆಂದು ಹೇಳಿದರು. ೮ನೆಯ ಶ್ಲೋಕದಲ್ಲಿ ಮತ್ತು ೯ನೆಯದರಲ್ಲಿ ಪರಮ ಪುರುಷನ ಸೌಲಭ್ಯವನ್ನು ಕೊಂಡಾಡಿ ಸ್ತೋತ್ರವು ಉಚಿತವಲ್ಲದಿದ್ದರೂ ಅವನು ಅಂಗೀಕರಿಸುವನೆಂದು ಸಮಾಧಾನ ಮಾಡಿಕೊಂಡರು. ಅಲ್ಲಿಂದ "ನಾವೇಕ್ಷಸೇ" ಎಂದಾರಂಭಿಸಿ ೧೨ ಶ್ಲೋಕಗಳಿಂದ ಪರತತ್ವ ನಿರ್ಣಯ ಮಾಡಲು ಉಪಕ್ರಮಿಸಿ ನಾರಾಯಣಶಬ್ದದಿಂದ ಹೇಳಲ್ಪಟ್ಟವನಿಗೇ ಸರ್ವಶ್ರೇಷ್ಠತ್ವವೂ ಸೌಲಭ್ಯವೂ ಸಲ್ಲುತ್ತವೆಂದು ಉಪಪಾದಿಸಿ ಶರಣಾಗತಿಯನ್ನನುಷ್ಠಿಸಿದರು. ಯಾವಾಗ ಸರ್ವಶರಣ್ಯತ್ವವೇರ್ಪಟ್ಟಿತೋ ಆಗ **"ನಧರ್ಮನಿಷ್ಠೋಽಸ್ಮಿನಚಾತ್ಮವೇದೀ"** ಎಂಬ ಶ್ಲೋಕವಲ್ಲಿ ದ್ವಯದ ಪೂರ್ವಖಂಡದಲ್ಲಿ ಹೇಳಿರುವ ಹಾಗೆ ತಮಗೆ ಭರನ್ಯಾಸದಲ್ಲಿ ಅಧಿಕಾರವು ಆಕಿಂಚನ್ಯ ಮತ್ತು ಅನನ್ಯ ಗತಿತ್ವಗಳಿಂದ, ಉಂಟೆಂದೂ ಸಪರಿಕರವಾದ ಶರಣಾಗತಿಯನ್ನನುಷ್ಠಿಸುತ್ತಾರೆ. ಅಲ್ಲಿ ತಮಗೆ ಇನ್ನೊಂದು ಉಪಾಯಕ್ಕೆ ಅಶಕ್ತತೆಯನ್ನು ಪ್ರತಿಪಾದಿಸಿದರು, ಹೀಗೆ ಶಾಬ್ಧವಾಗಿಯೂ ಅರ್ಥವಾಗಿಯೂ ದ್ವಯದ ಪೂರ್ವ ಖಂಡಾಭಿಪ್ರಾಯವು ಉಪಪಾದಿತವು (ಶ್ಲೋ. ೨೨) "ನನಿಂದಿತಂ" ಎಂಬ ೨೩ನೆಯ ಶ್ಲೋಕದಿಂದ ಆರಂಭಿಸಿ ಶ್ಲೋಕಗಳಿಂದ ತಮಗೆ ಆಕಿಂಚನ್ಯವೂ ಅನನ್ಯಗತಿತ್ವವೂ ಹೇಗೆ ಎಂಬುದನ್ನು ವ್ಯಕ್ತ ಪಡಿಸಿದರು. ೨೮–೨೯ನೆಯ ಶ್ಲೋಕಗಳಿಂದ ಮಹತ್ತಾದ ಫಲವನ್ನು ಈ ಲಘೂಪಾಯವಾದ ಶರಣಾಗತಿಯು ಹೇಗೆ ಸಾಧಿಸಿ ಕೊಡುತ್ತದೆಂಬುದನ್ನು ವಿವರಿಸಿದರು. ೩೦ ರಿಂದ ಆರಂಭಿಸಿ ೧೭ ಶ್ಲೋಕಗಳಿಂದ ದ್ವಯದ ಉತ್ತರಖಂಡದ ಎರಡು ಪದಗಳಾದ ಶ್ರೀಮತೇ ನಾರಾಯಣಾಯ ಎಂಬಲ್ಲಿರುವ ಚತುರ್ಥಿಯ ಅರ್ಥವನ್ನು ವಿಸ್ತರಿಸಿ ಹೇಳಿದರು ಅಲ್ಲಿ ೪೬ನೆಯ ಶ್ಲೋಕದಲ್ಲಿ " ಪ್ರಹರ್ಷ ಯಿಷ್ಯಾಮಿ " ಎಂಬುದರಿಂದ ಸರ್ವದೇಶ ಸರ್ವ ಕಾಲ ಸರ್ವಾವಸ್ಥೋಚಿತ, ನಿರವಧಿಕ, ನಿರುಪಾಧಿಕ ಸರ್ವವಿಧ ಕೈಂಕರ್ಯಗಳೂ ಸ್ವಯಂ ಪ್ರಯೋಜನ

ಗಳೆಂಬುದನ್ನು ಪ್ರತಿಪಾದಿಸಿ ದ್ವಯದ **ನಮಃ** ಶಬ್ದಾರ್ಥವನ್ನು ಸೂಚಿಸಿದರು. ೪೭ನೇಯ ಶ್ಲೋಕದಿಂದ ಸ್ವಾಮಿಯು ಪರಮ ಕೃಪಾಶಾಲಿ ಯಾದುದರಿಂದಲೇ ಪ್ರಾರ್ಥನೇ ವಿನಾ ತಮ್ಮ ಸ್ಥಿತಿಯಾದರೋ ಪರಮನಿಂದ್ಯ ವೆಂದು ಹೇಳುವ ವ್ಯಾಜ್ಯ ದಿಂದ ತಮಗೆ ಅಪೇಕ್ಷಿತವಾದ ಫಲವು ಪರಮ ಪುರುಷಾರ್ಥವೆಂದೂ ಅದರ ಸರ್ವಾತಿಶ ಯತ್ವವನ್ನೂ ತಮಗಿರುವ ತ್ವರೆಯನ್ನೂ ವಿವರಿಸಿದರು. "ಅಪರಾಧ ಸಹಸ್ರಭಾ ಜನಂ" ಎಂದಾರಂಭಿಸಿ (೪೮) ನಾಲ್ಕು ಶ್ಲೋಕಗಳಿಂದ ಶರಣ್ಯನ ಮಹತ್ತಾದ ಗುಣ ವಿಶೇಷದಿಂದ ಅವನಲ್ಲಿ ಪ್ರಪತ್ತ್ಯನುಷ್ಠಾನ ಮಾಡುವುದು ಸರ್ವವಿದ ವಿರೋಧಿ ನಿವೃತ್ತಿಯನ್ನುಂಟು ಮಾಡುವುದೆಂಬುದನ್ನು ಪ್ರದರ್ಶಿಸಿದರು. ೫೨-೫೩ ನೆಯ ವಪುರಾದಿಷು, ಮಮನಾಥ ಎಂಬ ಶ್ಲೋಕ ಗಳಿಂದ ತನ್ನ ಅನನ್ಯಾರ್ಹ ಶೇಷತ್ವಾಧ್ಯವ ಸಾಯದಿಂದ ಸರ್ವ ಭರವನ್ನೂ ಸ್ವಾಮಿಯಲ್ಲಿಡುವುದೇ ತಮಗೆ ಸ್ವರೂಪವೆಂದು ಹೇಳಿಕೊಂಡರು. ೫೪ನೆಯ "ಅವಬೋಧಿತವಾ" ಎಂಬ ಶ್ಲೋಕದಿಂದ ಅನನ್ಯ ಪ್ರಯೋಜನನಾದ ತನಗೆ ಮುಖ್ಯವಾಗಿ ಬೇಕಾದುದು ಅನಿಷ್ಟ ನಿವೃತ್ತಿ ಪೂರ್ವಕವಾದ ಇಷ್ಟಪ್ರಾಪ್ತಿ ಯಾದುದರಿಂದ ಅದನ್ನು ಪ್ರಾರ್ಥಿ ಸಿದರು. ೫೮ ನೆಯ "ದುರಂತಸ್ಯ" ಎಂಬ ಶ್ಲೋಕದಲ್ಲಿ ಹೀನಾವಸ್ಥೆಯನ್ನು ನಿಂದಿಸುವ ವ್ಯಾಜದಿಂದ ತಮಗೆ ಅಪೇಕ್ಷಿತವಾದ ಪುರುಷಾರ್ಥ ಎಲ್ಲಕಿಂತಲೂ ಅತಿಶಯ ವಾದುದೆಂಬ ಭಾವವನ್ನೂ ಅದಕ್ಕಾಗಿ ತಮ್ಮ ತ್ವರೆಯನ್ನು ಸೂಚಿಸಿ ಶರಣಾಗತನಿಗೆ ಶರಣ್ಯನ ಗುಣ ವಿಶೇಷಗಳಿಂದಲೇ, ಪ್ರಾರ್ಥಿಸಲ್ಪಟ್ಟುದುದು ಸಿದ್ಧಿ ಸುವುದಾದರಲ್ಲೇನೂ ಸಂದೇಹವಿಲ್ಲವೆಂದು ಹಿಂಪೆ ಹೇಳಿರುವುದನ್ನೇ ಸ್ಥಿರೀಕರಣ ಮಾಡಿ ಹೇಳಿದರು. ಅದರ ಮುಂದಿನ ಶ್ಲೋಕವಾದ "ಅನಚ್ಛಿನ್ನಪಿ" ಎಂಬಲ್ಲಿ ಅನನ್ಯ ಪ್ರಯೋಜನರಾದ ತಮ್ಮ ರಕ್ಷಣೆಯಲ್ಲಿ ಉದ್ಯುಕ್ತನಾದ ಭಗವಂತನೇ "**ನೇಹಾ ಭಿಕ್ರಮನಾಶೋಸ್ತಿಪ್ರತ್ಯವಾಯೋ ನವಿದ್ಯತೇ**" ಎಂಬಲ್ಲಿ ತಾನೇ ಹೇಳಿದ ಹಾಗೆ ತಮ್ಮ ಯೋಗಕ್ಷೇಮವನ್ನು ಮುಂದಕ್ಕೆ ನೋಡಿಕೊಳ್ಳುವನೆಂದು ಬೋಧಿಸಿದರು. ಮುಂದಿನ ಶ್ಲೋಕದಲ್ಲಿ, ಶ್ರೀ ಯತಿವರ್ಯರು ಶರಣಾಗತಿ ಗದ್ಯದಲ್ಲಿ ಹೇಳಿರುವ "**ತ್ವಮೇವಮಾತಾಚ ಪಿತಾತ್ವಮೇವ**" ಎಂಬಂತೆ "**ಪಿತಾತ್ವಂ ಮಾತಾತ್ವಂ**" ಎಂಬಲ್ಲಿ ಸುಬಾಲೋಪನಿಷತ್ತಿನ ಅರ್ಥವನ್ನು ವಿವರಿಸಿ, ಭಗವಂತನು ಭರಸ್ವೀಕಾರ ಮಾಡಿದುದರಿಂದ ತಾವು ನಿರ್ಭರರೆಂದು ಹೇಳಿದರು. ಅಲ್ಲಿಂದ "**ಜನಿತ್ವಾಹಂ, ಅಮರ್ಯಾದಃ**" (೬೧-೬೨) ಎಂಬ ಎರಡು ಶ್ಲೋಕಗಳಿಂದಲೂ ಉಪಾಯಾನ್ತರವಾದ ಉಪಾಸನದಲ್ಲಿ ತಮಗಿರುವ ಅಶಕ್ತತೆಯನ್ನು ಹಿಂದೆ ೨೨ನೆಯ ಶ್ಲೋಕದಲ್ಲಿ ಹೇಳಿರುವುದನ್ನೇ ಪುನಃ ಅನುವದಿಸಿ ಸ್ಥಿರಪಡಿಸಿದರು. "**ರಘುವರ**" (೬೫) ಎಂಬ ಶ್ಲೋಕದಲ್ಲಿ ಶ್ರೀ ರಾಮಾವತಾರದಲ್ಲಿ ನಿನ್ನ ವಂಶದಲ್ಲಿ ಪೂರ್ವಿಕರು ಅನುಷ್ಠಿಸಿದುದನ್ನೇ ನೀನೂ ಅಂಗೀಕರಿಸಿ ಶರಣಾಗತರ ಅಪರಾಧಗಳನ್ನು ಹೋಗ ಲಾಡಿಸಿದ ನಿದರ್ಶನಗಳಿಂದ ನನ್ನ ಸರ್ವಾಪರಾಧಗಳನ್ನೂ ಹೋಗಲಾಡಿಸಲು ನಿನ್ನಲ್ಲಿ

ಮಾಡಿದ ಶರಣಾಗತಿಗೆ ಯೋಗ್ಯತೆಯುಂಟೆಂದು ಹೇಳಿದರು. **"ನನು ಪ್ರಪನ್ನಃ"** (೬೪) ಎಂಬ ಶ್ಲೋಕದಲ್ಲಿ ನೀನು ರಾಮಕೃಷ್ಣಾದ್ಯವತಾರಗಳಲ್ಲಿ ಮಾಡಿದ ವ್ರತ ಪ್ರತಿಜ್ಞೆಯೇ ಅದು ಎಂದು ಶ್ಲಾಘಿಸಿದರು. ಅನಂತರ ಕೊನೆಯ ಶ್ಲೋಕದಲ್ಲಿ ತನ್ನ ರಕ್ಷಣೆಗೆ ಹೇತುಭೂತವಾದ ಸಾಧನಗಳಲ್ಲಿ ತನಗೆ ಸಂಬಂಧಿಸಿದುದು ಎಷ್ಟರ ಮಟ್ಟಿಗೆ, ಪರಮಾತ್ಮನಿಗೆ ಸಂಬಂಧಿಸಿದುದು ಎಷ್ಟರಮಟ್ಟಿಗೆ, ಎಂಬುದನ್ನು ವಿಚಾರ ಮಾಡುವವರಾಗಿ ಅದರಲ್ಲಿ ಪ್ರಧಾನತಮವಾದ ಕಾರಣವು ಭಗವಂತನೇ ಸಿದ್ಧೋಪಾಯನಾಗಿ ಆತನ ಕಟಾಕ್ಷವಿಶೇಷದಿಂದ ಲಭಿಸಿದಸದಾಚಾರ್ಯ ಸಂಬಂಧವೂ ಅವರ ಅಮೋಘವಾದ ಉಪದೇಶವೂ ಮತ್ತು ಭರನ್ಯಾಸಾನುಷ್ಠಾನ ಪ್ರಕ್ರಿಯೆಯೂ ಮೊದಲಾದುವೇ ಎಂದು ನಿರ್ಧರಿಸಿ, ಮುಕುಂದನು ಪ್ರಸನ್ನನಾಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲವೆಂದು ತಿಳಿದು ನಿರ್ಭರನಾಗಿಯೂ, ನಿರ್ಭಯನಾಗಿಯೂ, ಹೃಷ್ಟ ಮನಸ್ಕನಾಗಿಯೂ ಇರತಕ್ಕದ್ದು ಎಂದು ಗ್ರಂಥನಿಗಮನ ಮಾಡಿದರು.

ಶ್ರೀ ನಿಗಮಾಂತ ದೇಶಿಕರವರು, ಶ್ರೀ ಯಾಮುನಮುನಿಗಳು ಈ ಅಮೋಘವಾದ ಸ್ತೋತ್ರವನ್ನು ರಚಿಸಿ ಅದರಲ್ಲಿ ತಾವು ಉಪದೇಶಿಸಿರುವ ಹಾಗೆ ಆಚಾರ್ಯ ಮುಖೇನ ಭರನ್ಯಾಸವನ್ನು ಅನುಷ್ಠಿಸಿದುದರಿಂದ ದೇಹಾವಸಾನಾ ನಂತರ ಪರಮ ಪದವನ್ನು ಹೊಂದಿದರೆಂದು ಈ ಮುಂದಿನ ಶ್ಲೋಕದಿಂದ ಹೇಳಿರುತ್ತಾರೆ. ಇದರಿಂದ ಶ್ರೀ ಯಾಮುನೇಯರು ಅನುಷ್ಠಿಸಿದ ಉಪಾಯವು ಭರನ್ಯಾಸವೇ ಎಂದು ಏರ್ಪಟ್ಟಿತು. ಈ ಸ್ತೋತ್ರ ರತ್ನದಲ್ಲಿ ಭರನ್ಯಾಸದ ಮಹಿಮೆಯೇ ಕೊಂಡಾಡಲ್ಪಟ್ಟಿರುತ್ತದೆ.

**ಇತಿ ಕಿಲ ನಿಗಮಾನ್ತ ಭಾಗಧೇಯಸ್ತುತಿ**
**ಪರಿವಾಹ ಸಮೀಕ್ಷಯಾ ಪ್ರಪತ್ತ್ಯಾ |**
**ಅಲಭತ ಪರಮಂ ಪದಂ ಮುರಾರೇ**
**ರನಘಮನೋರಥ ಏಷ ಯಾಮುನೇಯಃ ||**

**ಇತಿ**– ಹೀಗೆ ನಾವು ಈ ಸ್ತೋತ್ರದ ಭಾಷ್ಯದಲ್ಲಿ ಉಪಪಾದಿಸಿರುವ ರೀತಿಯಲ್ಲಿ **ಅನಘಮನೋರಥಃ**– ನಿರತಿಶಯವಾದ ಮಹತ್ತಾದ ಶ್ರೇಯಸ್ಸಾದುದರಿಂದ ನಿರ್ದುಷ್ಟವಾದ ಮನೋರಥವನ್ನುಳ್ಳ, **ಏಷ ಯಾಮುನೇಯಃ**– ಈ ಗ್ರಂಥಕರ್ತಾವಾದ ಯಾಮುನ ಮುನಿಗಳು, **ನಿಗಮಾನ್ತ ಭಾಗಧೇಯ ಸ್ತುತಿ ಪರಿವಾಹ ಸಮೀಕ್ಷಯಾ**–ಎಂದರೆ **ನಿಗಮಾನ್ತ**–ವೇದಾಂತದ, ಉಪನಿಷತ್ತುಗಳ, **ಭಾಗದೇಯ**–ತತ್ವಹಿತ ಪುರುಷಾರ್ಥಗಳ ಉಪದೇಶ ಸುಕೃತ ರೂಪವಾಗಿರುವ, **ಸ್ತುತಿ**– ಈ ಸ್ತೋತ್ರರತ್ನದ, **ಪರಿವಾಹ**,-ಪ್ರವಾಹದಿಂದ, **ಸಮೀಕ್ಷಯಾ**–ಚೆನ್ನಾಗಿ ಒಳ್ಳೆಯ ಉಪಾಯವೆಂದು ಪ್ರದರ್ಶಿಸಲ್ಪಟ್ಟ, **ಪ್ರಪತ್ತ್ಯಾ**–ಶರಣಾಗತಿಯಿಂದ, ಭರನ್ಯಾಸಾನುಷ್ಠಾನದಿಂದ, **ಮುರಾರೇಃ**–ಮುರನೆಂಬ ರಾಕ್ಷಸನನ್ನು ಕೊಂದ ಶ್ರೀ ಮಹಾವಿಷ್ಣು

ವಿನ **ಪರಮಂ ಪದಂ**–ಸರ್ವೋತ್ಕೃಷ್ಟವಾದ ದಿವ್ಯ ವೈಕುಂಠವನ್ನು **ಅಲಭತ**–ಪಡೆದರಷ್ಟೇ.

**ತಾತ್ಪರ್ಯ**–ಯಾಮುನ ಮುನಿಗಳು ಎರಡು ಉಪಾಯಗಳಲ್ಲಿ ಯಾವುದನ್ನು ಅನುಷ್ಠಿಸಿ ಮೋಕ್ಷವನ್ನು ಹೊಂದಿದರು ಎಂದರೆ ಪ್ರಪತ್ತಿಯಿಂದಲೇ ಎಂದು **ಪ್ರಪತ್ತ್ಯಾ** ಎಂಬ ಪ್ರಯೋಗವು. ಆ ಪ್ರಪತ್ತಿ ಎಂತಹುದೆಂದರೆ **ನಿಗಮಾನ್ತ ಭಾಗಧೇಯಸ್ತುತಿ ಪರಿವಾಹ ಸಮೀಕ್ಷಯಾ** ಎಂದು ಹೇಳಲ್ಪಟ್ಟಿತು. ನಿಗಮಾನ್ತವೆಂದರೆ ವೇದಾನ್ತವು, ಉಪನಿಷತ್ತುಗಳು. ಅವುಗಳ ಭಾಗಧೇಯ ರೂಪವಾದುದು ಯಾವುದೆಂದರೆ ತತ್ವಹಿತ ಪುರುಷಾರ್ಥಗಳು. ಇವೇ ಉಪನಿಷತ್ತಿನ ಸಾರತರ ಭಾಗಗಳು. ಆದರಲ್ಲಿ ಸಾರತಮವಾದುದು ಹಿತಾನುಷ್ಠಾನವು. ಏಕೆಂದರೆ ಇದರಿಂದ ನಿರತಿಶಯವಾದ ಮುಕ್ತಿಯು ದೊರಕುವುದರಿಂದ, ಹೀಗೆ ವೇದಾಂತದ ಸಾರ, ಸಾರತರ, ಸಾರತಮಗಳಿರುವಂತಾದ್ದು. ಈ ಅಮೋಘವಾದ ಸ್ತೋತ್ರವು. ಇದರಲ್ಲಿ ವ್ಯಕ್ತವಾಗಿ ಉಪಪಾದಿತವಾದುದು ಪ್ರಪತ್ತಿಯು; ಆದುದರಿಂದ ಈ ಸ್ತುತಿಯಲ್ಲಿ ಚೆನ್ನಾಗಿ ಕಾಣಬರುವ ಪ್ರಪತ್ತಿಯಿಂದ ಎಂಬರ್ಥವು. ಇಲ್ಲಿ **ನಿಗಮಾಂತ** ಶಬ್ದವು ಉಪಲಕ್ಷಣವಾಗಿ ಅದನ್ನು ಉಪಪಾದಿಸಿ ಹೇಳುವ ಇತಿಹಾಸ ಪುರಾಣಗಳನ್ನೂ, ಗೀತಾದಿ ಸ್ಮೃತಿಗಳನ್ನೂ, ಸಂಹಿತೆ ಮೊದಲಾದವುಗಳನ್ನೂ ಹೇಳುತ್ತದೆ. ತೈತ್ತಿರೀಯ, ಶ್ವೇತಾಶ್ವತರ ಮೊದಲಾದ ಉಪನಿಷತ್ತು ಮೊದಲಾದವುಗಳಲ್ಲಿಯೂ, ಸರ್ವಶಾಸ್ತ್ರಗಳಲ್ಲಿಯೂ ಹೇಳಿರುವುದು ತತ್ವಹಿತಪುರುಷಾರ್ಥಗಳೇ, **ಸ್ತುತಿಪರಿವಾಹ** ವೆಂಬ ಶಬ್ದದಿಂದ ಶಾಸ್ತ್ರೋಪದೇಶಗಳು ತರಂಗ ತರಂಗರೂಪದಲ್ಲಿ ಈ ಸ್ತುತಿಯಲ್ಲಿ ಅಡಗಿವೆ ಎಂಬ ಭಾವವು ತೋರಿಬರುತ್ತದೆ. ಇಂತಹ ಸಾಧ್ಯೋಪಾಯಾನುಷ್ಠಾನದಿಂದಲೇ ಸಿದ್ಧೋಪಾಯನು ಮುಕ್ತಿಯನ್ನೀಯುವನೇ ವಿನಾ, ಅನ್ಯಥಾ ಇಲ್ಲವೆಂಬ ಶಾಸ್ತ್ರವಚನವನ್ನು **ಅಲಭತ ಪರಮಂ ಪದಂ** ಎಂಬುದರಿಂದ ವ್ಯಕ್ತಗೊಳಿಸಿದರು. ಹೀಗೆ ಹೇಳಿದುದರಿಂದ ನಿತ್ಯವಿಭೂತಿ ಎಂಬ ವೈಕುಂಠಲೋಕವುಂಟೆಂಬುದು ಸತ್ಯವಲ್ಲವೆಂದೂ ಅಲ್ಲಿ ಪರಮಾತ್ಮನೊಂದಿಗೆ ಸಾಯುಜ್ಯಪ್ರಾಪ್ತಿ ಎಂಬುದು ಸರಿಯಲ್ಲವೆಂದೂ ಹೇಳುವ ಅಭಿಪ್ರಾಯಗಳೆಲ್ಲಾ ನಿರಾಕರಿಸಲ್ಪಟ್ಟವು. ಇನ್ನು ಕೆಲವರು ಪ್ರಪದನವು ಉಪಾಯವೇ ಅಲ್ಲವು. ಅದೂ ಉಪಾಯವೆಂದು ಹೇಳುವುದು ಅತಿಶಯೋಕ್ತಿಯು. ಅದು ಉಪಾಸನಕ್ಕೆ ಮಾತ್ರ ಅಂಗವು ಇತ್ಯಾದಿ ವಾದಗಳೂ ಸಹ ನಿರಸ್ತವು.

ಶ್ರೀ ಆಳವಂದಾರ್‌ರವರು **ಅನಘ ಮನೋರಥ** ರೆಂದು ಹೇಳಲ್ಪಟ್ಟಿರುತ್ತದೆ. **ಅಲ್ಪಾಸ್ಥಿರ**ಗಳಾದ ಮನೋರಥಗಳನ್ನು ತ್ಯಜಿಸಿ ನಿರತಿಶಯ ಸುಖರೂಪವಾದ ಮನೋರಥವನ್ನು ಹೊಂದಿದವರು. ದೈವಸಂಕಲ್ಪದಿಂದ ರಾಜ್ಯಪ್ರಾಪ್ತಿಯುಂಟಾದರೂ, **ಸಮಲೋಷ್ಟಾಶ್ಮಕಾಂಚನಃ** ಎಂಬಲ್ಲಿ ಹೇಳಿರುವ ಹಾಗೆ, ರಾಜ್ಯಭೋಗಗ

ಳನ್ನೆಲ್ಲಾ ತ್ಯಜಿಸಿ ಅಮೋಘಪುರುಷಾರ್ಥವು ಪರಿಪೂರ್ಣ ಬ್ರಹ್ಮಾನುಭವವೂ, ಮತ್ತು ಆತನಿಗೆ ನಿತ್ಯಕೈಂಕರ್ಯ ಮಾಡೋಣವೂ ಎಂದು ಪ್ರಾಜ್ಞತೆಯಿಂದ ಅರಿತವರು. ಮತ್ತು ವೇದಾಂತಗಳಿಗೂ ವ್ಯಾಸಸೂತ್ರಗಳಿಗೂ ಸರಿಯಾದ, ಸರ್ವಸಮಂಜಸಾರ್ಥ ಗಳನ್ನು ಹೇಳದೆ ಅವುಗಳ ಸಮಂಜಸಾರ್ಥಗಳ ಗ್ರಹಣಕ್ಕಾಗಿ ಸಿದ್ಧಿತ್ರಯಗಳನ್ನೂ ರಚಿಸಿ, ಅಲ್ಲಿನ ಅರ್ಥಗಳನ್ನೂ ಮತ್ತು ವ್ಯಾಸ ಸೂತ್ರಾರ್ಥಗಳನ್ನೂ ತಮ್ಮ ಈ ಸ್ತೋತ್ರದಿಂದ ಉಪಪಾದಿಸಿ, ಲೋಕದ ಅಜ್ಞಾನಾಂಧಕಾರವನ್ನು ಹೋಗಲಾಡಿಸಲು ತಮ್ಮ ಜ್ಞಾನದೀಪ್ತಿಯಿಂದ ವಿಶೇಷ ಪ್ರಯತ್ನ ಪಟ್ಟವರು. ಅದೂ ಅಲ್ಲದೆ ವ್ಯಾಸ ಸೂತ್ರಗಳಿಗೆ ಇನ್ನೂ ಯಾರೂ ಸಮಂಜಸಾರ್ಥಗಳನ್ನು ಉಪಪಾದಿಸಿ ಗ್ರಂಥರಚನೆ ಯನ್ನು ಮಾಡಲಿಲ್ಲವೇ ಎಂಬ ಕೊರತೆಯುಳ್ಳವರಾಗಿಯೂ, ಶ್ರೀ ಯತಿವರ್ಯರೇನಾ ದರೂ ರಚಿಸಬಹುದೋ ಎಂಬ ಆಶಾಯುಕ್ತರಾಗಿಯೂ ಇದ್ದವರಾದುದರಿಂದಲೂ ಅನಘಮನೋರಥರು. ಲೋಕೋಪಕಾರವಾಗಬೇಕೆಂಬುದೇ ಅವರ ಮುಖ್ಯೋದ್ದೇಶ ವಾದುದರಿಂದ ಅನಘ ಮನೋರಥರು, ಮಹಾಪ್ರಾಜ್ಞರು ಎಂದು ಕೊಂಡಾ ಡಿರುತ್ತಾರೆ.

**ಕಥಿತಾ ಕಥಿತೇ ವಿಭಾವ್ಯ ಸದ್ಭಿಃ**
**ಸದಸದ್ವೇದಿಭಿ ರತ್ರ ಸಾವಧಾನೈಃ |**
**ಬಲವತ್ಪ್ರಥಿತ ಪ್ರಮಾಣ ದೃಷ್ಟ್ಯಾ**
**ಬಹುಮನ್ತವ್ಯಮಿದಂ ಯದಸ್ಮದುಕ್ತಮ್ ||**

**ಅರ್ಥವು:**– ಈ ಎರಡನೆಯ ಶ್ಲೋಕದಿಂದ ತಾವು ಬರೆದ ಈ ಸ್ತೋತ್ರ ರತ್ನದ ಭಾಷ್ಯವನ್ನು ಬಲವತ್ತಾದ ಶಾಸ್ತ್ರಪ್ರಮಾಣಗಳನ್ನು ಅನುಸರಿಸಿಯೇ ಯಿರುವುದರಿಂದ ಇದನ್ನು ಶಾಸ್ತ್ರಜ್ಞರು ತಮ್ಮ ವಿವೇಕೋತ್ಥಜ್ಞಾನದಿಂದ ಪರಿಶೀಲಿಸಿ ಆದರಿಸತಕ್ಕದ್ದೆಂದು ಪ್ರಾರ್ಥಿಸುತ್ತಾರೆ. **ಸದಸದ್ವೇದಿಭಿಃ**–ಇದು ಸಮಂಜಸವಾದ ಅರ್ಥವು, ಇದು ಸಮಂಜಸವಾದುದಲ್ಲವೆಂದು ವಿವೇಕಿಸಿ ತಿಳಿ ಯುವ ಮಹಾ ಪ್ರಾಜ್ಞರಿಂದ **ಕಥಿತಾ ಕಥಿತೇ** ಇದೀಗ ಹೇಳಲ್ಪಟ್ಟುದುದು ಇದು ಹೇಳಲ್ಪಟ್ಟದ್ದಲ್ಲವು ಎಂಬೆರಡನ್ನೂ, **ಸಾವಧಾನೈಃ** ತುಂಬಾ ಜಾಗರೂಕರಾಗಿ ಎಂದರೆ ಪರಸ್ಪರ ವಿರುದ್ಧಾಭಿಪ್ರಾಯಗಳಿಗೆ ಅವಕಾಶ ಕೊಡದೆ ಇರುವರಾಗಿ, ವಿಭಾವ್ಯ– ಚೆನ್ನಾಗಿ ವಿಮರ್ಶಿಸಿ ತಿಳಿದು, **ಬಲವತ್ಪ್ರಥಿತ ಪ್ರಮಾಣ ದೃಷ್ಟ್ಯಾ**–ಬಲಿಷ್ಠಗಳಾದ ಶ್ರುತಿ ಸ್ಮೃತಿ ಪ್ರಮಾಣಗಳ ದೃಷ್ಟಿಯಿಂದ, **ಅಸ್ಮದುಕ್ತಂ**–ನಮ್ಮಿಂದ ಹೇಳಲ್ಪಟ್ಟ **ಇದಂ** ಈ ಸ್ತೋತ್ರರತ್ನ ಭಾಷ್ಯವು **ಬಹುಮಂತವ್ಯಂ**-ಸನ್ಮಾನಿಸತಕ್ಕದ್ದು. ಉಪಾದೇಯವೆಂದು ಭಾವಿಸತಕ್ಕದ್ದು.

**ಉಪಪಾದನೆಯು:**– " **ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ** " ಎಂಬಲ್ಲಿ ಏನನ್ನು ಪ್ರಾಜ್ಞರು ಹೇಳಿದರೂ ಅದು ಶಾಸ್ತ್ರಪಂಕ್ತಿಯನ್ನು ಅನುಸರಿಸಿರತಕ್ಕದ್ದು.

ಶಾಸ್ತ್ರಾನು ಮತಿಯಿಲ್ಲದ ಹೇಳಿಕೆಯು ನಂಬಿಕೆಗೆ ಅನರ್ಹವು. ಸದಸದ್ವಿವೇಚನೆಯುಳ್ಳ ಪ್ರಾಜ್ಞನಿಗೆ ಮುಖ್ಯವಾಗಿ ಎರಡುವಿಧ ಜ್ಞಾನಗಳು ಅವಶ್ಯಕವು:– (೧) ಶಾಸ್ತ್ರಜನ್ಯಜ್ಞಾನವೂ (೨) ವಿವೇಕೋತ್ಥ ಜ್ಞಾನವೂ. ಶಾಸ್ತ್ರ ಪಂಕ್ತಿಗಳ ಜ್ಞಾನವನ್ನು ಹೊಂದಿ, ತಾವು ಮಾಡಿರುವ ಅರ್ಥಗಳು ಸಮಂಜಸವೇ ಇಲ್ಲವೇ, ಪೂರ್ವಾ ಪರ ವಿರೋಧಗಳುಂಟೋ ಎಂದು ವಿವೇಕಜ್ಞಾನದಿಂದ ಚೆನ್ನಾಗಿ ವಿಮರ್ಶಿಸಿ ನೋಡಿದರೆ ಆಗ ಯಥಾರ್ಥಾಭಿಪ್ರಾಯವು ಹೊರಪಡುತ್ತದೆ. ಆದುದರಿಂದಲೇ ಮಹರ್ಷಿಯು "**ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯ ಚ ಮುಹುರ್ಮುಹುಃ। ಇದಮೇಕಂ ಸುನಿಷ್ಪನ್ನಂ** " ಎಂದು ಹೇಳಿದರು. ವಿವೇಕವುಳ್ಳವಾದಕ್ಕೆ ಶಾಸ್ತ್ರ ಬಲವೂ ಬೇಕು, ಇಲ್ಲದಿದ್ದರೆ ಅದು ವಿತಂಡಾವಾದವಾಗುತ್ತದೆ, ಶಾಸ್ತ್ರಜ್ಞಾನ ಮಾತ್ರ ಸಾಲದು. ಅದರಿಂದ ಶಾಸ್ತ್ರಪಂಕ್ತಿಗಳಿಗೆಲ್ಲಾ ಸಾಮಂಜಸ್ಯವು ಏರ್ಪಡುವುದಿಲ್ಲವು. ಆದುದರಿಂದಲೇ ಎರಡೂ ಅವಶ್ಯಕವೆಂದು ಹೇಳಲ್ಪಟ್ಟಿತು, ತಮ್ಮ ಈ ಭಾಷ್ಯದಲ್ಲಾದರೋ ಈ ಎರಡಕ್ಕೂ ಗಮನವನ್ನು ಕೊಟ್ಟು ಸರ್ವಸಾಮಂಜಸ್ಯವನ್ನು ಮುಂದಿಟ್ಟು ಪ್ರಬಲ ಪ್ರಮಾಣಗಳಿಂದ ಸ್ಥಾಪಿಸಿದ ಅಭಿಪ್ರಾಯಗಳಾದುದರಿಂದ ಇದನ್ನು ಗೌರವಿಸಬೇಕೆಂಬ ಕೋರಿಕೆಯು ಎಂದು ತಿಳಿಸಿದರು.

**ಉಪನಿಷದುಪಧೇಯಸ್ತೋತ್ರ ತಾತ್ಪರ್ಯಮೇತತ್**
**ಯತಿಪತಿ ರವಧತ್ತೇ ಯಾಮುನಾರ್ಯಃ ಸ್ವಯಂ ವಾ ।**
**ಅಹಮಿಹ ತು ನಿಯುಕ್ತಃ ಸದ್ಭಿರಾಚಾರ್ಯ ನಿಘ್ನೈಃ**
**ಅಧಿಗತ ಶುಕವೃತ್ತಿ ವ್ಯಾಕ್ರಿಯಾ ಮನ್ವಭೂವಮ್ ॥**

**ಅವತಾರಿಕೆಯು:**–ಹಿಂದಿನ ಶ್ಲೋಕದಲ್ಲಿ ತಮ್ಮ ಈ ಸ್ತೋತ್ರರತ್ನ ಭಾಷ್ಯವನ್ನು ಸಕಾರಣವಾಗಿ "**ಬಹು ಮನ್ತವ್ಯಮಿದಂ ಯದಸ್ಮದುಕ್ತಮ್**" ಎಂಬಲ್ಲಿ ಪ್ರಾಜ್ಞರು ಅಭಿಮಾನಿಸತಕ್ಕದ್ದೆಂದು ಪ್ರಾರ್ಥಿಸಿದರು. ಇದು ತಮ್ಮ ಸ್ವಕಲ್ಪಿತವಾಗಿದ್ದ ಪಕ್ಷದಲ್ಲಿ ಪ್ರಾಜ್ಞರು ಅಭಿಮಾನಿಸತಕ್ಕದ್ದಲ್ಲವು. ಯಾಮುನ ಮುನಿಗಳು ಸ್ವಯಂಸ್ತೋತ್ರಕರ್ತಾವಾಗಿ ನಮ್ಮ ದರ್ಶನಸ್ಥಾಪಕರಾದ ಯತಿವರ್ಯರು ತಮ್ಮ ಗುರುವಾಗಿ ವರಿಸಿದ ಮಹಾ ಪ್ರಾಜ್ಞರಾದುದರಿಂದ, ಅವರಿಗೆ ಈ ಸ್ತೋತ್ರವು ಉಪನಿಷತ್ತುಗಳ ಸಾರಭೂತಾರ್ಥವೆಂದರು. ಈ ಮರ್ಮವುಶ್ರೀ ಯತಿವರ್ಯರಿಗೆ ತಿಳಿದು ಅದನ್ನು ಸ್ತೋತ್ರರತ್ನವೆಂದು ಭಾವಿಸಿ ಅವರು ಅನುಮೋದಿಸಿದರು. ಶ್ರೀ ಯತಿವರ್ಯರ ಅನುಗ್ರಹದಿಂದ ಅವರ ಶಿಷ್ಯಪರಂಪರೆಯು ತಮಗೆ ಆಚಾರ್ಯಸ್ಥಾನೀಯರಾದುದರಿಂದ ಈ ಸ್ತೋತ್ರರತ್ನವನ್ನು ವಿಶೇಷವಾಗಿ ಕೊಂಡಾಡಿ ನನಗೆ ಉಪದೇಶಿಸಿದುದನ್ನು ಶುಕದೋಪಾದಿಯಲ್ಲಿ ಅವರು ಹೇಳಿದುದನ್ನು ಕೇಳಿ, ಅದನ್ನೇ ಉಚ್ಚರಿಸಿರುತ್ತೇನೆ. ಆ ಕಾರಣದಿಂದ ಈ ಅರ್ಥಗಳೆಲ್ಲಾ ನಮ್ಮ ಆಚಾರ್ಯಸಂತತಿಗೆ ಸೇರಿದ ಸರ್ವರಿಗೂ ಅಭಿಮತವಾದುದರಿಂದ ಈ ಭಾಷ್ಯ

ಮೂಲಕ ಪ್ರಕಟಿಸಿರುತ್ತೇನೆ. ಇದರಲ್ಲಿ ನನ್ನ ಸ್ವಂತ ಕಲ್ಪನೆ ಯಾವುದೂ ಇಲ್ಲ ದುದರಿಂದ ಪ್ರಾಜ್ಞರು ಪರಿಗ್ರಹಿಸತಕ್ಕದ್ದೆಂದು ಪ್ರಾರ್ಥಿಸುತ್ತಾರೆ.

**ಅರ್ಥವು:-ಏತತ್**-ಈ **ಉಪನಿಷದುಪಧೇಯ ಸ್ತೋತ್ರ ತಾತ್ಪರ್ಯಂ**-ಉಪನಿಷತ್ತುಗಳನ್ನು ಆಶ್ರಯಿಸಿರುವ ಈ ಸ್ತೋತ್ರದ ತಾತ್ಪರ್ಯವನ್ನು, **ಯತಿಪತಿಃ**-ಶ್ರೀ ಯತಿವರ್ಯರು, **ಅವಧತ್ತೇ**- ಚನ್ನಾಗಿ ಅರಿತಿರುವರು. ಮತ್ತು **ಯಾಮುನಾರ್ಯಃ ಸ್ವಯಂವಾ**-ಯಾಮುನ ಮುನಿಗಳು ತಾವೇ ಅರಿತಿರುವರು. **ಅಹಂತು**-ನಾನಾ ದರೋ, **ಇಹ**-ಈ ಸಂದರ್ಭದಲ್ಲಿ, **ಆಚಾರ್ಯ ನಿಘ್ನೈಃ**-ಆಚಾರ್ಯರುಗಳಿಗೆ ಅಧೀನ ರಾದ, **ಸದ್ಭಿಃ**-ಪ್ರಾಜ್ಞರಿಂದ, ನಿಯುಕ್ತಃ-ನಿಯಮಿಸಲ್ಪಟ್ಟವನಾಗಿ, **ಅಧಿಗತ ಶುಕ ವೃತ್ತಿಃ**-ಹೊಂದಲ್ಪಟ್ಟ ಗಿಣಿಯ ವೃತ್ತಿಯುಳ್ಳವನಾಗಿ ಎಂದರೆ ಪ್ರಾಜ್ಞರಿಂದ ಉಪ ದೇಶಕಾಲದಲ್ಲಿ ಕೇಳಿದುದನ್ನು ವ್ಯತ್ಯಾಸವಿಲ್ಲದೆಉಚ್ಚರಿಸುವವನಾಗಿ, **ವ್ಯಾಕ್ರಿಯಾಂ**-ವ್ಯಾಖ್ಯಾನವನ್ನು, **ಅನ್ವಭೂಯಮ್**-ಅನುಭವಿಸಿದೆನು ಎಂದರೆ ಅದರ ಸ್ವಾರಸ್ಯ ವನ್ನು ಗ್ರಹಿಸಿ ಭಾಷ್ಯವನ್ನು ಬರೆದಿರುತ್ತೇನೆ ಎಂಬ ತಾತ್ಪರ್ಯವು. ಉಪನಿಷತ್ತುಗಳ ತಾತ್ಪರ್ಯವೇ ಈ ಸ್ತೋತ್ರರತ್ನದಲ್ಲಿ ಉಪಪಾದಿತವಾಗಿರುವದರಿಂದ **ಉಪನಿಷತ್ ಉಪಧೇಯಸ್ತೋತ್ರ** ವೆಂಬ ಪ್ರಯೋಗವು. ನಮ್ಮ ಶಿರಸ್ಸು ಹೇಗೆ ತಲೆದಿಂಬನ್ನು ಆಶ್ರಯಿಸಿರುತ್ತದೆ ಹಾಗೆ ಈ ಸ್ತೋತ್ರವು ಉಪನಿಷದರ್ಥಗಳನ್ನು ಆಶ್ರಯಿಸಿವೆ ಎಂಬು ದನ್ನು ಸೂಚಿಸುವದಕ್ಕಾಗಿ **ಉಪಧೇಯ** ಎಂಬ ಪ್ರಯೋಗವು. ಉಪಧಾನವೆಂದರೆ ತಲೆದಿಂಬಿಗೆ ಹೆಸರು. ಉಪನಿಷತ್ತು ಏನನ್ನು ತಿಳಿಸುತ್ತದೆ ಎಂದರೆ ಶ್ರೀ ಪರಾಶರರು ಪುರಾಣರತ್ನದ ಮೂಲಕ ಹೇಗೆ ಉಪನಿಷದರ್ಥಗಳನ್ನು ಪ್ರಕಾಶಪಡಿಸಿದರೋ, ಹಾಗೆಯೇ ಶ್ರೀ ಯಾಮುನ ಮುನಿಗಳೂ ನಮಗೆ ಅವುಗಳನ್ನು ಪ್ರಕಾಶಪಡಿಸಿರು ತ್ತಾರೆ. **ತತ್ತ್ವೇನ ಯಶ್ಚಿದ ಚಿದೀಶ್ವರ ತತ್ಸ್ವಭಾವ ಭೋಗಾಪವರ್ಗತದುಪಾಯ ಗತಿಗಳು** ಉಪನಿಷತ್ತುಗಳಲ್ಲಿ ಹೇಳಿರುವುದು. ಅವನ್ನೇ ಯಾಮುನ ಮುನಿಗಳು ತಮ್ಮ ಸ್ತೋತ್ರದಲ್ಲಿ ಉಪಪಾದಿಸಿರುವದೂ ಎಂಬ ತಾತ್ಪರ್ಯದಿಂದ ಹಾಗೆ ಪ್ರಯೋಗವು. ಯಾಮುನ ಮುನಿಗಳು ಶ್ರೀ ಪರಾಶರರನ್ನು ಕೊಂಡಾಡಿದ ಹಾಗೆ ಶ್ರೀ ದೇಶಿಕರವರು ಯಾಮುನ ಮುನಿಗಳನ್ನು ಕೊಂಡಾಡಿರುತ್ತಾರೆ. ಉಪನಿಷತ್ತುಗಳಿಲ್ಲದಿದ್ದರೆ ನಮಗೆ ವೇದಾರ್ಥಗಳು ಚನ್ನಾಗಿ ವೇದ್ಯವಾಗುತ್ತಿರಲಿಲ್ಲವು. ಹಾಗೆಯೇ ಇತಿಹಾಸ ಪುರಾಣಗಳು ಇಲ್ಲದಿದ್ದರೂ ನಮಗೆ ವೇದಾರ್ಥಗಳು ಚನ್ನಾಗಿ ತಿಳಿಯುತ್ತಿರಲಿಲ್ಲವು. ಹೀಗೆ ಉಪನಿಷದರ್ಥಗಳು ಈ ಸ್ತೋತ್ರದಲ್ಲಿ ನಿಪುಣತರವಾಗಿ ಉಪಪಾದಿತವಾಗಿರು ವದರಿಂದ ಇದಕ್ಕೆ ಸ್ತೋತ್ರರತ್ನವೆಂಬ ಹೆಸರು.

**ಯತಿಪತಿರವದತ್ತೇ**-ಈ ಸ್ತೋತ್ರಕ್ಕೆ ಶಾಸ್ತ್ರದ ಸಂಪೂರ್ಣಾನುಮತಿ ಯುಂಟೆಂಬ ವಿಷಯವು ಯಾರಿಗೆ ತಿಳಿಯುವದು ಎಂದರೆ ನಮ್ಮ ಸಿದ್ಧಾಂತ ಸ್ಥಾಪಕ

ರಾದ ಯತಿರಾಜರಿಗೆ ತಿಳಿಯುವದು. ಆಳವಂದಾರ್‍ರವರು ಶ್ರೀರಂಗದಲ್ಲಿರುವಾಗ ನಿತ್ಯವೂ ಶ್ರೀರಂಗನಾಥನಿಗೆ ಪ್ರಣಾಮವನ್ನೆಸಗಿ, ತಮ್ಮ ವಿಶಿಷ್ಟಾದ್ವೈತ ಸ್ಥಾಪಕ ರಾಗಿ ಒಬ್ಬರು ಜನಿಸಬೇಕೆಂದು ಪ್ರಾರ್ಥಿಸುತ್ತಿದ್ದರು. ನಿರತಿಶಯಜ್ಞಾನ ವಿಕಾಸ ಶೋಭಿತರಾಗಿ ಒಬ್ಬರು ರಾಮಾನುಜರೆಂಬುವರು ಕಾಂಚೀಪುರದಲ್ಲಿದ್ದಾರೆಂದು ಆಳವಂದಾರ್‍ರವರು ಕೇಳಿ ತಿಳಿದವರಾಗಿ ಅವರನ್ನು ನೋಡಬೇಕೆಂಬ ಕುತೂಹಲ ಯುಕ್ತರಾಗಿ ಕಾಂಚೀಪುರಕ್ಕೆ ಶ್ರೀ ಯಾಮುನ ಮುನಿಗಳು ಬರುತ್ತಾರೆ. ಆದರೆ ಆಗ ಅವರು ಅದ್ವೈತಿಗಳಾದ ಯಾದವಪ್ರಕಾಶರ ಮೂಲಕ ಅದ್ವೈತ ಖಂಡನೆಗೆ ಬೇಕಾದ ಪೂರ್ವ ಪಕ್ಷವನ್ನು ತಿಳಿದುಕೊಳ್ಳಲು ಕಾಲಕ್ಷೇಪವನ್ನು ನಡೆಸುತ್ತಿದ್ದುದನ್ನು ಕಂಡು ಅವರೊಂದಿಗೆ ಏನೂ ಮಾತಾಡದೆ ಶ್ರೀರಂಗವನ್ನು ಕುರಿತು ತೆರಳಿದರು. ಆದರೆ ತಮ್ಮ ಶಿಷ್ಯರನ್ನು ಮಾತ್ರ ಅಲ್ಲಿಯೇ ಬಿಟ್ಟು ಅವರು ದೇವರ ಸೇವೆಗೆ ಹೋಗುವಾಗ ದಾರಿಯಲ್ಲಿದ್ದು ಸ್ತೋತ್ರರತ್ನವನ್ನು ಪಠಿಸಿರಿ ಎಂದು ಆಜ್ಞಾಪಿಸಿ ಹೊರಟು ಹೋದರು. ಶ್ರೀ ರಾಮಾನುಜರು ಆ ಸ್ತೋತ್ರವನ್ನು ಕೇಳಿ, ಇದು ಯಾರು ಬರೆದಿದ್ದೆಂದು ಬೆಸಗೊಳ್ಳಲು ಅದನ್ನು ಬರೆದ ಮಹಾನುಭಾವರು ವೃದ್ಧರಾಗಿ ಶ್ರೀರಂಗದಲ್ಲಿದ್ದಾರೆಂದು ಹೇಳಲು; ಆಗ ಅವರನ್ನು ನೋಡಬೇಕೆಂಬ ಕುತೂಹಲವು ಶ್ರೀ ಭಾಷ್ಯಕಾರರಿಗೆ ಅಂಕುರಿಸಿತು. ಅನಂತರ ಪುನಃ ಇವರ ವಿಷಯ ವಾಗಿ ಕಾಂಚೀಪುರದಿಂದ ಶ್ರೀರಂಗ ಸೇವೆಗಾಗಿ ಬಂದ ಕೆಲವು ಮಹನೀಯರನ್ನು ಕುರಿತು ಯೋಗಕ್ಷೇಮವನ್ನು ವಿಚಾರಿಸಲು, ಆಗ ಅವರು ಯಾದವ ಪ್ರಕಾಶರು ಅನೇಕ ಶ್ರುತಿಗಳಿಗೆ **"ಸತ್ಯಂ ಜ್ಞಾನ ಮನಂತಂ ಬ್ರಹ್ಮ" "ಕಪ್ಯಾಸ ಪುಂಡರೀ ಕಮಕ್ಷಿಣೀ" "ಸರ್ವಂಖಲ್ವಿದಂಬ್ರಹ್ಮ"** ಇತ್ಯಾದಿಗಳಿಗೆ ಅಪಾರ್ಥವನ್ನು ಹೇಳಿದುದ ರಿಂದ ಅವರಲ್ಲಿ ಕಾಲಕ್ಷೇಪವನ್ನು ತೊರೆದಿರುತ್ತಾರೆಂದು ಕೇಳಿ ತಿಳಿದವರಾಗಿ, ತಮ್ಮ ಮುಖ್ಯಶಿಷ್ಯರಾದ ಪೆರಿಯನಂಬಿಯನ್ನು ಕಾಂಚೀಪುರಕ್ಕೆ ಹೋಗಿ ಅವರನ್ನು ಕರತರ ಬೇಕೆಂದು ಆಜ್ಞಾಪಿಸುತ್ತಾರೆ. ಇಷ್ಟರಲ್ಲೇ ಆಳವಂದಾರ್‍ರವರನ್ನು ಆಚಾರ್ಯರನ್ನಾಗಿ ವರಿಸು ಎಂದು ವರದರಾಜನ ಆಜ್ಞೆಯು ಕಾಂಚೀ ಪೂರ್ಣರ ಮೂಲಕ ಶ್ರೀ ರಾಮಾ ನುಜರಿಗೆ ಉಂಟಾದುದರಿಂದ ಇವರೂ ಶ್ರೀರಂಗಕ್ಕಾಗಿತೆರಳಿದರು. ಪೆರಿಯನಂಬಿಯೂ ಶ್ರೀರಾಮಾನುಜರೂ ಇಬ್ಬರೂ ಮಧುರಾಂತಕದಲ್ಲಿ ಸೇರಿ, ಮಧುರಾಂತಕದ ದೊಡ್ಡ ಕೆರೆಯ ತಟಾಕದಲ್ಲಿ ಪೆರಿಯನಂಬಿಯಿಂದ ಮಂತ್ರಾರ್ಥಗಳ ಉಪದೇಶವನ್ನು ಹೊಂದಿ ಮುಂದೆ ಇಬ್ಬರೂ ಶ್ರೀರಂಗವನ್ನು ಕುರಿತು ಹೋಗುವಷ್ಟರಲ್ಲೇ ಶ್ರೀ ಯಾಮುನಮುನಿ ಗಳು ದೇವರ ಪಾದವನ್ನು ಹೊಂದಿದರೆಂದು ಮುಂದಿನ ಕಥಾಸಾರಾಂಶವಿರುತ್ತದೆ. ಆದುದರಿಂದ ಈ ಸ್ತೋತ್ರರತ್ನದಲ್ಲಿರುವ ತತ್ವಹಿತ ಪುರುಷಾರ್ಥಗಳ ಸಾರಾಂಶವಿರು ವುದರಿಂದ **ಶ್ರೀ ಯತಿಪತಿರವಧತ್ತೇ** ಎಂಬ ಪ್ರಯೋಗವು. ಶ್ರೀ ಯಾಮುನಮುನಿ. ಗಳುರಚಿಸಿದ ಸಿದ್ಧಿತ್ರಯಗಳೂ ಯತಿಪತಿಗೆ ವ್ಯಾಸಸೂತ್ರಗಳಿಗೆ ಶ್ರೀ ಭಾಷ್ಯವನ್ನು ರಚಿಸುವದಕ್ಕೆ ತುಂಬಾ ಸಹಾಯವಾಯಿತು. ಅವರ ಗೀತಾರ್ಥಸಂಗ್ರಹವನ್ನನು

ನರಿಸಿ ಗೀತಾಭಾಷ್ಯವನ್ನು ಶ್ರೀ ಯತಿವರ್ಯರಿಗೆ ಬರೆಯಲು ಉಪಯೋಗವಾಯಿತು. ಆದುದರಿಂದ ಯಾಮುನೇಯರಿಂದಲೇ ಸ್ವತಃ ಸದುಪದೇಶವಿಲ್ಲದಿದ್ದರೂ ಅವರಗ್ರಂಥ ಗಳಿಂದ ಪರಮೋಪಕಾರ ಉಂಟಾದುದರಿಂದ ಅವರನ್ನು ಭಾಷ್ಯಕಾರರು, ಏಕಲವ್ಯರು ದ್ರೋಣಾಚಾರ್ಯರನ್ನು ಗುರುವಾಗಿ ಭಾವಿಸಿದ ಹಾಗೆ, ಗುರುವಾಗಿ ನರಿಸಿ, **"ಯತ್ಪ ದಾಂಭೋರುಹಧ್ಯಾನ ವಿಧ್ವಸ್ತಾಶೇಷ ಕಲ್ಮಷಃ| ವಸ್ತುತಾ ಮುಪಯಾತೋ ಹಂ ಯಾಮುನೇಯಂ ನಮಾಮ್ಯಹಮ್** ಎಂದು ಅಪ್ಪಣೆ ಕೊಡಿಸಿರುತ್ತಾರೆ.

ಶ್ರೀ ಯತಿವರ್ಯರೇನೋ ಅಂಶಪುರುಷರು, ಸ್ವಯಂಪ್ರಾಜ್ಞರಾದುದರಿಂದ ಈ ಸೋತ್ರಮಹಿಮೆಯನ್ನು **ಸ್ವಯಂ**–ತಾವೇ ಸಾಕ್ಷತ್ತಾಗಿ ಗುರುಗಳ ಆವಶ್ಯಕತೆ ಇಲ್ಲದೆ ಗ್ರಹಿಸಿದರು. ತಾವಾದರೋ ಹಾಗಲ್ಲವೆಂದು ತಿಳಿಸುತ್ತಾರೆ. ಮುಂದಿನ **ತು** ಶಬ್ದವು ಯತಿಪತಿಗಳಿಗಿಂತ ತಮ್ಮ ನಿಕೃಷ್ಟ ಭಾವವನ್ನು ವ್ಯವಚ್ಛೇದಮಾಡಿ ತೋರಿಸುತ್ತದೆ. ತಾವಾದರೋ, ಆಚಾರ್ಯರುಗಳು ತಮಗೆ ಉಪದೇಶಿಸಿದುದನ್ನು ಶುಕವೃತ್ತಿಯ ಹಾಗೆ ಹೇಳಿರುತ್ತೇನೆ. ಆಗಲಿ, ಇಂತಹ ಸೋತ್ರ ರತ್ನಾಭಿಪ್ರಾಯವು ಅಮೋಘವಾಗಿರುವಾಗ ನೀವು ಏತಕ್ಕೆ ವ್ಯಾಖ್ಯಾನವನ್ನು ದಯಪಾಲಿಸಿದುದು ? ಎಂದರೆ ಕೆಲವರು ಇಂತಹ ಸೋತ್ರ ರತ್ನಕ್ಕೂ ಅಪಾರ್ಥಗಳನ್ನು ಹೇಳಿರುವುದರಿಂದ ತಮ್ಮ ಪ್ರಾಜ್ಞರಾದ ಆಚಾರ್ಯವರ್ಯರುಗಳಿಂದ, **ನಿಯುಕ್ತಃ** ಆಜ್ಞಾಪಿಸಲ್ಪಟ್ಟವನಾಗಿ ಬರೆದಿರುತ್ತೇನೆ ಎಂಬ ತಾತ್ಪರ್ಯವು. ಅಥವಾ ಅವರು ನನಗೆ ಹೇಗೆ ಉಪದೇಶಿಸಿದರೋ ಆ ಮೇರಿಗೆ ಶುಕಜಲ್ಪಿತದ ಹಾಗೆಯೇ ಹೇಳಿರುತ್ತೇನೆ. ಹೀಗೆ ವ್ಯಾಖ್ಯಾನ ಬರೆದಿದ್ದರಲ್ಲಿ ಪರಮಾ ನಂದವನ್ನು ಅನುಭವಿಸಿರುತ್ತೇನೆಂದು **ಅನ್ವಭೂವಮ್** ಎಂಬ ಪ್ರಯೋಗವು.

**ಸ್ವತ ಮಿತಿಹರಿದತ್ತಂ ಯಾಮುನ ಸ್ತೋತ್ರವೃತ್ತ್ಯೈ**
**ವ್ಯವೃಣತ ನಿಗಮಾನ್ತಾಚಾರ್ಯಕಂ ವೇಙ್ಕಟೇಶಃ |**
**ಅಗಣಿ ಸದಸಿ ಸದ್ಭಿರ್ಯಸ್ಸಮುಸ್ಯಾ ಸಹಸ್ರೀ**
**ಕವಿಕಥಕ ಮೃಗೇನ್ದ್ರಸ್ಸರ್ವತಸ್ತ್ರ ಸ್ವತಂತ್ರಃ||**

ಅಧಿಗತ ಶುಕವೃತ್ತಿ ಎಂದು ಹೇಳಿರುವುದರಿಂದ ತಮ್ಮ ಆಚಾರ್ಯರಾದ ಕಿಡಾಂಬ ಅಪ್ಪುಳ್ಳಾರವರಲ್ಲಿ ತಮಗಿರುವ ಭಕ್ತಿ ವಿಶ್ವಾಸಗಳೂ, ಆಚಾರ್ಯರಿಗೆ ತಮ್ಮ ವಿಷಯ ದಲ್ಲಿರುವ ಪ್ರೀತ್ಯತಿಶಯವೂ ಎಂದು ಸೂಚಿತವು. ಶುಕವನ್ನು ಯಜಮಾನರು ಹೇಗೆ ಪ್ರೀತಿಯಿಂದ ಕಾಪಾಡುವನೋ ಹಾಗೆ, ತಮ್ಮ ಆಚಾರ್ಯರು ತಮ್ಮನ್ನು ಕಾಪಾಡಿದರೆಂದೂ ಅದರಿಂದ ಅವರಲ್ಲಿ ತಮಗೆ ಹೆಚ್ಚಾದ ಕೃತಜ್ಞತಾ ಭಾವವೆಂದೂ ತಿಳಿಸುವುದಕ್ಕಾಗಿ ಹಾಗೆ ಪ್ರಯೋಗವು.

ಈ ಸೋತ್ರರತ್ನಕ್ಕೆ ಮೂರು ವಿಧವಾದ ಮಹಾತ್ಮೆಯುಂಟೆಂದು ಈ ಶ್ಲೋಕದ ಮೂಲಕ ತಿಳಿಸುತ್ತಾರೆ:–

1. ಉಪನಿಷತ್ತುಗಳಲ್ಲಿ ಹೇಳಿರುವುದು ಪರತತ್ತ್ವ ನಿರ್ಣಯವು, ತತ್ತ್ವಹಿತ ಪುರುಷಾರ್ಥಗಳ ಬೋಧನೆಯು. ಇವೆಲ್ಲವೂ ನಿಪುಣತರವಾಗಿ ಇದರಲ್ಲಿ ಹೇಳಿರುವುದರಿಂದ ಇದಕ್ಕೆ ಮಹಾತ್ಮ್ಯೆಯು.

2. ನಮ್ಮ ವಿಶಿಷ್ಟಾದ್ವೈತ ಸ್ಥಾಪಕರಾದ ಶ್ರೀ ಯತಿವರ್ಯರಿಗೆ ತುಂಬಾ ಅಭಿಮತವಾದುದು ಈ ಸೋತ್ರವು. ಇದು ಎರಡನೆಯ ಮಾಹಾತ್ಮ್ಯೆಯು.

3. ತಮ್ಮ ಆಚಾರ್ಯರುಗಳು ಇದು ತುಂಬಾ ಶ್ರೇಷ್ಠವಾದ ಸ್ತೋತ್ರವೆಂದು ಭಾವಿಸಿ, ಅದನ್ನುಪದೇಶಿಸಿ ವ್ಯಾಖ್ಯಾನಮಾಡು ಎಂದು ಆಜ್ಞಾಪಿಸಿದುದು ಮೂರನೆಯ ಮಹಾತ್ಮ್ಯೆಯು.

**ಅವತಾರಿಕೆ** – ಹಿಂದಿನ ಶ್ಲೋಕದಲ್ಲಿ ಮೂರು ಕಾರಣಗಳಿಂದ ತಾವು ಮಾಡಿದ ವ್ಯಾಖ್ಯಾನದಲ್ಲಿ ಪ್ರಾಮಾಣ್ಯವುಂಟೆಂದು ಹೇಳಿದರು. ಈ ಶ್ಲೋಕದಲ್ಲಿ ತಾವು ಈಗ ಮಾಡಿದ ವ್ಯಾಖ್ಯಾನದಿಂದ ತಮಗೆ ಭಗವಂತನಿಂದಲೂ, ಭಾಗವತಮಂಡಲಿಯಿಂದಲೂ. ಉಂಟಾದ ಕೃಪೆಗಳ ಮೂಲಕ ದೊರೆತ ನಾಮಗಳು ಸಾರ್ಥಪತ್ತಾವೆಂದೂ ಆ ಕಾರಣಗಳಿಂದಲೂ ಈ ವ್ಯಾಖ್ಯಾನವು ಆದರಣೀಯ-ವೆನ್ನುತ್ತಾರೆ. ವೇದಾನ್ತಾಚಾರ್ಯರೆಂದೂ ಸರ್ವತಂತ್ರ ಸ್ವತಂತ್ರರೆಂದೂ ನಾಮಗಳು ಹೇಗೆ ದೊರೆತವೆಂಬುದನ್ನು ತಿಳಿಸುತ್ತಾರೆ. ಈ ಎರಡು ನಾಮಗಳೂ ತಾವು ಅಪೇಕ್ಷಿಸಲಿಲ್ಲವು. ಅಪೇಕ್ಷಿಸದೇ ಒಂದು ಹರಿದತ್ತವಾದುದು; ಇನ್ನೊಂದು ಪ್ರಾಜ್ಞ ಭಾಗವತ ದತ್ತವಾದುದು ಎಂದು ಹೇಳುತ್ತಾರೆ:–

**ಅರ್ಥ**:–ಈ ಭಾಷ್ಯವನ್ನು ಬರೆದವರು ಯಾರೆಂದರೆ ಹೇಳುತ್ತಾರೆ:–
**ವೇಙ್ಕಟೇಶಃ**–ಮಾತಾಪಿತೃಗಳೂ ಸೋದರ ಮಾವಂದರೂ ನಾಮಕರಣ ನಡೆಸಿ ಇಟ್ಟ ಹೆಸರುಳ್ಳ ವೇಙ್ಕಟೇಶರು, **ಸ್ವಕಮಿತಿ**–ಭಗವಂತನಾದ ತನ್ನ ಹೆಸರೇ ಎಂದು, **ಹರಿದತ್ತಂ**–ಶ್ರೀ ವೇಙ್ಕಟೇಶ ಸ್ವಾಮಿಯಿಂದ ಕೊಡಲ್ಪಟ್ಟ ಸ್ವಂತ ಹೆಸರೆಂದು, **ನಿಗಮಾನ್ತಾಚಾರ್ಯಕಂ**–ವೇದಾನ್ತಾಚಾರ್ಯರೆಂಬ ನಾಮವನ್ನು, **ಯಾಮುನ ಸ್ತೋತ್ರವೃತ್ತ್ಯಾ**–ಈ ಯಾಮುನ ಮುನಿಗಳ ಸ್ತೋತ್ರರತ್ನಕ್ಕೆ ಭಾಷ್ಯ ಬರೆದ ಮೂಲಕವಾಗಿ, **ವ್ಯವೃಣತ**–ಪ್ರಕಾಶ ಪಡಿಸಿದರು ಎಂದರೆ ಸಾರ್ಥಕಗೊಳಿಸಿದರು. ಶ್ರೀರಂಗನಾಥನು ಈ ನಾಮವನ್ನೂ ಶ್ರೀ ರಂಗನಾಯಿಕೆಯು ಸರ್ವತಂತ್ರ ಸ್ವತಂತ್ರರೆಂಬ ನಾಮವನ್ನೂ ಅರ್ಚಕರ ಮೂಲಕ ದಯಪಾಲಿಸಿದರೆಂಬ ಭಾವವು.

**ಸರ್ವತಂತ್ರ ಸ್ವತಂತ್ರಃ** ಎಲ್ಲಾ ಶಾಸ್ತ್ರತಂತ್ರಗಳೂ ಇವರಿಗೆ ಸ್ವಾಮಿದತ್ತ ಜ್ಞಾನಕ್ಕೆ ಅಧೀನವಾದವು. ತುಂಬಾ ಮೇಧಾವಿಗಳಾದುದರಿಂದ ಎಲ್ಲವೂ ಇವರ ಜ್ಞಾನಕ್ಕೆ ಅಧೀನವೆಂಬ ಭಾವವು. ಇಂತಹ **ಯಃ**– ಯಾವ ಪರಮಗುರುಗಳು, **ಸದಸಿ**– ಸದಸ್ಸಿನಲ್ಲಿ, **ಸದ್ಭಿಃ**– ಪ್ರಾಜ್ಞರಾದ ಸತ್ಪುರುಷರಿಂದ, **ಸಮಸ್ಯಾಸಹಸ್ರೀ ಕವಿಕಥಕ ಮೃಗೇನ್ದ್ರಃ**– ಸಾವಿರ ಶ್ಲೋಕಗಳನ್ನು ಕ್ಲಿಪ್ತಕಾಲದಲ್ಲಿ ರಚಿಸಿ

ದುದರಿಂದ ಕ್ಷುದ್ರಕವಿಗಳಿಗೆ ಸಿಂಹರೂಪದಲ್ಲಿ ಎಂದರೆ **ಕವಿತಾರ್ಕಿಕಸಿಂಹರೆಂಬ** ದಾಗಿ **ಅಗಣಿ**– ಎಣಿಸಲ್ಪಟ್ಟರೋ, ಅಂತವರು **ಯಾಮುನಸ್ತೋತ್ರ ವ್ಯವೃಣತ** ಎಂಬುದರೊಂದಿಗೆ ಅನ್ವಯವು; ವೇದಾನ್ತ ಗ್ರಂಥವಾದ ಯಾಮುನಮುನಿಗಳ ಸ್ತೋತ್ರರತ್ನವನ್ನು ತಮ್ಮ ಭಾಷ್ಯ ಮೂಲಕ ಪ್ರಕಾಶ ಪಡಿಸಿದರೆಂಬ ಅರ್ಥವು.

**ಉಪಪಾದನೆಯು**–ಈ ಶ್ಲೋಕದಲ್ಲಿ ಕೊಟ್ಟಿರುವ ನಾಲ್ಕು ನಾಮಗಳೂ ತಾವು ಅಪೇಕ್ಷಿಸದೆ ಎರಡು ಹರಿದತ್ತವೆಂದೂ ಎರಡು ಸದಸ್ಸಿನಲ್ಲಿ ಪ್ರಾಜ್ಞ ಸತ್ಪುರುಷ ರಿಂದಲೂ ಕೊಡಲ್ಪಟ್ಟಿತೆಂದೂ ಹೇಳುತ್ತಾರೆ.

ಇವರ ಜನನ ಕಾಲದ ಹೆಸರು **ವೇಙ್ಕಟೇಶ** ರೆಂಬದಾಗಿ. ಏತಕ್ಕೆಂದರೆ ಇವರು ಜನಿಸಿದುದು "**ಭಾದ್ರಪದ ಮಾಸಗತ ವಿಷ್ಣು ವಿಮಲರ್ಕ್ಷೇ ವೇಙ್ಕಟ ಮಹೀಧ್ರಪತಿ ತೀರ್ಥದಿನ ಭೂತೇ। ಪ್ರಾದುರಭವಜ್ಜಗತಿ ದೈತ್ಯರಿಪು ಘಂಟಾಹಂತೆ ಕವಿತಾರ್ಕಿಕ ಮೃಗೇಂದ್ರ ಗುರುಮೂರ್ತ್ಯಾ**" ಎಂಬದಾಗಿ ಪ್ರಮಾಣವಾಗಿ ಪ್ರತಿವಾದಿ ಭಯಂಕರ ಅಣ್ಣರ್ ಎಂಬವರು ತಿಳಿಸಿ, ಸಪ್ತತಿರತ್ನ ಮಾಲೇ ಎಂಬ ಶ್ರೀ ದೇಶಿಕ ಸ್ತೋತ್ರದಲ್ಲಿಯೂ ಅಪ್ಪಣೆ ಕೊಡಿಸಿರುತ್ತಾರೆ. ಇವರು ಶ್ರೀ ವೇಙ್ಕಟೇಶನ ಘಂಟಾವತಾರವೆಂಬ ಪ್ರತೀತಿಯಿಂದಲೂ ಇವರ ತಂದೆ ಯಾದ ಅನಂತ ಸೂರಿಗಳೂ ತಾಯಿಯಾದ ತೋತಾರಮ್ಮನವರೂ ಇವರ ಮಾವಂದಿರಾದ ಶ್ರೀ ಅಪ್ಪುಳ್ಳಾರವರೂ **ವೇಙ್ಕಟೇಶ** ರೆಂಬ ನಾಮಕರಣವನ್ನು ಮಾಡಿದುದರಿಂದಲೂ, ಅದೂ ಅಲ್ಲದೆ ಭಾದ್ರಪದ ಮಾಸದ ಕನ್ಯಾಶ್ರವಣದಲ್ಲಿ ಹುಟ್ಟಿದುದರಿಂದಲೂ, ಆ ದಿನವೇ ಶ್ರೀ ಶ್ರೀನಿವಾಸನಿಗೆ ರಥೋತ್ಸವವಾದುದ ರಿಂದಲೂ ಇವರಿಗೆ ವೇಙ್ಕಟೇಶರೆಂಬ ಹೆಸರು ಉಂಟಾಯಿತು.

ಅನಂತರ ಇವರು ಶ್ರೀರಙ್ಗದಲ್ಲಿ ಇದ್ದುಕೊಂಡು ಶಿಷ್ಯರಿಗೆ ಶ್ರೀ ಭಾಷ್ಯಪ್ರವಚನ ಗಳನ್ನು ಮಾಡಿಕೊಂಡು ಮಹಾವೈರಾಗ್ಯದಿಂದ ದೇಹಯಾತ್ರೆಯನ್ನು ನಡೆಸುತ್ತಿ ದ್ದುದರಿಂದ ಸ್ವಾಮಿ ರಂಗನಾಥನೂ ಶ್ರೀ ರಂಗನಾಯಕಿಯೂ ಇವರಿಗೆ ಅರ್ಚಕ ಮೂಲಕವಾಗಿ ವೇದಾಂತಾಚಾರ್ಯರೆಂದೂ, ಸರ್ವತಂತ್ರ ಸ್ವತಂತ್ರರೆಂದೂ ಹೆಸರು ಗಳನ್ನು ದಯಪಾಲಿಸಿದರು.

ಹೀಗೆ ಇವರಿಗೆ ಪ್ರಾಶಸ್ತ್ಯವು ದೊರೆತುದ್ದನ್ನು ನೋಡಿ ಕೆಲವು ಅಸೂಯಾ ಪರರು ಸಹಿಸದೇ ಹೋಗಿ ಅನೇಕ ಸಲ ಇವರಿಗೆ ಅವಮರ್ಯಾದೆಯನ್ನು ಮಾಡಿರು ತ್ತಾರೆ. ಇವುಗಳನ್ನೆಲ್ಲಾ ಗುರುಪರಂಪರಾ ಪ್ರಭಾವದಲ್ಲಿ ಕಾಣಬಹುದು. ಸಜ್ಜನ ರನ್ನು ಕಂಡು ಕೆಲವರು ಸಹಿಸದೆ ಇರೋಣವೆಂಬುದು ಸಾಧಾರಣವು. ಅದೂ ಕಲಿಯುಗದಲ್ಲಿ ಬಹಳ ವಿಶೇಷವು. ಭರ್ತೃಲಹರಿಯಲ್ಲಿ "**ಮೃಗ ಮೀನ ಸಜ್ಜನಾ**

**ನಾಂ ತೃಣ ಜಲಕಂಡೂಷ ವಿಹಿತ ವೃತ್ತೀನಾಂ । ಉಬ್ಧಕಧೀವರ ಪಿಶುನಾಃ ನಿಷ್ಕಾರಣಮೇವ ವೈರಿಣೋ ಜಗತಿ**” ಎಂದು ಕವಿಯು ಹಾಗೆಯೇ ಹೇಳಿರುತ್ತಾರೆ. ಈಗ ಪ್ರಕೃತದಲ್ಲಿ ಆಚಾರ್ಯರು ಅಪ್ಪಣೆ ಕೊಡಿಸಿರುವ **ಸದಸಿ ಸಮಸ್ಯಾ ಸಹಸ್ರೀ** ಎಂದು ಅಪ್ಪಣೆ ಕೊಡಿಸಿರುವ ಸನ್ನಿವೇಶವು ಯಾವುದೆಂದರೆ ? ಇವರ ಪ್ರತಿಕಕ್ಷಿಗಳು ಶ್ರೀರಂಗನಾಥನ ಸನ್ನಿಧಿಯಲ್ಲಿ ಸೇರಿ **ಅಳಗಿಯ ಮಣವಾಳ ಪ್ಪೆರುಮಾಳ್ ನಯನಾರ್** ಪ್ರಭೃತಿ ಮಹಾನುಭಾವರುಗಳು ಇರುವಾಗ ಇವರಿಗೆ **ಕವಿಕಥಕ ಸಿಂಹ, ಕವಿತಾರ್ಕಿಕ ಸಿಂಹ** ಇತ್ಯಾದಿ ಬಿರುದುಗಳು ಹೇಗೆ ಸಲ್ಲುತ್ತವೆ ಎಂದು ಆಕ್ಷೇಪಿಸಲು; ಅದಕ್ಕೆ ಗುರುಗಳು ತಮಗೆ ಯಾವ ಬಿರುದುಗಳೂ ಬೇಕಿಲ್ಲವೆಂದು ಹೇಳಿದುದಕ್ಕೆ ಇವರ ಶಿಷ್ಯರುಗಳು ಒಪ್ಪದೆ “**ಮಾತಾ ದೇವಿತ್ವಮಸಿ ಭಗವಾನ್ ವಾಸುದೇವಃ ಪಿತಾಮೇ**” ಎಂದು ಹೇಳಿಕೊಂಡವರು, ನೀವು, ಲೋಕಪಿತಾ, ಲೋಕಮಾತಾ ಸಹ ಪ್ರೀತಿಯಿಂದ ಅನುಗ್ರಹಿಸಿದ ತಿರುನಾಮುಗಳನ್ನು ತ್ಯಜಿಸುವದು ಸರಿಯಲ್ಲವೆಂದು ಹೇಳಿ, ಒಂದು ಕ್ಲಿಪ್ತ ಕಾಲದಲ್ಲಿ ಯಾರು ೧೦೦೦ ಶ್ಲೋಕಗಳನ್ನು ಶೀಘ್ರವಾಗಿಯೂ ರಸವತ್ತಾಗಿಯೂ ರಚಿಸುತ್ತಾರೋ ಅವರಿಗೆ ಈ ಬಿರುದುಗಳು ಸಲ್ಲುತ್ತವೆ ಎಂದು ಸದಸ್ಸಿನಲ್ಲಿ ತೀರ್ಪು ನಡೆಸಿ, ಅಳಗಿಯ ಮಣವಾಳಪ್ಪೆರುಮಾಳ್ ನಯನಾರ್ರವರು ಸ್ವಾಮಿಯ ಪಾದಕಮಲದ ವಿಷಯದಲ್ಲಿ ಸಾವಿರ ಶ್ಲೋಕಗಳನ್ನು, ಶ್ರೀ ಮದಾಚಾರ್ಯರು ಆ ಪಾದಕಮಲತ್ರಾಯಿಣಿಯಾದ ಮಣಿಪಾದುಕೆಯ ವಿಷಯ ದಲ್ಲಿ ಸಾವಿರ ಶ್ಲೋಕವನ್ನು ರಚಿಸುವದಾಗಿ ಒಪ್ಪಿಕೊಂಡು ಶ್ರೀ ನಿಗಮಾಂತರು ಒಂದು ಸಾವಿರ ಶ್ಲೋಕಗಳನ್ನು ರಚಿಸುವ ಕಾಲದಲ್ಲಿ ನಯನಾರಾದ್ಯರು ಮುನ್ನೂರು ಶ್ಲೋಕಗಳನ್ನು ಮಾತ್ರ ರಚಿಸಿದರು. ಆಗ ಶ್ರೀಮದಾಚಾರ್ಯರಿಗೇ ಈ **ಕವಿಕಥಕ ಸಿಂಹ** ವೆಂಬ ಬಿರುದು ಸಲ್ಲತಕ್ಕದ್ದು ಎಂದು ಸದಸ್ಸಿನಲ್ಲಿ ಭಾಗವತರು ನಿಷ್ಕರ್ಷಿಸಿ ದರು. ಆಗ ಇವರ ಪ್ರತಿಕಕ್ಷಿಗಳ ಸಮಾಧಾನಾರ್ಥವಾಗಿ ತಮ್ಮ ನೈಚ್ಯಾನುಸಂಧಾನ ರೂಪವಾಗಿ “**ಸೂತೇ ಸೂಕರ ಯುವತಿ ಸುತಮತ್ಯಂತ ದುರ್ಭರಂ ಝಡಿತಿ । ಕರಿಣೀ ಚಿರಾಯ ಸೂತೇ ಸಕಲ ಮಹೀಪಾಲಲಾಲಿತಂ ಕಲಭಮ್**” ಎಂದರೆ ಹೆಣ್ಣು ಹಂದಿಯು ಬೇಗ ಬೇಗನೆ ಅನೇಕ ಮರಿಗಳನ್ನು ಹಾಕುತ್ತದೆ. ಆದರೆ ಹೆಣ್ಣಾನೆಯು ಬಹುಕಾಲಕ್ಕೆ ಸಮಸ್ತರಾಜರೂ ಲಾಲಿಸುವ ಒಂದು ಮರಿಯನ್ನು ಹೆರುತ್ತದೆ. ಆನೆಯ ಹಾಗೆ ಘನವಾದುದು ಪ್ರತಿಕಕ್ಷಿಯವರ ಕವಿತೆಯು ಎಂದು ಆಚಾರ್ಯರು ಶ್ಲಾಘಿಸಿದರು. ಈ ಸನ್ನಿವೇಶವನ್ನು ಕುರಿತು **ಸಮಸ್ಯಾ ಸಹಸ್ರೀ** ಎಂಬ ಪ್ರಯೋಗದಿಂದ ಸೂಚಿಸಿರುತ್ತಾರೆ. ಇವರಿಗೆ **ಸರ್ವತಂತ್ರ ಸ್ವತಂತ್ರಃ** ಎಂಬ ನಾಮದಿಂದ ಎಲ್ಲಾ ತಂತ್ರಗಳಲ್ಲೂ ವಿಷಯಗಳನ್ನು ಸ್ವತಂತ್ರಿಸಿ ಅರ್ಥ ಮಾಡುವವರೆಂಬರ್ಥವು. ಸ್ವಾಮಿದತ್ತ ಜ್ಞಾನದಿಂದ ಎಲ್ಲಾ ಮತಾಭಿಪ್ರಾಯ ಗಳನ್ನು ವೇದಾಂತ ರೀತ್ಯಾ ಪರಿಶೋಧಿಸಿ ಗ್ರಾಹ್ಯಭಾಗಗಳನ್ನು ತೋರ್ಪಡಿಸಿ, ದೋಷಯುಕ್ತವಾದವುಗಳನ್ನು ನಿರಾಕರಿಸುವ ಶಕ್ತಿಯುಳ್ಳವರೆಂಬ ಭಾವವು

ಶತದೂಷಣಿ, ಪರಮತಖಂಡನ, ಪರಮತ ಭಂಗ ಮುಂತಾದವುಗಳ ಮೂಲಕ ಶಾಸ್ತ್ರವಶ್ಯರಾಗಿ ಶಾಸ್ತ್ರವಿರೋಧ ಭಾಗಗಳನ್ನು ನಿರಾಕರಿಸಿದವರು ಎಂಬ ಭಾವವು. ಆದುದರಿಂದ ಇವರ ನಾಮಗಳು ಕೆಲವು ಹರಿದತ್ತವಾದವು. ಇನ್ನು ಕೆಲವು ಪ್ರಾಜ್ಞರಾದ ಭಾಗವತರು ಸದಸ್ಸಿನಲ್ಲಿ ಕೊಟ್ಟ ನಾಮಗಳು. ತಾವೇ ಸ್ವತಂತ್ರಿಸಿ ಸ್ವಪ್ರತಿಷ್ಠೆಗಾಗಿ ಇಟ್ಟುಕೊಂಡ ಬಿರುದುಗಳಲ್ಲವೆಂಬ ಭಾವವು.

ಇತರ ವ್ಯಾಖ್ಯಾನದಲ್ಲಿ ಕೆಲವು ಸ್ಥಳಗಳಲ್ಲಿ ವ್ಯಾಖ್ಯಾನವು ಆಚಾರ್ಯರಿಗೆ ಸಮರ್ಪಕವಾಗದೇ ಇದ್ದುದರಿಂದ ಸರಿಯಾದ ಅರ್ಥವನ್ನು ತಿಳಿಸುವದು ತಮ್ಮ ಕರ್ತವ್ಯವೆಂದು ಭಾವಿಸಿ ಶ್ರೀಮದಾಚಾರ್ಯರು ಈ ಸ್ತೋತ್ರರತ್ನಕ್ಕೆ ಭಾಷ್ಯವನ್ನು ಬರೆದರೆಂಬುದೂ ವ್ಯಕ್ತವು. ಇಂತಹ ಸ್ತೋತ್ರರತ್ನ ವ್ಯಾಖ್ಯಾನವನ್ನು ಕನ್ನಡ ಭಾಷೆಗೆ ಪರಿವರ್ತಿಸುವ ಭಾಗ್ಯವು ದಾಸನಾದ ಚುಂಚಿನಕಟ್ಟೆ ಮೇಲುಕೋಟೆ ವಿಜಯ ರಾಘವ ಶರ್ಮನಿಗೆ ಶ್ರೀನಿವಾಸ ಕೃಪಯಾ ಲಭಿಸಿದುದರಿಂದ ಜನ್ಮ ಸಾರ್ಥಕ್ಯವನ್ನು ಹೊಂದಿತೆಂದು ನಂಬಿರುತ್ತೇನೆ.

ಇಂತು ಯಾಮುನ ಮುನಿಗಳ ಸ್ತೋತ್ರರತ್ನವು ಸಂಪೂರ್ಣವು.

ಶ್ರೀ ನಿಗಮಾನ್ತ ಮಹಾದೇಶಿಕಾಯ ನಮಃ
ಶ್ರೀಮತೇ ಶ್ರೀನಿವಾಸ ಮಹಾದೇಶಿಕಾಯ ನಮಃ

---

ಚಂಪಾ ಅಂಡ್ ಕೋ., ಅರಳೇಪೇಟೆ, ಬೆಂಗಳೂರು ೨.